**OSM**

ಈ ಸಂಕಲನದಲ್ಲಿ ಒ... ...ಸಿರುವ ಪ್ರಬಂಧಗಳು ಬೇರೆ ಬೇರೆ ಕಾಲದಲ್ಲಿ ಬರೆದುವು. ಆಗಾಗಲೇ ಅವು ಮಾಸ ಪತ್ರಿಕೆಗಳಲ್ಲಿಯೂ ವಾರ್ಷಿಕ ಸಂಚಿಕೆಗಳಲ್ಲಿಯೂ "ಗಾಂಧಿ ಸಂಚಿಕೆ" ಗಳಲ್ಲಿಯೂ ಪ್ರಕಟವಾಗಿದ್ದವು. ಮೊದಲು ಪ್ರಕಟವಾದ ಸಂಚಿಕೆಗಳ ಹೆಸರುಗಳನ್ನು ವಿಷಯಸೂಚಿಕೆಯಲ್ಲಿ ತೋರಿಸಿದ್ದೇನೆ.

ಈ ಪ್ರಬಂಧಗಳನ್ನು ಮೊದಲು ಬರೆಯುವಾಗ ಮಹಾತ್ಮ ಗಾಂಧಿ ...ರ ಜೀವನದ ಘಟನೆಗಳನ್ನು ಕಾಲದೃಷ್ಟಿಯಿಂದ ಒಂದಾದ ಮೇಲೆ ಒಂದರಂತೆ ವಿವರಿಸಬೇಕೆಂಬುದು ನನ್ನ ಉದ್ದೇಶವಾಗಿರಲಿಲ್ಲ. ಆದರೆ ಗಾಂಧಿಯವರ ನಾನಾಚಟುವಟಿಕೆಗಳನ್ನು ಕುರಿತು ಬರೆದ ಈ ಎಲ್ಲ ಪ್ರಬಂಧಗಳೂ ಒಂದು ರೀತಿಯಲ್ಲಿ ಗಾಂಧಿಜೀವಿತದ ಹೆಗ್ಗುರುತುಗಳಾಗಿರುವುದು ನನಗೆ ಕಂಡಾಗ ಲೇಖನಗಳನ್ನು ಈಗಿರುವಂತೆ ಒಂದು ಗೂಡಿಸಿದೆ

ಈ ಪ್ರಬಂಧಗಳನ್ನು ಬೇರೆ ಬೇರೆ ಕಾಲದಲ್ಲಿ ಬರೆದುದರಿಂದ ಇವುಗಳಲ್ಲಿ ಒಂದರಲ್ಲಿ ಬಂದ ಉಕ್ತಿ ಮತ್ತೊಂದರಲ್ಲಿ ಅಲ್ಲಲ್ಲಿ ಕಾಣುತ್ತಿದೆ. ಕೆಲವು ಪ್ರಬಂಧಗಳಲ್ಲಿ ಮಹಾತ್ಮಗಾಂಧಿಯವರ ಭೌತದೇಹ ಮರೆಯಾದ ಮೇಲೆಯೂ, ವರ್ತಮಾನದ ಕ್ರಿಯಾಪದ ಉಪಯೋಗವಾಗಿದೆ. ಮಹಾತ್ಮರಂಥವರು ಎಂದೆಂದಿಗೂ ಅಮರರೇ ಆದುದರಿಂದ ಅವರನ್ನು ಕುರಿತಾಗ ವರ್ತಮಾನ ಕಾಲದ ಕ್ರಿಯೆ ಉಚಿತವಾದೆಂಬುದು ವಾಚಕರಿಕೆ ಅರಿವಾಗದೆ ಇರದು. ಈ ಗ್ರಂಥದಲ್ಲಿ ಮಹಾತ್ಮರ ತತ್ವಗಳನ್ನೂ ಅಭಿಪ್ರಾಯಗಳನ್ನೂ ವಿವರಿಸುವಾಗ ಸಾಧ್ಯವಾದೆಡೆಗಳಲ್ಲೆಲ್ಲ ಅವರ ಮಾತುಗಳನ್ನೇ ಉಪಯೋಗಿಸಿದ್ದೇನೆ. ಈ ಪ್ರಬಂಧಗಳನ್ನು ಮೊದಲು ಪ್ರಕಟಿಸಿದ ಪತ್ರಿಕೆ ಸಂಚಿಕೆಗಳಿಗೂ ಕೃತಜ್ಞನಾಗಿದ್ದೇನೆ.

ನಮ್ಮನಾಡಿನ ಹಿರಿಯರೂ ಅನೇಕ ವರ್ಷಗಳಿಂದ ನನ್ನ ಸಾಹಿತ್ಯ ಕಾರ್ಯವನ್ನು ಮೆಚ್ಚಿ ಪ್ರೋತ್ಸಾಹಿಸುತ್ತಿರುವವರೂ ಆದ ಮಾನ್ಯ ಶ್ರೀ ದಿವಾಕರ್ ಅವರು ತಮ್ಮ ಅಮೌಲ್ಯವಾದ ಅನುಭವ ಪೂರ್ಣವಾದ ಮುನ್ನುಡಿಯಿಂದ ಈ ಗ್ರಂಥಕ್ಕೆ ಕಳೆ ಕೊಟ್ಟಿದ್ದಾರೆ ಇದಕ್ಕಾಗಿ ಅವರಿಗೆ ತುಂಬ ಕೃತಜ್ಞನಾಗಿದ್ದೇನೆ. ನನ್ನ ಪ್ರಕಾಶಕರಾದ ಮಾನ್ಯ ಸತ್ಯಶೋಧನ

ಪುಸ್ತಕ ಭಂಡಾರದವರ ಧೈರ್ಯ ಮತ್ತು ಸಾಹಸ, ಸುಡಿಗಳ ಪ್ರೇಮದಿಂದಲೇ ಈ ಗ್ರಂಥ ಬೆಳಕು ಕಾಣುತ್ತಿದೆ. ಕನ್ನಡನಾಡಿನಲ್ಲಿ ಗಾಂಧಿ ಸಾಹಿತ್ಯವನ್ನೂ ರಾಷ್ಟ್ರೀಯ ಸಾಹಿತ್ಯವನ್ನೂ ಪ್ರಚುರಪಡಿಸಲು ಮೊದಲುಮಾಡಿದ ಸಂಸ್ಥೆ ಇದು. ಇದಕ್ಕಾಗಿ ಅವರ ಉಪಕಾರವನ್ನು ಸ್ಮರಿಸುತ್ತೇನೆ

ಮಹಾತ್ಮ ಗಾಂಧಿಯವರು ಎಲ್ಲಕ್ಕಿಂತ ಹೆಚ್ಚಾಗಿ ಮೋಕ್ಷಮಾರ್ಗದ ಸಾಧಕರು. ಅವರ ದೇಹ ಅಷ್ಟು ದುರ್ಬಲವಾಗಿದ್ದರೂ ಅವರ ಆತ್ಮಶಕ್ತಿ ಎಂದೆಂದೂ ಅಪಾರವಾಗಿತ್ತು. ಅವರು ತಮ್ಮ ತುಂಬು ಜೀವನದಲ್ಲಿ ಯಾವಾಗಲೂ ಮಾಡುತ್ತಿದ್ದುದು ಆತ್ಮವಿಕಾಸದ ಪ್ರಯತ್ನವೇ. ಆ ಮಾರ್ಗದಲ್ಲಿ ಅವರು ಪ್ರಯಾಣಮಾಡುತ್ತಿರುವಾಗ ಜತೆಯಲ್ಲಿ ಯಾರು ಬಂದರೂ ಯುಧಿಷ್ಠಿರನಂತೆ ಅವರನ್ನೂ ಕರೆದುಕೊಂಡು ಹೋಗುತ್ತಿದ್ದರು. ಒಂದು ದೇಶವೇ ಜತೆಯಲ್ಲಿ ಬಂದರೂ ಅದನ್ನು ನಡೆಸುತ್ತಿದ್ದರು ಸಾಮಾಜಿಕ ಮತ್ತು ರಾಜಕೀಯ ಎಲ್ಲ ಚಟುವಟಿಕೆಗಳೂ ಅವರಿಗೆ ಮೋಕ್ಷಸಾಧನ ಮಾರ್ಗದ ಒಂದೊಂದು ಮೆಟ್ಟಲುಗಳೇ ಆದವು.

ಈ ಗ್ರಂಥದಲ್ಲಿ ಮೊದಲನೆಯ ಅಧ್ಯಾಯದಲ್ಲಿ ಅವರು ಸ್ಥಿತ ಪ್ರಜ್ಞರೆಂಬುದನ್ನು ಹೇಳಿದೆ ೨ ನೆಯ ಅಧ್ಯಾಯ ಭಾರತದ ಇತಿಹಾಸದ ಒಂದು ಸಂಕ್ಷಿಪ್ತ ನೋಟ. ಮೂರರಿಂದ ಹತ್ತೊಂಬತ್ತರ ವರೆಗೂ ಗಾಂಧಿಯವರು ಹೇಗೆ ರಾಜಕೀಯ ಸಾಮಾಜಿಕ ಆರ್ಥಿಕ ಎಲ್ಲ ಚಟುವಟಿಕೆಗಳನ್ನೂ ಆತ್ಮೋನ್ನತಿಯ ಸಾಧನವಾಗಿಯೇ ಉಪಯೋಗಿಸಿ ಅಂತ್ಯಕಾಲದಲ್ಲಿ ಬ್ರಹ್ಮನಿರ್ವಾಣದ ಗುರಿಯನ್ನು ಮುಟ್ಟಿದರೆಂಬುದನ್ನು ಸೂಚಿಸಿದೆ ಹೀಗೆ ಈ ಗ್ರಂಥದ ಪ್ರಬಂಧಗಳೆಲ್ಲ ಒಂದಕ್ಕೊಂದಕ್ಕೆ ಹೊಂದಿಕೊಂಡು ಗಾಂಧಿಯವರ ಜೀವಿತದ ಒಂದು ವಿಹಂಗಮ ನೋಟವಾದರೂ, ಗಾಂಧಿಯವರ ಎಲ್ಲ ಕಾರ್ಯಗಳಲ್ಲಿಯೂ ಅಡಗಿದ್ದ ಆಧ್ಯಾತ್ಮಿಕತೆಯನ್ನು ಗುರುತಿಸುವುದೇ ಲೇಖಕನ ಉದ್ದೇಶವಾಗಿದೆ.

ಕೊನೆಗೆ, ನನ್ನ ತರುಣ ಮಿತ್ರರಾದ ಮೈಸೂರು ಪ್ರೆಸ್ ಮಾಲೀಕರು ಶ್ರೀ ಜಿ.ಎಚ್. ರಾಮರಾವ್ ಅವರು, ನಾನು ಕೊಟ್ಟ ಎಲ್ಲ ಕಿರುಕುಳಗಳನ್ನೂ ಸಹಿಸಿಕೊಂಡು ಈ ಗ್ರಂಥವನ್ನು ಅಂದವಾಗಿ ಮುದ್ರಿಸಿರುವುದಕ್ಕಾಗಿ ಅವರನ್ನು ವಂದಿಸಿ ಇದನ್ನು ವಾಚಕರಿಗೆ ಅರ್ಪಿಸುತ್ತೇನೆ.

**ಗೊರೂರು ರಾಮಸ್ವಾಮಯ್ಯಂಗಾರ್.**

# ನಾಲ್ಕು ಮಾತು

'.... ...ಸತ್ಯಾಗ್ರಹ.... ಅಹಿಂಸಾಮಯ ಆಂದೋಲನ.... . .ಇದು ಭಾರತವು ವಿಶ್ವಕ್ಕೆ ಕೊಟ್ಟ ಕೊಡುಗೆ ...ಒಬ್ಬ ಪಾಶ್ಚಾತ್ಯ ನಾಗರಿಕನಾದ ನನ್ನ ಮನಸನ್ನು ಅದು ಹಿಡಿಯಿತು.'

ಡೆನಿಸ್ ಬೃಹತ್ (ಫ್ರೆಂಚ್ ಪತ್ರಕಾರ)

ಗಾಂಧೀಯವರ ಜೀವನ ಒಂದು ಮಹಾಸಾಗರ. ಆ ಬಗ್ಗೆ ಒಂದು ಮಹಾಭಾರತವನ್ನು ಬರೆಯಬಹುದು. ಬರೆಯುವವನು ಮಾತ್ರ ಶ್ರೀ ವೇದ ವ್ಯಾಸನಾಗಿರಬೇಕು. ಈಚೆಗೆ ಶ್ರೀ ತೆಂಡುಲಕರ ಮತ್ತು ಝವೇರಿ ಇವರು ರಾಯಲ್ ಅಷ್ಟಪ್ರತಿ ಸುಮಾರು ೩೦೦೦ ಪುಟದಷ್ಟು ಸಚಿತ್ರ ಚರಿತ್ರೆಯನ್ನು ಎಂಟು ಸಂಪುಟಗಳಾಗಿ ಪ್ರಕಟಿಸಿದ್ದಾರೆ. ಆದರೂ ಗಾಂಧೀಯವರ ಜೀವನದ ಅಲ್ಪಾಂಶವು ಮಾತ್ರ ಅವುಗಳಲ್ಲಿ ಚಿತ್ರಿತವಾಗಿದೆ ಎಂದೇ ಹೇಳಬೇಕಾಗುವುದು. ಗಾಂಧೀಯವರ ಜೀವನದ ವಿಸ್ತಾರ, ಗಾಂಭೀರ್ಯ, ಅದರ ಬಹುಮುಖತೆ, ಆದರ ವೈವಿಧ್ಯ ಹಾಗೂ ವೈಚಿತ್ರ್ಯ ಹೀಗೆ ಒಂದಲ್ಲ ಎರಡಲ್ಲ, ಅದರ ಅಂಗೋಪಾಂಗಗಳನ್ನೆಲ್ಲ ಪರಿಶೀಲಿಸಿ ನೋಡಿದರೆ, ರಘುವಂಶವನ್ನು ವರ್ಣಿಸಲು ಹೊರಟ ಕಾಲಿದಾಸನು ತೆಗೆದ ಉದ್ಗಾರಗಳನ್ನೇ ಉಸುರಬೇಕೆನಿಸುವುದು ; ಒಂದು ಚಿಕ್ಕ ಹರಗೋಲನ್ನು ಅವಲಂಬಿಸಿ ಸಾಗರವನ್ನು ದಾಟಲು ಅನುವಾದಂತೆಯೆ !

ಹೀಗಿದ್ದರೂ ಅವರ ಜೀವನ ಒಂದು ಚಿನ್ನದಗಣಿ ಎಂದು ತಿಳಿದು ನಾವೆಲ್ಲರೂ ನಮ್ಮ ನಮ್ಮ ಕೈಯಿಂದಾದಷ್ಟು ಚಿನ್ನವನ್ನು ಲೂಟಿಮಾಡಿ ನಮ್ಮ ಜೀವನವನ್ನು ಸಮೃದ್ಧ ಮಾಡಬೆತ್ನಿಸುವದು ಅವಶ್ಯ. ಇಡೀ ಸಮುದ್ರದ ಆಪೋಷಣ ಮಾಡುವ ಶಕ್ತಿ ಅಗಸ್ತ್ಯ ಋಷಿಗೆ ಮಾತ್ರ ಸೇರಿದ್ದರೂ, ಒಂದೊಂದೇ ಬೊಗಸೆಯನ್ನು ಕೊಂಡು ನಮ್ಮ ಜೀವನವನ್ನು ಪವಿತ್ರಗೊಳಿಸಲು ನಮಗೆ ಯಾವ ಅಡ್ಡಿ ಆತಂಕವೂ ಇಲ್ಲವಲ್ಲ.

ಗಾಂಧಿಯವರ ಬಗ್ಗೆ ಯಾರು ಎಷ್ಟು ಬರೆದರೂ ಅದು ಇಷ್ಟವೇ. ಅದು ನಮಗೆ ಬೇಕಾದುದೇ. ಅವರ ಜೀವನವೆಂದರೆ ನಮ್ಮೆಲ್ಲರ, ಅದೇಕೆ

ಮಾನವಕುಲದ ಜೀವನಕ್ಕೆಲ್ಲ ನಿಜವಾದ ಜೀವಂತ-ಜೀವನವನ್ನು ಕೊಡುವ ಸಂತತ-ಸ್ರೋತವು ಎಂಬುದರಲ್ಲಿ ಸಂಶಯವಿಲ್ಲ ಕನ್ನಡದಲ್ಲಿ ಗಾಂಧೀ ಸಾಹಿತ್ಯ ಎಷ್ಟು ಪ್ರಕಟವಾಗಬೇಕೋ, ಯಾವ ಅಂದಚೆಂದದಿಂದ ಸುಲಭ ಕ್ರಯಕ್ಕೆ ಜನರ ಕೈ ಸೇರಬೇಕೋ ಅಷ್ಟು ಇನ್ನೂ ಆಗಿಲ್ಲ. ಈಗ ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಈ ಪುಸ್ತಕವನ್ನು ಪ್ರಕಟಿಸಿ ಕನ್ನಡ ಜನಾಂಗಕ್ಕೆ ಬಹಳ ಉಪಕಾರ ಮಾಡಿದ್ದಾರೆ ಎಂದು ಹೇಳಬಲ್ಲೆ. ಗಾಂಧೀ ಜೀವನದ ಹಲವೊಂದು ಮುಖ್ಯವಾದ ಅಂಗಗಳನ್ನು, ಅವರದೇ ಆದ ಒಂದು ಸುಲಭ ಮನೋಹರ ಶೈಲಿಯಲ್ಲಿ ಇಲ್ಲಿ ರೂಪಿಸಿದ್ದಾರೆ ಗಾಂಧೀ ಸಾಹಿತ್ಯಕ್ಕೆ ಅವರು ಒಂದು ಒಳ್ಳೆ ಕೊಡುಗೆಯನ್ನರ್ಪಿಸಿದ್ದಾರೆ.

ಗಾಂಧಿಯವರು ವಿಶ್ವಪುರುಷರು, ವಿರಾಟ್ ಪುರುಷರು. ಆದರೆ ಅದೇ ಕಾಲಕ್ಕೆ ಅವರು ಭಾರತಿಯರು, ಭಾರತದ ಸಂಸ್ಕೃತಿಯ ಆಧುನಿಕ ಕಾಲದ ಪಕ್ವಫಲದಂತಿರುವರು. ಭಾರತದಲ್ಲಿ ಉಳಿದ ಯಾವ ಮಾತುಗಳ ಅಭಾವ ವಿದ್ದರೂ ವೀರಪುರುಷರ, ಸಾಧುಸಂತರ, ತತ್ವಜ್ಞಾನಿಗಳ ಅಭಾವವು ಎಂದೂ ಆಗಿಲ್ಲ, ಆ ವಿಷಯದಲ್ಲಿ ನಮ್ಮಲ್ಲಿ ದುರ್ಭಿಕ್ಷವಾಗಿಲ್ಲ. ಅವರು ವ್ಯವಹಾರದ ಮೂಲಕ ವೇದಾಂತವನ್ನುಪದೇಶಿಸುವವರು, ಆಚರಣೆಯ ಮುಖಾಂತರ ಸಾಧುತ್ವವನ್ನು ರೂಪುಗೊಳಿಸುವವರು, ಶಾಂತಿಯ ರೂಪದಿಂದ ಶೌರ್ಯವನ್ನು ತೋರಿಸುವವರು. ವಿರೋಧಾಭಾಸಯುಕ್ತವಾದ ಅವರ ಜೀವನದ ಆಳನ್ನಳೆಯಲಾಗದೆ ಒಬ್ಬ ದೊಡ್ಡ ಪಾಶ್ಚಾತ್ಯ ಲೇಖಕನು ಅವರಿಗೆ ಶ್ರೀಕೃಷ್ಣ, ಚಾಣಕ್ಯ, ಕ್ರೈಸ್ತ ಈ ಮೂವರ ಮುಪ್ಪುರಿ ಎಂದು ಹೇಳಿದ್ದಾನೆ! ತಾತ್ಪರ್ಯವೇನೆಂದರೆ ಗಾಂಧೀಯವರ ವ್ಯಕ್ತಿಮತ್ವ ಅಷ್ಟೊಂದು ಬಹು ವಿಧ, ಅಷ್ಟೊಂದು ಬಹುಮುಖದಿಂದ ಬಹುರೂಪಿಯಾಗಿ ನಿಂತಿದೆ.

ಕೇವಲ ಪಾಶ್ಚಾತ್ಯ ವೈಜ್ಞಾನಿಕ-ಸಭ್ಯತೆಯ ಮೂಲಕ ಮನಸೋತು. ಇನ್ನು ಭಾರತ ಸಂಸ್ಕೃತಿ ಜಗತ್ತಿಗೆ ಕೊಡತಕ್ಕುದೇನೂ ಇಲ್ಲ, ಎಂದು ಹಲವರು ಭಾವಿಸುತ್ತಿರುವದು ಸ್ವಾಭಾವಿಕ. ಪಾಶ್ಚಾತ್ಯ ಭೌತಿಕ ವಿಜ್ಞಾನ ಅಷ್ಟೊಂದು ಕಣ್ಣು ಕುಕ್ಕಿಸುವಂತಹದಿದೆ ಎಂಬಲ್ಲಿ ಏನೂ ಸಂಶಯವಿಲ್ಲ. ಆದರೆ ಅದೇ ಕಾಲಕ್ಕೆ, ಅಧ್ಯಾತ್ಮದ ತಳಹದಿಯ ಮೇಲೆ ಪಾಶ್ಚಾತ್ಯರು ತಮ್ಮ ಸಭ್ಯತೆಯನ್ನು ನಿಲ್ಲಿಸಲು ಯತ್ನಿಸದಿದ್ದರೆ, ಅವರು ಸರ್ವನಾಶಕ್ಕೆ ಗುರಿ

ಯಾಗುವರು, ಎಂದು ಶ್ರೀ ಸ್ವಾಮಿ ವಿವೇಕಾನಂದರು ಅರ್ಧ ಶತಮಾನ ದಾಚೆ ಹೇಳಿದುದು ಈಗ ನೆನಪಿಗೆ ಬರಲಾರದೆ ಇರದು.

ಐನ್‌ಸ್ಟೈನರ ಅಣು ವಿಜ್ಞಾನದೊಡನೆ ಗಾಂಧಿಯವರ ಅಹಿಂಸಾ ಜ್ಞಾನವನ್ನು ಜೋಡಿಸದೇ ಹೋದರೆ ಮಾನವೀ ಜಗತ್ತು ಯಾವ ಕ್ಷಣಕ್ಕೆ ಭಸ್ಮಸಾತ್ ಆಗಿಹೋಗುವದೆಂಬುದು ಹೇಳಲಿಕ್ಕೆ ಬರಲಾರದ ಭವಿಷ್ಯ. ಆ ದೃಷ್ಟಿಯಿಂದ ನೋಡಿದರೆ ಗಾಂಧಿಯವರನ್ನು ನಾವು ಮರೆಯುವಂತಿಲ್ಲ. ಜಗತ್ತು ಮರೆಯುವಂತಿಲ್ಲ. ವಿಜ್ಞಾನಿಗಳು ಮರೆಯುವಂತಿಲ್ಲ. ನಂದಾದೀಪ ದಂತೆ–ಗಾಂಧಿ ಸಂದೇಶವನ್ನು, ಸತ್ಯ ಅಹಿಂಸೆಗಳನ್ನು ನಮ್ಮ ಅಂತಃಕರಣ ದಲ್ಲಿ ಇಟ್ಟುಕೊಂಡು. ಅದಕ್ಕೆ ಶ್ರೀ ಗೊರೂರರಂಥ ಭಕ್ತರು ಬರೆದ ಮಾತು ಗಳ ಎಣ್ಣೆಯನ್ನು ಎರಚುತ್ತಾ ಇರುವದೇ ಸಜ್ಜೀವನಕ್ಕೆ ಸಹಾಯಕವಾಗು ವದು.

ರಾಜ್ಯಭವನ, ಪಾಟ್ನಾ
ತಾ|| ೨೬—೮—೧೯೫೫

ರಂಗನಾಥ ದಿವಾಕರ.
ಗವರ್ನರ್, ಬಿಹಾರ್.

# ವಿಷಯಾನುಕ್ರಮಣಿಕೆ

# ೧. ನಂದಿಬೆಟ್ಟದಲ್ಲಿ ಸ್ಥಾಣು

೧೯೩೬ನೆಯ ಇಸವಿಯಲ್ಲಿ ಮಹಾತ್ಮ ಗಾಂಧಿಯವರು ಆರೋಗ್ಯದ ನಿಮಿತ್ತ ನಂದಿಗೆ ಬಂದರು. ಅವರ ಜತೆಯಲ್ಲಿ ಶ್ರೀ ವಲ್ಲಭಾಯಿ ಪಟೇಲರೂ ಬಂದರು. ಸ್ಥಾಣುವಿನ ಸ್ಪರ್ಶದಿಂದ ಪವಿತ್ರವಾದ ನಂದಿಬೆಟ್ಟ ಮಹಾತ್ಮರ ಸಾನ್ನಿಧ್ಯದಿಂದ ಮತ್ತಷ್ಟು ಪಾವನವಾಯಿತು. ಇದ್ದಕ್ಕಿದ್ದಂತೆಯೇ ನಂದಿಬೆಟ್ಟ ಭಾರತದ ಕಣ್ಣಾಯಿತು. ದೇವರು ಎಲ್ಲಿದ್ದರೆ ಅದೇ ದೇವಸ್ಥಾನ. ನಂದಿಯ ಬೆಟ್ಟದಲ್ಲಿ ಭಾರತದ ಹೃದಯ ಮಿಡಿಯತೊಡಗಿತು. ಭಾರತದ ನಾನಾಭಾಗಗಳಿಂದ ಪ್ರಸಿದ್ಧರಾದ ವ್ಯಕ್ತಿಗಳು, ಪೂರ್ವಕಾಲದ ರಾಜರು ಕಣ್ವ ವಸಿಷ್ಠರ ಆಶ್ರಮಗಳಿಗೆ ಬರುತ್ತಿದ್ದಂತೆ—ನಂದಿಗೆ ಬರತೊಡಗಿದರು; ಶ್ರೀ ರಾಮನು ಅರಣ್ಯದಲ್ಲಿದ್ದರೂ ಅದು ಅಯೋಧ್ಯೆಗಿಂತ ಹೆಚ್ಚು ಪ್ರಶಸ್ತವಾದಂತೆ, ಗಾಂಧಿಯವರು ಬಂದು ನಿಂತ ಎಡೆಯೇ ಪವಿತ್ರಕ್ಷೇತ್ರವಾಯಿತು.

ಬೆಂಗಳೂರಿನಿಂದ ನಾನೂ ಶ್ರೀ ಪು. ತಿ. ನರಸಿಂಹಾಚಾರ್ಯರೂ ಶ್ರೀ ನಂ. ಶಿವರಾಮಶಾಸ್ತ್ರಿಗಳೂ ಮಹಾತ್ಮರ ದರ್ಶನಾಕಾಂಕ್ಷಿಗಳಾಗಿ ನಂದಿಗೆ ಹೊರಟೆವು. ಆ ದಿನ ರೈಲಿನಲ್ಲಿ ಉದ್ದಕ್ಕೂ ತಿರುಪತಿಗೆ ಯಾತ್ರಿಕರು ಹೊರಟಂತೆ ಜನ ನಂದಿಗೆ "ಗಾಂಧಿಯಾತ್ರೆ" ಹೊರಟಿದ್ದರು. ನಂದಿಬೆಟ್ಟದ ಬುಡದಲ್ಲಿ ಸಹಸ್ರಾರು ಜನ ನೆರೆದಿದ್ದರು. ಗಾಂಧಿಯವರು ಈ ವಯಸ್ಸಿನಲ್ಲಿ, ಅದರಲ್ಲಿಯೂ ನಿಶ್ಶಕ್ತರಾಗಿರುವಾಗ ನಡೆದುಕೊಂಡೇ ನಂದಿಬೆಟ್ಟವನ್ನು ಹತ್ತಿದರೆಂದು ಕೇಳಿ ಯಾತ್ರಿಕರ ಉತ್ಸಾಹ ಇಮ್ಮಡಿಸಿತು. ಬೆಟ್ಟದ ಮಾರ್ಗದ ಹೆಜ್ಜೆಹೆಜ್ಜೆಯೂ ಜನರಿಗೆ ಪವಿತ್ರವಾಗಿ ತೋರಿತು. ಆ ಗುಂಪಿನಲ್ಲಿ ಹುಡುಗರು ಸ್ತ್ರೀಯರು ಮುದುಕರು ಎಲ್ಲರೂ ಇದ್ದರು. ಬೆಟ್ಟದಮೇಲಿನಿಂದ ಇಳಿಯುತ್ತಿದ್ದವರ ಸಂಖ್ಯೆ, ಹತ್ತುತ್ತಿದ್ದವರ ಸಂಖ್ಯೆಗಿಂತ ಹೆಚ್ಚಾಗಿಯೇ ಇದ್ದಿತು. ಇಳಿಯುತ್ತಿದ್ದವರನ್ನು ಹತ್ತುತ್ತಿದ್ದವರು, "ಇವರು ಭಾಗ್ಯಶಾಲಿಗಳು ಗಾಂಧಿ ದರ್ಶನ ಮಾಡಿಕೊಂಡು ಬರುತ್ತಿದ್ದಾರೆ" ಎಂದುಕೊಳ್ಳುತ್ತಿ

ದ್ದರು. ಪ್ರತಿಯೊಬ್ಬರ ಬಾಯಿಯಲ್ಲಿಯೂ ಗಾಂಧಿಯವರ ಮಾತೇ ಮಾತಾಗಿದ್ದಿತು, ವಾತಾವರಣದಲ್ಲಿಯೇ ಮಹಾತ್ಮರ ಪ್ರಭಾವ, ಹೂವಿನ ಕಂಪಿನಂತೆ ಇಂಪಾಗಿ ಹರಡಿಕೊಂಡಿತ್ತು.

ಇನ್ನೇನು ಗುರಿ ಮುಟ್ಟಿತು ಎಂಬ ಭಾವದಿಂದ ಜನ ಸ್ವಲ್ಪ ನಿಧಾನವಾಗಿಯೇ ಹೆಜ್ಜೆಯಿಡುತ್ತಿದ್ದರು. ಕೆಳಗಿನಿಂದ ಒಂದು ದೊಡ್ಡ ಗೋಣೀಚೀಲವನ್ನು ಹೆಗಲಿನ ಮೇಲೆ ಹೊತ್ತುಕೊಂಡು ಸ್ವಯಂ ಸೇವಕನೊಬ್ಬನು ಸರಸರನೆ ಬಂದನು. ಅದೇನು ಎಂದು ನಾವು ಕೇಳಿದೆವು. ಅದು ಮಹಾತ್ಮರ ಟಪಾಲು. ಪ್ರತಿ ದಿನವೂ ಹಾಗೆ ಒಂದು ಗೋಣೀಚೀಲ ಟಪಾಲು. ಇಷ್ಟು ದೊಡ್ಡ ಚೀಲದಲ್ಲಿ ಏನೇನು ನಿತ್ಯಾ ಪತ್ರಗಳಿರಬಹುದೋ ಎಂದು ಆಶ್ಚರ್ಯಪಟ್ಟೆವು. ಕಾಂಗ್ರೆಸಿನ ಕಾಗದ ಪತ್ರಗಳು, ಅಖಿಲ ಭಾರತ ಚರಖ ಸಂಘದ ವರದಿಗಳು, ಹೊಸಬಗೆಯ ರಾಟೆಯ ನಕ್ಷೆಗಳು, ಸರ್ಕಾರದಿಂದ ಬಂದಿರುವ ಪತ್ರಗಳು ಕಾಂಗ್ರೆಸ್ಸಿನ ಮೇಲಿನ ದೂರುಗಳು, ಜೈಲಿನಲ್ಲಿ ಖೈದಿಗಳ ಮುಷ್ಕರ, ಹರಿಜನರ ಪ್ರಶ್ನೆಗಳು, ಸಂಸ್ಥಾನದ ಪ್ರಜೆಗಳ ಅಹವಾಲು; ಆ ಟಪಾಲಿನಲ್ಲಿ ಇಂತಹ ಸಾರ್ವಜನಿಕ ಪ್ರಶ್ನೆಗಳು ಮಾತ್ರವೇ ಅಲ್ಲ. ಖಾಸಗಿಯಾದ ಅತ್ಯಂತ ನಿಕಟವಾದ ವ್ಯಕ್ತಿಗಳ ಪತ್ರಗಳೂ ಬರುತ್ತವೆ. ಭಾರತದ ಎಲ್ಲಾ ರೋಗಗಳಿಗೂ ಮಹಾತ್ಮರೇ ಔಷಧಿ. ಎಲ್ಲರಿಗೂ ಅವರೇ ಗುರು, ಸಂಜೀವನ. ಒಬ್ಬಾತ "ನನ್ನ ಹೆಂಡತಿ ಖಾದಿಗೆ ಬಹಳ ಖರ್ಚುಮಾಡುತ್ತಾಳೆ" ಎಂದು ಬರೆಯುತ್ತಾನೆ. ಒಬ್ಬಾಕೆ "ಸೀಮೆಗೆ ವ್ಯಾಸಂಗಕ್ಕೆ ಹೋಗಿದ್ದ ಗಂಡ ಬೇರೆ ಒಬ್ಬಳನ್ನು ಮದುವೆ ಮಾಡಿಕೊಂಡು ಬಂದಿದ್ದಾನೆ. ಏನು ಮಾಡಲಿ" ಎನ್ನುತ್ತಾಳೆ. ಮತ್ತೊಬ್ಬಳು "ಮುದುಕರು ಹುಡುಗಿಯರನ್ನು. ಮದುವೆಯಾಗುತ್ತಿದ್ದಾರೆ. ಮಗನು ಸದ್ಗತಿದಾಯಕನಂತೆ. ಮಗನಿಲ್ಲದುದರಿಂದ ಒಬ್ಬ ಈಗ ನಾಲ್ಕನೆಯ ಮದುವೆಯಾಗುತ್ತಿದ್ದಾನೆ. ಮಗನಿಲ್ಲದವನು ಸ್ವರ್ಗಕ್ಕೆ ಹೋಗಲಾರನೆಂಬುದು ನಿಮ್ಮ ಅಭಿಪ್ರಾಯವೇ" ಎಂದು ಕೇಳುತ್ತಾಳೆ. ಒಬ್ಬ ಗೃಹಸ್ಥ "ನನಗೆ ಬ್ರಹ್ಮಚರ್ಯ ಅನುಸರಿಸಬೇಕೆಂದು ಆಸೆ. ಆದರೆ ಅವಕಾಶವಿಲ್ಲ. ಹೆಂಡತಿಯನ್ನು ಬೇರೆ ಕಡೆಗೆ ಕಳು

ಹಿಸೋಣ ಎಂದರೆ ನನಗೆ ಯಾರೂ ಬಂಧುಗಳೇ ಇಲ್ಲ. ಬೇರೆ ಬೇರೆ ಕೊಠಡಿಗಳಲ್ಲಿ ಇರೋಣ ಎಂದರೆ ಅಂತಹ ದೊಡ್ಡ ಮನೆ ಮಾಡಲು ದುಡ್ಡಿಲ್ಲ. ಏನು ಮಾಡಲಿ'' ಎನ್ನುತ್ತಾನೆ. "ಒಬ್ಬನು ಖಾದಿ ಬಹಳ ಮಂದ, ದಪ್ಪ ಮಳೆಗಾಲದಲ್ಲಿ ಒಣಗುವುದಿಲ್ಲ. ಇದಕ್ಕೆ ದಾರಿ ಹೇಳಿ'' ಎನ್ನುತ್ತಾನೆ. ಗಾಂಧಿಯವರ ಟಪಾಲಿನಲ್ಲಿ ನವರಸಗಳೂ ಅಡಕವಾಗಿರುತ್ತವೆ. ಭಕ್ತಿ, ವೈರಾಗ್ಯ, ಕೋಪ, ಶ್ರದ್ಧೆ, ಧೈರ್ಯ, ಉತ್ಸಾಹ—ತಾಯಿಯ ತೊಡೆಯ ಮೇಲೆ ಮಕ್ಕಳು ಬಿದ್ದು ಅಳುವಂತೆ ಭಾರತದಲ್ಲಿ ಕಷ್ಟಕ್ಕೆ ಒಳಗಾದ ಪ್ರತಿಯೊಬ್ಬರೂ ಗಾಂಧಿಯವರಿಗೆ ಬರೆಯುತ್ತಾರೆ. ಗಾಂಧಿಯವರು ಆ ಎಲ್ಲಾ ಜನಗಳಿಗೂ ತಾವೇ ಸ್ವತಃ ಪ್ರತ್ಯುತ್ತರ ಬರೆಯುತ್ತಾರೆ. ಅವರ ಕಾಗದ ಪತ್ರಗಳನ್ನು ಓದಿ ಪ್ರತ್ಯುತ್ತರ ಬರೆಯಲು ಕೊನೆಯ ಪಕ್ಷ ೬ ಜನ ಕಾರ್ಯದರ್ಶಿಗಳು ಬೇಕೆಂದು ಪಂಡಿತ್ ಜವಹರ್‌ಲಾಲ್ ನೆಹರು ಹೇಳುತ್ತಾರೆ. ಆದರೆ ಗಾಂಧಿಯವರು ಒಬ್ಬ ಕಾರ್ಯದರ್ಶಿಯ ಸಹಾಯದಿಂದಲೇ ಈ ಎಲ್ಲಾ ಕೆಲಸಗಳನ್ನೂ ಮಾಡುತ್ತಾರೆ. ಟಪಾಲಿನಲ್ಲಿ ಬಂದ ಕಾಗದಗಳಿಗೆ ಪ್ರತ್ಯುತ್ತರ ಬರೆಯುವುದಕ್ಕಾಗಿಯೇ ಗಾಂಧಿಯವರು ಒಂದು ಸಲ ಒಂದು ತಿಂಗಳು ಮೌನವನ್ನು ಆಚರಿಸಿದರು.

ಬೆಟ್ಟದ ಮೇಲೆ ಗಾಂಧಿಯವರು ಇಳಿದಿದ್ದ ಬಂಗಲೆಯ ಬಾಗಿಲಿನಲ್ಲಿ ಒಬ್ಬನೇ ಒಬ್ಬ ಸ್ವಯಂಸೇವಕನು ನಿಂತಿದ್ದ. ಬಂದವರಿಗೆ ಆತ "ಗಾಂಧಿಯವರು ಈಗ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾರೆ. ಸಾಯಂಕಾಲ ಗಾಳಿ ಸಂಚಾರ ಹೊರಡುತ್ತಾರೆ. ಆಗ ನೋಡಬಹುದು" ಎನ್ನುತ್ತಿದ್ದ. ನೂರಾರು ಮೈಲಿಗಳಿಂದ ಬಂದಿದ್ದ ಗುಂಪು ಶಾಂತವಾಗಿ ಮರಗಳ ಕೆಳಗೆ ವಿಶ್ರಮಿಸುತ್ತಾ ಕುಳಿತುಕೊಂಡಿತು. ಜನ ಗುಂಪು ಗುಂಪಾಗಿ ಮರಗಳ ಕೆಳಗೆ ಅಡಿಗೆ ಮಾಡಿಕೊಂಡು ಊಟಮಾಡಿ ಗಾಂಧಿಯವರು ಗಾಳಿ ಸಂಚಾರ ಹೊರಡುವ ಕಾಲವನ್ನು ನಿರೀಕ್ಷಿಸುತ್ತಾ ಕುಳಿತಿದ್ದರು. ಅವರು ನಿಶ್ಶಬ್ದವಾಗಿ ಮೌನವಾಗಿ ತಮ್ಮ ಮಾತುಕತೆ ಗದ್ದಲದಿಂದ ಮಹಾತ್ಮರಿಗೆ ತೊಂದರೆಯಾಗುವುದೋ ಎಂದು ಮೆತ್ತಗೆ ಮಾತನಾಡಿಕೊಳ್ಳುತ್ತಿದ್ದರು. ಐದು ಗಂಟೆಗೆ ಹತ್ತು ಹದಿನೈದು ನಿಮಿಷ

ವಿರುವಾಗ ಎಲ್ಲರೂ ಗಾಂಧಿಯವರು ಇಳಿದಿದ್ದ ಬಂಗಲೆಯ ಸುತ್ತ ನೆರೆದರು.

ಐದು ಗಂಟೆಗೆ ಸರಿಯಾಗಿ ಗಾಂಧಿಯವರು ಕೈಯ್ಯಲ್ಲಿ ದೊಣ್ಣೆ ಹಿಡಿದುಕೊಂಡು ಹೊರಗೆ ಹೊರಟರು. ಅವರ ಜತೆಯಲ್ಲಿ ಸರ್ದಾರ್ ಪಟೇಲರೂ ಹೊರಟರು. ಗಾಂಧಿಯವರು ಮುಂದುಗಡೆಯಲ್ಲಿ, ಹಕ್ಕಿಯಂತೆ ಸರಸರನೆ ನಡೆಯತೊಡಗಿದರು. ಸಂಚಾರ ಹೋಗುವಾಗ ಕಾಲು ನೆಲದ ಮೇಲೆ ನಿಲ್ಲದಷ್ಟು ವೇಗವಾಗಿ ನಡೆಯುವುದು ಎಂದೂ ಅವರ ಪದ್ಧತಿ. ಒಂದೊಂದು ಸಲ ಪಟೇಲರು ಸಹ ಹಿಂದೆ ಬೀಳುತ್ತಿದ್ದರು. ಆಗ ಗಾಂಧಿಯವರು ಎರಡು ಕ್ಷಣ ನಿಂತು ಪಟೇಲರು ತಮ್ಮನ್ನು ಕೂಡಿಕೊಳ್ಳುವವರೆಗೆ ಕಾಯುತ್ತಿದ್ದರು. ತಮ್ಮೊಂದಿಗೆ ಮಾತನಾಡಲು ಬಯಸಿದ ಯಾರೊಂದಿಗೂ ಅವರು ಒಂದು ಎರಡು ಮಾತನ್ನಾಡದೆ ಇರುತ್ತಿರಲಿಲ್ಲ. ಹಳ್ಳಿಗಳಿಂದ ಬಂದು ನೆರೆದಿದ್ದ ಆ ಜನ ಅವರೊಂದಿಗೆ ಮಾತನಾಡಬೇಕೆಂದು ಬಯಸಲೇ ಇಲ್ಲ. ಗಾಂಧಿಯವರನ್ನು ನೋಡುವ, ಅವರ ಧ್ವನಿ ಕೇಳುವ ಪುಣ್ಯ ಒಂದೇ ಅವರಿಗೆ ಸಾಕಾಗಿದ್ದಿತು. ನಂದಿಯ ಬೆಟ್ಟದ ಮೇಲೆ, ಮುಂದೆ ಗಾಂಧಿಯವರೂ, ಹಿಂದೆ ಗುಂಪು ಗುಂಪಾಗಿ ಜನರೂ ಹೋಗುತ್ತಿರುವಾಗ ಕೈಲಾಸಪರ್ವತದಲ್ಲಿ ಈಶ್ವರನೂ, ಈಶ್ವರನ ಹಿಂದೆ ಗಣಗಳೂ ಗುಂಪು ಗುಂಪಾಗಿ ಹೋಗುತ್ತಿರುವಂತೆ ತೋರುತ್ತಿದ್ದಿತು.

ಇಂತಹ ವಿಶ್ರಾಂತಿಯ ಕಾಲಗಳಲ್ಲಿ ಗಾಂಧಿಯವರು ಸಾಮಾನ್ಯವಾಗಿ ರಾಜನೀತಿಯನ್ನು ಕುರಿತು ಮಾತನಾಡುವುದಿಲ್ಲ ಅವರ ಮನಸ್ಸು ಸ್ವಾಭಾವಿಕವಾದ ಅನಾಸಕ್ತಿಯಿಂದ ಒಂದನ್ನು ಬಿಟ್ಟು ಒಂದರ ಕಡೆಗೆ ಸುಲಭವಾಗಿ ಹೊರಳುವುದುಂಟು ಅಂತಹ ವೇಳೆಯಲ್ಲಿ ಗಾಂಧಿ " ಇದು ರಾಜಕೀಯಕ್ಕೆ ಕಾಲವಲ್ಲ. ಮನೋಹರವಾದ ಸಂಧ್ಯೆಯನ್ನೂ ಕೊಂಕುಚಂದ್ರನನ್ನೂ ನೀಲಾಕಾಶದಲ್ಲಿ ಹೊಳೆಯುವ ಜ್ಯೋತಿರ್ಮಯವಾದ ನಕ್ಷತ್ರವನ್ನೂ ಕುರಿತು ಯೋಚಿಸೋಣ " ಎನುತ್ತಾರೆ. ಗಾಂಧಿಯವರು ನಿಜವಾದ ಕವಿ, ಎಂಬುದು ಆ ಮಾತು ಅವರ ಬಾಯಿಂದ ಬಂದಾಗ ಗೊತ್ತಾಗುತ್ತದೆ. ಗಾಂಧಿಯವರೇನೋ " ನಾನು ಕವಿಯಲ್ಲ

ಆ ವರ ಗುರುದೇವರಿಗೆ" ಎನ್ನುತ್ತಾರೆ. ಆದರೆ ನಾನೃಷಿಃ ಕುರುತೆ ಕಾವ್ಯಂ ಎಂಬಂತೆ ಋಷಿಯಲ್ಲದವನಿಂದ ಕಾವ್ಯ ಸಾಧ್ಯವಿಲ್ಲ. ಗಾಂಧಿ ಯವರು ಋಷಿ, ಅವರ ವಾಣಿಯಲ್ಲೆಲ್ಲಾ ಕಾವ್ಯದ ಕಾವು ತುಂಬಿರು ತ್ತದೆ. ಸ್ವತಃ ಗಾಂಧಿಯವರೇ ಭಗವಂತನು ಸೃಷ್ಟಿಸಿರುವ ಅತ್ಯದ್ಭುತ ಕಾವ್ಯ.

ಸುಮಾರು ಒಂದು ಫರ್ಲಾಂಗು ಸಂಚಾರ ಹೋಗುವ ವೇಳೆಗೆ ಬೆಟ್ಟದ ಮತ್ತೊಂದು ಭಾಗದ ಒಂದು ಬಂಗಲೆ ಸಿಕ್ಕಿತು. ಅದರ ಬಾಗಿಲಿನಲ್ಲಿ ಒಬ್ಬ ಮುಸಲ್ಮಾನ ಗೃಹಸ್ಥರು ನಿಂತಿದ್ದರು. ಆರು ವರುಷದ ಅವರ ಹೆಣ್ಣುಮಗು, ಕೈಯಲ್ಲಿ ಒಂದು ಹೂವಿನ ತುರಾಯಿ ಹಿಡಿದ, ಕೊಂಡು ಗಾಂಧಿಯವರ ಕಡೆಯೇ ನೋಡುತ್ತಾ ನಿಂತಿದ್ದಿತು. ಗಾಂಧಿ ಯವರು ಇನ್ನೂ ಆರು ಮಾರು ದೂರದಲ್ಲಿರುವಾಗಲೇ ಮಗು ಓಡಿ ಬಂದು ಗಾಂಧಿಯವರಿಗೆ ನಮಸ್ಕರಿಸಿ ತುರಾಯಿಯನ್ನು ಅವರ ಕೈಲಿ ಅರ್ಪಿ ಸಿತು. ಗಾಂಧಿಯವರು ಅದರ ಕೆನ್ನೆಯನ್ನು ಮೆತ್ತಗೆ ಜಿಗಟಿ ವಿನೋದ ವಾಗಿ ಮಾತನಾಡಿದರು. ಅದೇ ಕಟ್ಟಡದ ಮತ್ತೊಂದು ಭಾಗದಲ್ಲಿ ವಿಶ್ರಾಂತಿಗಾಗಿ ಬಂದು ಇಳಿದುಕೊಂಡಿದ್ದ ಮತೊಬ್ಬ ರೋಗಿಯನ್ನು ಮಾತನಾಡಿಸಿ ತುರಾಯಿಯನ್ನು ಅವನಿಗೆ ಕೊಟ್ಟರು. ಸುಮಾರು ಆರುವರೆ ಗಂಟೆ ವೇಳೆಗೆ ಮೆರವಣಿಗೆ ಗಾಂಧಿಯವರು ಇಳಿದುಕೊಂಡಿದ್ದ ಬಂಗಲೆಯ ಎದುರಿನ ಬಯಲಿನಲ್ಲಿ ಪ್ರಾರ್ಥನೆಗಾಗಿ ನೆರೆಯಿತು.

ಗಾಂಧಿಯವರ ಕಾರ್ಯಕ್ರಮದಲ್ಲಿ ಪ್ರಾರ್ಥನೆ ಪ್ರಾಮುಖ್ಯವಾದ ಭಾಗ. ಆ ವೇಳೆಯಲ್ಲಿ ಅವರ ದರ್ಶನ ಜನರಿಗೆ ಸುಲಭವಾಗಿ ದೊರಕು ವುದು. ಆಗ, ಮತ್ತಾವಾಗಲೂ ಇಲ್ಲದಷ್ಟು, ಗಾಂಧಿ ಭಗವಂತನ ಪೂರ್ಣ ಅಂಶವಾಗಿ ಕಾಣುತ್ತಾರೆ. ಈ ಪ್ರಾರ್ಥನೆಯಲ್ಲಿ ಹಿಂದುಗಳು ಮುಸಲ್ಮಾನರು, ಕ್ರಿಸ್ತರು, ಪಾರಸಿಗಳು, ಜೈನರು, ಬೌದ್ಧರು ಎಲ್ಲರೂ ಭೇದಭಾವವಿಲ್ಲದೆ ಸೇರುತ್ತಾರೆ. ಗಾಂಧಿಯವರ ಈ ಪ್ರಾರ್ಥನೆ ಸ್ವಾಭಾವಿಕವಾಗಿ ಬೆಳೆದಿದೆ. ಪ್ರಾರ್ಥನೆಯಲ್ಲಿ ಎಲ್ಲಾ ಮತಗಳ ಕೀರ್ತನೆಗಳೂ ಸೇರಿಕೊಂಡಿವೆ. ಮುಸಲ್ಮಾನ, ಸೂಫಿ, ಫಕೀರರು ಗುರು ನಾನಕ್, ಕ್ರಿಸ್ತಗೀತೆಗಳು ಇವೆಲ್ಲಾ ಆ ಪ್ರಾರ್ಥನೆಯಲ್ಲಿವೆ.

ಈ ಪ್ರಾರ್ಥನೆಯನ್ನು ಕುರಿತು ಗಾಂಧಿಯವರೇ ಒಂದು ಕಡೆ ಹೀಗೆ ಹೇಳಿದ್ದಾರೆ

"ಆಶ್ರಮದಲ್ಲಿ ಚೀಣರು, ಬರ್ಮಾದವರು, ಯಹೂದ್ಯರು, ಸಿಲೋನಿನವರು, ಮುಸಲ್ಮಾನರು, ಪಾರಸಿಗಳು ಆಗಿಂದಾಗ್ಗೆ ಬಂದು ವಾಸಿಸುತ್ತಿದ್ದಾರೆ. ೧೯೩೫ರಲ್ಲಿ ಇಬ್ಬರು ಜಪಾನ್ ಸಾಧುಗಳು ಬಂದರು. ಅವರ ಪೈಕಿ ಒಬ್ಬ ಮೊನ್ನೆ ಮೊನ್ನೆಯವರೆಗೆ ಅಂದರೆ ಜಪಾನಿನೊಂದಿಗೆ ಯುದ್ಧ ಪ್ರಾರಂಭವಾಗುವವರೆಗೆ ಆಶ್ರಮದಲ್ಲಿಯೇ ಇದ್ದನು. ಆತ ಸೇವಾಗ್ರಾಮದ ಆದರ್ಶವಾಸಿಯಾಗಿದ್ದ. ಆತ ಯಾರೊಂದಿಗೂ ಯಾವಾಗಲೂ ನಿಷ್ಠುರವಾಗಿ ಮಾತನಾಡಲಿಲ್ಲ. ನಿಶ್ಶಬ್ದವಾಗಿ ಕೆಲಸಮಾಡುತ್ತಿದ್ದ. ತನಗೆ ಸಾಧ್ಯವಾದಷ್ಟು ಹಿಂದಿಯನ್ನೂ ಕಲಿತ. ಆತನ ನಿಯಮ ನಿಷ್ಠುರ. ತಾನು ಮಾಡಿದ ಪ್ರತಿಜ್ಞೆಗಳನ್ನು ಶಿಸ್ತಿನಿಂದ ಪಾಲಿಸುತ್ತಿದ್ದ ಪ್ರತಿ ಬೆಳಿಗ್ಗೆಯೂ ಸಾಯಂಕಾಲವೂ ತನ್ನ ಮೃದಂಗವನ್ನು ಬಾರಿಸುತ್ತಾ "ಮಂತ್ರ" ವನ್ನು ಜಪಿಸುತ್ತಾ ಆಶ್ರಮದಲ್ಲೆಲ್ಲಾ ತಿರುಗುತ್ತಿದ್ದ. ಸಾಯಂಕಾಲದ ಪ್ರಾರ್ಥನೆ ಆತನ "ನಮ್ಯೊ ಹೊ ರೇಂಕ್ಯೊ" [ಅಂದರೆ ಎಲ್ಲಾ ಧರ್ಮಗಳಿಗೂ ಮೂಲವಾದ ಬುದ್ಧನಿಗೆ ನಮಸ್ಕರಿಸುತ್ತೇನೆ] ಎಂಬ ಮಂತ್ರದಿಂದ ಪ್ರಾರಂಭವಾಗುತ್ತಿದ್ದಿತು. ಪೋಲೀಸಿನವರು ಮೊದಲು ತಿಳಿಸದೆ, ಆತನನ್ನು ಕರೆದುಕೊಂಡು ಹೋಗಲು ಬಂದಾಗ ಆತ ಶಾಂತವಾಗಿ ಅನಾಸಕ್ತಿಯಿಂದ ಎಷ್ಟು ಬೇಗ ಸಿದ್ಧನಾದನೆಂಬುದನ್ನು ಮರೆಯುವುದು ನನ್ನಿಂದ ಸಾಧ್ಯವಿಲ್ಲ. ತನ್ನ ಪ್ರಿಯವಾದ ಮಂತ್ರವನ್ನು ಉಚ್ಚರಿಸಿ ಮೃದಂಗವನ್ನು ನನಲ್ಲಿಯೇ ಬಿಟ್ಟು ಆತ ಹೊರಟ. ನನ್ನ ಬಾಯಿನಿಂದ ಸ್ವಾಭಾವಿಕವಾಗಿ "ನೀವು ನಮ್ಮನ್ನು ಬಿಟ್ಟು ಹೋಗುತ್ತಿದ್ದೀರಿ. ಆದರೆ ನಿಮ್ಮ ಮಂತ್ರವು ಆಶ್ರಮದ ಪ್ರಾರ್ಥನೆಯ ಭಾಗವಾಗಿ ಉಳಿಯುವುದು." ಎಂಬ ಮಾತುಗಳು ಬಂದವು. ಅಂದಿನಿಂದ, ಆತ ಕಣ್ಮರೆಯಾಗಿದ್ದರೂ ನಮ್ಮ ಆಶ್ರಮ ಪ್ರಾರ್ಥನೆ ಬೆಳಿಗ್ಗೆ ಮತ್ತು ಸಂಧ್ಯಾಕಾಲ ಈ ಮಂತ್ರದಿಂದಲೇ ಪ್ರಾರಂಭವಾಗುತ್ತಿದೆ. ನನ್ನ ಮಟ್ಟಿಗೆ ಇದು ಸಾಧು ಕೇಶವನ ತೈಲಧಾರಾವಚ್ಛಿನ್ನವಾದ ಭಕ್ತಿಯನ್ನೂ ಸಾತ್ವಿಕತೆಯನ್ನೂ ಯಾವಾಗಲೂ ಜ್ಞಾಪಕ ಕೊಡುತ್ತಿದೆ.

ಸಾಧು ಕೇಶವ ನಮ್ಮೊಂದಿಗೆ ಇನ್ನೂ ಇದ್ದಾಗಲೇ, ಬೀಬಿ ರೇಹನ ತಯಾಬ್ಜಿ ನಮ್ಮಲ್ಲಿ ಬಂದು ಸೇವಾಗ್ರಾಮದಲ್ಲಿ ಕೆಲವು ದಿನ ಇದ್ದಳು. ಆಕೆ ಸಾಧುವಾದ ಮುಸಲ್ಮಾನ ಭಕ್ತಳು ಎಂದು ತಿಳಿದಿದ್ದೇನೆ ಹೊರತು ಕೊರಾನ್‌ಶರೀಫನ್ನು ಎಷ್ಟು ಚೆನ್ನಾಗಿ ಹಾಡಬಲ್ಲಳೆಂಬುದು, ತಯಾಬ್ಜಿ ಸಾಬೇಬರ ನಿಧನದವರೆಗೆ ನನಗೆ ಗೊತ್ತಿರಲಿಲ್ಲ. ಗುಜರಾತಿನ ರತ್ನ ತಯಾಬ್ಜಿ ಸಾಹೇಬರು ಸ್ವರ್ಗಸ್ಥರಾದಾಗ ಆ ವಾತಾವರಣದ ಗಂಭೀರಶಾತಿಯನ್ನು ಯಾವ ರೋದನವೂ ಕಲಕಲಿಲ್ಲ. ಬೀಬಿ ರೈಹನಳ ಇಂಪಾದ ದುಃಖಪೂರಿತ ಕೊರಾನಿನ ಗಾನ ಅಲ್ಲಿ ಪ್ರತಿಧ್ವನಿತವಾಯಿತು. ತಯಾಬ್ಜಿ ಸಾಹೇಬರಂತಹವರು ಸಾಯುವುದಿಲ್ಲ. ತಾವು ಮಾಡಿದ ರಾಷ್ಟ್ರಸೇವೆಯ ಆದರ್ಶದಲ್ಲಿ ಅವರು ಯಾವಾಗಲೂ ಬದುಕಿರುತ್ತಾರೆ ಬೀಬಿ ರೇಹನಳಿಗೆ ಅನೇಕ ಭಜನೆಯ ಗೀತೆಗಳು ಬರುತ್ತವೆ. ಅವಳು ಒಳ್ಳೆಯ ಗಾಯಕಿ. ಆಕೆ ನಿತ್ಯಾ ಇಂಪಾದ ಗಾನಗಳನ್ನು ಹಾಡುತ್ತಿದ್ದಳು. ಕುರಾನಿನ ಶ್ಲೋಕಗಳನ್ನು ಉಚ್ಚರಿಸುತ್ತಿದ್ದಳು. ಆಶ್ರಮವಾಸಿಗಳಲ್ಲಿ ಯಾರಿಗಾದರೂ ಈ ಗೀತೆಗಳನ್ನು ಕಲಿಸಿ ಎಂದು ನಾನು ಆಕೆಗೆ ಹೇಳಿದೆ. ಆಕೆ ಒಪ್ಪಿದಳು. ಆಶ್ರಮಕ್ಕೆ ಬರುವ ಅನೇಕರಂತೆ ಆಕೆಯೂ ನಮ್ಮಲ್ಲಿ ಒಬ್ಬಳಾದಳು. ರೇಹಿನ ಆಶ್ರಮದಿಂದ ಹಿಂದಿರುಗಿ ಹೋದಳು. ಆದರೆ ಆಕೆಯ ಸವಿನೆನಪು—ಹೂವು ಹೋದರೂ ಅದರ ವಾಸನೆ ಉಳಿಯುವಂತೆ—ಉಳಿದಿದೆ. ಈಚೆಗೆ ಆಶ್ರಮದ ಪ್ರಾರ್ಥನೆಯಲ್ಲಿ "ಅಲ್‌ಫಟೀಹ" ವನ್ನು ಸೇರಿಸಿದ್ದೇನೆ ಇದು ಅದರ ಅನುವಾದ :—

"(1) ನಾನು ಪಿಶಾಚಿಯಾದ "ಸೇಟನ್" ನ್ನು ಬಿಟ್ಟು ಅಲ್ಲಾನಿಗೆ ಶರಣಾಗತನಾಗುತ್ತೇನೆ.

"(2) ಆತನೇ ದೇವರು, ಒಂದೇ ‹ ಒಂದು ಒಬ್ಬನೇ ಒಬ್ಬ ಶಾಶ್ವತ, ಏಕಮೇವ.

" ಅವನು ಹುಟ್ಟಿಸುವುದಿಲ್ಲ ; ಹುಟ್ಟಲಿಲ್ಲ.

" ಅವನು ಯಾರಂತೆಯೂ ಇಲ್ಲ.

"(3) ದೇವರನ್ನು ವಂದಿಸೋಣ.

“ ಆತನೇ ವಿಶ್ವ ಸೃಷ್ಟಿಕರ್ತಾ, ವಿಶ್ವಾಧಾರ.
“ ದಯಾಮಯ ಪೂಜನೀಯ.
“ ಜಗದಾದ್ಯಂತದ ತೀರ್ಮಾನದ ದಿನದ ಒಡೆಯ.
“ ನಾನು ನಿನ್ನನ್ನು ಪೂಜಿಸುತ್ತೇನೆ.
” ನಿನ್ನ ರಕ್ಷಣೆಯನ್ನು ಬೇಡುತ್ತೇನೆ.
“ ನಮಗೆ ಸತ್ಯದ ಮಾರ್ಗವನ್ನು ತೋರಿಸು.
“ ನಿನ್ನ ಕೃಪೆಗೆ ಪಾತ್ರರಾದವರು ನಡೆದ ದಾರಿ ತೋರಿಸು.
“ ಕೋಪಿಷ್ಟರಲ್ಲದವರ, ಸತ್ಯಸಂಧರ,
“ ಸನ್ಮಾರ್ಗಾವಲಂಬಿಗಳ ದಾರಿ ತೋರಿಸು ”

ಗಾಂಧಿಯವರು ಮೇಲಿನದನ್ನು ಬರೆಯುವುದಕ್ಕೆ ಕಾರಣ ಒಬ್ಬರು ಅವರಿಗೆ ಹೀಗೆ ಹೇಳಿದುದೇ “ ಆಶ್ರಮ ಭಜನೆಯಲ್ಲಿ “ ಕಲ್ಮಾ ” ಕ್ಕೆ ಸ್ಥಳ ಕೊಟ್ಟಿರಿ, ಹಿಂದೂ ಧರ್ಮವನ್ನು ಕೊಲ್ಲಲು ಇದಕ್ಕಿಂತ ನೀವು ಇನ್ನೇನು ಮಾಡಬೇಕು. ” ಗಾಂಧಿಯವರು ಮೇಲಿನ ಆಪಾದನೆಗೆ ಉತ್ತರವನ್ನು ಮುಂದುವರಿಸುತ್ತಾ ಹೀಗೆ ಹೇಳಿದ್ದಾರೆ. “ ಇದರಿಂದ ಅಂದರೆ “ಕಲ್ಮ”ವನ್ನು ಪಾರ್ಥನೆಯಲ್ಲಿ ಸೇರಿಸಿಕೊಂಡುದರಿಂದ ನನ್ನ ಮತ್ತು ಆಶ್ರಮದ ಇತರ ಹಿಂದುಗಳ ಹಿಂದೂ ಧರ್ಮ ಬೆಳೆದಿದೆ. ನಾವು ಎಲ್ಲಾ ಮತಗಳನ್ನೂ ಸಮಾನವಾಗಿ ಪ್ರೀತಿಸಬೇಕು. ಬಾದಶಹ ಖಾನ್ ಇಲ್ಲಿ ಬಂದಾಗ ಪ್ರಾರ್ಥನೆಯಲ್ಲಿ ಸಂತೋಷದಿಂದ ಭಾಗವಹಿಸುತ್ತಾರೆ. ರಾಮಾಯಣದ ಗಾನ ಅವರಿಗೆ ಇಷ್ಟ. ಗೀತೆಯನ್ನು ಶ್ರದ್ಧೆಯಿಂದ ಕೇಳುತ್ತಾರೆ. ಇದರಿಂದ ಅವರಿಗೆ ಇಸ್ಲಾಂನಲ್ಲಿ ನಂಬಿಕೆ ಕಡಿಮೆಯಾಗಿಲ್ಲ. ಹೀಗಿರುವಲ್ಲಿ ಕುರಾನನ್ನು ನಾನು ಯಾಕೆ ಅಷ್ಟೇ ಭಕ್ತಿ ಶ್ರದ್ಧೆಯಿಂದ ಕೇಳಬಾರದು ? ಸೆರೆಮನೆಯಲ್ಲಿ ವಿನೋಬರೂ ಪ್ಯಾರಿಲಾಲರೂ ಅರಬ್ಬಿಯನ್ನು ಕಲಿತರು. ಈ ವ್ಯಾಸಂಗದಿಂದ ಅವರ ಹಿಂದು ಧರ್ಮ ಇನ್ನೂ ಹೆಚ್ಚು ಧನಿಕವಾಗಿದೆ. ಹೃದಯಗಳು ಹೀಗೆ ಸ್ವಾಭಾವಿಕವಾಗಿ ಮಿಲನವಾಗುವುದರಿಂದ ಮಾತ್ರವೇ ಹಿಂದೂ ಮುಸಲ್ಮಾನರ ಐಕ್ಯತೆಯುಂಟಾಗುತ್ತದೆ. ಬೇರೆ ದಾರಿ ಇದಕ್ಕೆ ಇಲ್ಲ ಎಂಬುದು ನನ್ನ ನಂಬಿಕೆ. ರಾಮಚಂದ್ರನಿಗೆ ಇರುವುದು ಸಹಸ್ರ

ನಾಮುಗಳು ಮಾತ್ರವಲ್ಲ. ಆತನ ಹೆಸರು ಅಸಂಖ್ಯಾತ. ಅಲ್ಲ ಎನ್ನಿ ಖುದಾ ಎನ್ನಿ ರಹಿಮ್ ಎನ್ನಿ ರಜಾಕ್ ಎನ್ನಿ ಅನ್ನದಾತಾ ಎನ್ನಿ, ಭಕ್ತರ ಹೃದಯದಿಂದ ಬರುವ ಎಲ್ಲಾ ಹೆಸರೂ ಆ ಭಗವಂತನದೇ"

ನಂದಿ ದುರ್ಗದ ಪವಿತ್ರವಾತಾವರಣದಲ್ಲಿ ಸಂಧ್ಯಾಕಾಲದ ಆ ಪ್ರಾರ್ಥನೆಯಲ್ಲಿ ಹಿಂದೂ ಮುಸಲ್ಮಾನ ಕ್ರಿಸ್ತರೆಲ್ಲ ನೆರೆದಿದ್ದರು. ಜನ ಕುಳಿತ ನಾಲ್ಕಾರು ನಿಮಿಷಗಳ ಮೇಲೆ ಗಾಂಧಿಯವ್ವರೂ ಬಂದರು. ಮೊದಲು ಭಗವದ್ಗೀತೆ ಅನಂತರ ತುಲಸೀ ರಾಮಾಯಣ ಆಮೇಲೆ ಅನೇಕವಾದ ಕೀರ್ತನೆಗಳ ಗಾನ. ಅಂದು ಪ್ರಾರ್ಥನೆ ಒಂದು ಗಂಟೆ ಹಿಡಿಯಿತು. ಯಾವ ಗದ್ದಲವೂ ಇರಲಿಲ್ಲ. ಪಟ್ಟಣದ ವಾತಾವರಣ ದಿಂದ ದೂರವಾದ ಆ ಕೈಲಾಸಗಿರಿಯಲ್ಲಿ ಯಾರೂ ಎಲ್ಲಿಗೂ ಹೋಗ ಬೇಕಾದ ಅವಸರ ತವಕಗಳಿಲ್ಲದೆ ಶಾಂತವಾಗಿ ಕುಳಿತಿದ್ದರು. ಕಬೀರರ ಈ ಹಾಡು ಗಾಂಧಿಯವರನ್ನು ಬಹಳ ಆಕರ್ಶಿಸಿದ್ದುದರಿಂದ ಭಕ್ತರು ಅದನ್ನು ತಪ್ಪದೆ ಹಾಡುತ್ತಿದ್ದರು.

ಇಸ್ ತನ್ ಧನ ಕಿ ಕೌನ ಬಡಾಯಿ
ದೇಖತ ನೈನೋಂ ಮೆ ಮಿಟ್ಟಿ ಮಿಲಾಯಿ ॥
ಅಪನೇ ಖಾತರ್ ಮಹಲ್ ಬನಾಯಾ
ಆಪಹಿ ಜಾಕರ್ ಜಂಗಲ್ ಸೋಯಾ ॥
ಹಾಡ್ ಜಲೇ ಜೈಸೆ ಲಕಡೀ ಕೀ ಮೋಲೀ
ಬಾಲ್ ಜಲೇ ಜೈಸೆ ಘಾಸ್ ಕೀ ಪೋಲೀ ॥
ಕಹತ ಕಬೀರಾ ಸುನ್ ಮೇರೆ ಗುಣಿಯಾ
ಆಪ್ ಮುವೇ ಪೀಛೆ ಡುಬ್‌ಗಯಿ ದುನೀಯಾ ॥

ಕಬೀರನ ಗಾನಮಾಧುರ್ಯ ಹಿಂದೀ ಉರ್ದು ತಿಳಿಯದವರನ್ನೂ ಮುಗ್ಧರನ್ನಾಗಿ ಮಾಡಿತು. ನೆರದಿದ್ದ ಜನ ಭಕ್ತಿಯಲ್ಲಿ ಸಾತ್ವಿಕತೆ ಯಲ್ಲಿ ಸ್ನಾನಮಾಡಿದವರಂತೆ ಪುಲಕಿತರಾದರು. ಗುರುವಿನಲ್ಲಿ ಗುಣ ವಿದ್ದರೆ ತೀರ್ಥ ರುಚಿ ಎಂಬ ಗಾದೆಯುಂಟು. ಹಾಗೆ ಗಾಂಧಿಯವರ ಸಾನ್ನಿಧ್ಯದಿಂದ ಪ್ರಾರ್ಥನೆ ಹೆಚ್ಚು ಪ್ರಭಾವಯುಕ್ತವಾಯಿತು. ಒಬ್ಬ ಸ್ವಯಂಸೇವಕ " ಬೆಳಗಿನ ಜಾವದ ಪ್ರಾರ್ಥನೆಯಲ್ಲಿ ಜನ ಹೆಚ್ಚಾಗಿರು

ವುದಿಲ್ಲ. ಆಗ ತುಲಸೀರಾಮಾಯಣವನ್ನು ಇನ್ನೂ ಹೆಚ್ಚಾಗಿ ಹಾಡು ತ್ತಾರೆ'' ಎಂದ. ಆ ಪ್ರಾರ್ಥನೆಗೆ ನಮ್ಮನ್ನೂ ಎಬ್ಬಿಸಬೇಕೆಂದು ಆತನಿಗೆ ಹೇಳಿ ನಾವು ಛತ್ರದಲ್ಲಿ ಮಲಗಿದೆವು.

ನಂದಿಬೆಟ್ಟದ ಛಳಿ ನಿಮಗೆ ಗೊತ್ತೇ ಇದೆ. ಆ ಚೈತನ್ಯದಾಯಕ ವಾದ ಗಾಳಿ ನಿಮ್ಮನ್ನು ಸೋಮಾರಿಯಾಗಿರಲು ಬಿಡುವುದಿಲ್ಲ. ಅಲ್ಲಿ ನಿದ್ರೆಯೇ ಬರುವುದಿಲ್ಲ. ಅಲ್ಲಿ ಎಂತಹ ಸೋಮಾರಿಯೂ ಚಟು ವಟಿಕೆಯುಳ್ಳವನೇ ಆಗುತ್ತಾನೆ. ಭಾರತ ಎಂತಹ ಪವಿತ್ರವಾದ ನಾಡು. ಜಗದ್ಗುರು ಗಾಂಧಿಯವರಿಗೆ ಜನ್ಮವಿತ್ತ ಪುಣ್ಯಭೂಮಿ ಇದು. ಈ ನಾಡಿನಲ್ಲಿ ಈ ಕಾಲದಲ್ಲಿ ಜನಿಸಿರುವ ನಾವು ರಾಮಚಂದ್ರನ ಕಾಲ ದಲ್ಲಿ ಜನಿಸಿದವರಂತೆ ಧನ್ಯರು. ಆದರೆ ನಾವು ಗಾಂಧಿಯವರನ್ನು ಸರಿಯಾಗಿ ಅರ್ಥಮಾಡಿಕೊಂಡಿದ್ದೇವೆಯೆ ? ಸುಮ್ಮನೆ ಗಾಂಧಿಯವರ ಹೆಸರನ್ನು ಹೇಳಿಬಿಟ್ಟರೆ ಆಯಿತೆ ? ಅಥವಾ ಅವರ ಜಯಂತಿಯ ದಿನ ಗಾಂಧಿಕಿ ಜೈ ಎಂದುಕೊಂಡು ಕೋಸುಂಬರಿ ಪಾನಕ ತಿಂದರೆ ಆಯಿತೆ? ಈ ಮಹಾತ್ಮನ ಜಗದ್ವಂದ್ಯಗಳಾದ ಆದರ್ಶಗಳೇನು, ಧರ್ಮತತ್ವ ಗಳೇನು, ತ್ಯಾಗವೇನು ? ದಳಿತರಲ್ಲಿ ಈತನ ಕರುಣಾಸಮುದ್ರವೆಷ್ಟು, ಜಗತ್ತೆಲ್ಲ ತನ್ನವರೆಂದುಕೊಳ್ಳುವ ಈತನ ಹೃದಯವೈಶಾಲ್ಯವೆಷ್ಟು ? ಕಾಂಗ್ರೆಸ್‌ನಲ್ಲಿ ಈತ ಸೇರಿರುವುದು ಒಂದು ಆಕಸ್ಮಿಕ. ಭಗವಂತ ಜಗತ್ತಿಗೆ ಕೊಟ್ಟಿರುವ ಸಂಜೀವಿನಿ ಈತ. ಇದನ್ನು ಜಗತ್ತು ತಿಳಿ ದಿದೆಯೇ ? ಇಂತಹ ಮಹಾತ್ಮ ಈ ಭೂಮಿಯ ಮೇಲೆ ಕಣ್ಣೆದುರಿಗೆ ತಿರುಗಾಡುತ್ತ ಇದ್ದರು ಎಂಬುದನ್ನು ಕೂಡ ನಂಬುವುದು ಮುಂದಲ ಜನಾಂಗಕ್ಕೆ ಕಷ್ಟ. ಹಾಗೆ ದೈವಿಕವಾಗಿದೆ ಈತನ ಮಹಿಮೆ ಎಂದರು ಈನಸ್ಟೀನ್ ವಿಜ್ಞಾನಿ. ಹಾಗೆಯೆ ಶ್ರೀರಾಮಚಂದ್ರ ಈ ಜಗತ್ತಿನಲ್ಲಿ ತಿರುಗಾಡಿದಾಗ ಜನ ಆತನನ್ನು ಅರಿತರೆ ? ಶ್ರೀ ಕೃಷ್ಣನನ್ನು ಅರಿತರೆ ? ಪರಾಧೀನವಾದ ದೇಶಕ್ಕೆ ತನ್ನ ಮಹಿಮೆಯೂ ತನ್ನಲ್ಲಿ ಜನಿಸಿದ ಮಹಾತ್ಮರ ಪ್ರಭಾವವೂ ಗೋಚರವಾಗುವುದಿಲ್ಲ.

ಗಾಂಧಿಯವರ ಈ ಯುಗದಲ್ಲಿ ಜನಿಸಿದ ನಾವೇ ಭಾಗ್ಯಶಾಲಿಗಳು ಎಂದುಕೊಂಡು, ನಂದಿಬೆಟ್ಟದ ಅರ್ಧರಾತ್ರಿಯ ಛಳಿಯಲ್ಲಿ ನಿದ್ರೆಬಾರದೆ.

ಹೊರಳಾಡುತ್ತಿದ್ದೆವು. ಬೆಳಗಿನ ಝಾವದ ಹೊತ್ತಿಗೆ ವೈ ಸ್ವಲ್ಪ ಶಾಖ ವಾಯಿತು. ಕಣ್ಣಿಗೆ ಸ್ವಲ್ಪ ಜಂಪುಬಂದಿತು. ರೈಲು ಎಂಜನ್ನಿನ ಶಬ್ದದಂತೆ ಗಾಳಿ ಭರ್ರೆಂದು ಬೀಸಿ ಎಚ್ಚರಗೊಳಿಸಿತು. ನಾವು ಮತ್ತೆ ಮರೆಯಾಗುತ್ತಿದ್ದ ಕನಸಿನ ಸೆರಗಿನಲ್ಲಿ ಹುದುಗಿಕೊಳ್ಳಲು ಪ್ರಯತ್ನಿಸು ತ್ತಿರುವಾಗ ನಾವು ಮೊದಲೇ ಹೇಳಿದ್ದ ಸ್ವಯಂಸೇವಕನು ಬಂದು ಪ್ರಾರ್ಥನೆಗೆ ಕರೆದನು. ಇಬ್ಬನಿ ಮಳೆಯಂತೆ ದಟ್ಟವಾಗಿ ಬೀಳು ತ್ತಿದ್ದಿತು. ನೆಲದ ಮೇಲೆ ಕಾಲಿಟ್ಟಾಗ ಮಹಾತ್ಮರ ಹೆಜ್ಜೆಗಳಿಂದ ಅವರ ಜೀವಿತಕಾಲದ ಸಮಸ್ತವಾತಾವರಣವೂ ಬೆಳಗುವಂತೆ ಮಂಜು ತೊಯಿದ ನೆಲದಲ್ಲಿ ಬೆಳ್ಳಿಯ ಹೊಳಪಿನ ಗುರುತಾಗುತ್ತಿದ್ದಿತು. ಗಾಂಧಿ ಯವರು ಇಳಿದುಕೊಂಡಿದ್ದ ಕಟ್ಟಡಕ್ಕೆ ಹೋದೆವು. ಗಾಂಧಿಯವರು ಎಂತಹ ದೊಡ್ಡ ಮನೆಯಲ್ಲಿಯೂ ಉಪಯೋಗಿಸುವುದು ಒಂದೇ ಕೊಠಡಿ. ಅದೇ ಅವರ ಪ್ರಾರ್ಥನಾಮಂದಿರ, ಆಫೀಸು ಭೋಜನ ಶಾಲೆ ಬೈಠಕ್ ಖಾನೆ ವಿಶ್ರಾಂತಿಗೃಹ ಶಯ್ಯಾಗಾರ. ಒಂದೇ ಕೊಠಡಿ ಆಯಾಕಾಲಕ್ಕೆ ಅನುಸಾರವಾಗಿ ಹಾಗೆಲ್ಲಾ ಬದಲಾವಣೆಯಾಗುತ್ತದೆ. ಗಾಂಧಿಯವರು ತಾವು ಮಲಗಿದ್ದ ಹಾಸಿಗೆಯ ಮೇಲೆ ಕುಳಿತಿದ್ದರು. ಎದುರಿಗೆ ಒಂದು ಕಾಲುಮಣೆ, ಅದರ ಮೇಲೆ ಕೆಲವು ಕಾಗದಗಳಿದ್ದವು. ಗಾಂಧಿಯವರು ಎಡಗೈಯಲ್ಲಿ ಬರೆಯುತ್ತಿದ್ದರು. ಬಲಗೈಯಲ್ಲಿ ಬರೆದು ಆಯಾಸವಾದಾಗ ಎಡಗೈಯಲ್ಲಿ ಬರೆಯುವುದು ಗಾಂಧಿಯವರ ಪದ್ಧತಿ. ನಂದಿಬೆಟ್ಟದ ಮೇಲಿನ ಗಾಂಧಿಯವರ ಕೊಠಡಿಯ ಒಂದು ಮೂಲೆ ಯಲ್ಲಿ, ನಿಂತುಕೊಂಡರೆ ಬರೆಯುವುದಕ್ಕೆ ಆಗುವ ಒಂದು ಡೆಸ್ಕ್ ಇತ್ತು. ಕುಳಿತು ಬರೆದು ಆಯಾಸವಾದಾಗ, ಗಾಂಧಿಯವರು ನಿಂತು ಬರೆಯು ತ್ತಿದ್ದರು. ಕುಳಿತಿದ್ದರೇನು, ನಿಂತಿದ್ದರೇನು ಬರವಣಿಗೆ ಕೆಲಸ ಸಾಗು ವುದು ಅಲ್ಲಿ ಮುಖ್ಯ.

ಬೆಳಗಿನ ಜಾವದ ಆ ಪ್ರಾರ್ಥನೆಯಲ್ಲಿ ಜನ ಹೆಚ್ಚಾಗಿರಲಿಲ್ಲ. ಐವರು ಮಹಿಳೆಯರೂ ನಾಲ್ಕೈದು ಪುರುಷರೂ ಮಾತ್ರ ಇದ್ದರು. ದೀಪದ ಪ್ರಕಾಶವೂ ಅತಿ ದೇದೀಪ್ಯಮಾನವಾಗಿರಲಿಲ್ಲ. ಇಬ್ಬರು ಮಹಿಳೆಯರು ತುಳಸೀರಾಮಾಯಣವನ್ನು ಅತ್ಯಂತ ಮಧುರವಾದ

ಕಂಠದಲ್ಲಿ ಹಾಡುತ್ತಿದ್ದರು. ಹಿನ್ನೆಲೆಗೆ ಒಂದು ತಂಬೂರಿಯ ಶ್ರುತಿಯಿದ್ದಿತು. ಬ್ರಾಹ್ಮೀ ಮುಹೂರ್ತದ ಪ್ರಶಾಂತಶಾಂತಿ, ತುಳಸೀ ರಾಮಾಯಣದ ಭಾವುಕತೆ ಹಾಡುತ್ತಿದ್ದವರ ಗಾಢವಾದ ಭಕ್ತಿ, ಪ್ರಾರ್ಥನೆಯ "ಪೂಜಾರಿ" ಸ್ಥಾಣುವಿನೋಪಾದಿಯಲ್ಲಿ ಕುಳಿತಿರುವ ಮಹಾತ್ಮರು; ನಮ್ಮ ವ್ಯಸನಗಳು ಗಂಗಾಜಲದಲ್ಲಿ ಮಿಂದು ಪವಿತ್ರವಾದುವು. ಹಾಡಿನ ಸೊಂಪಿನಿಂದ ಹಾಗೆಯೇ ಒಂದು ವಿಧವಾದ ಮತ್ತು ಉಂಟಾಯಿತು. ಕಣ್ಣು ಮುಚ್ಚಿಕೊಂಡು ಆ ಗಾನದ ಉಯ್ಯಾಲೆಯಲ್ಲಿ ತೂಗಾಡುತ್ತಾ ಕುಳಿತಿದ್ದೆವು. ಸ್ವಲ್ಪ ಹೊತ್ತಿನನಂತರ ಕಣ್ಣು ಬಿಟ್ಟು ನೋಡುವಾಗ ಪ್ರಾರ್ಥನೆ ಮುಗಿದಿದ್ದಿತು. ಕೊಠಡಿಯಲ್ಲಿ ಮತ್ತಾರೂ ಇರಲಿಲ್ಲ. ತಂಬೂರಿಯೂ ಇರಲಿಲ್ಲ. ಗಾಂಧಿಯವರು ಮಾತ್ರ ಬರೆಯುತ್ತಾ ಕುಳಿತಿದ್ದರು. ನಾವು ಬೆಚ್ಚಿಬಿದ್ದು ಕಣ್ಣು ಒರಸಿಕೊಂಡು ಅಪರಾಧಿಯ ಭಾವದಿಂದ ಮೇಲೆದ್ದೆವು. ಗಾಂಧಿಯವರು ಮುಗುಳು ನಗೆ ನಗುತ್ತಾ "ಪ್ರಾರ್ಥನೆ ಮಾಡುತ್ತಾ ಮಾಡುತ್ತಾ ಮಲಗಿಯೇಬಿಟ್ಟಿರಿ" ಎಂದರು. ಮಾಫ್ ಮಾಡಿ ಎಂದು ಹೇಳಬೇಕೆಂದು ನಮ್ಮ ಇಷ್ಟ. ಆದರೆ ಬಾಯಿನಿಂದ ಮಾತು ಹೊರಡಲಿಲ್ಲ. ನಮ್ಮ ಕೊಠಡಿಗೆ ಹೋಗಿ ಮತ್ತೆ ಮಲಗಿಕೊಂಡೆವು. ಪ್ರಾರ್ಥನೆಯ ಮುಂದಲ ಶ್ಲೋಕಗಳು ಕಿವಿಯಲ್ಲಿ ಪ್ರತಿಧ್ವನಿತವಾಗುತ್ತಿದ್ದವು.

ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥಮನೋಗತಾನ್
ಆತ್ಮನ್ಯೇ ವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ
ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ
ವೀತರಾಗ ಭಯಕ್ರೋಧಃ ಸ್ಥಿತ ಧೀರ್ಮುನಿರುಚ್ಯತೇ
ಯಸ್ಸರ್ವತ್ರಾ ನಭಿ ಸ್ನೇಹಃ ತತ್ತತ್ಪ್ರಾಪ್ಯಶುಭಾಶುಭಂ
ನಾಭಿನಂದತಿ ನದ್ವೇಷ್ಟಿ ತಸ್ಯಪ್ರಜ್ಞಾಪ್ರತಿಷ್ಠಿತಾ
ಯದಾ ಸಂಹರತೇ ಚಾಯಂ ಕೂರ್ಮೋಂಗಾನೀವಸರ್ವಶಃ
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾಪ್ರತಿಷ್ಠಿತಾ
ವಿಷಯಾ ವಿನಿವರ್ತಂತೆ ನಿರಾಹಾರಸ್ಯ ದೇಹಿನಃ
ರಸವರ್ಜಂ ರಸೋಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ

ಯ ತತೋಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂಮನಃ
ತಾನಿ ಸರ್ವಾಣಿ ಸಂಯಮ್ಯ ಯುಕ್ತಆಸೀತಮತ್ಪರಃ
ವಶೇಹಿ ಯಸ್ಯೇಂದ್ರಿಯಾಣಿ ಶಸ್ಯಪ್ರಜ್ಞಾ ಪ್ರತಿಷ್ಠಿತಾ
ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ
ನಿರ್ಮಮೋ ನಿರಹಂಕಾರಃ ಸಮದುಃಖ ಸುಖಃಕ್ಷಮೀ
ಸಂತುಷ್ಟಃ ಸತತಂ ಯೋಗಿ ಯತಾತ್ಮಾ ದೃಢನಿಶ್ಚಯಃ
ಮಯ್ಯರ್ಪಿತ ಮನೋಬುದ್ಧಿರ್ಯೋಮದ್ಭಕ್ತಸ್ಸಮೇ ಪ್ರಿಯಃ
ಯಸ್ಮಾನ್ನೋ ದ್ವಿಜತೇ ಲೋಕಃ ಲೋಕಾನ್ನೋ ದ್ವಿಜತೇ ಚಯಃ
ಹರ್ಷಾಮರ್ಷ ಭಯೋದ್ವೇಗೈಃ ಮುಕ್ತೋ ಯಸ್ಸ ಚ ಮೇ ಪ್ರಿಯಃ
ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ
ಸರ್ವಾರಂಭಪರಿತ್ಯಾಗೀ ಯೋಮದ್ಭಕ್ತಸ್ಸಮೇಪ್ರಿಯಃ
ಯೋನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನಕಾಂಕ್ಷತಿ
ಶುಭಾಶುಭ ಪರಿತ್ಯಾಗೀ ಭಕ್ತಿಮಾನ್ಯಸ್ಸಮೇಪ್ರಿಯಃ
ಸಮಃ ಶತ್ರೌ ಚ ಮಿತ್ರೇ ಚ ತಥಾಮಾನಾಪಮಾನಯೋಃ
ಶೀತೋಷ್ಣ ಸುಖದುಃಖೇಷು ಸಮಸ್ಸಂಗವಿವರ್ಜಿತಃ
ತುಲ್ಯನಿಂದಾ ಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್
ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ಮೇ ಪ್ರಿಯೋನರಃ

ಯಾವಾಗ ಅಂತಃಕರಣದಲ್ಲಿರುವ ಸಮಸ್ತವಾದ ಕಾಮಗಳನ್ನೂ ನೀಗಿ ತನ್ನ ಆತ್ಮನಲ್ಲಿಯೇ ತಾನು ತುಷ್ಟನಾಗಿರುತ್ತಾನೋ ಅವನನ್ನು ಸ್ಥಿತಪ್ರಜ್ಞನೆನ್ನುತ್ತೇನೆ. ಆತನು ದುಃಖದಿಂದ, ವ್ಯಾಕುಲವಾದ ಮನಸ್ಸುಳ್ಳವನಾಗುವುದಿಲ್ಲ. ಸುಖಗಳನ್ನು ಹಂಬಲಿಸುವುದಿಲ್ಲ. ರಾಗ ಭಯ ಕ್ರೋಧಗಳನ್ನು ಬಿಟ್ಟ ಮುನಿ. ಯಾರು ಯಾವುದರಲ್ಲಿಯೂ ಸ್ನೇಹವಿಲ್ಲದಿರುವನೋ, ಉಂಟಾದ ಶುಭಾಶುಭಗಳಿಂದ ಸಂತೋಷ ದ್ವೇಷಗಳನ್ನು ಹೊಂದುವುದಿಲ್ಲವೋ ಅವನೇ ಸ್ಥಿತಪ್ರಜ್ಞನು. ಆಮೆಯು ಅಂಗಗಳನ್ನು ಹೇಗೆಯೋ ಹಾಗೆ ಸಮಸ್ತ ಇಂದ್ರಿಯಗಳನ್ನೂ ವಿಷಯ ಗಳಿಂದ ಸ್ಥಿತಪ್ರಜ್ಞನು ಎಳೆದುಕೊಳ್ಳುತ್ತಾನೆ. ಯೋಗಿಯಾದವನು

ಸಮಸ್ತವಾದ ಇಂದ್ರಿಯಗಳನ್ನೂ ಅಡಗಿಸಿ ಪರಮಾತ್ಮನಲ್ಲಿ ಮಾತ್ರ ನೆಟ್ಟ ಮನಸ್ಸುಳ್ಳವನಾಗಬೇಕು. ಯಾರು ಯಾರನ್ನೂ ದ್ವೇಷಿಸುವುದಿಲ್ಲವೋ ಎಲ್ಲರಲ್ಲಿಯೂ ಕರುಣೆಯುಳ್ಳವನಾಗಿ ಮಮಕಾರ ಅಹಂಕಾರ ರಹಿತ ನಾಗಿರುವನೋ, ಸುಖ ದುಃಖಗಳನ್ನು ಸಮನಾಗಿ ಅರಿತು ಕ್ಷಮಾ ಬುದ್ಧಿಯುಳ್ಳವನಾಗಿರುವನೋ ಅವನೇ ಸ್ಥಿತಪ್ರಜ್ಞನು, ಯಾವುದ ರಲ್ಲಿಯೂ ಅಪೇಕ್ಷೆ ಇಲ್ಲದವನು, ಶುಚಿಯಾದವನು, ದಕ್ಷನಾದವನು ಉದಾಸೀನನು, ದುಃಖವಿಲ್ಲದವನು, ಸರ್ವಕರ್ಮಗಳ ಆರಂಭವನ್ನೂ ಬಿಡುವನು ಈ ಯೋಗಿಯೇ ನನಗೆ ಪ್ರಿಯನು. ಯಾರಿಗೆ ಶತ್ರು ಮಿತ್ರರು ಮಾನ ಅಪಮಾನಗಳು ಶೀತ ಉಷ್ಣ ಸುಖದುಃಖಗಳು ಸಮವೋ, ಒಂಟಿಯಾಗಿರುವುದೂ ಸಂಘದೊಡನಿರುವುದೂ ಸಮವೋ ಅವನೇ ಯೋಗಿಯು. ನಿಂದೆಯೂ ಸ್ತುತಿಯೂ ಸಮವುಳ್ಳವನಾಗಿ ಹೇಗೂ ಸಂತುಷ್ಟನಾಗಿ ಸ್ಥಿರವಾದ ಬುದ್ಧಿಯುಳ್ಳವನಾದ ಭಕ್ತನೇ ನನಗೆ ಪ್ರಿಯನಾದವನು.

ಶ್ಲೋಕಗಳನ್ನು ಮೆಲುಕುಮಾಡುತ್ತಾ ಮಲಗಿದ್ದಂತೆ, ಯಾರ ಜೀವಿತದಲ್ಲಿ ಈ ಧ್ಯೇಯ ಸಾಧನೆಯಾಗಿದೆಯೋ ಅಂತಹ ಮಹಾತ್ಮನ ಸಾನ್ನಿಧ್ಯದಲ್ಲಿರುವ ನಾವೇ ಧನ್ಯರೆಂದುಕೊಂಡೆವು.

---

# ೨. ಭಾರತದ ಇತಿಹಾಸದ ಒಂದು ನೋಟ

## ೧

ಭಾರತದ ಇತಿಹಾಸ ಅನೇಕ ಸಾವಿರ ವರುಷಗಳ ಹಿಂದಲಿಂದ ಪ್ರಾರಂಭವಾಗಿದೆ. ಆ ಇತಿಹಾಸದ ಬಹುಭಾಗ ಇನ್ನೂ ಬೆಳಕಿಗೆ ಬಂದಿಲ್ಲ. ಗೊತ್ತಾದಷ್ಟು ಸಂಗತಿಗಳನ್ನು ಈಗ ನೂರು ವರುಷಗಳಿಂದ ಒಂದು ಆಕಾರಕ್ಕೆ ತಂದಿದ್ದಾರೆ. ಪ್ರಾಚೀನ ಭಾರತದ ಇತಿಹಾಸಕ್ಕೆ ಆಧಾರಗಳಾದ ಸಂಗತಿಗಳು ದೊರೆತಿದ್ದರೂ, ಆ ವಿಷಯಗಳು ಬಹಳ ಕಾಲ ಪ್ರಾಶ್ಚಾತ್ಯರಿಗೆ ತಿಳಿದಿರಲಿಲ್ಲ.

ಪ್ರಾಚೀನ ಭಾರತದ ಪೂರ್ಣವಾದ ಇತಿಹಾಸ ಇನ್ನೂ ಬರೆಯಲ್ಪಟ್ಟಿಲ್ಲ. ಆಧಾರಗಳಾದ ವಿಷಯಗಳು ಒಟ್ಟಾಗಿ ಸಿಕ್ಕಿಲ್ಲ. ಚೂರು ಚೂರಾಗಿ ದೊರೆತಿವೆ. ಇನ್ನೂ ಅನೇಕ ಸಂಗತಿಗಳನ್ನು ಕಂಡುಹಿಡಿದು ಅವನ್ನು ಸರಿಯಾದ ಆಕೃತಿಯಲ್ಲಿ ಪ್ರಕಟಿಸಬೇಕು ಪ್ರಾಚೀನ ಭಾರತದ ಸಿದ್ಧವಾದ ಇತಿಹಾಸ ಇನ್ನೂ ತಯಾರಾಗಿಲ್ಲದುದರಿಂದ ಪ್ರಾಚೀನ ಭಾರತದ ನಾಗರೀಕತೆಯಲ್ಲಿ ಯಾರು ಬೇಕಾದರೂ ಕುಂದಕ ಕಂಡು ಹಿಡಿಯುವುದು ಸುಲಭ. ಆದರೆ ಇಷ್ಟನ್ನು ಹೇಳಬಹುದು. ಏಸುವಿನ ಜನನಕ್ಕೆ ಅನೇಕ ಶತಮಾನಗಳು ಮುಂಚೆಯೇ ಭಾರತವು ಒಳ್ಳೆಯ ನಾಗರೀಕ ರಾಜ್ಯವಾಗಿದ್ದಿತು. ಇಲ್ಲಿ ಅದ್ಭುತವಾದ ಸಾಹಿತ್ಯ ಬೆಳೆದಿದ್ದಿತು. ಸಾಮಾಜಿಕ ಪದ್ಧತಿ ಪರಿಷ್ಕಾರವಾಗಿದ್ದಿತು. ನ್ಯಾಯಸಮ್ಮತವಾಗಿ ಪ್ರಜೆಗಳ ಪ್ರೀತಿಗೆ ಪಾತ್ರವಾದ ರಾಜ್ಯಭಾರ ಪದ್ಧತಿ ಬೆಳೆದಿದ್ದಿತು.

ಭಾರತದ ಮೇಲೆ ಮೊದಲು ಬಂದ ದಂಡಯಾತ್ರೆ ಕ್ರಿಸ್ತಪೂರ್ವ ೩೨೬ ರಲ್ಲಿ ಅಲೆಕ್ಸಾಂಡರ್ ದೊರೆಯದು. ಅಲೆಕ್ಸಾಂಡರನಿಗೆ ತಕ್ಕಮಟ್ಟಿಗೆ ಜಯವಾಯಿತು. ಆದರೆ ಆತ ಭಾರತವನ್ನು ಜಯಿಸಲಿಲ್ಲ. ಆಕ್ರಮಿಸಲೂ ಇಲ್ಲ. ಡಿಲ್ಲಿಯವರೆಗೆ ಸಹ ಅವನು ಬರಲಿಲ್ಲ. ಆತ ಹಿಂದೆ ಕೆಲವು ಅಧಿಕಾರಿಗಳನ್ನು ಬಿಟ್ಟು ಗ್ರೀಸಿಗೆ ಹೋಗಿಬಿಟ್ಟ. ಆತನ ಪ್ರತಿನಿಧಿ ಸೆಲ್ಯುಕಸ್‌ನಿಗೂ ಚಂದ್ರಗುಪ್ತನಿಗೂ ಉಂಟಾದ ಹೋರಾಟದಲ್ಲಿ ಸೆಲ್ಯು

ಕಸ್‌ನು ಭಾರತವನ್ನು ಬಿಟ್ಟು ಹೊರಟೇ ಹೋದನು. ಭಾರತ ಮತ್ತೆ ಸ್ವತಂತ್ರವೇ ಆಯಿತು. ಚಂದ್ರಗುಪ್ತನು ವಿಂಧ್ಯಪರ್ವತದ ಉತ್ತರ ಭಾಗದ ದೇಶಕ್ಕೆಲ್ಲಾ ರಾಜನಾಗಿದ್ದನು. ಪೂರ್ವದಲ್ಲಿ ಬಂಗಾಳಾ ಅಸ್ಸಾಂಗಳೂ ಪಶ್ಚಿಮದಲ್ಲಿ, ಪಂಜಾಬ್ ಅಫ್ಘಾನಿಸ್ಥಾನಗಳೂ ಅವನ ರಾಜ್ಯವಾಗಿದ್ದವು. ಆಗ ಭಾರತ ಹೇಗಿತೆಂಬುದು ಮೆಗಾಸ್ತನೀಸನ ಮತ್ತು ಇತರ ಪರದೇಶದ ಲೇಖಕರ ಬರವಣಿಗೆಗಳಿಂದ ಗೊತ್ತಾಗುತ್ತದೆ.

ಚಂದ್ರಗುಪ್ತನ ರಾಜ್ಯಭಾರ ಕ್ರಮವನ್ನು ಮೆಗಾಸ್ತನೀಸನು ವರ್ಣಿಸಿರುವದನ್ನು ನೋಡಿದರೆ ಯಾವ ಭಾರತೀಯನಿಗೂ ಹೆಮ್ಮೆಯುಂಟಾಗುತ್ತದೆ. ಚಂದ್ರಗುಪ್ತನ ಸರ್ಕಾರದಲ್ಲಿ ಈಗಿನ ಪಾಶ್ಚಾತ್ಯ ರಾಜ್ಯಗಳ ಆಡಳಿತ ಕ್ರಮಗಳೆಲ್ಲಾ ಅಡಕವಾಗಿದ್ದವು. ಚಂದ್ರಗುಪ್ತನ ಆಡಳಿತದಲ್ಲಿ ಕಾರ್ಮಿಕರಿಗಾಗಿಯೇ ಒಂದು ಇಲಾಖೆ ಇದ್ದಿತು. ಜನನ ಮರಣಗಳ ರಿಜಿಸ್ಟರ್ ಇದ್ದಿತು. ದಾನಧರ್ಮಗಳ ಮೇಲ್ವಿಚಾರಣೆಗೆ ಒಬ್ಬ ಮಂತ್ರಿ ಇದ್ದನು. ವಾಣಿಜ್ಯ ಕೈಗಾರಿಕೆಗಳಿಗೆ ಒಬ್ಬ ಮಂತ್ರಿ ಇದ್ದನು. ವ್ಯವಸಾಯಕ್ಕೆ ಒಬ್ಬ ಮಂತ್ರಿ ಇದ್ದನು. ದೊಡ್ಡ ಸೈನ್ಯ, ನಾಣ್ಯಭಾಷೆ, ಹಡಗುಪಡೆ, ಎಲ್ಲಾ ಇದ್ದವು. ಭಾರತೀಯರ ಸತ್ಯಪ್ರಮಾಣಿಕತೆಗಳು ಜಗತ್ ಪ್ರಸಿದ್ಧವಾಗಿದ್ದವು. ಅವರ ಮಾತು, ಪತ್ರಕ್ಕಿಂತ ಹೆಚ್ಚು ಬೆಲೆ ಚಂದ್ರಗುಪ್ತನ ಅನಂತರ ಅಶೋಕನು ಚಕ್ರವರ್ತಿಯಾದನು. ಭಾರತದಲ್ಲಿ ಮಾತ್ರವೇ ಅಲ್ಲ. ಪ್ರಪಂಚದಲ್ಲಿಯೇ ಈತ ದೊಡ್ಡ ದೊರೆಯೆಂದು ಹೇಳಬಹುದು. ಅವನು ಭಾರತದಲ್ಲಿ ಏಕಚ್ಛಕ್ರಾಧಿಪತಿಯಾದನು. ಆತನ ಆಳ್ವಿಕೆಯಲಿ ಶಕ್ತಿಪ್ರಯೋಗವಿರಲಿಲ್ಲ. ಅದು ಪ್ರೇಮದ ಆಳ್ವಿಕೆ. ಆತನ ಪ್ರೇಮಕ್ಕೆ ಪ್ರಾಣಿಗಳು ಸಹ ಪಾತ್ರವಾದವು. ಆತನ ಕಾಲದಲ್ಲಿ ಪಶುವೈದ್ಯಶಾಲೆಗಳು ಸ್ಥಾಪನೆಯಾದುವು. ಇದೆಲ್ಲಾ ನಡೆದುದು ಕ್ರಿಸ್ತ ಪೂರ್ವ ೩೦೪ ರಲ್ಲಿ, ಏಸುವಿನ ಜನನಕ್ಕೆ ಮುಂಚೆ. ಅನಂತರ ಕ್ರಿ ಶ. ೮ನೇ ಶತಮಾನದವರೆಗೆ ಅಂದರೆ ಸುಮಾರು ಸಾವಿರ ವರುಷ ಭಾರತ ಸ್ವತಂತ್ರವಾಗಿದ್ದಿತು. ಪರದೇಶದ ಪರಾವಲಂಬಿಗಳು ಇಲ್ಲಿ ಬರಲಿಲ್ಲ. ಬೇರೆ ಕಡೆ ಇದ್ದು

ಕೊಂಡು ಈ ದೇಶವನ್ನು ಆಳಲಿಲ್ಲ. ಮಧ್ಯ ಏಷಿಯಾದ ಕೆಲವು ಗುಂಪುಗಳು ಭಾರತದ ಮೇಲೆ ನುಗ್ಗಿದವು. ಆದರೆ ಆ ವೇಳೆಗೆ ಇಲ್ಲಿ ಆರ್ಯರು ಪ್ರಬಲರಾಗಿದ್ದುದರಿಂದ ಬಂದವರೂ ಇಲ್ಲಿಯ ಆರ್ಯರಲ್ಲಿಯೇ ಸೇರಿಹೋದರು.

ಭಾರತದ ಮೇಲೆ ಮುಂದಿನ ದಂಡಯಾತ್ರೆ ಕ್ರಿಸ್ತಶಕ ಎಂಟನೆ ಶತಮಾನದ ಮಧ್ಯಭಾಗದಲ್ಲಿ ಅಬ್ದುಲ್ ಖಾಸಿಂನಿಂದ ಆಯಿತು. ಈ ದಂಡಯಾತ್ರೆಯ ಪರಿಣಾಮ ಇಲ್ಲಿಯ ಇತಿಹಾಸದಲ್ಲಿ ಶಾಶ್ವತ ವಾಯಿತು. ಈ ದಂಡಯಾತ್ರೆಯಿಂದ ಭಾರತದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಯಿತು. ಭಾರತದಲ್ಲಿ ಮುಸಲ್ಮಾನರ ರಾಜ್ಯ ಸ್ಥಾಪನೆಯಾಗುವುದಕ್ಕಿಂತ ಮುಂಚೆ, ೪೦೦ ವರುಷಗಳ ಕಾಲ, ಮುಸಲ್ಮಾನರು ಭಾರತದ ಸುತ್ತ ಹೊಂಚುಹಾಕುತ್ತಿದ್ದರು. ಕುತುಬು ದ್ದೀನನು ೧೨೦೬ರಲ್ಲಿ ಡಿಲ್ಲಿಯಲ್ಲಿ ರಾಜ್ಯವನ್ನು ಸ್ಥಾಪಿಸಿದನು. ಅದಕ್ಕೆ ಮುಂಚೆ ಹನ್ನೆರಡನೆಯ ಶತಮಾನದವರೆಗೆ ಪಂಜಾಬಿನ ಮತ್ತು ಸಿಂಧು ದೇಶದ ಕೆಲವು ಭಾಗಗಳು ಮಾತ್ರ ಮುಸಲ್ಮಾನರ ವಶದಲ್ಲಿದ್ದವು. ೧೧೯೩ರಲ್ಲಿ ಪೃಥ್ವಿರಾಜನು ತನ್ನ ಬಂಧುವಿನ ಮೋಸಕ್ಕೆ ಒಳಗಾಗಿ ಸೋಲುವವರೆಗೆ ಹಿಂದುಗಳು ಅಸ್ವತಂತ್ರರಾಗಲಿಲ್ಲ. ಭಾರತವನ್ನು ಯಾರೂ ಜಯಿಸಿರಲಿಲ್ಲ.

ಹೀಗೆ ಹದಿಮೂರನೆಯ ಶತಮಾನದ ಆದಿಯವರೆಗೆ ಭಾರತ ಸ್ವತಂತ್ರವಾಗಿದ್ದಿತೆಂಬುದು ಗೊತ್ತಾಗುತ್ತದೆ. ಸ್ವತಂತ್ರ ಎಂದರೆ ಹೊರಗಿನ ರಾಜರು ಇದನ್ನು ತಮ್ಮ ಅಧೀನಲ್ಲಿಟ್ಟುಕೊಂಡಿರಲಿಲ್ಲ ಎಂಬ ಅರ್ಥದಲ್ಲಿ. ಮುಸಲ್ಮಾನರು ಕೆಲವು ಕಾಲ ಸಿಂಧು ಮತ್ತು ಪಂಜಾಬಿನ ಭಾಗಗಳಲ್ಲಿ ಅರಸರಾಗಿದ್ದುದು ನಿಜ. ಆದರೆ ಭಾರತದ ಬಹುಭಾಗ ದೇಶೀಯರಾಜರ ವಶದಲ್ಲಿ ಈ ಸರ್ಕಾರಗಳ ಆಡಳಿತದಲ್ಲಿ ಇದ್ದಿತು. ಇದರ ಹೊರತು ಆಕ್ರಮಣಕ್ಕಾಗಿ ಬಂದವರು ಇಲ್ಲಿಯೇ ಉಳಿದರು. ಹಾಗೆ ಬಂದವರು ಇಲ್ಲಿಯವರ ಆಚಾರ ಪದ್ಧತಿಗಳನ್ನು ಅನುಸರಿಸುತ್ತಾ ಇಲ್ಲಿಯವರೊಂದಿಗೆ ಒಂದಾದರು. ಅವರಿಗೂ ಭಾರತೀಯರಿಗೂ ಏನೂ ವ್ಯತ್ಯಾಸ ಉಳಿಯಲಿಲ್ಲ.

ಭಾರತದಲ್ಲಿ ಮುಸಲ್ಮಾನರು ಆರು ಶತಮಾನಗಳು ಆಳಿದರು. ಕೆಲವು ಕಾಲ ಪ್ರಬಲರಾಗಿದ್ದರು. ಮತ್ತೆ ಕೆಲವು ಕಾಲ ನಿರ್ಬಲರಾಗಿದ್ದರು. ಹದಿಮೂರನೇ ಶತಮಾನದಿಂದ ಹದಿನಾರನೆಯ ಶತಮಾನದ ವರೆಗೆ ಮುಸಲ್ಮಾನರು ಉತ್ತರ ಭಾರತದಲ್ಲಿ ಮಾತ್ರ ಪ್ರಬಲರಾಗಿದ್ದರು. ಅಕ್ಬರ್ ಚಕ್ರವರ್ತಿ ತನ್ನ ಪ್ರಾಬಲ್ಯವನ್ನು ಸ್ಥಾಪಿಸುವ ವರೆಗೆ ದಖನ್, ರಾಜಪುಟಾನ ಮತ್ತು ಮಧ್ಯಭಾರತದ ಪ್ರಾಂತಗಳು ಸ್ವತಂತ್ರವಾಗಿಯೇ ಉಳಿದಿದ್ದವು ಧೀರನಾದ ಪ್ರತಾಪನನ್ನು ಜಯಿಸಲು ಅಕ್ಬರ್ ಚಕ್ರವರ್ತಿಯಿಂದ ಸಹ ಸಾಧ್ಯವಾಗಲಿಲ್ಲ. ಪ್ರತಾಪನು ತನ್ನ ರಾಜ್ಯವನ್ನು ಬಿಟ್ಟು ಕಾಡಿಗೆ ಓಡಿದನು. ಆದರೆ ಮೊಗಲರಿಗೆ ಶರಣಾಗತನಾಗಲಿಲ್ಲ. ಉಳಿದ ರಾಜಪುತ್ರರೆಲ್ಲಾ ಒಂದೊಂದು ಆಸೆ ಭಯಗಳಿಗಾಗಿ ಅಕ್ಬರನ ಅಧೀನರಾದರು. ಆದರೆ ಪ್ರತಾಪನು ಬಗ್ಗಲಿಲ್ಲ. ಆತನ ಪ್ರಜೆಗಳು ಅವನನ್ನು ಪೂಜಿಸುತ್ತಿದ್ದರು. ಆಗಿನ ಹಿಂದುಗಳ ದೇಶಪ್ರೇಮ ಮತ್ತು ಸ್ವಾತಂತ್ರಭಕ್ತಿ ಅದ್ಭುತವಾಗಿದ್ದವು. ಪ್ರತಾಪನು ಶರಣಾಗತನಾದನೆಂದು ಒಂದು ದಿನ ದರ್ಬಾರಿನಲ್ಲಿ ಅಕ್ಬರನು ಹೇಳಿದರೂ ಯಾರೂ ನಂಬಲೇ ಇಲ್ಲ. ಆಗ ಅದೇ ದರ್ಬಾರಿನಲ್ಲಿದ್ದ ಪೃಥ್ವಿರಾಜನೆಂಬ ಕವಿ ಪ್ರತಾಪನಿಗೆ ಒಂದು ಕಾಗದ ಬರೆದನು. "ನೀನು ನೋತರೆ ಹಿಂದು ಬಾಸ್ಕರನು ಅಸ್ತಮಿಸಿದಂತೆ, ರಾಜ್ಯವನ್ನು ಕಳೆದುಕೊಂಡರೂ ಕಾಡಿನಲ್ಲಿ ಸ್ವತಂತ್ರವಾಗಿ ಅಲೆಯುತ್ತಿರುವ ಪ್ರತಾಪ, ಮೊಗಲರ ಅಧೀನವಾದ ರಾಣಾ ಪ್ರತಾಪನಿಗಿಂತ ಹಿಂದುಗಳಿಗೆ ಹೆಚ್ಚು ಪ್ರಿಯ. ಪ್ರತಾಪ ಶರಣಾಗತನಾದರೆ ಹಿಂದುಗಳು ಅಳುತ್ತಾರೆ." ಈ ಕಾಗದಕ್ಕೆ ಪ್ರತಾಪನು ತಾನು ಶರಣಾಗತನಾದನೆಂದು ಹೊರಟಿರುವ ಸುದ್ದಿ ಸುಳ್ಳೆಂದು ತಿಳಿಸಿದನು. ಪೃಥ್ವಿರಾಜ ಅಕ್ಬರನ ಸೇವೆಯಲ್ಲಿದ್ದರೂ ಮೊಗಲರ ಸೇವೆಯ ವಿಷಯದಲ್ಲಿ ಹಿಂದುಗಳ ಭಾವನೆ ಹೇಗಿದ್ದಿತೆಂಬುದು ಇದರಿಂದ ವ್ಯಕ್ತವಾಗುತ್ತದೆ. "ಪ್ರತಾಪನು ಜೀವಂತನಾಗಿರುವವರೆಗೆ ಹಿಂದುಗಳು ಸೋತಂತೆ ಅಲ್ಲ" ಎಂಬುದು ಹಿಂದುಗಳ ಭಾವನೆಯಾಗಿದ್ದಿತು. ತನ್ನ ಅಧೀನದಲ್ಲಿದ್ದ ಪೃಥ್ವಿರಾಜ ತನ್ನ ಮನಸ್ಸಿನಲ್ಲಿದ್ದ ಸ್ವಾತಂತ್ರ ಭಾವನೆಗಳನ್ನು ಹೀಗೆ ಧೈರ್ಯವಾಗಿ ವ್ಯಕ್ತಪಡಿಸಲು ಅವಕಾಶ ಕೊಟ್ಟುದು ಅಕ್ಬರನ

ಔದಾರ್ಯವನ್ನೂ ಘನತೆಯನ್ನೂ ತೋರಿಸುತ್ತದೆ. ಅಕ್ಬರನು ಎಲ್ಲ ರಾಜಪುತ್ರರೊಂದಿಗೂ ಸಂಬಂಧವನ್ನು ಬೆಳೆಸಿದ್ದನು. ರಾಷ್ಟ್ರೋರೆ ಕಚವಾಹ ಬಿಕನೀರ್ ರಾಜಪುತ್ರರೆಲ್ಲಾ ಆತನಿಗೆ ತಮ್ಮ ಹೆಣ್ಣು ಗಳನ್ನು ಕೊಟ್ಟಿದ್ದರು. ಈ ಕಾರಣದಿಂದ ಪ್ರತಾಪನು ಅಕ್ಬರನೊಂದಿಗೆ ಮಾತ್ರವಲ್ಲ, ತನ್ನ ಬಂಧುಮಿತ್ರರೊಡನೆಯೂ ಹೋರಾಡಬೇಕಾಗಿ ದ್ದಿತು. ಆದರೂ ಪ್ರತಾಪನು ಇಪ್ಪತ್ತೈದು ವರುಷಗಳ ಕಾಲ ಅಕ್ಬರನ ಅಸಂಖ್ಯಾತ ಸೈನ್ಯಗಳನ್ನು ಒಬ್ಬನೇ ಎದುರಿಸಿ ಹೋರಾಡಿದನು. ಗ್ರೀಕರ ಸ್ವಾತಂತ್ರ್ಯ ನಾಶಕ್ಕಾಗಿ ಪರ್ಶಿಯನ್‌ರು ಸೈನ್ಯದೊಂದಿಗೆ ಗ್ರೀಕರ ಮೇಲೆ ನುಗ್ಗಿದುದಕ್ಕಿಂತ ಅಕ್ಬರನು ಪ್ರತಾಪನ ಮೇಲೆ ನುಗ್ಗಿದುದು ಹೆಚ್ಚು ಬಲವತ್ತರವೂ ಭಯಂಕರವೂ ಆಗಿದುದೆಂದು ಕರ್ನಲ್ ಟಾಡ್ ಹೇಳಿದ್ದಾರೆ.

ಮರಣಶಯ್ಯೆಯಲ್ಲಿ ಕೂಡ ಪ್ರತಾಪನು, ಅಕ್ಬರನಿಗೆ ಶರಣಾಗತ ನಾಗುವುದಿಲ್ಲವೆಂದು ಮಗನಿಂದ ಪ್ರತಿಜ್ಞೆ ಮಾಡಿಸಿದನು. ಇದು ನಡೆ ದುದು ೧೬ ನೆಯ ಶತಮಾನದಲ್ಲಿ. ಅಂದರೆ ಮುಸಲ್ಮಾನರ ರಾಜ್ಯ ಭಾರತದಲ್ಲಿ ಸ್ಥಾಪನೆಯಾದ ೪ ಶತಮಾನಗಳ ಅನಂತರ. ಇನ್ನೊಂದು ನೂರು ವರುಷ ಕಳೆಯುವುದರೊಳಗಾಗಿ ಹಿಂದುಗಳು ಮತ್ತೆ ಮುಸಲ್ಮಾ ನರನ್ನು ಪ್ರತಿಭಟಿಸಿದರು. ೧೭೦೭ ರಲ್ಲಿ ಔರಂಗ್‌ಜೇಬನು ಸಾಯುವು ದಕ್ಕೆ ಮುಂಚೆಯೇ ಪಂಜಾಬಿನಲ್ಲಿ ಸಿಖ್ಖರೂ ಮಧ್ಯ ಇಂಡಿಯಾದಲ್ಲಿ ರಾಜಪುತ್ರರೂ ಡಖನ್‌ನಲ್ಲಿ ಮಹಾರಾಷ್ಟ್ರರೂ ಸ್ವತಂತ್ರರಾಗುವ ಸೂಚನೆ ತೋರಿಸಿದರು. ಮುಸಲ್ಮಾನರ ಆಧಿಪತ್ಯವನ್ನು ನಾಶಮಾಡಿದವರು ಹಿಂದುಗಳೇ ಹೊರತು ಬ್ರಿಟಿಷರಲ್ಲ.

೨

ಆದರೆ ಮುಸಲ್ಮಾನರ ಆಡಳಿತ ಪರದೇಶದವರ ಆಡಳಿತವಾಗಿರ ಲಿಲ್ಲ. ಮುಸಲ್ಮಾನ ಆಕ್ರಮಣಕಾರರೇನೋ ಪರದೇಶದಿಂದ ಬಂದ ವರೇ. ಆದರೆ ಅವರು ಭಾರತದಲ್ಲಿ ನೆಲಸಿದ ಕೂಡಲೆ ಇದನ್ನೇ ತಮ್ಮ ದೇಶವನ್ನಾಗಿ ಮಾಡಿಕೊಂಡರು. ಇಲ್ಲಿ ಮನೆಗಳನ್ನು ಕಟ್ಟಿಕೊಂಡರು.

ಇಲ್ಲಿಯೇ ಮದುವೆಯಾಗಿ ಸಂಸಾರಗಳನ್ನು ಹೂಡಿದರು. ಈ ದೇಶದ ಮಕ್ಕಳೇ ಆದರು. ಇಂದಿನ ಮುಸಲ್ಮಾನರು ಹೇಗೆ ಭಾರತೀಯರೋ, ಔರಂಗಜೇಬ್ ಅಕ್ಬರರೂ ಹಾಗೆಯೇ ಭಾರತೀಯರೆ. ಶೇರ್‌ಷಾ ಮತ್ತು ಇಬ್ರಾಹೀಂ ಲೋದಿಗಳು ಭಾರತದಲ್ಲಿ ಪರದೇಶಿಯರಾಗಿರಲಿಲ್ಲ ತೈಮೂರು ನಾದಿರ್ ಷಾ ಅಹಮದ್ ಷಾ ಇವರು ಮುಸಲ್ಮಾನರು ಆಳುತ್ತಿದ್ದ ಭಾರತದ ಮೇಲೆಯೇ ಧಾಳಿಯಿಟ್ಟರು. ಧಾಳಿಗಾರರು ಭಾರತದ ಹಿಂದುಗಳಿಗೆ ಹೇಗೆ ಶತ್ರುಗಳಾಗಿದ್ದರೋ ಹಾಗೆಯೇ ಭಾರತದ ಮುಸಲ್ಮಾನರಿಗೂ ಶತ್ರುಗಳಾಗಿದ್ದರು.

೧೩ನೇ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೆ ಭಾರತವನ್ನು ಆಳಿದ ಮುಸಲ್ಮಾನರು ಹುಟ್ಟಿದುದು ಭಾರತದಲ್ಲಿ. ಮದುವೆಮಾಡಿಕೊಂಡುದು ಭಾರತದಲ್ಲಿ, ಸತ್ತುದು ಭಾರತದಲ್ಲಿ. ಅವರನ್ನು ಹೂಳಿದುದು ಭಾರತದ ಮಣ್ಣಿನಲ್ಲಿ. ಅವರು ಪ್ರಜೆಗಳಿಂದ ವಸೂಲ್ಮಾಡಿದ ಕಂದಾಯದ ಪ್ರತಿ ಕಾಸೂ ಇಲ್ಲಿಯೇ ವೆಚ್ಚವಾಯಿತು. ಅವರ ಸೈನ್ಯ ಭಾರತೀಯರ ಸೈನ್ಯವೇ. ಹೊರದೇಶಗಳಿಂದ ಬಂದು ಇಲ್ಲಿ ನೆಲಸಲು ಮುಸಲ್ಮಾನ ರಾಜರು ಜನರಿಗೆ ಅವಕಾಶ ಕೊಟ್ಟರು. ಆದರೆ ಭಾರತದಲ್ಲಿ ನಿಂತು ಈ ದೇಶವನ್ನು ತಾಯ್ನಾಡಾಗಿ ಮಾಡಿಕೊಳ್ಳದವರಿಗೆ ಅವರು ಸರ್ಕಾರದಲ್ಲಿ ಉದ್ಯೋಗ ಕೊಡಲಿಲ್ಲ. ಹಿಂದೂಗಳ ಮೇಲೆ ಮುಸಲ್ಮಾನರ ವಿರೋಧ ಮತೀಯವಾಗಿದ್ದಿತೇ ಹೊರತು ರಾಜಕೀಯವಾಗಿರಲಿಲ್ಲ. ಮುಸಲ್ಮಾನರಾಗಿ ಮತಾಂತರ ಹೊಂದಿದವರಿಗೆ ಸರ್ಕಾರದಲ್ಲಿ ಹೆಚ್ಚು ರಿಯಾಯ್ತಿ ದೊರೆಯುತ್ತಿದ್ದಿತು. ಆದರೆ ಯಾವ ಮುಸಲ್ಮಾನ ಆಡಳಿತಗಾರನಿಗೂ, ಇಂದಿನ ಬ್ರಿಟಿಷ್ ಇಂಡಿಯದ ಇಂಗ್ಲಿಷ್ ಆಡಳಿತಗಾರನಿಗಿರುವ ತಾನೇ ದೇವತೆಯೆಂಬ ತಲೆಹರಟೆ ಇರಲಿಲ್ಲ. ಹಿಂದುಗಳಿಗೂ ಮುಸಲ್ಮಾನರಿಗೂ ತಾವು ಹೆಚ್ಚು ತಾವು ಹೆಚ್ಚು ಎಂಬ ಭಾವ ಇರಲೇ ಇಲ್ಲ. ಮುಸಲ್ಮಾನರಲ್ಲಿಯೇ ತೊಗಲಕರು ಪಠಾಣರು ಮೊಗಲರು ಲೋದಿಗಳು ಇವರಲ್ಲಿ ಯಾರು ಹೆಚ್ಚೆಂಬ ಚರ್ಚೆ ಆಗಾಗ ಉಂಟಾಗುತ್ತಿದ್ದಿತು. [ಯೂರೋಪಿನ ಇತಿಹಾಸದಲ್ಲಿ ಹದಿನೆಂಟನೆಯ ಶತಮಾನದವರೆಗೆ ಈ ಬಗೆಯ ಹೋರಾಟವೇ ತುಂಬಿದೆ].

ಶೇರ್‌ಷಾ, ಅಕ್ಬರ್, ಷಾಜಹಾನ್ ಇವರ ಆಳ್ವಿಕೆಯಲ್ಲಿ ರಾಜ್ಯದಲ್ಲಿ ಹಿಂದುಗಳಿಗೆ ದೊರೆಯದಿದ್ದ ಅಧಿಕಾರ ಯಾವುದೂ ಇರಲಿಲ್ಲ. ಪ್ರಾಂತ್ಯಗಳ ಅಧಿಪತಿಗಳು, ಸೈನ್ಯಾಧಿಪತಿಗಳು, ಜಿಲ್ಲಾಧಿಪತಿಗಳು, ಎಲ್ಲಾ ಹಿಂದುಗಳೇ ಆಗಿದ್ದರು. ಹಿಂದೂ ಮುಸಲ್ಮಾನರ ವ್ಯತ್ಯಾಸ ರಾಜಕೀಯ ಮತ್ತು ಸಾಮಾಜಿಕವಾಗಿರಲಿಲ್ಲ. ರಾಜಕೀಯ ಮತ್ತು ಆರ್ಥಿಕದೃಷ್ಟಿಯಿಂದ ನೋಡುವುದಾದರೆ ಮುಸಲ್ಮಾನರ ಆಳ್ವಿಕೆ ಭಾರತೀಯರ ಆಳ್ವಿಕೆಯೇ ಆಗಿದ್ದಿತು. ಮುಸಲ್ಮಾನ ರಾಜರು ಪ್ರಜೆಗಳನ್ನು ನಿರಾಯುಧರನ್ನಾಗಿ ಮಾಡಲಿಲ್ಲ. ಆಯುಧಗಳನ್ನು ಮಾಡುವುದನ್ನೂ ಹೊರಗಿನಿಂದ ತರಿಸುವುದನ್ನೂ ಪ್ರತಿಬಂಧಿಸಲಿಲ್ಲ. ಅವರು ಸಿಪಾಯಿಗಳನ್ನು ಅರೇಬಿಯ ಪರ್ಶಿಯ ಅಫಘಾನಿಸ್ಥಾನಗಳಿಂದ ಆಮದುಮಾಡಲಿಲ್ಲ. ತಾವು ಸಂರಕ್ಷಿಸಬೇಕಾದ ಲಾಂಕಷೈರ್‌ನ ಕೈಗಾರಿಕೆ ಯಾವುದೂ ಅವರಿಗೆ ಇರಲಿಲ್ಲ ಭಾರತದಲ್ಲಿ ತಯಾರಾದ ವಸ್ತುಗಳ ಮೇಲೆ ಹೆಚ್ಚಿಗೆ ತೆರಿಗೆ ಹೇರಿ ತಮ್ಮ ಕೈಗಾರಿಕೆಗಳನ್ನು ಬೆಳಸಿಕೊಳ್ಳುವುದು ಅವರಿಗೆ ಇರಲಿಲ್ಲ. ಮುಸಲ್ಮಾನರು ಭಾರತಕ್ಕೆ ತಮ್ಮ ಭಾಷೆಯನ್ನೂ ಸಾಹಿತ್ಯವನ್ನೂ ತಂದರು. ಪ್ರಾರಂಭದಲ್ಲಿ ಪ್ರಾಯಶಃ ಆ ಭಾಷೆಯಲ್ಲಿಯೇ ಅವರು ಆಡಳಿತವನ್ನು ನಡೆಸಿರಬಹುದು. ಆದರೆ ಸ್ವಲ್ಪ ಕಾಲದಲ್ಲಿಯೇ ಅದರ ಸ್ಥಳದಲ್ಲಿ ಇಂದಿನ ಹಿಂದುಸ್ಥಾನಿ, ಉರ್ದು ಎಂಬ ಭಾಷೆ ಬಂದಿತು. ಈ ಉರ್ದು ಭಾರತದ ಇತರ ದೇಶಭಾಷೆಗಳಂತೆ ಭಾರತದಲ್ಲಿಯೇ ಬೆಳೆದುದು. ಮುಸಲ್ಮಾನ ಆಡಳಿತಗಾರರಿಗೆ ಅಫಘಾನಿಸ್ಥಾನ ಅಥವ ಪರ್ಶಿಯದ ಕೂಲಿಗಾರರ ಹಿತರಕ್ಷಣೆಯ ಜವಾಬ್ದಾರಿ ಇರಲಿಲ್ಲ. ರಾಜಾಶ್ರಯ ಬೇಕಾದವನು ಬಂದು ಭಾರತದಲ್ಲಿ ನೆಲಸಬೇಕಾಗುತ್ತಿದ್ದಿತು. ಹೀಗೆ ಮುಸಲ್ಮಾನರ ಸರ್ಕಾರ ಭಾರತದ ಸರ್ಕಾರವಾಗಿದ್ದಿತೇ ಹೊರತು ಪರದೇಶೀ ಸರ್ಕಾರವಾಗಿರಲಿಲ್ಲ.

ಬ್ರಿಟಿಷರು ಬರುವುದಕ್ಕೆ ಮುಂಚೆ ಭಾರತವನ್ನು ಪರದೇಶದವರಾರೂ, ಪರದೇಶದಲ್ಲಿ ಕುಳಿತು ಆಳಲಿಲ್ಲ. ಭಾರತ ತಾನು ಚಕ್ರಾಧಿಪತ್ಯವಾಗಿದ್ದಿತು. ಬ್ರಿಟಿಷರು ಬರುವುದಕ್ಕೆ ಮುಂಚೆ ಭಾರತ ಯಾವಾಗಲೂ ಮತ್ತೊಂದು ಚಕ್ರಾಧಿಪತ್ಯದ ಭಾಗವಾಗಿರಲಿಲ್ಲ; ಮತ್ತೊಂದು

ಚಕ್ರಾಧಿಪತ್ಯದ ಅಧೀನದಲ್ಲಿರಲಿಲ್ಲ. ಭಾರತ ಸರ್ಕಾರಕ್ಕೆ ತನ್ನ ಸ್ವಂತ ಸೈನ್ಯ ಹಡಗುಪಡೆ ಧ್ವಜ ಇದ್ದವು. ಭಾರತದಲ್ಲಿ ವಸೂಲಾದ ತೆರಿಗೆ ಭಾರತದ ಹಿತಕ್ಕೇ ವೆಚ್ಚವಾಗುತ್ತಿದ್ದಿತು. ಭಾರತದಲ್ಲಿ ಕೈಗಾರಿಕೆಗಳು ಬೆಳೆದಿದ್ದವು. ಇಲ್ಲಿ ತಯಾರಾದ ವಸ್ತುಗಳು ಇಲ್ಲಿಯವರಿಗಾಗಿ ಉಪಯೋಗವಾಗುತ್ತಿದ್ದವು. ಭಾರತಕ್ಕೆ ಹೊರಗಿನ ವ್ಯಾಪಾರಿಗಳ ಆವಶ್ಯಕತೆ ಇರಲಿಲ್ಲ. ಹೊರಗಿನಿಂದ ಬಂದು ವ್ಯಾಪಾರ ಮಾಡಬೇಕಾದವರು ಸರ್ಕಾರದ ರಿಯಾಯ್ತಿಯನ್ನೂ ಅನುಮತಿಯನ್ನೂ ಪಡೆಯಬೇಕಾಗಿದ್ದಿತು. ಈಸ್ಟ್ ಇಂಡಿಯ ಕಂಪನಿಯವರು ಮಾಡಿದುದೂ ಹಾಗೆಯೇ. ಭಾರತೀಯರ ಅದೃಷ್ಟವನ್ನು ನಿರ್ಣಯಿಸುವ ಇಂಡಿಯ ಆಫೀಸು ಪರ್ಶಿಯಾದಲ್ಲಿಯಾಗಲಿ ಕಾಬೂಲಿನಲ್ಲಿಯಾಗಲಿ ಇರಲಿಲ್ಲ.

ಆದರೆ ಬ್ರಿಟಿಷರ ಆಳ್ವಿಕೆಯಲ್ಲಿ ಭಾರತದ ಸ್ಥಿತಿ ಇದಕ್ಕೆ ತೀರ ವಿರೋಧವಾಗಿದೆ.[1] ಇದೇ ಮೊದಲನೆಯಸಲವಾಗಿ ಭಾರತ ಮತ್ತೊಂದು ಚಕ್ರಾಧಿಪತ್ಯದ ಭಾಗವಾಗಿದೆ. ಇತಿಹಾಸದಲ್ಲಿ ಇದೇ ಮೊದಲನೆಯ ಸಲವಾಗಿ ಭಾರತ ಮತ್ತೊಂದು ರಾಷ್ಟ್ರದ ಅಧೀನವಾಗಿದೆ. ಇದೇ ಮೊದಲನೆಯಸಲವಾಗಿ ಭಾರತವನ್ನು ಪರದೇಶದಲ್ಲಿ ಕುಳಿತ ಸರ್ಕಾರ ಆಳುತ್ತಿದೆ. ಭಾರತಕ್ಕೆ ಬ್ರಿಟಿಷರ ಸಂಪರ್ಕವಾದುದು ದುರ್ದಿನ. ಯಾಕೆಂದರೆ ಇಲ್ಲಿಯವರೆಗೆ ಭಾರತವನ್ನು ಯಾವ ಪರದೇಶಿಯರೂ ಆಳಲಿಲ್ಲ. ಭಾರತದ ರಾಜ ಭಾರತದಿಂದ ಹೊರಗೆ ಇರುವುದೂ, ಐದು ವರುಷಗಳಿಗೊಂದು ಸಲ ಇಲ್ಲಿಗೆ ಪರದೇಶದಿಂದ ವೈಸರಾಯ್ ಬಂದು ಆಡಳಿತ ನಡೆಸುವುದೂ ಇಂಗ್ಲಿಷರ ಆಳ್ವಿಕೆಯಿಂದಲೇ ಪ್ರಾರಂಭವಾಯಿತು. ರಾಜ್ಯದ ದೊಡ್ಡ ಅಧಿಕಾರ ಸೈನ್ಯದ ಆಡಳಿತ ತೆರಿಗೆಯ ವಿಲೇವಾರಿ, ರಾಜ್ಯಾದಾಯ, ನ್ಯಾಯತೀರ್ಮಾನ ಎಲ್ಲಾ ಪರದೇಶದವರ ಕೈಯ್ಯಲ್ಲಿದೆ. ಅವರಿಗೆ ಅಧಿಕಾರದಿಂದ ಪ್ರಾಪ್ತವಾಗುವ ಶ್ರದ್ಧೆ ಎಷ್ಟೋ ಅಷ್ಟೆ. ಅವರ ಅಧಿಕಾರದ ಅವಧಿ ಮುಗಿದಕೂಡಲೇ ಅವರು ಭಾರತವನ್ನು ಮರೆಯುತ್ತಾರೆ. ಈ ಅಧಿಕಾರಿಗಳು ಭಾರತೀಯರಲ್ಲದವರು.

1. ಇದನ್ನು ಬರೆದಾಗ "ಕ್ವಿಟ್ ಇಂಡಿಯಾ" ಆಗಿರಲಿಲ್ಲ.

ಈ ಅನೇಕ ಅಧಿಕಾರಗಳಲ್ಲಿ ಭಾರತೀಯರಿಗೆ ಸ್ಥಾನವೇ ಇಲ್ಲ. ಭಾರತವನ್ನು ಇಂಗ್ಲೆಂಡು ೧೫೦ ವರುಷ ಆಳಿದರೂ ಭಾರತೀಯರನ್ನು ಗವರ್ನರಗಿ ನೇಮಿಸುವುದು ಇನ್ನೂ ಚರ್ಚೆಯ ಮಟ್ಟವನ್ನು ಮೀರಲಿಲ್ಲ.

ಬ್ರಿಟಿಷರು ಭಾರತದಲ್ಲಿ ಕಾಲಿಟ್ಟ ಮೇಲೆ ಭಾರತೀಯನೆನ್ನಿಸಿಕೊಳ್ಳುವುದೇ ಅವಮಾನದ ಗುರುತಾಯಿತು. ಭಾರತದಲ್ಲಿ ನೆಲೆಸಿದ ಇಂಗ್ಲಿಷಿನವನ ಮಗ ಭಾರತ ಸ್ತ್ರೀಯನ್ನು ವಿವಾಹವಾದರೆ ಅದರಿಂದ ಅವನ ಜಾತಿ ಕೆಡುತ್ತದೆ. ಇಂಗ್ಲಿಷ್ ಮಹಿಳೆಯಲ್ಲಿ ಭಾರತೀಯನಿಗೆ ಜನಿಸಿದ ಪುತ್ರನಿಗೂ ಜಾತಿ ಇಲ್ಲ. ಭಾರತೀಯರ ರಕ್ತವೇ ನೀಚ, ಮುಸಲ್ಮಾನರ ಆಡಳಿತದಲ್ಲಿ ಹೀಗಿರಲಿಲ್ಲ. ಭಾರತೀಯರೊಂದಿಗೆ ಮಾಡಿಕೊಂಡ ವಿವಾಹದಿಂದ ಅವರ ರಾಜಕೀಯ ಯೋಗ್ಯತೆಗೆ ಕುಂದಕ ಬರಲಿಲ್ಲ. ಆದುದರಿಂದ ಭಾರತೀಯರಿಗೆ ರಾಜಕೀಯದಲ್ಲಿ ಅವನತಿಯುಂಟಾದುದು ಅವರ ಮತದ ಕಾರಣದಿಂದಲ್ಲ. ಭಾರತೀಯನಾಗಿರುವುದೇ ಒಂದು ಕುಂದು ಎಂದು. ಹೀಗೆ ಭಾರತವನ್ನು ನಾಲ್ಕಾರು ಅಧಿಕಾರಿಗಳು ಹೊರಗಿನಿಂದ ಬಂದು ಆಳ್ವಿಕೆ ಮಾಡುತ್ತಿರುವುದು ಹಿಂದೆಂದೂ ನಡೆದಿರಲಿಲ್ಲ. ಭಾರತ ಆ ಅಧಿಕಾರಿಗಳಿಗೆ ಕೊಡುವ ಸಂಬಳವೆಲ್ಲಾ ಭಾರತದಿಂದ ಹೊರಕ್ಕೆ ಹೋಗುತ್ತದೆ. ನಿವೃತ್ತರಾದ ಕೂಡಲೇ ಈ ಅಧಿಕಾರಿಗಳು ತಮ್ಮ ದೇಶಕ್ಕೆ ಓಡಿಬಿಡುವುದರಿಂದ ನಮ್ಮವರಿಗೆ ಅವರ ಅನುಭವದ ಲಾಭ ದೊರೆಯುವುದಿಲ್ಲ. "ಇವರು ನಮ್ಮ ದೇಶದ ಮಕ್ಕಳು. ಮಕ್ಕಳು ತಾಯಿಯನ್ನು ಸೇವಿಸುವಂತೆ ಇವರು ಭಾರತವನ್ನು ಸೇವಿಸುತ್ತಾರೆ" ಎಂದು ಹೆಮ್ಮೆ ಕೂಡ ಭಾರತಕ್ಕೆ ಇಲ್ಲವಾಗುತ್ತದೆ. ಈ ಪರದೇಶೀಯರು ಬರುವುದು ಅಧಿಕಾರಿಗಳಾಗಿ, ಇಲ್ಲಿ ಅವರು ಕೊನೆಯವರೆಗೆ ಅಧಿಕಾರಿಗಳಾಗಿಯೇ ಉಳಿಯುತ್ತಾರೆ. ಅವರ ಮಕ್ಕಳು ಮೊಮ್ಮಕ್ಕಳೂ ಬರಬಹುದು. ಆದರೆ ಅವರೂ ಬರುವುದು ಭಾರತದ ಅರಸರಾಗಿಯೇ ಹೊರತು ಭಾರತದ ಪುತ್ರರಾಗಿ ಅಲ್ಲ. ಅಧಿಕಾರಿಗಳಾಗುವ ಭಾರತದ ಮಕ್ಕಳು ಬ್ರಿಟಿಷರ ಸೇವಕರೇ ಹೊರತು ಬೇರೇನೂ ಅಲ್ಲ. ಬ್ರಿಟಿಷ್ ಯಜಮಾನರ ಕೂಲಿ ಮಾಡುವುದೇ ಅವರ ಸ್ಥಾನ.

ಭಾರತದಲ್ಲಿ ಭಾರತೀಯರ ಬಳಿ ಆಯುಧಗಳು ಇರಕೂಡದು. ಅದಕ್ಕೆ ಅವರಿಗೆ ಅಧಿಕಾರವಿಲ್ಲ. ಬ್ರಿಟಿಷರು ಅಪ್ಪಣೆ ಕೊಟ್ಟವರು ಮಾತ್ರ ಆಯುಧಗಳನ್ನು ಇಟ್ಟುಕೊಳ್ಳಬಹುದು. ಈ ಅಪ್ಪಣೆಯನ್ನು ಬ್ರಿಟಿಷರು ಅಪರೂಪವಾಗಿ ಕೊಡುತ್ತಾರೆ. ಪ್ರಜೆಗಳ ಹಕ್ಕು ಎಂದು ಕೊಡುವುದೇ ಇಲ್ಲ. ಭಾರತದ ಪುತ್ರರು ಎಷ್ಟೇ ದೊಡ್ಡವರಾಗಿರಲಿ ಆಯುಧಗಳ ಕಾನೂನು ಅವರಿಗೂ ಅನ್ವಯಿಸಿಯೇ ಅನ್ವಯಿಸುತ್ತದೆ. ಆಯುಧಗಳನ್ನು ಇಟ್ಟುಕೊಳ್ಳಬೇಕಾದರೆ ಅವರೂ ಬ್ರಿಟಿಷರ ದಯವನ್ನು ಸಂಪಾದಿಸಲೇಬೇಕು. ಹೊರಗಿನ ಪ್ರಪಂಚದಲ್ಲಿ ಭಾರತೀಯನೆಂಬುದು ಗುಲಾಮಗಿರಿಯ ಗುರುತು. ಬ್ರಿಟಿಷರ ವಸಾಹತುಗಳಲ್ಲಿ ಸಹ ಭಾರತೀಯರಿಗೆ ಸ್ಥಳವಿಲ್ಲ ಭಾರತೀಯ ಪ್ರಪಂಚದಲ್ಲೆಲ್ಲಾ ಹೊಲೆಯನೇ. ತನ್ನ ದೇಶದಲ್ಲಿರುವ ಸ್ಥಿತಿಯ ದೃಷ್ಟಿಯಿಂದ ಅವನಿಗೆ ಇದೇನೂ ಆಶ್ಚರ್ಯವಲ್ಲ. ಭಾರತೀಯರು ಪ್ರಪಂಚ ಸಂಚಾರ ಹೊರಟರೆ ಬ್ರಿಟಿಷರಿಗೆ ಸಹಿಸುವುದಿಲ್ಲ. ಬೇಕಾದರೆ ಬ್ರಿಟಿಷ್ ವಸಾಹತುಗಳಲ್ಲಿ ಕೂಲಿಗಳಾಗಿ ಹೋಗಬಹು. ಬೇಕಾದರೆ ಪ್ರವಾಸಕ್ಕಾಗಿ ಇಂಗ್ಲೆಂಡಿಗೆ ಹೋಗಿ ಬರಬಹುದು. ಆದರೆ ಭಾರತೀಯರು ಇಂಗ್ಲೆಂಡಿನಲ್ಲಿ ನೆಲಸುವುದು ಬ್ರಿಟಿಷ್ ಸರ್ಕಾರಕ್ಕೆ ಬೇಕಿಲ್ಲ. ಭಾರತೀಯರು ಅಮೇರಿಕಕ್ಕೆ ಹೋಗಿ ನೆಲಸುವುದನ್ನು ಇಂಗ್ಲೆಂಡು ಖಂಡಿತ ಒಪ್ಪುವುದಿಲ್ಲ. ಇದರ ಕಾರಣಗಳು ದೂರವಾಗಿಲ್ಲ. ಹೊರ ದೇಶಗಳಲ್ಲಿ ಸಂಚಾರ ಮಾಡಿದಾಗ ಭಾರತೀಯರಿಗೆ ಬ್ರಿಟಿಷ್ ಆಡಳಿತ ಓಬೀರಾಯನ ಕಾಲದ ಆಡಳಿತವೆಂದು ಚೆನ್ನಾಗಿ ಮುಂದಟ್ಟಾಗುತ್ತದೆ. ಸ್ವತಂತ್ರವಾದ ಹೊರ ದೇಶಗಳ ವಾತಾವರಣದಲ್ಲಿ ಸ್ವಾತಂತ್ರ ಮನೋಭಾವನೆ ಬೆಳೆಯಬಹುದು. ಅಂತೂ ಇದರಿಂದ ಭಾರತದಲ್ಲಿ ಬ್ರಿಟಿಷ್ ಪ್ರಾಬಲ್ಯಕ್ಕೆ ಸ್ವಲ್ಪ ಅಡ್ಡಿ. ಭಾರತೀಯರ ಮಂಕು ಹರಿದು ಬ್ರಿಟಿಷರ ನಿಜವಾದ ಯೋಗ್ಯತೆ ಅವರಿಗೆ ಗೊತ್ತಾಗಿಬಿಡುವುದು. ಪರದೇಶ ಸಂಚಾರಮಾಡಿ ಬಂದ ಭಾರತೀಯ ಅಸಂತುಷ್ಟನಾಗುತ್ತಾನೆ. ಆ ಪ್ರಯಣದಲ್ಲಿ ಭಾರತೀಯರಿಗೆ ಬಗೆ ಬಗೆಯ ಜನರ ಸಂಪರ್ಕವಾಗುತ್ತದೆ. ಕ್ರಾಂತಿಕಾರರ ಸಂಪರ್ಕವಾಗುತ್ತದೆ. ಇದನ್ನೆಲ್ಲಾ ಕಂಡರೆ ಬ್ರಿಟಿಷರಿಗೆ ಸ್ವಾಭಾವಿಕವಾಗಿ ಅತೃಪ್ತಿ.

ಆದುದರಿಂದ ಭಾರತೀಯರು ಹೊರದೇಶ ಸಂಚಾರ ಹೊರಡುವುದನ್ನು ಬ್ರಿಟಿಷರು ಪ್ರೋತ್ಸಾಹಿಸುವುದಿಲ್ಲ. ಇಂಗ್ಲೆಂಡಿನ ವಿದ್ಯಾಸಂಸ್ಥೆಗಳಲ್ಲಿಯೂ ಭಾರತೀಯರಿಗೆ ಸಮಾನತೆ ಇಲ್ಲ. ಭಾರತದ ವಿದ್ಯಾರ್ಥಿಗಳ ಚಲನವಲನಗಳನ್ನು ಕಾಯಲು ಸರ್ಕಾರ ಒಂದು ಗುಪ್ತಗುಂಪನ್ನೇ ಏರ್ಪಡಿಸಿದೆ. ವಿದ್ಯಾರ್ಥಿಗಳೆಲ್ಲ ಆ ಸಂಸ್ಥೆಯ ಕಿರುಕುಳಕ್ಕೆ ಒಳಗಾಗುತ್ತಾರೆ. ಎಲ್ಲಾ ದೇಶಗಳಲ್ಲಿಯೂ ಭಾರತೀಯರು ಖೈದಿಗಳಂತೆ ತಮ್ಮ ಪೂರ್ವಾಪರಗಳನ್ನೆಲ್ಲಾ ಹೇಳಬೇಕು. ಅಲ್ಲಿಂದ ಮುಂದೆ ಭಾರತೀಯರು ಎಲ್ಲಿ ಹೋದರೂ ಗುಪ್ತ ಪೋಲೀಸರು ಅವರ ಬೆನ್ನು ಹತ್ತುತ್ತಾರೆ. ಜಗತ್ತಿನ ನಾನಾ ಭಾಗಗಳಲ್ಲಿರುವ ಬ್ರಿಟಿಷ್ ರಾಯಭಾರಿಗಳಿಂದ ನಮ್ಮವರಿಗೆ ಏನೂ ಸಹಾಯವಾಗುವುದಿಲ್ಲ. ಕಷ್ಟಕಾಲದಲ್ಲಿ ಆ ರಾಯಭಾರಿಗಳ ಬಳಿ ಹೋಗಲು ಅವರು ಹೆದರುತ್ತಾರೆ. ಆ ರಾಯಭಾರಿಗಳು ಇವರನ್ನು ಅವಮಾನಪಡಿಸಬಹುದು, ಅಥವ ದೇಶದಿಂದ ಹೊರಕ್ಕೆ ಹೊರಡುವಂತೆ ಮಾಡಬಹುದು. ಭಾರತೀಯನಿಗೆ ಮಾಡಿದ ಅನ್ಯಾಯಗಳಿಗೆ ಯಾರೂ ಜವಾಬ್ದಾರರಲ್ಲ. ಅವನಿಗೆ ಅವಮಾನವಾಗಬಹುದು, ಘಾಯವಾಗಬಹುದು, ಆತನ ಕೊಲೆಯೇ ಆಗಬಹುದು, ಇವನನ್ನು ಸಂರಕ್ಷಿಸುವ ಸರ್ಕಾರ ಇಲ್ಲ. ಇತರ ದೇಶಗಳು ಈತನನ್ನು ಬಹಿಷ್ಕರಿಸಿದ್ದರೂ ಬ್ರಿಟಿಷ್ ಸರ್ಕಾರಕ್ಕೆ ಶೋಕವಿಲ್ಲ. ಅವರಿಗೆ ಸಂತೋಷವೇ. ಕೆಲವು ವೇಳೆ ಭಾರತೀಯರಿಗೆ ಪರದೇಶಗಳಲ್ಲಿ ಪ್ರವೇಶ ದೊರೆಯದಂತೆ ಬ್ರಿಟಿಷರೇ ಮಾಡಿದ್ದಾರೆ. ಬ್ರಿಟಿಷ್ ವಸಾಹತುಗಳು ಅಮಾನುಷವಾದ ಕಾಯಿದೆಗಳನ್ನು ಮಾಡಿ ಭಾರತೀಯರು ಅಲ್ಲಿಗೆ ಕಾಲಿಡದಂತೆ ಮಾಡಿವೆ. ಅಮೆರಿಕದಲ್ಲಿ ಭಾರತದ ವಿದ್ಯಾರ್ಥಿಗಳಿಗೆ ಎಲ್ಲ ವಿಶ್ವವಿದ್ಯಾಲಯಗಳಲ್ಲಿಯೂ ಪ್ರವೇಶವುಂಟು. ಆದರೆ ಇಂಗ್ಲೆಂಡಿನಲ್ಲಿ ಹೀಗೆ ಇಲ್ಲ. ಇಂಗ್ಲಿಷ್ ವಿಶ್ವವಿದ್ಯಾಲಯಗಳಲ್ಲಿ ಭಾರತೀಯರನ್ನು ಮಿಲಿಟರಿ ಡ್ರಿಲ್‌ಗೆ ಸೇರಿಸುವುದಿಲ್ಲ. ಬ್ರಿಟಿಷ್ ಕ್ಲಬ್‌ಗಳಲ್ಲಿ ಇವರನ್ನು ಸೇರಿಸುವುದಿಲ್ಲ.

ಈ ಎಲ್ಲಾ ಅವಮಾನಗಳಿಂದಲೂ ಭಾರತೀಯರ ರಕ್ತ ಕುದಿಯುವುದಿಲ್ಲವೆಂದು ಬ್ರಿಟಿಷರು ತಿಳಿದಿರುವುದಾದರೆ ಅವರಷ್ಟು ಊಹನಾರಹಿತರಾದ ಜನ ಜಗತ್ತಿನಲ್ಲಿ ಯಾರೂ ಇಲ್ಲ. ನಮ್ಮ ಸ್ವಂತ ಸರ್ಕಾರ

ಇಲ್ಲದುದರಿಂದಲೇ ನಮಗೆ ಈ ಬಗೆಯ ಅವಮಾನವೆಂದು ಭಾರತೀಯರು ಚೆನ್ನಾಗಿ ತಿಳಿದಿದ್ದಾರೆ. ಭಾರತ ಅಸ್ವತಂತ್ರ. ಜಗತ್ತಿನ ರಾಷ್ಟ್ರಗಳ ಪಂಗ್ತಿಯಲ್ಲಿ ಇದಕ್ಕೆ ಸ್ಥಾನವಿಲ್ಲ. ನಮ್ಮ ಹಿತವನ್ನು ರಕ್ಷಿಸುವ ಸರ್ಕಾರ ಇಲ್ಲ. ನಮ್ಮ ರಾಯಭಾರಿಗಳಿಲ್ಲ. ಆದುದರಿಂದಲೇ ಜಗತ್ತಿನಲ್ಲಿ ನಾವು ಸೊನ್ನೆ ಎಂಬುದು ಭಾರತೀಯರಿಗೆ ಸ್ಪಷ್ಟವಾಗಿದೆ. ಇದರಿಂದ ಭಾರತೀಯ ನಿರಾಶನಾಗುತ್ತಾನೆ. ತೀವ್ರಗಾಮಿಯಾಗುತ್ತಾನೆ. ಈ ನಾಚಿಕೆ ಕೆಟ್ಟ, ಅವಮಾನದ ಬಾಳ್ವಿಗಿಂತ ಹೀನವಾದುದು ಏನೂ ಇಲ್ಲವೆಂದು ಅವನು ಹಾತೊರೆಯುತ್ತಾನೆ

ಈ ಪಾರತಂತ್ರ್ಯದ ಅವಮಾನವೆಷ್ಟೆಂಬುದು ತಮಗೇ ಅನುಭವವಾದ ಹೊರತು ಇತರರಿಗೆ ಗೊತ್ತಾಗುವುದಿಲ್ಲ. ಬ್ರಿಟಿಷರು ತಾವು ಪರಾಧೀನರಾಗಿರುವೆವೆಂದು ಒಂದು ಗಳಿಗೆ ಊಹಿಸಿಕೊಳ್ಳಲಿ. ಆಗ ಭಾರತ ದೇಶಭಕ್ತರ ಸ್ವಾತಂತ್ರ್ಯಾಭಿಲಾಷೆಯ ಅರ್ಥ ಅವರಿಗೆ ಸ್ವಲ್ಪ ತಿಳಿಯಬಹುದು. ಸುಮ್ಮನೆ ವಾದಕ್ಕಾಗಿ ಹೀಗೆ ಊಹಿಸೋಣ. ಜರ್ಮನಿ ಇಂಗ್ಲೆಂಡನ್ನು ಜಯಿಸುತ್ತದೆ. ಜರ್ಮನರು ಇಂಗ್ಲೆಂಡನ್ನು ಆಳುತ್ತಾರೆ. ಅಧಿಕಾರಿಗಳೆಲ್ಲಾ ಜರ್ಮನಿಯಿಂದಲೇ ಬರುತ್ತಾರೆ. ಒಬ್ಬಿಬ್ಬರು ಬ್ರಿಟಿಷರು ಇರುತ್ತಾರೆ. ಜರ್ಮನರ ಆಡಳಿತದಲ್ಲಿ ಶಿಸ್ತು ವ್ಯವಸ್ಥೆ ಇಲ್ಲವೆನ್ನುವಂತೆ ಇಲ್ಲ. ಜರ್ಮನ್ ಸೈನ್ಯಗಳು ದೇಶದ ಒಳ ಜಗಳಗಳನ್ನೆಲ್ಲಾ ಮಟ್ಟಹಾಕಬಹುದೆಂಬುದೂ ನಿಶ್ಚಯ. ಜರ್ಮನರು ಕೆಳದರ್ಜೆ ಹುದ್ದೆಗಳಿಗೆ ಬ್ರಿಟಿಷರನ್ನು ನಿಯಮಿಸಬಹುದು. ಸಂಬಳಗಳನ್ನು ಕೊಡಬಹುದು. ಸೇವೆಗೆ ಪ್ರಶಸ್ತಿಗಳನ್ನೂ ಕೊಡಬಹುದು. ಜರ್ಮನರು ಬ್ರಿಟಿಷರು ಕಟ್ಟುವುದಕ್ಕಿಂತ ಹೆಚ್ಚು ಉಪಯುಕ್ತವಾದ ದೊಡ್ಡವುಗಳಾದ ಅಣೆಕಟ್ಟುಗಳನ್ನು ಕಟ್ಟಬಹುದು. ಪ್ರಾಥಮಿಕ ವಿದ್ಯಾಭ್ಯಾಸಕ್ಕೂ ಧರ್ಮತತ್ವ ಚರ್ಚೆಗಳಿಗೂ ಬ್ರಿಟಿಷರ ಭಾಷೆಯನ್ನೇ ಉಪಯೋಗಿಸಲು ಅವಕಾಶವನ್ನು ಸಹ ಕೊಡಬಹುದು. ಇದರಿಂದಲೆಲ್ಲಾ ಬ್ರಿಟಿಷರಿಗೆ ಸಮಾಧಾನವಾಗುವುದೆ? ಜರ್ಮನರ ಆಡಳಿತದಿಂದ ವ್ಯಾಪಾರದಲ್ಲಿ ಲಾಭವಾಗುವುದರಿಂದ ಅದು ತಮ್ಮ ದೇಶಕ್ಕೆ ಶುಭವೆಂದು ಬ್ರಿಟಿಷರು ಪರಿಗಣಿಸುತ್ತಾರೆಯೋ? ಎಂದಿಗೂ ಇಲ್ಲ.

ಅಂದಮೇಲೆ ಸ್ವಾತಂತ್ರ್ಯ ಬೇಕೆಂದು ಕೇಳುವ ಭಾರತೀಯರನ್ನು ಕುರಿತು ಬ್ರಿಟಿಷರು ಯಾಕೆ ಕಣ್ಣು ಕೆರಳಿಸಬೇಕು. ಸರ್ ಹೆನ್ರಿ ಕಾಂಬೆಲ್ ಬಾನರ್‌ಮನ್ ಹೇಳಲಿಲ್ಲವೇ "ಒಳ್ಳೆಯ ಸರ್ಕಾರ ಸ್ವರಾಜ್ಯಕ್ಕೆ ಎಂದಿಗೂ ಸಮಾನವಾದುದಲ್ಲವೆಂದು," ಸ್ವತಂತ್ರ ದೇಶದಲ್ಲಿ ಸ್ವತಂತ್ರ ಪ್ರಜೆಯಾಗಿ ಹುಟ್ಟಿದವರಿಗೆ, ಪಾರತಂತ್ರದಲ್ಲಿರುವ ದೇಶದವರ ಕಷ್ಟ ಅವಮಾನ ತಿಳಿಯುವುದು ಸಾಧ್ಯವಿಲ್ಲ. ಆ ಭಾವನೆ ಅವರಿಗೆ ಅಪರೂಪ. ಅದಕ್ಕೆ ಆವಶ್ಯಕವಾದ ಊಹನೆಯೂ ಅವರಿಗೆ ಇರುವುದಿಲ್ಲ. ಪರದೇಶ ಪ್ರಯಾಣ ಮಾಡುವ ಭಾರತೀಯರು ನಾಚಿಕೆಯಿಂದ ತಲೆ ತಗ್ಗಿಸಬೇಕಾಗಿದೆಯೆಂಬುದು ಬ್ರಿಟಿಷರಿಗೆ ಸಹ ತಿಳಿಯುವುದಿಲ್ಲ.

ಭಾರತೀಯರು ಸ್ವಾತಂತ್ರ್ಯವನ್ನು ಏಕೆ ಬಯಸುತ್ತಾರೆಂಬುದು ಕೆಲವು ಬ್ರಿಟಿಷರಿಗೆ ಅರ್ಥವಾಗುವುದಿಲ್ಲ. ಇಂಗ್ಲಿಷರು ಭಾರತಕ್ಕೆ ಮಾಡಿರುವ ಉಪಕಾರ ಹೇಳಿ ಹೇಳಿ ಅವರ ಬಾಯಿ ಇನ್ನೂ ಸೋತಿಲ್ಲ. "ಬ್ರಿಟಿಷರು ಭಾರತದಲ್ಲಿ ಶಾಂತಿ ಶಿಸ್ತು ಸ್ಥಾಪಿಸಿದ್ದಾರೆ, ರೈಲು ಹಾಕಿದ್ದಾರೆ. ನಾಲೆ ತೋಡಿದ್ದಾರೆ. ಸ್ಕೂಲು ನಡೆಸುತ್ತಿದ್ದಾರೆ. ವ್ಯಾಪಾರ ಹೆಚ್ಚಿಸಿದ್ದಾರೆ. ನಿಷ್ಪಕ್ಷಪಾತವಾದ ನ್ಯಾಯ ಸ್ಥಾಪಿಸಿದ್ದಾರೆ. ಪೋಸ್ಟು ಟೆಲಿಗ್ರಾಫ್ ಏರ್ಪಡಿಸಿದ್ದಾರೆ ಜಗತ್ತೆಲ್ಲಾ ಭಾರತಕ್ಕೆ ಬಂದು ಹೋಗುವಂತೆ ಮಾಡಿದ್ದಾರೆ. ಬ್ರಿಟಿಷರು ಭಾರತಕ್ಕೆ ನಾಗರೀಕತೆ ತಂದರು. ಭಾರತಕ್ಕೆ ಅಂತರರಾಷ್ಟ್ರೀಯ ಯೋಗ್ಯತೆ ತಂದರು. ಇಂಗ್ಲಿಷ್ ಭಾಷೆ ಇಂಗ್ಲಿಷ್ ಸಂಸ್ಥೆಗಳನ್ನು ಭಾರತದಲ್ಲಿ ಸ್ಥಾಪಿಸಿದರು. ದೇಶದ ಒಳಗೂ ಹೊರಗೂ ರಕ್ಷಣೆಯನ್ನು ಏರ್ಪಡಿಸಿದರು. ಭಾರತವನ್ನು ಅಭಿವೃದ್ಧಿ, ಸುಖದ ದಾರಿಯಲ್ಲಿ ಬಿಟ್ಟರು. ಇಷ್ಟೆಲ್ಲಾ ಮಾಡಿದ್ದರೂ ಕೂಡ ಭಾರತೀಯರು ಸ್ವಾತಂತ್ರ್ಯವನ್ನು ಬಯಸುವರಲ್ಲಾ, ಅವರಿಗೆ ಬುದ್ಧಿ ಇಲ್ಲವಲ್ಲಾ, ಎಂದು ಈಗಲೂ ಬ್ರಿಟಿಷರು ಕೊರಗುತ್ತಾರೆ. ವಾದಕ್ಕಾಗಿ ಬ್ರಿಷರು ಭಾರತಕ್ಕೆ ಮಾಡಿರುವ ಈ ಉಪಕಾರವೆಲ್ಲ ನಿಜ ಎಂದೇ ಇಟ್ಟುಕೊಳ್ಳೋಣ. ಭಾರತೀಯರನ್ನು ನಿರ್ವೀರ್ಯರನ್ನಾಗಿ ಮಾಡಿ ಅವರನ್ನು ರಾಜಕೀಯ ಗುಲಾಮಗಿರಿಯಲ್ಲಿಡುವುದು ಈ ಉಪಕಾರಗಳಿಗೆಲ್ಲಾ ಪ್ರತಿಯಲ್ಲ; ಬೇಡಿ ಚಿನ್ನದ್ದಾರೂ ಅದು ಬೇಡಿಯೇ? ಪ್ರಪಂಚದ ಐಶ್ವರ್ಯ

ವನ್ನೆಲ್ಲಾ ಕೊಟ್ಟರೂ ಅದು ಸ್ವಾತಂತ್ರ್ಯ ಮತ್ತು ಮರ್ಯಾದೆಗೆ ಸಮಾನ ವಾದುದಲ್ಲ. ಜಗತ್ತಿಗೇ ರಾಜನಾಗಿ, ಆತ್ಮವನ್ನು ಕಳೆದುಕೊಂಡರೆ ಏನು ಪ್ರಯೋಜನ? ಈ ಅಸ್ವತಂತ್ರ ದೇಶದವರಿಗೆ ಆತ್ಮವಿಲ್ಲ. ಗುಲಾಮರಿಗೆ ಆತ್ಮವಿಲ್ಲ. ಅಸ್ವತಂತ್ರರೂ ಗುಲಾಮರೂ ತಮ್ಮ ದೇಹಗಳಿಗೆ ಸಹ ಒಡೆಯರಲ್ಲ.

೩

ಸ್ವಲ್ಪಕಾಲದ ಹಿಂದೆ ಬಂಗಾಳ ದೇಶದ ಒಬ್ಬ ನ್ಯಾಯಾಧಿಪತಿ, ಅಸ್ವತಂತ್ರರಾದವರಿಗೆ ರಾಜಕೀಯವಿಲ್ಲವೆಂದರು. ರಾಜಕೀಯ ಯಾರಿಗೆ ಇಲ್ಲವೋ ಅವರಿಗೆ ಆತ್ಮವೂ ಇಲ್ಲ. ಆತ್ಮವಿಲ್ಲದ ಮನುಷ್ಯ, ಮನುಷ್ಯನಲ್ಲ, ಪ್ರಾಣಿ. ಆತ್ಮವಿಲ್ಲದ ದೇಶದ ಜನ ಬರಿಯ ದನಗಳು "ಭಾರತವು ಎಂದಿಗೂ ಸ್ವತಂತ್ರವಾಗಿರಲಿಲ್ಲ. ಭಾರತೀಯರಿಗೆ ದೇಶ ಪ್ರೇಮವಿರಲಿಲ್ಲ. ಈ ದೇಶಪ್ರೇಮ ಪ್ರಾಶ್ಚಾತ್ಯ ಸಂಪರ್ಕದಿಂದ ಉಂಟಾಗಿದೆ" ಎಂದು ಹೇಳುವುದೆಲ್ಲ ಅಪಪ್ರಚಾರ. ಇತರ ದೇಶಗಳಲ್ಲಿರುವಂತೆ ಭಾರತದಲ್ಲಿಯೂ ಪ್ರತಿಗಾಮಿಗಳ ಒಂದು ತಂಡವಿದೆ. ಅವರು ಧನಿಕರು ದೊಡ್ಡ ದೊಡ್ಡ ಬಿರುದುಬಾವಲಿಗಳುಳ್ಳವರು ಅವರ ದೃಷ್ಟಿಯಲ್ಲಿ ಭಾರತಕ್ಕೆ ಈಗ ಇರುವುದಕ್ಕಿಂತ ಮತ್ತಾವ ಹೆಚ್ಚಿಗೆ ಸ್ಥಾನವೂ ಬೇಕಿಲ್ಲ. ಅವರಿಗೆ ಇರುವ ಹಣ ಅವರನ್ನು ಸುಖವಾಗಿಟ್ಟಿದೆ. ಅವರೆಲ್ಲಾ ಸೋಮಾರಿಗಳಾದ ಪರ್ರಾವಲಂಬಿಗಳು, ಸುಖಿಗಳು, ನೀತಿಹೀನರು ವ್ಯಭಿಚಾರಿಗಳು, ಅವರಿಗೆ ಭಾರತ ಈಗಿರುವಂತೆಯೇ ಇರಬೇಕು. ಬದಲಾವಣೆಯಾದರೆ ಅವರ ಸುಖಕ್ಕೂ ಅವರ ಮಕ್ಕಳು ಮೊಮ್ಮಕ್ಕಳ ಸುಖಕ್ಕೂ ಕಲ್ಲುಬೀಳಬಹುದು. ಭಾರತದ ರಾಜಕೀಯ ನಕ್ಷೆ ಬದಲಾದರೆ ತಮ್ಮ ಸ್ಥಿತಿ ಏನೋ ಎಂದು ಅವರಿಗೆ ಭಯ. ಅವರ ಬೆಂಬಲಕ್ಕೆ ಬ್ರಿಟಿಷ್ ಸರ್ಕಾರವಿದೆ. ಬ್ರಿಟಿಷ್ ಸರ್ಕಾರ ಈ ಸೋಮಾರಿಗಳಿಗೆ ಜಮೀನುದಾರಿಗಳನ್ನೂ ರಾಜ್ಯಗಳನ್ನೂ ಮಾತ್ರವೇ ಅನುಗ್ರಹಿಸಿಲ್ಲ. ತಮ್ಮ ಆಳ್ವಿಕೆಗೆ ಒಳಗಾದವರ ಮೌಢ್ಯ, ಮೂಢನಂಬಿಕೆ, ದೈಹಿಕ ಮತ್ತು ಮಾನಸಿಕ ಅವನತಿಗಳ ಲಾಭಗಳನ್ನು ಪಡೆದುಕೊಳ್ಳುವ ಅಧಿಕಾರವನ್ನೂ ಸಹ ಅನುಗ್ರಹಿಸಿದೆ.

ಭಾರತದಲ್ಲಿ ಕೆಲವು ನವಾಬರೂ ಮಹಾರಾಜರೂ ಇದ್ದಾರೆ. ಬ್ರಿಟಿಷ್ ಬಂದೂಕದ ರಕ್ಷಣೆ ತಪ್ಪಿದರೆ ಅವರು ಜೀವನಕ್ಕಾಗಿ ಕಲ್ಲುಗಳನ್ನು ಒಡೆಯಬೇಕಾಗಬಹುದು. ರಸ್ತೆಗಳಲ್ಲಿ ಕೆಲಸಮಾಡಬೇಕಾಗಬಹುದು. ಅವರ ಅಂತಃಪುರಗಳಲ್ಲಿ ಅಸಂಖ್ಯಾತ ಸ್ತ್ರೀಯರಿದ್ದಾರೆ. ಅವರ ಬಾಳು ಜೀವಾವಧಿ ನರಕ ನಿರುತ್ಸಾಹ ನೀತಿಹೀನ ನಾಚಿಕೆಗೇಡು. ಅವರ ಅರಮನೆಗಳಲ್ಲಿ ಜಗತ್ತಿನ ಅತ್ಯುತ್ತಮವಾದ ದ್ರಾಕ್ಷಾರಸಗಳೆಲ್ಲಾ ಇವೆ. ಅವರ ಅಶ್ವಶಾಲೆಗಳಲ್ಲಿ ಅತಿ ವೇಗವಾಗಿ ಓಡುವ ಜಗತ್ ಪ್ರಸಿದ್ಧಗಳಾದ ಜೂಜು ಕುದುರೆಗಳೆಲ್ಲಾ ಇವೆ. ಅವರ ದಿವಾನಖಾನೆಗಳು ಚಿನ್ನ ಬೆಳ್ಳಿ ರತ್ನಗಳಿಂದಲೇ ಬೆಳಗುತ್ತವೆ. ಅವರ ಊಟ ಯಾವಾಗಲೂ ಪಂಚ ಭಕ್ಷ್ಯ ಪರಮಾನ್ನ. ರಾಜಮಹಾರಾಜರು ಉಪಯೋಗಿಸುವ ಪದಾರ್ಥಗಳೆಲ್ಲಾ ಪರದೇಶದವೇ. ಅವರಿಗೆ ಈ ದೇಶದ ಜನರ ಹಣಬೇಕು. ಆದರೆ ಅವರ ಅರಮನೆಗಳ ಬೆಂಚು ಕುರ್ಚಿಗಳು ಸಹ ಪರದೇಶದವೇ ; ಅವರ ವಸ್ತ್ರಗಳು, ದ್ರಾಕ್ಷಾರಸ, ಅರಮನೆಯಲ್ಲಿ ಉಪಯೋಗಿಸುವ ಪಾತ್ರೆ ಪದಾರ್ಥಗಳು, ಟೀ ಕಾಫಿಸೆಟ್ ಎಲ್ಲಾ ಅವರಿಗೆ ಪರದೇಶದವೇ ಆಗಬೇಕು. ಕೆಲವು ಮಹಾರಾಜರಿಗೆ ದೊಡ್ಡ ದೊಡ್ಡ ಅಧಿಕಾರಿಗಳೆಲ್ಲಾ ಪರದೇಶದವರೇ ಆಗಿರಬೇಕು. ನಾಯಿಯೂ ಪರದೇಶದ್ದೇ ಆಗಿರಬೇಕು. ಅವರು ಯಾವಾಗಲೂ ಸುಸಜ್ಜಿತವಾದ ಸೆಲೂನಗಳಲ್ಲಿ ಜಗತ್ತಿನಲ್ಲೆಲ್ಲಾ ತಿರುಗುತ್ತಾರೆ. ಭಾರತ ಈಗಿರುವಂತೆ ಇರುವುದು ಅವರ ಈ ಎಲ್ಲಾ ಚೇಷ್ಟೆಗಳಿಗೂ ಆವಶ್ಯಕ. ಅವರ ಭಾಗಕ್ಕೆ ಇದೇ ಜೀವನ. ಗೌರವವೆಂಬುದೇನೆಂಬುದೇ ಅವರಿಗೆ ಗೊತ್ತಿಲ್ಲ ಹೋರಾಟ ಕಾದಾಟ 'ಕರ್ತವ್ಯ' ರಾಜಕೀಯ ಬದಲಾವಣೆ ಇವುಗಳಿಂದ ಅವರ ಹಿತಕ್ಕೆ ಧಕ್ಕೆ ಎಂದು ತಿಳಿದಿದ್ದಾರೆ. ಇಂದಿನ ಸ್ಥಿತಿ ಬದಲಾವಣೆಯಾದರೆ ಅದೇ ತಮ್ಮ ಅಂತ್ಯವೆಂದು ಅವರ ಭಾವನೆ. ಅಂತಹವರು ಸ್ವಾತಂತ್ರವನ್ನು ಬಯಸದೆ ಇರಬಹುದು. ದೇಶಪ್ರೇಮ ಸಹ ಅವರಿಗೆ ಬೇಕಿಲ್ಲ. ಈಗಿನ ಸುಖವೇ ಅವರಿಗೆ ಸ್ವರ್ಗಸುಖ. ಅವರಿಗೆ ರಾಜಕೀಯ ಕೆಲಸಗಾರರ ಕಾಟವಾಗಲಿ ದೇಶಭಕ್ತರ ಕಾಟವಾಗಲಿ ಬೇಕಿಲ್ಲ.

ಆದರೆ ಇಂಥವರ ಸಂಖ್ಯೆ ಹೆಚ್ಚಾಗಿಲ್ಲ. ರಾಜರುಗಳಲ್ಲಿ ಕೆಲವರು ಮಾತನಾಡದೆ ಇರಬಹುದು. ಆದರೆ ತಮ್ಮದು ಅವಮಾನದ ನೆಲೆ ಎಂಬುದು ಅವರಿಗೆ ಗೊತ್ತಿಲ್ಲದೆ ಇಲ್ಲ. ಉದಯಪುರದ ಮಹಾರಾಣ ನಾನು ಸ್ವತಂತ್ರ ಎಂದು ಹೇಳಿ ತನ್ನ ರಾಜ್ಯವನ್ನು ಕಳೆದುಕೊಳ್ಳಲು ಸಿದ್ಧನಾಗಿಲ್ಲದೆ ಇರಬಹುದು. ಆದರೆ ಇಂಗ್ಲೆಂಡ್ ದೊರೆಯು ಮತ್ತು ಇಂಡಿಯದ ಚಕ್ರವರ್ತಿಯ ಕಾರೋನೇಶನ್ ಮೆರವಣಿಗೆಯಲ್ಲಿ ಕರ್ಜ ನನ ಹಿಂದೆ ನಡೆದುಕೊಂಡುಬರಲು ಆತನೂ ಒಪ್ಪುವುದಿಲ್ಲ. ಬರೋಡದ ಗಾಯಕವಾಡನಿಗೆ ಬ್ರಿಟಿಷ್ ಸೈನ್ಯವನ್ನೂ ಹಡಗು ಪಡೆಯನ್ನೂ ಎದುರಿ ಸುವ ಶಕ್ತಿ ಇಲ್ಲದೆ ಇರಬಹುದು. ಆದರೆ ಆತನೂ ಕೂಡ ಆತ್ಮಗೌರವ ಹೆಚ್ಚಾದ ಒಂದು ಗಳಿಗೆಯಲ್ಲಿ ಇಂಗ್ಲೆಂಡ್ ರಾಜರಿಗೆ ಅತಿ ನಮ್ರವಾದ ಸಲಾಮನ್ನು ಮಾಡಲು ಮರೆಯಬಹುದು. ಈ ಬಗೆಯ ರಾಜರೂ, ಇವರಿಗಿಂತ ಇನ್ನೂ ಕಡಿಮೆ ದರ್ಜೆಯ ರಾಜರೂ ಸಹ ಕರ್ಜನ್ ನಂತಹ ವೈಸರಾಯರ ಉದ್ಧತತನವನ್ನು ಸಹಿಸಲಿಲ್ಲ, ಇಂತಹ ರಾಜರಿಗೂ ಪ್ರಜೆಗಳಿಗೂ, ಆಗಾಗ್ಗೆ ಕರ್ಜನ್‌ನಂತಹ ವೈಸರಾಯ್ ಬರುವುದು ಒಳ್ಳೆಯದು. ಇದರಿಂದ ಮತ್ತಾವುದರಿಂದಲೂ ಗೊತ್ತಾಗ ದಷ್ಟು ಅವರಿಗೆ "ತಮ್ಮ ಆತ್ಮಗೌರವ ಎಷ್ಟು ಕಡಿಮೆಯಾಗಿದೆ, ತಾವು ಎಷ್ಟು ದೀನರು" ಎಂಬುದು ಚೆನ್ನಾಗಿ ಗೊತ್ತಾಗುತ್ತದೆ.

ಭಾರತದ ವೈಸರಾಯ್ ಭಾರತದ ರಾಜರ ಅಧಿಕಾರವನ್ನು ಕಡಿಮೆ ಮಾಡಲು ಪ್ರಯತ್ನಿಸಿದಾಗ ಆ ರಾಜರು ಹೇಗೆ ಮೊರೆಯುತ್ತಾರೆಂಬುದು ಗಮನಾರ್ಹವಾದುದು. ಅಂತಹ ಸಮಯದಲ್ಲಿ ಆ ರಾಜರ ಆತ್ಮ ಗೌರವ ಸ್ವಲ್ಪ ಜಾಗ್ರತವಾಗುತ್ತದೆ. ಅವರ ಹೃದಯ ನಾಚಿಕೆಯಿಂದ ತುಂಬುತ್ತದೆ. ಆದರೆ ಅವರು ಅನುಸರಿಸುತ್ತಿರುವ ನೀತಿ ರಹಿತವಾದ ಗುಲಾಮಗಿರಿಯ ಸುಖಲೋಲುಪತೆಯ ಜೀವನ, ಅವರ ಮನುಷ್ಯ ತ್ವವನ್ನೇ—ಪುಂಸತ್ವವನ್ನೆ—ಪೂರ್ಣವಾಗಿ ಶೋಷಿಸಿಬಿಟ್ಟಿದೆ. ಪಾರ ತಂತ್ರ್ಯದ ನಾಚಿಕೆ ಅವರ ಹೃದಯವನ್ನು ಸುಡುವುದಿಲ್ಲ. ಗುಲಾಮ ಗಿರಿಯ ಸಂಕೋಲೆಯನ್ನು ಅವರು ಕಿತ್ತು ಒಗೆಯುವ ಶಕ್ತಿಯನ್ನೇ ಕಳೆದುಕೊಂಡಿರುತ್ತಾರೆ. ವಿದ್ಯುತ್‌ಶಕ್ತಿಯು ಹೆಣದ ದೇಹವನ್ನು ಸಹ

ಒಂದು ಗಳಿಗೆ ಚಲಿಸುವಂತೆ ಮಾಡಬಹುದು. ಆದರೆ ಆ ಜೀವಕ್ಕೆ ಪ್ರಾಣವನ್ನು ತುಂಬಲು ಅದರಿಂದ ಸಾಧ್ಯವಿಲ್ಲ.

ಆದರೆ ಭಾರತದಲ್ಲಿ ಸ್ವಾತಂತ್ರ್ಯ ಬೇಕೆಂದು ಕೇಳುವ ಅಸಂಖ್ಯಾತರಿಗೆ ಹೋಲಿಸಿದರೆ, ಈ ರಾಜ ಮಹಾರಾಜರ ಸಂಖ್ಯೆ ಅತ್ಯಲ್ಪ; ಅಪಾರ ಸಮುದ್ರದಲ್ಲಿ ಒಂದು ಹನಿ ನೀರಿನಂತೆ. ಈ ರಾಜರಲ್ಲಿ ಬೇಕಾದಹಾಗೆ ಹಣವಿದೆ. ಅವರು ಈ ದೇಶದಲ್ಲಿಯೂ ಇಂಗ್ಲೆಂಡಿನಲ್ಲಿಯೂ ಹೊಗಳು ಭಟ್ಟರನ್ನು ಇಟ್ಟುಕೊಂಡು ತಮ್ಮ ಪ್ರಚಾರವನ್ನು ನಡೆಸಿಕೊಳ್ಳುತ್ತಿದ್ದಾರೆ. ಆ ರಾಜರನ್ನು ಯಾಪುದಕ್ಕೂ ಮುಂದೊಡ್ಡುವುದು ಬ್ರಿಟಿಷರ ಲಾಭ; ರಾಜರ ರಾಜಭಕ್ತಿ, ಸಾಮ್ರಾಜ್ಯಭಕ್ತಿ, ಅವರ ಮದುವೆ ವೈಭವ, ಪ್ರಾಮುಖ್ಯತೆಗಳನ್ನೆಲ್ಲಾ ಬ್ರಿಟಿಷರು, ತಮ್ಮ ಸ್ವಾರ್ಥದ ದೃಷ್ಟಿಯಿಂದಲೇ ಪ್ರಚಾರ ಮಾಡುತ್ತಾರೆ.

ಭಾರತದ ರಾಜರ ಪೈಕಿ, ಭಾರತೀಯರ ಗೌರವಕ್ಕೂ ಮರ್ಯಾದೆಗೂ ಪಾತ್ರರಾದವರು ಕೈಯ್ಯಲ್ಲಿ ಎಣಿಸುವಷ್ಟು. ಕೆಲವು ದೇಶದ ರಾಜರನ್ನು ಅವರ ಪ್ರಜೆಗಳು, ಅನುಯಾಯಿಗಳು, ಸಹ ಪ್ರೀತಿಸುವುದಿಲ್ಲ. ಈ ಮಾತಿಗೆ ಕೆಲವು ಅಪವಾದಗಳು, ಇಲ್ಲವೆಂದಲ್ಲ. ಒಟ್ಟಿನಲ್ಲಿ ರಾಜರೆಲ್ಲಾ ಬರಿಯ ಶೃಂಗಾರಲೀಲಾಪರರಾದ ಬೊಂಬೆಗಳೇ. ರಾಜರ ಆಡಳಿತದ ಹಿಂದೆ ಬ್ರಿಟಿಷ್ ರೆಸಿಡೆಂಟಿನ ಅಥವ ಏಜೆಂಟಿನ ಕೈವಾಡಇದ್ದೇ ಇದೆ. ರಾಜರ ಆಡಳಿತ ನಡೆಯುವುದು ರೆಸಿಡೆಂಟಿನ ಪ್ರಸನ್ನತೆಗೆ ಅನುಸಾರವಾಗಿ. ಕೆಲವು ರಾಜ್ಯಗಳಲ್ಲಿ ರೆಸಿಡೆಂಟನಿಗೆ ನೇರವಾದ ಸಂಬಂದವುಂಟು. ಆಡಳಿತವೆಲ್ಲಾ ಆತನ ಇಚ್ಛಾನುಸಾರವಾಗಿಯೇ ನಡೆಯುತ್ತದೆ. ಇತರ ರಾಜ್ಯಗಳಲ್ಲಿ ರೆಸಿಡೆಂಟ್ ಮೇಲ್ವಿಚಾರಣೆ ಮಾಡುತ್ತಾ ಆಡಳಿತ ನೀತಿಯನ್ನು ತಾನೇ ಹಾಕಿಕೊಡುತ್ತಾನೆ. ತನ್ನ ಸ್ವಂತ ಇಚ್ಛೆಯಂತೆ ಆಳುತ್ತಾ ತನ್ನ ಕಾಲಿನ ಮೇಲೆ ತಾನು ನಿಂತುಕೊಂಡು ತನ್ನ ಸ್ವಾತಂತ್ರ್ಯವನ್ನು ಪ್ರಕಟಿಸುವ ರಾಜರ ಸಂಖ್ಯೆ ಅತಿ ಅಲ್ಪ. ಸ್ವಾತಂತ್ರ ಪ್ರಿಯನಾದ ವಿದ್ಯಾವಂತನಾದ ರಾಜನಾದರೂ ರೆಸಿಡೆಂಟ್ ಮತ್ತು ಭಾರತ ಸರ್ಕಾರದ ಸಲಹೆ ಕೇಳಬೇಕೆಂದು ಬಲ್ಾತ್ಕರಿಸಲ್ಪಡುತ್ತಾನೆ.

ಎಲ್ಲ ರಾಜರೂ ನಿಜವಾಗಿಯೂ ಬ್ರಿಟೀಷ್ ಚಕ್ರವರ್ತಿಯ

ಭಕ್ತರೆಂದೂ ಈ ಪಾರತಂತ್ರ್ಯ ಬೇಕೆಂದು ಬಯಸುವವರೆಂದೂ ಭಾವಿಸ ಕೂಡದು. ಅವರು ಮಾಡುವ ಕೆಲಸಗಳೆಲ್ಲಾ ಅವರ ಇಚ್ಛೆಗಳಲ್ಲ. ಕೆಲವು ರಾಜರಿಗೆ ಆತ್ಮಗೌರವವೆಂಬುದೇ ಇಲ್ಲ. ಕೆಲವರು ಅತಿಸುಖಲೋಲುಪ ತೆಯ ಬಾಳನ್ನು ನಡೆಸಿ ತಮ್ಮ ಹೀನವಾದ ಸ್ಥಿತಿಯನ್ನು ತಿಳಿಯದಷ್ಟು ಗುಲಾಮರಾಗಿದ್ದಾರೆ. ತಮ್ಮ ಪಾಡಿಗೆ ತಾವು ಸುಖವಾಗಿರುವುದೇ ಅವರಿಗೆ ಬೇಕಾದುದು. ಕೆಲವು ರಾಜರಿಗೆ ಬ್ರಿಟಿಷ್ ಸ್ವಾಮಿಗಳು ಬೇಕಿಲ್ಲ. ಸಮಯ ಸಿಕ್ಕಿದರೆ ಅವರು ಸ್ವತಂತ್ರರೇ ಆಗುತ್ತಾರೆ. ಆದರೆ ತಮಗೆ ಜಯವಾಗುವುದೆಂಬ ನಂಬಿಕೆ ಅವರಿಗೆ ಇಲ್ಲ. ಆದುದರಿಂದ ಭಾರತದ ಸ್ವಾತಂತ್ರ್ಯಾಭಿಲಾಷಿಗಳು (ಕಾಂಗ್ರೆಸ್ ಪಕ್ಷ) ರಾಜರ ಸಹಾಯವನ್ನು ಕೋರುವುದಿಲ್ಲ. ಕೆಲವು ರಾಜರಿಗೆ ಕ್ರಾಂತಿಕಾರರಲ್ಲಿಯೂ ಸಹಾನುಭೂತಿ ಇರಬಹುದು. ಆದರೆ ಅವರೇ ಏನನ್ನೂ ಧೈರ್ಯವಾಗಿ ಮಾಡಲಾರರು. ಕೆಲವು ರಾಜರು ಕಾನೂನು ಬದ್ಧವಾದ ರಾಜಕೀಯ ಚಳವಳಿಗಳಲ್ಲಿ ಸಹಾನುಭೂತಿಯುಳ್ಳವರಾಗಿರ ಬಹುದು ಆದರೆ ಅವರು ಆ ಚಳುವಳಿಗೂ ಯಾವ ಪ್ರೋತ್ಸಾಹ ವನ್ನೂ ಕೊಡುವುದಿಲ್ಲ. ಎಲ್ಲಿ ಇದರಿಂದ ಸಹ ಬ್ರಿಟಿಷ್ ಸರ್ಕಾರಕ್ಕೆ ಕೋಪ ಬಂದು ತಮ್ಮ ಹಿತಕ್ಕೆ ತೊಂದರೆಯುಂಟಾಗುವುದೋ ಎಂದು ಅವರಿಗೆ ಭಯ.

ದೊಡ್ಡ ರಾಜರನ್ನು ಬಿಟ್ಟರೆ ಉಳಿದ ಚಿಲ್ಲರೆ ಜಮೀನ್‌ದಾರರು ಮುಂತಾದವರೆಲ್ಲಾ ಬ್ರಿಟಿಷ್ ಅಧಿಕಾರಗಳ ಕೈಯ್ಯಲ್ಲಿಯೇ ಇದ್ದಾರೆ. ಬ್ರಿಟಿಷರ ಸಹಾನುಭೂತಿಯಿದ್ದರೆ ಅವರಿಗೆ ಲಾಭ. ಆ ಅಧಿಕಾರಿಗಳಿಗೆ ಅಸಮಾಧಾನವಾದರೆ ಅವರಿಗೆ ನಷ್ಟ. ಬ್ರಿಟಿಷ್ ಕಲೆಕ್ಟರೂ ಮ್ಯಾಜಿಸ್ಟ್ರೇಟರೂ ಅವರ ಆತ್ಮಕ್ಕೆ ಸಹ ಯಜಮಾನರು. ಬ್ರಿಟಿಷ್ ಅಧಿಕಾರಿಗಳನ್ನು ಪ್ರಸನ್ನಮಾಡಿಕೊಳ್ಳಲು ಈ ಜಮೀನ್‌ದಾರರು ಯಾವ ಕೆಲಸ ಬೇಕಾದರೂ ಮಾಡುತ್ತಾರೆ. ತಾವು ಸ್ವತಂತ್ರವಾದ ಮನೋಭಾವ ವುಳ್ಳವರು ಎಂಬುದು ಬ್ರಿಟಿಷ್ ಅಧಿಕಾರಿಗಳಿಗೆ ತಿಳಿಯಬಹುದಾದ ಯಾವ ಕೆಲಸವನ್ನೂ ಅವರು ಎಂದಿಗೂ ಮಾಡುವುದಿಲ್ಲ.

ಹಣಗಾರರು ಈ ಜಗತ್ತಿನಲ್ಲಿ ಎಲ್ಲಿಯೂ ರಾಜಕೀಯ ಮತ್ತು

ಕ್ರಾಂತಿಯ ಚಳುವಳಿಗಳನ್ನು ನಡೆಸಿಲ್ಲ. ಅವರು ಬದಲಾವಣೆಗೆ ಯಾವಾಗಲೂ ವಿರೋಧಿಗಳು. ಧನಿಕರಾದವರು ಸಹ ಅಪರೂಪವಾಗಿ ಜನತೆಯ ನೋವನ್ನು ತಮ್ಮ ನೋವನ್ನಾಗಿ ಮಾಡಿಕೊಂಡು ಪ್ರಜೆಗಳ ಪಕ್ಷವನ್ನು ಸೇರಿ ತಮ್ಮ ಪ್ರತಿಷ್ಠೆ ನಾಶವಾದರೂ ದೇಶದ ಹಿತವನ್ನು ಸ್ಥಾಪಿಸಬಹುದು. ಆದರೆ ಇಂತಹ ಉದಾಹರಣೆಗಳು ಯಾವ ದೇಶದಲ್ಲಿಯೂ ಅತಿ ವಿರಳ.

"ನಾವು ಪರತಂತ್ರರು. ರಾಜಕೀಯ ಹೊಲೆಯರು. ಈ ಅವಮಾನವನ್ನು ಹೋಗಲಾಡಿಸಿಕೊಳ್ಳಬೇಕು" ಎಂಬ ಆಸೆ ಸ್ವಾಭಾವಿಕವಾಗಿ ಮಧ್ಯವರ್ಗದವರಿಗೇ ಸಾಧ್ಯ. ರಾಜಕೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಸಾಮಾನ್ಯ ಜನರಿಗೂ ಹೆಚ್ಚು ಶ್ರದ್ಧೆಯಿರುವುದಿಲ್ಲ. ಸಾಮಾನ್ಯರ ಅವಿದ್ಯೆ ಅಜ್ಞಾನ ಜೀವನದ ಹೋರಾಟ ತಾಪತ್ರಯಗಳಿಂದ ಅವರಿಗೆ, ಈ ಪ್ರಶ್ನೆಯನ್ನು ಕುರಿತು ಯೋಚಿಸುವ ಅವಕಾಶವಿರುವುದಿಲ್ಲ. ಹಸಿವು ರೋಗ ಬಡತನ ನಿರುದ್ಯೋಗ ಇವುಗಳನ್ನು ಎದುರಿಸುವುದೇ ಅವರಿಗೆ ಸಾಕಾಗಿಹೋಗುತ್ತದೆ. ಅವರನ್ನು ಸಂತೋಷಪಡಿಸುವುದು ಸುಲಭ. ಅವರಿಗೆ ಸ್ವಲ್ಪ ದಯೆ ತೋರಿಸಿದರೂ, ಸಹಾಯ ಮಾಡಿದರೂ, ಅವರು ಸುಖಿಗಳಾಗುತ್ತಾರೆ. ಮುಖ್ಯ ಪ್ರಶ್ನೆ ಏನು ಎಂಬುದು ಅವರಿಗೆ ತಿಳಿಯುವುದಿಲ್ಲ. ನೂರಾರು ವರುಷಗಳಿಂದ ವಿದ್ಯಾವಂತರಾಗಿ, ಪ್ರಜಾತಂತ್ರಗಳಲ್ಲಿ ಅನುಭವವುಳ್ಳ ಇಂಗ್ಲೆಂಡ್ ಅಮೆರಿಕ ದೇಶಗಳಲ್ಲಿ ಸಹ, ಸಾಮಾನ್ಯಜನರ ಸ್ವಭಾವ ಇದೇಯೆ. ಸರ್ಕಾರವೂ ಸರ್ಕಾರದ ಅನುಯಾಯಿಗಳೂ ಸಾಮಾನ್ಯ ಜನರ ಕಣ್ಣಿಗೆ ಮಣ್ಣೆರಚುತ್ತಾರೆ. ಎಲ್ಲಾ ದೇಶಗಳಲ್ಲಿಯೂ ಸ್ವಾತಂತ್ರ್ಯಕ್ಕಾಗಿಯೂ ಸುಧಾರಣೆಗಾಗಿಯೂ ಚಳುವಳಿ ನಡೆಸುವವರು ವಿದ್ಯಾವಂತರಾದ ಮಧ್ಯಮತರಗತಿಯವರೇ. ಅವರ ಧ್ಯೇಯ, ಶ್ರದ್ಧೆ, ಧ್ಯೇಯಕ್ಕಾಗಿ ತ್ಯಾಗ, ಸತ್ಯಕ್ಕಾಗಿ ಕಷ್ಟಸಹಿಷ್ಣುತೆ, ಜನಸಾಮಾನ್ಯರಲ್ಲಿ ಅವರು ಗಳಿಸಿರುವ ಬೆಂಬಲದಿಂದಲೇ ಹೋರಾಟವು ಫಲಕಾರಿಯಾಗುವುದು.

ಇಂತಹ ಚಳುವಳಿ ಎಂದಿಗೂ ಸಾಯುವುದಿಲ್ಲ. ಸ್ವಾತಂತ್ರ್ಯಕ್ಕಾಗಿ ಪ್ರಾರಂಭವಾದ ಚಳುವಳಿ ಚಿರಂಜೀವಿ; ತಂದೆಯಿಂದ ಮಗನಿಗೆ;

ಮಗನಿಂದ ಮೊಮ್ಮಗನಿಗೆ; ಹಿಂದಲಂತೆಯೇ ಮುಂದೆಯೂ; ಒಂದೇ ಏಟಿಗೆ ಜಯವಾಗಬಹುದು, ಅಥವ ಜಯ ಸಾವಕಾಶವಾಗಬಹುದು. ಚಳು ವಳಿಯ ಜಯ ದೇಶಭಕ್ತರ ಶ್ರದ್ಧೆ ವಿವೇಕ ಜನಸಾಮಾನ್ಯದ ಬಲ ಇವು ಗಳಮೇಲೆ ಅವಲಂಬಿಸಿದೆ. ಚಳುವಳಿಯನ್ನು ಎದುರಿಸುವವರ ಅವಿವೇಕ ದುಡುಕುತಂತ್ರದ ಮೇಲೆಯೂ ಅವಲಂಬಿಸುತ್ತದೆ. ಜಗತ್ತಿನ ಎಲ್ಲ ಕಡೆಗಳಲ್ಲಿಯೂ ರಾಜಕೀಯ ಚಳುವಳಿಗೆ ಏರುತಗ್ಗುಗಳು ಉಂಟೇ ಉಂಟು. ತಾತ್ಕಾಲಿಕವಾದ ಜಯಾಪಜಯಗಳು ಉಂಟೇ ಉಂಟು. ಪ್ರಾರಂಭದಲ್ಲಿ ಸರ್ಕಾರಗಳು ಈ ಬಗೆಯ ಚಳುವಳಿಗಳನ್ನು ಗಮನಿಸುವು ದಿಲ್ಲ. ಆನಂತರ, ಸರ್ಕಾರದ ದಬ್ಬಾಳಿಕೆ ಅತ್ಯಾಚಾರ ಪ್ರತಿಹಿಂಸೆ ಪ್ರಾರಂ ಭವಾಗುತ್ತದೆ. ಸ್ವಾತಂತ್ರವೆಂಬ ಕೋಮಲವಾದ ಗಿಡ ಬೆಳೆಯುವುದು ದೇಶಭಕ್ತರ ರಕ್ತದಿಂದಲೇ. ಸರ್ಕಾರ ಫಾಸಿ ಕೊಟ್ಟಾಗಲಿ, ತಲೆ ಕತ್ತರಿಸಿ ಯಾಗಲಿ ಬಂದೂಕದಿಂದ ಹೊಡೆದಾಗಲಿ ವ್ಯಕ್ತಿಗಳನ್ನು ಕೊಲ್ಲ ಬಹುದು. ಸ್ವಾತಂತ್ರ ಚಳುವಳಿಗಳನ್ನು ಮಟ್ಟಹಾಕಲು ಸರ್ಕಾರ ದವರು ಜೈಲು ಚಿತ್ರಹಿಂಸೆ, ಗಡೀಪಾರು, ಆಸ್ತಿ ಮುಟ್ಟುಗೋಲು, ಇವ ನ್ನೆಲ್ಲಾ ಮಾಡಬಹುದು. ಆದರೆ ಈ ಹಿಂಸೆಗಳಿಂದ ಸ್ವಾತಂತ್ರ್ಯ ಚಳುವಳಿ, ಎಲ್ಲಿಯೂ ನಾಶವಾಗಿಲ್ಲ. ದಬ್ಬಾಳಿಕೆಗಿಂತ ರಾಜಿಯ ಮಾರ್ಗ ಯಾವಾಗಲೂ ಉತ್ತಮ. ರಾಜಿಯ ಮಾರ್ಗ ಸರಿಯಾದ ಕಾಲದಲ್ಲಿ ಆಗಬೇಕು . ನಾವಕಾಶವಾಗಬಾರದು. ಭಾರತದ ರಾಷ್ಟ್ರೀಯ ಚಳುವಳಿ ಕೆಲವು ಮುಖಗಳನ್ನು ಅನುಭವಿಸಿದೆ. ಉಳಿದುವನ್ನು ಅನುಭವಿಸುತ್ತಿದೆ. ಈ ಚಳುವಳಿಯ ಇತಿಹಾಸವನ್ನು ಸ್ಥೂಲವಾಗಿ ವಿವರಿಸುತ್ತೇವೆ.

೪

ಆರನೆಯ ಮೊಗಲ್ ಚಕ್ರವರ್ತಿಯಾದ ಔರಂಗ್‌ಜೇಬನು ೧೭೦೭ ರಲ್ಲಿ ಕಾಲವಾದನು. ಅವನು ಸತ್ತ ೫೦ ವರ್ಷಗಳೊಳಗಾಗಿ ಮೊಗಲ್ ಸಾಮ್ರಾಜ್ಯ ನಿರ್ನಾಮವಾಯಿತು. ಕ್ರೌರ್ಯ, ಮತಾಂಧತೆ ಸಂಶಯ ಗಳಿಂದ ಸ್ಥಾಪನೆಯಾಗಿದ್ದ ರಾಜ್ಯ ಅನಾಯಕತ್ವಕ್ಕೆ ಒಳಗಾಯಿತು

ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಮೊಗಲರಿಗೆ ಪ್ರಬಲವಾದ ವಿರೋಧ ಏರ್ಪಟ್ಟಿತು ಸಿಖ್, ಗುರು ಬಹದ್ದೂರನ ಕೊಲೆ ಡಿಲ್ಲಿಯಲ್ಲಿ ನಡೆದುದರಿಂದ ಸಿಖರು ಕುಪಿತರಾದ ಸಿಂಹಗಳಂತೆ ಗುರುಗೋವಿಂದ್‌ಸಿಂಗನ ಆಶ್ರಯದಲ್ಲಿ ಎದ್ದರು. ಇದರಿಂದ ಪಂಜಾಬಿನಲ್ಲಿ ಮೊಗಲರ ಪ್ರಾಬಲ್ಯ ಸೊನ್ನೆಯಾಯಿತು. ದಕ್ಷಿಣದಲ್ಲಿ ಶಿವಾಜಿಯ ರಾಜ್ಯ ಮೊಗಲರ ಕಣ್ಣುರಿಯಾಗಿದ್ದಿತು. ೧೭೫೭ ರ ವೇಳೆಗೆ ಪಂಜಾಬಿನಲ್ಲಿ ಸಿಕ್ಕರೂ ದಖನಿನಲ್ಲಿ ಮರಾಠರೂ ಮೊಗಲರ ಸಾಮ್ರಾಜ್ಯದಿಂದ ಬೇರೆಯಾಗಿ ಸ್ವತಂತ್ರರಾದರು. ಹೈದರಾಬಾದ್ ನಿಜಾಮನೂ ಮೈಸೂರು ನವಾಬರೂ ಸ್ವತಂತ್ರರಾದುದು ಮಾತ್ರವಲ್ಲದೆ, ದಖನ್ನಿನ ಅಧಿಕಾರಕ್ಕೆ ಮರಾಠರೊಡನೆಯೇ ಸ್ಪರ್ಧಿಸುತ್ತಿದ್ದರು. ಬಂಗಾಳಾ ಔಂಧ್‌ಗಳು ಹೆಸರಿಗೆ ಮಾತ್ರ ಡಿಲ್ಲಿಗೆ ಅಧೀನವಾಗಿದ್ದವು. ಮಧ್ಯ ಇಂಡಿಯಾ ಮರಾಠರ ವಶದಲ್ಲಿಯೇ ಇದ್ದಿತು.

ಭಾರತದ ರಾಜಕೀಯ ವಾತಾವರಣ ಅಶಾಂತಿಗೊಳಗಾಗಿದ್ದಿತು. ಇದನ್ನು ನೋಡಿ ಇಂಗ್ಲಿಷರು ಫ್ರೆಂಚರು ಇಬ್ಬರೂ ರಂಗವನ್ನು ಪ್ರವೇಶಿಸಿದರು. ಇಬ್ಬರೂ ಬೇರೆ ಬೇರೆ ಪಕ್ಷವನ್ನು ಹಿಡಿದು ತಮ್ಮ ತುರುಪುಗಳನ್ನು ಆಡಲು ಪ್ರಾರಂಭಿಸಿದರು. ಯಾರು ಹೆಚ್ಚು ಹಣ ಕೊಡುತ್ತಿದ್ದರೋ ಅವರ ಸೇವೆಯನ್ನು ಇಂಗ್ಲಿಷರು ಫ್ರೆಂಚರು ಮಾಡುತ್ತಿದ್ದರು. ಪ್ರತಿಯೊಂದು ಯುದ್ಧವಾದಮೇಲೆಯೂ, ಕೆಲವು ವೇಳೆ ಯುದ್ಧ ನಡೆಯುತ್ತಲೇ ಇರುವಾಗಲೂ ಇವರು ಪಕ್ಷಗಳನ್ನು ಬದಲಾಯಿಸುತ್ತಿದ್ದರು. ಬ್ರಿಟಿಷರು ಜಯಿಸಿದ ಮೊದಲನೆಯ ಪ್ರಸಿದ್ಧ ಯುದ್ಧ ೧೭೫೭ರಲ್ಲಿ ಪ್ಲಾಸಿಯಲ್ಲಿ ನಡೆದ ಕದನ. ಅದು ಭಾರತದ ಪ್ರಭುತ್ವಕ್ಕೆ ಅವರಿಗೆ ಬೀಗದ ಕೈ ಆಯಿತು. ೧೭೫೭ ರಿಂದ ೧೮೫೮ ರ ವರೆಗೆ ಬ್ರಿಟಿಷರು ಭಾರತದಲ್ಲಿ ಹೋರಾಡಿದರು ; ತಂತ್ರ ನಡೆಸಿದರು. ಸಾಮ್ರಾಜ್ಯವನ್ನು ಸ್ಥಾಪಿಸುವುದು, ಐಶ್ವರ್ಯವನ್ನು ದೋಚುವುದು ಇದೆ ಅವರ ಆಗಿನ ಗುರಿಯಾಯಿತು. ಪರದೇಶದವರು ಹಿಂದುಗಳಿಗೆ ವಿರೋಧವಾಗಿ ಮುಸಲ್ಮಾನರನ್ನು ಎತ್ತಿಕಟ್ಟಿದರು. ಮುಸಲ್ಮಾನರಿಗೆ ವಿರೋಧವಾಗಿ ಹಿಂದುಗಳನ್ನು ಎತ್ತಿಕಟ್ಟಿದರು. ಒಂದು ರಾಜ್ಯದ ಮೇಲೆ ಮತ್ತೊಂದು ರಾಜ್ಯವನ್ನು ಎತ್ತಿಕಟ್ಟಿದರು. ರಾಜಪುತ್ರರನ್ನು ಜಾಟರಮೇಲೆ ಕೆಡವಿ

ದರು. ಜಾಟರನ್ನು ರಾಜಪುತ್ರರ ಮೇಲೆ ಕೆಡವಿದರು. ಅವರಿಬ್ಬರನ್ನೂ ಮರಾಠರ ಮೇಲೆ ಕೆಡವಿದರು. ರೋಹಿಲರನ್ನು ಬಂದೇಲರ ಮೇಲೆ ಕೆಡವಿದರು. ಬಂದೇಲರನ್ನು ಪಠಾಣರ ಮೇಲೆ ಕೆಡವಿದರು. ಬೇಕಾದ ಕೌಲುಗಳಿಗೆ ಒಪ್ಪಿದರು. ಸ್ವಲ್ಪವೂ ಯೋಚನೆಯೇ ಇಲ್ಲದೆ ಕೌಲುಗಳನ್ನು ಮುರಿದರು. ಕೊಟ್ಟ ಮಾತು ನ್ಯಾಯ ಇವುಗಳನ್ನು ಪರಿಗಣಿಸದೆ ಪಕ್ಷಗಳನ್ನು ಬದಲಾಯಿಸಿದರು. ರಾಜ್ಯಗಳನ್ನು ಕೊಂಡರು. ಹೆಚ್ಚಿಗೆ ಬೆಲೆ ಕೊಟ್ಟವರಿಗೆ ಮಾರಿದರು. ಸೈನ್ಯ ಶಕ್ತಿಯನ್ನು ಪದಾರ್ಥಗಳನ್ನು ಕೊಂಡಂತೆ ಕೊಂಡು ಮಾರಿದರು. ಬ್ರಿಟಿಷರ ತಂತ್ರದಿಂದ ಸೇವಕರು ಯಜಮಾನರಿಗೆ ಮೋಸಮಾಡಿದರು. ಸೈನ್ಯಗಳು ಯುದ್ಧದ ವೇಳೆಯಲ್ಲಿ ಪಕ್ಷಗಳನ್ನು ಬದಲಾಯಿಸಿದವು. ಯಾವು ಯಾವುದೋ ನೆಪಗಳಿಂದ ರಾಜ್ಯಗಳ ಮೇಲೆ ಯುದ್ಧಗಳನ್ನು ಹೂಡಿದರು. ಬ್ರಿಟಿಷರು ಭಾರತದಲ್ಲಿ ತಮ್ಮ ವ್ಯವಹಾರದಲ್ಲಿ ನ್ಯಾಯನೀತಿಗಳನ್ನೆಲ್ಲಾ ಕಟ್ಟಿ ಮೂಲೆಗಿಟ್ಟರು. ವಿಧವೆಯರು, ಮಕ್ಕಳುಗಳಿಗೆ ಸಹ ಯಾವ ನ್ಯಾಯವನ್ನೂ ತೋರಿಸಲಿಲ್ಲ. ಯುವಕರು ವೃದ್ಧರೂ ಎಲ್ಲರಿಗೂ ಒಂದೇ ಮಂತ್ರ ಹಾಕಿದರು. ಸಾಮ್ರಾಜ್ಯವನ್ನು ಸ್ಥಾಪಿಸುವುದ ಸಿಕ್ಕಿದುದನ್ನು ಲೂಟಿಮಾಡುವುದು ಇದೊಂದೇ ಅವರ ಗುರಿಯಾಯಿತು. ಈ ಗುರಿಯ ಸಾಧನೆಯ ಮಾರ್ಗದಲ್ಲಿ ಅಡ್ಡಬಂದುದೊಂದೂ ಉಳಿಯಲಿಲ್ಲ. ಮೇಲೆ ಹೇಳಿರುವುದಾವುದೂ ಅತಿಶಯೋಕ್ತಿಯಲ್ಲ.

ಬ್ರಿಟಿಷ್ ರಾಜತಂತ್ರ ಹೀಗೆ ಭಾರತದಲ್ಲಿ ಚಕ್ರಾಧಿಪತ್ಯವನ್ನು ಸ್ಥಾಪಿಸಿತು. ಅವರು ಹುಟ್ಟು ಸಾಮ್ರಾಜ್ಯವಾದಿಗಳು. ತಾವು ಅನುಸರಿಸಿದ ಮಾರ್ಗ, ಸರಿಯೇ ತಪ್ಪೇ ಎಂದು ಅವರು ಯೋಚಿಸಲೇ ಇಲ್ಲ. ನೀತಿವಂತರು ಪರದೇಶಗಳಲ್ಲಿ ಹೋಗಿ ಸಾಮ್ರಾಜ್ಯವನ್ನು ಸ್ಥಾಪಿಸುವುದು ಸಾಧ್ಯವಿಲ್ಲ. ಅನೀತಿವಂತರಾದ ಮೇಧಾವಿಗಳು, ಧೈರ್ಯಶಾಲಿಗಳು, ಸಮಯಾನುಸಾರಿಗಳು, ಮೋಸಮಾಡಲು ಇತರರನ್ನು ಹಿಂಸಿಸಲು ಹಿಂದು ಮುಂದು ನೋಡದವರು, ಕೊಟ್ಟ ವಾಗ್ದಾನ ನಂಬಿಕೆಗಳನ್ನು ಮುರಿಯಲು ಹೇಸದವರು, ಇಂತವರಿಂದ ಮಾತ್ರ ಸಾಮ್ರಾಜ್ಯ ಸ್ಥಾಪನೆ ಸಾಧ್ಯ. ನೆಪೋಲಿಯನ್ ಬಿಸ್ಮಾರ್ಕ್ ಡಿಸ್ರೆಲಿ

ರಿಚ್ಲು ಮೂಶಿಯುವೆಲಿ ಇವರು ಸಾಮ್ರಾಜ್ಯಗಳನ್ನು ಕಟ್ಟಬಲ್ಲರು. ಕ್ಲೈವ್ ಹೇಸ್ಟಿಂಗ್ಸ್ ವೆಲ್ಲೆಸ್ಲಿ ಡಾಲ್‌ಹೌಸಿಗಳು ಮಾತ್ರ ಸಾಮ್ರಾಜ್ಯವನ್ನು ಸ್ಥಾಪಿಸಬಲ್ಲರು. ಬರ್ಕ್‌ನಿಗೂ ಗ್ಲಾಡ್‌ಸ್ಟನ್‌ರಿಗೂ ಮಾರ್ಲೆಗಳಿಗೂ ಸಾಮ್ರಾಜ್ಯಸ್ಥಾಪನೆ ಸಾಧ್ಯವಾಗದು. ಆದರೆ ಕಾರ್ಯಸಾಧನೆಯಾದ ಮೇಲೆ ಅವರೂ ಅದನ್ನು ಒಪ್ಪಬಹುದು.

ಬ್ರಿಟಿಷರು ಭಾರತವನ್ನು ಜಯಿಸಿದುದು ಕತ್ತಿಯಿಂದಲ್ಲ. ಆಮೇಲೆ ಆಳಿದುದೂ ಕತ್ತಿಯಿಂದಲ್ಲ. ಅವರು ಕೆಲವರನ್ನು ಹೆದರಿಸಿದರು. ಕೆಲವರಿಗೆ ಆಸೆ ತೋರಿಸಿದರು. ಭಾರತೀಯರ ಒಳ್ಳೆಯತನ ಮತ್ತು ಔದಾರ್ಯದ ಲಾಭವನ್ನೂ ಮಾಡಿಕೊಂಡರು. ಅವರ ಆಚರಣೆಯು ಇತಿಹಾಸ ಪೂರ್ಣ ಹೊಲಸು. ಆದರೆ ಜಯಕ್ಕೇ ಜಯವಾಗುತ್ತಾ ಹೋಗುತ್ತದೆ. ನಮ್ಮ ಮಟ್ಟಿಗೆ ಅದೆಲ್ಲಾ ಹಿಂದಲ ಕತೆ. ಆದರೆ ಭಾರತದ ದೇಶಭಕ್ತರನ್ನು ಈ ಸರ್ಕಾರ "ಕಾನೂನಿನಿಂದ ಸ್ಥಾಪಿತವಾದ ಸರ್ಕಾರದ ವಿರೋಧಿಗಳು" ಎಂದು ನ್ಯಾಯಸ್ಥಾನದಲ್ಲಿ ವಿಚಾರಣೆ ಮಾಡುವಾಗ ನಮಗೆ ನಗುಬರುತ್ತದೆ. "ಯಾವ ಕಾನೂನು?" "ಆ ಕಾನೂನನ್ನು ಮಾಡಿದವರಾರು?" ಎಂದು ಕೇಳಬೇಕಾಗುತ್ತದೆ.

ಹತ್ತೊಂಭತ್ತನೆಯ ಶತಮಾನದ ಮೊದಲನೆಯ ರಾಜಕೀಯ ಚಳುವಳಿಯಾದ ೧೮೫೭ ರ ಸಿಪಾಯಿ ದಂಗೆಯನ್ನು ಕುರಿತು ಹೇಳಲು ಮೇಲಿನ ಮಾತುಗಳನ್ನು ತಂದೆವು. ಸಿಪಾಯಿ ದಂಗೆ ರಾಜಕೀಯವಾಗಿದ್ದಂತೆ ರಾಷ್ಟ್ರೀಯವೂ ಆಗಿದ್ದಿತು. ದಂಗೆಯ ಕಾರಣಗಳು ಅನೇಕವಾಗಿದ್ದವು. ಹಿಂದು ಮುಸಲ್ಮಾನರ ಐಕ್ಯ, ಶಿಸ್ತಿನ ವ್ಯವಸ್ಥೆ ದಂಗೆಕೋರರ ಧೈರ್ಯ ಮತ್ತು ಹಟಮಾರಿತನ, ದಂಗೆಕೋರರಲ್ಲಿ ಎಲ್ಲಿಯೂ ವಿಶ್ವಾಸಘಾತುಕತೆ ತೋರದುದು, ಇವುಗಳೆಲ್ಲ ಮೇಲಿನ ಸಿದ್ಧಾಂತವನ್ನೇ ಸ್ಪಷ್ಟಪಡಿಸುತ್ತವೆ.

ದಂಗೆಗೆ ಜಯವಾಗಲಿಲ್ಲ. ದಂಗೆಕೋರರು ಆಮೇಲೆ ರಾಜ್ಯದ ವ್ಯವಸ್ಥೆ ಸರಿಯಾಗಿ ಮಾಡುವರೆಂಬ ನಂಬಿಕೆ ಜನರಿಗೆ ಇರಲಿಲ್ಲ. ಬ್ರಿಟಿಷರನ್ನು ದೇಶದಿಂದ ಹೊರಡಿಸಿದನಂತರ ರಾಜ್ಯವ್ಯವಸ್ಥೆ ಮಾಡೋಣ ಎಂದು ದಂಗೆಕೋರರು ನಿಶ್ಚಯಿಸಿಕೊಂಡಿದ್ದರು; ಆದರೆ

ಜನರಿಗೆ ಆ ಸಹನೆ ಇರಲಿಲ್ಲ. ಹಿಂದಲ ಶತಮಾನದ ಹೋರಾಟ ಅನಾಯಕತ್ವಗಳಿಂದ ಜನರಿಗೆ ಬೇಸರಿಕೆಯಾಗಿದ್ದಿತು. ದಂಗೆಕೋರರಿಗೆ ಜಯವಾದರೆ ಮುಂದೆ ದೇಶದಲ್ಲಿ ಅನಾಯಕತ್ವವುಂಟಾಗಬಹುದೆಂದು ಜನ ಹೆದರಿದರು. ಭಾರತದ ರಾಜರೂ ಜನರೂ ಎಲ್ಲರೂ ಬ್ರಿಟಿಷರನ್ನು ದ್ವೇಷಿಸುತ್ತಿದ್ದರು. ಅವರಾರಿಗೂ ಬ್ರಿಟಿಷರಲ್ಲಿ ನಂಬಿಕೆ ಇರಲಿಲ್ಲ. ಆದರೆ ಭಾರತದ ರಾಜರನ್ನೂ ಜಮೀನುದಾರರನ್ನೂ ಧನಿಕರನ್ನೂ ಕಂಡರೆ ಭಾರತೀಯರಿಗೆ ಬ್ರಿಟಿಷರಲ್ಲಿ ಇದ್ದುದಕ್ಕಿಂತ ಹೆಚ್ಚು ದ್ವೇಷವಿದ್ದಂತೆ ಕಾಣುತ್ತದೆ. ಒಮ್ಮುಖವಾಗಿ ಸೇರಿ ಕೆಲಸ ಮಾಡಲು ಅವರಿಗೆ ಯಾವ ಮುಂದಾಳೂ ದೊರೆಯಲಿಲ್ಲ

ಬ್ರಿಟಿಷ್ ಸರ್ಕಾರದವರಿಗೆ ಶಿಪಾಯಿ ದಂಗೆಯನ್ನು ಅಡಗಿಸಲು ಸಾಧ್ಯವಾದುದೂ ಬ್ರಿಟಿಷ್‌ತಂತ್ರದಿಂದಲೇ. ಬ್ರಿಟಿಷರು ಸಿಖ್ಖರನ್ನು ತಮ್ಮ ಪಕ್ಷಕ್ಕೆ ಸೇರಿಸಿಕೊಂಡರು. ಸಿಖ್ಖರಿಗೆ ಮುಸಲ್ಮಾನರಿಂದ ಬಹಳ ಹಿಂಸೆಯಾಗಿದ್ದಿತು. ಮುಸಲ್ಮಾನರ ಪ್ರಾಬಲ್ಯ ಮತ್ತೆ ಸ್ಥಾಪನೆ ಯಾಗುವುದು ಸಿಖ್ಖರಿಗೆ ಇಷ್ಟವಿರಲಿಲ್ಲ. ಅವರು ತಮ್ಮ ಪೂರ್ಣ ಬಲವನ್ನು ಬ್ರಿಟಿಷರಿಗೆ ಕೊಟ್ಟರು. ಮುಸಲ್ಮಾನರನ್ನು ಮಟ್ಟಹಾಕುವುದರಿಂದ ಗುರತೇಜಸಿಂಗ್ ಗುರುಗೋವಿಂದ ಸಿಂಗರ ಮೇಲಿನ ಸೇಡನ್ನು ತೀರಿಸಿಕೊಂಡಂತಾಗುವುದೆಂದು ಬ್ರಿಟಿಷ್ ಸರ್ಕಾರ ಅವರಿಗೆ ಹೇಳಿದ ಮಾತನ್ನು ಅವರು ನಂಬಿದರು. ಹಿಂದೆ ಮುಸಲ್ಮಾನ ಅಧಿಕಾರ, ಗುರುಗೋವಿಂದ ಸಿಂಗನ ಇಬ್ಬರು ಚಿಕ್ಕ ಮಕ್ಕಳನ್ನು ಸಿರ್‌ಹಿಂಡ್ ಎಂಬಲ್ಲಿ ಚಿತ್ರಹಿಂಸೆ ಮಾಡಿ ಕೊಂದುದನ್ನು ಸಿಖರು ಮರೆತಿರಲಿಲ್ಲ. ಹೀಗೆ ಮುಸಲ್ಮಾನರು ಮತ್ತೆ ಭಾರತದಲ್ಲಿ ರಾಜ್ಯಸ್ಥಾಪಿಸುವ ಕೊನೆಯ ಅವಕಾಶ ನಾಶವಾಯಿತು.

ಸಿಪಾಯಿ ದಂಗೆಗೆ ಜಯವಾಗಲಿಲ್ಲ. ಆದರೆ ಅದರಿಂದ ಬ್ರಿಟಿಷರಲ್ಲಿ ಭಾರತೀಯರ ದ್ವೇಷ ಎಷ್ಟರಮಟ್ಟಿಗೆ ಇದ್ದಿತೆಂಬುದು ಗೊತ್ತಾಯಿತು. ಭಾರತೀಯರು ದಯಾರ್ದ್ರ ಹೃದಯರು, ಅವರು ಸಾಧಾರಣವಾಗಿ ಒಂದು ಇರುವೆಯನ್ನೂ ಹಿಂಸೆ ಮಾಡುವವರಲ್ಲ. ಆದರೆ ದಂಗೆಯಲ್ಲಿ ಕೆಲವು ಭಾರತೀಯರು ತುಂಬ ಕ್ರೌರ್ಯವನ್ನು ತೋರಿಸಿದರು.

ಬ್ರಿಟಿಷರೂ ಭಾರತೀಯರನ್ನು ಉಳಿಸಲಿಲ್ಲ. ದಂಗೆ ಮುಗಿದ ಮೇಲೆಯೂ ಅವರ ಹತ್ಯಾಕಾಂಡ ನಡೆಯಿತು. ಬ್ರಿಟಿಷರು ತಪ್ಪಿತಸ್ಥರನ್ನೂ ನಿರಪರಾಧಿಗಳನ್ನೂ ಒಂದೇ ಸಮನಾಗಿ ಕೊಂದರು. ಬ್ರಿಟಿಷ್ ಸಿಪಾಯಿಗಳು ದೇಶದಲ್ಲಿ ತಿರುಗುತ್ತಿರುವಾಗ ಕಣ್ಣಿಗೆ ಕಂಡ ಸ್ತ್ರೀ ಪುರುಷರನ್ನೂ ಮಕ್ಕಳನ್ನೂ ಚಿತ್ರಹಿಂಸೆಗೆ ಗುರಿಮಾಡಿದರು. ಕ್ರೌರ್ಯದಲ್ಲಿ ಎರಡು ಪಕ್ಷದವರೂ ಒಬ್ಬರನ್ನೊಬ್ಬರು ಮೀರಿಸಿದರು.

ಕ್ರೌರ್ಯಕೃತ್ಯಗಳು ನಡೆದ ಸ್ಥಳಗಳಲ್ಲಿ ಬ್ರಿಟಿಷರು ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ತಾವು ನಡೆಸಿದ ನೀಚತೆಗಳನ್ನು ಅವರು ಮರೆತಿರಬಹುದು. ಹಾಗೆಯೇ ಬ್ರಿಟಿಷರ ಕೈಯಲ್ಲಿ ಕ್ರೌರ್ಯವನ್ನು ಅನುಭವಿಸಿದವರ ವಂಶೀಕರೂ ಅವನ್ನೆಲ್ಲಾ ಮರೆತಿದ್ದಾರೆ ಇತಿಹಾಸ ಮರೆತಿಲ್ಲ.

ದಂಗೆ ನಡೆದ ಸ್ಥಳಗಳಿಗೆ ಇಂಗ್ಲಿಷ್ ಪ್ರವಾಸಿಗಳು ಹೋದರೆ ಅವರ ಮನಸ್ಸಿನ ಮೇಲೆ ಉಂಟಾಗುವ ಪರಿಣಾಮಗಳನ್ನು ಕುರಿತು ಔಟ್‌ಲುಕ್ ಎಂಬ ಇಂಗ್ಲಿಷ್ ಪತ್ರಿಕೆಯಲ್ಲಿ ಒಬ್ಬ ಆಂಗ್ಲೇಯರು ಹೀಗೆ ಹೇಳಿದರು. “ಕಾನ್ಪುರದಲ್ಲಿ ಕ್ಷಮೆಯ ಹೆಸರು ಇಲ್ಲ. ಬಾವಿಯ ಕಟ್ಟೆಯ ಮೇಲೆ ನಿಂತಿರುವ ದೇವತೆ ಸಹ ಕ್ರೂರವಾಗಿದೆ. ಅದರ ಮುಖದಲ್ಲಿ ದಯೆಯ ಚಿಹ್ನೆ ಇಲ್ಲ. ನಡೆದ ಕ್ರೌರ್ಯವನ್ನು ಕಾಲ ಮಾಯಿಸಲಾರದು. ಆ ದ್ವೇಷವನ್ನು ಅಳಿಸಲು ಕಾಲಕ್ಕೆ ಸಹ ಶಕ್ತಿ ಇಲ್ಲ. ದಂಗೆ ಕೋರರ ಮೇಲೆ ಇನ್ನೂ ಸೇಡು ತೀರಿಸಿಕೊಳ್ಳಬೇಕೆಂಬ ಭಾವ ಕಾನ್ಪುರವನ್ನು ನೋಡಿದವರಿಗೆ ಉಂಟಾಗುವುದು.”

ಇದೇ ತರಹ ಭಾವ ಭಾರತೀಯರಿಗೂ ಉಂಟಾಗುವುದೆಂದು ತಿಳಿಯದಿದ್ದಲ್ಲಿ ಅದು ಬ್ರಿಟಿಷರ ತಪ್ಪು. ತಮ್ಮ ಅಭಿಪ್ರಾಯಗಳನ್ನು ಬ್ರಿಟಿಷರು ಸರಾಗವಾಗಿ ಹೇಳಬಹುದು. ಭಾರತೀಯರಿಗೆ ಅದನ್ನು ಹೇಳಲೂ ಸ್ವಾತಂತ್ರ್ಯವಿಲ್ಲ.

ಕೇ ಮತ್ತು ಮಾಲೆಸ್ಸನ ಎಂಬುವರು ಭಾರತದ ದಂಗೆಯನ್ನು ಬ್ರಿಟಿಷರು ಅಡಗಿಸಿದುದನ್ನು ಕುರಿತು ಹೀಗೆ ಹೇಳಿದ್ದಾರೆ :—

“ದಂಗೆ ಕೋರರ ೫೫ ನೆಯ ರೆಜಿಮೆಂಟನ್ನು ಅವರು ನಮ್ಮೊಂದಿಗೆ ಕಾದುತ್ತಿರುವಾಗ ನಾವು ಹಿಡಿದೆವು. ಆದುದರಿಂದ ಅವರಿಗೆ ದಯೆ

ತೋರಿಸಬೇಕಾದುದಿಲ್ಲ. ಆದರೆ ನಿಧಾನವಾಗಿ ಯೋಚನೆ ಮಾಡಿದರೆ ಅವರನ್ನೆಲ್ಲಾ ಕೊಲ್ಲುವುದು ಸರಿಯಲ್ಲ. ಹಾಗೆ ಮಾಡಿದರೆ ದೇವರು ನಮ್ಮನ್ನು ಮೆಚ್ಚುವುದಿಲ್ಲ. ನೂರ ಇಪ್ಪತ್ತು ಜನರನ್ನು ಕೊಲ್ಲುವುದೆಂದರೆ ಅದು ಬಹಳ ಹೆಚ್ಚು. ಮೂವತ್ತು ಅಥವಾ ನಲವತ್ತು ಜನರನ್ನು ಕೊಂದರೆ ನಮ್ಮ ಗುರಿ ಸಾಧಿಸಿದಂತೆ. ಮರಣದಂಡನೆಗೆ ಆರಿಸುವವರ ಪೈಕಿ ನಡತೆ ಚೆನ್ನಾಗಿಲ್ಲದವರನ್ನೂ, ಜೋರಾದ ಆಸಾಮಿಗಳನ್ನೂ ಹೋರಾಟದಲ್ಲಿ ಮುಖಂಡರಾದವರನ್ನೂ, ದಂಗೆ ಪ್ರಾರಂಭವಾಗುವುದಕ್ಕೆ ಮುಂಚೆ ಅಧಿಕಾರಿಗಳಿಗೆ ಅವಿಧೇಯರಾದವರನ್ನೂ ಆರಿಸಬೇಕು. ಇದು ನಮ್ಮ ಮನಸ್ಸಿನಲ್ಲಿರುವ ಸಂಖ್ಯೆಯಷ್ಟಾಗದಿದ್ದರೆ ಆಗ ವಯಸ್ಸಾದ ಸಿಪಾಯಿಗಳನ್ನು ಆರಿಸಬೇಕು. ಇವರನ್ನು ಬಂದೂಕದಿಂದಲೋ ಫಿರಂಗಿಯಿಂದಲೋ ಸುಟ್ಟು ಭಸ್ಮಮಾಡಬೇಕು. ಉಳಿದವರಿಗೆ ಹತ್ತು ವರುಷ ಏಳು ವರುಷ ಒದು ವರುಷಗಳಂತೆ ಸಜಾ ವಿಧಿಸಬೇಕು."

"ಮಿಲಿಟರಿ ಕಾನೂನು ಜಾರಿಯಲ್ಲಿದೆ. ಲೆಜಿಸ್ಲೆಟಿವ್ ಕೌನ್ಸಿಲ್‌ನಲ್ಲಿ ಮಂಜೂರಾದ ರಕ್ತಕಾನೂನುಗಳು ಪೂರ್ಣ ಭರದಿಂದ ಕೆಲಸ ಮಾಡಿದವು. ಯೂರೊಪಿಯನ್ ಸಿಪಾಯಿಗಳೂ ಕೋರ್ಟು ನಡೆಸಿದರು ; ಸಿಪಾಯಿಗಳಲ್ಲದ ಯೂರೋಪಿಯನರೂ ಕೋರ್ಟು ನಡೆಸಿದರು. ಇವುಗಳೆಲ್ಲಾ ಸೇಡಿನ ಕೋರ್ಟುಗಳೇ. ವಿಚಾರಣೆ ಸಹ ಇಲ್ಲದೆ ಭಾರತದ ಸ್ತ್ರೀ ಪುರುಷರನ್ನೆಲ್ಲಾ ಕೊಲ್ಲುತ್ತಿದ್ದರು. ಸ್ವಲ್ಪ ಕಾಲದನಂತರ ರಕ್ತದ ದಾಹ ಇನ್ನೂ ಹೆಚ್ಚಾಯಿತು. ವಯಸ್ಸಾದವರು ಹೆಂಗಸರು ಮಕ್ಕಳು ದಂಗೆಗೆ ಸೇರಿದವರು, ಸೇರದವರು, ಎಲ್ಲರನ್ನೂ ಕೊಂದರು. ಅವರಲ್ಲಿ ಎಲ್ಲರನ್ನೂ ನೇಣುಹಾಕಲಿಲ್ಲ. ಊರುಗಳಿಗೆ ಬೆಂಕಿ ಹತ್ತಿಸಿ ಅಲ್ಲಿ ಬೇಯಿಸಿದರು. ಆಗಾಗ್ಗೆ ಬಂದೂಕದಿಂದ ಹೊಡೆದರು. "ಯಾರನ್ನೂ ಉಳಿಸಲಿಲ್ಲ ; ಕರಿಯವರನ್ನೆಲ್ಲಾ ಕೊಂದೆವು ; ಈ ನರಬೇಟೆಯನ್ನು ಆನಂದದಿಂದ ಅನುಭವಿಸಿದೆವು" ಎಂದು ಹೇಳಿಕೊಳ್ಳಲು ಬರೆಯಲು ಇಂಗ್ಲಿಷರಿಗೆ ನಾಚಿಕೆಯಾಗಲಿಲ್ಲ. ಮೂರು ತಿಂಗಳ ಕಾಲ ಎಂಟು ಗಾಡಿಗಳು ನಿತ್ಯಾ ಹೆಣಗಳನ್ನು ಸಾಗಿಸಿದವು. ಹೀಗೆ ಆರು ಸಾವಿರ ಜನರನ್ನು ಬ್ರಿಟಿಷ್ ಸಿಪಾಯಿಗಳು ಕೊಂದರು.

"ನಮ್ಮ ಬ್ರಿಟಿಷ್ ಅಧಿಕಾರಿಗಳು ಅಪರಾಧಿಗಳನ್ನು ಬೇಟೆಯಾಡುತ್ತಿದಾರೆ. ಎಲ್ಲಿ ಸಿಕ್ಕಿದರೆ ಅಲ್ಲಿ ನಾಯಿಗಳನ್ನು ನರಿಗಳನ್ನು ಕ್ರಿಮಿಕೀಟಗಳನ್ನು ಕೊಲ್ಲುವಂತೆ ನಿರ್ದಯದಿಂದ ನೇಣುಹಾಕುತ್ತಿದ್ದಾರೆ. ದಂಗೆ ಕೋರರನ್ನು ನಿರಾಯುಧರನ್ನಾಗಿ ಮಾಡಿದ ಪ್ರಾತಃಕಾಲ, ಮೊದಲು ಕಣ್ಣಿಗೆ ಬಿದ್ದುದು ಉದ್ದಕ್ಕೂ ಸಾಲುಸಾಲಾಗಿದ್ದ ಫಾಶಿ ಮರಗಳು. ಅನಂತರ ಮಿಲಿಟರಿ ಕೋರ್ಟು ಪ್ರಾರಂಭವಾಯಿತು. ಹುಡುಗರು ಮಕ್ಕಳೆನ್ನದೆ ನಿತ್ಯ ಅರವತ್ತು ಜನರಿಗೆ ಫಾಸಿ ಕೊಡತೊಡಗಿದರು. ಕೆಲವು ಸಣ್ಣ ಹುಡುಗರು ವಿನೋದಕ್ಕಾಗಿ ದಂಗೆ ಕೋರರ ಭಾವುಟವನ್ನು ಹಿಡಿದುಕೊಂಡು ತಮಟೆ ಹೊಡೆಯುತ್ತಾ ಬೀದಿಯಲ್ಲಿ ಹೋಗಿದ್ದರು. ಮಿಲಿಟರಿ ಕೋರ್ಟಿನವರು ಈ ಹುಡುಗರಿಗೆ ಮರಣ ದಂಡನೆ ವಿಧಿಸಿದರು. ಮಿಲಿಟರಿ ಕೋರ್ಟಿನ ಒಬ್ಬ ಬ್ರಿಟಿಷ್ ಅಧಿಕಾರಿಗೇ ಇದನ್ನು ಸಹಿಸುವುದು ಸಾಧ್ಯವಾಗಲಿಲ್ಲ. ಧೀರರು ಶತ್ರುಗಳ ಎದುರಿಗೆ ಕಾದುತ್ತಾರೆ. ನಿಶ್ಯಕ್ತರನ್ನೂ ನಿರಾಯುಧರನ್ನೂ ಕಂಡರೆ ಕನಿಕರ ಪಡುತ್ತಾರೆ. ಆ ಅಧಿಕಾರಿ ಮುಖ್ಯ ದಂಡನಾಯಕನಲ್ಲಿಗೆ ಹೋಗಿ ಕಣ್ಣಲ್ಲಿ ನೀರುತುಂಬಿಕೊಂಡು "ಈ ಹುಡುಗರಿಗೆ ಕೊಟ್ಟಿರುವ ಮರಣ ದಂಡನೆ ತಪ್ಪಿಸಿ" ಎಂದು ಬೇಡಿದ. ಮೇಲಧಿಕಾರಿಗೆ ಈತನ ದಯವೂ ಇರಲಿಲ್ಲ. ಈತನ ಶೌರ್ಯವೂ ಇರಲಿಲ್ಲ. ಹುಡುಗರಿಗೆ ದಯೆ ದೊರೆಯಲಿಲ್ಲ. ಅವರನ್ನು ನೇತುಹಾಕಿದರು. ಕೋರ್ಟು, ಎಂಬ ನಾಟಕವನ್ನಾಡಿ ಕೊಂದ ಸಂಖೆಗಿಂತ ನ್ಯಾಯ ವಿಚಾರಣೆಯಿಲ್ಲದೆ ಕೊಂದವರ ಸಂಖೆ ಅತಿ ಹೆಚ್ಚು. ಬಿಳಿಯ ಸಿಪಾಯಿಗಳು ಜಿಲ್ಲೆಗಳಲ್ಲಿ ಸ್ವಯಂ ಸೇವಕರಾಗಿ ತಿರುಗಿ ಸಿಕ್ಕ ಸಿಕ್ಕವರನ್ನು ನೇಣುಹಾಕಿದರು. ನೇಣು ಹಾಕುವುದನ್ನು ಕಲಿತುಕೊಳ್ಳಲು ಮುಂದಾಗಿ ಬಂದ ಬಿಳಿಯ ಸಿಪಾಯಿಗಳಿಗೂ ಕಡಿಮೆ ಇರಲಿಲ್ಲ. ಒಬ್ಬ ಆಂಗ್ಲೇಯನು, ಭಾರತೀಯರನ್ನು ಕೊಲ್ಲುವುದರಲ್ಲಿ ತಾನು ಬಹಳ ಕಲಾವಂತನೆಂದೂ ಮರಕ್ಕೆ 8 ರ ಆಕಾರದಲ್ಲಿ ಆನೆಯ ಮೇಲೆ ನಿಲ್ಲಿಸಿ ತೂಗಹಾಕಿ ಆನೆಯನ್ನು ಮುಂದಕ್ಕೆ ಹೊಡೆದರೆ ಸಾಕೆಂದೂ ತಾನು ಹೀಗೆ ಅನೇಕರನ್ನು ಕೊಂದಿರುವುದಾಗಿಯೂ, ಅದು ಬಹು ವಿನೋದವೆಂದೂ ಹೇಳಿಕೊಳ್ಳುತ್ತಾನೆ.

“ ವಿಚಾರಣೆಗೆ ಹೋಗುವ ಮುಂಚೆಯೇ ಅಧಿಕಾರಿಗಳು, ತಮ್ಮ ಮುಂದೆ ಬರುವ ಅಪಾದಿತರು, ತಪ್ಪಿತಸ್ಥರಾಗಲಿ ಇಲ್ಲದಿರಲಿ ಅವರನ್ನು ನೇತುಹಾಕುತ್ತೇವೆಂದು ಪ್ರತಿಜ್ಞೆ ಮಾಡುತ್ತಿದ್ದರು. ಹೀಗೆ ಅವಸರ ಅವಸರವಾಗಿ ಮರಣ ದಂಡನೆಗೆ ಗುರಿಯಾದವರನ್ನು, ಅವರ ಕೊಲೆಗೆ ಮುಂಚೆ ಬಿಳಿಯ ಸಿಪಾಯಿಗಳು ಹಿಂಸಿಸುತ್ತಿದ್ದರು. ಅಧಿಕಾರಿಗಳು ಇದನ್ನು ನೋಡುತ್ತಾ ಒಪ್ಪಿಕೊಂಡು ಕುಳಿತಿರುತ್ತಿದರು. ನಾವು ಯಾರ ಮೇಲೂ ಸೇಡುತೀರಿಸಿಕೊಳ್ಳದೆ ಬಿಡಲಿಲ್ಲ. ನಿಜವಾದ ಅಪ ರಾಧಿಗಳನ್ನೂ ಕೊಂದೆವು. ನಿರಪರಾಧಿಗಳಾದ ಮುದುಕರನ್ನೂ ಕೊಂದೆ ವು. ಮೊಗು ಎದೆಯ ಹಾಲನ್ನು ಹೀರುತ್ತಿರುವಾಗ ತಾಯಿಯನ್ನೂ ಕೊಂದೆವು. ಅಪರಾಧಿಗಳನ್ನು ಸಾಲಾಗಿ ನಿಲ್ಲಿಸಿ ಒಂದೊಂದೇ ಸಲಕ್ಕೆ ನೂರಾರು ಜನರಿಗೆ ಫಾಸಿಕೊಡುತ್ತಿದ್ದೆವು. ಅಪರಾಧಿಗಳ ಬಾಯಿಗೆ ಬಲಾತ್ಕಾರವಾಗಿ ಬಂದೂಕದ ಕತ್ತಿಯ ತುದಿಯಲ್ಲಿ ಗೋಮಾಂಸವನ್ನು ತುರುಕುತ್ತಿದ್ದೆವು. [History of the Sepoy war by Holmes.]

“ ಒಂದು ಪ್ರವಾಸ ನಮಗೆ ಒಳ್ಳೆ ಹಿತವಾಗಿದ್ದಿತು. ದೋಣಿಯ ಮೇಲೆ ಬಂದೂಕ ಏರಿಸಿ ನಾವು ನದಿಯಲ್ಲಿ ಹೊರಟೆವು. ಎರಡು ಕಡೆಗೂ ಬಂದೂಕ ಹಾರಿಸುತ್ತಾ ಹೋದೆವು. ನದಿಯ ಆಚೆ ದಡಕ್ಕೆ ಹೋದಮೇಲೆ ಸಿಕ್ಕ ಸಿಕ್ಕವರನ್ನು ಕೊಂದೆವು. ನನಗೆ ಅಷ್ಟು ರಕ್ತದಾಹ ವುಂಟಾಗಿದ್ದಿತು. ನಾವು ಎಡಗಡೆ ಬಲಗಡೆ ಬಂದೂಕ ಹಾರಿಸಿದೆವು. ಹಳ್ಳಿಯ ಮನೆಗಳು ಹತ್ತಿಕೊಂಡು ಉರಿ ಆಕಾಶಕ್ಕೆ ಎದ್ದಿತು. ಬೆಂಕಿಗೆ ಗಾಳಿ ಸೇರಿಕೊಂಡು ಉರಿ ಭಯಂಕರವಾಯಿತು. ಹೀಗೆ ದ್ರೋಹಿಗಳ ನ್ನೆಲ್ಲಾ ಕೊಂದೆವು. ಪ್ರತಿದಿನವೂ ಹೀಗೆ ಅನೇಕ ಅತೃಪ್ತ ಹಳ್ಳಿಗಳನ್ನು ಸುಡುತ್ತಿದ್ದೆವು. ನಮ್ಮ ಸೇಡನ್ನು ನಾವು ಪೂರ್ತಿ ತೆಗೆದುಕೊಂಡೆವು. ವಿಚಾರಣೆಗೆ ನನ್ನನ್ನು ಮುಖ್ಯಾಧಿಕಾರಿಯನ್ನಾಗಿ ಮಾಡಿದ್ದಾರೆ. ದಿನ ದಿನವೂ ಎಂಟು ಹತ್ತು ಜನರನ್ನು ನೇತುಹಾಕುತ್ತಿದ್ದೇವೆ. ಪ್ರಾಣಗಳು ನಮ್ಮ ಕೈಯ್ಯಲ್ಲಿ ಸಿಕ್ಕಿವೆ. ಅವುಗಳನ್ನು ನಾವು ಖಂಡಿತ ಉಳಿಸುವು ದಿಲ್ಲ. ವಿಚಾರಣೆ ಬರಿಯ ನೆಪ. ಸುಲಭವಾಗಿ ನೇಣಹಾಕುತೇವೆ.

ಮರದ ಕೆಳಗೆ ಗಾಡಿನಿಲ್ಲಿಸಿ ಕತ್ತಿಗೆ ಹಗ್ಗಹಾಕಿ ಕೊಂಬೆಗೆ ಕಟ್ಟುತ್ತೇವೆ. ಗಾಡಿ ಮುಂದಕ್ಕೆ ಹೋದಕೂಡಲೆ ಅವನು ನೇತುಬಿಳುತ್ತಾನೆ."

" ಪಂಜಾಬಿನಲ್ಲಿ ಅಜನಾಲ ಳಿಬ ಒಂದು ಸಣ್ಣದ್ವೀಪ. ಸಿಪಾಯಿಗಳು ತಮ್ಮನ್ನು ನಿರಾಯುಧರನ್ನಾಗಿ ಮಾಡಿ ಎಲ್ಲಿ ಕೊಲ್ಲುತ್ತಾರೋ ಎಂಬ ಭಯದಿಂದ ಸುಮ್ಮನೆ ಅವಿತುಕೊಂಡಿದ್ದರು. ಕೂಪರ್ ಎಂಬುವನು ಸೈನ್ಯವನ್ನು ತೆಗೆದುಕೊಂಡು ಹೋಗಿ ಅವರನ್ನೆಲ್ಲಾ ಸೆರೆಹಿಡಿದನು. ಅನಂತರ ಕೂಪರ್ ಅವರನ್ನೆಲ್ಲಾ ಅಜನಾಲ ಎಂಬಲ್ಲಿಗೆ ಕೊಂಡು ಹೋದನು. ಅವರ ಸಂಖೆ ೨೮೨. ಅನಂತರ ಅವರನ್ನು ಏನು ಮಾಡಬೇಕೆಂಬ ಪ್ರಶ್ನೆ ಬಂದಿತು. ವಿಚಾರಣೆಗಾಗಿ ಎಲ್ಲಿಗೂ ಅವರನ್ನು ಕರೆದುಕೊಂಡು ಹೋಗಲು ಸಾಧ್ಯವಿರಲಿಲ್ಲ. ಅವರನ್ನೆಲ್ಲಾ ಕೊಂದರೆ ಉಳಿದ ಕಡೆಯ ಸಿಪಾಯಿಗಳು ಹೆದರಿ ಓಡಿಬಿಡಬಹುದು. ಎಲ್ಲಾ ಸಿಪಾಯಿಗಳನ್ನೂ ಪೂರ್ಣವಾಗಿ ಕೊಲ್ಲಬೇಕೆಂದಿದ್ದ ಬ್ರಿಟಿಷರಿಗೆ ಒಬ್ಬನೂ ತಪ್ಪಿಸಿಕೊಂಡು ಹೋಗುವುದು ಇಷ್ಟವಿರಲಿಲ್ಲ. ಕೂಪರನು ಈ ೨೮೨ ಸಿಪಾಯಿಗಳನ್ನು ಕೊಲ್ಲಬೇಕೆಂದು ತೀರ್ಮಾನಿಸಿದನು. ಮರುದಿನ ಬೆಳಿಗ್ಗೆ ಒಂದೊಂದು ಸಲಕ್ಕೆ ಹತ್ತು ಹತ್ತು ಜನದಂತೆ ಸಿಪಾಯಿಗಳನ್ನು ಹೊರಗೆ ನಿಲ್ಲಿಸಿ ಕೂಪರನು ಅವರನ್ನೆಲ್ಲಾ ಸಿಖ್ಖರಕ್ಕೈಲಿ ಗುಂಡುಗಳಿಂದ ಹೊಡೆಸಿದನು. ಹೀಗೆ ಇನ್ನೂರು ಹದಿನಾರು ಜನರನ್ನು ಕೊಂದುದಾಯಿತು. ಉಳಿದವರನ್ನೆಲ್ಲಾ ಒಂದು ಕೊಠಡಿಯಲ್ಲಿ ಕೂಡಿದರು. ಬೆಳಿಗ್ಗೆ ಬಾಗಿಲು ತೆರೆದಾಗ 45 ಜನ ಉಸಿರು ಕಟ್ಟಿ ನೆಲದಲ್ಲಿ ಬಿದ್ದು ಸತ್ತಿದ್ದರು. ಕೂಪರನಿಗೆ ಗೊತ್ತಿಲ್ಲದಂತೆ ಕೊಠಡಿಯ ಕಿಟಕಿಯ ಬಾಗಿಲು ಮುಚ್ಚಿದ್ದುದರಿಂದ ಸೆರೆಯಾಳುಗಳಿಗೆ ಅದು ನಿಜವಾದ ಕತ್ತಲೆ ಕೋಣೆ (ಬ್ಲಾಕ್ ಹೋಲ್) ಆಯಿತು. ಉಳಿದ ಇಪತ್ತೊಂದು ಜನರನ್ನು ಹೊರಕ್ಕೆ ತಂದು ಕಟುಕ ಕೂಪರನು ಅವರನ್ನೂ ಕೊಲ್ಲಿಸಿದನು. ಕೂಪರ್ ಮಾಡಿದುದು ಕಟುಕತನ ಎಂದು ಕೆಲವು ಮೃದು ಹೃದಯದವರು ಹುಚ್ಚರಂತೆ ಕೂಗಿದರು. ಆದರೆ ರಾಬರ್ಟ್ ಮಾಂಟ್‌ಗಾಮರಿ ಎಂಬುವನು ಕೂಪರ್ ಮಾಡಿದುದೇ ಸರಿ ಎಂದು ಸಾಧಿಸಿದನು. [ಹೋಮ್ಸ್, ಮ್ಯೂಟಿನಿ ಪುಟ ೩೬೩]

"ಶತ್ರುಗಳೆಲ್ಲಾ ಮುಗಿದಮೇಲೆ ಭಯದಿಂದ ಚರ್ಚುಗಳಲ್ಲಿ ಸಹ ಅವಿತುಕೊಂಡಿದ್ದ ಸೇವಕರನ್ನೂ ನಿರಪರಾಧಿಗಳನ್ನೂ ಸಿಪಾಯಿಗಳು ಕೊಂದರು. ಹಿಂದೆ ಅವರು ಎಷ್ಟೇ ಸೇವೆ ಮಾಡಿರಲಿ, ನಂಬಿಕೆಗೆ ಅರ್ಹರಾಗಿದ್ದಿರಲಿ, ಅವರಾರನ್ನೂ ಬ್ರಿಟಿಷ್ ಸಿಪಾಯಿಗಳು ಉಳಿಸಲಿಲ್ಲ."

೫

ಹೀಗೆ ಸಿಪಾಯಿದಂಗೆ ಅಡಗಿತು. ದಂಗೆಯ ಮುಖಂಡರನ್ನು ಕೊಂದುದಾಯಿತು, ಮುಖಂಡರ ಜತೆಯಲ್ಲಿ ಈ ನೆಪದಿಂದ ಇತರರನ್ನೂ ಕೊಂದುದಾಯಿತು. ಎಲ್ಲರನ್ನೂ ಕೊಲ್ಲುವುದು ಯಾವ ಸರ್ಕಾರಕ್ಕೂ ಸಾಧ್ಯವಿಲ್ಲದುದರಿಂದ ಉಳಿದವರು ಉಳಿದುಕೊಂಡರು. ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಉಳಿದುಕೊಂಡಿತು. ಆದರೆ ಈಸ್ಟ್ ಇಂಡಿಯ ಕಂಪನಿ ಮುಗಿಯಿತು. ಬ್ರಿಟಿಷ್ ರಾಜರೇ ಭಾರತದ ಪೂರ್ಣಾಧಿಕಾರವನ್ನು ವಹಿಸಿಕೊಂಡರು. ವಿಕ್ಟೋರಿಯ ರಾಣಿಯವರ "ಔದಾರ್ಯ" ಘೋಷಣೆಯೊಂದಿಗೆ ಭಾರತದಲ್ಲಿ ವೈಸರಾಯ್ ಕ್ಯಾನಿಂಗ್‌ರ ಅಧಿಕಾರ ಪ್ರಾರಂಭವಾಯಿತು.

ಇಂಗ್ಲಿಷ್ ವಿದ್ಯಾವಂತರಾದ ಕೆಲವರು ಮಾತ್ರ ಬಂಗಾಳ ಮದರಾಸು ಬೊಂಬಾಯಿ ಪ್ರಾಂತ್ಯಗಳಲ್ಲಿದ್ದರು. ಅವರ ಸಂಖೆ ಅಲ್ಪವಾಗಿದ್ದಿತು. ದಂಗೆಯನಂತರದ "ಪುನರ್ನಿರ್ಮಾಣ ಕಾರ್ಯದಲ್ಲಿ" ಈ ವಿದ್ಯಾವಂತರಿಗೆ ಸರ್ಕಾರದಲ್ಲಿ ಒಳ್ಳೆಯ ಅವಕಾಶ ಸಿಕ್ಕಿತು. ಇಂಗ್ಲಿಷ್ ಕಲಿತವರು ಇಂಗ್ಲಿಷ್ ಬರದವರ ಮೇಲೆ ಅಧಿಕಾರಿಗಳಾದರು. ಸರ್ಕಾರಕ್ಕೆ ಇಂಗ್ಲಿಷ್ ಕನತವರನೇಕರು ಬೇಕಾಗಿದ್ದಿತು. ಇಂಗ್ಲಿಷ್ ಬಲ್ಲವರಿಗೆ ದೊಡ್ಡ ದೊಡ್ಡ ಸಂಬಳಗಳು ದೊರೆತವು. ಅವರು ತೃಪ್ತರೂ ಸುಖಿಗಳೂ ಆಗಿ ರಾಜಭಕ್ತಿಯುತರಾದರು. ಇಂಗ್ಲಿಷ್ ಬಲ್ಲ ಬಂಗಾಳಿಗಳು ದೇಶದಲ್ಲೆಲ್ಲಾ ನೌಕರರಾಗಿ ಶಾಂತಿಯನ್ನು ಸ್ಥಾಪಿಸುವುದರಲ್ಲಿ ಸಹಾಯಕರಾದರು. ಜನರಿಗೂ ಪ್ರಜೆಗಳಿಗೂ ಇಬ್ಬರಿಗೂ ಬಂಗಾಳಿಗಳಲ್ಲಿ ನಂಬಿಕೆಯುಂಟಾಯಿತು. ಬಂಗಾಳಿ ಭಾವನಾ ಪ್ರಧಾನ ಜೀವಿ. ಸರ್ಕಾರದಲ್ಲಿ ತನ್ನ ನೌಕರಿಯಿಂದ ಅವನಿಗೆ ಹೆಮ್ಮೆಯುಂಟಾಯಿತು. ಅವನ ಕೃತಜ್ಞ

ತೆಯೂ ರಾಜಭಕ್ತಿಯೂ ಅಸಾಧ್ಯವಾಯಿತು. ಬಂಗಾಳಿಗಳಲ್ಲಿ ಬ್ರಿಟಿಷ ರಿಗೆ ವಿಶ್ವಾಸವಿದ್ದಿತು. ಯಾಕೆಂದರೆ ಬಂಗಾಳಿಗಳು ಜಾಣರೂ ತೀಕ್ಷ್ಣ ಬುದ್ಧಿಯುಳ್ಳವರೂ ವಿವೇಕಿಗಳೂ ಆಗಿದ್ದರು. ಸಂತೋಷದಿಂದ ಸೇವೆ ಮಾಡುತ್ತಿದ್ದರು. ಬಂಗಾಳಿಗಳು ಬ್ರಿಟಿಷ್ ಅಧಿಕಾರಿಗಳ ಬುದ್ಧಿಯ ಕೆಲಸದ ಬಹುಭಾಗವನ್ನು ತಾವು ಮಾಡಿ, ಆ ಅಧಿಕಾರಿಗಳಿಗೆ ಆಟ ವಿನೋದಗಳಿಗೆ ಬೇಕಾದಂತೆ ಅವಕಾಶ ಕಲ್ಪಿಸಿಕೊಡುತ್ತಿದ್ದರು. ಅನೇಕ ಇಲಾಖೆಗಳ ಆಡಳಿತ " ಬಂಗಾಳಿ ಬಾಬು "ವಿನಿಂದಲೇ ನಡೆಯು ತ್ತಿದ್ದಿತು. ಬಂಗಾಳಿ ಬಾಬುವು ಫರಂಗಿಯುವರನ್ನು ಪೂಜಿಸುತ್ತಿದ್ದನು. ಫರಂಗಿಯುವರ ರುಚಿಗಳನ್ನೂ ಅಭ್ಯಾಸ ಪದ್ಧತಿಗಳನ್ನೂ ಅನುಸರಿಸು ತ್ತಿದ್ದನು. ಇಂಗ್ಲಿಷ್‌ರ ಜೀವನಕ್ರಮು. ಅವರ ಪದ್ಧತಿಗಳೇ, ಬಂಗಾಳಿ ಬಾಬುವಿನ ಆದರ್ಶಗಳಾದವು. ನಿಧಾನವಾಗಿ ಇಂಗ್ಲಿಷ್ ಸಾಹಿತ್ಯ ಅವನಿಗೆ ಬಹು ಪ್ರಿಯವಾಯಿತು. ಅವನೂ ಇಂಗ್ಲೀಷಿನವರಂತೆಯೇ ಆಲೋಚಿಸತೊಡಗಿದನು. ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗೂ ಇಂಡಿಯನ್ ಮೆಡಿಕಲ್ ಸರ್ವಿಸ್‌ಗೂ ಇತರ ಪರೀಕ್ಷೆಗಳಿಗೂ ಮಕ್ಕಳನ್ನು ಬಂಗಾಳಿಗಳು ಮೊದಲು ಇಂಗ್ಲೆಂಡಿಗೆ ಕಳುಹಿಸತೊಡಗಿದರು. ಇಂಗ್ಲಿಷ್ ಕಾನೂನಿನಲ್ಲಿ ಬಂಗಾಳಿಗಳೂ ಪಾರಸಿಗಳೂ ಮೊದಲು ಬ್ಯಾರಿಸ್ಟರ್ ಗಳಾದರು. ಇಂಗ್ಲೆಂಡಿನಲ್ಲಿ ಇವರು ಸ್ವಾತಂತ್ರ್ಯದ ವಾತಾವರಣದಲ್ಲಿ ಬೆಳೆ ದರು. ತಿನ್ನುವುದಕ್ಕೆ ಕುಡಿಯುವುದಕ್ಕೆ ಸ್ವಾತಂತ್ರ್ಯವುಂಟಾದಂತೆ ಯೋಚಿಸುವ ಮತ್ತು ಮನಸ್ಸಿನ ಅಭಿಪ್ರಾಯಗಳನ್ನು ನಿರ್ಭಯವಾಗಿ ಹೇಳುವ ಸ್ವಾತಂತ್ರ್ಯವನ್ನು ಸಹ ಅವರು ಕಲಿತರು.

ಬಂಗಾಳಿಗಳ ಒಂದು ತಲೆಮಾರಿನವರು ಹೀಗೆ ಪೂರ್ತಿ ಆಂಗ್ಲೇ ಯರೇ ಆದರು. ಹಿಂದೂ ಮತದಲ್ಲಿ ಅವರಿಗೆ ತಿರಸ್ಕಾರವಿದ್ದಿತು. ಭಾರತೀಯರನ್ನು ಕಂಡರೆ ಅವರು ಮೂಗು ಮುರಿಯುತ್ತಿದ್ದರು ಭಾರ ತದ ಪ್ರಾಚೀನ ವೈಭವ ಅವರಿಗೆ ಏನೂ ಗೊತ್ತಾಗಲೇ ಇಲ್ಲ. " ಸಾಹೇಬ " ರಾಗುವುದೇ ಪರಮ ಪುರುಷಾರ್ಥವೆಂದು ಅವರು ಭಾವಿ ಸಿದರು. ಕೆಲವರು ಕ್ರಿಸ್ತರಾದರು. ಈ ಹುಚ್ಚನ್ನು ನೋಡಿ ರಾಮ ಮೋಹನ್ ರಾಯ್ ಮತ್ತು ಇನ್ನೂ ಕೆಲವು ಸುಧಾರಕರು ಎಚ್ಚರಿಕೆಯ

ಧ್ವನಿ ಎತ್ತಿದರು. ಅವರಿಗೆ ಮೊದ ಮೊದಲು ಜಯವಾಗಲಿಲ್ಲ. ಇಂಗ್ಲಿಷ್ ಕಲಿತರೂ ಅವರ ಪ್ರಯತ್ನದ ಫಲವಾಗಿ ಅನೇಕ ಬಂಗಾಳಿಗಳು ಹಿಂದೂ ಧರ್ಮವನ್ನು ಬಿಡಲಿಲ್ಲ. ಹಿಂದು ಧರ್ಮ ಬಹಳ ಸುಧಾರಣೆ ಯಾಗಬೇಕೆಂಬುದು ಅವರಿಗೆ ತಿಳಿಯಿತು. ಆದರೆ ಈ ಪರಾನುಕರಣ ದಿಂದ ಪ್ರಯೋಜನವಿಲ್ಲವೆಂದು ಅವರು ತೀರ್ಮಾನಿಸಿದರು. ಆಧುನಿಕ ವಂಗ ಸಾಹಿತ್ಯಕ್ಕೆ ಆ ವಿವೇಕಿಗಳೇ ಮೂಲಪುರುಷರು. ಇಂಗ್ಲಿಷ್ ಭಾಷೆಯ ಅಭ್ಯಾಸದಿಂದ ದೊರೆತ ಜ್ಞಾನವನ್ನು ಅವರು ತಮ್ಮ ಭಾಷೆಯ ಅಭಿವೃದ್ಧಿಗೆ ಉಪಯೋಗಿಸತೊಡಗಿದರು. ಹೊಸ ಹೊಸ ಪದಗಳಿಗಾಗಿ ಸಂಸ್ಕೃತ ಭಾಷೆಯ ಅಭ್ಯಾಸಕ್ಕೆ ತೊಡಗಿದರು. ಆಧುನಿಕ ಭಾರತ ನಿರ್ಮಾಪಕರಲ್ಲಿ ರಾಮಮೋಹನ್‌ರಾಯರದು ಮೊದಲನೆಯ ಸ್ಥಾನ.

ಬಂಗಾಳಿಗಳಿಗೆ ಸರ್ಕಾರದಲ್ಲಿ ದೊರೆಯುತ್ತಿದ್ದ ಹುದ್ದೆಯಿಂದ, ಅವರ ಅತೃಪ್ತಿ ಬೆಳೆಯಲು ಸಹಾಯವಾಗಲಿಲ್ಲ. ಅವರು ತೃಪ್ತರಾಗಿ ದ್ದರು. ಕೃತಜ್ಞರಾಗಿದ್ದರು. ಸರ್ಕಾರಕ್ಕೆ ಬಂಗಾಳಿಗಳು ಇಲ್ಲದಿದ್ದರೆ ಆಗುವಂತೆಯೇ ಇರಲಿಲ್ಲ. ವಿದ್ಯಾಇಲಾಖೆ, ಸರ್ವೆಇಲಾಖೆ, ಸಿಪಾಯಿಗಳ ಕ್ಯಾಂಪು ರೆವಿನ್ಯು ಇಲಾಖೆ ಎಲ್ಲಿ ನೋಡಿದರೂ ಬಂಗಾಳಿಗಳದೇ ಪ್ರಾಬಲ್ಯವಾಗಿದ್ದಿತು. ಮೇಲಧಿಕಾರಿಗಳು ಇಂಗ್ಲಿಷಿನವರಾದರೂ ಆಡಳಿತಾಧಿಕಾರಿಗಳು ಬಂಗಾಳಿಗಳಾಗಿದ್ದರು. ಬಂಗಾಳಿಗಳಿಲ್ಲದಿದ್ದರೆ ಇಂಗ್ಲಿಷರಿಗೆ ಆಗುವಂತೆಯೇ ಇರಲಿಲ್ಲ. ಇಂಗ್ಲಿಷರಿಗೆ ಭಾರತೀಯರ ಭಾಷೆಗಳಾಗಲಿ ಸ್ವಭಾವವಾಗಲಿ ತಿಳಿದಿರಲಿಲ್ಲ. ಇಂಗ್ಲಿಷ್ ಭಾಷೆ ಭಾರತದಲ್ಲಿ ಪ್ರಚಾರವಾದ ಕೂಡಲೇ ಅದನ್ನು ಮೊದಲು ಕಲಿತವರು ಹೀಗೆ ಬಹಳ ಪ್ರಬಲರಾದರು. ಹಳೆಯ ಕಾಲದ ಮೌಲ್ವಿಗಳೂ ಪಂಡಿತರೂ ಅರ್ಧ ಹೊಟ್ಟೆಗೆ ಸಾಯುತ್ತಿರುವಾಗ ಇಂಗ್ಲಿಷ ಕಲಿತ ಹಿಂದು ಮುಸಲ್ಮಾನರು ಮಾತ್ರ ತೃಪ್ತರಾಗಿ ಸುಖವಾಗಿದ್ದರು. ಬ್ರಿಟಿಷರು ಆಡಳಿತ ನೀತಿಗಳನ್ನು ನಿರ್ಣಯಿಸಿ ಅಪ್ಪಣೆಗಳನ್ನು ಮಾಡುತ್ತಿದ್ದರು. ಇಂಗ್ಲಿಷ್ ಕಲಿತ ಭಾರತೀಯರು ಆ ಅಪ್ಪಣೆಗಳನ್ನು ಜಾರಿಮಾಡುತ್ತಿದ್ದರು. ಹೀಗೆ ಇಂಗ್ಲಿಷ್ ಬಲ್ಲ ಭಾರತೀಯರು ಇಂಗ್ಲಿಷರ ವಿಶ್ವಾಸಕ್ಕೆ ಪಾತ್ರರಾಗಿ, ಅವರ ದುರ್ಗಣಗಳನ್ನು ಅನುಕರಿಸುತ್ತಿದ್ದರು.

ಇದರಲ್ಲಿ ಒಂದು ಸಂಗತಿ ಮುಖ್ಯವಾದುದು. ಭಾರತೀಯರು ತಮ್ಮ ಇಂಗ್ಲಿಷ್ ಯಜಮಾನರಂತೆಯೇ ಯೋಚಿಸತೊಡಗಿದರು. ಇಂಗ್ಲಿಷರು ವರ್ತಮಾನ ಪತ್ರಿಕೆಗಳನ್ನು ಓದುತ್ತಿದ್ದರು. ಭಾರತೀಯರೂ ಪತ್ರಿಕೆಗಳನ್ನು ಪ್ರಾರಂಭಿಸಿದರು. ಇಂಗ್ಲಿಷರು ಚರ್ಚುಗಳಲ್ಲಿಯೂ ಕ್ಲಬ್‌ಗಳಲ್ಲಿಯೂ ಸೇರುತ್ತಿದ್ದರು. ಆದುದರಿಂದ ಭಾರತೀಯರೂ ಸಮಾಜಗಳನ್ನೂ ಸಭೆಗಳನ್ನೂ ಚರ್ಚಾ ಸಂಘಗಳನ್ನೂ ಪ್ರಾರಂಭಿಸಿದರು. ಇಂಗ್ಲಿಷರನ್ನು ಅನುಸರಿಸುವುದೇ ತಮ್ಮ ಹೆಮ್ಮೆ ಎಂದು ಭಾರತೀಯರು ಕೆಲವು ಕಾಲ ಭಾವಿಸಿದರು. ಭಾರತೀಯರು ಇಂಗ್ಲಿಷರ ಉಡುಪು ಇಂಗ್ಲಿಷರ ಚುಟ್ಟ ಹೊಗೆಕೊಳವೆ ದನಗಳ ಮಾಂಸದ ತಿಂಡಿ ಇವುಗಳನ್ನೂ ಅನುಕರಿಸಿದರು. ಇಂಗ್ಲಿಷಿನವರ ಮನೆಗಳಂತೆ ಮನೆಗಳನ್ನು ಕಟ್ಟಿಸಿ ಕುರ್ಚಿ ಮೇಜುಗಳನ್ನು ಪ್ರಾರಂಭಿಸಿದರು. ಭಾರತದ್ದು ಯಾವುದೂ ಭಾರತೀಯನಿಗೆ ಒಪ್ಪಿಗೆಯಾಗಲಿಲ್ಲ. "ಭಾರತೀಯರು ಅನಾಗರೀಕರು ಅವರ ಧರ್ಮ ಮೂಢನಂಬಿಕೆ ಅವರು ಕೊಳಕರು, ಅವರ ಪದ್ಧತಿಗಳು ಅನಾಗರೀಕ. ಮನುಷ್ಯ ಸ್ವತಂತ್ರನೆಂಬ ಭಾವವೇ ಅವರಿಗೆ ಅಪರಿಚಿತ ಎಲ್ಲಾದರಲ್ಲಿಯೂ ನಮಗೆ ಇಂಗ್ಲಿಷರೇ ಮೇಲುಪಂಗ್ತಿ. ಇಂಗ್ಲಿಷರು ಸ್ವತಂತ್ರರಾಗಿ ಆಲೋಚಿಸುತ್ತಾರೆ. ನಾವೂ ಹಾಗೆಯೇ ಮಾಡಬೇಕು. ಅವರು ಚರ್ಚಿಗೆ ಹೋಗಿ ಬೈಬಲ್ ಓದುತ್ತಾರೆ. ನಾವೂ ಹಾಗೆಯೇ ಮಾಡಬೇಕು." ಹೀಗೆ ಇಂಗ್ಲಿಷ್ ಕಲಿತ ಭಾರತೀಯರು ಎಲ್ಲದರಲ್ಲಿಯೂ ಇಂಗ್ಲಿಷರಂತೆ ಇರಲು ಪ್ರಯತ್ನಿಸಿದರು. ಆದರೆ ಅವರ ಈ ಆಸೆಗೂ ಒಂದು ತಡೆ ಬಂದಿತು. "ನೀವು ಬೇಕಾದಂತೆ ಕುಡಿಯಬಹುದು, ಬೇಕಾದಂತೆ ಆಲೋಚಿಸಬಹುದು. ಆದರೆ ರಾಜ್ಯದ ಆಡಳಿತದಲ್ಲಿ ನಿಮಗೆ ಹೆಚ್ಚು ಭಾಗವಿಲ್ಲ" ಎಂದರು ಇಂಗ್ಲಿಷರು. ಕೆಲವು ಭಾರತೀಯರು ತಮ್ಮ ಮಕ್ಕಳಾದರೂ ಆಳುವವರಾಗಲಿ ಎಂದು ಅವರನ್ನು ಇಂಗ್ಲೆಂಡಿಗೆ ಕಳುಹಿಸಿ ಸಿವಿಲ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿಸಿದರು. ಆಗ ಅವರಿಗೆ ಒಂದು ಹೊಸ ಅನುಭವವುಂಟಾಯಿತು. "ತಾವು ಎಷ್ಟೇ ಬುದ್ಧಿವಂತರಾಗಿರಲಿ, ತಮ್ಮ ಶಕ್ತಿ ಎಷ್ಟೇ ಹೆಚ್ಚಾಗಿರಲಿ, ತಾವು ಕ್ರಿಸ್ತರಾಗಿರಲಿ ಅಥವ ಕ್ರಿಸ್ತರಲ್ಲದವರಾಗಲಿ

ತಮ್ಮ ಆಸೆ ಮತ್ತು ಸಾಧನೆಗೆ ಒಂದು ತಡೆಯುಂಟು. ತಾವು ಭಾರತೀಯರಾದುದರಿಂದ ಅದರಿಂದ ಆಚೆಹೋಗಲು ತಮಗೆ ಸಾಧ್ಯವಿಲ್ಲ." ಈ ಅವಮಾನಕರವಾದ ಅನುಭವ ಮೊದಲು ಭಾರತೀಯರ ಕಣ್ಣನ್ನು ತೆರೆಯಿತು.

ಈ ಮಧ್ಯೆ ಇಂಗ್ಲಿಷ್ ಪದ್ಧತಿಯ ಅನುಕರಣದಲ್ಲಿ ನಿರತರಾಗಿದ್ದ ವಿವೇಕಿಗಳಾದ ಭಾರತೀಯರು ಪರಿಸ್ಥಿತಿಯನ್ನು ಎಚ್ಚರಿಕೆಯಿಂದ ಅವಲೋಕಿಸುತ್ತಿದ್ದರು. ಭಾರತ ರಾಷ್ಟ್ರವಿಘಾತಕ ಶಕ್ತಿಗಳು ಕೆಲಸ ಮಾಡುತ್ತಿರುವುದು ಅವರ ಕಣ್ಣಿಗೆ ಬಿದ್ದಿತು. ಭಾರತ ರಾಷ್ಟ್ರೀತೆಯ ಕಟ್ಟಡ ಇಟ್ಟಿಗೆ ಇಟ್ಟಿಗೆಯಾಗಿ ಕೆಳಕ್ಕೆ ಬೀಳುತ್ತಿದ್ದಿತು. ಭಾರತ ಸಂಸ್ಕೃತಿಯಲ್ಲಿ ಪವಿತ್ರವಾದುದು ಎಲ್ಲ ಅವರ ಕಣ್ಣೆದುರಿಗೇ ನಾಶವಾಗಿ ಬೂದಿಯಾಗುತ್ತಿದ್ದಿತು. ಸಹಸ್ರಾರು ವರುಷಗಳಿಂದ ಪೂಜಿಸಿ ಗೌರವಿಸಿದ್ದ ಭಾರತವನ್ನು ಅವರ ಮಕ್ಕಳೇ ತಿರಸ್ಕರಿಸ ತೊಡಗಿದ್ದರು. ಅವರ ಕಣ್ಣುಗಳಲ್ಲಿ ನೀರು ಬಂದಿತು; ಅವರ ಕಣ್ಣುಗಳಲ್ಲಿ ರಕ್ತ ಬಂದಿತು. ಆದರೆ ಅವರಿಂದ ಏನುಮಾಡಲೂ ಸಾಧ್ಯವಿರಲಿಲ್ಲ. ಹೊಸ ಪ್ರವಾಹದ ಎದುರಿಗೆ ಅವರು ನಿಶ್ಶಕ್ತರಾಗಿದ್ದರು. ಅವರು ಯಾವ ಯಾವುದೋ ಸಣ್ಣ ಸಣ್ಣ ಪ್ರತೀಕಾರ ಮಾರ್ಗಗಳನ್ನು ಪ್ರಯತ್ನಿಸಿದರು. ಯಾವುದೂ ಫಲಕಾರಿಯಾಗಲಿಲ್ಲ. ಇಂಗ್ಲಿಷ್ ವಿದ್ಯೆಯ ಫಲವಾಗಿ ದೊರೆಯುತ್ತಿದ್ದ ಅಧಿಕಾರ ಪ್ರತಿಷ್ಠೆಗಳನ್ನು ತಿರಸ್ಕರಿಸುವುದು ಅವರಿಂದ ಸಹ ಸಾಧ್ಯವಾಗಲಿಲ್ಲ ಮುಳ್ಳುಗಳಿಲ್ಲದೆ ಹಣ್ಣು ಬೇಕೆಂದು ಅವರು ಬಯಸಿದರು. ಅದು ಸಾಧ್ಯವಿರಲಿಲ್ಲವಾಗಿ, ಈ ಅತೃಪ್ತಿಯನ್ನು ಬಿಟ್ಟು ಅವರು ಪರಿಸ್ಥಿತಿಗೆ ಹೊಂದಿಕೊಂಡು ಸುಮ್ಮನಾದರು. ಆದರೆ ಅವರ ಆಸೆ ಕೆಲವು ಪರಿಸ್ಥಿತಿಗಳ ಸಂಮಿಳನದಿಂದ ತಾನಾಗಿಯೇ ಈಡೇರಿತು.

ಸ್ಕೂಲುಗಳಲ್ಲಿಯೂ ಕಾಲೇಜುಗಳಲ್ಲಿಯೂ ವಿದ್ಯಾರ್ಥಿಗಳಿಗೆ ದೊರೆಯುತ್ತಿದ್ದ ಶಿಕ್ಷಣದಿಂದ ಪ್ರಾಶ್ಚಾತ್ಯ ಜ್ಞಾನಭಂಡಾರ ಭಾರತೀಯರಿಗೆ ಲಭ್ಯವಾಯಿತು ; ಇದರಿಂದ ಭಾರತೀಯರಲ್ಲಿ ಸ್ವಾತಂತ್ರ್ಯಾಭಿಲಾಷೆ ಹೆಚ್ಚುಹೆಚ್ಚು ಪ್ರಕಾಶಿಸಲು ಪ್ರಾರಂಭವಾಯಿತು. ಕ್ರಿಸ್ತ ಪಾದ್ರಿಗಳು ಭಾರತ ಧರ್ಮವನ್ನೂ ಸಂಸ್ಕೃತಿಯನ್ನೂ ಅತಿ ತಿರಸ್ಕಾರವಾಗಿ ಅವಹೇ

ಳನಾವಮಾಡಿದುದರಿಂದ, ತಮ್ಮ ಧರ್ಮವನ್ನು ಕುರಿತು ಭಾರತೀಯರು ಆಳವಾಗಿ ಯೋಚಿಸತೊಡಗಿದರು. ಯೂರೋಪಿನ ವಿದ್ವಾಂಸರು ಭಾರತದ ಭಾಷೆ ಸಂಸ್ಕೃತಿಗಳನ್ನು ಅಧ್ಯಯನ ಮಾಡಿ ಇವುಗಳ ಮಹತ್ವವನ್ನು ಎತ್ತಿ ತೋರಿಸಿದುದರಿಂದ ಭಾರತೀಯರಿಗೂ ತಮ್ಮ ಸಂಸ್ಕೃತಿಯಲ್ಲಿ ಅಭಿಮಾನ ಹೆಚ್ಚಾಯಿತು. ರಾಮಮೋಹನ್‌ರಾಯ್, ದೇವೇಂದ್ರ ನಾಥ ಠಾಕೂರ್, ಸೈಯದ್‌ಅಹಮದ್ ಖಾನ್ ರಾಜೇಂದ್ರಲಾಲ್ ಮಿತ್ರ, ರಾನಡೆ; ವಿಷ್ಣುಪಂತ್, ಸ್ವಾಮಿ ದಯಾನಂದ ಅನಿಬೆಸೆಂಟ್ ಸ್ವಾಮಿ ವಿವೇಕಾನಂದ ಮುಂತಾದವರ ಜೀವನ ಕೃತಿಗಳು ಭಾರತೀಯರಿಗೆ ತಮ್ಮ ವೈಭವವನ್ನು ಕಣ್ಣು ತೆರೆದು ತೋರಿಸಿದವು. ಈ ಚಳುವಳಿಗಳಿಂದ ಜನಿತವಾದ ರಾಷ್ಟ್ರಭಾವನಾ ಶಕ್ತಿಗಳು, ರಾಜಕೀಯ ಅತೃಪ್ತಿಯೊಡನೆ ಸೇರಿದವು. ಇಂಗ್ಲಿಷ್ ವಿದ್ಯಾವಂತರಾದ ಭಾರತೀಯರಿಗೂ ಅತೃಪ್ತಿಯುಂಟಾಗಿದ್ದಿತು. ಸಿವಿಲ್ ಸರ್ವಿಸ್‌ನಲ್ಲಿ ಭಾರತೀಯರಿಗೆ ಜಯವಾದುದನ್ನು ನೋಡಿ ಬ್ರಿಟಿಷರು ಗಾಬರಿಯಿಂದ ಅವರನ್ನು ಆ ಪರೀಕ್ಷೆಯಿಂದಲೇ ಹೊರಗರಿಸಲು ಪ್ರಯತ್ನಿಸಿದರು. ಅದುವರೆಗೆ ಸಿವಿಲ್ ಸರ್ವಿಸಿಗೆ ಇಪ್ಪತ್ತೊಂದು ವರುಷ ವಯಸ್ಸಿದ್ದುದನ್ನು ೧೯ ಮಾಡಿದರು. ಅಷ್ಟು ಚಿಕ್ಕ ವಯಸ್ಸಿನ ವೇಳೆಗೆ ಭಾರತೀಯರು ಸೀಮೆಗೆ ಹೋಗಿ ವ್ಯಾಸಂಗಮಾಡಿ ಸಿವಿಲ್ ಸರ್ವಿಸ್ ಪರೀಕ್ಷೆಗೆ ಕೂರಲಾರರೆಂಬುದೇ ಇಂಡಿಯಾ ಸರ್ಕಾರದ ಆಸೆಯಾಗಿತ್ತು. ಇದರಿಂದ ಬಂಗಾಳದ ಜನರು ತುಂಬ ಅತೃಪ್ತರಾದರು. ಆ ವೇಳೆಗೆ ಲಾರ್ಡ್ ಲಿಟನ್ ರವರ ದೇಶಿಯ ಭಾಷಾ ಪ್ರೆಸ್ ಕಾನೂನು ಜಾರಿಗೆ ಬಂದಿತು. ಲ್ಯಾಂಕ್‌ಶೈರ್‌ನ ವ್ಯಾಪಾರಿಗಳ ಲಾಭಕ್ಕಾಗಿ ಹತ್ತಿಯ ಮೇಲಣ ಸುಂಕದ ಕಾನೂನಾಯಿತು. ಇಂಗ್ಲಿಷ್ ವಿದ್ಯಾವಂತರಾದ ಭಾರತೀಯರು ಈ ಕಾನೂನುಗಳಿಗೆ ವಿರೋಧವಾದ ರಾಜಕೀಯ ಚಳುವಳಿಯನ್ನು ಪ್ರಾರಂಭಿಸಿದರು. "ನಮ್ಮನ್ನು ನಾವೇ ಆಳಿಕೊಳ್ಳುತ್ತೇವೆ" ಎಂಬ ಮಾತುಗಳು ಭಾರತದಲ್ಲಿ ಸ್ಪಷ್ಟವಾಗಿ ಕೇಳತೊಡಗಿದವು.

ಹೀಗೆ ಭಾರತದಲ್ಲಿ ರಾಷ್ಟ್ರಜೀವನದ ತಳಹದಿ ಎದ್ದಿತು. ಪಾಶ್ಚಾತ್ಯರ ಸಂಪರ್ಕದಿಂದ ಉಂಟಾದ ಆಧುನಿಕ ನಾಗರೀಕತೆಯೂ ಈ ಜಾಗ್ರ

ತಿಗೆ ಬಹುಮಟ್ಟಿಗೆ ಸಹಾಯಕವಾಯಿತು. ಅನಂತರ ವೈಸರಾಯರಾಗಿ ಬಂದ ಲಾರ್ಡ್ ರಿಪ್ಪನ್ ಒಳ್ಳೆಯವರು. ಅವರ ಹಿಂದಿನ ಲಾರ್ಡ್ ಲಿಟ್ಟನ್ ಪಕ್ಕಾ ಟೋರಿ. ಇಂಗ್ಲೆಂಡಿನ ಮುಖ್ಯ ಮಂತ್ರಿ ಡಿಸರೆಲಿಯವರ ಬೋಧನೆಯಿಂದ ಲಾರ್ಡ್ ಲಿಟ್ಟನರು ಅವರವರಿಗೆ ಮಿತ್ರರಾಗಿದ್ದ ದೇಶೀಯ ರಾಜರನ್ನು ಅಧೀನರಾಜರನ್ನಾಗಿ ಮಾಡಿಬಿಟ್ಟರು. ದೇಶೀಯ ಭಾಷಾ ಪ್ರೆಸ್ ಕಾನೂನಿನಿಂದ ದೇಶಭಾಷೆಗಳನ್ನು ಮಟ್ಟಹಾಕಿದರು. ಅನವಶ್ಯಕವಾದ ಆಫಘನ್ ಯುದ್ಧದಲ್ಲಿ ತೊಡಗಿ ದೇಶದಲ್ಲಿ ಕ್ಷೋಭೆ ಯುಂಟುಮಾಡಿದರು. ರಿಪ್ಪನ್ ವೈಸರಾಯರಾದ ಮೇಲೆ ಲಾರ್ಡ್ ಲಿಟ್ಟನ್ ಮಾಡಿದ್ದ ಅನ್ಯಾಯಗಳನ್ನು ಒಂದೊಂದಾಗಿ ಸರಿಮಾಡ ತೊಡಗಿದರು. ಎಲ್ಲದಕ್ಕಿಂತ ಮುಖ್ಯವಾಗಿ ನ್ಯಾಯ ವಿಚಾರಣೆಯಲ್ಲಿ ಯೂರೋಪಿಯನ್‌ರಿಗೂ ಭಾರತೀಯರಿಗೂ ಇದ್ದ ವ್ಯತ್ಯಾಸವನ್ನು ಅವರು ತೆಗೆದುಹಾಕಿದರು. ನ್ಯಾಯದ ದೃಷ್ಟಿಯಲ್ಲಿ ಇಬ್ಬರೂ ಒಂದೇ ಎಂದು ತೀರ್ಮಾನಿಸಿದರು.

ಇದರಿಂದ ಆಂಗ್ಲೋ ಇಂಡಿಯನ್ ಅಧಿಕಾರಿಗಳು ರೇಗಿಬಿದ್ದರು. ಅವರು ರಿಪ್ಪನ್‌ನ ಎಲ್ಲಾ ಕಾನೂನುಗಳನ್ನೂ ಪ್ರತಿಭಟಿಸಿದರು. ಭಾರತದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆ ಮೂರ್ಖತನವೆಂದರು ಅವರು. "ಇದು ಕಾರ್ಯಕಾರಿಯಾಗುವುದಿಲ್ಲ. ರಿಪನ್‌ರಿಗೆ ವಿವೇಕವಿಲ್ಲ" ಎಂದರು. "ಭಾರತೀಯರಿಗೆ ತಮ್ಮನ್ನು ತಾವು ಆಳಿಕೊಳ್ಳುವ ಶಕ್ತಿ ಇಲ್ಲ. ಅವರಲ್ಲಿ ಜಾತಿಗಳು ಹೆಚ್ಚು. ಸಾಮಾಜಿಕ ಅನೈಕ್ಯತೆ" ಎಂದರು. ಪೈಪೋಟಿ ಪರೀಕ್ಷೆಯಲ್ಲಿ ಗೆದ್ದ ಭಾರತೀಯರಿಗೆ ಅಧಿಕಾರ ಕೊಡಬೇಕೆಂಬುದನ್ನು ಆಂಗ್ಲರು ಒಪ್ಪಲಿಲ್ಲ. ಏಕೆಂದರೆ ಭಾರತೀಯರೇ ಪರೀಕ್ಷೆಯಲ್ಲಿ ಗೆಲ್ಲುವರೆಂಬುದು ಅವರ ನಂಬಿಕೆಯಾಗಿದ್ದಿತು. ರಿಪನ್ ಮಾಡಿದುದರಲ್ಲೆಲ್ಲಾ ಅಧಿಕಾರಿಗಳ ದೃಷ್ಟಿಯಲ್ಲಿ ಹೆಚ್ಚು ತಪ್ಪು ಇಲ್‌ಬರ್ಟ್‌ಬಿಲ್ ಎಂಬ ಕಾನೂನು. ಈ ಕಾನೂನುರೀತ್ಯಾ "ಭಾರತೀಯರೂ ಆಂಗ್ಲೇಯರೂ ನ್ಯಾಯದ ಎದುರಿಗೆ ಸಮ. ಭಾರತೀಯ ನ್ಯಾಯಾಧಿಪತಿಗಳು ಆಂಗ್ಲೇಯರನ್ನು ವಿಚಾರಣೆ ಮಾಡಿ ನ್ಯಾಯತೀರ್ಮಾನ ಮಾಡಬಹುದು" ಎಂಬುದೇ ಆಗಿದ್ದಿತು. ನ್ಯಾಯಪ್ರಿಯರಾದ ಆಂಗ್ಲೋ ಇಂಡಿಯನ್‌ರು

ಇದನ್ನು ಒಪ್ಪಲಿಲ್ಲ. “ನಮ್ಮನ್ನು ವಿಚಾರಿಸುವವನು ನೀಗ್ರೋವೆ? ನೀಗ್ರೋ ನಮ್ಮನ್ನು ಜೈಲಿಗೆ ಕಳುಹಿಸುವುದೆ? ಇದು ನಡೆಯುತಕ್ಕದಲ್ಲ. ಈ ಅವಮಾನಕ್ಕೆ ನಾವು ಒಳಗಾಗುವುದಕ್ಕಿಂತ, ಭಾರತದಲ್ಲಿ ಬ್ರಿಟಿಷರ ಅಧಿಕಾರ ಕೊನೆಗೊಳ್ಳುವುದು ಮೇಲು” ಎಂದರು. ಆಗ ಭಾರತದಲ್ಲಿ ಆಂಗ್ಲೋ ಇಂಡಿಯನರು ಲಾರ್ಡ್ ರಿಪನ್‌ರನ್ನು ಬೈದು ತಿರಸ್ಕರಿಸಿದಷ್ಟು ಮತ್ತಾವ ವೈಸರಾಯನ್ನೂ ಅವನ ದೇಶದವರು ದೂಷಿಸಲಿಲ್ಲ. ಆಂಗ್ಲೋ ಇಂಡಿಯನ್‌ರು, ರಿಪನ್‌ರ ಆಡಳಿತವನ್ನು ಪೂರ್ಣವಾಗಿ ಖಂಡಿಸುವ ಠರಾವು ಮಾಡಿದರು. ಇನ್ನೂ ನಾನಾ ವಿಧದಲ್ಲಿ ರಿಪನ್‌ರಿಗೆ ಕಿರುಕುಳ ಕೊಟ್ಟರು.

೬

ಭಾರತೀಯರಿಗೆ ರಿಪನ್‌ನಲ್ಲಿ ವಿಶ್ವಾಸವುಂಟಾಯಿತು. ಆದರೆ ಯಾವ ಸುಧಾರಣೆಯಿಂದ ರಿಪನ್‌ನಲ್ಲಿ ಆಂಗ್ಲೇಯರಿಗೂ ದ್ವೇಷವುಂಟಾಗಿದ್ದಿತೋ ಆ ಸುಧಾರಣೆಯನ್ನು ಸರ್ಕಾರ ನಡೆಸುಗೊಡಲಿಲ್ಲ. ರಿಪನ್‌ರ ನಂತರ ಹಾರ್ಡಿಂಜ್ ಬಂದರು. ಅನಂತರ ಡಫ್ರಿನ್ ಬಂದರು. ಡಫ್ರಿನರ ಕಾಲದಲ್ಲಿಯೇ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸ್ಥಾಪನೆಯಾಯಿತು. ೧೮೮೩ ರಲ್ಲಿ ಹೂವರ್‌ನವರು ಕಲ್ಕತ್ತ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ ಕೊಟ್ಟ ಭಾಷಣದಲ್ಲಿ ಹೀಗೆ ಹೇಳಿದರು. “ನೀವು ಈ ದೇಶದ ಬೆನ್ನುಮೂಳೆ. ನಿಮ್ಮಲ್ಲಿ ೫೦ ಜನರಾದರೂ ನಿಮ್ಮ ದೇಶದಲ್ಲಿ ಹೆಮ್ಮೆಯುಳ್ಳವರಾಗಿ ತ್ಯಾಗಿಗಳಾಗಿ ನಿಮ್ಮ ದೇಶದ ಏಳಿಗೆಗೆ ಸೊಂಟ ಕಟ್ಟಿ ನಿಲ್ಲದಿದ್ದರೆ ಇನ್ನು ಭಾರತಕ್ಕೆ ಏಳಿಗೆ ಇಲ್ಲ. ಅಂತಹ ತ್ಯಾಗಿಗಳು ನಿಮ್ಮಲ್ಲಿ ದೊರೆಯದಿದ್ದರೆ ಆಗ ಭಾರತವು ನಿರ್ಜೀವವಾಗಿ ಪರಕೀಯರ ಕೈಯ್ಯಲ್ಲಿಯೇ ಉಳಿಯುವುದು. ನಿಮ್ಮ ಮುಖಂಡರು ದೇಶದ ಸ್ವಾತಂತ್ರ್ಯಕ್ಕಾಗಿ ವೈಯುಕ್ತಿಕ ವ್ಯತ್ಯಾಸಗಳನ್ನು ಬಿಟ್ಟು ಹೋರಾಡದವರಾದರೆ ಆಗಲೂ ನೀವು ಗುಲಾಮರಾಗಿರಲು ಅರ್ಹರು. ನಿಮಗೆ ಯಾವ ಹೆಚ್ಚು ಪದವಿಗೂ ಅರ್ಹತೆಯಿಲ್ಲ. ಪ್ರತಿಯೊಂದು ರಾಷ್ಟ್ರಕ್ಕೂ ಅದಕ್ಕೆ ಅರ್ಹ

ವಾದ ಸರ್ಕಾರ ದೊರೆಯುತ್ತದೆ. ದೇಶದಲ್ಲಿ ಬುದ್ಧಿವಂತರೆನ್ನಿಸಿಕೊಂಡ ನೀವು ಸ್ವಾರ್ಥಗಳನ್ನು ಮೂಲೆಗೊತ್ತಿ ಸ್ವಾತಂತ್ರಕ್ಕಾಗಿ ಹೋರಾಡಲು ಸಿದ್ಧರಿಲ್ಲದಿದ್ದಲ್ಲಿ, ನಿಮ್ಮ ಪ್ರತಿಕಕ್ಷಿಗಳ ಅಭಿಪ್ರಾಯವೆ ಸರಿ ಎಂದಾಯಿತು ಭಾರತಕ್ಕೆ ಸ್ವಾತಂತ್ರದ ಆಸೆಯೂ ಇಲ್ಲ. ಅರ್ಹತೆಯೂ ಇಲ್ಲ ಎಂದಾಯಿತು. ಈಗ ನಿಮಗೆ ಇರುವ ಸರ್ಕಾರವೇ ನಾಕು. ಹಾಗಾದಮೇಲೆ ನಿಮಗೆ ಸ್ವಾತಂತ್ರ್ಯವಿಲ್ಲವೆಂದು ಇನ್ನು ಮೇಲೆ ಹೇಳೀರಿ ಈ ತ್ಯಾಗವಿಲ್ಲದ ಅಸಮಾಧಾನದಿಂದ ಪ್ರಯೋಜನವಿಲ್ಲ. ಹೇಗೆ ಕೆಲಸಮಾಡಬೇಕೆಂಬುದು ಧೀರರಿಗೆ ಗೊತ್ತು. ನಿಮ್ಮ ದೇಶದಲ್ಲಿ ಇಂಗ್ಲಿಷಿನವರಿಗೆ ದೊಡ್ಡ ಹುದ್ದೆಗಳು ಸಿಕ್ಕುತ್ತಿವೆ ಎಂದು ಇನ್ನು ಗೊಣಗಬೇಡಿ ಅವರು ದೇಶಭಕ್ತಿಯುಳ್ಳವರಾಗಿ ಧೀರರಾದುದರಿಂದ ನಿಮ್ಮ ರಾಜರಾಗಿದ್ದಾರೆ. ವ್ಯಕ್ತಿಗೇ ಆಗಲಿ ರಾಷ್ಟ್ರಕ್ಕೇ ಆಗಲಿ ತ್ಯಾಗ ಮತ್ತು ಧೈರ್ಯದಿಂದ ಮಾತ್ರ ಸ್ವಾತಂತ್ರವೂ ಸುಖವೂ ಉಂಟಾಗುವುದೆಂಬ ಶಾಶ್ವತವಾದ ಸತ್ಯ ನಿಮಗೆ ತಿಳಿಯುವವರೆಗೆ ಇಂಗ್ಲಿಷರೇ ನಿಮ್ಮ ರಾಜರಾಗಿರುತ್ತಾರೆ."

ಹ್ಯೂಮ್‌ರಿಗೆ ಭಾರತೀಯರಲ್ಲಿ ವಿಶ್ವಾಸವಿದ್ದಿತು. ಭಾರತದ ದಾರಿದ್ರ್ಯ, ದುಃಖ ಇವನ್ನು ಒಳ್ಳೆಯ ಸರ್ಕಾರ ಹೋಗಲಾಡಿಸಬಹುದೆಂದು ಅವರು ನಂಬಿದ್ದರು. ಇಂಗ್ಲಿಷ್ ಅಧಿಕಾರಿಗಳು ಭಾರತದಲ್ಲಿ ನಡೆಸುತ್ತಿದ್ದ ಉದ್ಧತತನ ಹೇಡಿತನ ಕಂಡು ಅವರಿಗೆ ತಮ್ಮ ದೇಶದವರಲ್ಲಿಯೇ ತಿರಸ್ಕಾರವುಂಟಾಯಿತು. ಸರ್ಕಾರ ಮಾಡುತ್ತಿದ್ದ ಅನ್ಯಾಯಗಳೆಲ್ಲಾ ಅವರಿಗೆ ಚೆನ್ನಾಗಿ ಗೊತ್ತಾಗಿದ್ದವು. ಭಾರತ ಸ್ವಾತಂತ್ರ್ಯಕ್ಕಾಗಿ ಭಾರತೀಯರು ಹೋರಾಡಬೇಕು ಎಂಬುದೇ ಹೂಮ್‌ರ ಬೋಧನೆಯಾಯಿತು.

ಆದರೆ ಸರ್ಕಾರ ಸುಮ್ಮನಿರಲಿಲ್ಲ. ಕಾಂಗ್ರೆಸ್‌ಗೆ ಜನ ಬಲವಿಲ್ಲ ಎಂದು ಡಫ್ರಿನ್ ಹಾಸ್ಯಮಾಡಿದರು. ಸರ್ ಆಕ್‌ಲಾಂಡ್ ಕಾಲ್ವಿನ್‌ರು ತುರುಕರನ್ನು ಎತ್ತಿ ಕಟ್ಟಿದರು. ಕಾಂಗ್ರೆಸ್ ಅರ್ಜಿದಾರರ ಕೂಟವಾಗಿಯೇ ೧೯೦೫ ವರೆಗೆ ನಡೆಯಿತು. ೧೯೦೬ ರಲ್ಲಿ ಕಲ್ಕತ್ತ ಕಾಂಗ್ರೆಸ್‌ನಲ್ಲಿ ದಾದಾಭಾಯಿನವರೋಜಿಯವರು ಸ್ವರಾಜ್ಯವೆಂಬ ಪದವನ್ನು

ಉಪಯೋಗಿಸಿದರು. ಅದೇ ಭಾರತದಲ್ಲಿ ಸ್ವರಾಜ್ಯ ಚಳುವಳಿಯ ಪ್ರಾರಂಭವೆನ್ನಬಹುದು. ೧೯೦೭ ರಲ್ಲಿ ಸೂರತ್‌ನಲ್ಲಿ ಕಾಂಗ್ರೆಸ್ ತೀವ್ರವಾದಿಗಳು ಸಾಮ್ಯವಾದಿಗಳ ಆಟ ನಾಗಗೊಡಲಿಲ್ಲ. ಹಿಂದೊಂದು ಸಲ ಸಾಮ್ಯವಾದಿಗಳು ಜನರ ಉತ್ಸಾಹವನ್ನು ತಣ್ಣಗೆ ಮಾಡಿದ್ದರು. ಅಲ್ಲಿಂದ ಮುಂದೆ ಸಾಮ್ಯವಾದಿಗಳ ಆಟ ನಾಗಲಿಲ್ಲ.

ಕಾಂಗ್ರೆಸ್ಸಿಗೆ ನವಚೈತನ್ಯವೂ ತೇಜಸ್ಸೂ ಉಂಟಾಗಲು ಬಂಗಾಳದ ವಿಭಜನೆಯೇ ಕಾರಣವಾಯಿತು ೧೯೦೫ನೆಯ ಇಸವಿ ಅಕ್ಟೋಬರ್ ೧೬ರಲ್ಲಿ ಲಾರ್ಡ್ ಕರ್ಜನರು ಬಂಗಾಳವನ್ನು ವಿಭಾಗಿಸಿದರು. ಅದು ಭಾರತದಲ್ಲಿ ಶೋಕದ ದಿನವಾಯಿತು. ಆ ದಿನ ವಂಗದೇಶದಲ್ಲಿ ಯಾರೂ ಒಲೆ ಹತ್ತಿಸಲಿಲ್ಲ. ಪರಿಶುದ್ಧರಾಗಿ ನದಿ ಕೆರೆಗಳಲ್ಲಿ ಸ್ನಾನಮಾಡಿ ಒಬ್ಬರಿಗೊಬ್ಬರು ರಖಿಯನ್ನು ಬಂಧಿಸಿದರು. ಅದಕ್ಕೆ ಮುಂಚೆಯೇ ಕಲ್ಕತ್ತದ ಪ್ರಚಂಡ ಸಭೆಯಲ್ಲಿ ಬ್ರಿಟಿಷ್ ವಸ್ತುಗಳಿಗೆ ಬಹಿಷ್ಕಾರದ ಠರಾವು ಅಂಗೀಕರಿಸಲ್ಪಟ್ಟಿದ್ದಿತು.

ವಂಗ ವಿಭಜನೆ ರದ್ದಾಗುವವರೆಗೆ ಮಾತ್ರವೇ ಬ್ರಿಟಿಷ್ ವಸ್ತುಗಳಿಗೆ ಬಹಿಷ್ಕಾರ ಎಂಬುದನ್ನು ಜನ ಒಪ್ಪಲಿಲ್ಲ. ಬಹಿಷ್ಕಾರ, ಎಂದೆಂದಿಗೂ ಬಹಿಷ್ಕಾರ ಎಂದರು. ಇದರ ಪ್ರಾರಂಭದ ಗುರಿ, ಬ್ರಿಟಿಷ್ ವ್ಯಾಪಾರಿಗಳಿಗೆ ನಷ್ಟವನ್ನುಂಟುಮಾಡಿ ಅವರು ಬಂಗಾಳದ ವಿಭಜನೆ ರದ್ದಾಗಲು ಸಹಾಯಕರಾಗುವಂತೆ ಮಾಡುವುದಾಗಿದ್ದಿತು. ಅದರೆ ಸ್ವಲ್ಪ ಕಾಲದೊಳಗೆ, ಬಹಿಷ್ಕಾರವು ದೇಶದ ಆರ್ಥಿಕ ರೋಗಕ್ಕೆ ಸರಿಯಾದ ಮದ್ದು ಎಂಬುದು ಜನರಿಗೆ ಸ್ಪಷ್ಟವಾಯಿತು. ಪ್ರತಿ ವರುಷವೂ ಕಲ್ಕತ್ತದಿಂದ ಮಾಂಚೆಸ್ಟರಿಗೆ ಅಕ್ಟೋಬರ್ ೧೬ನೇ ತಾರೀಖು ದೊಡ್ಡ ದೊಡ್ಡ "ಆರ್ಡರ್" ಗಳು ಹೋಗುವ ವಾಡಿಕೆ. ಆ ದಿನ ಏನೂ ನಡೆಯಲೇ ಇಲ್ಲ. ಮಾಂಚೆಸ್ಟರ್ ಮಿಲ್‌ಗಳ ಏಜೆಂಟರುಗಳು ತಣ್ಣಗೆ ಕುಳಿತರು. ಭಾರತೀಯರ ಕೈಗಾರಿಕೆಗಳು ಬೆಳೆಯತೊಡಗಿದವು. ಕೈ ಮಗ್ಗದ ಗಿರಾಕಿ ಹೆಚ್ಚಾಯಿತು, ವಂಗದೇಶದಲ್ಲಿ ಧನಿಕರು ಬಡವರು ಎಲ್ಲರೂ ಈ ಚಳುವಳಿಯಲ್ಲಿ ಪೂರ್ಣವಾಗಿ ಭಾಗಿಗಳಾದರು. ಕಲ್ಕತ್ತದ ಒಂದು ಆಂಗ್ಲೋ ಇಂಡಿಯನ್ ಪತ್ರಿಕೆ ಹೀಗೆ ಬರೆಯಿತು "ಕಲ್ಕತ್ತ ಅಂಗಡಿ

ಗಳಲ್ಲಿ ಇಂಗ್ಲಿಷ್ ಪದಾರ್ಥಗಳು ತುಂಬಿವೆ. ಪರದೇಶದಿಂದ ಬಟ್ಟೆ ತರಿಸುತ್ತಿದ್ದ ಮಾರವಾಡಿ ಅಂಗಡಿಗಳು ದಿವಾಳಿಯಾಗಿವೆ. ದೊಡ್ಡ ದೊಡ್ಡ ಇಂಗ್ಲಿಷ್ ವರ್ತಕರು ಕೆಲಸವಿಲ್ಲದೆ ಕುಳಿತಿದ್ದಾರೆ. ಹಡಗಿನಲ್ಲಿ ಬಂದು ಇಳಿದಿರುವ ಸಾಮಾನುಗಳನ್ನು ವರ್ತಕರು ತೆಗೆದುಕೊಳ್ಳುವಂತೆ ಇಲ್ಲ ಈ ಸಂಗತಿಗಳು ಎಲ್ಲರಿಗೂ ತಿಳಿದಿವೆ. ಇನ್ನು ಮುಚ್ಚಿ ಪ್ರಯೋಜನವಿಲ್ಲ. ಈ ಬಹಿಷ್ಕಾರದಿಂದ ಇಂಗ್ಲಿಷ್ ವ್ಯಾಪಾರ ಪೂರ್ಣ ಕೆಟ್ಟಿದೆ ಎಂಬುದನ್ನು ಇಂಗ್ಲಿಷ್ ಜನರಿಗೆ ತಿಳಿಸುವ ಕಾಲ ಬಂದಿದೆ. ಬಹಿಷ್ಕಾರದಲ್ಲಿ ಬ್ರಿಟಿಷ್ ರಾಜರ ಶತ್ರುಗಳಿಗೆ ಒಳ್ಳೆಯ ಅಸ್ತ್ರ ದೊರೆತಿದೆ. ಇದು ಬ್ರಿಟಿಷ್ ಸರ್ಕಾರಕ್ಕೂ ಭಾರತ ಸರ್ಕಾರಕ್ಕೂ ತಿಳಿಯಬೇಕು." ಇಂಗ್ಲಿಷ್‌ಮನ್ ಪತ್ರಿಕೆ ಹೀಗೆ ಬರೆಯಿತು "ಈಗ ಇರುವ ಪ್ರಶ್ನೆ ಸರ್ಕಾರ ಈಗ ಮಾಡಬೇಕಾದುದೇನು? ಎಂಬುದು. ಬಹಿಷ್ಕಾರ ಮುಂದುವರಿಯಲು ಅವಕಾಶ ಕೊಡಕೂಡದು. ಕೊಟ್ಟಲ್ಲಿ ಸಶಸ್ತ್ರವಾದ ದಂಗೆಯಿಂದ ಬ್ರಿಟಿಷ್ ಅಧಿಕಾರ ಭಾರತದಲ್ಲಿ ಕೊನೆಗಾಣುವಂತೆ ಇದರಿಂದಲೂ ಕೊನೆಗಾಣುವುದು."

ವಿದ್ಯಾರ್ಥಿಗಳು ಶಾಂತವಾಗಿ ಅಂಗಡಿಗಳನ್ನು ಪಿಕೆಟ್ ಮಾಡಿದರು. ಅವರು ಜನರನ್ನು ಹೆದರಿಸಲಿಲ್ಲ, ಗದ್ದಲಮಾಡಲಿಲ್ಲ, ಹಿಂಸಿಸಲಿಲ್ಲ. ಎಲ್ಲವೂ ಅಹಿಂಸಾಮಯವಾಗಿ ನಡೆಯಿತು. ವಿದ್ಯಾರ್ಥಿಗಳು ಚಳುವಳಿಯಲ್ಲಿ ಭಾಗವಹಿಸಕೂಡದೆಂದು ಸರ್ಕಾರ ಅಪ್ಪಣೆಮಾಡಿತು ಆಗ ಬಂಗಾಳದಲ್ಲಿ ರಾಷ್ಟ್ರೀಯ ಶಿಕ್ಷಣ ಪ್ರಾರಂಭವಾಯಿತು. ಆಗ ಶ್ರೀ ಅರವಿಂದಘೋಷರು ಚಳುವಳಿಯಲ್ಲಿ ದುಮುಕಿದರು ಕುದುರೆ ಸವಾರಿಯಲ್ಲಿ ಇವರು ಪ್ರವೀಣರಾಗದುದರಿಂದ ಇವರು ಇಂಡಿಯನ್ ಸಿವಿಲ್ ಸರ್ವಿಸ್‌ನಲ್ಲಿ ತೇರ್ಗಡೆ ಹೊಂದಲಿಲ್ಲ. ಭಾರತೀಯರ ವಿದ್ಯಾವ್ಯವಸ್ಥೆ ಭಾರತೀಯರ ಕೈಲಿ ಇದ್ದರೆ ಅದು ಹೇಗೆ ರಾಷ್ಟ್ರೀಯ ಮುಖವಾಗುತ್ತದೆ ಎಂಬುದಕ್ಕೆ ಬಂಗಾಳಾ ರಾಷ್ಟ್ರೀಯ ವಿದ್ಯಾಸಂಸ್ಥೆಯೇ ಉದಾಹರಣೆಯಾಯಿತು. ಆ ವಿದ್ಯಾಭ್ಯಾಸದ ಏರ್ಪಾಡಿನಲ್ಲಿ ವಿಜ್ಞಾನ ಕೈಗಾರಿಕೆ ಶಿಕ್ಷಣ ಸಾಹಿತ್ಯಾಭ್ಯಾಸಗಳಿಗೆ ಬೇಕಾದಂತೆ ಅವಕಾಶವಿದ್ದಿತು. ಇಂಗ್ಲಿಷು ತತ್‌ಕ್ಷಣ ದ್ವಿತೀಯ ಭಾಷೆ ಎನಿಸಿಸು. ಸಂಸ್ಕೃತ ಉರ್ದು

ಅರಾಬಿಕ್ ಪರ್ಶಿಯನ್ ಎಲ್ಲಾ ಪ್ರಾಮುಖ್ಯವಾದವು

ಬಹಿಷ್ಕಾರ ಬಹು ಯಶಸ್ವಿಯಾಯಿತು. ಪೂರ್ವ ಬಂಗಾಳದ ನಗರದ ಅಂಗಡಿಗಳಲ್ಲಿ ಕಲೆಕ್ಟರಿಗೂ ಪೋಲೀಸ್ ಮುಖ್ಯಾಧಿಕಾರಿಗಳಿಗೂ ಒಂದು ಗಜ ಮ್ಯಾಂಚೆಸ್ಟರ್ ಬಟ್ಟೆ ದೊರೆಯಲಿಲ್ಲ. ಒಂದು ಅಂಗಡಿ ಯಿದ್ದರೂ, ಅಂಗಡಿಯವನು ಬಹಿಷ್ಕಾರ ಯಜಮಾನನ ಮಾತಿಲ್ಲದೆ ಆ ಬಟ್ಟೆ ಮಾರಲು ತಿರಸ್ಕರಿಸುತ್ತಿದ್ದನು. ಸರ್ಕಾರಕ್ಕೆ ಅಂತಹ ಅನು ಭವ ಯಾವಾಗಲೂ ಆಗಿರಲಿಲ್ಲ. ಪೂರ್ವ ಬಂಗಾಳದ ಉಪ ಗವರ್ನರ್ ಆದ ಸರ್ ವಿಲಿಯಂ ಬಾವರ್ ಫುಲ್ಲರ್‌ಗೆ ಬಂಗಾಳಿಗಳ ಈ ಹೊಸ ಸ್ವಭಾವ ಕಂಡು ಗಾಬರಿಯಾಯಿತು. ಜನರು ಗವರ್ನರಿಗೆ ಸ್ವಾಭಾ ವಿಕವಾದ ಗೌರವ ತೋರಿಸಲು ಸಹ ಹಿಂಜರಿದರು. ಲೆಫ್ಟಿನೆಂಟ್ ಗವರ್ನರ ಎದುರಿಗೇ ಸರ್ಕಾರದ ವಿರುದ್ಧ ಪ್ರದರ್ಶನ ಮಾಡಿದರು. ಒಂದು ರೈಲ್ವೆ ಸ್ಟೇಷನ್ನಿನಲ್ಲಿ ಪೋರ್ಟರುಗಳು ಗವರ್ನರ ಸಾಮಾನು ಹೊರಲು ಸಹ ತಿರಸ್ಕರಿಸಿದರು. ಪೋಲಿಸಿನವರು ಸಾಮಾನು ಹೊರಬೇಕಾಯಿತು.

ಕರ್ಜನ್‌ರ ಸಲಹೆಯಂತೆ ಫುಲ್ಲರ್ ಹಿಂಸಾಮಾರ್ಗವನ್ನು ಅನು ಸರಿಸಿದರು. ಬಾರಿಸಾಲ್‌ನಲ್ಲಿ "ಬ್ರಿಟಿಷ್ ಪದಾರ್ಥಗಳನ್ನು ಬಹಿಷ್ಕರಿಸಿ" ಎಂದು ಒಂದು ಹಸ್ತಪ್ರತಿಯನ್ನು ಚಳುವಳಿಗಾರರು ಹಂಚಿದ್ದರು. ಗವ ರ್ನರು ೧೦೦ ಘೂರ್ಕರನ್ನು ಬಾರಿಸಾಲ್‌ಗೆ ಕರೆದುಕೊಂಡುಹೋಗಿ ಆ ಹಸ್ತ ಪ್ರತಿಯನ್ನು ಹಿಂದಕ್ಕೆ ತೆಗೆದುಕೊಳ್ಳಿ ಎಂದು ಚಳುವಳಿಗಾರರನ್ನು ಹೆದರಿಸಿದರು. ಘೂರ್ಕ ಪಶುಗಳ ಕೈಲಿ ಏಟು ತಿನ್ನುವುದು ನಗರದ ನಾಗರಿಕರಿಗೆ ಬೇಕಿರಲಿಲ್ಲ. ಅದರಿಂದ ನಿರಪರಾಧಿಗಳಿಗೂ ನಿರಾಯುಧ ರಿಗೂ ತೊಂದರೆಯಾಗುವುದೆಂದು ಅವರಿಗೆ ಬಯವಾಯಿತು. ಮುಖಂ ಡರು ಹಸ್ತಪ್ರತಿಯನ್ನು ಹಿಂದಕ್ಕೆ ತೆಗೆದುಕೊಂಡರು ಆದರೆ ಊರಿಗೆ ಬಂದ ಮಾರಿ ಸುಮ್ಮನೆ ಹೋಗುವುದೆ? ಘೂರ್ಕರು ನಿರಾಯುಧರ ಮೇಲೆ ನಡೆಸಬಹುದಾದ ಅತ್ಯಾಚಾರಗಳನ್ನೆಲ್ಲಾ ನಡೆಸಿಯೇ ನಡೆ ಸಿದರು. ೧೯೦೬ ನೇ ಏಪ್ರಲ್‌ನಲ್ಲಿ, ವಿಭಾಗವಾದ ಎರಡು ಪ್ರಾಂತ ಗಳ ಮುಂದಾಳುಗಳೂ ಶಾಂತರಾಗಿ ಸಭೆ ಸೇರಿದ್ದಾಗ ಪೋಲೀ ಸಿನವರು ಮ್ಯಾಜಿಸ್ಟ್ರೇಟರ ಎದುರಿಗೇ ಅವರ ತಲೆಗಳನ್ನು ಒಡೆದು ಜನ

ರನ್ನು ಚದುರಿಸಿದರು. ಇಷ್ಟಾದರೂ ಜನರು ಪ್ರತಿಭಟಿಸಲಿಲ್ಲ. ಶಾಂತಿಯಿಂದಲೇ ಎಲ್ಲವನ್ನೂ ತಡೆದುಕೊಂಡರು. ಸರ್ಕಾರ ಪಶುವೃತ್ತಿಯನ್ನು ತೋರಿಸಿದಷ್ಟೂ ಜನರ ಬಲವೂ ಚಳುವಳಿಯ ಪ್ರಾಬಲ್ಯವೂ ಹೆಚ್ಚತೊಡಗಿತು. ವಂಗದೇಶದಲ್ಲಿ ನಡೆದ ಚಳುವಳಿಯಿಂದ ಅಖಿಲ ಭಾರತದಲ್ಲಿಯೂ ಹೊಸ ಚೈತನ್ಯವುಂಟಾಯಿತು.

೧೯೦೬ ರ ವೇಳೆಗೆ ಕಾಂಗ್ರೆಸ್‌ನಲ್ಲಿಯೇ ಸ್ಪಷ್ಟವಾದ ಎರಡು ಪಕ್ಷಗಳುಂಟಾಗಿದ್ದವು. ಆ ವರುಷ ನಡೆದ ಕಲ್ಕತ್ತ, ಕಾಂಗ್ರೆಸ್‌ನ ಅಧ್ಯಕ್ಷ ಚುನಾವಣೆಯ ಸಂದರ್ಭದಲ್ಲಿ ತೀವ್ರವಾದಿಗಳ ಕೈ ಬಲವಾಯಿತು. ಕೊನೆಗೆ ದೇಶಬಕ್ತ ದಾಧಾಬಾಯಿ ನವರೋಜಿಯವರು ಅಧ್ಯಕ್ಷರಾಗಲು ಒಪ್ಪಿದುದರಿಂದ ಕಾಂಗ್ರೆಸ್ ಎರಡು ಭಾಗವಾಗಲಿಲ್ಲ. ೧೯೦೬ ರಲ್ಲಿ ಕಾಂಗ್ರೆಸ್‌ನಲ್ಲಿ ಬಹಳ ಗದ್ದಲವಾಯಿತು ತೀವ್ರವಾದಿಗಳು ತಮ್ಮ ಗುರಿಯನ್ನು ಸಾಧಿಸಿಕೊಂಡರು. ಲಾರ್ಡ್‌ಮಿಂಟೊರವರು ದಬ್ಬಾಳಿಕೆಯನ್ನು ಬಿಟ್ಟು ಭಾರತೀಯರ ಪ್ರೀತಿ ಸಂಪಾದನೆಗಾಗಿ ಪ್ರಯತ್ನಿಸಿದರು. ಆದರೆ ಬಂಗಾಳದ ವಿಭಜನೆ ರದ್ದಾಗಲಿಲ್ಲ. ೧೯೦೫ ೧೯೦೬ ೧೯೦೭, ಈ ಮೂರು ಸಂವತ್ಸರಗಳಲ್ಲಿಯೂ ದೇಶದಲ್ಲಿ ಚಳುವಳಿ ಒಂದೇ ಸಮನಾಗಿ ನಡೆಯಿತು. ದೇಶಭಕ್ತರು ಪತ್ರಿಕೆಗಳಲ್ಲಿಯೂ ಭಾಷಣಗಳಲ್ಲಿಯೂ ಸರ್ಕಾರವನ್ನು ಖಂಡತುಂಡಾಗಿ ಕತ್ತರಿಸಿದರು. ಪತ್ರಿಕಾ ಸಂಪಾದಕರೂ ಒಡೆಯರೂ ಒಬ್ಬರ ಹಿಂದೆ ಒಬ್ಬರು ಸೆರೆ ಸೇರಿದರು. ಬಂಗಾಳಾ ಬೊಂಬಾಯಿ ಪಂಜಾಬು ಯುಕ್ತಪ್ರಾಂತ ಮದರಾಸು ಮಧ್ಯಪ್ರಾಂತಗಳಲ್ಲಿ ಸರ್ಕಾರದವರು ಅನೇಕರ ಮೇಲೆ ಖಟ್ಲೆಗಳನ್ನು ನಡೆಸಿ ಶಿಕ್ಷೆ ವಿಧಿಸಿದರು. ಜನರು ಮತ್ತೆ ಬಹಿಷ್ಕಾರ ಪಿಕೆಟಿಂಗ್‌ಗಳಲ್ಲಿ ತೊಡಗಿದರು. ಆ ಕಾಲದ ವಿಚಾರಣೆಗಳೆಲ್ಲ ಬರಿಯ ನಾಟಕಗಳಾದುವು. ನ್ಯಾಯಾಧಿಪತಿಗಳು ಎಲ್ಲರಿಗೂ ಶಿಕ್ಷೆ ಕೊಡುತ್ತಿದ್ದರು. ಆದರೂ ಜನರಿಗೆ ಕಾನೂನಿನಲ್ಲಿ ಗೌರವವಿದ್ದುದರಿಂದ ಅವರು ನ್ಯಾಯಸ್ಥಾನಗಳನ್ನು ಬಹಿಷ್ಕರಿಸಿರಲಿಲ್ಲ. ಲಾಕಪ್‌ಗಳಲ್ಲಿ ಅತ್ಯಾಚಾರ ನಡೆದರೂ ಜನ ಬಲಪ್ರಯೋಗ ಮಾಡಿರಲಿಲ್ಲ. ರಾಜಕೀಯ ಬಂದಿಗಳನ್ನು ಜನ ಮೆಚ್ಚಿ ಗೌರವಿಸಿ ಪ್ರೋತ್ಸಾಹಿಸುತ್ತಿದ್ದರು. ಆದರೆ ಪ್ರತಿ ಹಿಂಸೆಯ

ಮನೋಭಾವ ಯಾರ ತಲೆಯನ್ನೂ ಹೊಕ್ಕಿರಲಿಲ್ಲ.

ಸರ್ಕಾರದವರು ೧೯೦೭ನೆ ಮೇ ತಿಂಗಳಿನಲ್ಲಿ ಇದ್ದಕ್ಕಿದ್ದಂತೆ ಶ್ರೀ ಲಾಲಾಲಜಪತ್‌ರಾಯ್‌ರನ್ನು ಗಡೀಪಾರು ಮಾಡಿದರು. ಇದರಿಂದ ದೇಶದ ಜನರ ಮನೋಭಾವನೆ ಬದಲಾಯಿಸಿತು. ರಹಸ್ಯ ಪ್ರಚಾರವೂ ಪಶುಶಕ್ತಿಗೆ ಎದುರಾಗಿ ಪಶುಶಕ್ತಿಯ ಪ್ರಯೋಗವೂ ಆವಶ್ಯಕವೆಂದು ದೇಶಭಕ್ತರು ನಿರ್ಣಯಿಸಿದರು. ಗೋಖಲೆಯವರಂತಹ ಸಾಧುಗಳು ಸಹ "ಸರ್ಕಾರವು ಮಾಡಿದುದು ತಪ್ಪು" ಎಂದು ಖಂಡಿಸಿದರು. ಆದರೆ ಆಂಗ್ಲೊ ಇಂಡಿಯನ್ ಪತ್ರಿಕೆಗಳು ಬಹಳ ಸಂತೋಷಗೊಂಡವು. ಒಂದು ಪತ್ರಿಕೆಯು ಲಜಪತ್‌ರಾಯರಲ್ಲಿ ಒಂದು ಲಕ್ಷ ಬೇಜವಾಬ್ದಾರಿಯ ಸೈನಿಕರಿರುವರೆಂದಿತು ಕಲ್ಕತ್ತೆಯ ಇಂಗ್ಲಿಷ್‌ಮನ್ ಪತ್ರಿಕೆಯು ಲಜಪತ್‌ರಾಯ್‌ರು ಆಪ್‌ಖನ್ ಘೊರೆ ಭಾರತವನ್ನು ಮುತ್ತಲು ಬೋಧಿಸಿದರೆಂದು ಬರೆಯಿತು. ದೇಶದಲ್ಲಿ ಅಸಂತುಷ್ಟಿಯೂ ಬ್ರಿಟಿಷರ ವಿಷಯದಲ್ಲಿ ತಿರಸ್ಕಾರವೂ ಉಂಟಾಯಿತು. ಯಾವ ಸಾಮೋಪಾಯಕ್ಕೂ ಆಂಗ್ಲೇಯರು ಬಗ್ಗದುದರಿಂದ ದೇಶಭಕ್ತರು ಬಾಂಬುಗಳನ್ನು ತಯಾರಿಸತೊಡಗಿದರು. ಹಿರಿಯ ದೇಶಸೇವಕರಿಗೆ ಆ ವಿಷಯಗಳಲ್ಲಿ ಸಹಾನುಭೂತಿಯಿದ್ದರೂ ಅವರು ಪ್ರೋತ್ಸಾಹ ಕೊಡಲಿಲ್ಲ. ಹಿಂಸಾ ಮಾರ್ಗಗಳೂ ಬಲಪ್ರಯೋಗಗಳೂ ಅವರ ಕಾರ್ಯರಂಗದಿಂದ ದೂರವಾಗಿದ್ದವು.

ಬಂಗಾಳದಲ್ಲಿ ೧೯೦೭ ಕ್ಕಿಂತ ಮುಂಚೆಯೂ ಒಂದು ಕ್ರಾಂತಿಕಾರರ ಗುಂಪು ಇದ್ದಿರಲು ಸಾಧ್ಯ. ಆದರೆ ೧೯೦೭ ನೇ ಮೇ ವರೆಗೆ ಅವರು ಕಾರ್ಯಕ್ರಮಕ್ಕೆ ಹಿಂಸಾ ಮಾರ್ಗದ ಪ್ರವೇಶವಾಗಿರಲಿಲ್ಲ. ಲಜಪತ್‌ರಾಯ್‌ರಿಗೆ ಗಡೀಪಾರು ಆದುದೇ ಅವರ ಸಹನೆಯನ್ನು ಮೀರಿಸಿತು. ಆದರೂ ೧೯೦೮ ನೇ ಏಪ್ರಿಲ್ ವರೆಗೆ ಮೊದಲನೆಯ ಬಾಂಬು ಸಿಡಿಯಲಿಲ್ಲ. ೧೯೦೭ರಲ್ಲಿ ಸೂರತ್ ಕಾಂಗ್ರೆಸ್‌ನಲ್ಲಿ ಹುಟ್ಟಿದ ಒಡಕಿನಿಂದ ಯುವಕರು ಬೇರೆಯಾಗಿ, ಹಿಂಸಾಮಾರ್ಗ ಬಲಪ್ರಯೋಗ ಸಂವಿಧಾನಗಳಲ್ಲಿ ತೊಡಗಿದರು. ಸರ್ಕಾರದವರು ಮುಖಂಡರನ್ನೆಲ್ಲಾ ಹಿಡಿದು ಸೆರೆಹಾಕಿದರು. ಬಾಲಗಂಗಾದರ ತಿಳಕ್‌ರಿಗೆ ೬ ವರುಷ ಗಡೀಪಾರು

ಶಿಷೆಯಾಯಿತು. ಅರವಿಂದಘೋಷರ ಮೇಲೂ ಖಟ್ಲೆ ನಡೆಯಿತು. ಆದರೆ ಸಾಕ್ಷಿ ದೊರೆಯದುದರಿಂದ ಅವರಿಗೆ ಶಿಕ್ಷೆಯಾಗಲಿಲ್ಲ. ಬಿಪಿನ್ ಚಂದ್ರಪಾಲ್‌ರಿಗೆ ೬ ತಿಂಗಳು, ಮದರಾಸಿನ ಚಿದಂಬರಪಿಳ್ಳೆಯವರಿಗೆ ೬ ವರುಷ, ಹಜರತ್ ಮೋಹಾನಿಗೆ ಒಂದು ವರುಷ, ಹೀಗೆ ಶಿಕ್ಷೆಗಳಾದವು. ಬಂಗಾಳದಲ್ಲಿ ಜನರನ್ನು ವಿಚಾರಣೆಯಿಲ್ಲದೆ ಸೆರೆಯಲ್ಲಿಡಲು ಪ್ರಾರಂಭಿಸಿದರು. ಆದರೂ ಕ್ರಾಂತಿಕಾರರು ಹೆದರಲಿಲ್ಲ ಅಧಿಕಾರಿಗಳಿಗೆ ನಿಜವಾದ ಪ್ರಾಣಭಯ ಪ್ರಾರಂಭವಾಯಿತು ಬಂಗಾಳದ ಲೆಫ್ಟಿನೆಂಟ್ ಗವರ್ನರ ಕೊಲೆಗಾಗಿ ಕ್ರಾಂತಿಕಾರರು ಬಾಂಬನ್ನು ಎಸೆಯಲು ಪ್ರಯತ್ನಿಸಿದರು. ಅಹಮ್ಮದಾಬಾದಿನಲ್ಲಿ ಗವರ್ನರ್ ಜನರಲ್ ಲಾರ್ಡ್ ಮಿಂಟೊರ ಮೇಲೆ ಕೈಮಾಡುವುದರಲ್ಲಿದ್ದರು ಭಾರತದ ಸಚಿವ ಲಾರ್ಡ್ ಮಾರ್ಲೆರವರು ರಾಜಕೀಯ ಕಾರ್ಯದರ್ಶಿಯನ್ನು ಇಂಗ್ಲೆಂಡಿನಲ್ಲಿ ಗುಂಡಿಕ್ಕಿ ಕೊಂದರು. ನಾಸಿಕದಲ್ಲಿ ಒಬ್ಬ ಕಲೆಕ್ಟರನನ್ನು ಕೊಂದರು ಇನ್ನೂ ಅನೇಕ ಹಿಂಸಾಕೃತ್ಯಗಳು ನಡೆದವು ಸರ್ಕಾರದ ಗದಾ ಪ್ರಹಾರಕ್ಕೆ ಒಳಗಾಗಿದ್ದ ಸಾಹಿತ್ಯವೆಲ್ಲಾ ಗುಟ್ಟಾಗಿ ಪ್ರಕಟವಾಗ ತೊಡಗಿತು. ಕ್ರಾಂತಿಕಾರರಲ್ಲಿ ಆಯುಧಗಳು ಶೇಖರವಾಗ ತೊಡಗಿದವು. ೧೯೦೮ ೧೯೦೯ ರಲ್ಲಿ ಈ ಚಳುವಳಿ ಬಹಳ ತೀವ್ರವಾಗಿತ್ತು. ೧೯೧೧ ರಲ್ಲಿ ಚಕ್ರವರ್ತಿಗಳು ಭಾರತಕ್ಕೆ ಬಂದು ಬಂಗಾಳಾ ವಿಭಜನೆಯನ್ನು ರದ್ದುಗೊಳಿಸಿದರು. ವಿಭಜನೆ ರದ್ದಾದುದಕ್ಕಿಂತ ಹೆಚ್ಚಾಗಿ, ಚಳುವಳಿಯು ಪರಿಣಾಮವಾಯಿತೆಲ್ಲ ಎಂದು ಭಾರತದಲ್ಲಿ ಸಂತೋಷವುಂಟಾಯಿತು.

ಲಾರ್ಡ್ ಹಾರ್ಡಿಂಜ್‌ರು ಅನೇಕ ಶಸ್ತ್ರಧಾರಿ ಪೋಲೀಸರಿಂದಲೂ ಅಂಗರಕ್ಷಕರಿಂದಲೂ ಸುತ್ತುವರಿದು ದೊಡ್ಡ ಜನ ಸಮೂಹದ ಮಧ್ಯದಲ್ಲಿ ಡಿಲ್ಲಿಗೆ ವೈಭವದಿಂದ ಮೊದಲನೆಯ ಬಾರಿ ಪ್ರವೇಶಿಸುತ್ತಿರುವಾಗ ಅವರ ಮೇಲೆ ಒಂದು ಬಾಂಬು ಬಿದ್ದಿತು ಲಾರ್ಡ್ ಹಾರ್ಡಿಂಜರಿಗೆ ಘಾಯವಾಯಿತು. ಅವರ ಅಂಗರಕ್ಷಕರು ಮಡಿದರು. ಸರ್ಕಾರದವರು ಹತ್ಯಾಕಾರಿಗಳನ್ನು ಹಿಡಿದುಕೊಟ್ಟವರಿಗೆ ಒಂದು ಲಕ್ಷ ರೂಪಾಯಿ. ಬಹುಮಾನವನ್ನು ಕೊಡುತ್ತೇವೆಂದು ಪ್ರಕಟಿಸಿದರು. ಆದರೆ ಕ್ರಾಂತಿಕಾರರು ಸಿಕ್ಕಲಿಲ್ಲ. ಅನಂತರ ೧೯೧೪ರಲ್ಲಿ ಜಗತ್ತಿನ ಮೊದಲನೆಯ

ಮಹಾಯುದ್ಧ ಪ್ರಾರಂಭವಾಯಿತು.

೧೯೧೫ನೇ ಸಂವತ್ಸರದಲ್ಲಿ ಪಂಜಾಬಿನಲ್ಲಿ ಸ್ವಲ್ಪ ದೊಂಬಿ ನಡೆಯಿತು. ಅನೇಕ ಹಳ್ಳಿಗಳ ಲೂಟಿಗಳಾದವು. ಈ ಅನಾಯ ಕತ್ವಕ್ಕೆ ಯುದ್ಧಪರಿಸ್ಥಿತಿಯೇ ಕಾರಣ. ಸರ್ಕಾರಕ್ಕೂ ಪೋಲೀಸಿಗೂ ಕೈಕಾಲು ನಡುಗಿತು. ಮನಸ್ಸಿಗೆ ಬಂದಂತೆ ದಸ್ತಗಿರಿಗಳು ಪ್ರಾರಂಭ ವಾದವು. ಸರ್ಕಾರದವರು ೪೦೦೦ ಜನರನ್ನು ಬಂಧಿಸಿದರು. ೮೦೦ ಜನರಿಗೆ ಶಿಕ್ಷೆಯಾಯಿತು. ಸರಿಯಾದ ಸಾಕ್ಷಿಗಳು ದೊರೆಯದುದ ರಿಂದ ಉಳಿದವರ ಬಿಡುಗಡೆಯಾಯಿತು.

೧೯೧೪-೪೫ ರಲ್ಲಿ ಪಂಜಾಬಿನಲ್ಲಿ ಅನೇಕ ಖೂನಿಗಳೂ ಲೂಟಿಗಳು ನಡೆದವು. ಯುದ್ಧದ ಕಾರಣದಿಂದ ಭಾರತಕ್ಕೆ ಹಿಂದಿರುಗಿದ್ದ ಅನೇಕ ಕ್ರಾಂತಿಕಾರರ ಕೈವಾಡ ಇದರಲ್ಲಿ ಇತ್ತು. ಅವರ ಪೈಕಿ ಕೆಲವರು ಕಾನಡದಿಂದ ಭಾರತಕ್ಕೆ ಬಂದಿದ್ದರು. ಕೆಲವರು ಚೀಣದಿಂದಲೂ ಅಮೆರಿಕದಿಂದರೂ ಬಂದಿದ್ದರು. ಅವರಲ್ಲಿ ಕೆಲವರನ್ನು ಕಾನಡಕ್ಕೆ ಆ ದೇಶದ ಅಧಿಕಾರಿಗಳು ಸೇರಿಸಿರಲಿಲ್ಲ. ಆದರಿಂದ ಅವರಿಗೆ ಬಹಳ ಕಷ್ಟನಷ್ಟಗಳಾಗಿದ್ದವು ಅವರೆಲ್ಲರೂ ತುಂಬಾ ಅತೃಪ್ತ ರಾಗಿದ್ದರು. ಪರದೇಶಗಳಲ್ಲಿ ವಸತಿ ದೊರೆಯದೆ ಹಿಂದಿರುಗಿದ ಭಾರ ತೀಯರಿಗೂ ಸರ್ಕಾರಕ್ಕೂ ಮೊದಲ ಘರ್ಷಣೆ ಬಂಗಾಳದ ಬಡ್ಜ್ ಬಡ್ಜ್ ಎಂಬಲ್ಲಿ ನಡೆಯಿತು. ಹಿಂದಿರುಗಿದ ಭಾರತೀಯರು ಅಲ್ಲಿಂದ ತಮ್ಮ ಮೂಲವಾಸಸ್ಥಾನವಾದ ಪಂಜಾಬಿಗೆ ಹೋಗುವವರಾಗಿದ್ದರು. ಸರ್ಕಾರ ದವರು ಅವರಿಗೆ ನಾನಾ ವಿಧಗಳಾದ ಪ್ರತಿಬಂಧಕಗಳನ್ನೊಡ್ಡಿದರು. ಅವರ ಬಳಿ ಬೇಕಾದಷ್ಟು ಆಯುಧಗಳಿದ್ದವು. ಅವರಿಗೂ ಸರ್ಕಾರಕ್ಕೂ ದೊಡ್ಡ ಯುದ್ಧವೇ ನಡೆದು ಎರಡು ಕಡೆಯೂ ಗಾಯಗಳಾದವು. ಅನೇಕರು ಮಡಿದರು. ಆ ಹೊತ್ತಿಗೆ ಸರಿಯಾಗಿ ಭಾರತ ರಕ್ಷ ಣೆಯ ಹೆಸರಿನಲ್ಲಿ ಯಾರನ್ನು ಬೇಕಾದರೂ ಬಂಧಿಸಿ ವಿಚಾರಣೆ ಯಿಲ್ಲದೆ ಇಡಬಹುದೆಂಬ ಹೊಸಕಾನೂನನ್ನು ಸರ್ಕಾರದವರು ಮಾಡಿ ದರು. ಪರದೇಶಗಳಲ್ಲಿ ಸ್ಥಳ ಸಿಕ್ಕದೆ ಹಿಂದಿರುಗಿದ್ದ ಸಾವಿರಾರು ಭಾರ ತೀಯರನ್ನು ಈ ಕಾನೂನಿನ ನೆಪದಿಂದ ಸರ್ಕಾರದವರು ಬಂಧಿಸಿದರು.

ಬಂಧಿತರಾದವರ ಪೈಕಿ ಅನೇಕರು, ಭಾರತದ ಕ್ರಾಂತಿಕಾರರೊಂದಿಗೆ ಸಂಬಂಧವನ್ನು ಕಲ್ಪಿಸಿಕೊಂಡು ಭಾರತ ಸರ್ಕಾರವನ್ನು ಉರುಳಿಸುವ ಪಿತೂರಿ ಮಾಡಿದರು. ಈ ಪಿತೂರಿಯ ಏರ್ಪಾಡನ್ನು ಬಹಳ ಶಿಸ್ತಿನಿಂದಲೂ ನಡಿಸಿದ್ದರು. ಹಣ ಆಯುಧ ಎಲ್ಲಕ್ಕೂ ಏರ್ಪಾಡು ಮಾಡಿದ್ದರು. ಈ ಪಿತೂರಿ ಅಖಿಲಭಾರತಕ್ಕೂ ಅನ್ವಯಿಸುವದಾಗಿದ್ದಿತು. ಉತ್ತರ ಭಾರತದ ಸೈನ್ಯಗಳು ಸಹ ಪಿತೂರಿಗಾರರಿಗೆ ಸಹಾಯ ಮಾಡಲು ಒಪ್ಪಿದ್ದರು. ಪಿತೂರಿಕಾರರೊಂದಿಗೆ ಸೇರಿಕೊಂಡು ಅವರನ್ನೇ ಪ್ರೋತ್ಸಾಹಿಸಿದ ಸರ್ಕಾರದ ಗೂಢಚಾರರ ಸಹಾಯದಿಂದ ಈ ಪಿತೂರಿ ಪತ್ತೆಯಾಯಿತು. ಪಿತೂರಿಕಾರರ ವಿಚಾರಣೆಗಾಗಿ ಸರ್ಕಾರದವರು ಒಂದು ಸ್ಪೆಶಲ್ ನ್ಯಾಯಸ್ಥಾನವನ್ನು ಏರ್ಪಡಿಸಿದರು. ಅದರಲ್ಲಿ ಒಬ್ಬ ಭಾರತೀಯರೂ ಇಬ್ಬರು ಆಂಗ್ಲೇಯರೂ ನ್ಯಾಯಾಧಿಪತಿಗಳಾಗಿದ್ದರು. ಆ ಕೋರ್ಟು ಮಾಡಿದುದಕ್ಕೆ ಮೇಲು ಅಪೀಲು ಇರಲಿಲ್ಲ. ನ್ಯಾಯಸ್ಥಾನದ ನಡವಳಿಕೆಗಳೆಲ್ಲಾ ರಹಸ್ಯವಾಗಿ ನಡೆದುವು. ಕೆಲವು ಆಪಾದಿತರು ತಪ್ಪಿಸಿಕೊಂಡರು. ಸರ್ಕಾರದವರು ವಿಚಾರಣೆಗೆ ಒಳಪಡಿಸಿದ ೬೧ ಜನರ ಪೈಕಿ ನಾಲ್ವರಿಗೆ ಬಿಡುಗಡೆ ಆಯಿತು. ೨೭ ಜನರಿಗೆ ಜೀವಾವಧಿ ಶಿಕ್ಷೆಯಾಯಿತು. ೨೪ ಜನರಿಗೆ ಮರಣದಂಡನೆಯಾಯಿತು. ಅನಂತರ ಸರ್ಕಾರದವರು ಲಾಹೋರಿನಲ್ಲಿಯೂ ಕಾಶಿಯಲ್ಲಿಯೂ ಇದೇ ಪಿತೂರಿಯ ವಿಚಾರಣೆಗಾಗಿ ಸ್ಪೆಷಲ್ ನ್ಯಾಯಸ್ಥಾನವನ್ನು ಸ್ಥಾಪಿಸಿದರು. ಇದಲ್ಲದೆ ಸರ್ಕಾರದವರು ಸೈನ್ಯಕ್ಕೆ ಸೇರಿದ ಅನೇಕರ ವಿಚಾರಣೆ ಮಾಡಿ ಅವರನ್ನೆಲ್ಲಾ ಶಿಕ್ಷೆಗೆ ಗುರಿಪಡಿಸಿದರು.

೧೯೧೫ ನೇ ಸಂವತ್ಸರದ ಪೂರ್ತ ಬಂಗಾಳದ ಕ್ರಾಂತಿಕಾರರು ಸ್ವಾತಂತ್ರಸಾಧನೆಗಾಗಿ ಅನೇಕ ಹಿಂಸಾ ಕೃತ್ಯಗಳನ್ನು ನಡೆಸಿದರು. ಸರ್ಕಾರಿ ಅಧಿಕಾರಿಗಳ ಕೊಲೆಯಾಯಿತು. ಸರ್ಕಾರದ ಭಂಡಾರ ಲೂಟಿಯಾಯಿತು. ಪಟ್ಟಣಗಳಲ್ಲಿ ಪೋಲಿಸರ ಎದುರಿಗೇ ಕ್ರಾಂತಿಕಾರರು ಬ್ಯಾಂಕುಗಳನ್ನು ಲೂಟಿಮಾಡಿ ಪೋಲಿಸಿನವರೊಂದಿಗೆ ಯುದ್ಧವನ್ನೇ ಮಾಡಿದರು. ಸರ್ಕಾರದವರು ಅನೇಕ ನ್ಯಾಯಸ್ಥಾನಗಳನ್ನು ಸ್ಥಾಪಿಸಿ ಅವರನ್ನೆಲ್ಲ ಶಿಕ್ಷಿಸಿದರು.

ಭಾರತದಲ್ಲಲ್ಲದೆ ಸಿಂಗಪುರದಲ್ಲಿ ಸಹ ಭಾರತೀಯರ ಒಂದು ದಂಗೆ ಎದ್ದಿತು. ಬ್ರಿಟಿಷರು ಆ ದಂಗೆಯನ್ನು ಜಪಾನರ ಮತ್ತು ಫ್ರೆಂಚರ ಸಹಾಯದಿಂದ ಅಡಗಿಸಿದರು. ಅನೇಕ ಇಂಗ್ಲಿಷರು ಆ ದಂಗೆಗಳಲ್ಲಿ ಬಲಿಯಾದರು. ಬರ್ಮ, ಸಿಂಗಪೂರ್ ಹಾಂಗ್‌ಕಾಂಗ್ ಶಾಂಘೈ ಸಿಲೋನ್ ಮುಂತಾದೆಡೆಗಳಲ್ಲೆಲ್ಲಾ ಭಾರತೀಯರು ಬ್ರಿಟಿಷರಿಗೆ ವಿರೋಧವಾಗಿ ಪಿತೂರಿ ಮಾಡುತ್ತಿರುವುದೂ, ಬ್ರಿಟಿಷರ ನಾಶಕ್ಕಾಗಿ ಮದ್ದುಗುಂಡುಗಳನ್ನು ರಹಸ್ಯವಾಗಿ ಭಾರತಕ್ಕೆ ತರುತ್ತಿರುವುದೂ ಸರ್ಕಾರಕ್ಕೆ ತಿಳಿಯಿತು. ಶ್ರೀ ಹರದಯಾಳ್‌ನಾಗ್ ಮುಂತಾದವರು ಏಷ್ಯಾಮೈನರ್‌ನಲ್ಲಿಯೂ ಇತರ ಭಾರತೀಯರು ಅಮೇರಿಕಹಲ್ಲಿಯೂ ಭಾರತ ಸ್ವಾತಂತ್ರ್ಯದ ಪರವಾಗಿ ಪ್ರಚಾರಮಾಡುತ್ತಿದ್ದರು. ಜರ್ಮನಿಯವರು ಭಾರತೀಯರಿಗೆ ಸಹಾಯಮಾಡುತ್ತಿದ್ದರೆಂದೂ ಸರ್ಕಾರದವರು ಆಕ್ಷೇಪಿಸಿದರು. ಇದು ಎಷ್ಟು ನಿಜವೋ ಗೊತ್ತಿಲ್ಲ. ಆದರೆ ಆ ಅಪಾದನೆ ಪೂರ್ಣವಾಗಿ ಸುಳ್ಳೆಂದು ಲಾಲಾಲಜಪತರಾಯ್ ಆಗ ಖಂಡಿಸಿದ್ದರು.*

---

* ಈ ಅಧ್ಯಾಯವು ದಿವಂಗತ ಲಾಲಾಲಜಪತ್‌ರಾಯ್‌ರು ಬರೆದಿದ್ದ ಯಂಗ್ ಇಂಡಿಯ ಎಂಬ ಗ್ರಂಥದ ಆಧಾರದ ಮೇಲೆ ಬರೆದುದಾಗಿದೆ. ಆ ಗ್ರಂಥವು ೧೯೧೬ ರಲ್ಲಿ ಅಮೇರಿಕದಲ್ಲಿ ಮೊದಲು ಪ್ರಕಟವಾದರೂ ಭಾರತ ಸರ್ಕಾರ ಅದರ ಪ್ರತಿಗಳನ್ನು ಭಾರತಕ್ಕೆ ಬಿಡದೆ ತಡೆದಿದ್ದು ಪುಸ್ತಕವನ್ನು ಬಹಿಷ್ಕರಿಸಿದ್ದರು. ೧೯೨೨ರಲ್ಲಿ ದಿವಂಗತ ಮುದುವೀಡ ಕೃಷ್ಣರಾಯರು ಗ್ರಂಥದ ಒಂದು ಪ್ರತಿಯನ್ನು ನನಗೆ ಕೊಟ್ಟು ಅದರ ಸಾರಾಂಶವನ್ನು ಬರೆಯುವಂತೆ ಹೇಳಿದರು. ನಾನು ಬರೆದು ಕೊಟ್ಟೆ ಅವರು ಅದನ್ನು ಪ್ರಕಟಿಸಿ ಸರ್ಕಾರದ ಅಂದಿನ ಕೋಪಕ್ಕೆ ಪಾತ್ರರಾಗಿ ಶಿಕ್ಷೆಯನ್ನು ಅನುಭವಿಸಿದರು. ಇದರಲ್ಲಿ ಭಾರತದ ಇತಿಹಾಸದ ಸಿಂಹಾವಲೋಕನ ಇರುವುದರಿಂದಲೂ, ಶ್ರೀ ಲಜಪತ್‌ರಾಯರ ಆಳವಾದ ಜ್ಞಾನ ತೇಜಃ ಪುಂಜವಾದ ನಿರೂಪಣಾ ಕ್ರಮ ವಿರುವುದರಿಂದಲೂ ಇದನ್ನು ವಾಚಕರ ಮುಂದೆ ಇಟ್ಟಿದ್ದೇನೆ. [ಗೊ, ರಾ]

# ೩. ಭಾರತ ಭಾಗ್ಯವಿಧಾತ

## (೧)

ಮಹಾತ್ಮ ಗಾಂಧಿಯವರ ನಿಧನದಿಂದ ಭಾರತಕ್ಕೆ ಉಂಟಾದ, ಜಗತ್ತಿಗೆ ಉಂಟಾದ ಅಪಾರ ನಷ್ಟವನ್ನು ಕುರಿತು ದುಃಖಿಸುತ್ತಾ ಪಂಡಿತ ನೆಹ್ರುರವರು "ಗಾಂಧಿಯವರು ಕುಳಿತ ಸ್ಥಳ ದೇವಾಲಯವಾಗಿತ್ತು. ಅವರು ನಡೆದ ನೆಲ ಪವಿತ್ರವಾಗಿತ್ತು" ಎಂದಿದ್ದಾರೆ. ಜಗತ್ತು ಹುಟ್ಟಿದಂದಿನಿಂದ ಇಂದಿನವರೆಗೆ ಯಾವ ಮಹಾಪುರುಷನೂ ಪ್ರಜೆಗಳ ಹೃದಯದಲ್ಲಿ ಇಂತಹ ಪೂಜಾಸ್ಥಾನವನ್ನು ಹೊಂದಿಲ್ಲ. ಗಾಂಧಿಯವರು ಕಣ್ಮರೆಯಾದನಂತರ ಅವರನ್ನು ದೇವರಾಗಿ ಪೂಜಿಸುವುದು ಆಶ್ಚರ್ಯವಿಲ್ಲ. ಯಾಕೆಂದರೆ ಮಹಾತ್ಮರನ್ನು ನೋಡದವರಿಗೆ ಅವರ ಮಹಿಮೆಗಳು ಮನುಷ್ಯನಿಗೆ ಅಸಾಧಾರಣಗಳಾದ ದೈವೀಶಕ್ತಿಗಳಾಗಿ ತೋರುತ್ತವೆ. ಐನ್‌ಸ್ಟೈನ್‌ರು ಹೇಳುವಂತೆ 'ಜಗತ್ತಿನ ಮದ್ದುಗುಂಡುಗಳ ದಬ್ಬಾಳಿಕೆಯನ್ನು ಮನುಷ್ಯತ್ವದಿಂದ ಜಯಿಸಿ ಪಶುಬಲಕ್ಕೆ ವಿರೋಧವಾಗಿ ಆತ್ಮಬಲವನ್ನೊಡ್ಡಿದ ಒಬ್ಬ ಮನುಷ್ಯ ಭೂಮಿಯ ಮೇಲೆ ಎಲ್ಲರಂತೆ ಓಡಾಡಿ ಎಲ್ಲರ ಮಧ್ಯೆ ಸಹಜವಾಗಿ ಜೀವಿಸಿದ ಎಂದು ನಂಬುವುದೇ ಮುಂದಲ ಜನಾಂಗಕ್ಕೆ ಕಷ್ಟವಾಗುವುದು.' ಮುಂದಲ ಜನಾಂಗ ಶ್ರೀರಾಮ ಕೃಷ್ಣ ಮೊದಲಾದ ಅವತಾರಪುರುಷರು ಜನಿಸಿದಂತೆ, ಭಗವಂತನು ಗಾಂಧಿಯವರಾಗಿ ಜನಿಸಿದರೆಂದು ಭಾವಿಸುವರು. ಅಂದರೆ ಮಹಾತ್ಮ ಗಾಂಧಿಯವರ ನಿಜವಾದ ಮಹಿಮೆಯು—ಸಾಧನೆಯು ಅವರ ಕಣ್ಮರೆಯಾಗುವುದು. ದೇವರು ಏನು ಬೇಕಾದರೂ ಮಾಡಬಹುದೆಂಬ ನಂಬಿಕೆಯಿಂದ ಮನುಷ್ಯನು ಸಾಧಿಸಿದ ಆದರ್ಶ ಮರೆಯಾಗಿ ಆ ಆದರ್ಶವನ್ನು ನಾವು ಅನುಸರಿಸುವುದು ಸಾಧ್ಯವೆಂಬುದೂ ಸಹ ಕನಸೇ ಆಗುವುದು. ತಮ್ಮನ್ನು ದೇವರ ಅವತಾರ—ಮತಾಚಾರ್ಯ ಎಂದು ತಿಳಿದುಕೊಂಡವರಿಗೆಲ್ಲಾ ಗಾಂಧಿಯವರು "ನಾನು ದೇವರೂ ಅಲ್ಲ ದೇವರ ಪ್ರತಿನಿಧಿಯೂ ಅಲ್ಲ. ದೇವರು ನನಗೆ ಒಂದು ಕರ್ತವ್ಯ

ವನ್ನು ನಿಯಮಿಸಿ ಅದನ್ನು ಸಾಧಿಸಲು ಇಲ್ಲಿಗೆ ಕಳುಹಿಸಿರುವನೆಂದೂ ನಾನು ಭಾವಿಸಿಲ್ಲ. ನಾನು ಮತಾಚಾರ್ಯನೂ ಅಲ್ಲ. ಸತ್ಯದ ಮಾರ್ಗದಲ್ಲಿ ಒಬ್ಬ ಅನ್ವೇಷಕ ಮಾತ್ರ. ನಾನು ಮಾಡಿರುವುದನ್ನು ಯಾರು ಪ್ರಯತ್ನಿಸಿದರೂ ಸಾಧಿಸಬಹುದು" ಎಂದು ಹೇಳಿದ್ದಾರೆ. ಗಾಂಧಿಯವರ ಜೀವಿತಕಾಲದಲ್ಲಿ ಜನಿಸುವ ಭಾಗ್ಯವನ್ನು ಪಡೆದು "ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ | ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ" ಎಂಬಂತೆ ಒಂದಿಲ್ಲೊಂದು ರೀತಿಯಿಂದ ಅವರ ಎಲ್ಲಾ ಚಳುವಳಿಗಳಲ್ಲಿಯೂ ತಮ್ಮ ತಮ್ಮ ಪಾತ್ರಗಳನ್ನು ನಿರ್ವಹಿಸಿರುವ ನಮ್ಮ ತಲೆಮಾರಿನ ಜನಾಂಗವೇ ಅದೃಷ್ಟವಂತರು. ಯಾಕೆಂದರೆ, ಯಾವುದು ಮುಂದಲವರಿಗೆ ಬರಿಯ ಕಥೆ ಪುರಾಣ ಪವಾಡ ಮಹಿಮೆಗಳಾಗುತ್ತವೆಯೋ, ಯಾವುದನ್ನು ಪವಾಡಗಳಂತಲ್ಲದೆ ಸಾಧಿಸುವುದು ಸಾಧ್ಯವಲ್ಲವೆಂದು ನಮ್ಮ ಮಕ್ಕಳು ಮೊಮ್ಮಕ್ಕಳು ತಿಳಿಯುವರೋ ಅದನ್ನು ನಾವು ನಮ್ಮ ಕಣ್ಣೆದುರಿಗೇ ನೋಡಿದವು. ನಿನ್ನೆ ಮೊನ್ನೆ ಈ ನೆಲದಲ್ಲಿ ನಡೆದ ಆ ಜೀವಿತ ಜ್ಯೋತಿಯಿಂದ ಬೆಳಕನ್ನು ಹಚ್ಚಿಕೊಂಡು ನಮ್ಮ ಮಾರ್ಗವನ್ನು ಬೆಳಗಿಕೊಳ್ಳುವ ಭಾಗ್ಯ ನಮಗೆ ದೊರೆತಿದೆ. ನಮ್ಮ ಈ ಅಮೂಲ್ಯ ಭಾಗ್ಯಕ್ಕೆ ನಮ್ಮ ಮುಂದಲ ಜನಾಂಗ ಏನನ್ನು ಬೇಕಾದರೂ ಕೊಡಲು ಸಿದ್ಧವಾಗಿರುತ್ತದೆ. ಶ್ರೀಕೃಷ್ಣಪರಮಾತ್ಮ ಅರ್ಜುನನಿಗೆ ಯುದ್ಧಭೂಮಿಯಲ್ಲಿ ವಿಶ್ವರೂಪ ದರ್ಶನವನ್ನು ತೋರಿಸಿದಾಗ ನಾವು ಇರಬಲ್ಲೆವಾಗಿದ್ದರೆ ಆ ಪುಣ್ಯ ಸಮಯಕ್ಕಾಗಿ ನಮ್ಮ ಆಯಸ್ಸನ್ನೇ ನಾವು ಕೊಡುತ್ತಿರಲಿಲ್ಲವೇ ?

ಗಾಂಧಿಯವರು ಹೀಗೆ ಸ್ವತಃ ನಮ್ಮ ಎದುರಿಗೆ ತಾವೂ ಸಾಮಾನ್ಯ ಮನುಷ್ಯರಾಗಿ ತಿರುಗುತ್ತಿದ್ದರೂ, ಒಂದೊಂದು ಸಲ ಅವರೂ ಮನುಷ್ಯರು ಎಂಬುದನ್ನು ನಾವು ಮರೆಯುತ್ತಿದ್ದೆವು. ಅವರೇ ಭಾರತದ ಇತಿಹಾಸ ಸೃಷ್ಟಿಕರ್ತರಾಗಿದ್ದರು. ಒಬ್ಬ ಮನುಷ್ಯನ ಇತಿಹಾಸವೇ ಒಂದು ದೇಶದ ಇತಿಹಾಸ ಎಂಬುದು ಅವರ ಕಾಲದಲ್ಲಿ ಸಿದ್ಧವಾಯಿತು. ಗಾಂಧಿಯವರು ಎಲ್ಲಿ ಹೋಗಿ ಕುಳಿತರೆ ಅದು ಭಾರತದ

ಹೃದಯವಾಗುತ್ತಿದ್ದಿತು. ಒಣಗಿದ ಕಡ್ಡಿಗಳ ಕಾಡನ್ನು, ಜೀವವಸಂತ ಸ್ಪರ್ಶಿಸಿದ ಕೂಡಲೇ ಅಲ್ಲಿ ಚೈತನ್ಯ ಪ್ರಫುಲ್ಲಿತವಾಗಿ ಆಡುವಂತೆ, ಗಾಂಧಿಯವರು ಕುಳಿತ ಸ್ಥಳ ಹಾಳುಗುಡಿಯಾದರೂ ಅವರೇ ಅಲ್ಲಿಯ ದೇವರಾಗಿ ಭಾರತವೆಲ್ಲಾ ಅಲ್ಲಿಗೆ ಧಾವಿಸುತ್ತಿದ್ದಿತು. ಹಿಂದೆ ಅಹಮ್ಮದಾಬಾದು, ಅಂದು ಸಬರಮತಿ, ಆಗ ನವಖಲಿ, ಈಗ ಕಲ್ಕತ್ತ, ಈಚೆಗೆ ದೆಹಲಿ; ರಾಮಾಯಣದಲ್ಲಿ ಹೇಗೆ ಅಯೋಧ್ಯೆಯನ್ನು ಶ್ರೀರಾಮಚಂದ್ರನು ತೊರೆದ ಮೇಲೆ ಅಯೋಧ್ಯೆಯ ಮಹಿಮೆ ರಾಮಚಂದ್ರನ ಹಿಂದೆ ತಾನೂ ವನವಾಸಮಾಡುತ್ತಾ ಮತ್ತೆ ಅವನು ಅಯೋಧ್ಯೆಯನ್ನು ಮುಟ್ಟುವವರೆಗೆ ಅವನ ಅನುಯಾಯಿಯಾಗಿದ್ದಿತೋ, ಹಾಗೆ ಭಾರತದ ಕಣ್ಣು ಗಾಂಧಿಯವರ ಹಿಂದೆ ಅವರಿದ್ದಲ್ಲಿ ಇರುತ್ತಿದ್ದಿತು. ಭಾರತದಲ್ಲಿದ್ದ ವರ್ತಮಾನವೆಲ್ಲ ಗಾಂಧಿಯವರೇ ಆಗಿದ್ದರು ದೇವರು, ದೇವತೆಗಳಿಗೆ ವರಕೊಟ್ಟು ಭೂಮಿಯಲ್ಲಿ ಜನಿಸಿ ನರರ ನಾಟಕವನ್ನು ತಾನೇ ಆಚರಿಸಿ ಹೋಗುವುದನ್ನು ನಾವು ನೋಡಿದ್ದೇವೆ. ಆದರೆ ಮನುಷ್ಯನಾಗಿ ಜನಿಸಿ ತನ್ನ ಆಚರಣೆಗಳಿಂದ ದೇವತೆಯಾದವರು ಬಹಳ ವಿರಳ. ಅದೇ ಗಾಂಧಿಯವರ ಮಹಿಮೆ.

ಈಗ ಎರಡು ವರುಷದಲ್ಲಿ ಮಹಾತ್ಮ ಗಾಂಧಿಯವರು ಮದರಾಸಿಗೆ ಬಂದಿದ್ದಾಗ, ತಮಗೆ ಕಾಣಿಕೆಯಾಗಿ ದೊರೆತಿದ್ದ ಪದಾರ್ಥಗಳನ್ನು ಹರಾಜು ಮಾಡಬೇಕೆಂದು ಹಿಂದುಸ್ಥಾನಿ ಪ್ರಚಾರ ಸಭೆಯವರು ಏರ್ಪಡಿಸಿದ್ದ ಊಟದ ಚಪ್ಪರದ ಒಂದು ಭಾಗದಲ್ಲಿ ಕುರ್ಚಿಯ ಮೇಲೆ ಬಂದು ಕುಳಿತರು. ಕಾರ್‍ಯನಿರ್ವಾಹಿ ಸತ್ಯನಾರಾಯಣರು ಕಾಣಿಕೆಯ ಪದಾರ್ಥಗಳನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿಟ್ಟು ಗಾಂಧಿಯವರ ಮುಂದೆ ಒಂದು ಕಾಲುಮಣೆಯ ಮೇಲೆ ಇಟ್ಟರು. ಅವುಗಳ ಪೈಕಿ ೪-೫ ಊರಿ ಕೊಳ್ಳುವ ದೊಣ್ಣೆಗಳಿದ್ದವು. ಗಾಂಧಿಯವರು ಅವುಗಳನ್ನು ಒಂದೊಂದನ್ನಾಗಿ ತೆಗೆದುಕೊಂಡು ನಗುತ್ತಾ "ಇದನ್ನು ಕೊಟ್ಟವರ ಮನಸ್ಸಿನಲ್ಲಿ ನಾನು ಬಹಳ ಮುದುಕನಾದೆನೆಂದು ತೋರುತ್ತದೆ. ಆದುದರಿಂದಲೇ ಇಷ್ಟೊಂದು ದೊಣ್ಣೆಗಳನ್ನು ಕೊಟ್ಟಿದ್ದಾರೆ. ಆದರೆ ನಾನು ಅವರಿಗೆ ನಿರುತ್ಸಾಹ ಮಾಡಬೇಕಾಗಿದೆ. ನಾನು ಅಷ್ಟೊಂದು ಮುದುಕನಲ್ಲ"

ಎಂದು ಹೇಳಿ ಎಲ್ಲಾ ದೊಣ್ಣೆಗಳನ್ನೂ ಹರಾಜು ಮಾಡಿದರು. ಅವರ ಪೂಜೆಗೆಂದು ಭಕ್ತರೊಬ್ಬರು ಕೊಟ್ಟಿದ್ದ ಕೃಷ್ಣನ ವಿಗ್ರಹವನ್ನು ಹರಾಜು ಮಾಡುತ್ತಾ "ನಾನು ಕೃಷ್ಣನ ಪೂಜಾರಿಯೇ ಹೌದು. ಆದರೆ ನಾನು ಪೂಜಿಸುವುದು ಎಲ್ಲರ ಹೃದಯದಲ್ಲಿಯೂ ಇರುವ ಕೃಷ್ಣನನ್ನು" ಎಂದರು. ಹೀಗೆ ನಾನಾ ವಿಧವಾಗಿ ವಿನೋದದ ಮಾತುಗಳನ್ನಾಡುತ್ತಾ, ಕತ್ತಲೆಗೆ ಬೆಳಕು ಬಂದಂತೆ ಆ ಸ್ಥಳವನ್ನು ಒಂದು ಗಳಿಗೆ ಗೆಲುವು ಮಾಡಿ ಹೊರಟು ಹೋದರು. ಗಾಂಧಿಯವರು ಅಲ್ಲಿ ಕುಳಿತಿದ್ದಾರೆಂದು ಕೇಳಿದ ಕೂಡಲೇ ಜನ ಅಲ್ಲಿಗೆ ಓಡಿಬಂದರು. ಯಾಕೆಂದರೆ ಗಾಂಧಿಯವರು ಎಲ್ಲಿ ಎಷ್ಟು ದಿವಸ ಇದ್ದರೂ ಅವರು ಇನ್ನೂ ಅಪರೂಪವೇ; ಅವರು ಇಪ್ಪತ್ತು ವರುಷ ಸಬರಮತಿಯಲ್ಲಿದ್ದಾಗಲೂ ಹನ್ನೆರಡು ವರುಷ ವಾರ್ಧಾದಲ್ಲಿದ್ದಾಗಲೂ ಜನರು ಅವರ ದರ್ಶನಕ್ಕೆ ಯಾವಾಗಲೂ ಹೀಗೆಯೇ ನುಗ್ಗುತ್ತಿದ್ದರು. ಮದರಾಸಿನಲ್ಲಿ ಗಾಂಧಿಯವರನ್ನು ನೋಡಲು ನುಗ್ಗಿದ ಜನ ಅವರನ್ನು ನೋಡದುದರಿಂದ ಅವರು ಕುಳಿತಿದ್ದ ಕುರ್ಚಿಗೇ ನಮಸ್ಕಾರ ಮಾಡತೊಡಗಿದರು. ಆ ಕುರ್ಚಿಯನ್ನು ಆದರದಿಂದ ಮುಟ್ಟುತ್ತಿದ್ದರು. ಗಾಂಧಿಯವರು ಅಲ್ಲಿ ಎದುರಿಗೆ ಇಲ್ಲದಿದ್ದರೂ ಅವರ ಆತ್ಮವು ಅಲ್ಲಿದೆಯೆಂದು ಪೂಜಿಸುತ್ತಿದ್ದರು. ಅದನ್ನು ನೋಡಿ ನನ್ನ ಸಮೀಪದಲ್ಲಿದ್ದ ಶ್ರೀ ಪುರೋಹಿತ ನರಸಿಂಹಾಚಾರ್ಯರು "ನಮ್ಮ ಜನ ಇಷ್ಟರಲ್ಲಿಯೇ ಗಾಂಧಿಯವರನ್ನು ಆಳ್ವಾರುಗಳಂತೆ ವಿಗ್ರಹಮಾಡಿ ಹೆಗಲಮೇಲೆ ಹೊತ್ತು ದೇವಸ್ಥಾನದಲ್ಲಿ ಪೂಜಿಸುವುದರಲ್ಲಿ ಸಂದೇಹವಿಲ್ಲ" ಎಂದರು.

ಇಂದು ಅದೇ ನಡೆಯುತ್ತಿದೆ. ನಮಗೆ ಮಾರ್ಗದರ್ಶಕರಾಗಿದ್ದು, ನಿರ್ವೀರ್ಯರಾಗಿ ನಿಶ್ಯಕ್ತರಾಗಿದ್ದ ನಮಗೆ ತೇಜವನ್ನು ತುಂಬಿ, ರಾಮಚಂದ್ರನು ಸ್ಪರ್ಶಮಾತ್ರದಿಂದ ದರ್ಭೆಯನ್ನು ಬ್ರಹ್ಮತೇಜಸ್ಸು ಮಾಡಿದಂತೆ ಈ ದೇಶಕ್ಕೆ ನವಚೈತನ್ಯವನ್ನು ಕೊಟ್ಟ ಗಾಂಧೀಮಹಾತ್ಮರ ಬೋಧನೆಯನ್ನೂ ಆದರ್ಶವನ್ನೂ ಆಚರಿಸುವ ಬದಲು, ನಾವು ಅವರಿಗಾಗಿ ಸ್ಮಾರಕಗಳನ್ನು, ಕಂಬಗಳನ್ನು, ಗುಡಿಗಳನ್ನು, ಶಿಲಾಪ್ರತಿಮೆಗಳನ್ನು, ಕಡೆಗೆ ಮನೆ ಮನೆಗಳಲ್ಲಿ ಅವರ ಪಟದ ಪೂಜೆಯನ್ನು

ಪ್ರಾರಂಭಿಸಿದ್ದೇವೆ. ಇಂತಹ ಸ್ಮಾರಕಗಳನ್ನು ಮಾಡಿ ತೃಪ್ತರಾದೆ ವೆನ್ನುವುದು ಮಹಾತ್ಮರನ್ನು ಮರೆಯುವುದಕ್ಕೆ ದಾರಿ. "ನಿಮಗಾಗಿ ಒಂದು ದೇವಸ್ಥಾನವನ್ನು ಕಟ್ಟುತ್ತಾರೆ" ಎಂದು ಮಹಾತ್ಮ ಗಾಂಧಿ ಯವರಿಗೆ ಹಿಂದೆ ಹೇಳಿದಾಗ ಅವರು ಖಂಡಿತ ಕೂಡದೆಂದು ನಿಷೇಧಿಸಿ ದರು ಬೊಂಬಾಯಿನಲ್ಲಿ ಹತ್ತು ಲಕ್ಷದ ವೆಚ್ಚದಲ್ಲಿ ತಮ್ಮ ಪ್ರತಿಮೆ ಯನ್ನು ಸ್ಥಾಪಿಸುವುದಾಗಿ ತಿಳಿದಾಗ "ಹತ್ತು ಲಕ್ಷ ಇದಕ್ಕೆ ಯಾಕೆ ವೆಚ್ಚ? ಈ ಹತ್ತು ಲಕ್ಷದಲ್ಲಿ ಬೊಂಬಾಯಿನ ಬಡವರಿಗೆ ಮನೆಗಳನ್ನು ಕಟ್ಟಿಕೊಟ್ಟರೆ ಎಷ್ಟು ಒಳ್ಳೆಯದಾಗುವುದು" ಎಂದರು. "ನನ್ನ ಆದರ್ಶಗಳಲ್ಲಿ ನಿಮಗೆ ಸರಿತೋರಿದುದನ್ನು ಅನುಸರಿಸಿ, ಅದೇ ನನ್ನನ್ನು ಗೌರವಿಸುವ ಮಾರ್ಗ" ಎಂದು ಪದೇಪದೇ ಅವರು ಒತ್ತಿ ಹೇಳಿದ್ದಾರೆ.

೨

ಪಾರತಂತ್ರ್ಯ ಶೃಂಖಲೆಯಲ್ಲಿ ಭೀತರಾಗಿದ್ದ, ಜಗತ್ತಿನ ಐದನೆಯ ಒಂದು ಭಾಗವಾದ ಈ ಜನಾಂಗಕ್ಕೆ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟು, ಜಗತ್ತಿನ ರಾಷ್ಟ್ರಗಳ ಪಂಕ್ತಿಯಲ್ಲಿ ಇದಕ್ಕೆ ಗೌರವವಾದ ಗಣ್ಯವಾದ ಸ್ಥಾನವನ್ನು ದೊರಕಿಸಿದ ರಾಷ್ಟ್ರಪಿತನ ಸ್ಮಾರಕ, ಆತನ ಜೀವನವನ್ನು ಅಧ್ಯಯನಮಾಡಿ ಅನುಷ್ಠಾನ ಮಾಡುವುದೇ ಆಗಿದೆ. ಮಹಾತ್ಮ ಗಾಂಧಿಯವರ ಜೀವನದ ಮುಖ್ಯ ಗುರಿ ಧರ್ಮನೀತಿ, ಮತ್ತು ಧರ್ಮ ವಿಲ್ಲದ ಬಾಳು ಮರುಭೂಮಿ ಎಂಬುದು ವ್ಯಕ್ತಿಗೆ ಹೇಗೆ ನೀತಿಯೇ ಪ್ರಾಧಾನ್ಯವೋ ರಾಜಕೀಯಕ್ಕೂ ಹಾಗೆಯೇ ನೀತಿ ಪ್ರಾಧಾನ್ಯ. ನೀತಿಯ ಬೆಳಕಿಲ್ಲದ ಮನುಷ್ಯನ ಬಾಳು ವ್ಯರ್ಥ. ನೀತಿಯ ಮಾರ್ಗ ದಲ್ಲಿ ನಡೆಯದೆ ರಾಜ್ಯವನ್ನು ಕಟ್ಟಿದರೂ ಆ ರಾಜ್ಯ ಉಳಿಯುವುದಿಲ್ಲ. ದೇಶಕ್ಕೆ ನಾಯಕರಾಗುವವರ ಚರಿತ್ರೆ ನಿರ್ಮಲವಾಗಿರಬೇಕು. ಅವರ ಚಾರಿತ್ರ್ಯ ಪರಿಶುದ್ಧವಾದರೆ ಅದರಿಂದಲೇ ಅವರು ಮಾಡಬೇಕಾದ ಕಾರ್ಯಸಾಧಿಸುವುದು. ಈ ವಿಷಯದಲ್ಲಿ ಗಾಂಧಿಯವರು ನಮ್ಮ ದೇಶದ ಪೂರ್ವಕಾಲದ ಋಷಿಗಳಂತೆ "ನಿನ್ನನ್ನು ನೀನು ತಿದ್ದಿಕೊ! ಜಗತ್ತು ತನ್ನನ್ನು ತಾನು ತಿದ್ದಿಕೊಳ್ಳುವುದು. ಅದರ ಯೋಚನೆ ನಿನಗೆ ಬೇಡ" ಎಂದು ಬೋಧಿಸಿದರು. ವ್ಯಕ್ತಿ ತನ್ನ ಜೀವನವನ್ನು ಪರಿಶುದ್ಧವಾಗಿಟ್ಟು

ಕೊಳ್ಳದೆ ರಾಜಕೀಯದಲ್ಲಿ ಮಾತ್ರ ಸತ್ಯ ನ್ಯಾಯ ನಿಷ್ಪಕ್ಷಪಾತತೆಯನ್ನು ಸ್ಥಾಪಿಸುತ್ತೇನೆನ್ನುವುದು ಸಾಧ್ಯವಿಲ್ಲ. ರಾಜಕೀಯ ಪರಿಶುದ್ಧವಾದ ಒಂದು ಪೂರ್ಣ ಜೀವನದ ಅಂಗ ಮಾತ್ರ. ರಾಜಕೀಯದಲ್ಲಿ ಕೆಲಸ ಮಾಡುವವರು ಸ್ಥಿತಪ್ರಜ್ಞರಂತೆ ತಪಸ್ವಿಗಳಂತೆ ತ್ಯಾಗಿಗಳಂತೆ ಆಗ ಬೇಕು. ಹಿಂದಲ ಅಧಿಕಾರಿಗಳಂತೆ ಅವರೂ ಮದಾಂಧರಾದರೆ, ನ್ಯಾಯ ಬಾಹಿರರಾದರೆ, ಅದು ರಾಮರಾಜ್ಯವಾಗುವುದಿಲ್ಲ.

ಒಬ್ಬ ವ್ಯಕ್ತಿ, ಯಾವ ಆಡಂಬರವೂ ಇಲ್ಲದೆ—ಅಧಿಕಾರ ದರ್ಪ ಸಹ ಇಲ್ಲದೆ—ಬರಿಯ ಆತ್ಮಶಕ್ತಿಯಿಂದಲೇ ಪ್ರಪಂಚವನ್ನೆಲ್ಲಾ ತನ್ನ ಪ್ರಭಾವಕ್ಕೆ ಒಳಪಡಿಸಬಲ್ಲನೆಂಬುದಕ್ಕೆ ಗಾಂಧಿಯವರ ಜೀವಿತವೇ ಸಾಕ್ಷಿ. ಗಾಂಧಿಯವರೇ ಒಂದೆಡೆ "ಧರ್ಮಿಷ್ಠನಾದವನು ಒಬ್ಬನು ಇದ್ದರೂ ಸಾಕು, ಅವನಿಂದ ದೇಶ ಉದ್ಧಾರವಾಗುತ್ತದೆ. ಆ ದೇಶಕ್ಕೆಲ್ಲ ಅವನೊಬ್ಬನೇ ತಾರಕನಾಗುತ್ತಾನೆ. ಹರಿಶ್ಚಂದ್ರ ಪ್ರಹ್ಲಾದ ಇವರ ಉದಾಹರಣೆ ನೋಡಿ" ಎಂದಿದ್ದಾರೆ. ಈ ಧರ್ಮಮಾರ್ಗವೇ ಗಾಂಧಿಯಂತಹ ಮನುಷ್ಯ ವ್ಯಕ್ತಿಗೆ ಈ ಅದ್ಭುತ ಮಹಿಮೆಯನ್ನು ಕೊಟ್ಟಿರುವುದು. ಅವರ ಆತ್ಮಕಥೆಯನ್ನು ಓದುವವರಿಗೆ ಗಾಂಧಿ ಬಾಲ್ಯದಲ್ಲಿ ಅತಿ ಸಾಮಾನ್ಯ ವ್ಯಕ್ತಿಯಾಗಿದ್ದರೆಂದು ಗೊತ್ತಾಗುತ್ತದೆ. ಪಾಠಶಾಲೆಯಲ್ಲಿಯೂ ಅವರು ಅಂತಹ ಪ್ರತಿಭಾವಂತರಾಗಿರಲಿಲ್ಲ. ಅವರು ಬಹಳ ಮುಖಹೇಡಿಯಾಗಿ ಇತರರೊಂದಿಗೆ ಸೇರದೆ ಆಟಪಾಟಗಳಲ್ಲಿ ಭಾಗವಹಿಸದೆ ತಮ್ಮಷ್ಟಕ್ಕೆ ತಾವು ಇರುತ್ತಿದ್ದರು. ಅವರು ಕತ್ತಲೆಯಲ್ಲಿ ಹೊರಕ್ಕೆ ಹೋಗುತ್ತಿರಲಿಲ್ಲ. ಪಿಶಾಚಿ ಭೂತ ಹಾವುಗಳ ಭಯ ಅವರಿಗೆ ಹೆಚ್ಚಾಗಿತ್ತು. ಕದಿಯುವುದು, ಬೀಡಿ, ತಮ್ಮ ಪದ್ಧತಿಗೆ ವಿರೋಧವಾದ ಮಾಂಸಾಹಾರ ಇವೆಲ್ಲಾ ಸಾಧಾರಣ ದುರ್ಬಲ ಮನುಷ್ಯನ ಲಕ್ಷಣಗಳಾಗಿ ಅವರಲ್ಲಿಯೂ ಮನೆಮಾಡಿಕೊಂಡಿದ್ದವು. ಆದರೆ ಧರ್ಮಿಷ್ಠಳಾದ ಅವರ ತಾಯಿಯ ಪ್ರಭಾವ ಅವರ ಮೇಲೆ ಹೆಚ್ಚಾಗಿ ಬಿದ್ದುದರಿಂದ ತಾವು ಮಾಡಿದ ತಪ್ಪುಗಳನ್ನೆಲ್ಲಾ ಅವರು ಬೇಗ ಬೇಗ ಅಲ್ಲಲ್ಲಿಯೇ ತಿದ್ದಿಕೊಂಡರು. ತಾಯಿಗೆ ಕೊಟ್ಟ ವಾಗ್ದಾನದಂತೆ ಪರಿಶುದ್ಧರಾಗಿ, ಸೀಮೆಯಿಂದ ಹಿಂದಿರುಗಿದರು. ಸತ್ಯ, ಗಾಂಧಿಯವರಿಗೆ

ಪ್ರಾರಂಭದಿಂದಲೂ ದೇವರು. ಇದು ಅವರ ಅತಿ ಬಾಲ್ಯದಿಂದಲೂ, ಅವರನ್ನು ಆಕರ್ಷಿಸಿದ ಗುಣ. ಬಾಲ್ಯದಲ್ಲಿ ಒಂದು ಸಲ ಪಾಠಶಾಲೆಗೆ ಸಾವಕಾಶವಾಗಿ ಹೋದಾಗ, ಉಪಾಧ್ಯಾಯರು 'ಗಾಂಧಿ ಹೇಳಿದ ಕಾರಣವನ್ನು ನಂಬದೆ ಗಾಂಧಿಯವರನ್ನು ಬಡಿದರು. ಗಾಂಧಿಯವರಿಗೆ ತಮಗೆ ಏಟುಬಿದ್ದುದಕ್ಕೆ ದುಃಖವಾಗಲಿಲ್ಲ. "ನನ್ನ ಮಾತನ್ನು ನಂಬದೆ ಹೋದರಲ್ಲ" ಎಂದು ದುಃಖವಾಯಿತು. ಸುಳ್ಳು ಹೇಳ ಬೇಕಲ್ಲ ಎಂಬ ಕಾರಣದಿಂದ ಅವರು ಮಾಂಸಾಹಾರವನ್ನು ಬಿಟ್ಟರು. "ನನಗೆ ಒಂದು ದೃಢವಾಯಿತು. ನೀತಿಯೇ ಎಲ್ಲಾ ವಸ್ತುಗಳ ಮೂಲ, ಸತ್ಯವೇ ಎಲ್ಲಾ ನೀತಿಯ ತಿರುಳು." ತಮ್ಮ ಬಾಲ್ಯವನ್ನು ಕುರಿತು ಹೇಳುತ್ತಾ ಗಾಂಧಿ, ಸತ್ಯ ನೀತಿ ಪ್ರೇಮ ತಮ್ಮ ಮೇಲೆ ಉಂಟುಮಾಡಿದ ಪ್ರಭಾವ ಯಾವ ಸಾಮಾನ್ಯವಾದ ಒಂದು ಗುಜ ರಾತಿ ಪದ್ಯದಿಂದ ಆಯಿತೆಂದು ತೋರಿಸಿದ್ದಾರೆ. ಅದರ ಭಾವ ಹೀಗಿದೆ "ನಿನಗೆ ಒಳ್ಳೆಯದನ್ನು ಆಶಿಸುವವರಿಗೆ ಶ್ರದ್ಧೆಯಿಂದ ನಮಸ್ಕರಿಸು. ನಿನಗೆ ಒಂದು ಲೋಟ ನೀರುಕೊಟ್ಟು ದಾಹವನ್ನು ಹೋಗಲಾಡಿಸಿದವ ರಿಗೆ ಮೃಷ್ಟಾನ್ನ ಭೋಜನವನ್ನು ಕೊಡು. ನಿನಗೆ ಒಂದು ಕಾಸು ಕೊಟ್ಟ ವರಿಗೆ ಚಿನ್ನದ ನಾಣ್ಯವನ್ನು ಕೊಡು. ನಿನ್ನ ಪ್ರಾಣವನ್ನುಳಿಸಿದವರಿಗೆ ನಿನ್ನ ಜೀವನವನ್ನೇ ಕೊಡಲು ಸಿದ್ಧನಾಗು. ಹೀಗೆ ಉಪಕಾರಕ್ಕೆ ಹತ್ತರಷ್ಟು ಪ್ರತ್ಯುಪಕಾರ ಮಾಡುವುದೇ ಜ್ಞಾನಿಗಳ ಬೋಧನೆ ಮತ್ತು ಆಚಾರ. ಆದರೆ ನಿಜವಾಗಿ ವಿಶಾಲ ಹೃದಯರಾದವರು ಇಷ್ಟಕ್ಕೆ ನಿಲ್ಲದೆ ತಮಗೆ ಕೇಡುಮಾಡಿದವರಿಗೂ ಒಳ್ಳೆಯದನ್ನೆ ಮಾಡುತ್ತಾರೆ."*

---

* ವಿಷ ಉಣಿಸಿದವರಿಗೆ ಅಮೃತಾನ್ನ ಉಣಿಸಲಿಬೇಕು
ದ್ವೇಷಮಾಡಿದವನ ಪೋಷಿಸಲಿಬೇಕು
ಹುಸಿದು ಮನೆಕೊಂಬುವನ ಹಾಡಿ ಹರಸಲುಬೇಕು
ವ್ಯಸನಬಡಿಸುವನ ಮುಗನ್ನೆಸರಿಡಲಿಬೇಕು
ಧರ್ಮವೇ ಜಯವೆಂಬೊದಿದು ದಿವ್ಯಮಂತ್ರ

[ಪುರಂದರ ದಾಸರು]

ಈ ಮೇಲಿನ ಗೀತೆ ಸಾಮಾನ್ಯವಾದರೂ ಗಾಂಧಿಯವರ ಮನೋಭಾವ ಸತ್ಯಪ್ರೇಮದ ಕಡೆಗೆ ಇದ್ದುದರಿಂದ ಅದರ ಪರಿಣಾಮ ಅವರ ಮೇಲೆ ಬಹಳವಾಯಿತು. ನ್ಯಾಯಸ್ಥಾನದಲ್ಲಿ ಎದ್ದು ನಿಂತು ತನ್ನ ಕಕ್ಷಿಗಾರನಾದವನ ಮೊಖದ್ದಮೆಯನ್ನು ನಡೆಸಲು ಸಹ ಧೈರ್ಯವಿಲ್ಲದೆ ಕೊನೆಯಲ್ಲಿ ಈ ದೇಶವನ್ನು ಬಿಟ್ಟು ಆಫ್ರಿಕಕ್ಕೆ ಹೋಗಿ ಅಲ್ಲಿ ಒಂದು ಹೊಸ ಅಸ್ತ್ರವನ್ನು ಕಂಡುಹಿಡಿದು ಅದನ್ನು ಜಯಶಾಲಿಯಾಗಿ ಪ್ರಯೋಗಿಸಿ, ಅನಂತರ ಜಗತ್ತಿನ ಐದನೆಯ ಒಂದು ಭಾಗವಾದ ಭಾರತೀಯರ ಚಳುವಳಿಗಳ ನಾಯಕರಾಗಿ ಹಿಂದಿರುಗಿದುದು ಅಂತಹ ಹೇಡಿಗೆ ಅದ್ಭುತ ಸಾಹಸವೇ. ಈ ಸಾಹಸದ ಇತಿಹಾಸ ಒಳ್ಳೆಯ ನವರಸ ಕಾದಂಬರಿಯಂತೆ ರೋಮಾಂಚಕಾರಿಯಾಗಿದೆ. ಗಾಂಧಿಯವರನ್ನು ಸಾಧಾರಣ ಮನುಷ್ಯರನ್ನಾಗಿ ಭಾವಿಸಿ ಅವರ ಸಾಧನೆಯ ಗುಟ್ಟು, ಅವರು ತಮ್ಮಲ್ಲಿ ಅಳವಡಿಸಿಕೊಂಡ ಆತ್ಮಶಕ್ತಿ, ಸತ್ಯಪ್ರೇಮ ಎಂಬುದನ್ನು ಪರಿಗಣಿಸಿದರೆ ಆ ಸುಗುಣಗಳೆಲ್ಲಾ ಅವರಲ್ಲಿ ಮೂಡಿದುದೂ ಅವರ ಬಾಳಿಗೂ ಒಂದು ಅರ್ಥವು ಬಂದುದೂ ಅವರ ಮನಸ್ಸು ಪರಿಪಕ್ವವಾಗುತ್ತಿದ್ದ ದಕ್ಷಿಣ ಆಫ್ರಿಕದಲ್ಲಿದ್ದ ಆ ಕಾಲದಲ್ಲಿಯೇ ಎಂದು ಗೊತ್ತಾಗುತ್ತದೆ. ಆ ದೃಷ್ಟಿಯಿಂದ ಪರಿಗಣಿಸುವಾಗ ಪ್ರತಿಯೊಬ್ಬರಿಗೂ "ನಮ್ಮ ಜೀವಮಾನಕಾಲದಲ್ಲಿ ಗಾಂಧಿಯವರಿಗೆ ಒದಗಿದ ಆ ಪರೀಕ್ಷಾ ಸಮಯಗಳು ಒದಗಿಯೇ ಒದಗುತ್ತವೆ. ಆದರೆ ಅವುಗಳನ್ನು ಎದುರಿಸಿ ಆ ಪರೀಕ್ಷಾ ಸಮಯಗಳನ್ನು ತಮ್ಮ ಬಾಳಿನ ಉತ್ತಮತೆಗೆ ಸಾಧಕವಮಾಡಿಕೊಳ್ಳುವ ಶಕ್ತಿಯೇ ಗಾಂಧಿಯವರಿಗೂ ನಮಗೂ ಇರುವ ವ್ಯತ್ಯಾಸ" ಎಂದು ತಿಳಿಯುತ್ತದೆ.

ಗಾಂಧಿಯವರು, ಇಂಗ್ಲೆಂಡಿನಿಂದ ಬ್ಯಾರಿಸ್ಟರ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಬೊಂಬಾಯಿನ ನ್ಯಾಯಸ್ಥಾನದಲ್ಲಿ ನ್ಯಾಯವಾದಿಗಳಾಗಿ ಸ್ವಲ್ಪಕಾಲ ಕೆಲಸಮಾಡಿ, ಅಲ್ಲಿ ಹೆಚ್ಚು ಜಯದ ಆಸೆಯನ್ನು ಕಾಣದೆ ತಮ್ಮ ೨೪ ನೆಯ ವಯಸ್ಸಿನಲ್ಲಿ ದಕ್ಷಿಣ ಆಫ್ರಿಕಕ್ಕೆ ಒಂದು ಮೊಖದ್ದಮೆಯಲ್ಲಿ ವಕೀಲರಾಗಿ ಹೋದರು. ಅವರ ವಯಸ್ಸು, ಉತ್ಸಾಹ, ವಿದ್ಯೆ, ಹಿಡಿದಿದ್ದ ದೊಡ್ಡ ಮೊಖದ್ದಮೆ—ಇವುಗಳೆಲ್ಲದರ

ದೃಷ್ಟಿಯಿಂದ ಗಾಂಧಿಯವರ ಭವಿಷ್ಯ ಬ್ಯಾರಿಸ್ಟರ್ ಉದ್ಯೋಗದಲ್ಲಿ ಒಳ್ಳೆಯ ಆಶಾದಾಯಕವಾಗಿದ್ದಿತು. ಅದರಲ್ಲಿ ಮುಂದುವರಿದಿದ್ದರೆ ಅವರು ಬಹುಶಃ ಲಕ್ಷಾಂತರ ದ್ರವ್ಯವನ್ನು ಗಳಿಸಿ ಸುಖವಾಗಿರಬಹುದಾಗಿದ್ದಿತು. ಗಾಂಧಿಯವರು ದರ್ಬಾನ್‌ಗೆ ಹೋದ ನಾಲ್ಕಾರು ದಿನಗಳಲ್ಲಿಯೇ ಅಲ್ಲಿಯ ನ್ಯಾಯಸ್ಥಾನವನ್ನು ನೋಡಲು ಹೋದರು. ಇವರನ್ನು ಕಂಡು ನ್ಯಾಯಾಧಿಪತಿಗಳು "ರುಮಾಲನ್ನು ತೆಗೆಯಿರಿ" ಎಂದರು. ಅದುವರೆಗೆ ಎಷ್ಟೋ ಭಾರತೀಯರು ಹಾಗೆ ಮಾಡಿ ಆಗಿದ್ದಿತು ಮತ್ತು ಅದನ್ನು ಅವಮಾನವೆಂದೂ ತಿಳಿದಿರಲಿಲ್ಲ. ಆತ್ಮಗೌರವ ಕಡಿಮೆಯಾದವರಾಗಿದ್ದರೆ ಗಾಂಧಿಯವರೂ ಹಾಗೆ ಮಾಡಬಹುದಾಗಿದ್ದಿತು; "ನನಗೇನು? ನಾನು ಇಲ್ಲಿ ಇರುವುದಕ್ಕೆ ಬಂದಿದ್ದೇನೆಯೆ? ಕೋರ್ಟಿನ ಒಂದು ವಾದಕ್ಕೆ ಬಂದಿದ್ದೇನೆ. ಇವರ ವ್ಯಾಜ್ಯ ಕಟ್ಟಿಕೊಂಡು ನನಗೆ ಆಗಬೇಕಾದುದೇನು? ನನ್ನ ವಾದ ನಾನು ಮಾಡಿ ಹೊರಟು ಹೋಗೋಣ" ಎಂದು ಉದಾಸೀನರಾಗಿರಬಹುದಾಗಿದ್ದಿತು. ಆದರೆ ಗಾಂಧಿಯವರು ಆ ಅವಮಾನವನ್ನು ಸಹಿಸದೆ ನ್ಯಾಯಸ್ಥಾನವನ್ನೇ ಬಿಟ್ಟು ಹೊರಟು ಹೋದರು.

ಆದರೆ ತಮ್ಮ ದೀಕ್ಷೆಯನ್ನು ಕೈಕೊಳ್ಳುವ ಸಮಯ ಗಾಂಧಿಯವರಿಗೆ ಇನ್ನೂ ಬಂದಿರಲಿಲ್ಲ. ಅದೂ ಒಂದು ವಾರದೊಳಗಾಗಿಯೇ ಸಂಭವಿಸಿತು. ದರ್ಬಾನನ್ನು ಸೇರಿದ ಮುಂದಲವಾರದಲ್ಲಿಯೇ ಗಾಂಧಿಯವರು ಪ್ರಿಟೋರಿಯಾಕ್ಕೆ ಹೊರಟರು ಆ ದೀರ್ಘಪ್ರಯಾಣವನ್ನು ರೈಲಿನಲ್ಲಿಯೂ ಕುದುರೆ ಗಾಡಿಯಲ್ಲಿಯೂ ಮಾಡಬೇಕಾಗಿದ್ದಿತು. ಮಾರಿಟ್ಸ್‌ಬರ್ಗ್ ಎಂಬಲ್ಲಿ ಮೊದಲನೆಯ ತರಗತಿಯಲ್ಲಿ ಗಾಂಧಿಯವರು ಹೋಗುತ್ತಿದ್ದಾಗ ಬಿಳಿಯ ಪ್ರಯಾಣಿಕನೊಬ್ಬನು ಬಂದು ಇವರನ್ನು ಇಳಿಯಬೇಕೆಂದು ಹೇಳಿದ. ಆಫ್ರಿಕದ ಬಿಳಿಯವರಲ್ಲಿದ್ದ ವರ್ಣದ್ವೇಷ ಹಾಗಿತ್ತು. ಬಿಳಿಯವನಲ್ಲದವನು ಹಣಕೊಟ್ಟರೂ ಮೊದಲನೆಯ ತರಗತಿಯಲ್ಲಿ ಪ್ರಯಾಣಮಾಡುವ ಅವಕಾಶ ಅವನಿಗೆ ಇರಲಿಲ್ಲ. ಗಾಂಧಿಯವರು ಇಳಿಯುವುದಿಲ್ಲವೆಂದುದೂ ರೈಲ್ವೆ ಸ್ಟೇಷನ್ ಅಧಿಕಾರಿಗಳಿಗೆ ಹೇಳಿದುದೂ ವ್ಯರ್ಥವಾಯಿತು. ಪ್ರಯಾಣಿಕನು ಗಾಂಧಿಯವರ

ಹಾಸಿಗೆಯನ್ನು ಕೆಳಗಿಸೆದನು. ಗಾಂಧಿಯವರೂ ಕೆಳಕ್ಕೆ ಇಳಿದು ಸ್ಟೇಷನ್ನಿನಲ್ಲಿ ಛಳಿಯಲ್ಲಿ ಯೋಚಿಸುತ್ತಾ ಕುಳಿತರು.

ಆ ದಿನ ಅಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದ ಕೈಯಿಂದ ಭಾರತ ಬಿಡುಗಡೆ ಹೊಂದಿತೆಂದು ಹೇಳಬಹುದು. ಯಾಕೆಂದರೆ ಭಾರತೀಯರಿಗೆ ಉಂಟಾಗಿರುವ ಅಗೌರವವನ್ನೂ ಅನ್ಯಾಯವನ್ನೂ ತೊಡೆದು ಹಾಕಲು ಹೋರಾಡಬೇಕೆಂದು ಗಾಂಧೀಜಿ ಅಲ್ಲಿ ನಿಶ್ಚಯಿಸಿದರು. ಯಾವುದು ಸಾಮಾನ್ಯ ಮನುಷ್ಯನ ಉತ್ಸಾಹ ಶಕ್ತಿಯನ್ನು ಅಡಗಿಸಿ ಅವನ ಸ್ವಾತಂತ್ರ್ಯ ಮನೋಭಾವನೆಯನ್ನು ಕುಗ್ಗಿಸುವುದಾಗಿದ್ದಿತೋ ಅದೇ ಗಾಂಧಿಯವರ ಹೋರಾಟಕ್ಕೆ ಸ್ಫೂರ್ತಿಯಾಯಿತು. ಆಗ ದೇವರು ತಮಗೆ ಮಾರ್ಗದರ್ಶಕನಾಗಿದ್ದನೆಂದು ಗಾಂಧಿ ಹೇಳುತ್ತಾರೆ. ಈಚೆಗೆ ಡಾಕ್ಟರ್ ಮಾಟ್ ಎಂಬುವರು ಗಾಂಧಿಯವರನ್ನು " ದೇವರು ನಿಮ್ಮ ಕಾರ್ಯದ ಹಿಂದೆ ಇದ್ದಾನೆ ಎಂಬುದಕ್ಕೆ ನಿಮಗೆ ಯಾವಾಗಲಾದರೂ ಪ್ರತ್ಯಕ್ಷ ಪ್ರಮಾಣ ದೊರಕಿತೇ? ಎಂದು ಕೇಳಿದಾಗ ಗಾಂಧಿಯವರು " ಹೌದು ದೊರಕಿದೆ. ದಕ್ಷಿಣ ಆಫ್ರಿಕದಲ್ಲಿ ಅವಮಾನಿತನಾಗಿ ಆ ಛಳಿಯಲ್ಲಿ ನಡುಗುತ್ತ ನಾನೊಬ್ಬನೇ ರೈಲ್ವೆ ಸ್ಟೇಷನ್‌ನಲ್ಲಿ ಬಿದ್ದಿದ್ದೆ. ಒಂದು ಕಡೆ ನನ್ನ ದೇಶಕ್ಕೆ ಸುಮ್ಮನೆ ಹಿಂದಿರುಗಿಬಿಡೋಣವೇ ಎಂಬ ಭಾವ; ಮತ್ತೊಂದೆಡೆ ಆತ್ಮಗೌರವವನ್ನು ಕಳೆದುಕೊಳ್ಳುವುದಕ್ಕಿಂತ ಸಾಯುವುದು ಲೇಸು. ಪ್ರಾಣ ಹೋದರೂ ಚಿಂತೆಯಿಲ್ಲ. ಇಲ್ಲಿ ಹೋರಾಡಬೇಕು ಎಂಬ ಭಾವ. ಮೊದಲನೆಯದು ಸುಲಭವಾಗಿತ್ತು. ಎರಡನೆಯದು ಕಷ್ಟವಾಗಿತ್ತು. ಪರದೇಶದಲ್ಲಿ ಅನಾಥನಾಗಿ ಒಬ್ಬನೇ ಆಗಿ ಕುಳಿತಿದ್ದ ನನಗೆ ಆಗ ದೇವರು ಹೊರತು ಬೇರೆ ಯಾವ ಸಹಾಯಕರೂ ಇರಲಿಲ್ಲ. ಆಗ ದೇವರು ಹೋರಾಡು ಎಂದು ಸ್ಫೂರ್ತಿಕೊಟ್ಟನು. ಆತನೇ ನನ್ನ ಕೈಹಿಡಿದು ನಡೆಸಿದನು '' ಎಂದಿದ್ದಾರೆ.

ಅದೇ ಗಾಂಧಿಯವರ ಜೀವಿತದ ಪರ್ವಕಾಲ. ಇಪ್ಪತ್ತನಾಲ್ಕು ವಯಸ್ಸಿನ ಬ್ಯಾರಿಸ್ಟರ್ ತನ್ನ ಸಂಪಾದನೆ, ಹೆಂಡತಿ ಮಕ್ಕಳು, ಸ್ವಂತ ಸುಖಗಳ ಆಸೆ ಬಿಟ್ಟು ಪರದೇಶದಲ್ಲಿ ತಾನು ಅಪ್ರಸಿದ್ಧನಾಗಿ ಸೇವೆಗೆ ನಿಂತನು. ಅಲ್ಲಿಂದ ಮುಂದೆ ಗಾಂಧಿಯವರಿಗೆ ಸ್ವಂತವೆಂಬುದು

ಯಾವುದೂ ಉಳಿಯಲಿಲ್ಲ. ಸೇವೆಯೇ ಅವರ ಮಂತ್ರವಾಯಿತು. ಸೇವೆಯೇ ಅವರ ಜೀವನದ ಗುರಿಯಾಯಿತು. ದಕ್ಷಿಣ ಆಫ್ರಿಕದ ಭಾರತೀಯರ ಸೇವೆಯನ್ನು ಅವರು ತಮ್ಮ ಜೀವನದ ಧ್ಯೇಯವಾಗಿ ಮಾಡಿಕೊಂಡರು. ಅದರಿಂದ ಹೊರಗಾದುದು ಯಾವುದೂ ಅವರಿಗೆ ಸಂಬಂಧಪಟ್ಟಿರಲಿಲ್ಲ. ಅವರ ಸಮಸ್ತಶಕ್ತಿಗಳೂ ಭಾರತೀಯರ ಉನ್ನತಿಗೆ ಮೀಸಲಾದವು. ಆ ಚಿಕ್ಕ ವಯಸ್ಸಿನಲ್ಲಿಯೇ ಗಾಂಧಿಯವರು ಭಾರತೀಯರ ಪ್ರತಿನಿಧಿಯಾದರು. ಸೇವಾ ದೀಕ್ಷೆಯ ಜತೆಯಲ್ಲಿ ವೈರಾಗ್ಯವೂ ಉಂಟಾಯಿತು. ತಮಗೆ ಉಂಟಾದ ಯಾವ ಸ್ವಂತ ಅನ್ಯಾಯಕ್ಕಾಗಿಯೂ ಕಾನೂನಿನ ರಕ್ಷಣೆ ಪಡೆಯುವುದಿಲ್ಲವೆಂದು ಅವರು ನಿಶ್ಚಯಿಸಿದರು. ಮೊದಲೇ ಅವರಲ್ಲಿ ಜಾಗೃತವಾಗಿದ್ದ ಧರ್ಮಬುದ್ಧಿ ಉಜ್ವಲವಾಯಿತು. ತಾನು ದೇಶದ ಸೇವಕ ಎಂಬ ಭಾವನೆ ಬಂದಕೂಡಲೇ ಹೇಡಿಯಾಗಿದ್ದ ಗಾಂಧಿ, ಧೀರರಾದರು. ತ್ಯಾಗವು ಅವರಿಗೆ ಆ ಬಲವನ್ನು ಕೊಟ್ಟಿತು. ಆತ್ಮಗೌರವ ಸ್ವಾವಲಂಬನೆ ಇವು ಅವರ ಜೀವನದ ಗುರಿಗಳಾದವು. ಯಾವುದಕ್ಕೂ ಯಾರನ್ನು ಕುರಿಯದೆ ಜೀವಿಸಬೇಕೆಂಬುದು ಅವರ ಧ್ಯೇಯವಾಯಿತು. ಮೊದಲಿಂದಲೇ ಅವರಿಗೆ ಮಿತವ್ಯಯು ಅಭ್ಯಾಸವಾಗಿತ್ತು. ಇಂಗ್ಲೆಂಡಿನಲ್ಲಿ ಬ್ಯಾರಿಸ್ಟರ್ ಪರೀಕ್ಷೆಗೆ ಓದುತ್ತಿರುವಾಗ ಮೊದಲು ತಿಂಗಳಿಗೆ ಹದಿನೈದು ಪೌಂಡು ಖರ್ಚುಮಾಡುತ್ತಿದ್ದವರು ಸ್ವಲ್ಪ ಕಾಲದಲ್ಲಿ ಅದನ್ನು ನಾಲ್ಕು ಪೌಂಡಿಗೆ ಇಳಿಸಿದ್ದರು. ಯಾವುದಕ್ಕೂ ಪರರ ಮೇಲೆ ಅವಲಂಬಿಸಬಾರದೆಂಬುದು ಗಾಂಧಿಯವರ ಮುಖ್ಯ ತತ್ತ್ವ. ಈ ಗುಣವನ್ನು ಅವರು ದಕ್ಷಿಣ ಆಫ್ರಿಕದಲ್ಲಿದ್ದಾಗಲೇ ಮೈಗೂಡಿಸಿಕೊಂಡಿದ್ದರು. ಒಂದು ಸಲ ಅವರೇ ತಮ್ಮ ಹೆಂಡತಿಯ ಪ್ರಸವದಲ್ಲಿ ಸೂಲಗಿತ್ತಿಯಾಗಿದ್ದರು. ಬಿಳಿಯವರ ಪಾಠಶಾಲೆಗಳಲ್ಲಿ ಭಾರತೀಯರ ಮಕ್ಕಳಿಗೆ ಶಿಕ್ಷಣವನ್ನು ಕೊಡುತ್ತಿರಲಿಲ್ಲವಾಗಿ ಗಾಂಧಿಯವರೇ ಉಪಾಧ್ಯಾಯರಾದರು. ಭಾರತೀಯರಿಗೆ ದಕ್ಷಿಣ ಆಫ್ರಿಕದ ಸೆಲೂನ್‌ಗಳಲ್ಲಿ ಕ್ಷೌರಮಾಡುತ್ತಿರಲಿಲ್ಲ. ಗಾಂಧಿಯವರು ತಾವೇ ಕ್ಷೌರಮಾಡಿಕೊಳ್ಳುವುದನ್ನು ಪ್ರಾರಂಭಿಸಿದರು. ಮೊದಲ ದಿವಸ ಮಾಡಿಕೊಂಡಾಗ ಅಭ್ಯಾಸವಿಲ್ಲದುದರಿಂದ ತಲೆ

ಒಂದೇ ಸಮನಾಗಿರಲಿಲ್ಲ. ನ್ಯಾಯಸ್ಥಾನದಲ್ಲಿ ಇವರನ್ನು ನೋಡಿದ ಸ್ನೇಹಿತರು "ನಿಮ್ಮ ತಲೆಯನ್ನು ಇಲಿ ಮೇದಿದೆ" ಎಂದು ಹಾಸ್ಯ ಮಾಡಿದರು. ಈ ಸ್ವಾವಲಂಬನೆ ದೇಶಕ್ಕೂ ವ್ಯಕ್ತಿಗೂ ಎಂದೆಂದಿಗೂ ಇರಬೇಕೆಂದು ಗಾಂಧಿಯವರು ಅಂದಿನಿಂದ ಹೇಳುತ್ತಲೇ ಇದ್ದಾರೆ. ಹೊರದೇಶಗಳಿಂದ ಆಹಾರವನ್ನು ತರಿಸಬೇಕೆಂದು ನಮ್ಮವರು ಹವಣಿಸುವಾಗಲೆಲ್ಲ ಗಾಂಧಿಯವರು "ಸ್ವಾವಲಂಬಿಗಳಾಗಿ ಇಲ್ಲಿಯೇ ಬೆಳೆಯಿರಿ'' ಎಂದು ಬೋಧಿಸುತ್ತಿದ್ದರು. ಖಾದಿಗೆ ಅವರು ಅಷ್ಟು ಪ್ರಾಶಸ್ತ್ಯವನ್ನು ಕೊಟ್ಟ ಕಾರಣವೂ ಅದೇಯೆ. ಈ ಸ್ವಾವಲಂಬನೆ ಕೊನೆಯವರೆಗೆ ಗಾಂಧಿಯವರನ್ನು ಬಿಡಲಿಲ್ಲ. ಮೊನ್ನೆ ಮೊನ್ನೆ ನವಖಲಿಗೆ ಹೋಗುವಾಗ ಸಹ ಗಾಂಧಿಯವರು ಯಾರ ಸಹಾಯವನ್ನು ಬಯಸದೆ ಹೊರಟರು.. ಅಲ್ಲಿಂದ ಹಳ್ಳಿಗಳಿಗೆ ಹೋಗುವಾಗ ತಮ್ಮ ಪದಾರ್ಥಗಳನ್ನು ತಾವೇ ಹೊರಲು ಸಾಧ್ಯವಾಗುವಂತೆ ಒಂದು ಗಂಟು ಕಟ್ಟಿಕೊಂಡರು. ಕೊಲೆಪಾತಕನ ಗುಂಡಿಗೆ ಸಿಕ್ಕುವುದಕ್ಕೆ ನಾಲ್ಕು ದಿನ ಮುಂಚೆ ಸಹ ನನಗೆ ಯಾರ ಸಹಾಯವೂ ಬೇಕಿಲ್ಲ ಎನ್ನುತ್ತಿದ್ದರು.

೩

ಗಾಂಧಿಯವರು ದಕ್ಷಿಣ ಆಫ್ರಿಕಾದಲ್ಲಿ ಸಾಧಿಸಿದ ಸಾಹಸಗಳಿಗೆ ಇನ್ನೂ ಹೆಚ್ಚು ಮಹತ್ವ ಬರಲು ಅವರು ಆ ಕಾಲದಲ್ಲಿ ಅನಾಮಧೇಯರಾಗಿ ಇನ್ನೂ ತಮ್ಮ ತತ್ವಗಳ ಪ್ರಯೋಗಾವಸ್ಥೆಯಲ್ಲಿದ್ದುದೂ ಕಾರಣ. ಆಗ, ಈಚೆಗೆಆದಂತೆ ಜಗತ್ತು ಅವರನ್ನು ಭೇಷ್ ಎಂದು ಕೊಂಡಾಡುವ ಸ್ಥಿತಿಯಲ್ಲಿರಲಿಲ್ಲ. ಗಾಂಧಿಯವರು ತಮ್ಮ ಶಕ್ತಿಗೆ ತಮ್ಮ ಮೇಲೆಯೇ ಅವಲಂಬಿಸಬೇಕಾಗಿತ್ತು.

ಮನುಷ್ಯನಿಗೆ ಶಕ್ತಿ ತನ್ನ ಆತ್ಮದಿಂದಲೇ ಬರಬೇಕು. ಹೊರಗಿನಿಂದ ಅಲ್ಲ. ಹೊರಗಿನಿಂದ ಬರುವ ಶಕ್ತಿ ಎರವಿನ ಶಕ್ತಿ ಎಂಬುದನ್ನು ಬಾಲ್ಯದಿಂದಲೂ ಚೆನ್ನಾಗಿ ಅರಿತಿದ್ದ ಗಾಂಧಿ, ಆಫ್ರಿಕಕ್ಕೆ ಹೋದ ಕೂಡಲೇ ವರ್ತಕರನ್ನು ಕುರಿತು ಮಾಡಿದ ಮೊದಲನೆಯ ಭಾಷಣದಲ್ಲಿ 'ಸತ್ಯ'ವನ್ನು ಕುರಿತು ಬೋಧಿಸಿದರು. ೧೮೯೪ ರಲ್ಲಿ ನೇಟಾಲ್ ಇಂಡಿಯನ್ ಕಾಂಗ್ರೆಸ್ ಸಂಸ್ಥೆಯನ್ನು ಸ್ಥಾಪಿಸಿದರು. "ಸಾರ್ವಜನಿಕ ಸಂಸ್ಥೆ

ಗಳು ತಮ್ಮ ಕಾಲಿನ ಮೇಲೆ ತಾವು ನಿಲ್ಲಬೇಕು. ಸಾಲ ತೆಗೆದು ಕೊಂಡು ಸಾರ್ವಜನಿಕ ಕಾರ್ಯವನ್ನು ಸಾಧಿಸುವುದು ಸಾಧ್ಯವಿಲ್ಲ. ಲೆಕ್ಕ ಗಳನ್ನು ಸರಿಯಾಗಿಡಬೇಕು. ಸಭೆಗಳನ್ನು ಸರಿಯಾಗಿ ಮಾಡ ಬೇಕು. ಲೆಕ್ಕಗಳೆಲ್ಲಾ ಮಾತೃಭಾಷೆಯಲ್ಲಿರಬೇಕು. ಒಂದು ಕಾಸನ್ನೂ ಪೋಲುಮಾಡಕೂಡದು. ಪ್ರತಿ ತಿಂಗಳೂ ಲೆಕ್ಕವನ್ನು ಸಾರ್ವಜನಿಕರ ಎದುರಿಗೆ ಇಡಬೇಕು." ಎಂದು ಗಾಂಧಿ ಬೋಧಿಸಿದರು. ಪಾಶ್ಚಾತ್ಯ ಸಂಸ್ಕೃತಿಯ ಮಂಕಿಗೆ ಒಳಗಾದವರಿಗೆ ಸರಿಯಾದ ಮಾರ್ಗದರ್ಶನ ಮಾಡಲು ಭಾರತ ವಿದ್ಯಾ ಸಂಸ್ಥೆ ಒಂದನ್ನು ಸಹ ಅವರು ಸ್ಥಾಪಿಸಿದರು.

ಆಫ್ರಿಕದಲ್ಲಿರುವಾಗ ಗಾಂಧಿಯವರ ಮನಸ್ಸು ಬಹಳ ಬೆಳೆಯಿತು. ಅವರು ಧರ್ಮಗಳ ಚರ್ಚೆಯಲ್ಲಿಯೂ ವ್ಯಾಸಂಗದಲ್ಲಿಯೂ ಬಹಳ ಶ್ರದ್ಧೆಯುಳ್ಳವರಾದರು. ಎಲ್ಲಾ ಮತಗ್ರಂಥಗಳನ್ನೂ ಅಭ್ಯಸಿಸಿದರು ಟಾಲ್‌ಸ್ಟಾಯ್‌ರವರ ಪ್ರಭಾವ ಅವರ ಮೇಲೆ ಬಹಳ ಆಯಿತು. ಅವರು ಭಗವದ್ಗೀತೆಯನ್ನೂ ಉಪನಿಷತ್ತನ್ನೂ ವ್ಯಾಸಂಗ ಮಾಡಿದರೂ, ಅವರಿಗೆ ಹಿಂದೂ ಧರ್ಮದ ಕೊರತೆಗಳಾದ ಜಾತಿಪದ್ಧತಿ ಮತ್ತು ದೋಷ ವಾದ ಅಸ್ಪೃಶ್ಯತೆ ಆಗಲೇ ಚೆನ್ನಾಗಿ ಮಂದಟ್ಟಾಯಿತು. ಸರ್ವ ಮತ ಗಳ ಸಾರವೂ ಒಂದೇ ಎಂಬ ಅವರ ನಂಬಿಕೆ, ವ್ಯಾಸಂಗದಿಂದ ಇನ್ನೂ ಹೆಚ್ಚು ದೃಢವಾಯಿತು. ವೇದವು ದೇವರ ವಾಣಿಯಾದರೆ ಬೈಬಲ್ ಯಾಕೆ ಅಲ್ಲ, ಕುರಾನ್ ಯಾಕೆ ಅಲ್ಲ ಎಂದು ಅವರು ಕೇಳತೊಡ ಗಿದರು. ಇತರ ಧರ್ಮಗಳನ್ನು ವ್ಯಾಸಂಗಮಾಡಿದಷ್ಟೂ ಗಾಂಧಿಯವ ರಿಗೆ ಹಿಂದು ಧರ್ಮದಲ್ಲಿಯೂ ಸತ್ಯ ಅಹಿಂಸೆಗಳಲ್ಲಿಯೂ ನಂಬಿಕೆಯೇ ಹೆಚ್ಚಾಯಿತು. ಆಗಲೇ ಗಾಂಧಿ "ತಮ್ಮ ಆತ್ಮವೇ ತಾವು ಅನುಸರಿಸ ಬೇಕಾದ ಪೋಲಿಸಿನವ" ಎಂದು ಹೇಳುತ್ತಿದ್ದರು. ಮತಧರ್ಮಗಳಿ ಗಿಂತ ನೀತಿಯೇ ಹೆಚ್ಚು ಎಂದು ಅವರು ಆಗಲೇ ಬೋಧಿಸತೊಡ ಗಿದ್ದರು.

೧೯೦೭ ನೇ ವರುಷ ಗಾಂಧಿ ಭಾರತಕ್ಕೆ ಹಿಂದಿರುಗಿ ಆರುತಿಂಗಳು ಇಲ್ಲಿದ್ದರು. ದಾರಿಯಲ್ಲಿ ಅವರು ಅಲಹಾಬಾದಿನ ಪಾಯಿನಿಯರ್ ಆಫೀಸಿಗೆ ಭೇಟಿ ಇತ್ತರು. ಪಾಯಿನಿಯರ್ ಪತ್ರಿಕೆ ಅವರಿಗೆ ವಿರೋಧ

ವಾಗಿ ಪ್ರಚಾರಮಾಡುತ್ತಿತ್ತು. ಆದರೂ ಗಾಂಧಿ ಎಲ್ಲರ ಸಹಾಯವನ್ನೂ ತಾವು ಆಪೇಕ್ಷಿಸುತ್ತಿದ್ದುದರಿಂದ ಪಾಯಿನಿಯರ್ ಪತ್ರಿಕೆಗೂ ಹಾಗೇ ಗೌರವ ತೋರಿಸಿದರು. ರಾಜಕೋಟೆಯಲ್ಲಿ ಕುಳಿತು ಗಾಂಧಿ ದಕ್ಷಿಣ ಆಫ್ರಿಕದ ಸಮಸ್ಯೆಯ ಮೇಲೆ ಒಂದು ವರದಿಯನ್ನು ತಯಾರಿಸಿದರು. ಆ ವರದಿಯ ಭಾಷೆಯಲ್ಲಿ ಅತಿಶಯೋಕ್ತಿ ಇರಲಿಲ್ಲ. ಅಂಕಿ ಅಂಶಗಳು ಸತ್ಯವಾಗಿದ್ದವು. ಕಲ್ಕತ್ತೆಯ ಇಂಗ್ಲಿಷ್‌ಮನ್ ಪತ್ರಿಕೆಗೆ ಸಹ ಗಾಂಧಿಯವರ ಸತ್ಯ ಪ್ರಿಯತೆಯಿಂದ ಅವರಲ್ಲಿ ವಿಶ್ವಾಸವುಂಟಾಯಿತು. 'ಮತ್ತೊಬ್ಬರ ವಿಚಾರದಲ್ಲಿ ನ್ಯಾಯವಾಗಿ ನಡೆಯುವುದರಿಂದ ನಮಗೂ ನ್ಯಾಯ ಬೇಗ ದೊರೆಯುತ್ತದೆ'' ಎಂದು ಗಾಂಧಿ ಹೇಳಿದ್ದಾರೆ.

ಮುಂದೆ ನಡೆದ ಬೋರ್ ಯುದ್ಧದಲ್ಲಿ, ಬ್ರಿಟಿಷರಿಂದ ತಮಗೆ ಅನ್ಯಾಯವಾಗಿದ್ದರೂ ಗಾಂಧಿ ಯುದ್ಧದಲ್ಲಿ ತೊಡಗಿದ್ದ ಬ್ರಿಟಿಷರಿಗೆ ಸಹಾಯಮಾಡಿದರು. ಅದಕ್ಕಾಗಿ ಗಾಂಧಿಯವರಿಗೆ ಬ್ರಿಟಿಷ್ ಸರ್ಕಾರದಿಂದ ಒಂದು ಬಹುಮಾನ ಪದಕ ಸಹ ದೊರತಿದ್ದಿತು.

೧೯೦೩ ರಲ್ಲಿ ಗಾಂಧಿ ಜೊಹಾನ್ಸ್‌ಬರ್ಗ್‌ನಲ್ಲಿ ವಕೀಲಿ ಪ್ರಾರಂಭಿಸಿದರು. ಮುಂದಲ ವರುಷವೇ ಅವರು ದರ್ಬಾನ್‌ನಲ್ಲಿ ಭಾರತದ ಮತ ಎಂಬ ಪತ್ರಿಕೆಯನ್ನು ಸ್ಥಾಪಿಸಿದರು. ಪ್ರಾರಂಭದಲ್ಲಿ ಆ ಪತ್ರಿಕೆ ನಾಲ್ಕು ಭಾಷೆಗಳಲ್ಲಿ ಹೊರಡುತ್ತಿದ್ದಿತು. ಹೀಗೆ ನಾಲ್ಕು ಭಾಷೆಗಳಲ್ಲಿ ಹೊರಡಿಸುವುದು ಬರಿಯ ಆಡಂಬರಕ್ಕಾಗಿ ಎಂದು ಗಾಂಧಿಯವರಿಗೆ ಗೊತ್ತಾಯಿತು. ಕೂಡಲೇ ಅವರು ಎರಡು ಭಾಷೆಗಳಲ್ಲಿ ಪ್ರಕಟವಾಗುವುದನ್ನು ನಿಲ್ಲಿಸಿದರು. ಆ ಪತ್ರಿಕೆಗಳಿಂದ ಗಾಂಧಿಯವರ ಮನಸ್ಸಿನ ಬೆಳವಣಿಗೆಗೆ ಬಹಳ ಸಹಾಯವಾಯಿತು. ಜನತೆಯ ಪರಿಚಯ ಅವರಿಗೆ ಚೆನ್ನಾಗಿ ಉಂಟಾಯಿತು. "ಪತ್ರಿಕಾಕರ್ತನ ಜವಾಬ್ದಾರಿ ದೊಡ್ಡದು. ಅವನು ಸತ್ಯದ ಅನುಯಾಯಿಯಾಗಿರಬೇಕು. ಭಾವನಾ ಪರವಶನಾಗಿ ಸತ್ಯವನ್ನು ಮುಚ್ಚಬಾರದು. ಅವನು ನಿಷ್ಪಕ್ಷಪಾತವಾಗಿ ನಡೆಯಬೇಕು''ಎಂದು ಗಾಂಧಿ ಹೇಳಿದ್ದಾರೆ. ಪತ್ರಿಕಾಕರ್ತನ ಜವಾಬ್ದಾರಿಯನ್ನು ಗಾಂಧಿ ಅರಿತೇ ತಮ್ಮ ಪತ್ರಿಕೆಗಳನ್ನು ನಡೆಸುತ್ತಿದ್ದರು ಅವರು ಚೆನ್ನಾಗಿ ಯೋಚಿಸದೆ ತೂಕ

ಮಾಡದೆ ಒಂದು ಮಾತನ್ನೂ ಬರೆಯುಲಿಲ್ಲ ಇತರರಿಗೆ ಪ್ರಿಯವಾಗುವುದಕ್ಕಾಗಿಯಾಗಲಿ ಅಥವ ತಮಗೆ ಇತರರ ಮೇಲಿದ್ದ ಕೋಪವನ್ನು ತೋರಿಸಿಕೊಳ್ಳುವುದಕ್ಕಾಗಿಯಾಗಲಿ ಅವರು ಒಂದು ವಾಕ್ಯವನ್ನೂ ಬರೆಯುಲಿಲ್ಲ. "ಪತ್ರಿಕೆಯ ಪ್ರಭಾವ ಹೆಚ್ಚಾದುದು. ಅದಕ್ಕೆ ಹೊರಗಿನ ಬಂಧನ ಇರಬಾರದು. ಆದರೆ ಸಂಪಾದಕರಲ್ಲಿಯೂ ವರದಿಗಾರರಲ್ಲಿಯೂ ತುಂಬ ಸಂಯಮ ಇರಬೇಕು. ಪ್ರತಿಕೆಗಳು ಸತ್ಯದ ಪ್ರಚಾರಕ್ಕಾಗಿಯೇ ಇರಬೇಕೇ ಹೊರತು ಅನವಶ್ಯಕವಾಗಿ ಯಾರಿಗೂ ನೋವನ್ನುಂಟು ಮಾಡುವುದಕ್ಕೆ ಅಲ್ಲ ಸತ್ಯವನ್ನು ಆತ್ಮಗೌರವದಿಂದ ಪ್ರಚಾರಿಸಲು ಸಾಧ್ಯವಾಗದಿದ್ದಲ್ಲಿ ಪತ್ರಿಕೆಗಳನ್ನು ಸಂಪಾದಕರು ತಾವಾಗಿಯೇ ನಿಲ್ಲಿಸಬೇಕು" ಎಂದು ಗಾಂಧಿ ಹೇಳಿದ್ದಾರೆ. "ಪತ್ರಿಕೆಗಳು ಪೂರ್ಣವಾಗಿ ಸೇವೆಗೇ ಉಪಯೋಗವಾಗಬೇಕು. ಕಂಪನಿಗಳ ಜಾಹಿರಾತುಗಳಿಗಲ್ಲ" ಎಂದು ಗಾಂಧಿ ಜಾಹಿರಾತುಗಳನ್ನು ನಿಲ್ಲಿಸಿದರು. ಗಾಂಧಿಯವರು ಭಾರತಕ್ಕೆ ಬಂದಮೇಲೆ ಸಹ ಇಲ್ಲಿ ಅವರು ವಹಿಸಿಕೊಂಡ ತರುಣಭಾರತ ಮತ್ತು ಹರಿಜನ್ ಪತ್ರಿಕೆಗಳಲ್ಲಿ ಯಾವ ಜಾಹಿರಾತಿಗೂ ಅವಕಾಶವಿರಲಿಲ್ಲ ಗುಜರಾತಿ ನವಜೀವನದಲ್ಲಿಯೂ ಅವಕಾಶವಿರಲಿಲ್ಲ ಒಂದು ಪತ್ರಿಕೆಯಲ್ಲಿ ಬಂದ ಜಾಹಿರಾತನ್ನು ಕಂಡು ಗಾಂಧಿಯವರು "ಪ್ರತಿ ಪ್ರಾಂತಕ್ಕೂ ಒಂದೇ ಒಂದು ಜಾಹಿರಾತಿನ ಸಂಸ್ಥೆ ಸಾಕು. ಅದು ಜನತೆಗೆ ಆವಶ್ಯಕವಾದ ಪದಾರ್ಥಗಳು ಎಲ್ಲಿ ದೊರೆಯುತ್ತವೆ ಎಂಬುದನ್ನು ಪ್ರಕಟಿಸಿದರೆ ಸಾಕು. ಆದರೆ ನಾವು ಬುದ್ಧಿಹೀನರಾದುದರಿಂದ ಜಾಹೀರಾತುಗಳ ಮೂಲಕ ಅಪ್ರತ್ಯಕ್ಷವಾಗಿ ಕಂದಾಯ ತೆರುತ್ತಿದ್ದೇವೆ" ಎಂದಿದ್ದಾರೆ. ಪತ್ರಿಕಾಕರ್ತನ ವಾಚಕರ ಸಂಖೆ ದೊಡ್ಡದಾದುದರಿಂದ ಅವನು ಪ್ರತಿ ಮಾತನ್ನೂ ಚೆನ್ನಾಗಿ ಯೋಚಿಸಿ ಬರೆಯಬೇಕು. ಈಚೆಗೆ ಮಿತ್ರರೊಬ್ಬರು ಗಾಂಧಿಯವರಿಗೆ "ನಿಮ್ಮ ಭಾಷೆ ಬಹಳ ಚೆನ್ನಾಗಿದೆ" ಎಂದು ಹೇಳಿದಾಗ ಗಾಂಧಿ "ನಾನು ಅದಕ್ಕಾಗಿ ಎಷ್ಟು ಕಷ್ಟಪಡುತ್ತೇನೆ ನಿಮಗೆ ಗೊತ್ತೆ. ಪ್ರತಿಯೊಂದು ಮಾತಿಗೂ ಪ್ರಸವ ವೇದನೆಯನ್ನು ಅನುಭವಿಸುತ್ತೇನೆ" ಎಂದರು.

೧೯೦೬ನೆ ಇಸವಿಯಲ್ಲಿ ಗಾಂಧಿ ಇನ್ನೂ ಜೋಹಾನ್ಸ್‌ಬರ್ಗ್‌ನಲ್ಲಿ ವಕೀಲಿ ಮಾಡುತ್ತಿರುವಾಗಲೇ ಜೂಲು ದಂಗೆ ಎದ್ದಿತು. ಆಗ ಗಾಂಧಿ ಯವರು ಸ್ವಯಂ ಸೇವಕರ ಗುಂಪನ್ನು ಸ್ಥಾಪಿಸಿ ಬ್ರಿಟಿಷ್ ಸರ್ಕಾರಕ್ಕೆ ಸಹಾಯಮಾಡಿದರು. ಆದರೆ ಮುಖ್ಯವಾಗಿ ನೊಂದವರು ಜೂಲುಗಳೇ ಆದುದರಿಂದ ಗಾಂಧಿಯವರ ಸೇವೆ ಬ್ರಿಟಿಷರ ಶತ್ರುಗಳಾದ ಜೂಲು ನೋಯಾಳುಗಳಿಗೇ ದೊರೆಯಿತು. ಕೆಲವು ಬ್ರಿಟಿಷ್ ಅಧಿಕಾರಿಗಳು ಅದನ್ನು ತಪ್ಪಿಸಲು ಹವಣಿಸಿದರು. ಆದರೆ ಗಾಂಧಿಯವರ ಒಳ್ಳೆತನ ದಿಂದ, ಬ್ರಿಟಿಷರೂ ಸಹ, ಅವರು ಜೂಲುಗಳ ಸೇವೆ ಮಾಡಲು ಒಪ್ಪಿ ದರು. ನೇಟಾಲ್ ಗವರ್ನರು ಗಾಂಧಿಯವರ ಈ ಸೇವೆಗಾಗಿ ಅವರನ್ನು ಸಾರ್ವಜನಿಕವಾಗಿ ವಂದಿಸಿದರು.

ಆ ವೇಳೆಗೆ ಭಾರತೀಯರಿಗೆ ವಿರೋಧವಾಗಿ ಆಫ್ರಿಕದಲ್ಲಿ ಶಾಸನ ವಾಗಿತ್ತು. ಪ್ರತಿಯೊಬ್ಬ ಭಾರತೀಯನೂ ತನ್ನ ಹತ್ತು ಬೆರಳುಗಳನ್ನೂ ಒತ್ತಿ ರಿಜಸ್ಟರ್ ಮಾಡಿಸಿಕೊಳ್ಳಬೇಕೆಂದೂ ಮೂರು ಪೌಂಡ್ ತಲೆ ಗಂದಾಯ ತೆರಬೇಕೆಂದೂ ಬಿಳಿಯವರು ಶಾಸನಮಾಡಿದರು. ಗಾಂಧಿಯ ವರು ಇಂಗ್ಲೆಂಡಿಗೆ ಹೋಗಿ ತಮ್ಮ ಅಹವಾಲನ್ನು ಕಲೋನಿಯಲ್ ಸೆಕ್ರೆಟರಿ ಲಾರ್ಡ್ ಎಲ್ಜಿನ್‌ರಲ್ಲಿ ಹೇಳಿಕೊಂಡರು. ಎಲ್ಜಿನ್‌ರು ಗಾಂಧಿಯ ವರಿಗೆ " ನಾವು ದಕ್ಷಿಣ ಆಫ್ರಿಕದ ಸರ್ಕಾರದ ಈ ಶಾಸನಕ್ಕೆ ಅನುಮತಿ ಕೊಡುವುದಿಲ್ಲ '' ವೆಂದು ಹೇಳಿದರು. ಆದರೆ ಗಾಂಧಿಯವರೇ ಹೇಳಿರು ವಂತೆ ಲಾರ್ಡ್ ಎಲ್ಜಿನ್‌ರು ದಕ್ಷಿಣ ಆಫ್ರಿಕ ಸರ್ಕಾರಕ್ಕೆ ". ನೀವು ಬೇಕಾದರೆ ಕಾನೂನನ್ನು ಮಾಡಿ '' ಎಂದು ತಿಳಿಸಿದರು.

ಈ ಕಾನೂನನ್ನು ಮುರಿಯಬೇಕೆಂದು ಭಾರತೀಯರು ಗಾಂಧಿ ಯವರ ನೇತೃತ್ವದಲ್ಲಿ ನಿಶ್ಚಯಿಸಿದರು. ಪ್ಯಾಸಿವ್‌ರೆಸಿಸ್ಟೆನ್ಸ್ ಸಂಘ ವೆಂಬ ಒಂದು ಹೊಸ ಸಂಘ ಸ್ಥಾಪಿತವಾಯಿತು. ಸತ್ಯಾಗ್ರಹಿಗಳು ಕಾನೂನನ್ನು ಮುರಿದರು. ಗಾಂಧಿಯವರಿಗೆ ಎರಡು ತಿಂಗಳು ಸೆರೆ ಯಾಯಿತು. ಕೊನೆಗೆ ಭಾರತೀಯರೆಲ್ಲಾ ಸ್ವತಃ ತಾವೇ ಬಂದು ರಿಜಸ್ಟರ್ ಮಾಡಿಸಿಕೊಳ್ಳುವುದಾದರೆ ಶಾಸನವನ್ನು ರದ್ದು ಮಾಡುವು ದಾಗಿ ಜನರಲ್ ಸ್ಮಟ್ಸ್‌ರು ಹೇಳಿದರು. ಅದರಂತೆ ಗಾಂಧಿಯವರು

ಭಾರತೀಯರೆಲ್ಲಾ ರಿಜಿಸ್ಟರ್ ಮಾಡಿಸಿಕೊಂಡು ಪರ್ಮಿಟ್ ತೆಗೆದುಕೊಳ್ಳ ಬೇಕೆಂದು ಮತ್ತೆ ತಮ್ಮವರಿಗೆ ಬೋಧಿಸಿದರು. ಇದರಿಂದ ಕೆಲವರಿಗೆ ಗಾಂಧಿಯವರ ಮೇಲೆಯೇ ಅಸಮಾಧಾನವಾಯಿತು. ಮಿರ್ ಆಲಂ ಎಂಬ ಪಠಾನನು ಗಾಂಧಿಯವರ ಮೇಲೆ ಬಿದ್ದುದರಿಂದ ಅವರು ಜ್ಞಾನ ತಪ್ಪಿ ಕೆಳಕ್ಕೆ ಬಿದ್ದರು. ಎಚ್ಚೆತ್ತ ನಂತರ ಮೀರ್ ಆಲಂನನ್ನು ದಸ್ತಗಿರಿ ಮಾಡಿರುವರೆಂದು ತಿಳಿದು ಗಾಂಧಿ ಅಟಾರ್ನಿ ಜನರಲ್‌ಗೆ ಬರೆದು ಅವನನ್ನು ಬಿಡುಗಡೆ ಮಾಡಿಸಿದರು. ಅನಂತರ ದರ್ಬಾನ್‌ನಲ್ಲಿ ಸಹ ಒಂದು ಸಲ ಅವರ ಮೇಲೆ ಅವರ ಅನುಯಾಯಿಗಳೇ ಬಿದ್ದರು. ಸತ್ಯಾಗ್ರಹಿಗೆ ಮರಣದ ಭಯ ಇರಬಾರದೆಂದು ಗಾಂಧಿ ಆಗಲೇ ಹೇಳು ತ್ತಿದ್ದರು. ಸರ್ಕಾರ ತಾನು ಕೊಟ್ಟ ವಾಗ್ದಾನವನ್ನು ಮೀರಿ ಮೊದಲಿನ ಕಾನೂನನ್ನೇ ಅನುಮೋದಿಸಿತು. ಮೀರ್‌ಆಲಿಮ್ ಮುಂತಾದವರ ಸಂಶಯ ನಿಶ್ಚಯವಾಯಿತು" ಭಾರತೀಯರು ತಾವು ತೆಗೆದುಕೊಂಡ ರಹದಾರಿಗಳನ್ನು ಉಪಯೋಗಿಸಬೇಕು. ಕಾನೂನು ಜಾರಿಯಲ್ಲಿದೆ. ಎಂದು ಜನರಲ್ ಸ್ಮಟ್ಸರು ಪ್ರಕಟಿಸಿದರು. ಜನರಲ್‌ಸ್ಮರ್ಟರು ಮೊದಲು ಕಾನೂನನ್ನು ರದ್ದು ಮಾಡುತ್ತೇನೆಂದು ವಾಗ್ದಾನ ಮಾಡಿದ್ದುದು ನಿಜವೆಂದು ಮಧ್ಯಸ್ಥಗಾರರೂ ಹೇಳಿದರು. ಆದರೆ ಸ್ಮಟ್ಸರು ತಮ್ಮ ಅಭಿಪ್ರಾಯ ಬದಲಾಯಿಸಲಿಲ್ಲ.

ಜನರ ಉತ್ಸಾಹ ಹೆಚ್ಚಾಗಿರುವಾಗ ವಿರೋಧಿಸದೆ, ರಹದಾರಿ ಪಡೆದುದೇ ತಪ್ಪೆಂದೂ ಗಾಂಧಿಯವರಿಗೆ ಏನೂ ಗೊತ್ತಿಲ್ಲವೆಂದೂ ಇತ ರರು ಹಾಸ್ಯಮಾಡಿದರು. ಜನರಲ್ ಸ್ಮಟ್ಸರಿಗೂ ಭಾರತೀಯರನ್ನು ಗುಂಡಿಗೆ ತಳ್ಳಿದುದರಿಂದ ಸಂತೋಷವಾಗಿದ್ದಿರಬೇಕು, ಆದರೆ ಸತ್ಯಾ ಗ್ರಹ ಅಂತಹ ದುರ್ಬಲರ ಅಸ್ತ್ರವಲ್ಲ. ಜೋಹಾನ್ಸ್‌ಬರ್ಗದ ಒಂದು ಸಭೆಯಲ್ಲಿ ಭಾರತೀಯರೆಲ್ಲ ತಮ್ಮ ರಹದಾರಿಗಳನ್ನು ಸುಟ್ಟುಹಾಕಿದರು ೧೯೧೧ ರಲ್ಲಿ ಗೋಖಲೆಯವರು ಆಫ್ರಿಕಕ್ಕೆ ಹೋದರು. ಆಗ ಜನರಲ್ ಸ್ಮಟ್ಸರು ಅವರಿಗೆ ಭಾರತೀಯರ ಮೇಲಿನ ಮೂರು ಪೌಂಡು ತಲೆ ಗಂದಾಯವನ್ನೂ ತೆಗೆಯುವುದಾಗಿ ವಾಗ್ದಾನ ಮಾಡಿದರು. ಗೋಖಲೆ ಭಾರತಕ್ಕೆ ಹಿಂದಿರುಗಿದ ಮೇಲೆ ತಲೆಗಂದಾಯವನ್ನು ತೆಗೆಯುವುದಿಲ್ಲ

ವೆಂದು ಮತ್ತೆ ಸ್ಮಟ್ಸರು ಪ್ರಕಟಿಸಿದರು.

೧೯೧೩ ರಲ್ಲಿ ಈ ಚಳುವಳಿಗೆ ಬಹಳ ಪ್ರಾಬಲ್ಯ ಬಂದಿತು. ಸತ್ಯಾಗ್ರಹಿಗಳ ಸಂಖ್ಯೆ ಒಂದು ಸಲ ಅತ್ಯಂತ ಕಡಿಮೆಯಾಗಿದ್ದಿತು. ಗೋಖಲೆ ಗಾಂಧಿಯವರನ್ನು ನಿಮ್ಮ ಅನುಯಾಯಿಗಳು ಎಷ್ಟು ಜನ ಎಂದು ಕೇಳಿದಾಗ ಗಾಂಧಿ "ಕಡಿಮೆ ಎಂದರೆ ೧೬, ಹೆಚ್ಚೆಂದರೆ ೬೬." ಎಂದಿದ್ದರು. ಆದರೆ ೧೯೧೩ ರಲ್ಲಿ ಕ್ರಿಸ್ತಧರ್ಮಕ್ಕನುಸಾರವಾದ ವಿವಾಹ ಮಾತ್ರ ನ್ಯಾಯವೆಂದೂ ಉಳಿದುವನ್ನು ಆಫ್ರಿಕ ಸರ್ಕಾರ ಒಪ್ಪುವುದಿಲ್ಲವೆಂದೂ ಕಾನೂನು ಆಯಿತು. ಆ ಕಾನೂನನ್ನು ಬದಲಾಯಿಸಬೇಕೆಂದು ನ್ಯಾಯಸ್ಥಾನ ಸೂಚಿಸಿದರೂ ಸರ್ಕಾರ ಒಪ್ಪಲಿಲ್ಲ. ಆದರಿಂದ ಭಾರತ ಸ್ತ್ರೀಯರು ಗುಂಪಾಗಿ ಸತ್ಯಾಗ್ರಹಕ್ಕೆ ನುಗ್ಗಿದರು. ಸರ್ಕಾರ ಸ್ತ್ರೀಯರನ್ನು ಸೆರೆ ಹಿಡಿಯಿತು. ನೇಟಾಲಿನ ರೈತರೆಲ್ಲ ಚಳುವಳಿಯಲ್ಲಿ ಸೇರಿದರು. ಎರಡು ಮೂರು ಸಾವಿರ ಜನರು ಸರ್ಕಾರದ ಅಪ್ಪಣೆ ಮುರಿದು ಟ್ರಾನ್ಸ್‌ವಾಲ್ ಗಡಿಯ ಯಾತ್ರೆ ಪ್ರಾರಂಭಿಸಿದರು. ೩೬ ಮೈಲಿಯ ಆ ಯಾತ್ರೆಗೆ ಒಂದು ವಾರ ಹಿಡಿಯಿತು. ಗಾಂಧಿಯವರನ್ನು ಮಾರ್ಗದಲ್ಲಿ ಮೂರು ಬಾರಿ ಹಿಡಿದರು. ಗಾಂಧಿಯವರಿಗೂ ೯ ತಿಂಗಳು ಸಜ ಆಯಿತು. ಕೊನೆಯಲ್ಲಿ ಸರ್ಕಾರಕ್ಕೂ ಸತ್ಯಾಗ್ರಹಿಗಳಿಗೂ ರಾಜಿಯಾಯಿತು. ತಲೆಗಂದಾಯ ವಜ ಆಯಿತು. ವಿವಾಹದ ಪ್ರಶ್ನೆಯಲ್ಲಿಯೂ ತಕ್ಕಮಟ್ಟಿನ ಸಮಾಧಾನ ದೊರೆಯಿತು.

ಗಾಂಧಿಯವರಿಗೆ ಆಫ್ರಿಕದ ಅನುಭವ ಅಮೂಲ್ಯವಾಯಿತು. ಅವರ ಎಲ್ಲಾ ಒಳ್ಳೆಯ ಅಭ್ಯಾಸಗಳೂ ಪ್ರಾರಂಭವಾದುದು ಅಲ್ಲಿಯೇ. ಅವರ ಜೀವನಕ್ರಮ ಇನ್ನೂ ಸರಳವಾಯಿತು. ದೇಹಶ್ರಮ ಆವಶ್ಯಕವೆಂದು ಗಾಂಧಿ ಚೆನ್ನಾಗಿ ಅರಿತರು. ತಮ್ಮ ವಸ್ತ್ರಗಳನ್ನು ಅವರು ತಾವೇ ಒಗೆದುಕೊಳ್ಳತೊಡಗಿದರು. ಯಾರಿಗೂ ಯಾತಕ್ಕಾಗಿಯೂ ಹೊರೆಯಾಗಬಾರದೆಂಬುದು ಅವರ ತತ್ತ್ವವಾಯಿತು. ತಮ್ಮ ಮಕ್ಕಳಿಗೆ ಅವರೇ ವಿದ್ಯೆ ಹೇಳಿದರು. ೧೯೦೨ರಲ್ಲಿ ಒಂದು ಇನ್‌ಶೂರೆನ್ಸ್ ಪಾಲಿಸಿ ತೆಗೆದುಕೊಂಡು, ಅನಂತರ "ನಾನು ಇದನ್ನು ತೆಗೆದುಕೊಂಡದ್ದು ತಪ್ಪು. ದೇವರೇ ಮಕ್ಕಳ ಪೋಷಕ. ಆ ಭಾರ ನನ್ನ ತಲೆಯ ಮೇಲೆ

ತೆಗೆದುಕೊಳ್ಳುವುದು ಪಾಪ. ನನ್ನ ಮಕ್ಕಳು ಇತರ ಬಡವರ ಮಕ್ಕಳಂತೆ ಸ್ವತಂತ್ರರಾಗಿರಲಿ ’’ ಎಂದು ಆ ಪಾಲಿಸಿಯನ್ನು ರದ್ದುಮಾಡಿಸಿದರು.

೧೯೦೪ ರಲ್ಲಿ ಗಾಂಧಿ ವ್ಯಾಸಂಗ ಮಾಡಿದ, ಸರ್ವೋದಯ ಎಂಬ ಪುಸ್ತಕ ಅವರ ಮೇಲೆ ಬಹಳ ಪ್ರಭಾವವುಂಟುಮಾಡಿತು. ಆ ಗ್ರಂಥದ ಉಪದೇಶಗಳು ಮುಖ್ಯವಾಗಿ ಮೂರು.

(೧) ಎಲ್ಲರ ಅಭ್ಯುದಯದಲ್ಲಿ ನನ್ನ ಅಭ್ಯುದಯ ಅಡಗಿದೆ.

(೨) ಪ್ರತಿಯೊಬ್ಬರಿಗೂ ದುಡಿಮೆಯ ಫಲ ಸಮನಾಗಿರಬೇಕು. ವಕೀಲನಿಗೆ ತನ್ನ ಕಾರ್ಯಕ್ಕೆ ಎಷ್ಟು ಪ್ರತಿಫಲವೋ ಬಡಗಿ ಹಜಾಮನಿಗೂ ಅಷ್ಟೇ ಪ್ರತಿಫಲವಿರಬೇಕು.

(೩) ದುಡಿಮೆಯುವನ, ರೈತನ, ಕಸಬು ಮಾಡುವವನ, ಬದುಕೇ ಸಾರ್ಥಕವಾಗ ಬದುಕು

ಗಾಂಧಿಯವರಿಗೆ ಅಲ್ಲಿಯವರೆಗೆ ಈ ಮೂರನೆಯ ತತ್ವ ಹೊಳೆದಿರಲಿಲ್ಲವಂತೆ. ಕೂಡಲೆ ಅವರು ಆ ತತ್ವವನ್ನು ಆಚರಣೆಗೆ ತರಲು ಸಿದ್ಧರಾದರು. ದರ್ಬಾನ್‌ನಿಂದ ಸ್ವಲ್ಪ ದೂರದಲ್ಲಿರುವ ಫೀನಿಕ್ಸ್ ಎಂಬಲ್ಲಿ ಇಪ್ಪತ್ತು ಎಕ್ರೆ ಭೂಮಿ ಕೊಂಡರು. ಅದರ ಸಮೀಪದಲ್ಲಿ ಮತ್ತೆ ೮೦ ಎಕರೆ ಕೊಂಡರು. ಇಂಡಿಯನ್ ಒಪಿನಿಯನ್ ಪತ್ರಿಕೆಯ ಛಾಪಾಖಾನೆಯನ್ನು ಅಲ್ಲಿಗೆ ವರ್ಗಾಯಿಸಿದರು. ಗಾಂಧಿ ಅಲ್ಲಿ ಸಂಘ ಜೀವನ, ಆಹಾರದಲ್ಲಿ ಪ್ರಯೋಗ, ದೇಹಶ್ರಮ, ಪ್ರತಿಯೊಬ್ಬನೂ ಆಹಾರಕ್ಕಾಗಿ ದುಡಿಯಬೇಕು ಮುಂತಾದ ಪ್ರಯೋಗಗಳನ್ನೆಲ್ಲಾ ನಡೆಸಿದರು. ಟಾಲಸ್ಟಾಯ್ ತೋಟದಲ್ಲಿಯೂ ಅವೇ ಪ್ರಯೋಗಗಳು ನಡೆದುವು.

ಗಾಂಧಿಯವರು ಆಫ್ರಿಕದಲ್ಲಿದ್ದ ಕಾಲವೇ ಅವರ ಜೀವನವನ್ನು ತಿದ್ದಿದ ಕಾಲವೆಂದು ಹಿಂದೆ ಹೇಳಿದೆವು. ಆ ಕಾಲದಲ್ಲಿ ಅವರ ಮನಸ್ಸು ಹೇಗೆ ಹೋಗುತ್ತಿದ್ದಿತು ಎಂಬುದನ್ನು ಅವರು ಆಗ ಬರೆದ ಪತ್ರಗಳಿಂದ ಅರಿಯಬಹುದು. ಆ ಪತ್ರಗಳು ಗಾಂಧಿಯವರು ಭಾರತಕ್ಕೆ ಬಂದು ಪ್ರಸಿದ್ಧರಾಗುವುದಕ್ಕಿಂತ ಮುಂಚೆ ತಮ್ಮ ಸಂಸಾರದವರಿಗೆ ಬರೆದವುಗಳಾದುದರಿಂದ ಅವು ಪ್ರಕಟವಾಗುವ ಗುರಿಯಿಂದ ಅವರು ಬರೆದಿರಲಿಲ್ಲ.

ಗಾಂಧಿಯವರು ಸತ್ಯ ಅಹಿಂಸೆ ಬ್ರಹ್ಮಚರ್ಯದ ಮೇಲೆ ಪ್ರಯೋಗ ವನ್ನು ನಡೆಸುತ್ತಿದ್ದ ಕಾಲ ಅದು. ಆ ಕಾರಣದಿಂದ ಸಾಧಕರಿಗೆ ಅವು ಇನ್ನೂ ಬೆಲೆಯಾದವು ಗಾಂಧಿ ಬರೆದ ಪತ್ರಗಳಲ್ಲಿ ಇವು ಕೆಲವು.

### ವಿವಾಹ

ಸಮಾಜದ ಸ್ಥಿತಿಯಂತೆಯೇ ದೇಶದ ಸ್ಥಿತಿಯೂ ಆಗಿದೆ ಸುಳ್ಳು ಲೋಭ ಲಜ್ಜೆ ಇಲ್ಲವೇ ಮೋಹಕ್ಕೆ ಬಲಿಬಿದ್ದು ನಾವು ನಮ್ಮ ಮಕ್ಕಳ ಮದುವೆಯನ್ನು ಮುಗಿಸುವ ವಿಚಾರಮಾಡುತ್ತೇವೆ. ಅದರಲ್ಲಿ ನೂರಾರು ರುಪಾಯಿಗಳನ್ನು ಕಳೆಯುತ್ತೇವೆ. ಮತ್ತು ಹಿಂದಲಿಂದ ವಿಧವೆಯರ ಮುಖವನ್ನು ಬೆಪ್ಪನೆ ನೋಡುತ್ತಾ ಕುಳಿತುಕೊಳ್ಳುತ್ತೇವೆ ಮೂಲತಃ ಲಗ್ನವನ್ನೇ ಮಾಡಬಾರದೆಂದು ನಾನು ಹೇಗೆ ಹೇಳಲಿ? ಆದರೆ ಏನಾದ ರೊಂದು ಮರ್ಯಾದೆಯನ್ನು ಹಾಕುವೆನು. ನಾವು ಮಕ್ಕಳ ಮದುವೆ ಮಾಡಿ ಅವರನ್ನು ದುಃಖದಲ್ಲಿ ಮಾತ್ರ ಮಾಡುತ್ತೇವೆ. ಅವರು ಪ್ರಜೋತ್ಪತ್ತಿ ಮಾಡಿ ಇನ್ನಷ್ಟು ದುಃಖದಲ್ಲಿ ಬೀಳುತ್ತಾರೆ. ನಮ್ಮ ನಿಯಮ ಧರ್ಮದಂತೆ, ಸ್ತ್ರೀ ಸಂಗವು, ಕ್ಷೇಮ, ಸಂತಾನೋತ್ಪಾದನೆ ಗಾಗಿಯೇ ಆಗಿರುತ್ತದೆ. ಮಿಕ್ಕದ್ದು ವಿಷಯವಾಸನೆಯೇ ಸರಿ ನಮ್ಮ ಆಚರಣೆಯಲ್ಲೆಂತೂ ಇನ್ನೆಲ್ಲೂ ಕಂಡು ಬರವುದಿಲ್ಲ. ನಾವು ನಮ್ಮ ಮಕ್ಕಳ ಲಗ್ನ ಮಾಡಿ ಅವರನ್ನೂ ನಮ್ಮಂತೆಯೇ ವಿಷಯೋಪಭೋಗಿ ಗಳನ್ನಾಗಿ ಮಾಡುತ್ತೇವೆ. ಈ ರೀತಿ ಈ ವಿಷವೃಕ್ಷ ಬೆಳೆಯುತ್ತಲೇ ಇದೆ. ಇವನ್ನೆಲ್ಲ ಮೂಲತಃ ನಾನು ಧರ್ಮವೆಂದು ತಿಳಿದಿಲ್ಲ. ನಾನು ಚಿಕ್ಕವಯಸ್ಸಿನವನಾದರೂ ನನ್ನ ಮನಸ್ಸಿನಲ್ಲಿ ಬಂದ ಈ ವಿಚಾರ ಗಳನ್ನು ನಿಮ್ಮ ಮುಖಾಂತರ ನಿಮ್ಮ ಕುಟುಂಬದ ಮುಂದೆ ಇಡುತ್ತಿ ದ್ದೇನೆ. ಇದೇ ನನ್ನ ಕುಟುಂಬ ಸೇವೆ. ಹದಿನಾಲ್ಕು ವರುಷ ಅಧ್ಯಯನ ವನ್ನೂ ಏಳು ವರುಷ ಆಚರಣೆಯನ್ನೂ ಮಾಡಿ, ಈ ಪ್ರಸಂಗ ಬಂದದ್ದ ರಿಂದ ಇದನ್ನು ವ್ಯಕ್ತವಡಿಸುತ್ತಿದ್ದೇನೆ.

### ಆತ್ಮಯಜ್ಞ

ನನ್ನ ವಿಷಯದಲ್ಲಿ ಚಿಂತೆ ಮಾಡಬೇಡಿ. ಆತ್ಮ ಬಲಿ ಕೊಟ್ಟೇ ತೀರಬೇಕಾಗುವುದೆಂದು ನಿಶ್ಚಯಿಸಿದ್ದೇನೆ. ಜನರಲ್ ಸ್ಮಟ್ಸ್‌ರು ಕೊನೆಯ

ವರೆಗೆ ತಕ್ಕಿಸಲಾರರು. ಜನರೆಲ್ಲ ಆತ್ಮ ಬಲಿ ದಾನಕ್ಕೆ ಕಾತರರಾಗಿದ್ದಾರೆ. ಅಂತಹ ಅವಕಾಶ ಸಿಕ್ಕುತ್ತಿರುವುದೇ ಸಂತೋಷ. ಆತ್ಮ ಕಲ್ಯಾಣವೇ ದೇಹಕ್ಕು ಆನಂದವನ್ನು ಕೊಡುವುದಾದರೆ ಈ ಬಗೆಯ ಮರಣಕ್ಕಿಂತ ಹೆಚ್ಚು ಆನಂದ ಯಾವುದಿದೆ!

## ಮರಣವನ್ನು ನೋಡಿ ಕಲಿಯಿರಿ

ಮರಣದ ಕಲ್ಪನೆಯಿಂದ ಜೀವವೇಕೆ ಉದಾಸೀನವಾಗಬೇಕು? ಈ ಜಗತ್ತು ಕ್ಷಣಿಕ. ಈ ಜಗತ್ತೇ ಕ್ಷಣಿಕವಾದ ಮೇಲೆ ಇದರ ಕಾರ್ಯ ಕಾರಣ ವಿಚಾರ ನಮಗೇಕೆ. ಸಾಯುವವರೆಗೆ ನಮ್ಮ ಕೈಯಿಂದ ಯಾವುದೊಂದು ಅಯೋಗ್ಯ ಕೆಲಸವಾಗಬಾರದೆಂಬ ಇಚ್ಛೆ ನಮಗಿದ್ದರೆ ಸಾಕು. ನಮಗೆ ಇರಬೇಕಾದ ಚಿಂತೆಯೂ ಅದೇಯೆ. ನನಗೆ ಇದೇ ಜನ್ಮದಲ್ಲಿ ಮೋಕ್ಷ ದೊರೆಯಬಹುದಾದ ಸ್ಥಿತಿಯಂತೂ ಈವರೆಗೆ ಬಂದಿಲ್ಲ. ಈ ಜನ್ಮದಲ್ಲಿ ಇದನ್ನೇ ಸಾಧಿಸುತ್ತಾ ಹೋದರೆ ಮುಂದಲ ಜನ್ಮದ ಕೊನೆಗಾದರೂ ನನಗೆ ಮೋಕ್ಷ ದೊರಕಬಹುದು........ಮರಣವನ್ನು ನೋಡಿ ಚಿಕ್ಕವರು ದೊಡ್ಡವರೆಲ್ಲ ಒಂದು ಪಾಠವನ್ನು ಕಲಿಯಬಹುದು. ಅದೇನೆಂದರೆ ಈ ಶರೀರದ ಪತನವನ್ನು ನಿಲ್ಲಿಸಿರುವುದು ನಮ್ಮ ಕೈಯಲ್ಲಿ ಇಲ್ಲ ಎಂದು. ಆದುದರದಿಂದ ನಾವು ಈ ದೇಹದ ಪ್ರೇಮವನ್ನು ಬಿಟ್ಟು ಪರಮಾರ್ಥದಲ್ಲಿ ತೊಡಗಿ ಆತ್ಮ ಶುದ್ಧಿಯನ್ನು ಮಾಡಿಕೊಳ್ಳಬೇಕು. ಹೀಗೆ ಮಾಡಲು ಬ್ರಹ್ಮಚರ್ಯವೇ ಉತ್ಕೃಷ್ಟವಾದ ಆವಶ್ಯಕ ಸಾಧನವೆಂದು ನನಗೆ ದಿನ ದಿನವೂ ಅನ್ನಿಸಹತ್ತಿದೆ.

ಆತ್ಮನು ಸಾಯುವುದೂ ಇಲ್ಲ, ಕೊಲ್ಲುವುದೂ ಇಲ್ಲ, ಕೊಲ್ಲಿಸುವುದೂ ಇಲ್ಲವೆಂದು ನೀವೇ ಕಲಿಸಿದ್ದೀರಿ. ಶರೀರವೇ ಸ್ವ ಎಂದು ತಿಳಿದು ನಾವು ರಕ್ಷಣೇ ಮಾಡುವುದೇ ಮಾಯೆ. ನಾವು ಸರ್ವ ಶ್ರೇಷ್ಠವೆಂದು ಹೇಳುವ ಗ್ರಂಥವನ್ನೇ ನಾವು ವ್ಯವಹಾರದಲ್ಲಿ ಬದಿಗಿರಿಸಿರುವುದು ನನಗೆ ವಿಚಾರಾಂತ್ಯದಲ್ಲಿ ಕಂಡುಬರುತ್ತಿದೆ. ಸತ್ಯದ ಪಾಲನೆ ಮಾಡುವಾಗ ಬಹಳ ದುಃಖವನ್ನು ಸಹಿಸಬೇಕಾಗುತ್ತದೆ. ಸತ್ಯಪಾಲಕ ಶಾರೀರಕ ದುಃಖವನ್ನು ಸಹಿಸಲೇಬೇಕು.

ಪ್ಲೇಗಿನ ಬಗ್ಗೆ ನೀವು ಬಹಳ ಪ್ರಶ್ನೆ ಕೇಳುತ್ತಿದ್ದೀರಿ. ರಾಜ

ಕೋಟೆಯಲ್ಲಿ ಇಲಿಗಳು ಬಿದ್ದಾಗ ಮನೆಯನ್ನೂ ಊರನ್ನೂ ಬಿಡಿರೆಂದು ನಾನು ಸೂಚಿಸಿದೆ. ಇದು ಆಗ (೧೮೯೭) ನನ್ನ ಅಭಿಪ್ರಾಯವಾಗಿತ್ತು. ಅದು ತಪ್ಪು ಎಂದು ಈಗ ನನಗೆ ತೋರುತ್ತಿದೆ. ಎರಡು ಕಾಲದಲ್ಲಿಯೂ ನನ್ನ ಗುರಿ ಒಂದೇ ಇತ್ತು. ಸತ್ಯಶೋಧವೇ ಈ ರೀತಿ ಮನೆಯನ್ನು ಬಿಡುವುದು. ಆತ್ಮನ ಗುಣ ತಿಳಿಯುದುದರಿಂದ ಇಂದು ಈಗ ನನಗೆ ತೋರುತ್ತಿದೆ. ಎಂತಹ ಪ್ರಸಂಗ ಬಂದರೂ ಮನೆಯನ್ನೇ ಬಿಡಬಾರ ದೆಂದಲ್ಲ ಇದರ ಅರ್ಥ. ಮನೆ ಸುಡತೊಡಗಿದರೆ ಮನೆಯನ್ನು ಬಿಡಲೇ ಬೇಕು. ಮನೆಯಲ್ಲಿ ಹಾವು ಚೇಳು ಸೇರಿಕೊಂಡು ಅವುಗಳಿಂದ ಸಾವು ಬರುವಂತಿದ್ದರೆ ಮನೆಯನ್ನು ಬಿಡಲೇಬೇಕು. ಹಾಗೆ ಮಾಡು ವುದರಲ್ಲಿಯೂ ಸ್ವಲ್ಪ ದೋಷವಿಲ್ಲವೆಂದು ಹೇಳಲಾರೆ. ಯಾರಿಗೆ ಆತ್ಮನ ಗುಣ ಗೊತ್ತೋ ಅವನಿಗೆ ಆಕಾಶವೇ ಮನೆಯ ಸೂರು. ಆತ ಅಡವಿಯ ಚೇಳು ಸರ್ಪಗಳನ್ನು ಮಿತ್ರರಂತೆ ಭಾವಿಸುವನು. ನಾವು ಮಳೆ ಛಳಿ ಬಿಸಿಲಿನ ಭಯದಿಂದ ಮನೆಯಲ್ಲಿರುತ್ತೇವೆ. ಅಲ್ಲಿ ಭಯವುಂಟಾದರೆ ಮತ್ತೆ ಮನೆ ಬಿಡುತ್ತೇವೆ. ಆದರೂ ನಮಗೆ ಅತ್ಮಸಾಕ್ಷಾತ್ಕಾರವಾದರೆ ಹಾಗೆ ಮಾಡುವುದಿಲ್ಲವೆಂದು ಎನ್ನಿಸುತ್ತಿರುತ್ತದೆ. ಎಲ್ಲಿಯವರೆಗೆ ನಾವು ಓಡಿಯೋ ಓಡುತ್ತೇವೆಯೋ ಅಲ್ಲಿಯವರೆಗೆ ಪ್ಲೇಗು ನಿರ್ಮೂಲವಾಗು ವುದು ಶಕ್ಯವಿಲ್ಲ. ಪ್ಲೇಗು ಬಂದ ಕಾರಣವನ್ನು ನಿರ್ಮೂಲ ಮಾಡ ಬೇಕು. ಈ ಉತ್ತರದಿಂದ ನನಗೆ ಇನ್ನೂ ಸಮಾಧಾನವಾಗಿಲ್ಲ. ಇನ್ನು ನಿಮಗೆ ಹೇಗೆ ಸಮಾಧಾನವಾಗುತ್ತೆ? ನನ್ನ ಮಾತು ಮತ್ತು ಕೃತಿ ಗಳಲ್ಲಿ ಪರಸ್ಪರ ಭೇದವುಂಟು. ಇವೆರಡೂ ಸಂಯೋಗವಾದರೆ ನಿಮ್ಮನ್ನು ನಂಬಿಸುವ ಶಬ್ದಗಳು ನನ್ನ ಬಾಯಿಂದ ಹೊರಡ..ಹುದ..... ...ಎಲ್ಲಿ.. ವರೆಗೆ ನೀತಿ ನಿಯಮಕ್ಕೆ ಧಕ್ಕೆ ತಗಲುವುದಿಲ್ಲವೋ ಅಲ್ಲಿಯವರೆಗೆ ಹಿರಿಯರ ಆಜ್ಞೆಯನ್ನು ಪಾಲಿಸುವುದು ಮೇಲು. ಆದರಲ್ಲಿಯೇ ನಿಮ್ಮ ಕಲ್ಯಾಣವಿದೆ.

## ಹಿರಿಯರ ಆಜ್ಞೆ

ಈಗಿನ ಕಾಲ ಬಹಳ ಸಂದಿಗ್ಧಕಾಲ. ಅನೇಕರಿಗೆ ಹಿರಿಯರ ಆಜ್ಞೆಯನ್ನು ಪಾಲಿಸಬೇಕೋ ಬೇಡವೋ ಎಂಬ ಸಂದೇಹ ಬರುತ್ತದೆ.

ತಾಯಿ ತಂದೆಗಳ ಪ್ರೇಮ ಗಾಢವಾದುದರಿಂದ, ಕಾರಣವಿಲ್ಲದೆ ಅವರ ಮನಸ್ಸನ್ನು ನೋಯಿಸಬಾರದೆಂದು ನನಗೆ ತೋರುತ್ತದೆ. ಆದರೆ ತಾಯಿ ತಂದೆಗಳ ಹೊರತು ಉಳಿದ ಹಿರಿಯರ ವಿಷಯದಲ್ಲಿ ಇಷ್ಟು ಕಠಿಣ ನಿಯಮವನ್ನು ಪಾಲಿಸಬೇಕಾದುದಿಲ್ಲ. ಇತರ ಹಿರಿಯರ ಆಜ್ಞೆಗಳು ನೀತಿಗೆ ವಿರುದ್ಧವಾದರೆ ಅವನ್ನು ಉಲ್ಲಂಘಿಸುವುದೇ ಕರ್ತವ್ಯವಾಗುತ್ತದೆ. ನನ್ನ ತಂದೆ ನನಗೆ ಕಳವು ಮಾಡಲು ಹೇಳಿದರೆ ಉಲ್ಲಂಘಿಸುವುದೇ ನನ್ನ ಕರ್ತವ್ಯ. ಬ್ರಹ್ಮಚರ್ಯ ಪಾಲನೆ ನನ್ನ ಇಚ್ಛೆ ಇರುವಾಗ, ತಾಯಿತಂದೆಗಳು ಅದಕ್ಕೆ ವಿರುದ್ಧವಾದ ಆಜ್ಞೆಮಾಡಿದರೆ ನಮ್ರನಾಗಿ ಅದನ್ನು ಉಲ್ಲಂಘಿಸಲೇಬೇಕು. ಆದರೆ ಜೋಕೆ. ಅರ್ಥದ ಅನರ್ಥಮಾಡಬೇಡಿ.

## ಸತ್ಯಾಗ್ರಹಿಯ ಕುಟುಂಬ ಧರ್ಮ

[ಶ್ರೀಮತಿ ಕಸ್ತೂರಿ ಬಾ ರವರು ರೋಗದಿಂದ ಹಾಸಿಗೆ ಹಿಡಿದಿದ್ದಾಗ ಗಾಂಧಿ ಅವರಿಗೆ ಹೀಗೆ ಬರೆದರು. ಆಗ ಗಾಂಧಿ ಆಫ್ರಿಕದಲ್ಲಿ ಸೆರೆ ಇದ್ದರು.]

"ನಿನ್ನ ಪ್ರಕೃತಿ ತಿಳಿಯಿತು. ನನ್ನ ಹೃದಯ ಛಿನ್ನವಾಯಿತು. ನಾನು ಅಳುತ್ತಿದ್ದೇನೆ. ಆದರೆ ನಿನ್ನ ಸೇವೆ ಮಾಡಲು ಅಲ್ಲಿಗೆ ಬರುವಂತಿಲ್ಲ. ಈ ಸತ್ಯಾಗ್ರಹ ಯುದ್ಧದಲ್ಲಿ ನಾನು ಸರ್ವಸ್ವವನ್ನೂ ಅರ್ಪಣೆ ಮಾಡಿದ್ದೇನೆ. ನಾನು ಅಲ್ಲಿ ಬರುವುದು ಶಕ್ಯವಿಲ್ಲ, ದಂಡ ಕೊಟ್ಟರೇನೆ ಬರಲಿಕ್ಕೆ ಆದೀತು. ದಂಡ ಕೊಡುವ ಮಾತೇ ಇಲ್ಲ. ನೀನು ಸ್ವಲ್ಪ ಧೈರ್ಯ ತಾಳು. ಪಥ್ಯಾಮಾಡಿಕೊ. ಗುಣವಾಗುವುದು. ಆದರೆ ನನ್ನ ದುರ್ದೈವದಿಂದ ನಿನಗೇನಾದರೂ ಕೆಟ್ಟದ್ದೇ ಆದರೆ ನಿನಗೆ ಬರೆಯುವುದಿಷ್ಟೆ. ಈ ವಿಯೋಗಾವಸ್ಥೆಯಲ್ಲಿ, ನಾನು ಜೀವದಿಂದಿರುವಾಗಲೇನೀನು ತೀರಿಕೊಂಡರೆ ದೈವೇಚ್ಛೆ. ನಿನ್ನ ಮೇಲಿನ ನನ್ನ ಉತ್ಕಟ ಪ್ರೇಮದಿಂದ—ಲೋಕದ ದೃಷ್ಟಿಯಿಂದ ನೀನು ತೀರಿಕೊಂಡರೂ—ನನ್ನ ದೃಷ್ಟಿಯಿಂದ ಜೀವಂತಳಾಗಿಯೇ ಉಳಿಯುವಿ. ನಿನ್ನ ಆತ್ಮವು ಅಮರವಿದೆ. ನಿನ್ನ ಅಂತ್ಯವಾದರೆ ನಾನು ಮತ್ತೆಂದೂ ಸ್ತ್ರೀಯನ್ನು ವಿವಾಹ ಮಾಡಿಕೊಳ್ಳುವುದಿಲ್ಲವೆಂದು ಆಶ್ವಾಸನ ಕೊಡುತ್ತೇನೆ. ನಾನು ಇದನ್ನು ಹಿಂದೆ ಅನೇಕ ಸಲ ಹೇಳಿದ್ದೇನೆ. ಪರಮಾತ್ಮನ ಮೇಲೆ ದೃಷಿ

ಯಿಟ್ಟು ಸುಖದಿಂದ ಪ್ರಾಣ ಬಿಡು. ನಿನ್ನ ಮರಣವೂ ಸತ್ಯಾಗ್ರಹದ ಒಂದು ಅಂಗ. ನನ್ನ ಯುದ್ಧ ಕೇವಲ ರಾಜಕೀಯವಲ್ಲ. ಧಾರ್ಮಿಕವೂ ಅಹುದು. ಆದುದರಿಂದಲೇ ಅದು ಶುದ್ಧ. ಇದರಲ್ಲಿ ನೀನು ಸತ್ತರೂ ಸರಿ, ಬದುಕಿದರೂ ಸರಿ. ಇದನ್ನು ಅರಿತು ಮನಸ್ಸಿಗೆ ಏನೂ ಹಚ್ಚಿಕೊಳ್ಳಬೇಡ. ಇದೇ ನಿನ್ನ ಬಳಿ ನನ್ನ ಯಾಚನೆ.

## ಆತ್ಮ ಶುದ್ಧಿ

ಆತ್ಮದ ಹೊರತು ಉಳಿದುದೆಲ್ಲ ಕ್ಷಣಿಕ. ಈ ವಿಚಾರವನ್ನು ನಿರಂತರ ಮನಸ್ಸಿನಲ್ಲಿ ಮನನ ಮಾಡುತ್ತಾ ಅದರ ಸಿದ್ಧಿಗಾಗಿಯೇ ಸದಾಕಾಲವೂ ಪ್ರಯತ್ನಮಾಡಬೇಕು. ನಾನು ಹೆಚ್ಚು ಹೆಚ್ಚು ವಿಚಾರಮಾಡಿದಂತೆಲ್ಲ ಸತ್ಯ ಮತ್ತು ಬ್ರಹ್ಮಚರ್ಯದ ಮಹಿಮೆ ನನಗೆ ಹೆಚ್ಚು ವಿಲಕ್ಷಣವಾಗಿ ತೋರುತ್ತಿದೆ. ಬ್ರಹ್ಮಚರ್ಯವೇ ಮೊದಲಾದ ಸಮಸ್ತ ನೀತಿಗಳ ಸಮಾವೇಶವೂ ಸತ್ಯದಲ್ಲಿಯೇ ಆಗುತ್ತಿದ್ದರೂ, ಬ್ರಹ್ಮಚರ್ಯ ಸಹ ಸತ್ಯಕ್ಕೆ ಸಮಾನವಾದ ತತ್ವ. ಇವೆರಡರ ಆಚರಣೆಯಿಂದ ಯಾವ ಅಡಚಣೆಯೂ ದೂರವಾಗುವುದು. ನಿಜವಾದ ಅಡಚಣೆ ನಮ್ಮ ಮನೋ ವಿಕಾರವೇ. ಬಾಹ್ಯಉಪಾಧಿಗಳ ಮೇಲೆ ನಾವು ಆಧಾರವಿಡದಿದ್ದರೆ "ಜನರು ಏನೆಂದಾರು" ಎಂಬುದರ ಬದಲು ನಾವು ಮಾಡಬೇಕು ಎಂಬ ವಿಚಾರವನ್ನೇ ನಾವು ಮಾಡತೊಡಗುವೆವು.

ವಿಪತ್ತಿನಲ್ಲಿ ಧೈರ್ಯದ ಹೊರತು ಎರಡನೆಯ ಉಪಾಯವಿಲ್ಲ. ಟ್ರಾನ್ಸ್‌ವಾಲ್‌ನಲ್ಲಿ ಯಾವ ಸಾಧನವೋ ನಮ್ಮ ದೇಶದಲ್ಲಿಯೂ ಅದೇ ಸಾಧನ ಎಂಬ ವಿಷಯದಲ್ಲಿ ನನಗೆ ಅನುಮಾನವೇ ಇಲ್ಲ. ಸ್ಮಶಾನದಲ್ಲಿ ಸಹ ನಿರ್ಭಯವಾಗಿ ನಿದ್ರೆ ಮಾಡುವುದು ನಮ್ಮ ಕರ್ತವ್ಯವಿರುತ್ತದೆ. ಆದರೆ ಅಲ್ಲಿ ನಿದ್ರೆ ಮಾಡಿದೊಡನೇ ಭಯದಿಂದ ನಮಗೆ ಮರಣ ಬರುವುದು ಹೆಚ್ಚು ಸಂಭವವಿರುತ್ತದೆ. ಬೇಕಾದ ರೀತಿಯಿಂದ ಬೇಕಾದಾಗ ಬರುವ ಮರಣವನ್ನು ಆನಂದದಿಂದ ಸ್ವಾಗತಿಸುವ ಬಲ ನನ್ನಲ್ಲಿ ಬರುತ್ತಿರುವಂತೆ ನನಗೆ ಭಾಸವಾಗುತ್ತಿದೆ. ಇಂತಹುದೇ ಬಲ ಎಲ್ಲರಲ್ಲಿಯೂ ಬರಬೇಕೆಂಬುದು ನನ್ನ ಇಚ್ಛೆ........ಬಲವುಳ್ಳವನೇ ನಿಲ್ಲುತ್ತಾನೆ. ನನ್ನ ಆತ್ಮವು ಸಮರ್ಥವೆಂದು ನಿಮಗೆ ತೋರಿದರೆ ನಿಮ್ಮದೂ

ಹಾಗೆಯೇ. ಎರಡರಲ್ಲಿಯೂ ಏನೂ ಭೇದವಿಲ್ಲ, ಆದರೆ ನಿಮ್ಮಲ್ಲಿರುವ ಅನಾತ್ಮತೆ ಭಯ ಸಂಶಯ ಅನಿಶ್ಚಯ ಮುಂತಾದುವನ್ನೆಲ್ಲ ತೊಡೆದು ಹಾಕಿ. ನಾನು ಹೇಳಿದ್ದರ ವಿರುದ್ಧ ಇಡೀ ಜಗತ್ತೇ ಎದ್ದರೂ ನನಗೆ ನಿರಾಶೆ ಹುಟ್ಟದು. ಇದು ಹೆಮ್ಮೆಯ ಮಾತಲ್ಲ. ಸತ್ಯ. ಹಿಂದುಸ್ಥಾನವನ್ನು ಶುದ್ಧಮಾಡಬೇಕೆಂಬುದು ನನ್ನ ಮಹತ್ವಾಕಾಂಕ್ಷೆಯಲ್ಲ. ನಾನು ಸ್ವತಃ ಶುದ್ಧನಾಗಬೇಕೆಂಬುದೇ ನನ್ನ ಮನೋರಥವಾಗಿದೆ. ಉಳಿದದ್ದೆಲ್ಲ ಠಕ್ಕು. ಯಾರು ಆತ್ಮವನ್ನು ಅನುಸರಿಸುತ್ತಿಲ್ಲವೋ ಅವರಿಗೆ ಏನೂ ತಿಳಿಯದು ನಾವು ರಾವಣನ ಉತ್ಸಾಹದಿಂದ— ಆತ್ಮದ ಕಡೆ ಹೋಗಬೇಕಾಗಿದೆ. ಆತ್ಮವಿದ್ದವನಿಗೆ, ಮೋಕ್ಷ. ಮನುಷ್ಯನಿಗೆ ಇದೇ ಜನ್ಮದಲ್ಲಿ ಮೋಕ್ಷ ಸಿಕ್ಕುವುದೂ ಉಂಟು. ನಡೆದದ್ದೆಲ್ಲ ಸರಿ ಎಂದಾಗಲಿ, ಹಿರಿಯರು ಮಾಡಿದರೆಂದಾಗಲಿ ಯಾವ ಕಾರ್ಯವನ್ನು ಮಾಡಬೇಕಾದುದಿಲ್ಲ. ಹಿಂದಿನದು ಬಹಳ ಉತ್ತಮವಿತ್ತು. ಆದರೆ ಬೆಂಕಿಯಲ್ಲಿ ಹೊಗೆ ಇರುವಂತೆ ಪ್ರಾಚೀನ ಉತ್ತಮತೆಯಲ್ಲಿಯೂ ಕನಿಷ್ಠತೆ ಉಂಟು. ಇವೆಲ್ಲವನ್ನು ಮಥಿಸಿ ತತ್ವಗ್ರಹಣ ಮಾಡಬೇಕು. ಶ್ರೀಕೃಷ್ಣನ ಪ್ರಸಾದ ದೊರೆಯಲು ಒಂದೇ ಮಾರ್ಗ. ಎಲ್ಲ ವಿಷಯಗಳ ಪ್ರೇಮವನ್ನು ತೊರೆಯಬೇಕು. ಶರೀರ ಬಿದ್ದುಹೋಗಬಹುದೆಂಬ ಚಿಂತೆ ಬೇಡ.

ಜ್ಞಾನ ರೂಪದ ಕಾಗೆ, ವಾಸನಾರೂಪವಾದ ಪಿಂಡವನ್ನು ತಿಂದರೆ (ಜಗತ್) ಪಿತನು ಭೆಟ್ಟಿಯಾಗುವನು?

ತಂದೆ ತಾಯಿಗಳನ್ನು ಮರೆತ ಹುಡುಗನು ಈ ಜಗತ್ತಿನಲ್ಲಿ ಎಂತಹ ದೀಪವನ್ನು ಹಚ್ಚುವನು?

ಸ್ವಸ್ತ್ರೀಯ ವಿಷಯದಲ್ಲಿ ನಿರ್ವಿಷಯನಾಗುವುದು-ವಿಷಯವನ್ನು ಜೀರ್ಣಮಾಡುವುದು— ಇದರಷ್ಟು ಕಠಿಣ ಕಾರ್ಯ ಜಗತ್ತಿನಲ್ಲಿಯೇ ಇಲ್ಲ. ಇದರಲ್ಲಿ ಪ್ರಯತ್ನದಿಂದಲೇ ಪೂರ್ಣ ಯಶಸ್ಸು. ನನ್ನ ಪ್ರಾಥಮಿಕ ನಿಷ್ಫಲತೆಯಿಂದ ನಿಮಗೆ ಹೆಚ್ಚಿನ ಹುರುಪು ಬರಬೇಕು. ಕವಿಗಳು ಮನುಷ್ಯನಿಗೆ ಸಿಂಹದ ಉಪಮೆ ಕೊಟ್ಟಿದ್ದಾರೆ. ಇಂಡಿಯಾ ರಾಜ್ಯದ ರಾಜರಾಗುವ ಸಾಮರ್ಥ್ಯ ನಮ್ಮೆಲ್ಲರಿಗೂ ಪ್ರಾಪ್ತವಾದೀತು.

## ದಾರಿದ್ರ್ಯವೇ ಇಷ್ಟ

ಸುದಾಮನ ಚರಿತ್ರೆ ಓದಿದೆ. ಸುದಾಮ ಮತ್ತು ನರಸಿಂಹ ಮೆಹತ ಇವರೊಡನೆ ದಾರಿದ್ರ್ಯದಲ್ಲಿ ಸ್ಪರ್ಧೆಮಾಡಬೇಕೆಂದು ನನಗೆ ಉತ್ಸಾಹ. ಆದುದರಿಂದ ನಾನು ಬರಿಯ ಪಾಂಡಿತ್ಯ ಜ್ಞಾನ ಶುಷ್ಕ ವೆಂತಲೂ ಸುದಾಮನದೇ ನಿಜವಾದ ಅನುಕರಣೀಯ ಜ್ಞಾನವೆಂದೂ ಬರೆದೆ ಶ್ರೀಕೃಷ್ಣನು ಪರಮಾತ್ಮ. ಈ ಪರಮಾತ್ಮನೇ ಅರ್ಜುನನ "ಸಾರಥಿ", ಸುಧಾಮನ "ಮಿತ್ರ" ನರಸಿಂಹ ಮೆಹತನ 'ರಣಛೋಡ' ಸುದಾಮನ ಹೆಂಡತಿಯು ಬಿಟ್ಟ ವಾಗ್ಬಾಣವು ಅಲಂಕಾರಿಕವೆಂದೇ ನಾನು ತಿಳಿಯುತ್ತೇನೆ. ಆದಾಗ್ಯೂ (ಚರಿತ್ರೆಯಲ್ಲಿ ಹೇಳಿರುವಂತೆ) ಅವಳು ಅಕ್ಷರಶಃ ಮಾತನಾಡಿದ್ದರೂ ಅದರಲ್ಲಿ ವಿರೋಧವಾಗಲಿ ಆಶ್ಚರ್ಯ ವಾಗಲಿ ಏನೂ ಇಲ್ಲ. ಸುದಾಮನ ಸ್ವಭಾವ ಎಲ್ಲ ಸಹಿಸಿಕೊಂಡು ಸಮಾಧಾನದಿಂದ ಇರುವುದಾಗಿತ್ತು ಅಂದಮೇಲೆ ಶ್ರೀಕೃಷ್ಣನಂತಹ ಮಿತ್ರನಿದ್ದು ಅವನ ಸಹಾಯವನ್ನೇಕೆ ತೆಗೆದುಕೊಳ್ಳುವುದಿಲ್ಲವೆಂದು ಹೆಂಡತಿಯು ಕೇಳುವುದು ಸ್ವಾಭಾವಿಕ. ಹೆಂಗಸೆಂದಮೇಲೆ ಹಾಗೆ ಕೇಳುವವಳೇ. ಸುದಾಮನು ಬಹಳ ಬಡವನಾಗಿದ್ದರೂ ತುಷ್ಟನಾಗಿ ದ್ದನು. ನರಸಿಂಹ ಮೆಹತನು ಶ್ರೀಕೃಷ್ಣನ ಪ್ರತ್ಯಕ್ಷ ದರ್ಶನವನ್ನು ತೆಗೆದುಕೊಂಡಿದ್ದರೂ ತನ್ನ ದಾರಿದ್ರ್ಯವನ್ನು ನೀಗಿಸಿಕೊಳ್ಳುವ ಇಚ್ಛೆ ಯನ್ನು ಹೊಂದಲಿಲ್ಲ.

ನನಗೆ ವಕೀಲಿ ಮಾಡುವ ಪ್ರಸಂಗ ತಿರುಗಿ ಬರಬಾರದೆಂಬುದೇ ನನ್ನ ಇಚ್ಛೆ. ಫೀನಿಕ್ಸಿನಲ್ಲಿ ನಾವೆಲ್ಲಾ ಪೂರ್ಣ ದರಿದ್ರರಾಗಿರ ಬೇಕೆಂದು ನನ್ನ ಇಷ್ಟ. ಇದನ್ನೇ ದೇವರಲ್ಲಿ ಬೇಡುತ್ತಿದ್ದೇನೆ. ಆದರೆ ಚಿನ್ಹೆಗಳು ವಿಪರೀತವಾಗಿ ತೋರುತ್ತಿವೆ. "ನಾಳೆಗೆ ಒಂದು ಪೈ ಸಹ ಇಲ್ಲ. ಹೇಗಾದೀತು" ಎಂದು ಚಿಂತೆ ಮಾಡುವ ಅಲಭ್ಯ ಪ್ರಸಂಗ ಬರ ಲಿಕ್ಕಿಲ್ಲವೆಂದೇ ತೋರುತ್ತದೆ. ಈ ಸ್ಥಿತಿ ಅಲಭ್ಯವೆಂದೇ ನನಗೆ ತೋರು ತ್ತದೆ. ಏಕೆಂದರೆ ಜಗತ್ತಿನ ಬಹುಮಂದಿ ಹೀಗೆ ಇದ್ದಾರೆ. ಬುದ್ಧಾದಿ ಗಳ ಸ್ಥಿತಿಯೂ ಹೀಗೆಯೇ ಇತ್ತು. ಇಷ್ಟಾದ ಹೊರತು ಆತ್ಮಾರಾಮನ ಪರಿಚಯವಾಗಲಿಕ್ಕಿಲ್ಲವೆಂದು ನನ್ನ ನಿಶ್ಚಯ. ಇಂದ್ರಿಯಭೋಗ

ಗಳನ್ನು ಭೋಗಿಸುತ್ತ "ನಾನೇನೂ ಮಾಡುತ್ತಿಲ್ಲ. ಇಂದ್ರಿಯಗಳು ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿವೆ. ನಾನಾದರೋ ಕೃಷ್ಣ ಸ್ವರೂಪನಿದ್ದೇನೆ ಎಂದು ಮೊದಲಾಗಿ ಮಾತನಾಡುವುದು ಮಿಥ್ಯಾ ವಾದದ ಲಕ್ಷಣವಾಗಿದೆ. ಯಾರು ಪೂರ್ಣವಾಗಿ ಇಂದ್ರಿಯ ದಮನವನ್ನು ಮಾಡಿರುತ್ತಾನೆಯೋ ಮತ್ತು ನಿತ್ಯ ಶರೀರ ಯಾತ್ರೆಗೆ ಬೇಕಾದಷ್ಟು ಮಾತ್ರವೇ ಯಾರ ಇಂದ್ರಿಯಗಳು ವ್ಯವಹರಿಸುತ್ತವೆಯೋ ಅವನ ಬಾಯಲ್ಲಿ ಮಾತ್ರ ಮೇಲಿನ ವಾಕ್ಯ ಶೋಭಿಸುವುದು. ಈ ದೃಷ್ಟಿಯಿಂದ ನಮ್ಮಲ್ಲಿ ಒಬ್ಬನಿಗೂ ಆ ವಾಕ್ಯವಾಡುವ ಅಧಿಕಾರವಿಲ್ಲ. ನಿಜವಾದ ದಾರಿದ್ರ್ಯ ನಮಗೆ ಬರುವವರೆಗೆ ನಮಗೆ ಆ ಅಧಿಕಾರ ಸಿಕ್ಕುವಂತೆಯೂ ಇಲ್ಲ. ಅಂತಹ ಸ್ಥಿತಿಯು ನಮ್ಮೆಲ್ಲರಿಗೂ ಪ್ರಾಪ್ತವಾಗಲೆಂದು ನಾವು ಸತತ ಚಿಂತನೆ ಪ್ರಯತ್ನಮಾಡಿದರೆ, ದೇವರು ನಿಜವಾಗಿಯೂ ಅಂತಹ ಕಾಲವನ್ನು ನಮಗೆ ಒದಗಿಸಿಯಾನು.

[ಮಹಾತ್ಮ ಗಾಂಧಿಯವರು, ಶಾಲೆ ಕಾಲೇಜುಗಳ ಅಕ್ಷರ ಶಿಕ್ಷಣ ವನ್ನು ಅಷ್ಟಾಗಿ ಮೆಚ್ಚುತ್ತಿರಲಿಲ್ಲ. ಅವರು ತಮ್ಮ ಮಕ್ಕಳಿಗೂ ಆ ಶಿಕ್ಷಣವನ್ನು ಕೊಡಲಿಲ್ಲ. ಇದರಿಂದ ಹೀರಾಲಾಲನಿಗೆ ಒಂದು ವೇಳೆ ಅಸಮಾಧಾನವಾಗಿದ್ದರೂ ಆಗಿದ್ದಿರಬಹುದೆಂದು ಈಚೆಗೆ ಅವರು ಹೇಳಿ ದ್ದಾರೆ. ಇದು ಅವರು ತಮ್ಮ ಮಗ ಮಣಿಲಾಲನಿಗೆ ಪ್ರಟೋರಿಯ ಸೆರೆಮನೆಯಿಂದ ಬರೆದ ಕಾಗದ.

## ನಿಜವಾದ ಜ್ಞಾನ ಯಾವುದು?

ಶಿಕ್ಷಣವೆಂದರೆ ಬರಿಯ ಅಕ್ಷರ ಜ್ಞಾನವಲ್ಲ. ಆದರೆ ಚರಿತ್ರ ವಿಕಾಸ ಧರ್ಮ ಮರ್ಮ ಪ್ರತೀತಿಗಳೇ ನಿಜವಾದ ಜ್ಞಾನ. ಈ ನನ್ನ ಮತವು ಸರ್ವಪ್ರಕಾಶದ ವಾಚನದಿಂದ ದೃಢವಾಗುತ್ತಲಿದೆ. ಶಿಕ್ಷಣದ ಉದ್ದೇಶವು ಇದೇ ಆಗಿದೆ. ಈ ದೃಷ್ಟಿಯಿಂದ ನಿಮಗೆ ಸದ್ಯಕ್ಕೆ ಉತ್ತಮವಾದ ಶಿಕ್ಷಣ ದೊರಕುತ್ತಲೇ ಇದೆ.

ತಾಯಿಯ ಸೇವೆ ಮಾಡುವಾಗ ಅವಳ ಸಿಡುಕಿನ ಸ್ವಭಾವವನ್ನೇ ಸಹಿಸುವುದು. [ಆಗ ಕಸ್ತೂರಿ ಬಾ ಹಿಂದೆ ಹೇಳಿದಂತೆ ರೋಗಿಷ್ಠರಾಗಿ ದ್ದರು] ಚಿ|| ಹರಿಲಾಲನು ಇಲ್ಲದಾಗ ಚಿ|| ಚಂಚೀಗೆ ಏನು ಬೇಕೋ

ಅದರ ವ್ಯವಸ್ಥೆಮಾಡಿ ಹರಿಲಾಲನನ್ನು ಅವಳು ನೆನೆದು ಅಳದಂತೆ ಮಾಡುವುದು, ರಾಮದಾಸ ದೇವದಾಸರ ರಕ್ಷಣೆ ಮಾಡುವುದು ಅದಕ್ಕಿಂತ ಹೆಚ್ಚಿನ ಶಿಕ್ಷಣ ಮತ್ತಾವುದು? ಈ ಕೆಲಸದಲ್ಲಿ ನೀವು ತೇರ್ಗಡೆಯಾದರೆ ನಿಮಗೆ ಅರ್ಥಕ್ಕಿಂತ ಹೆಚ್ಚು ಶಿಕ್ಷಣ ದೊರೆತಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

ಮೊದಲಿನ ಬ್ರಹ್ಮಚರ್ಯಾವಸ್ಥೆ ಕೊನೆಯ ಸನ್ಯಾಸಾವಸ್ಥೆಯಂತೆಯೇ ಇರುತ್ತದೆ ಎಂಬ ಮಾತು ನಿಜ. ನಿರ್ದೋಷಾವಸ್ಥೆಯಲ್ಲಿ—ಅಂದರೆ ಬಾಲ್ಯದ ಹನ್ನೆರಡು ವಯಸ್ಸಿನವರೆಗೆ ಮಾತ್ರ—ಸುಖಭೋಗಗಳನ್ನು ಭೋಗಿಸಬಹುದು. ವಯಸ್ಸಾದ ಕೂಡಲೇ ಹುಡುಗರು ತಮ್ಮ ಜವಾಬ್ದಾರಿ ಅರಿಯಬೇಕು. ಹನ್ನೆರಡು ವರುಷವಾದನಂತರ ಪ್ರತಿಯೊಬ್ಬನೂ ಸಂಯಮವನ್ನು ಕಲಿಯಬೇಕು. ಇದು ಬೇಸರಿಕೆಯಿಂದ ಸಾಧ್ಯವಲ್ಲ ಸ್ವಾಭಾವಿಕವಾಗಿ ಆಗಬೇಕು.

ನಿಮಗಿಂತ ನಾನು ಚಿಕ್ಕವನಾಗಿದ್ದಾಗ ಹಿರಿಯರ ಸೇವೆಯಲ್ಲಿಯೆ ನನಗೆ ಆನಂದವಿತ್ತು. ಹನ್ನೆರಡು ವರುಷಗಳನಂತರ ಸುಖ ವಿನೋದಗಳೇನೆಂಬುದೇ ನನಗೆ ಗೊತ್ತಿರಲಿಲ್ಲ. ನೀವು ನಿಜವಾದ ಸದ್ಗುಣವುಳ್ಳವರಾಗಿ, ನಿಮ್ಮ ಜೀವ ಸದ್ಗುಣಮಯವಾದರೆ ನನ್ನ ಶಿಕ್ಷಣದ ಆದರ್ಶವನ್ನು ನೀವು ಸಾಧಿಸಿದಂತೆಯೇ ಸರಿ. ನೀವು ಪೃಥ್ವಿಯ ಮೇಲೆ ಎಲ್ಲಿದ್ದರೂ ನಿಮ್ಮ ಜೀವನ ನಡೆಸಲು ಸಮರ್ಥರಾಗುವಿರಿ. ಆತ್ಮಜ್ಞಾನ ಸಂಪಾದಿಸುವಿರಿ. ನೀವು ಅಕ್ಷರಜ್ಞಾನವನ್ನೇ ಪಡೆಯಬಾರದೆಂದು ಇದರ ಅರ್ಥವಲ್ಲ. ಆದರೆ ಅದಕ್ಕಾಗಿ ನೀವು ಆತುರಪಡಬಾರದು. ಅಕ್ಷರ ಜ್ಞಾನ ಸಂಪಾದನೆಗೆ ಬೇಕಾದಷ್ಟು ಕಾಲವಿದೆ. ಪರೋಪಕಾರ ಮಾಡುವುದು ಅನ್ಯರ ಸೇವೆ ಆ ಸೇವೆಯಲ್ಲಿ ನಮ್ರತೆ ಇದೇ ನಿಜವಾದ ಶಿಕ್ಷಣ. ದುಃಖಿತನ ಶುಶ್ರೂಷೆ ಮಾಡುವುದಕ್ಕಿಂತ ಬೇರೆ ಮಾರ್ಗವಿಲ್ಲ. ಅದರಲ್ಲಿಯೇ ಧರ್ಮವೂ ಇದೆ. ಅದನ್ನು ನಾವು ಪರೋಪಕಾರ ದೃಷ್ಟಿಯಿಂದಲೇ ಸಂಪಾದಿಸಬೇಕಾಗಿದೆ.

ನಮ್ಮ ಹಣೆಯಲ್ಲಿ ಮುಂದೆ ಬಡತನವೇ ಉಂಟೆಂಬುದನ್ನು ಮರೆಯಬೇಡಿ. ಆಲೋಚನೆ ಮಾಡಿದಂತೆಲ್ಲ ಈ ಜಗತ್ತಿನಲ್ಲಿ ಸಂಪ

ತ್ತಿನಲ್ಲಿರುವುದಕ್ಕಿಂತ ದರಿದ್ರಾವಸ್ಥೆಯೇ ಹೆಚ್ಚು ಧೈರ್ಯ. ಬಡತನದ ಫಲಗಳು ಹೆಚ್ಚು ಸುಂದರವಾಗಿಯೂ ರುಚಿಕರವಾಗಿಯೂ ಇರುತ್ತವೆಂದು ತೋರುತ್ತವೆ.

ದೋಷಗಳಿಗಿಂತ ಹೆಚ್ಚಾಗಿ ಗುಣಗಳ ಕಡೆ ನೋಡಬೇಕು. ನಾವೆಲ್ಲರೂ ದೋಷಪೂರ್ಣರಿದ್ದೇವೆ ಆದುದರಿಂದ ಗುಣಗಳ ಶೋಧ ಮಾಡಿ ಮನನ ಮಾಡಬೇಕು. ಇದು ಅಭ್ಯಾಸದಿಂದ ಬರುತ್ತದೆ.

ಯಾವುದು ಅಪರಿಹಾರ್ಯವೋ ಅದನ್ನು ಸಹಿಸಲೇ ಬೇಕು ನಿಮ್ಮ ಕರ್ತವ್ಯವನ್ನು ನೀವು ಮಾಡಿ. ಮನಸ್ಸು ಸಂತೋಷ ಚಿತ್ತವಾಗುವುದು. ನಮ್ಮ ಕರ್ತವ್ಯಮಾಡುವಾಗ ಇಡೀ ಜಗತ್ತಿನ ಕಷ್ಟವನ್ನು ಯೋಚಿಸುವುದು ಒಳ್ಳೆಯದೇಯೆ.

ನಿಮಗೆ ಕರ್ತವ್ಯಾ–ಕರ್ತವ್ಯಗಳ ಗೊಂದಲ ಬೇಡ. ನಮ್ಮ ಪಾಲಿಗೆ ಬಂದುದನ್ನೆಲ್ಲ ಮಾಡಲೇ ಬೇಕು. ತಾಯಿ ತಂದೆಗಳ ಸೇವೆ ಮಾಡಬೇಕು. ಸಾಧ್ಯವಾದಷ್ಟು ಕಲಿಯಬೇಕು. ಇಷ್ಟು ಮಾತ್ರ ನಿಶ್ಚಯಮಾಡಿ. ನಾವು ಡಾಕ್ಟರು ಬ್ಯಾರಿಸ್ಟರು ಆಗುವುದಿಲ್ಲ ದರಿದ್ರರಾಗಿದ್ದೇವೆ. ಮುಂದೆಯೂ ದರಿದ್ರರಾಗಿಯೇ ಉಳಿಯುತ್ತೇವೆ. ಉದರ ಭರಣಕ್ಕಷ್ಟೇ ದ್ರವ್ಯದ ಆವಶ್ಯಕತೆಯುಂಟು. ಫೀನಕ್ಸ್ ಉನ್ನತಿ ನಮ್ಮ ಕರ್ತವ್ಯವಾಗಿದೆ. ಯಾಕೆಂದರೆ ಆ ಮೂಲಕವೇ ನಮ್ಮ ಆತ್ಮದ ಉನ್ನತಿ ಮತ್ತು ದೇಶಸೇವೆ ನಮ್ಮ ಚರಿತ್ರೆಯನ್ನು ತಿದ್ದಿಕೊಳ್ಳುವುದೇ ನಮ್ಮ ಕರ್ತವ್ಯವಾಗಿದೆ. ಹಣ ಸಂಪಾದನೆಗಾಗಿ ಅಲ್ಲ ವಿದ್ಯೆ. ಮನುಷ್ಯತ್ವವನ್ನು ಬಿಡದವನು ಎಂದೂ ಉಪವಾಸ ಸಾಯುವುದಿಲ್ಲ. ಹಾಗೆ ಸಾಯುವ ಪ್ರಸಂಗ ಬಂದರೆ ಹೆದರುವುದೂ ಇಲ್ಲ. ಇಲ್ಲಿ ನಾನೂ ನಿಮ್ಮ ಚಿಂತೆ ಮಾಡುತ್ತಿದ್ದೇನೆ. 'ಬಾಪು' ನಿಮ್ಮಲ್ಲಿ ಎಂದೂ ನಿರ್ದಯನಾಗುವುದಿಲ್ಲವೆಂಬುದನ್ನು ನೆನಪಿಡಿ. ಜನತೆಯ ಸೇವೆ ಮಾಡುವುದು ವ್ಯರ್ಥವಾಗುವುದಿಲ್ಲ.

[ಆಗ ಗಾಂಧಿಯವರ ಮಗ ಮಣಿಲಾಲನನ್ನು ಜನ ನಿನ್ನ ವರ್ಗ (ತರಗತಿ) ಯಾವುದೆಂದು ಕೇಳುತ್ತಿದ್ದರು. ಗಾಂಧಿ ಹೀಗೆ ಜವಾಬು ಕೊಟ್ಟರು.

ನೀವು ಯಾವ ವರ್ಗದಲ್ಲಿ ಇದ್ದೀರೆಂದು ಹೇಳಲಿಕ್ಕೆ ಬರಲಿಲ್ಲವೇ. ಇನ್ನಾದರೂ 'ಬಾವುನ' ವರ್ಗದಲ್ಲಿ ಎಂದು ಹೇಳುತ್ತಾ ಹೋಗಿ. ಶಾಲೆಯ ಶಿಕ್ಷಣದ ಅಭಿಲಾಷೆ ನಮಗ್ಯಾಕೆ ಇಷ್ಟು ದೊಡ್ಡ ಧನಗಳಿಸ ಬೇಕೆಂಬುದು ನಿಮ್ಮ ಇಚ್ಛೆಯೋ. ಹಾಗಿದ್ದರೆ ಅದು ಸರಿಯಲ್ಲ. ಪರಮೇಶ್ವರನು ಹುಟ್ಟಿಸಿದವರಿಗೆ ಹುಲ್ಲು ಮೆಯಿಸುವುದಿಲ್ಲ. ಕೂಲಿ ಮಾಡಿದರೂ ಹೊಟ್ಟೆ ತುಂಬೀತು. ನಾವು ಫಿನಿಕ್ಸದ ಉದ್ಧಾರ ಅಥವ ದೇಶಸೇವೆಯಲ್ಲಿ ಸಾಯುವುದಾದರೆ ಇನ್ನು ಧನಗಳಿಸುವ ಯೋಗವೆಲ್ಲಿ ಬಂತು? ದೇಶಸೇವೆಗಾಗಿ ವಿದ್ಯೆಯನ್ನು ಕಲಿಯುವುದಿದ್ದರೆ, ನೀವು ಈಗ ಕಲಿಯುತ್ತಲೇ ಇದ್ದೀರಿ. ಆತ್ಮಜ್ಞಾನಕ್ಕೆ ಶುದ್ಧವಾದ ಶಿಕ್ಷಣ ಬೇಕು. ಇನ್ನೂ ಹೆಚ್ಚು ಕೆಲಸ ಸಾಧಿಸಲು ನೀವು ಕಲಿಯಬೇಕಾಗಿದೆ. ಆದಕ್ಕೆ ಗಡಿಬಿಡಿ ಬೇಕಿಲ್ಲ. ನಿಮ್ಮ ಚಿಂತೆ ನನಗಿದೆ ಎಂದು ನೀವು ಭಾವಿಸುವುದಾದರೆ ನೀವು ಸ್ವತಃ ಚಿಂತಿಸುವುದು ಬೇಡ.

ದೇಶ ಸೇವಕನು ಮೊದಲು ಆತ್ಮ ಸಂಶೋಧನೆ ಮಾಡಿಕೊಳ್ಳ ಬೇಕು. ಅಂದರೆ ನೀತಿ ದೃಢವಾಗಬೇಕು. ನೀತಿಯೆಂದರೇ ಅಭಯ. ಸತ್ಯ ಬ್ರಹ್ಮಚರ್ಯಾದಿ ಗುಣಸಂಪಾದನೆ. ಇದನ್ನು ಮಾಡುವಾಗ ದೇಶ ಸೇವೆ ತನ್ನಿಂದ ತಾನೇ ಘಟಿಸುತ್ತದೆ. ಇದಕ್ಕೆ ಫಿನಿಕ್ಸ ಬಹಳ ಸಹಾಯವಾದೀತು. ಪಟ್ಟಣದಲ್ಲಿ ಜನವಸತಿ ಹೆಚ್ಚು ಅಲ್ಲಿ ಮೋಹಕ ವಾದ ವಸ್ತುಗಳು ವಿಶೇಷವಾಗಿರುತ್ತದೆ. ಅಲ್ಲಿ ನೀತಿ ರಕ್ಷಣೆ ಕಷ್ಟ ವೆಂದೇ ನನ್ನ ಮತ. ಜ್ಞಾನಿಗಳು ಫೀನಿಕ್ಸದಂತಹ ಏಕಾಂತ ಸ್ಥಳ ವನ್ನು ತೋರಿಸಿದ್ದಾರೆ. ನಿಜವಾದ ಶಾಲೆ ಎಂದರೆ ಅನುಭವವೇ.

" ಚಿ|| ರಾಮದಾಸ

ನಮಗೆ ಏನೂ ತರಲಿಲ್ಲವೆಂದು 'ಬಾಪುನ' ಮೇಲೆ ಸಿಟ್ಟಾಗ ಬೇಡಿ. ನನಗೆ ಯಾವ ವಸ್ತುವೂ ಮನಸ್ಸಿಗೆ ಒಪ್ಪಲಿಲ್ಲ. ಯೂರೋಪಿನ ವಸ್ತುಗಳೇ ನನಗೆ ಹಿಡಿಯುವುದಿಲ್ಲ. ಹಿಂದುಸ್ಥಾನದವು ಯಾವುದಾ ದರೂ ಆಗಲಿ ಯೂರೋಪಿನ ಜನರು ಒಳ್ಳೆಯವರು ಅವರ ಜೀವನ ಪದ್ಧತಿ ಒಳ್ಳೆಯದಲ್ಲ.

## ಆಚರಣೆ ಮುಖ್ಯ

"ನನಗೆ ಭಗವದ್ಗೀತೆ ಮುಖೋದ್ಗತವಾಗಿದೆ" ಅರ್ಥವೂ ಗೊತ್ತಿದೆ. ಅಂದಮೇಲೆ ಮೂಲತತ್ವಗಳು ತಿಳಿದಿಲ್ಲವೇ ಎಂದು ನೀವು ಕೇಳಬಹುದು. ಮೂಲತತ್ವಗಳನ್ನು ತಿಳಿದುಕೊಳ್ಳುವುದೆಂದರೆ ಅದ ರಂತೆ ಆಚರಿಸುವುದೆಂದು ಅರ್ಥ. ವಿದಿ ಸಂಪತ್ತಿಯ ಮೊದಲನೆಯ ಗುಣ ಅಭಯ. ನೀವು ಸ್ವಲ್ಪವಾದರೂ ಅಭಯದ ಸ್ಥಿತಿಯನ್ನು ಹೊಂದಿ ರುವಿರೇನು? ಯೋಗ್ಯವಾದುದನ್ನು ನಿರ್ಭಯವಾಗಿ ದೇಹಪಾತವಾಗುವ ವರೆಗೆ ಮಾಡುತ್ತಾ ಉಳಿಯುವಿರೇನು? ಆ ಸ್ಥಿತಿ ಪ್ರಾಪ್ತವಾಗುವವರೆಗೆ ಸತತ ಪ್ರಯತ್ನಮಾಡಿ. ಪ್ರಯತ್ನ ಮಾಡುತ್ತಾ ನಡೆದಂತೆ ಹೆಚ್ಚು ಹೆಚ್ಚು ಶಕ್ತಿ ದೊರಕುವುದು. ಈ ಪ್ರಸಂಗದಲ್ಲಿ ಪ್ರಹ್ಲಾಧ ಸುಧನ್ವರ ದೃಷ್ಟಾಂತವನ್ನು ಕಣ್ಣೆದುರಿಗೆ ಇಟ್ಟುಕೊಳ್ಳಿ. ಇವು ಕೇವಲ ದಂತ ಕಥೆ ಗಳೆಂದು ತಿಳಿಯಬೇಡಿ. ಇಂತಹ ಕೆಲಸವನ್ನು ಮಾಡಿದ ಹಿಂದು ಪುತ್ರರು ಆಗಿಹೋಗಿದ್ದಾರೆ. ಆದುದರಿಂದಲೇ ನಾವು ಆ ಆಖ್ಯಾನ ಗಳನ್ನು ಪಾಠಮಾಡುತ್ತೇವೆ. ಇಂದಿಗೂ ಪ್ರಹ್ಲಾದ ಸುಧನ್ವ ಹರಿ ಶ್ಚಂದ್ರರು ಹಿಂದುಸ್ಥಾನದಲ್ಲಿ ಇಲ್ಲವೆಂದು ತಿಳಿಯಲು ಕಾರಣವಿಲ್ಲ. ನಾವು ಯೋಗ್ಯರಾದೆವೆಂದರೆ ನಮಗೆ ಅವರ ಭೇಟಿ ಆಗಿಯೇ ಆಗು ವುದು. ಅವರು ಬೊಂಬಾಯಿ ಜಾಲ್‌ಗಳಲ್ಲಿ ಬೆಟ್ಟಿಯಾಗುವುದಿಲ್ಲ. ಅರೆ ಯಲ್ಲಿ ಗೋಧಿ ಬೆಳೆಸುವ ಆಸೆಯೇ ಬೇಡ.

## ನಿಮ್ಮ ಉದ್ಧಾರವೇ ಹಿಂದೂಸ್ಥಾನರ ಉದ್ಧಾರ

ರಾಮಚಂದ್ರಾದಿಗಳ ಉದಾಹರಣೆಯನ್ನು ಅಕ್ಷರಶಃ ಅರ್ಥ ಮಾಡಿದರೆ ಬಹಳ ಗೊಂದಲವಾಗುವುದು. ಹತ್ತು ತಲೆಗಳೂ ಇಪ್ಪತ್ತು ಕೈಗಳೂ ಇರುವ ರಾವಣ ಮನುಷ್ಯ ಶರೀರದಿಂದಿರುವ ಸಂಭವ ತೋರು ವುದಿಲ್ಲ. ರಾವಣನು ಜಡ ಪದಾರ್ಥವಿದ್ದು ಶ್ರೀರಾಮಚಂದ್ರರೂಪೀ ಚೈತನ್ಯದಿಂದ ಅವನ ನಾಶವಾಯಿತೆಂಬ ಸಂಗತಿ ನನ್ನ ಬುದ್ಧಿಗೆ ಒಪ್ಪು ತ್ತದೆ. 'ಮದಮೋಹ ಮೋಹ ಮಹಾಮಮತಾ ರಜನೀತಮಪುಂಜ" ನಾಶಕವಾದ ಸೂರ್ಯಸೇನೆಯೆಂದು ತುಳಸೀ ದಾಸರು ಶ್ರೀರಾಮಚಂದ್ರನ ವರ್ಣನೆ ಮಾಡಿದ್ದಾರೆ.

ಇಡೀ ಹಿಂದೂಸ್ಥಾನದ ಉದ್ಧಾರದ ಭಾರವನ್ನು ನಿಮ್ಮ ಮೇಲೆ ತೆಗೆದುಕೊಳ್ಳಬೇಡಿ. ನಿಮ್ಮ ಸ್ವಂತ ಉದ್ಧಾರವನ್ನೇ ಮಾಡಿಕೊಳ್ಳಿರಿ ಇಷ್ಟೇ ಭಾರ ಸಾಕು. ನಾವೇ ಸ್ವತಃ ಹಿಂದೂಸ್ಥಾನ ಎಂದು ತಿಳಿಯುವುದರಲ್ಲಿಯೇ ಆತ್ಮದ ಉನ್ನತಿಯುಂಟು. ನಿಮ್ಮ ಉದ್ಧಾರವೇ ಹಿಂದುಸ್ಥಾನದ ಉದ್ಧಾರ. ಉಳಿದದ್ದೆಲ್ಲ ಪೊಳ್ಳು. ಬರಿಯ ಆಡಂಬರವೇ. ನಿಮ್ಮಲ್ಲಿ ನಿಜವಾದ ಆತ್ಮಪ್ರೇಮರಸವು ಉತ್ಪನ್ನವಾಯಿತೆಂದರೆ ಅದರಲ್ಲಿ ಮುಳುಗಿ ಇದ್ದುಬಿಡಿ. ಇತರರ ಚಿಂತೆ ನೀವು ಮಾಡುವ ಕಾರಣವಿಲ್ಲ. ಇತರರ ಚಿಂತೆಯಿಂದ ಇಹವೂ ಪರವೂ ಎರಡೂ ಹೋದೀತು. ಮಾತ್ರ ಸ್ವಾರ್ಥಪರರಾಗಬೇಡಿ.

ಸಿಯರಾಮ ಪ್ರೇಮ ಪೀಯೂಷ್ಪೂರಣ ಹೋತ ಜನ್ಮನ ಭರತಕೋ
ಮುನಿಮನ ಆಗಮ ಯಮ ನಿಯಮ ಶಮದಮ ವಿಷಮ ವ್ರತ
ಆಚರತ ಕೋ
ದುಃಖ ದಾಹ ದಾರಿದ್ರ ದಂಭ ಭೂಷಣ ಸೂಯಸ ಮಿಸು ಅವಹರತ
ಕಲೀ ಕಾಲ ತುಲಸೀನೆ ಶಠಹಿ ಹಠಿರಾವು ಸನ್ಮುಖ ಕರತಕೋ

ಇದು ಅಯೋಧ್ಯಾಕಾಂಡದ ಕೊನೆಯ ಛಂಧ. ಕಠಿಣ ಕಾಲದಲ್ಲಿ ಭಕ್ತಿಗೆ ಪ್ರಧಾನಪದ ಪ್ರಾಪ್ತವಾಗಿದೆ. ಆದರೆ ಭಕ್ತಿಗೆ ಸಹ ಯಮನಿಯಮಾದಿಗಳು ಬೇಕೆ ಬೇಕು ಈ ವಿಷಯದಲ್ಲಿ ನಮ್ಮ ಶಿಕ್ಷಣ ಪದ್ಧತಿ ನಿರುಪಯೋಗಿಯಾಗಿದೆ. ಶಮದಮಾದಿಗಳ ಹೊರತು ಮಿಕ್ಕ ಚಾತುರ್ಯವಿಲ್ಲಿ ಪೊಳ್ಳು.

ಕೃಷ್ಣ ರಾಮ ಬುದ್ಧ ಏಸೂ ಇವರಲ್ಲಿ ಶ್ರೇಷ್ಠರಾರೆಂದು ಹೇಳುವುದು ಕಠಿಣ. ಎಲ್ಲರ ಕಾರ್ಯ ಬೇರೆ ಬೇರೆ ಪ್ರಸಂಗ ಬೇರೆ ಬೇರೆ. ಸಮಯ ಬೇರೆ ಬೇರೆ. ಚಾರಿತ್ರ್ಯದ ವಿಚಾರವನ್ನಷ್ಟೇ ಮಾಡಿದರೆ ಒಂದು ವೇಳೆ ಬುದ್ಧನ ಯೋಗ್ಯತೆಯೇ ಹೆಚ್ಚಿನದಾದೀತು. ಈಶ್ವರನು ಇಲ್ಲವೆನ್ನುವವನು ಅಡವಿ ಸೇರಬೇಕಾಗುತ್ತದೆ ... ....ಯಾವ ಧರ್ಮದಲ್ಲಿ ದಯೆಗೆ ಹೆಚ್ಚು ಅವಕಾಶವಿರುವುದೋ ಅದೇ ಶ್ರೇಷ್ಠ ಧರ್ಮವೆಂದು ತಿಳಿಯಬೇಕು. ದಯಧರಮಕಾಮೂಲಹೈ

ಮನುಷ್ಯರಿದ್ದಷ್ಟೇ ಧರ್ಮಗಳುಂಟು. ಮನುಷ್ಯರು ಭಿನ್ನ ಭಿನ್ನ

ಪ್ರಕೃತಿಗಳವರಾಗಿರುವವರೆಗೆ ಧರ್ಮಗಳೂ ಬೇರೆ ಬೇರೆ ಇರತಕ್ಕವೇ. ಯಾವ ಮನುಷ್ಯನು ತನ್ನ ಆತ್ಮವು ಹೆರವರ ಆತ್ಮಕ್ಕೆ ಏಕರೂಪವೆಂದು ತಿಳಿಯುವನೋ ಅವನಿಗೆ ಧರ್ಮಗಳಲ್ಲಿಯೂ ಐಕ್ಯವೇ ಕಂಡುಬಂದೀತು.

## ತುಪ್ಪವೂ ಮಾಂಸಾಹಾರವೂ

ಪವಿತ್ರ ತೀರ್ಥಸ್ಥಳಗಳಲ್ಲಿ ಎಣ್ಣೆಯು ತ್ಯಾಜ್ಯವೆಂದೂ ತುಪ್ಪವೇ ಪವಿತ್ರವೆಂದೂ ಯಾಕೆ ತಿಳಯುತ್ತಾರೆಯೋ ನನಗೆ ತಿಳಿಯದಾಗಿದೆ. ಇದರ ಕಾರಣ ಹೀಗಿರಬಹುದು; ಹಿಂದುಸ್ಥಾನವು ಪೂರ್ವದಲ್ಲಿ ಮಾಂಸಾಹಾರಿಯಾಗಿತ್ತು. ಪ್ರಥಮತಃ ಅನೇಕರನ್ನು ಸಸ್ಯಹಾರಿಯಾಗಿ ಮಾಡಿದವರು, ತುಪ್ಪವಸ್ತುವೆಂದು ನಿರ್ಣಯಿಸಿದರು. ಅಂದಿನಿಂದ ನಾವು ನಮ್ಮ ಅನ್ನ ಪಾನಾದಿಗಳಲ್ಲಿ ಅತ್ಯಂತ ಅಮರ್ಯಾದೆಯಿಂದ ತುಪ್ಪದ ಉಪಯೋಗ ಮಾಡುತ್ತಿದ್ದೇವೆ. ತುಪ್ಪ ಹೆಚ್ಚಾದಷ್ಟು ಅಡಿಗೆ ಹೆಚ್ಚು ಉತ್ತಮವೆಂದು ತಿಳಿಯುವುದಕ್ಕಿಂತ ಹೆಚ್ಚು ಹುಚ್ಚು ಮತ್ತಾವದಲ್ಲಿತು. ಅದರೆ ಅದೇ ಎಲ್ಲರಿಗೂ ಸಮ್ಮತವಾಗಿದೆ. ಆದುದರಿಂದ ಪವಿತ್ರಸ್ಥಳಗಳಲ್ಲಿ ಸಹ ತುಪ್ಪಕ್ಕೆ ಉಚ್ಚಪದ ಪ್ರಾಪ್ತವಾಗಿದೆ. ಈ ಸುಧಾರಣೆಯನ್ನು ಮೊಟ್ಟಮೊದಲು ಪ್ರಚಾರಕ್ಕೆ ತಂದವರು ತಿಳಿದದ್ದೇನೆಂದರೆ ಜನರು ಬಹಳ ತುಪ್ಪ ತಿನ್ನಹತ್ತಿದರೆ ಮಾಂಸಾಹಾರದ ಆವಶ್ಯಕತೆಯೇ ಉಳಿಯುವುದಿಲ್ಲವೆಂದು. ಇಂಗ್ಲೆಂಡಿನಲ್ಲಿ ಮಾಂಸಾಹಾರಿಗಳು ಇದೇ ಬುದ್ಧಿಯಿಂದ ಮೊಟ್ಟೆಗಳನ್ನು ಉಪಯೋಗಿಸುತ್ತಾರೆ.

ಸ್ವಾಹ ಜಯದಮೇಲೆ ವಿಶೇಷ ಮಹತ್ವ ಕೊಡಬೇಕಾಗಿತ್ತು. ಅದನ್ನು ಕೊಟ್ಟದ್ದರೆ ಕೃಷ್ಣಮಂದಿರದಲ್ಲಿ ನಾನಾ ಹೆಸರುಗಳಿಂದ ನಡೆಯುತ್ತಿರುವ ಮೃಷ್ಟಾನ್ನ ಭೋಜನ ನಡೆಯುತ್ತಿರಲಿಲ್ಲ. ಪ್ರತಿ ಹಬ್ಬ ತಿಥಿಗಳಲ್ಲಿಯೂ ತುಪ್ಪ ಬೆಲ್ಲ ಮುಂತಾದುವನ್ನು ಕೊಡುವ ಆವಶ್ಯಕತೆಯುಂಟಾಗುತ್ತಿರಲಿಲ್ಲ. ಈಗಿನ ಕಾಲದಲ್ಲಿ ಋಷಿಗಳೂ ಸಾಧುಗಳೂ ಸ್ವಾದೇಂದ್ರಿಯವನ್ನು ಗೆಲ್ಲುವ ಬದಲು, ಸ್ವಾದೇಂದ್ರಿಯವು ಅವರನ್ನೇ ಗೆದ್ದಿರುವುದು ಕಾಣುತ್ತದೆ. ಕುಚೇಷ್ಟೆ ಮಾಡುವ ದೃಷ್ಟಿಯಿಂದ ನಾವು ಹೀಗೆ ಹೇಳಿದರೆ ಪಾಪ. ಆದರೆ ಎಲ್ಲಿ ಇತರರ ಮತ್ತು ನಮ್ಮ ಕಲ್ಯಾಣವಿರುವುದೋ ಅಲ್ಲಿ, ಮನುಷ್ಯರು ಎಷ್ಟೇ ದೊಡ್ಡವರಾದರೂ ಅವರಲ್ಲಿರುವ

ಕುಂದನ್ನು ನಾವು ವಿಚಾರ ಮಾಡಲೇಬೇಕು.

* * * *

ನೀವು ಉಚ್ಚದರ್ಜೆಯ ಬ್ರಹ್ಮಚಾರಿಗಳಾಗಬೇಕು. ನಿಮ್ಮ ವರ್ತನದ ಪರಿಣಾಮ, ನಿಮ್ಮ ಸಂಚುಮದಿಂದ ಇತರರ ಮೇಲೆ ಸಹಜವಾಗಿಯೇ ಆಗಬೇಕು. ನಮ್ಮಲ್ಲಿ ಉದ್ಯೋಗ ವೃತ್ತಿ ಅಭ್ಯಾಸ ಮತ್ತು ಶುದ್ಧಸ್ವಭಾವ ತಾನಾಗಿಯೇ ಬೆಳೆಯುಬೇಕು. ಇತರರ ಮೇಲೆ ಪರಿಣಾಮವಾಗಬೇಕೆಂದು ಬುದ್ಧಿಪೂರ್ವಕವಾಗಿ ಪ್ರಯತ್ನಿಸಬಾರದು.

೪

ಗಾಂಧಿಯವರ ಸೇವಾದೀಕ್ಷೆ ಕ್ರಮೇಣ ಮನುಷ್ಯ ಪ್ರಪಂಚವನ್ನೆಲ್ಲಾ ಒಳಪಡಿಸಿಕೊಂಡಿತು. ಅದು ಪರಮಾತ್ಮನ ಅನ್ವೇಷಣೆಯೇ ಆಯಿತು. ಅದೇ ಅಹಿಂಸಾ ಮಾರ್ಗದ ಮೂಲಕ ಸತ್ಯದ ಶೋಧನೆಯಾಯಿತು. ಸತ್ಯವೇ ದೇವರು; ದೇವರೇ ಸತ್ಯ. ಸತ್ಯಕ್ಕಿಂತ ಹೆಚ್ಚಾದ ಜಗತ್ತಿನ ಮೂಲಶಕ್ತಿ ಯಾವುದೂ ಇಲ್ಲ. ಗಾಂಧಿಯವರ ಅಭಿಪ್ರಾಯದಲ್ಲಿ ಸತ್ಯವೆಂದರೆ ಬರಿಯ ಸುಳ್ಳು ಹೇಳದಿರುವುದೆಂಬ ವಾಚಾ ಸತ್ಯವಲ್ಲ. ಪರಮಾತ್ಮನ ಅನ್ವೇಷಣಕ್ಕೆ ಸಾಧಾರಣವಾದ ಮಾರ್ಗವೂ ನಮ್ಮ ಎಲ್ಲಾ ಆಚರಣೆಯೂ ಸತ್ಯವಾಗಿರಬೇಕು.

ಅಹಿಂಸಾ ಸತ್ಯಂ ಅಸ್ತೇಯಂ ಬ್ರಹ್ಮಚರ್ಯಂ ಅಸಂಗ್ರಹಃ
ಶರೀರ ಶ್ರಮ ಅಸ್ವಾದ ಸರ್ವತ್ರ ಭಯವರ್ಜನಂ
ಸರ್ವಧರ್ಮ ಸಮಾನತ್ವಾ ಸ್ವದೇಶೀ ಸ್ಪರ್ಶಭಾವನಾ
ಹಿ ಏಕಾದಶ ಸೇವಾವಿ ನಮ್ರತ್ವೇ ವ್ರತನಿಶ್ಚಯೇ.

ನಮ್ರನಾಗಿ ಈ ಹನ್ನೊಂದು ವ್ರತಗಳನ್ನು ಪಾಲನೆಮಾಡುವುದೂ ಅನಂತರ ಹೊಂದುವ ಗುರಿಯೂ ಸತ್ಯ. ಗಾಂಧಿಯವರಿಗೆ ಗುರಿಯೂ ಸಾಧನೆಯೂ ಎರಡೂ ಪರಿಶುದ್ಧವಾಗಿರಬೇಕು. ಸಾಧನೆಯ ಮಾರ್ಗ ಹೇಗಿದ್ದರೂ ಚಿಂತೆಯಿಲ್ಲ; ಗುರಿ ಮಾತ್ರ ಸಿದ್ಧಿಸಿದರೆ ಸಾಕೆಂಬ ಭೌತವಾದಿಗಳ ಮತವನ್ನು ಗಾಂಧಿಯವರು ಒಪ್ಪುವುದಿಲ್ಲ. ಅಪೇಕ್ಷಿತ ಫಲವನ್ನು ನೀನು ಮುಟ್ಟದಿದ್ದರೂ ನಿನ್ನ ಸಾಧನೆ ಶುದ್ಧವಾಗಿರಬೇಕೆಂಬುದು ಅವರ ಬೋಧನೆ. ತಮ್ಮ ಬೋಧನೆಯನ್ನು ತಾವು ಮೊದಲು

ಅನುಷ್ಠಿಸಿ ತೋರಿಸಿ ಅನಂತರ ಗಾಂಧಿಯವರು ಇತರರಿಗೆ ಹೇಳುತ್ತಿದ್ದರು, ತನಗೆ ಉಂಟಾದ ಸ್ವಂತ ಕಷ್ಟ ನಷ್ಟಗಳಿಗಾಗಿ ನ್ಯಾಯಸ್ಥಾನಕ್ಕೆ ಹೋಗುವುದಿಲ್ಲವೆಂದು ಗಾಂಧಿಯವರು ತೀರ್ಮಾನಿಸಿದ ಕಾಲದಲ್ಲಿ ದಕ್ಷಿಣ ಆಫ್ರಿಕದಲ್ಲಿ ಅವರಿಗೆ ಕೆಲವರಿಂದ ಹಣಗಳು ಬರಬೇಕಾಗಿದ್ದವು. ಅವರ ಜತೆಯಲ್ಲಿ ಕೆಲಸಮಾಡುತ್ತಿದ್ದ ಮಿ|| ಪೋಲಕ್‌ರು ಅವರಿಗೆ 'ಲಾಯರ್ ನೋಟೀಸು' ಕೊಟ್ಟು ಆ ಹಣಗಳನ್ನು ವಸೂಲು ಮಾಡಬೇಕೆಂದರು. ಗಾಂಧಿಯವರು ಒಪ್ಪಲಿಲ್ಲ. ಮೊದಲು ಕೊಟ್ಟದ್ದು ನಮ್ಮ ತಪ್ಪು. ಅವರಿಗೆ ಹಿಂದಿರುಗಿಸಲು ಸಾಧ್ಯವಿಲ್ಲದುದರಿಂದಲೇ ತಿರುಗಿಸಿಲ್ಲ. ಸಾಧ್ಯವಾದಾಗ ಕೊಡುತ್ತಾರೆ ಎಂದರು ಇನ್ನು ಅಸ್ತೇಯ ಅಂದರೆ ಕದಿಯದಿರುವ ವ್ರತ ಗಾಂಧಿಯವರಲ್ಲಿ ಶಿಖರವನ್ನು ಮುಟ್ಟದೆ. ಬೇಕಾದುದಕ್ಕಿಂತ ಹೆಚ್ಚಾಗಿ ಊಟಮಾಡುವುದೂ, ಹೆಚ್ಚು ಪದಾರ್ಥಗಳನ್ನಿಟ್ಟುಕೊಳ್ಳುವುದೂ, ಸೇವೆಗಲ್ಲದೆ ತನ್ನ ಸ್ವಂತ ಸುಖ ಆನಂದಗಳಿಗಾಗಿ ಹೆಚ್ಚು ಕಾಲ ಕಳೆಯುವುದೂ ಕೊನೆಗೆ ಅನವಶ್ಯಕವಾದ ಜ್ಞಾನವನ್ನು ತಲೆಯಲ್ಲಿ ತುಂಬಿಕೊಳ್ಳುವುದೂ ಬೇಡವಾದುದನ್ನು ವ್ಯಾಸಂಗ ಮಾಡುವುದೂ ಎಲ್ಲವೂ ಅವರ ದೃಷ್ಟಿಯಲ್ಲಿ ಕಳವು. ಗಾಂಧಿಯವರಲ್ಲಿ ಅವರದು ಎಂಬ ಪದಾರ್ಥ ಯಾವುದೂ ಇರಲಿಲ್ಲ. ಹಿಂದೆ ನ್ಯಾಷನಲ್ ಹೆರಾಲ್ಡ್ ಪತ್ರಿಕೆಯಲ್ಲಿ ಶ್ರೀರಾಮರಾಯರು ಗಾಂಧಿಯವರಲ್ಲಿ ಇರುವುದೇ ಐದು ಬಟ್ಟೆಗಳು ಎಂದು ಬರೆದಿದ್ದರು. ಈ ಬಡದೇಶದಲ್ಲಿ ಒಳ್ಳೆಯ ಸಿಮೆಂಟುಗಾರೆಯ ಮನೆಯಲ್ಲಿರುವುದು ಸಹ ಬಡವರ ಪ್ರತಿನಿಧಿಗೆ ಅನರ್ಹವೆಂದು ಗಾಂಧಿಯವರು ಸೇವಾಗ್ರಾಮದಲ್ಲಿ ಬಿದಿರಿನ ಗುಡಿಸಲಿನಲ್ಲಿದ್ದರು. ಒಂದು ಸಲ ಬಿದಿರಿನ ಬೊಡ್ಡೆಗಳಿಗೆ ಗೆದ್ದಲು ಹತ್ತಿದುದರಿಂದ ಗುಡಿಸಲು ಪೂರ್ತ ಮುಗಿಚಿಕೊಂಡಿತು. ಸಬರಮತಿಯ ಆಶ್ರಮದಲ್ಲಿ "ಬಿಸಿಲು ನುಗ್ಗುತ್ತಿದ್ದ ಒಂದು ಕಂಡಿಗೆ ಮರೆ ಮಾಡಿ" ಎಂದು ಗಾಂಧಿಯವರು ತಮ್ಮ ಶಿಷ್ಯರೊಬ್ಬರಿಗೆ ಹೇಳಿದಾಗ ಆತ ಬಡಗಿಯನ್ನು ಕರೆದುಕೊಂಡು ಬಂದು ಎರಡು ರೂಪಾಯಿನ ಕೆಲಸ ಮಾಡಿಸಿದ. ಅಷ್ಟು ರೂಪಾಯಿ ವೆಚ್ಚ ಮಾಡಿದುದು ಹೆಚ್ಚು ಎಂದು ಗಾಂಧಿಯವರು ಮೂರು ದಿನ ಕೊರಗಿ ಪ್ರಾರ್ಥನೆಯಲ್ಲಿ ತಮ್ಮ ತಪ್ಪನ್ನು ತಾವು

ಒಪ್ಪಿಕೊಂಡರು. ಎರಡನೆಯ ದುಂಡು ಮೇಜಿನ ಪರಿಷತ್ತಿಗೆ ಗಾಂಧಿಯವರು ಮೂರನೆಯ ತರಗತಿಯಲ್ಲಿ ಹೋಗುವುದಕ್ಕೂ ಈ ಅಸ್ತೇಯ ವ್ರತವೇ ಮುಖ್ಯ ಕಾರಣ. ದುಂಡುಮೇಜಿನ ಪರಿಷತ್ತಿಗೆ ಹೋಗುವಾಗ ಶ್ರೀಮತಿ ಸರೋಜಿನಿ ನಾಯ್ಡು, ಪಂಡಿತ ಮದನಮೋಹನ ಮಾಳವ್ಯ, ಮಹದೇವ ದೇಸಾಯಿ ಮುಂತಾದವರು ಇಂಗ್ಲೆಂಡಿನಲ್ಲಿ ಕೈಯ್ಯಲ್ಲಿ ಹಿಡಿದುಕೊಂಡು ಹೋಗಲು ಅರ್ಹವಾದ ಅಂದವಾದ ಚಕ್ಕಳದ ಚೀಲಗಳನ್ನು ಇಟ್ಟುಕೊಂಡಿದ್ದರು. ಗಾಂಧಿಯವರು ಅದನ್ನು ನೋಡಿ "ಇದು ಇಂಗ್ಲೆಂಡ್ ಅಮೆರಿಕಗಳ ರಾಯಭಾರಿಗಳಿಗೆ (Diplomats) ಅರ್ಹವಾದುದು. ದಿನಕ್ಕೆ ಎರಡಾಣೆ ಸಂಪಾದಿಸುವ ಬಡ ರೈತನ ಪ್ರತಿನಿಧಿಯಾಗಿ ಹೋಗುವ ನನ್ನ ಜತೆಯವರಿಗಲ್ಲ" ಎಂದು ಹೇಳಿ ದೊಡ್ಡ ದೊಡ್ಡ "ಸೂಟ್ ಕೇಸ್" ಗಳು ಉಣ್ಣೆ ಕಂಬಳಿಗಳನ್ನೆಲ್ಲಾ ಏಡನ್ನಿನಿಂದ ಹಿಂದಕ್ಕೆ ಕಳುಹಿಸಿದರು. "ಈ ಸರ್ಕಾರ ತಲೆಭಾರವಾದುದು. ಸಂಬಳಗಳು ರೈತನ ಉತ್ಪತ್ತಿಯ ಹತ್ತು ಸಾವಿರದಷ್ಟು ಎನ್ನುತ್ತೇವೆ. ಅದನ್ನು ಬದಲಾಯಿಸಲು ಹೋಗುತ್ತಿರುವ ನಾನು, ಬಡವರ ಪ್ರತಿನಿಧಿಯಾಗದಿದ್ದರೆ ನಮ್ಮ ಹೋರಾಟ ಜಯಿಸದು" ಎಂದು ಭಾವಪೂರಿತರಾಗಿ ನುಡಿದರು. ಗಾಂಧಿಯವರು ಇಂಗ್ಲೆಂಡಿನಲ್ಲಿ ಹೋಗಿ ಕೂಲಿಕಾರರ ವಸತಿಯಲ್ಲಿ ಉಳಿದುದೂ, ಅವರು ಜಗತ್ತಿನ ಬಡವರ ಬಂಧು ಎಂಬುದಕ್ಕೆ ನಿದರ್ಶನ.

ಈ ಅಸ್ತೇಯವ್ರತ, ಗಾಂಧಿಯವರ ವ್ಯಕ್ತಿಜೀವನದಲ್ಲಿ ಒಂದೆರಡು ಸಲ ದೊಡ್ಡ ಬಿರುಗಾಳಿಯನ್ನು ಎಬ್ಬಿಸಿತು. ಆಶ್ರಮದ ನಿಯಮಗಳಲ್ಲಿ ಯಾರೂ ಯಾವ ಬೆಲೆಯಾದ ಪದಾರ್ಥಗಳನ್ನೂ ಇಟ್ಟುಕೊಳ್ಳಕೂಡದೆಂಬುದು ಒಂದಾಗಿತ್ತು. ತನಗೆ ಕಾಣಿಕೆಯಾಗಿ ಬಂದ ಪದಾರ್ಥವೆಂದು ಕಸ್ತೂರಿ ಬಾ ರವರು ಒಂದು ಬೆಲೆಯಾದುದನ್ನು ಇಟ್ಟುಕೊಂಡಿದ್ದರು. ಅದು ತಮಗೆ ತಿಳಿದ ಕೂಡಲೇ, ಗಾಂಧಿಯವರು ಹೆಂಡತಿಗೆ "ನೀನು ಆಶ್ರಮದ ನಿಯಮಕ್ಕೆ ವಿರೋಧವಾಗಿ ನಡೆದೆ, ಹೊರಡು" ಎಂದರು. ಬಾ ರವರು ಯಾವ ಸಮಜಾಯಿಷಿ ಹೇಳಿದರೂ ಗಾಂಧಿ ಒಪ್ಪಲೇ ಇಲ್ಲ. ಕೊನೆಗೆ ಗಾಂಧಿಯವರು ಆಶ್ರಮವಾಸಿಗಳ ಎದುರಿಗೆ

ಆಕೆಯನ್ನು ವಿಚಾರಣೆಗೆ ನಿಲ್ಲಿಸಿದರು. ಕಣ್ಣೀರು ಸುರಿಸುತ್ತ ನಿಂತಿದ್ದ ಆ ಸಾಧ್ವಿಯ ವಿಚಾರಣೆ, ಆಕೆಯ ಮಕ್ಕಳಂತಿದ್ದ ಆಶ್ರಮವಾಸಿಗಳಿಂದ ಆಯಿತು. ಈ ಸಂಗತಿಯನ್ನು ವಿಮರ್ಶಿಸುತ್ತಾ ಮೌಲಾನಾ ಅಬುಲ್ ಕಲಾಂ ಆಜಾದರು " ಅಂದು ನಾನು ಗಾಂಧಿಯಿಂದ ಆಕರ್ಷಿತನಾದೆ. ಯಾವ ಮನುಷ್ಯ ಸತ್ಯಾನ್ವೇಷಣೆಯಲ್ಲಿ ತನ್ನ ಅತ್ಯಂತ ಆಪ್ತರಾದವರಿಗೆ ಸಹ ರಿಯಾಯ್ತಿ ಕೊಡುವುದಿಲ್ಲವೋ, ಅಂತಹವನು ನಿಜವಾಗಿಯೂ ದೇವತೆಗಳಿಗೆ ಪ್ರಿಯನಾದವನು '' ಎಂದಿದ್ದಾರೆ. ಅಸ್ತೇಯ ವ್ರತದವನಲ್ಲಿ ಯಾವುದೂ ಸಂಗ್ರಹವಾಗುವಂತೆಯೇ ಇಲ್ಲ.

ಗಾಂಧಿಯವರು ವಿವಾಹವು ಪವಿತ್ರ ಬಂಧನವೆಂದು ಪದೇ ಪದೇ ಹೇಳಿದ್ದಾರೆ. ಸಂತಾನೋತ್ಪತ್ತಿಗಾಗಿ ಮಾತ್ರವೇ ಗಂಡಹೆಂಡಿರು ಒಂದುಗೂಡಬೇಕು. " ವಿವಾಹ ಬಂಧನ ದೈಹಿಕವಾದರೂ, ಅದು ಆತ್ಮಗಳ ಬಂಧನವೇ. ವಿವಾಹದಿಂದ ಆವಿರ್ಭವಿಸುವ ಪ್ರೇಮದಿಂದ, ಪರಮಾತ್ಮನ ಮತ್ತು ವಿಶ್ವದ ಪ್ರೇಮಕ್ಕೆ ಹೆಜ್ಜೆ ಇಡಬೇಕು." ಗಾಂಧಿಯವರು ಬ್ರಹ್ಮಚರ್ಯದ ಪ್ರಯೋಗ ಇನ್ನೂ ನಡೆಸುತ್ತಲೇ ಇದ್ದರು. ಅದರಲ್ಲಿ ಅವರೂ ಕೊನೆಯ ಮಾತನ್ನು ಹೇಳಿ ಮುಗಿಸಲಿಲ್ಲ ಅವರೇ ಹೇಳುವಂತೆ ತಮ್ಮ ನಲವತ್ತನೆ ವಯಸ್ಸಿನಿಂದಲೇ ಅವರು ದೇಹದಿಂದಂತೂ ಬ್ರಹ್ಮಚರ್ಯ ಪಾಲಿಸಿದ್ದಾರೆ. " ನಾನು ನನ್ನ ಹೆಂಡತಿಯನ್ನು ನನ್ನ ಸ್ವಾಮಿತ್ವದಿಂದ ಬಿಡುಗಡೆಮಾಡಿದೆ. ನಾನು ಮನ್ಮಥನ ಗುಲಾಮನಾಗಿದ್ದುದು ಅಲ್ಲಿಗೆ ಕೊನೆಯಾಯಿತು.'' ಗಾಂಧಿಯವರ ದೃಷ್ಟಿಯಲ್ಲಿ ಬ್ರಹ್ಮಚರ್ಯ ಬರಿಯ ಇಂದ್ರಿಯ ದಮನ ಮಾತ್ರವಲ್ಲ. ಕಾಯಾ ವಾಚಾ ಮನಸಾ ಶುದ್ಧನಾಗಿರುವುದು. ಈ ಧ್ಯೇಯ ಸಾಧ್ಯವೆಂದು ಗಾಂಧಿಯವರು ಹೇಳುತ್ತಿದ್ದರು. " ಹೆಣ್ಣು ಗಂಡಿಗೆ ಇರುವ ಆಕರ್ಷಣೆ ಅಣ್ಣ ತಂಗಿ, ತಾಯಿ ಮಗ, ತಂದೆ ಮಗಳು ಇದೇಯೆ. ಜಗತ್ತು ಉಳಿದಿರುವುದು ಈ ಆಕರ್ಷಣೆಯಿಂದಲೇ. ಸ್ತ್ರೀಜಾತಿಯನ್ನೆಲ್ಲಾ ತಾಯಿ ತಂಗಿ ಮಗಳೆಂದು ಭಾವಿಸದಿದ್ದರೆ ನಾನು ಬದುಕುವುದೂ ಕೆಲಸ ಮಾಡುವುದೂ ಕಷ್ಟವಾಗುತ್ತದೆ."

ಪ್ರತಿಯೊಬ್ಬ ಮನುಷ್ಯನೂ ದೇಹಶ್ರಮದಿಂದ ಊಟಮಾಡ

ಬೇಕೆಂಬುದು ಒಂದು ವ್ರತ. ಗಾಂಧಿಯವರು "ಎಲ್ಲರೂ ನೂಲಿ" ಎಂದು ಹೇಳಿದುದರಲ್ಲಿ ಈ "ಕಾಯಕ" ಅಡಕವಾಗಿದ್ದಿತು. ಹಿಂದೆ ಮದರಾಸಿನ ಮುಖ್ಯ ಮಂತ್ರಿ ಶ್ರೀ ರಾಜಗೊಪಾಲಾಚಾರ್ಯರು, ತಮ್ಮ ಪಂಚೆಗಳನ್ನು ತಾವೇ ಒಗೆದು ಕೊಳ್ಳುತ್ತಾರೆ ಎಂದು ಗಾಂಧಿಯುವರಿಗೆ ತಿಳಿದಾಗ, ಅವರು "ಅದು ಬಹು ಒಳ್ಳೆಯದೆಂದರು. ತನ್ನ ಆಹಾರಕ್ಕಾಗಿ ತಾನು ಕೆಲಸ ಮಾಡದೆ ಇರುವವನು" ಕಳ್ಳನೇ ಹೊರತು ಬೇರೆ ಇಲ್ಲ. ಇನ್ನು ಅಸ್ವಾದ ಎಂದರೆ ನಾಲಿಗೆಯ ರುಚಿಯನ್ನು ಜಯಿಸಬೇಕೆಂಬುದು. ಅದ ರಲ್ಲಿಯೂ ಗಾಂಧಿಯವರು ತೇರ್ಗಡೆ ಹೊಂದಿದ್ದರು. ಅವರು ಆಹಾರದಲ್ಲಿ ನಾನಾಬಗೆಯ ಪ್ರಯೋಗಗಳನ್ನು ಕೊನೆಯುವರೆಗೆ ಮಾಡುತ್ತಲೇ ಇದ್ದರು. ಹಾಲನ್ನು ಬಿಟ್ಟರು, ತುಪ್ಪವನ್ನು ಬಿಟ್ಟರು, ಉಪ್ಪನ್ನು ಬಿಟ್ಟರು, ಖಾರವನ್ನು ಬಿಟ್ಟರು, ಉಪ್ಪು ಸೇರಿ ಐದು ಪದಾರ್ಥ ಆದರ ಹೊರತು ಮತ್ತೇನನ್ನೂ ಮುಟ್ಟುತ್ತಿರಲಿಲ್ಲ. ಕಾಯಿಲೆಯಾದ ದಿನ ಔಷಧಿಯೂ ಆ ಐದರಲ್ಲಿ ಸೇರಬೇಕಾಗಿದ್ದಿತು.

ಪ್ರಬಲರೊಂದಿಗೆ ಹೊರಾಡುವಾಗ ಹೇಡಿಗಳಾದರೆ ಜಯವೆಲ್ಲಿ? ಆದುದರಿಂದ ಅಭಯ ಒಂದು ವ್ರತವಾಯಿತು. ದಕ್ಷಿಣ ಆಫ್ರಿಕದಲ್ಲಿ ಗಾಂಧಿ, ಸರ್ಕಾರದ ಕಡೆ ಸೇರಿಕೊಂಡರೆಂದು ಒಬ್ಬ ಪಠಾಣ ಅವರನ್ನು ತಿವಿಯಲು ಚೂರಿಯೊಂದಿಗೆ ಕಾಯುತಿದ್ದ. ಗಾಂಧಿ ಧೈರ್ಯವಾಗಿ ಅವನ ಎದುರಿಗೆ ಹೋದರು. ಬ್ರಿಟಿಷರಂತಹ ಪ್ರಬಲರನ್ನು ಎದರಿಸುವವನಿಗೆ ಭಯವಿದ್ದರೆ ಆ ಚಳುವಳಿಯೇ ನಾಶವಾಗುತ್ತದೆ. 'ಭಯಪರಿಣಾಮವಾದ ಅಹಿಂಸೆಗಿಂತ ಹಿಂಸೆಯೇ ಲೇಸು' ಎಂದು ಗಾಂಧೀ ಹೇಳಿದ್ದಾರೆ. ಅಹಿಂಸೆಯ ಹೆಸರಿನಲ್ಲಿ ಸ್ತ್ರೀಯರ ಮಾನಭಂಗ ವಾಗುತ್ತಿದ್ದರೂ ದೀನರ ಹಿಂಸೆಯಾಗುತ್ತಿದ್ದರೂ ಹೇಡಿಗಳು ಸುಮ್ಮ ನಿರುವುದನ್ನು ಗಾಂಧಿ ಸಹಿಸುವುದಿಲ್ಲ. "ಅಹಿಂಸೆಯಿಂದ ಎದರಿಸಿ, ಇಲ್ಲವಾದರೆ ಹಿಂಸೆಯಿಂದ ಎದರಿಸಿ ಪ್ರಾಣಕೊಡಿ. ಅಂತೂ ಅತ್ಯಾಚಾರ ವನ್ನು ನೋಡುವುದಕ್ಕೆ ಬದುಕಿರಬೇಡಿ" ಭಾರತರಾಷ್ಟ್ರ ಗಾಂಧೀ ಯವರ ನೇತೃತ್ವದಲ್ಲಿ ಹೊಂದಿದಷ್ಟು ಧೈರ್ಯವನ್ನು ಯಾವಾಗಲೂ ಹೊಂದಲಿಲ್ಲ. ಸೆರೆಮನೆವಾಸ ಆಟವಾಯಿತು. "ನಹಿ ಡರೇಂಗೆ;

ಗಲ್ ಘಾಸಿಸೆ ನಹಿ ಡರೇಂಗೆ" ಎಂಬುದು ವ್ರತವಾಯಿತು. ಬ್ರಿಟಿಷ್ ಸಿಂಹ ಬೆಪ್ಪಾಯಿತು. "ಬ್ರಿಟಿಷ್ ಸಿಂಹದ ಕೇಸರವನ್ನು ಹಿಡಿದು ಜಗ್ಗುತ್ತೇವೆ" ಎಂಬ ಅರ್ಥಕ್ಕೆ ಗಾಂಧಿಯವರು ಒಂದು ಲೇಖನ ಸಹ ಬರೆದರು. ಶಾಲೆ ವಿಧ್ಯಾರ್ಥಿಗಳಿಗೂ ಸ್ತ್ರೀಯರಿಗೂ, ಕೂಲಿಗಾರರಿಗೂ, ಹಳ್ಳಿಯವರಿಗೂ ಆ ಧೈರ್ಯ ಹಿಂದೆಂದೂ ಇರಲಿಲ್ಲ. "ಕರೇಂಗೆ ಯಾ ಮರೇಂಗೆ—ಮಾಡು ಅಥವ ಮಡಿ" ಎಂಬುದು ಭಾರತದ ನಲವತ್ತು ಕೋಟಿ ಜನರ ಮಂತ್ರವಾಯಿತು.

ಸಮಾಜದಲ್ಲಿ ಸ್ತ್ರೀಯರ ಸ್ಥಾನವನ್ನು ಉತ್ತಮಗೊಳಿಸಲು ಗಾಂಧಿಯವರಷ್ಟು ಮತ್ತಾರೂ ದುಡಿದಿಲ್ಲ. ಸ್ತ್ರೀಯರಿಗೆ ಆಗಿರುವ ಅನ್ಯಾಯವನ್ನು ಗಾಂಧಿ ಖಂಡಿಸಿದ್ದಾರೆ. "ಸ್ತ್ರೀಗೆ ಪುರುಷನಷ್ಟೇ ಬುದ್ಧಿ ವಿವೇಕ ಇದೆ. ಅವಳು ಪುರುಷನಿಗೆ ಸಮಾನಳು" ಎಂದು ಗಾಂಧಿ ಹೇಳುತ್ತಾರೆ. ಬಾಲ್ಯವಿವಾಹ, ಬಾಲವಿಧವೆಯರು, ಸ್ತ್ರೀಯರನ್ನು ಬರಿಯ ಭೋಗವಸ್ತುವಾಗಿ ಪರಿಗಣಿಸುವುದು ಇವೆಲ್ಲವನ್ನೂ ಗಾಂಧಿ ವಿರೋಧಿಸಿದ್ದಾರೆ. ಸ್ತ್ರೀಯು ಪುರುಷನಿಗಿಂತ ಕಡಿಮೆ ಎಂಬುದನ್ನು ಅವರು ಎಂದಿಗೂ ಒಪ್ಪುವುದಿಲ್ಲ. ಗಾಂಧಿಯವರು ಸ್ತ್ರೀಯರಿಗೆ ಸಹ ಸತ್ಯಾಗ್ರಹದ ಮಾರ್ಗವನ್ನು ತೋರಿಸಿದ್ದಾರೆ. ಆ ಅಸ್ತ್ರದಿಂದ ಅವರು ಗಂಡಸರನ್ನು ಸುಲಭವಾಗಿ ಪಳಗಿಸಬಹುದು. "ಸ್ತ್ರೀಗೆ ತನ್ನ ಶಕ್ತಿ ಗೊತ್ತಿಲ್ಲ. ತನ್ನಲ್ಲಿರುವ ನೀತಿಬಲವನ್ನು ಅವಳು ಅರಿತಿಲ್ಲ. ಆದುದರಿಂದಲೇ ಅವಳು ಅಬಲೆ ಎನ್ನುತ್ತಾರೆ. ಅಹಿಂಸೆ ನಮ್ಮ ಅಸ್ತಿತ್ವದ ನಿಯಮವಾಗುವುದಾದರೆ, ಸ್ತ್ರೀಯರ ಭವಿಷ್ಯ ಉಜ್ವಲವೇ ಆಗಿದೆ. ಸ್ತ್ರೀಯು ಅಹಿಂಸೆಯ ಅವತಾರ. ಅಹಿಂಸೆ ಎಂದರೆ ಪೂರ್ಣಪ್ರೇಮ. ಸ್ತ್ರೀಯು ತನ್ನ ಪ್ರೇಮವನ್ನು ಮನುಷ್ಯ ಪ್ರಪಂಚಕ್ಕೆ ಹಂಚಲಿ. ತಾನು ಒಂದು ಗಂಡಸಿನ ಕಾಮತೃಪ್ತಿಗೆ ಎಂಬುದನ್ನು ಮರೆಯಲಿ. ಆಗ ಸ್ತ್ರೀಯು ನಿಜವಾದ ಮೌನಿಯಾದ ನಾಯಕಿಯಾಗುತ್ತಾಳೆ. ಕಾದಾಡುತ್ತಿರುವ ಜಗತ್ತಿಗೆ ಆ ಶಾಂತಿಯ ಅಮೃತವನ್ನು ಬೀರುವುದು ಅವಳ ಕರ್ತವ್ಯ. ಸತ್ಯಾಗ್ರಹ ಸಮರಗಳಲ್ಲೆಲ್ಲಾ ಆಕೆಯೇ ನಾಯಕಿಯಾಗುತ್ತಾಳೆ. ಆ ನಾಯಕತ್ವಕ್ಕೆ ಪುಸ್ತಕಜ್ಞಾನ ಅವಶ್ಯಕ

ವಿಲ್ಲ. ಕಷ್ಟಸಹನೆ, ತ್ಯಾಗದಿಂದ ಉಂಟಾಗುವ ದೃಢನಿಶ್ಚಯ, ಮುಖ್ಯ. "ಗಾಂಧಿಯವರ ಚಳುವಳಿಗಳಿಂದ ಭಾರತದ ಸ್ತ್ರೀಯರು ಅದ್ಭುತ ಧೈರ್ಯವನ್ನು ಸಂಪಾದಿಸಿದ್ದಾರೆ. ಹಿಂಸಾವಾದಿಗಳಾಗಿ ಹಿಂಸೆಯ ಕೃತ್ಯಗಳನ್ನೆಸಗಿ ಕಾನೂನಿನಿಂದ ತಪ್ಪಿಸಿಕೊಂಡು ಕುಳಿತಿದ್ದ ಕ್ರಾಂತಿಕಾರರೆಲ್ಲ ಗಾಂಧಿಯವರ ಭೋಧನೆಯಂತೆ ಹೊಸ ಧೈರ್ಯವನ್ನು ಹೊಂದಿ ತಾವೇ ತಾವಾಗಿ ಸರ್ಕಾರದ ವಶರಾದರು. ಕಡೆಯಲ್ಲಿ, ಮರಣವನ್ನು ಎದರಿಸಿ ಮರಣವೇ ತನ್ನ ಮಿತ್ರನೆನ್ನುವವರೆಗೆ ಆ ಧೈರ್ಯ ಹೋಯಿತು. ನವಖಲಿಯಲ್ಲಿ ಪಾಕೀಸ್ಥಾನಜ್ವರದಿಂದ ಹಿಂದೂಗಳನ್ನು ಒಂದು ಕಡೆಯಿಂದ ಕತ್ತರಿಸಿ, ಹಿಂದೂ ಸ್ತ್ರೀಯರ ಮಾನಭಂಗ ಮಾಡುತ್ತಿದ್ದಾಗ ಗಾಂಧಿಯವರು ಆ ಅಗ್ನಿ ಕುಂಡಕ್ಕೆ ನುಗ್ಗಿದರು. ಪ್ಯಾರಿಲಾಲ್ ಸುಶೀಲನಯ್ಯಾರ್ ಮುಂತಾದ ತಮ್ಮ ಆಪ್ತವರ್ಗದ ಒಬ್ಬೊಬ್ಬರನ್ನು ಒಂದೊಂದು ಕಡೆಗೆ ಕಳುಹಿಸಿದರು. ಹೋದ ಹೋದೆಡೆ ಮುಸಲ್ಮಾನ ಸಹೋದರರ ಮನೆಯಲ್ಲಿಯೇ ಉಳಿದರು. ಆ ಧೈರ್ಯ, ಭಗವಂತನಲ್ಲಿ ಪೂರ್ಣವಾಗಿ ನಂಬಿಕೆಯಿರುವವರಿಗೆ ಮಾತ್ರ ಉಂಟಾಗುತ್ತದೆ.

ಇನ್ನು ಅಸ್ಪೃಶ್ಯರಿಗಾಗಿ ಗಾಂಧಿಯವರು ಮಾಡಿರುವಷ್ಟು ಕಾರ್ಯವನ್ನು, ಭಾರತದ ರಾಜಕೀಯಕ್ಕೆ ಸಹ ಮಾಡಿಲ್ಲವೆನ್ನಬಹುದು. "ಅಸ್ಪೃಶ್ಯತೆ ಹಿಂದೂ ಧರ್ಮದ ಕಳಂಕ" ಪ್ರತಿಯೊಬ್ಬರೂ ಭಂಗಿಯ ಕೆಲಸವೇ ಮುಂತಾದ ಅಸ್ಪೃಶ್ಯರ ಕೆಲಸಗಳನ್ನು ಹೆಮ್ಮೆಯಿಂದಲೇ ಮಾಡಬೇಕು' ಎಂಬುದು ಗಾಂಧಿಯವರ ಭೋಧನೆ. ಈ ವ್ರತದ ಅನುಷ್ಠಾನ ಗಾಂಧಿಯವರಲ್ಲಿ ಪೂರ್ಣವಾಗಿದೆ. ಗಾಂಧಿಯವರ ಅವತಾರದಿಂದ ಅಸ್ಪೃಶ್ಯರ ಪರಿಸ್ಥಿತಿ ಪೂರ್ಣವಾಗಿ ಬದಲಾಗಿದೆ. ಅವರು ಮತ್ತೆ ಹಿಂದಲ ಅಧೋಗತಿಗೆ ಇಳಯುವಂತಿಲ್ಲ. ಅಸ್ಪೃಶ್ಯರಿಗಾಗಿ, ಅವರನ್ನು ಹಿಂದೂ ಸಮಾಜದಿಂದ ಬೇರೆ ಕತ್ತರಿಸದಿರುವುದಕ್ಕಾಗಿ ಹಿಂದೆ ಗಾಂಧಿಯವರು ಒಂದು ಉಪವಾಸವನ್ನೇ ಹೂಡಿದ್ದರು. ಈ ದೃಷ್ಟಿಯಿಂದ ಹಿಂದೂಧರ್ಮಕ್ಕೆ ಅವರಷ್ಟು ಮಹತ್ವದಸೇವೆ ಸಲ್ಲಿಸಿದವರು ಯಾರೂ ಇಲ್ಲ, ತಿರುವಾಂಕೂರಿನ ಮಹಾರಾಜರು ಹರಿಜನರಿಗೆ ದೇವಾಲಯ ಪ್ರವೇಶ ಮಾಡಿಸಿದಾಗ ಗಾಂಧಿಯವರು, ಹಿಂದು ಧರ್ಮ

ಇಷ್ಟು ದಿವಸವೂ ಮಾಡಿದ್ದ ಅನ್ಯಾಯವನ್ನು ತೊಡೆದುದರಿಂದ ಇಂದು ದೇವಾಲಯುಗಳೇ ಪವಿತ್ರವಾದುವೆಂದರು. ಹಿಂದು ಧರ್ಮ ವನ್ನು ಗಾಂಧಿಯವರಷ್ಟು ಚೆನ್ನಾಗಿ ಅರ್ಥ ಮಾಡಿಕೊಂಡ ಭಾರತೀ ಯರೇ ವಿರಳ "ಹಿಂದು ಧರ್ಮದ ತಿರುಳು ಎಲ್ಲಿದೆ ಎಂದು ನಾನು ಹುಡುಕಿದೆ. ಈ ಒಂದು ಶ್ಲೋಕದಲ್ಲಿ ಅದರ ಸಾರ ಅಡಕವಾಗಿದೆ.

" ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್
ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಮ್ "

ಎಂದಿದ್ದಾರೆ. ಗಾಂಧಿಯವರ ಜೀವನದ ಗುಟ್ಟು ಸಹ ಈ ಶ್ಲೋಕವೇ. "ತ್ಯಾಗದಿಂದ ಭೋಗಿಸು. ಯಾರ ವಸ್ತುವಿಗೂ ಆಸೆಪಡಬೇಡ."

ಮಹಾತ್ಮಗಾಂಧಿಯವರು ಹೀಗೆ ಸ್ಥಿತಪ್ರಜ್ಞರಾಗಿದ್ದರು. ಹುಲು ಮಾನಿಸ ಆತ್ಮಶಕ್ತಿಯಿಂದ ಎಂತಹ ಅದ್ಭುತಗಳನ್ನು ಸಾಧಿಸಬಲ್ಲ ನೆಂಬುದಕ್ಕೆ ಅವರೇ ಉದಾಹರಣೆ.

ಪಂಚ ಮಹಾಭೂತಂಗಳ
ಸಂಚಿನೊಳಿನ್ನೊಂದು ಷಷ್ಠತತ್ವಂ ಕೂಡಲ್
ಮಿಂಚಹುದು ನರನ ಬರಿಬಾಳ್
ಚಂಚುರದಾ ತತ್ವಮಾತ್ಮವೆಂದೊರೆದನವಂ.[1]

ಗಾಂಧಿಯವರ ಗುರುಗಳಾದ ಗೋಖಲೆಯವರು ಭಾರತ ರಾಜಕೀಯ ವನ್ನು ಪರಿಶುದ್ಧ ಮಾಡಬೇಕೆಂದೂ ಸತ್ಯಮಯವಾಗಿ ಮಾಡಬೇಕೆಂದೂ ಗಾಂಧಿಯವರಿಗೆ ಹೇಳಿದ್ದರು. ಅಂತಹ ಸತ್ಯದ ತಳಹದಿಯಿಂದ ಕಟ್ಟಿ ದುದರಿಂದಲೇ, ಕಾಂಗ್ರೆಸ್ ಸಂಸ್ಥೆ ಅಷ್ಟು ಪ್ರಬಲವೂ ತ್ಯಾಗಮೂರ್ತಿಯೂ ಆಯಿತು. ಆದರೆ ಅಧಿಕಾರ ಕೈಗೆ ಬಂದಮೇಲೆ, ಕಾಂಗ್ರೆಸ್ಸಿಗರಲ್ಲಿಯೂ ಅನೀತಿಯೂ ಲಂಚಕೋರತನವೂ ಅನ್ಯಾಯವೂ ಬಹಳವಾಗಿದೆಯೆಂದು ಶ್ರೀ ಕೊಂಡ ವೆಂಕಪ್ಪಯ್ಯನವರಂತಹ ವೃದ್ಧ ಕಾಂಗ್ರೆಸ್ ಭಕ್ತರು ಗಾಂಧಿಯವರಿಗೆ ಬರೆದರು. ಗಾಂಧಿಯವರು ಆ ಕಾರಣಗಳಿಗಾಗಿಯೇ ಕಾಂಗ್ರೆಸ್ಸಿಗೆ ಒಂದು ಹೊಸ ಘಟನೆಯನ್ನು ಸಿದ್ಧಪಡಿಸುವುದರಲ್ಲಿದ್ದರು. ನ್ಯಾಯ ಧರ್ಮ ನಿಷ್ಪಕ್ಷಪಾತವಾಗಿರದ ಆಳ್ವಿಕೆ, ಕಾಂಗ್ರೆಸಿನವರೆನ್ನಿಸಿ ಕೊಳ್ಳುವವರಿಂದ ನಡೆದರೂ ಅದು ತಪ್ಪು ಎಂಬುದು ಗಾಂಧಿಯವರಮತ.

ಮಹಾತ್ಮ ಗಾಂಧಿಯವರು ತಮ್ಮ ಆಶ್ರಮ ನಿಯಮಗಳಲ್ಲಿ 'ಸರ್ವ ಧರ್ಮಸಮಾನತೆ' ಎಂಬುದನ್ನು ಸೇರಿಸಿದಾಗ ಆ ತತ್ವಕ್ಕಾಗಿ ತಾವು ಬಲಿಯಾಗಬೇಕಾಗುವುದೆಂದು ಅರಿತಿರಲಿಲ್ಲ. ೧೯೨೦-೨೧ ರಲ್ಲಿ ಭಾರತದಲ್ಲಿ ಹಿಂದೂ ಮುಸಲ್ಮಾನರ ಐಕ್ಯ ಸ್ಥಾಪಿತವಾಗಿದ್ದಿತು. ಅದೇ ಮುಂದುವರಿಯಬಹುದೆಂಬುದು ಗಾಂಧಿಯವರ ಆಸೆಯಾಗಿದ್ದಿತು. ಆದರೆ ಜಿನ್ನಾ ಜ್ವರದಿಂದ ಹಿಂದೂಗಳೂ ಮುಸಲ್ಮಾನರೂ ಶತ್ರುಗಳಾದರು. ಒಬ್ಬರ ತಲೆಯನ್ನೊಬ್ಬರು ಕಡಿಯುತ್ತಿದ್ದವರು, ಕಲ್ಕತ್ತಕ್ಕೆ ಗಾಂಧಿ ಹೋದಕೂಡಲೆ ಶಾಂತರಾದರು. ದೆಹಲಿಯಲ್ಲಿಯೂ ಶಾಂತಿಯುಂಟಾಯಿತು. ಹಿಂದಲ ಋಷಿಗಳ ಕಾಲದಲ್ಲಿ ಹುಲಿಯೂ ಹಸುವೂ ಒಟ್ಟಿಗೆ ಸುಖವಾಗಿರುತ್ತಿದ್ದಿತೆಂದು ಕೇಳಿದ್ದೇವೆ. ದೆಹಲಿಯಲ್ಲಿ ಹಾಗೆ ಆಯಿತು. ಹಿಂದುಗಳು ಮುಸಲ್ಮಾನರ ಹಬ್ಬಕ್ಕೆ ಸಹ ಹೋದರು. ಜವಹರ್‌ಲಾಲ್ ನೆಹ್ರು ಹೇಳುವಂತೆ ಈ ಔದಾರ್ಯವನ್ನು ಸಹಿಸದೆ ಒಬ್ಬ ಹುಚ್ಚ, ಗಾಂಧಿಯವರನ್ನು ಕೊಂದನು.

ಗಾಂಧಿಯವರು ಸ್ಥಿತಪ್ರಜ್ಞರಂತೆಯೇ ಪೂರ್ಣಪುರುಷರು. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಶೇಚ್ಛತಗ್‌ಂಸಮಾಃ। ಏವಂ ತ್ವಯಿ ನಾನ್ಯಥೇತೋಽಸ್ತಿ ನಕರ್ಮಲಿಪ್ಯತೇ ನರೇ" ಈ ಜಗತ್ತಿನ ದಳಿತರೊಡನೆ ಬೆರೆದು ಬಾಳಿ ಮದುವೆಯಾಗಿ ಸಂಸಾರಿಯಾಗಿ ಈ ಅಶಾಂತಿಯಲ್ಲಿಯೇ ಶಾಂತಿ ದೊರಕಿಸಿಕೊಂಡರು. "ಸೇವೆಗೆ ಅರ್ಹನಾಗಿರುವುದಾದರೆ ನೂರ ಇಪ್ಪತ್ತೈದು ವರುಷ ಬದುಕುತ್ತೇನೆ" ಎಂದರು. ಆ ಹೃದಯ, ಬರಿಯ ಒಣಸನ್ಯಾಸ ತತ್ವದ ಬರಡುಕೊರಡಲ್ಲ ಕಾರುಣ್ಯದಿಂದ ಆರ್ದ್ರವಾದುದು. ಸ್ಪೆಂಡರ್ ಎಂಬ ಆಂಗ್ಲ ಪತ್ರಿಕಾಕರ್ತನು "ಗಾಂಧಿಯವರನ್ನು ನೋಡಿದರೆ ಜಗತ್ತಿನ ದುಃಖ ಕಷ್ಟಗಳೆಲ್ಲಾ ಮೂರ್ತಿವೆತ್ತಂತೆ ಕಾಣುತ್ತದೆ" ಎಂದಿದ್ದಾನೆ. ಭಾರತದಲ್ಲಿ ಪ್ರತಿಯೊಬ್ಬರಿಗೂ, ಗಾಂಧಿ, ತಂದೆ, ಹಿತೈಷಿ; ಯಾರಿಲ್ಲದಿದ್ದರೂ ನಮಗೆ ಇವರು ಇದ್ದಾರೆ ಎಂಬ ಹೆಮ್ಮೆ. ಹರಿಜನ ಪತ್ರಿಕೆಯಲ್ಲಿ ಓದುವಾಗ ಗಾಂಧಿಯವರು ಹೇಗೆ ಕುಟುಂಬದ ಆತ್ಮೀಯರಂತೆ, ಗಂಡ ಹೆಂಡರ ವ್ಯಾಜ್ಯ, ತಂದೆ ಮಕ್ಕಳ ನ್ಯಾಯ, ತಾಯಿ ಮಗನ ವ್ಯತ್ಯಾಸ ಇವುಗಳನ್ನೆಲ್ಲಾ

ಪರಿಹರಿಸುತ್ತಿದ್ದರೆಂಬುದು ಗೊತ್ತಾಗುತ್ತದೆ. ಗಾಂಧಿ ಪ್ರತಿಯೊಬ್ಬ ಭಾರತೀಯನಿಗೂ ಅವನ ಮನೆಯ ಹಿರಿಯ. ದಳಿತರಾದವರಿಗೆ ದರಿದ್ರರಿಗೆ ತಾರಕಮಂತ್ರ. ಬಡವರೆಲ್ಲ "ನಮ್ಮ ರಕ್ಷಕ ಇಲ್ಲಿದ್ದಾನೆ" ಎಂದು ನಂಬಿದ್ದರು. ಗಾಂಧಿ ಸಾಮಾನ್ಯ ಮನುಷ್ಯನ ಪ್ರತಿನಿಧಿಯಾಗಿದ್ದರು. ಇಂದಿನ ಸಮತಾವಾದಿಗಳು ಅವರಷ್ಟು ಸಮತಾವಾದಿಗಳಲ್ಲ. "ಭೂಮಿ ಉಳುವವನದೇ" ಎಂದರು. "ಸರ್ವಾಧಿಕಾರ ಪ್ರಜೆಯದೇ. ಕೂಲಿಗಾರನು ಕಾಂಗ್ರೆಸ್ ಅಧ್ಯಕ್ಷನಾಗಬೇಕು. ರೈತನು ಇಂಡಿಯ ಒಕ್ಕೂಟದ ಮುಖ್ಯಮಂತ್ರಿಯಾಗಬೇಕು. ಕಾರ್ಖಾನೆಗಳೆಲ್ಲ ಕೂಲಿಗಾರರ ಆಸ್ತಿಗಳಾಗಬೇಕು. ನಾನು ಮುಂದಲ ಜನ್ಮದಲ್ಲಿ ಹರಿಜನನಾಗಿ ಹುಟ್ಟಬೇಕು; ಸ್ತ್ರೀಯಾಗಿ ಹುಟ್ಟಬೇಕು." ಸಮತಾವಾದಿಗಳು ಇದಕ್ಕಿಂತ ಹೆಚ್ಚಿನ ತತ್ವವನ್ನು ಇಟ್ಟುಕೊಂಡಿಲ್ಲ. ತತ್ವಗಳು ಇರಬಹುದು. ಆದರೆ ತತ್ವವನ್ನು ಅನುಷ್ಠಿಸುವ ಗಾಂಧಿಯವರಂತಹ ಪವಿತ್ರಾತ್ಮರು ಬೇಕು. ಭಾರತ ರಾಷ್ಟ್ರಸಂಸ್ಥೆ ಇಂತಹ ಪ್ರತಿಭಾಶಾಲಿ ಸಂಘವಾಗುವುದಕ್ಕೆ ಗಾಂಧಿಯವರ ಅಂತಸ್ಸತ್ವವೇ ಕಾರಣ.

ಹಿಮಶೈಲೋನ್ನತನಚಲಂ
ಶಮದೋಳ್ ಸತ್ವೈಕನಿಷ್ಠೆಯೊಳ್ ಸಂಯಮದೊಳ್
ಮಮತಾನಿರ್ಮೂಲನದೊಳ್
ಸಮದರ್ಶನದೊಳ್ ಸಮಷ್ಟಿಶುಭವೀಕ್ಷಣೆಯೊಳ್ [2]

ಇಂತಹ ರಾಷ್ಟ್ರಪಿತನನ್ನು ಕಳೆದುಕೊಂಡ ನಾವು ನಿರ್ಭಾಗ್ಯರು. ಆದರೆ ಇಂತಹ ಮಹಾಮಹಿಮನು ನಮ್ಮ ದೇಶದಲ್ಲಿ ನಮ್ಮ ಕಾಲದಲ್ಲಿ ಜನಿಸಿದ್ದರಿಂದ ನಮ್ಮಷ್ಟು ಪುಣ್ಯಶಾಲಿಗಳು ಯಾರೂ ಇಲ್ಲ. ಕಣ್ಮರೆಯಾದ ಗಾಂಧಿ, ಕಣ್ಣೆದುರಿಗಿರುವ ಗಾಂಧಿಗಿಂತ ಕಡಿಮೆ ಅಲ್ಲ. ಜವಹಿರಲಾಲ್ ನೆಹ್ರು ಹೇಳಿದಂತೆ "ಇಲ್ಲಿ ಹೊಳೆದ ಬೆಳಕು ಸಾಮಾನ್ಯ ಬೆಳಕಲ್ಲ. ಸಾವಿರಾರು ವರ್ಷಗಳನಂತರವೂ ಅದು ಹೊಳೆಯುವುದು." ದೇಹ ನಶ್ವರವೆಂದು ಗಾಂಧಿಯವರೇ ಹೇಳಿದ್ದಾರೆ. ಮರೆಯಲ್ಲಿದ್ದ ಮಾತ್ರಕ್ಕೆ ಇಲ್ಲವೆಂದಲ್ಲ. ಆಹಾ! ಗಾಂಧಿಯವರ ಬೆಳಕೇ ನಮ್ಮ ಬಾಳಿಗೆ ಸ್ಪರ್ಶಶಿಲೆ. ನೀರಸವಾದ ಸ್ವಾರ್ಥಜೀವನಗಳೆಲ್ಲಾ ಅವರ ಪ್ರಭಾವದಿಂದ

ಉಜ್ವಲವಾಗಿವೆ. ಭಾರತದೇಶಕ್ಕೆ ದೇವರು ಅನುಗ್ರಹಿಸಿದ ಎಂದೆಂದಿಗೂ ಮರೆಯಲಾಗದ ಆಸ್ತಿ ಇದು. ಸಿ. ರಾಜಗೋಪಾಲಾಚಾರ್ಯರು ಹೇಳಿದಂತೆ "ಗಾಂಧಿಯವರು ಬಿದ್ದ ಹೊತ್ತಿನಲ್ಲಿ ದಿನವೂ ಗಾಂಧಿಯವರನ್ನು ಧ್ಯಾನಿಸೋಣ." ಪ್ರತಿಯೊಂದು ಕಾರ್ಯದಲ್ಲಿಯೂ ಗಾಂಧಿಯವರು ಇದನ್ನು ಒಪ್ಪುತ್ತಿದ್ದರೇ ಎಂದು ವಿಮರ್ಶಿಸೋಣ ಜೀವನದ ಈ ನಾಟಕದ ತೆರೆಯ ಆಚೆಕಡೆ ಏನಿದೆಯೋ ಬಲ್ಲವರಾರು? ಗಾಂಧಿಯವರು ನಮ್ಮನ್ನು ನೋಡುತ್ತಲೇ ಇರಬಹುದು.

ಆಗಾಗಳಾನುಮಾ ಗುರು
ವಾಗಸದಿಂದೆಮಗೆ ತೋರನೇಂ ಕೆಳೆ ನಗುವಂ
ತ್ಯಾಗವ ತೋರ್ಗ್ವೆವೆ, ಸತತೋ
ದ್ಯೋಗವ ನಾಂ ಬಂಧುಯೋಗಮುಂ ಮೆಚ್ಚುಹವೋಲ್.[3]

ಮಹಾತ್ಮ ಗಾಂಧಿಯವರಿಗೆ ಅರ್ಹರಾಗುವ ಯೋಗ್ಯತೆ ನಮಗೆ ಉಂಟಾಗಲಿ, „ಏಕ್ ಬಾರ್ ಫಿರ್ ಆನಾ ಬಾಪು! ಏಕ್ ಬಾರ್ ಫಿರ್ ಆನಾ."

## ೪. ಸತ್ಯಾಗ್ರಹ ಸೂರ್ಯ

ಗಾಂಧಿಯವರು ೧೯೧೫ ರಲ್ಲಿ ಭಾರತಕ್ಕೆ ಬಂದು ಸಾಬರ್ಮತಿಯಲ್ಲಿ ಆಶ್ರಮವನ್ನು ಮಾಡಿಕೊಂಡು ತಮ್ಮ ಹೊಸ ಅಸ್ತ್ರದ ಪ್ರಯೋಗವನ್ನು ಪೂರ್ಣವೂ ದೋಷರಹಿತವೂ ಆಗಿ ಮಾಡುವುದರಲ್ಲಿ ತೊಡಗಿದ್ದರು. ಅವರ ಹೆಸರು ಆ ವೇಳೆಗೆ ಎಲ್ಲೆಲ್ಲಿಯೂ ಪ್ರಸಿದ್ಧವಾಗಿದ್ದಿತು. ಪ್ರಾರಂಭದಲ್ಲಿ ಗಾಂಧಿಯವರಿಗೆ ಭಾರತದ ಯಾವ ರಾಜಕೀಯ ಚಳುವಳಿಯಲ್ಲಿಯೂ ಭಾಗವಹಿಸಲು ಇಷ್ಟವಿರಲಿಲ್ಲ. ಸಾಧ್ಯವಾದರೆ ಐದು ವರುಷಗಳ ಕಾಲ ಆಶ್ರಮ ಜೀವನವನ್ನೇ ಚೆನ್ನಾಗಿ ವ್ಯವಸ್ಥೆಗೊಳಿಸಬೇಕೆಂಬುದು ಅವರ ಉದ್ದೇಶವಾಗಿತ್ತು.

---

1, 2, 3, ಶ್ರೀ ಡಿ. ವಿ. ಜೀಯವರ 'ಮಹಾತ್ಮಗಾಂಧಿ ಜ್ಞಾಪಕ 'ಪದ್ಯ ಸಂಗ್ರಹ' ದಿಂದ

ಬೊಂಬಾಯಿನಲ್ಲಿ ಜಹಾಂಗಿರ್ ಬಿ. ಪೆಟಿಟ್‌ರವರ ಮನೆಯಲ್ಲಿ ಗಾಂಧಿಯವರಿಗೆ ಒಂದು ಸ್ವಾಗತವನ್ನು ಏರ್ಪಡಿಸಿದ್ದರು. ಅದು ಬೊಂಬಾಯಿನಲ್ಲಿ ನಾಗರಿಕವಾದ ಉಡುಪಿನ ಆಡಂಬರದ ಕಾಲ, ನೆಕ್‌ಟೈ ಕಾಲರ್ ಬೂಟ್ಸ್ ಇವುಗಳ ಪ್ರಾಬಲ್ಯದ ಕಾಲ. ಸುಸಜ್ಜಿತವಾದ ಅರಮನೆಯಂತಹ ಭವನದಲ್ಲಿ ಸರ್ ಫಿರೋಜ್‌ಷಹಮೆಹತಾ ಮುಂತಾದ ಬೊಂಬಾಯಿನ ಪ್ರಮುಖರೆಲ್ಲ ನೆರೆದಿದ್ದರು. ಮುಖ್ಯ ಅತಿಥಿ ಗಾಂಧಿಯವರು ಬಂದರು. ಅವರು ಒಂದು ಪಂಚೆಯನ್ನುಟ್ಟುಕೊಂಡು ಕಶೆ ಅಂಗಿಯನ್ನು ಧರಿಸಿ ಬರಿಕಾಲಿನಲ್ಲಿ ಕೇವಲ ನಮ್ರರಾಗಿ ಬಂದು ಕುಳಿತರು. ಆ ಉಡುಪಿನ ಸರಳತೆಯನ್ನು ಕಂಡು ಬೊಂಬಾಯಿನ ನಾಗರೀಕರಲ್ಲಿ ಕೆಲವರು ಬೆಚ್ಚಿಬಿದ್ದರು. ಗಾಂಧಿಯವರೇನೊ ಈಚೆಗೆ ತಾನು ಆಗ, ಈಗಿಗಿಂತ ಹೆಚ್ಚು ನಾಗರಿಕನಾಗಿ ಕಾಣುವ ಉಡುಪನ್ನು ಧರಿಸಿದ್ದೆ ಎನ್ನುತ್ತಾರೆ. ಬಹಳ ರಸಿಕತೆಯಿಂದಲೂ ನಾಜೂಕು ಥಳಕಿನಿಂದಲೂ ಉಡುಪನ್ನು ಅಲಂಕರಿಸಿಕೊಂಡಿದ್ದ ಮಹಿಳೆಯೊಬ್ಬಳು ಗಾಂಧಿಯನ್ನು ನೋಡಿ ಆಶ್ಚರ್ಯ ಕುತೂಹಲದಿಂದ "ಇವರೇ ಗಾಂಧಿ? ನನ್ನ ದರ್ಜಿಯು ಹಾಗೆ ಕಾಣುತ್ತಾರೆ'' ಎಂದಳು.

ಗಾಂಧಿಯವರು ಅಂತಹ ಕುರೂಪಿಗಳಲ್ಲ. ಅವರು ಕುರೂಪಿಗಳೆಂದು ಹೇಳುವವರು ಅವರನ್ನು ಸರಿಯಾಗಿ ನೋಡಿಲ್ಲವೆಂದೇ ಹೇಳಬೇಕು. ಅವರನ್ನು ಕುರಿತು ಭಾರತದ ಕಾರ್ಯದರ್ಶಿಗಳಾಗಿದ್ದ ಮಿ ಮಾಂಟಿಗುರವರು "ಗಾಂಧಿ ಕೂಲಿಯಂತೆ ಬಟ್ಟೆ ತೊಡುತ್ತಾರೆ. ಸ್ವಂತ ಆಸೆ ಅವರಿಗೆ ಏನೂ ಇಲ್ಲ. ಗಾಳಿ ಕುಡಿದು ಜೀವಿಸುತ್ತಾರೆ. ಅವರು ಭಾವನಾ ಜೀವಿ" ಎಂದಿದ್ದರು. ಆದರೆ ಭಾರತೀಯರಿಗೆ, ಗಾಂಧಿ ಭಾರತಕ್ಕೆ ಬಂದುದರಿಂದ ಹೊಸ ಹುರುಪೂ ಉತ್ಸಾಹವೂ ಉಂಟಾಗಿದ್ದಿತು. ಆಫ್ರಿಕದಲ್ಲಿ ಅವರು ಸಾಧಿಸಿದ ಜಯ ಭಾರತೀಯರೆಲ್ಲರ ಹೆಮ್ಮೆಯಾಗಿತ್ತು. ಮಹನೀಯರನ್ನು ಸೃಷ್ಟಿಸಿದ ಭರತವರ್ಷದಲ್ಲಿ ಗಾಂಧಿಯವರು ತಮ್ಮ ಪ್ರಭಾವವನ್ನು ಬೆಳಗಿ ಭಾರತದ ಉದ್ಧಾರದ ಕಂಕಣವನ್ನು ಕಟ್ಟಿಕೊಳ್ಳುವರೆಂಬುದರಲ್ಲಿ ಯಾರಿಗೂ ಸಂದೇಹವಿರಲಿಲ್ಲ.

೨

ಸತ್ಯಾಗ್ರಹವನ್ನೂ ಅದರ ಸಿದ್ಧತೆಯನ್ನೂ ಭಾರತವು ಬಹು ಬೇಗ ನೋಡುವುದಾಗಿದ್ದಿತು. ಬೀಹಾರಿನ ಚಂಪಾರಣ್ಯವೆಂಬ ಪ್ರದೇಶದಲ್ಲಿ ನೀಲಿಯನ್ನು ಬೆಳೆಯುತ್ತಿದ್ದ ರೈತರಿಗೂ ನೀಲಿಯ ಕಾರ್ಖಾನೆಗಳನ್ನಿಟ್ಟುಕೊಂಡಿದ್ದ ಯೂರೋಪಿಯನ್ನರಿಗೂ ಮನಸ್ತಾಪವುಂಟಾಗಿತ್ತು. ಮನಸ್ತಾಪವೆಂದು ಹೇಳುವುದಕ್ಕಿಂತ ರೈತರಿಗೆ ಕಾರ್ಖಾನೆಯ ಮಾಲಿಕರುಗಳಿಂದ ಚಿತ್ರಹಿಂಸೆಯಾಗುತ್ತಿದ್ದಿತೆಂದು ಹೇಳಬಹುದು. ನೀಲಿ ಕಾರ್ಖಾನೆಯ ಮಾಲಿಕರುಗಳಾದ ಯುರೋಪಿಯನ್ನರು ಒಪ್ಪಿದ ಪ್ರದೇಶದಲ್ಲಿ ರೈತರು ನೀಲಿಯನ್ನು ಬೆಳೆಯಬೇಕೆಂಬುದು; ರೈತರಿಗೆ ಲಾಭವಿಲ್ಲದ ಅನೇಕ ಪೈರುಗಳನ್ನು ಅವರು ಬಲವಂತದಿಂದ ಬೆಳೆಯಬೇಕಾಗಿದ್ದುದು; ಉಚಿತವಾಗಿ ಕಾರ್ಖಾನೆಯ ಮಾಲೀಕರಿಗೆ ಕೆಲಸ ಮಾಡಬೇಕಾಗಿದ್ದುದು; ಕ್ರಿಮಿನಲ್ ಲಾ ಬಲಾತ್ಕಾರದಿಂದ ಮ್ಯಾಜಿಸ್ಟ್ರೇಟರು ಕಾರ್ಖಾನೆಯ ಯಜಮಾನರಿಗೆ ಸಹಾಯಕವಾಗುವಂತೆ ರೈತರನ್ನು ಬಲಾತ್ಕರಿಸುತ್ತಿದ್ದುದು; ರೈತನಿಗೆ ಯಾವ ಯಾವ ಬಗೆಯ ತೊಂದರೆಗಳನ್ನೂ ಕಷ್ಟಗಳನ್ನೂ ಕೊಡಬಹುದೋ ಅವುಗಳನ್ನೆಲ್ಲಾ ನೀಲಿ ಕಾರ್ಖಾನೆಯ ಯಜಮಾನರು ಕೊಡುತ್ತಿದ್ದರು. ರೈತರಿಗೆ ಉಂಟಾಗುತ್ತಿದ್ದ ಕಿರುಕುಳವನ್ನು ಅನೇಕಬಾರಿ ಸರ್ಕಾರದ ಗಮನಕ್ಕೆ ತಂದರೂ ಏನೂ ಪ್ರಯೋಜನವಾಗಲಿಲ್ಲ. ೧೯೧೬ ನೇ ಇಸವಿ ಲಕ್ನೊ ರಾಷ್ಟ್ರೀಯ ಮಹಾಸಭೆಯಲ್ಲಿ, ಚಂಪಾರಣ್ಯದ ರೈತರ ಕಷ್ಟಗಳನ್ನು ತಿಳಿದು ಪರಿಹಾರಗಳನ್ನು ಸೂಚಿಸಲು ಅಧಿಕಾರಿ ಮತ್ತು ಖಾಸಗಿ ಸದಸ್ಯರುಗಳು ಕೂಡಿದ ಒಂದು ಸಮಿತಿಯನ್ನು ರಚಿಸುವಂತೆ ಸರ್ಕಾರವನ್ನು ಕೋರುವ ನಿರ್ಣಯವಾಯಿತು. ಈ ನಿರ್ಣಯವನ್ನು ಅನುಮೋದಿಸಬೇಕೆಂದು ಗಾಂಧಿಯವರಿಗೆ ಸೂಚಿಸಿದಾಗ ಅವರು ನನಗೆ ಈ ವಿಚಾರ ಗೊತ್ತಿಲ್ಲ. ವಿದ್ಯಮಾನಗಳು ತಿಳಿದ ಹೊರತು ನಾನು ಏನನ್ನೂ ಹೇಳಲಾರೆ'' ಎಂದರು. ವಿಷಯವನ್ನು ಪೂರ್ತಿಯಾಗಿ ತಾವೇ ತಿಳಿದುಕೊಂಡ ಹೊರತು ಯಾರ ಮೇಲೆ ಮಾತನಾಡುವುದೂ ಅವರ ಅಭ್ಯಾಸವಾಗಿರಲಿಲ್ಲ.

ಬಿಹಾರಿನ ಕಾಂಗ್ರೆಸ್ ಪ್ರತಿನಿಧಿಗಳ ಪ್ರಾರ್ಥನೆಯಂತೆ ಗಾಂಧಿ

ಯವರು ೧೯೧೭ ನೇ ಇಸವಿ ಏಪ್ರೆಲ್ ೧೦ ನೇ ತಾರೀಖು ಪಾಟ್ನಾಕ್ಕೆ ಬಂದರು. ಪಾಟ್ನಾದಲ್ಲಿ ಬಾಬು ರಾಜೇಂದ್ರಪ್ರಸಾದರ ಮನೆಗೆ ನೆಟ್ಟಗೆ ಹೋದಾಗ ಅಲ್ಲಿ ಪ್ರಸಾದರು ಇರಲಿಲ್ಲ. ಕಲ್ಕತ್ತೆಕ್ಕೆ ಹೋಗಿದ್ದರು ಮನೆ ಯಲ್ಲಿ ಒಬ್ಬ ಆಳು ಮಾತ್ರ ಇದ್ದನು. ಆತನಿಗೆ ಬಂದಿದ್ದ ಮಹನೀಯ ಅತಿಥಿ ಯಾರೆಂಬುದು ತಿಳಿಯಲಿಲ್ಲ. ಗಾಂಧಿಯವರನ್ನು ಆತ ಸಾದಾರಣ ಮನುಷ್ಯನಂತೆ ಕಂಡನು. ಗಾಂಧಿಯವರು ಅದೊಂದನ್ನೂ ಗಮನಿಸಲಿಲ್ಲ. ಅವರು ಚಂಪಾರಣ್ಯದ ರೈತರ ಕಷ್ಟಗಳನ್ನು ಹೊರತು ಮತ್ತಾವುದನ್ನೂ ಕುರಿತು ಯೋಚಿಸುತ್ತಿರಲಿಲ್ಲ. ಪಾಟ್ನಾಕ್ಕೆ ಹೋದಕೂಡಲೆ ಗಾಂಧೀ ಯವರು ಪಾದರಸದಂತೆ ಕೆಲಸ ಪ್ರಾರಂಭಿಸಿದರು. ಅದೇಸಾಯಂಕಾಲ ಮುಜಫರ್ ಪುರಕ್ಕೆ ಹೋಗುವುದು ಗೊತ್ತಾಯಿತು. ಅಲ್ಲಿ ಜಿ. ಬಿ. ಬಿ. ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದ ಕ್ರಿಪಲಾನಿ ಯವರಿಗೆ ಟೆಲಿಗ್ರಾಂ ಹೋಯಿತು. ಮಹಾತ್ಮಾ ಗಾಂಧಿ, ಶುಕ್ಲ ಇಬ್ಬರೂ ಸಾಯಂಕಾಲ ರೈಲಿನಲ್ಲಿ ಮುಜಫರ್ ಪುರಕ್ಕೆ ಹೋದರು. ರೈಲು ರಾತ್ರಿ ೧೦ ಗಂಟೆಗೆ ಮುಜಫರ್ ಪುರವನ್ನು ಮುಟ್ಟಿತು. ಕೃಪಲಿನಿಯವರು ಗಾಂಧಿ ಯವರನ್ನು ನೋಡಿರಲಿಲ್ಲ- ಸ್ಟೇಷನ್ ತುಂಬ ವಿದ್ಯಾರ್ಥಿಗಳು ನೆರೆ ದಿದ್ದರು. ಆದರೆ ಯಾರಿಗೂ ಗಾಂಧಿಯವರ ಗುರುತು ಇರಲಿಲ್ಲ. ನೆರೆದಿದ್ದ ಗುಂಪು ಗಾಂಧಿಯವರಿಗಾಗಿ ಬಂದಿದೆಯೆಂದು ತಿಳಿದು ಶುಕ್ಲರವರು ಮಹಾತ್ಮರನ್ನು ಅವರಿಗೆ ತೋರಿಸಿದರು. ಜನರು ಗಾಂಧಿಯವರಿಗೆ ಆರತಿ ಎತ್ತಿ ಅವರನ್ನು ರಥದಲ್ಲಿ ಮೆರವಣಿಗೆ ಕರೆದುಕೊಂಡು ಹೋದರು.

ಮರುದಿನ ಬೆಳಿಗ್ಗೆ ಪ್ಲಾಂಟರ್ಸ್ ಸಂಘದ ಕಾರ್ಯದರ್ಶಿ ವಿಲ್ಸನ್ ರವರನ್ನು ಗಾಂಧಿಯವರು ನೋಡಿ, ಅವರಿಗೆ ತಾವು ಬಂದ ಉದ್ದೇಶ್ಯ ವನ್ನು ತಿಳಿಸಿ ಅವರ ಸಹಾಯವನ್ನು ಕೇಳಿದರು. ಮುಂದೆ ಕಮಿಷನ್ ರನ್ನು ನೋಡಿದರು. ಆಗ ಜಿಲ್ಲೆಯ ಕಲೆಕ್ಟರೂ ಹಾಜರಿದ್ದರು. ಗಾಂಧಿ ಯವರು ಬಂದುದು ತಪ್ಪೆಂದೂ, ಇದರಿಂದ ಪುಂಡರಿಗೆ ಪ್ರೋತ್ಸಾಹ ವಾಗುವುದೆಂದೂ, ಸರ್ಕಾರದವರು ಎಲ್ಲ ಕೆಲಸಗಳನ್ನೂ ಮಾಡುವ ರೆಂದೂ, ರೈತರ ತೊಂದರೆಗಳು ಬರಿಯ ಊಹೆಗೆ ಮಾತ್ರವೆಂದೂ ಕಮಿಷನರು ಗಾಂಧಿಯವರಿಗೆ ತಿಳಿಸಿದರು. ಗಾಂಧಿಯವರು ಇದಾವುದ

ರಿಂದಲೂ ವಿಚಲಿತರಾಗದೆ ತಮ್ಮ ಕೆಲಸದಲ್ಲಿ ತಾವು ನಿರತರಾದರು. ಗಾಂಧಿಯವರು ಮುಜಫರ್ ಪುರಕ್ಕೆ ಬಂದ ಸಮಾಚಾರ ಕೇಳಿ ನೂರಾರು ರೈತರು ಅಲ್ಲಿ ಬಂದು ತಮ್ಮ ಕಷ್ಟಗಳನ್ನು ವಿವರಿಸಿದರು. ಕೆಲವು ಕಡೆ ಜಮೀನಿನ ಕಂದಾಯವನ್ನು ಶೇಕಡ ೬೦ ರಷ್ಟು ಏರಿಸಿದ್ದರು. ಅದನ್ನೆಲ್ಲಾ ಕಂಡು ಮಹಾತ್ಮರಿಗೆ ಆಶ್ಚರ್ಯವಾಯಿತು. ಇಷ್ಟು ಅನ್ಯಾಯವುಂಟೆ ಎಂದು ಅವರು ಕನಿಕರಪಟ್ಟರು

ಮರುದಿವಸ ಗಾಂಧಿಯವರು ಚಂಪಾರಣ್ಯಕ್ಕೆ ಹೊರಟರು. ಬಿಸಿಲು ಅಸಾಧ್ಯವಾಗಿತ್ತು. ಸರ್ಕಾರದವರ ಚಟುವಟಿಕೆ ಗಾಬರಿ ಹೆಚ್ಚಾಗಿತ್ತು. ಸರ್ಕಾರದವರು ತಮ್ಮನ್ನು ಬಂಧಿಸಬಹುದೆಂದು ತಿಳಿದು ಗಾಂಧಿಯವರು "ಸಾಧ್ಯವಾದಷ್ಟು ಬೇಗ ಚಂಪಾರಣ್ಯಕ್ಕೆ ಹೋಗೋಣ. ಏನು ನಡೆದರೂ ರೈತರ ಎದುರಿಗೆ ನಡೆಯಲಿ" ಎಂದು ಹೊರಟರು. ಮಧ್ಯಾನ್ಹ ೩ ಗಂಟೆಗೆ ಮೋತಿಹರಿ ಎಂಬ ಸ್ಥಳವನ್ನು ಸೇರಿದ ಕೂಡಲೆ ಮಹಾತ್ಮರು ರೈತರ ಅಹವಾಲುಗಳನ್ನು ಕೇಳಲು ಪ್ರಾರಂಭಿಸಿದರು. ಅವರಿಗೆ ಬಿಹಾರಿನ ಹಳ್ಳಿಯ ಭಾಷೆ ಚೆನ್ನಾಗಿ ತಿಳಿಯುತ್ತಿದ್ದಿಲ್ಲವಾದುದರಿಂದ, ಅವರ ಜತೆಯಲ್ಲಿ ಎರಡು ಜನ ದ್ವಿಭಾಷಿಗಳು ಇದ್ದರು. ಮರುದಿನ ಬೆಳಿಗ್ಗೆ ಗಾಂಧಿಯವರು ಜಸಲುಪಟ್ಟಿ ಎಂಬ ಹಳ್ಳಿಗೆ ಆನೆಯ ಮೇಲೆ ಹೊರಟರು. ಅದು ವೈಶಾಖಮಾಸದ ಬಿಸಿಲು. ಗಾಂಧಿಯವರಿಗೆ ಆನೆಯಮೇಲೆ ಸವಾರಿಮಾಡಿ ಅಭ್ಯಾಸವಿರಲಿಲ್ಲ. ಧೂಳು ಅವರ ಕಣ್ಣು ಕಿವಿ ಬಾಯಿಗೆಲ್ಲಾ ತುಂಬಿಕೊಳ್ಳುತ್ತಿತ್ತು. ಆದರೆ ರೈತರ ಕಷ್ಟದಿಂದ ಗಾಂಧಿಯವರ ಎದೆಯಲ್ಲಿ ಎದ್ದಿದ್ದ ಉರಿ, ಆ ಬಿಸಲಿನ ಉರಿಗಿಂತ ಹೆಚ್ಚಾಗಿದ್ದಿತು. ಸುಮಾರು ೯ ಮೈಲಿ ಹೋಗುವುದರೊಳಗಾಗಿ ಒಬ್ಬ ಸಬ್ ಇನಿಸ್ಪೆಕ್ಟರು ಎದುರಿಗೆ ಬಂದು "ಕಲೆಕ್ಟರು ಗಾಂಧಿಯವರನ್ನು ಬರೆಹೇಳಿದ್ದಾರೆಂದು" ಹೇಳಿದನು. ಗಾಂಧಿಯವರು ಅವನ ಜತೆಯಲ್ಲಿ ಹೋದರು. ಸ್ವಲ್ಪದೂರ ಹೋಗುವುದರೊಳಗಾಗಿ ಡೆಪುಟಿ ಸೂಪರಿಂಟೆಂಡೆಂಟರು ಬಂದು ಗಾಂಧಿಯವರಿಗೆ ಒಂದು ನೋಟೀಸನ್ನು ಕೊಟ್ಟರು. ಅದರಲ್ಲಿ "ಗಾಂಧಿಯವರು ಚಂಪಾರಣ್ಯಕ್ಕೆ ಬಂದುದರಿಂದ ಸಾರ್ವಜನಿಕ ಶಾಂತಿಗೆ ಭಂಗವುಂಟಾಯಿತೆಂದೂ ಆದುದರಿಂದ ಮುಂದಲ

ರೈಲಿನಲ್ಲಿ ಡ್ರಿಸ್ಟ್ರಿಕ್ಟ್ ಬಿಟ್ಟು ಹೊರಟುಹೋಗಬೇಕೆಂದೂ'' ಗಾಂಧಿಯವರಿಗೆ ನೋಟೀಸು ಕೊಟ್ಟಿದ್ದರು. ನೋಟಿಸು ಗಾಂಧಿಯವರಿಗೆ ತಲಪಿದ ಕೂಡಲೆ ಎಲ್ಲವೂ ಶಾಂತವಾಗುವುದೆಂದೂ ಕಮಿಶನರೂ ಕಲೆಕ್ಟರೂ ಭಾವಿಸಿ ಸಮಾಧಾನ ಚಿತ್ತರಾದರು. ಬ್ರಿಟಿಷ್ ಸರ್ಕಾರದ ಜಬರ್ಬ ಭಾರತದಲ್ಲಿ ಆಗ ಆ ರೀತಿ ಇತ್ತು.

೩

ಗಾಂಧಿಯವರು ತಮ್ಮ ಸತ್ಯಾಗ್ರಹ ಅಸ್ತ್ರದಿಂದ ಬ್ರಿಟಿಷ್ ಸರ್ಕಾರದ ಜಬರ್ಬ ಎಂಬ ಮಡಿಕೆಗೆ ಏಟುಕೊಡಲು ಬಿಹಾರ ಚಂಪಾರಣ್ಯವನ್ನು ಆರಿಸಿರಬಹುದೆಂಬುದು ಅವರಿಗೆ ತಿಳಿದಿರಲಿಲ್ಲ. ಬ್ರಿಟಿಷ್ ಸರ್ಕಾರದ ಶಾಸನ ಭಾರತದಲ್ಲಿ ಅಪ್ರತಿಹತ. ಇನ್ನೂರು ವರುಷಗಳಿಂದ ಭಾರತೀಯರು, ಮಂತ್ರದಿಂದ ಮುಗ್ಧರಾದ ಸರ್ಪಗಳಂತೆ, ಆ ಆಡಳಿತಕ್ಕೆ ಕಟ್ಟು ಬಿದ್ದಿದ್ದರು. ಅದರ ಉಸಿರು ಕಾನೂನು. ಆದರೆ ಈಗ ಕಲೆಕ್ಟರರು ನಿರೀಕ್ಷಿಸಿದಂತೆ ಗಾಂಧಿಯವರು ನೋಟಿಸು ನೋಡಿಕೊಂಡು ಮುಂದಲ ರೈಲಿನಲ್ಲಿ ಬಿಹಾರ ಬಿಟ್ಟು ಓಡಲಿಲ್ಲ ಒಬ್ಬ ಮನುಷ್ಯ ಅಖಿಲ ಭಾರತದ ಎದುರಿಗೆ, ಜಗತ್ತಿನ ಎದುರಿಗೆ, ಮಹಾಬಲಶಾಲಿಯಾದ ಬ್ರಿಟಿಷ್ ಸಾಮ್ರಾಜ್ಯವನ್ನೇ ಎದುರಿಸುವುದು ಆ ಸಾಮ್ರಾಜ್ಯ ಸೇವಕರಿಗೆ ಸಹನೆಯಾಗುವ ಸಂಗತಿಯಾಗಿರಲಿಲ್ಲ. ಚಂಪಾರಣ್ಯದ ಭಾರತೀಯರಿಗೆ ಸಹ ಗಾಂಧಿ ಎಂಬ ಹೆಸರನ್ನು ಕೇಳಿದೊಡನೆ ಏನೋ ಒಂದು ಬಗೆಯ ಹೊಸ ಉತ್ಸಾಹವೂ ಧೈರ್ಯವೂ ಉಂಟಾಗುತ್ತಿತ್ತು. ತಮ್ಮನ್ನು ಬಂಧಿಸಿದರೆ ಮಾಡಬೇಕಾದ ಕಾರ್ಯಕ್ರಮವನ್ನು ಗುರುತುಹಾಕಿ ಗಾಂಧಿಯವರು ತಮ್ಮ ಅನುಯಾಯಿಗಳಿಗೆ ಕೊಟ್ಟರು. ಅನಂತರ ರೈತರಿಂದ ಮುಚ್ಚಳಿಕೆಗಳನ್ನು ತೆಗೆದುಕೊಳ್ಳುವುದು ಪ್ರಾರಂಭವಾಯಿತು. ಪೋಲಿಸ್ ಸಬ್ ಇನಿಸ್ಪೆಕ್ಟರು ಅಲ್ಲಿಗೆ ಬಂದು ಮುಚ್ಚಳಿಕೆಯನ್ನು ಕೊಟ್ಟವರ ಹೆಸರನ್ನೆಲ್ಲಾ ಬರೆದುಕೊಂಡರು. ಮೊದಲು ಮೊದಲು ರೈತರು ಪೋಲಿಸಿನವರ ಭಯದಿಂದ ಗುಟ್ಟಾಗಿ ಬರುತ್ತಿದ್ದರು. ಆದರೆ ಬರಬರುತ್ತಾ ಸತ್ಯವನ್ನು ಹೇಳುತ್ತಿದ್ದ ಅವರಿಗೆ ಧೈರ್ಯ ಹೆಚ್ಚಾಗಿ ಅವರು ಬಹಿರಂಗವಾಗಿ ಬರತೊಡಗಿದರು. ಮುಚ್ಚಳಿಕೆ ಬರೆದುಕೊಳ್ಳುತಿದ್ದವರಿಗೆ ಒಂದುಗಳಿಗೆ ಸಹ

ವಿರಾಮವಿಲ್ಲದಂತೆ ರೈತರ ಸಂಖೆ ಹೆಚ್ಚಾಯಿತು. ತಾವು ಸರ್ಕಾರದ ಅಪ್ಪಣೆಯನ್ನು ಉಲ್ಲಂಘಿಸಿದುದಕ್ಕಾಗಿ ಕಾರಾಗೃಹಕ್ಕೆ ಹೋಗಬೇಕೆಂಬುದು ಗಾಂಧಿಯವರಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಅವರು ರೈತರಿಗೆ ಆ ವಿಚಾರವನ್ನು ತಿಳಿಸದೆ, ತಮ್ಮ ಸ್ವಾಭಾವಿಕವಾದ ಶಾಂತಿಯಿಂದ ಕೆಲಸ ಮಾಡುತ್ತಿದ್ದರು.

ಹೀಗೆ ಕೆಲಸ ನಡೆಯುತ್ತಿರುವಾಗ, ಭಾರತದ ಎಲ್ಲಾ ಕಡೆಗಳಿಂದಲೂ, ಮುಂದಾಳುಗಳು ತಾವು ಬಿಹಾರಿಗೆ ಬರುವುದಾಗಿ ತಂತಿ ಕೊಟ್ಟರು. ಪೋಲಕ್‌ರವರು ಪಾಟ್ನಾಕ್ಕೆ ಬಂದಿರುವುದಾಗಿ ತಿಳಿಸಿದರು. ಮಜಹರಲ್ ಹಕ್‌ರು ಬಂದಿರುವುದಾಗಿ ತಂತಿಕೊಟ್ಟರು. ಗಾಂಧಿಯವರು "ನೀವು ಈಗ ಬರುವುದು ಬೇಡ. ನನ್ನನ್ನು ಹಿಡಿದ ಮೇಲೆ ಬನ್ನಿ" ಎಂದು ಪ್ರತ್ಯುತ್ತರ ಕೊಟ್ಟರು. ಪಂಡಿತ ಮಾಲವೀಯರವರು, ಹಿಂದೂ ಯೂನಿವರ್ಸಿಟಿಯನ್ನು ಬಿಟ್ಟು ಬರುವುದಾಗಿ ತಂತಿ ಕೊಟ್ಟರು. ಅವರ ಆವಶ್ಯಕತೆ ಸದ್ಯದಲ್ಲಿ ಇಲ್ಲವೆಂದು ಗಾಂಧಿಯವರು ಅವರಿಗೆ ತಿಳಿಸಿದರು. ೧೯೧೭ ನೇ ಏಪ್ರೆಲ್ ೧೭ ನೆ ತಾರೀಖಿನ ದಿನ ಗಾಂಧಿಯವರನ್ನು ವಿಚಾರಣೆಗಾಗಿ ನ್ಯಾಯಸ್ಥಾನದಲ್ಲಿ ನಿಲ್ಲಿಸಿದರು. ತಮಗಾಗಿ ಕಾರಾಗೃಹಕ್ಕೆ ಹೋಗುತ್ತಿದ್ದ ಮಹಾಪುರುಷನನ್ನು ನೋಡಲು ಅನೇಕ ಸಾವಿರಜನ ನೆರೆದಿದ್ದರು. ಸುಮಾರು ೨೦೦೦ ರೈತರು ಮಹಾತ್ಮರ ಜತೆಯಲ್ಲಿ ಕೋರ್ಟಿನೊಳಕ್ಕೆ ನುಗ್ಗಿದರು. ಗದ್ದಲವನ್ನು ನೋಡಿ ನ್ಯಾಯಾಧೀಶರು ಗಾಂಧಿಯವರನ್ನು ಲೈಬ್ರೇರಿಯಲ್ಲಿ ಸ್ವಲ್ಪ ಹೊತ್ತು ಕುಳಿತಿರುವಂತೆ ಹೇಳಿ, ರಿಜರ್ವ್ ಪೋಲಿಸಿಗೆ ಹೇಳಿ ಕಳುಹಿಸಿದರು. ಅನಂತರ ಗಾಂಧಿಯವರು ನ್ಯಾಯಸ್ಥಾನಕ್ಕೆ ಬಂದಾಗ, ಸರ್ಕಾರದ ಅಡ್ವಕೇಟರು ಅನೇಕ ಗಾಡಿ ಲಾ ಪುಸ್ತಕಗಳ ಮರೆಯಲ್ಲಿ ಕುಳಿತಿದ್ದರು. ಪಾಪ ಯಾವ ಯಾವ, ಕಾನೂನಿನ ಮಾತು ಬರುವುದೋ ಎಂದು ಅವರು ಮೊದಲು ರಾತ್ರಿ ನಿದ್ರೆ ಮಾಡಿರಲಿಲ್ಲ. ಗಾಂಧಿಯವರು ಬಂದ ಕೂಡಲೆ ನ್ಯಾಯಾಧೀಶರು "ನಿಮಗೆ ಲಾಯರು ಇದ್ದಾರೋ" ಎಂದು ಕೇಳಿದರು. ಗಾಂಧಿಯವರು "ಇಲ್ಲ" ಎಂದರು. ನೆರೆದಿದ್ದವರಲ್ಲಿ ಅನೇಕರಿಗೆ ಆಶ್ಚರ್ಯವಾಯಿತು. ಆದರೆ ಕೆಲವರು "ಗಾಂಧಿಯವರೇ

ಪ್ರಸಿದ್ಧರಾದ ಅಡ್ವಕೇಟರು. ತಮ್ಮ ವಾದವನ್ನು ಅವರು ತಾವೇ ಮಾಡಿ ಕೊಳ್ಳುತ್ತಾರೆ" ಎಂದುಕೊಂಡರು. ಸರ್ಕಾರಿ ಅಡ್ವಕೇಟರು, ಗಾಂಧಿ ಯವರು ಸರ್ಕಾರದ ಆಜ್ಞೆಯನ್ನು ಉಲ್ಲಂಘಿಸಿರುವುದರಿಂದ ಶಿಕ್ಷಾರ್ಹ ರೆಂದು ಹೇಳಿದರು. ಅನಂತರ ಗಾಂಧಿಯವರು ಶಾಂತವಾಗಿ ಗಂಭೀರ ಧ್ವನಿಯಿಂದ ತಮ್ಮ ಹೇಳಿಕೆಯನ್ನು ಓದಿದರು. ನ್ಯಾಯಸ್ಥಾನವು ನಿಶ್ಶಬ್ದವಾಗಿತ್ತು. ಗಾಂಧಿಯವರ ಹೇಳಿಕೆ ಹೀಗಿತ್ತು.

"೧೪೪ ನೇ ಸಕ್ಷನಿನ ಈ ಅಪ್ಪಣೆಯನ್ನು ಪ್ರತಿಭಟಿಸುವ ತೀರ್ಮಾನವನ್ನು ಯಾಕೆ ಮಾಡಿದೆನೆಂಬುದನ್ನು ನ್ಯಾಯಸ್ಥಾನಕ್ಕೆ ತಿಳಿಸುತ್ತೇನೆ. ನನ್ನ ಅಭಿಪ್ರಾಯದಲ್ಲಿ ಇದು ನನಗೂ ಇಲ್ಲಿಯ ಅಧಿಕಾರಿಗಳಿಗೂ ಉಂಟಾಗಿರುವ ಮತ ಬೇಧ. ಜನರಿಗೆ ಉಪಕಾರ ವನ್ನು ಮಾಡುವ ಉದ್ದೇಶ್ಯದಿಂದ ನಾನು ಈ ಪ್ರಾಂತಕ್ಕೆ ಬಂದಿದ್ದೇನೆ. ನೀಲಿಯ ಜಮೀನ್‌ದಾರರು ರೈತರಿಗೆ ಅನ್ಯಾಯ ಮಾಡುತ್ತಿರುವುದರಿಂದ ನಾನು ಬಂದು ಅವರಿಗೆ ಸಹಾಯ ಮಾಡಬೇಕೆಂಬ ರೈತರ ಪ್ರಾರ್ಥನೆಯ ಮೇಲೆ ನಾನು ಬಂದಿದ್ದೇನೆ. ರೈತರ ಸ್ಥಿತಿಯನ್ನು ಸರಿಯಾಗಿ ಎದುರಿಗೆ ತಿಳಿದುಕೊಳ್ಳದೆ ನಾನು ಏನನ್ನೂ ಮಾಡಲಾರೆ. ಆದ್ದರಿಂದ ಸಾಧ್ಯವಾದರೆ ಸರ್ಕಾರದ ಮತ್ತು ನೀಲಿ ಜಮೀನ್‌ದಾರರ ಸಹಾಯದಿಂದ ಈ ಪ್ರಶ್ನೆಯ ವ್ಯಾಸಂಗಮಾಡಲು ನಾನು ಬಂದಿದ್ದೇನೆ. ನನಗೆ ಬೇರೆ ಯಾವ ಉದ್ದೇಶವೂ ಇಲ್ಲ. ನಾನು ಬಂದಿರುವುದರಿಂದ ಆಸ್ತಿಗೂ ಜೀವಕ್ಕೂ ಅಪಾಯವುಂಟಾಗುವುದೆಂಬುದನ್ನು ನಾನು ನಂಬುವುದಿಲ್ಲ. ಇಂತಹ ವಿಷಯಗಳಲ್ಲಿ ನನಗೆ ತಕ್ಕಮಟ್ಟಿನ ಅನುಭವವಿದೆ. ಸರ್ಕಾರದವರು ಈ ವಿಚಾರದಲ್ಲಿ ಬೇರೆಯಾಗಿ ಯೋಚಿಸಿದ್ದಾರೆ. ಅವರ ಕಷ್ಟ ನನಗೆ ಗೊತ್ತಾಗಿದೆ. ಅವರು ತಮಗೆ ತಿಳಿದಸಂಗತಿಗಳ ಆಧಾರದ ಮೇಲೆ ಕೆಲಸಮಾಡುತ್ತಾರೆಂಬುದನ್ನು ಒಪ್ಪುತ್ತೇನೆ. ಕಾನೂನಿಗೆ ಅದುಸಾರವಾಗಿ ನಡೆಯುವ ನನಗೆ, ಸ್ವಾಭಾವಿಕವಾಗಿ ಸರ್ಕಾರದ ಅಪ್ಪಣೆಯಂತೆ ನಡೆಯುವುದೇ ಅಭ್ಯಾಸ. ಆದರೆ ಈಗ ಹಾಗೆ ಮಾಡುವುದರಿಂದ ನಾನು ಯಾರಿಗಾಗಿ ಬಂದೆನೋ ಅವರ ವಿಚಾರದಲ್ಲಿ ಕರ್ತವ್ಯ ಭ್ರಷ್ಟನಾದಂತೆ ಆಗುತ್ತದೆ. ಈಗ ಅವರ ಜತೆಯಲ್ಲಿ

ಇರುವುದರಿಂದ ಮಾತ್ರ, ಅವರ ಸೇವೆ ನಾನು ಮಾಡಬಹುದೆಂದು ನನಗೆ ಅನ್ನಿಸುತ್ತದೆ. ಆದುದರಿಂದ ಈಗ ನಾನು ಹಿಂದಕ್ಕೆ ಹೋಗಲಾರೆ. ನನ್ನನ್ನು ಅವರ ಮಧ್ಯದಿಂದ ಬೇರೆಮಾಡುವ ಭಾರವನ್ನು ನಾನು ಸರ್ಕಾರದ ಮೇಲೆ ಹಾಕಿದ್ದೇನೆ. ಭಾರತದ ಸಾರ್ವಜನಿಕ ಜೀವನದಲ್ಲಿ ನನ್ನಂತಹ ಜವಾಬ್ದಾರಿಯುಳ್ಳ ಮನುಷ್ಯ, ಮೇಲು ಪಂಕ್ತಿ ಹಾಕುವುದರಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕೆಂದು ನನಗೆ ಗೊತ್ತು. ನಾವು ಜೀವಿಸುತ್ತಿರುವ ಈ ರಾಜ್ಯಪದ್ಧತಿಯಲ್ಲಿ, ನನಗೆ ಈಗ ಪ್ರಾಪ್ತವಾಗಿರುವ ಪರಿಸ್ಥಿತಿ ಪ್ರಾಪ್ತವಾದವರೆಲ್ಲ ತಮ್ಮ ಆತ್ಮಗೌರವವನ್ನು ಉಳಿಸಿಕೊಳ್ಳಬೇಕಾದರೆ, ನಾನು ಮಾಡುತ್ತಿರುವಂತೆ ತಾವೂ ಮಾಡಬೇಕೆಂದು ನನಗೆ ಪೂರ್ಣನಂಬಿಕೆ ಇದೆ. ಅಂದರೆ ಕಾನೂನನ್ನು ಉಲಂಘಿಸಿ ಅದರ ಫಲವನ್ನು ಅನಭವಿಸುವುದೇ ಈಗ ನಮ್ಮ ಆತ್ಮ ಗೌರವದ ದಾರಿ.

ನಾನು ಈ ಹೇಳಿಕೆಯನ್ನು ಕೊಡುತ್ತಿರುವುದು, ನನಗೆ ನೀವು ವಿಧಿಸುವ ಶಿಕ್ಷೆಯನ್ನು ಕಡಿಮೆ ಮಾಡಿಕೊಳ್ಳಬೇಕೆಂದಲ್ಲ. ಆದರೆ ನಾನು ಈ ಸರ್ಕಾರಿ ಅಪ್ಪಣೆಯನ್ನು ಮೀರಿರುವುದು ಕಾನೂನಿಗೆ ವಿರೋಧವಾಗಿ ಅಲ್ಲ, ಈ ಕಾನೂನಿಗಿಂತಲೂ ಹೆಚ್ಚಾದ ಉಚ್ಚವಾದ ಮತ್ತೊಂದು ಕಾನೂನಿಗೆ ಅಂದರೆ ಮನಸ್ಸಾಕ್ಷಿ—ಆತ್ಮದ ಕಾನೂನಿಗೆ ವಿಧೇಯನಾಗಿ "ಎಂಬುದನ್ನು ತೋರಿಸುವುದಕ್ಕೆ"

ನ್ಯಾಯಾಧೀಶರಿಗೆ ಬಹಳ ಯೋಚನೆಗಿಟ್ಟುಕೊಂಡಿತು. ಮನಸ್ಸಾಕ್ಷಿ, ಆತ್ಮದ ಕಾನೂನು, ಈ ಮಾತುಗಳನ್ನು ಆ ನ್ಯಾಯಸ್ಥಾನದಲ್ಲಿಯಾರೂ ಉಪಯೋಗಿಸಿರಲಿಲ್ಲ ಹಿಂದೆ ಸಾಕ್ರೆಟಿಸ್, ಗಯಾರ್ಡಿನೊ ಬ್ರೂನೋ, ಏಸುಕ್ರಿಸ್ತ ಮುಂತಾದವರು ಆ ಮಾತುಗಳನ್ನು ಹೇಳಿದ್ದರೆಂಬುದು ಕಥೆ. ನ್ಯಾಯಾಧೀಶರಿಗೆ " ಬ್ರಿಟಿಷ್ ಸರ್ಕಾರವೇ ಶ್ರೇಷ್ಠ ನ್ಯಾಯಸ್ಥಾನ. ಬೇರೆ ನ್ಯಾಯಾಸ್ಥಾನವೆಲ್ಲಿಯದು ! ಆದರೆ ಈಗ ಈ ಮನುಷ್ಯ ಮನಸ್ಸಾಕ್ಷಿಯ ಕಾನೂನು ಎನ್ನುತ್ತಾನೆ. ನಿಶ್ಚಯ. ಅನೇಕ ವೇಳೆ ಕಾನೂನು ಮನಸ್ಸಾಕ್ಷಿಗೆ ವಿರೋಧವಾಗಿರುತ್ತದೆ. ಆದರೆ ಪುಸ್ತಕದ ಸೆಕ್ಷನ್ ಪ್ರಕಾರ ಶಿಕ್ಷೆವಿಧಿಸಬೇಕಾದವನು, ಮನಸ್ಸಾಕ್ಷಿ ಎಂಬ ಮಾತನ್ನು ಕಾನೂನಿನ ವಾದದಲ್ಲಿ ತೆಗೆದುಕೊಳ್ಳಬಹುದೇ ? "

ನ್ಯಾಯಾಧೀಶರಿಗೆ ಏನೂ ತೋರಲಿಲ್ಲ. ಅವರು ಮೂರು ಗಂಟೆಗೆ ತೀರ್ಮಾನ ಹೇಳುವುದಾಗಿ ಹೇಳಿ ಯೋಚಿಸುತ್ತಾ ಕುಳಿತರು. ಮೂರು ಗಂಟೆಗೆ ಗಾಂಧಿಯವರು ನ್ಯಾಯಾಧೀಶರ ಎದುರಿಗೆ ಬಂದಾಗ, ನ್ಯಾಯಾಧೀಶರು ೨೧-೪-೧೯೧೭ ಕ್ಕೆ ತೀರ್ಮಾನ ಹೇಳುವುದಾಗಿ ಹೇಳಿ ಅಪರಾಧಿ ನೂರು ರುಪಾಯಿನ ಜಾಮೀನುಕೊಟ್ಟು, ಅಲ್ಲಿಯವರೆಗೆ ಬಿಡಗಡೆ ಹೊಂದಬಹುದೆಂದರು. ಗಾಂಧಿಯವರು ಜಾಮೀನನ್ನಾಗಲಿ ೧೦೦ ರೂಪಾಯಿಗಳನ್ನಾಗಲಿ ಕೊಡಲು ಒಪ್ಪಲಿಲ್ಲ. ಕೊನೆಗೆ ನ್ಯಾಯಾಧೀಶರು ಗಾಂಧಿಯವರ ಸ್ವಂತ ಜವಾಬ್ದಾರಿಯಮೇಲೆ ಅವರನ್ನು ಬಿಡುಗಡೆಮಾಡಿದರು.

ರೈತರ ಅಹವಾಲುಗಳನ್ನು ಬರೆದುಕೊಳ್ಳುವ ಕೆಲಸ ನಡೆದೇ ಇತ್ತು. ಗಾಂಧಿಯವರೇ ಅನೇಕರ ಹೇಳಿಕೆಗಳನ್ನು ಬರೆದು ಕೊಂಡರು. ೧೯ ನೇ ತಾರೀಖು ಸರ್ಕಾರದವರು ಗಾಂಧಿಯವರ ಮೇಲೆ ಹಾಕಿದ್ದ ಮೊಕದ್ದಮೆಯನ್ನು ಹಿಂದಕ್ಕೆ ತೆಗೆದುಕೊಂಡು ಅವರಿಗೆ ಎಲ್ಲಸಹಾಯವನ್ನು ಕೊಡುವುದಾಗಿ ನಿಶ್ಚಯಿಸಿರುವಂತೆ ಸಿ. ಎಫ್. ಆಂಡ್ರೂಸ್‌ರಿಂದ ಪತ್ರಬಂತು. ಆಗ ಆಂಡ್ರೂಸ್‌ರವರು ಫೀಜಿ ದ್ವಿಪದ ಭಾರತೀಯರ ಸ್ಥಿತಿಗತಿಗಳ ವಿಚಾರವನ್ನು ತಿಳಿಯುವುದಕ್ಕಾಗಿ ಅಲ್ಲಿಗೆ ಹೊರಟಿದ್ದರು. ಗಾಂಧಿಯವರು, "ಆಂಡ್ರೂಸ್‌ರವರು ತಮ್ಮ ಕಾರ್ಯಕ್ರಮವನ್ನು ಬದಲಾಯಿಸಬಾರದೆಂದೂ ಫೀಜಿಗೆ ಹೊರಡಬೇಕೆಂದೂ " ಹೇಳಿದರು. ಆದರೆ ಕೆಲವು ಕೆಲಸಗಾರರಿಗೆ ಚಂಪಾರಣ್ಯದ ಇತ್ಯರ್ಥವಾಗುವವರೆಗೆ ಆಂಡ್ರೂಸ್‌ರವರು ಬೀಹಾರಿನಲ್ಲಿಯೇ ಇದ್ದರೆ ಉತ್ತಮವೆಂದು ತೋರಿತು. ಈ ವಿಚಾರವನ್ನು ಆಂಡ್ರೂಸ್‌ರವರಿಗೆ ತಿಳಿಸಿದಾಗ ಅವರು ಎಂದಿನಂತೆ " ಗಾಂಧಿಯವರು ಹೇಳಿದಂತೆ ನಡೆಯುತ್ತೇನೆ" ಎಂದರು. ಆಂಡ್ರೂಸ್‌ರವರು ಇರಬೇಕೆಂಬುದು ಕೆಲಸಗಾರರ ಇಷ್ಟವೆಂದು ಕೇಳಿ ಗಾಂಧಿಯವರು " ಒಬ್ಬ ಬಿಳಿಯ ಮನುಷ್ಯ ನಮ್ಮಲ್ಲಿ ಇದ್ದರೆ ನಮಗೆ ಸರ್ಕಾರದವರು ಹೆಚ್ಚು ರಿಯಾಯ್ತಿ ತೋರಿಸುತ್ತಾರೆಂದು ನೀವು ತಿಳಿದಂತೆ ಕಾಣುತ್ತೆ. ಅದೇ ನಮ್ಮ ದೌರ್ಬಲ್ಯ. ನಮ್ಮ ಸ್ವಂತ ಶಕ್ತಿಯಿಂದ ನಾವು ಗೆಲ್ಲಬೇಕು. ಇತರರ

ಮೇಲೆ ಅವಲಂಬಿಸಿದರೆ ಯಾವತ್ತಿದ್ದರೂ ನಮಗೆ ಸೋಲು ಖಂಡಿತ. ಈ ಕಾರಣಕ್ಕಾಗಿಯೇ ಆಂಡ್ರೂಸ್ ಈ ಸ್ಥಳ ಬಿಡಬೇಕು" ಎಂದರು. ಕೊನೆಗೆ ಮರುದಿನ ಬೆಳಿಗ್ಗೆ ಆಂಡ್ರೂಸ್‌ರವರು ಫೀಜಿಗೆ ಹೊರಟು ಹೋದರು. ೨೧-೪-೧೯೧೭ ರ ಬೆಳಿಗ್ಗೆ ಸರ್ಕಾರದವರು ಗಾಂಧಿಯವರ ಮೇಲೆ ಹಾಕಿದ್ದ ಮೊಖದ್ದಮೆಯನ್ನು ಹಿಂದಕ್ಕೆ ತೆಗೆದುಕೊಂಡುದಾಗಿ ತಿಳಿಯಿತು. ಈ ಸಂದರ್ಭದಲ್ಲಿ ಗಾಂಧಿಯವರು ೪,೦೦೦ ರೈತರಿಂದ ಅಹವಾಲುಗಳನ್ನು ಬರೆದುಕೊಂಡರು. ಅನೇಕ ರೈತರು ಕಾರ್ಖಾನೆಯ ಯಜಮಾನರ ಎದುರಿಗೆ ತಮ್ಮ ಕಷ್ಟಗಳನ್ನು ಹೇಳಿದರು. ಗಾಂಧಿಯವರು ಚಂಪಾರಣ್ಯಕ್ಕೆ ಬರುವುದಕ್ಕೆ ಮುಂಚೆ, ರೈತರಲ್ಲಿ ಈ ಧೈರ್ಯವಿದೆಯೆಂದು ಯಾರೂ ತಿಳಿದಿರಲಿಲ್ಲ.

ಕೊನೆಯಲ್ಲಿ ಸರ್ಕಾರದವರು ರೈತರ ಕಷ್ಟಗಳನ್ನು ಅರಿತು ಪರಿಹಾರಗಳನ್ನು ಯೋಚಿಸಲು ಒಂದು ಸಮಿತಿಯನ್ನು ಏರ್ಪಡಿಸಿ, ಗಾಂಧಿಯವರನ್ನು ಒಬ್ಬ ಸದಸ್ಯರನ್ನಾಗಿ ನಿಯಮಿಸಿದರು. ಅದುವರೆಗೆ ರೈತರ ರಕ್ತವನ್ನು ಹೀರಿ ಸುಖವನ್ನು ಅನುಭವಿಸಿದ್ದ ಕಾರ್ಖಾನೆಯ ಯಜಮಾನರು, ಗಾಂಧಿ ಆ ಸಮಿತಿಯಲ್ಲಿ ಇರದಂತೆ ಬೇಕಾದ ಪಿತೂರಿ ನಡೆಸಿದರು. ಪಾಯಿನಿಯರ್ ಪತ್ರಿಕೆಯಲ್ಲಿ ಈ ರೀತಿ ಪ್ರಕಟವಾಯಿತು : "ಯೂರೋಪಿಯನ್ ಜಮೀನ್ದಾರರೂ ಹಿಂದೂ ರೈತರೂ ಇರುವ ಈ ಪ್ರದೇಶ (ಚಂಪಾರಣ್ಯ) ಚಳುವಳಿಗೆ ಉತ್ತಮವಾದ ಪ್ರದೇಶವಾಗಿ ಗಾಂಧಿಗೆ ತೋರಿದೆ. ಗಾಂಧಿ ಮನುಷ್ಯನೇನೊ ಒಳ್ಳೆಯವನೆ, ಆದರೆ ಅವನೊಬ್ಬ ಅರೆಹುಚ್ಚ. ದಕ್ಷಿಣ ಆಫ್ರಿಕದಲ್ಲಿ ತನಗೆ ಉಂಟಾದ ಅಲ್ಪ ಸ್ವಲ್ಪ ಜಯದಿಂದ ಅವನ ತಲೆ ತಿರುಗಿದೆ. ದುಷ್ಟನಿಗ್ರಹಕ್ಕಾಗಿ ದೇವರು ತನ್ನನ್ನು ನಿಯಮಿಸಿದ್ದಾರೆಂಬ ಹುಚ್ಚು ಅವನ ತಲೆಗೆ ಹತ್ತಿದೆ. ಚಂಪಾರಣ್ಯದ ರೈತರನ್ನು ತುಳಿಯುವುದರಲ್ಲಿ ಯೂರೋಪಿಯನ್ ಅಧಿಕಾರಿಗಳೂ ಅನಧಿಕಾರಿಗಳೂ ಒಂದೇ ಎಂದು ತೋರಿಸಿ ಬ್ರಿಟಿಷ್ ರಾಜನಿಗೆ ಕೆಟ್ಟ ಹೆಸರು ತರುವುದೇ ಇವನಿಗೆ ಬೇಕಾಗಿದೆ. ರೈತರನ್ನು ಕಟ್ಟಿಕೊಂಡು ಇವನಿಗೆ ಆಗಬೇಕಾದುದೇನು? ತಮ್ಮ ಸ್ವಾರ್ಥಮಾತ್ರ; ಚಂಪಾರಣ್ಯದ ರೈತರ ಮತ್ತು ಜಮೀನುದಾರರ ಸೌಖ್ಯಕ್ಕೆ ಬೇಕಾದ ದಾರಿ

ಒಂದೇ. ಅದೇ ಗಾಂಧಿಯವರನ್ನು ಚಂಪಾರಣ್ಯದಿಂದ ತತ್‌ಕ್ಷಣ ಹೊರ ಡಿಸುವುದು."

೧೯೧೫ ನೆ ಇಸವಿಯಲ್ಲಿ ಇಂತಹ ಒಂದು ಸಮಿತಿಯನ್ನು ನಿಯಮಿಸಬೇಕೆಂದು ಶ್ರೀ ಬ್ರಜಕಿಶೋರ್‌ಪ್ರಸಾದರು ಸರ್ಕಾರಕ್ಕೆ ಸೂಚಿಸಿದಾಗ, ಯೂರೋಪಿಯನ್ ಜಮಿನ್ದಾರರ ಪ್ರತಿನಿಧಿಗಳು ಆ ಸಲಹೆಗೆಯನ್ನು ತೀವ್ರವಾಗಿ ಪ್ರತಿಭಟಿಸಿದ್ದರು. ಸರ್ಕಾರದವರು ಈಗ ಕಲ್ಕತ್ತೆಯ ಯೂರೋಪಿಯನ್ ಅಸೋಸಿಯೇಷನ್ ಮುಂತಾದ ಯಾವ ಸಂಸ್ಥೆಗಳ ವಿರೋಧವನ್ನೂ ಲಕ್ಷಿಸದೆ ಗಾಂಧಿಯವರನ್ನು ಸಮಿತಿಯ ಸದಸ್ಯರನ್ನಾಗಿ ನಿಯಮಿಸಿದರು. ಸಮಿತಿಯ ತೀರ್ಮಾನಗಳು ಪ್ರಕಟವಾಗುವುದಕ್ಕೆ ಮುಂಚೆ, ಆ ತೀರ್ಮಾನಗಳೆಲ್ಲಾ ತಮಗೆ ವಿರೋಧವಾಗುವುವೆಂದು ತಿಳಿದು, ಯೂರೋಪಿಯನ್ ಜಮಿನ್ದಾರರು ಸಮಿತಿಯನ್ನೂ ಅದರ ಕಾರ್ಯಕ್ರಮವನ್ನೂ ಖಂಡಿಸತೊಡಗಿದರು. ಅವರು ಇಂಗ್ಲಿಷ್ ಮನ್, ಸ್ಟೇಟ್ಸ್‌ಮನ್, ಮುಂತಾದ ಪತ್ರಿಕೆಗಳಲ್ಲಿ ಸಮಿತಿಯ ಸದಸ್ಯರ ಮೇಲೆ ಉಗ್ರವಾಗಿ ಟೀಕಿಸಿದರು. ಸರ್ಕಾರದವರು ಸರಿಯಾದ ಪ್ರತ್ಯುತ್ತರವನ್ನು ಕೊಟ್ಟರು. ಯೂರೋಪಿಯನ್ ಜಮಿನ್ದಾರರು ಸರ್ಕಾರದವರು ತಮ್ಮಲ್ಲಿ ನಾವು ಇಟ್ಟಿದ್ದ ನಂಬಿಕೆಗೆ ಅನರ್ಹರಾಗಿ ವರ್ತಿಸಿದ್ದಾರೆ ಎಂದು ಪ್ರಕಟಿಸಿದರು. ಸರ್ಕಾರದವರು ಒಂದು ಸಲ ನ್ಯಾಯವಾಗಿ ನಡೆಯಬೇಕೆಂದು ಮನಸ್ಸುಮಾಡಿದರೂ, ಈ ದರೋಡೆಗಾರರಿಗೆ ಅದು ಸಹಿಸಲಿಲ್ಲ, ಸಮಿತಿಯು, ಜಮಿನ್ದಾರರು ವಸೂಲು ಮಾಡಿದ್ದ "ತವನ್ "ಹಣವನ್ನು ರೈತರಿಗೆ ವಾಪಸು ಕೊಡಬೇಕೆಂದು ತೀರ್ಮಾನಿಸಿತು. ಇದರಿಂದ ಮೋತಿಹಾರಿಯ ಕಾರ್ಖಾನೆಯ ಯಜಮಾನರಾದ ಇರ್ವಿನ್‌ರವರೊಬ್ಬರೇ ರೈತರಿಗೆ ೪೦ ಸಾವಿರ ರೂಪಾಯಿ ಹಿಂದಕ್ಕೆ ಕೊಡಬೇಕಾಯಿತು. ಅಷ್ಟು ಹಣವನ್ನು ರೈತರಿಗೆ ಒಬ್ಬ ಜಮಿನ್ದಾರರು ಹಿಂದಕ್ಕೆ ಕೊಡಬೇಕಾದರೆ, ರೈತರಿಂದ ಇನ್ನೂ ಎಷ್ಟು ಹೆಚ್ಚಾಗಿ ಅವರು ವಸೂಲ್ಮಾಡಿರಬೇಕೆಂಬುದು ಗೊತ್ತಾಗುತ್ತದೆ.

ಕೆಲವು ರೈತರು ಜಮಿನ್ದಾರರಲ್ಲಿ ನೀಲಿ ಬೆಳೆಯುವುದಾಗಿ ಕರಾರು ಮಾಡಿಕೊಂಡಿದ್ದರು. ಆದರೆ ಕಾರ್ಖಾನೆಯವರು ನಿಯಮಿಸಿದ

ಬೆಲೆಗೆ ನೀಲಿಯನ್ನು ಮಾರಿದರೆ ಅದರಿಂದ ಅವರಿಗೆ ಬಹಳ ನಷ್ಟ ಉಂಟಾಗುತ್ತಿದ್ದಿತು. ಆಗ ಅವರು ತಮ್ಮ ಜಮೀನಿನಲ್ಲಿ ಆಹಾರ ಪದಾರ್ಥಗಳನ್ನು ಬೆಳೆದುಕೊಳ್ಳುವುದಾಗಿಯೂ ತಮ್ಮ ಕರಾರನ್ನು ರದ್ದುಪಡಿಸಬೇಕೆಂದೂ ಯೂರೋಪಿಯನ್ ಪ್ಲಾಂಟರುಗಳನ್ನು ಕೇಳಿದರೆ, ಪ್ಲಾಂಟರುಗಳು ಸಾಧ್ಯವಾದಷ್ಟು ಅವರಿಂದ ಹಣ ವಸೂಲು ಮಾಡಿಕೊಂಡು ಕರಾರನ್ನು ರದ್ದುಪಡಿಸುತ್ತಿದ್ದರು. ಇದೆ 'ತವನ್.' ಈ ವಸೂಲಿಯನ್ನು ಕಂದಾಯದ ಮೇಲೆ ಏರಿಸುತ್ತಿದ್ದರು. ಪ್ಲಾಂಟರುಗಳು, ರೈತರನ್ನು ಮೊದಲು ನೀಲಿ ಬೆಳೆಯುವಂತೆ ಬಲಾತ್ಕರಿಸುವುದಕ್ಕೇ ಕಾರಣವಿರಲಿಲ್ಲ. ಒಂದುವೇಳೆ ಬಲಾತ್ಕಾರಕ್ಕೆ ರೈತರು ಒಪ್ಪಿದ್ದರೂ, ಈಗ ತಾವಾಗಿಯೇ ನೀಲಿ ಕಾರ್ಖಾನೆಯನ್ನು ಮುಚ್ಚುತ್ತಿದ್ದ ಪ್ಲಾಂಟರುಗಳು, ನೀಲಿ ಬೆಳೆಯದಿದ್ದ ಕಾರಣದಿಂದ ರೈತರಿಂದ ಎಕರೆಗೆ ಇಷ್ಟು ಎಂದು ದಂಡವನ್ನು ವಸೂಲ್ಮಾಡಲು ಕಾರಣವಿರಲಿಲ್ಲ. ಚಂಪಾರಣ್ಯದ ಪ್ರಶ್ನೆಯೆಲ್ಲಾ ಇದೇ ಆಗಿದ್ದಿತು.

೪

ಚಂಪಾರಣ್ಯ, ಬೀಹಾರದಲ್ಲಿ ೨,೦೦೦ ಚದುರ ಮೈಲಿ ವಿಸ್ತೀರ್ಣದ ಒಂದು ಡಿಸ್ಟ್ರಿಕ್ಟ್. ಇದು ಬೆಟ್ಟಿಯ್ಯರಾಜ್, ರಾಮನಗರ್‌ರಾಜ್, ಮಧುಬನ್‌ರಾಜ್ ಎಂಬ ಮೂವರು ಜಮೀನ್ದಾರರಿಗೆ ಸೇರಿತ್ತು. ಈ ಜಮೀನುದಾರರು, ತಮ್ಮ ಜಮೀನನ್ನು ಭಾಗಮಾಡಿ, ಸಣ್ಣ ಸಣ್ಣ ಜಮೀನ್ದಾರರಿಗೆ, ಕಂಟ್ರಾಕ್ಟ್‌ನಂತೆ ವಹಿಸಿ, ಅವರಿಂದ ಗೊತ್ತಾದ ಉತ್ಪತ್ತಿಯನ್ನು ತೆದುಕೊಂಡು ಸ್ವಸ್ಥವಾಗಿರುತ್ತಿದ್ದರು. ೧೭೯೩ರ ವರೆಗೆ, ಜಮೀನ್ದಾರರಿಂದ ಗುತ್ತಿಗೆಗೆ ಮಾಡಿಕೊಳ್ಳುತ್ತಿದ್ದವರು ಭಾರತೀಯರೇ. ಆದರೆ ಅದರಿಂದ ಈಚೆಗೆ ಕೆಲವು ಯೂರೋಪಿಯನರೂ ಗುತ್ತಿಗೆಗೆ ಮಾಡಿಕೊಳ್ಳಲು ಪ್ರಾರಂಭಿಸಿದರು. ಆ ಪ್ರದೇಶದ ಗುತ್ತಿಗೆಗಳನ್ನು ಜಮೀನುದಾರರಿಗೆ ಅವರು ಕೊಟ್ಟು, ತಾವು ಅಲ್ಲಿ ನೀಲಿ ಕಬ್ಬು ಮುಂತಾದುವುಗಳನ್ನು ಬೆಳೆಯಲು ಪ್ರಾರಂಭಿಸಿದರು. ಬರಬರುತ್ತಾ ಯೂರೋಪಿಯನ್ ಗುತ್ತಿಗೆದಾರರ ಸಂಖ್ಯೆ ಹೆಚ್ಚಾಯಿತು. ಬೆಟ್ಟಿಯ್ಯರಾಜನು ೧೮೮೮ ರಲ್ಲಿ ಯೂರೋಪಿಯನ್ ಗುತ್ತಿಗೆದಾರರ

ಮೂಲಕ ಇಂಗ್ಲೆಂಡಿನಲ್ಲಿ ೮೫ ಲಕ್ಷ ರೂಪಾಯಿಗಳ ಸಾಲವನ್ನು ಏಳಿಸಿದನು. ಅದನ್ನು ತೀರಿಸುವುದಕ್ಕೆದಾರಿ ಇಲ್ಲದುದರಿಂದ ವರುಷಕ್ಕೆ ೫॥ ಲಕ್ಷ ರೂಪಾಯಿ ಭೂಗಂದಾಯ ಉತ್ಪತ್ತಿಯ ಜಮಿನುಗಳನ್ನು ಯೂರೋಪಿಯನ್ ಪ್ಲಾಂಟರುಗಳಿಗೆ ಕೊಟ್ಟು, ಸಾಲ ತೀರುವವರೆಗೆ ಆ ಉತ್ಪತ್ತಿಯನ್ನು ಅವರು ಸಾಲದ ಕಡೆಗೆ ಕೊಡುತ್ತಾ ಅನುಭವಿಸಿಕೊಂಡು ಬರಬೇಕೆಂಬ ಕರಾರಿಗೆ ಒಪ್ಪಿದನು. ಯೂರೋಪಿಯನ್ ಪ್ಲಾಂಟರುಗಳಿಗೆ ಹೀಗೆ ಶಾಶ್ವತವಾದ ಸ್ಥಾನ ಸಿಕ್ಕಿದುದರಿಂದ, ಅವರೇ ಸ್ವಲ್ಪ ಹೆಚ್ಚು ಕಡಿಮೆ ಬೆಟ್ಟಯ್ಯರಾಜನ ಸ್ಥಳವನ್ನು ಆಕ್ರಮಿಸಿಕೊಂಡರು. ಸುಮಾರು ೭೦ ಯೂರೋಪಿಯನ್ ಕಾರ್ಖಾನೆಗಳು ಡಿಸ್ಟ್ರಿಕ್ಟಿನಲ್ಲಿ ಆದವು ರಾಮನಗರ್ ರಾಜರೂ ಸಹ ಹೀಗೆಯೇ ತಮ್ಮ ಜಮಿನ್ದಾರಿಯ ಕೆಲವು ಭಾಗಗಳನ್ನು ಯೂರೋಪಿಯನ್ ಕಾರ್ಖಾನೆಗಳಿಗೆ ಶಾಶ್ವತವಾಗಿ ವಹಿಸಿದರು. ೧೯೨೮ರವರೆಗೆ ಡಿಸ್ಟ್ರಿಕ್ಟ್‌ನ ಅರ್ಧ ಭಾಗ ಯೂರೋಪಿಯನ್ ಪ್ಲಾಂಟರುಗಳ ಸ್ವಾಧೀನದಲ್ಲಿರುವುದಾಗಿದ್ದಿತು. ಬೆಟ್ಟಯ್ಯರಾಜರು, ರಾಮನಗರ ರಾಜರು, ತಮ್ಮ ಬಾಬಿನ ಗುತ್ತಿಗೆ ಹಣಕ್ಕೆ ಜವಾಬ್ದಾರರು. ರೈತರಿಗೂ ಅವರಿಗೂ ಸಂಬಂಧವಿಲ್ಲ. ರೈತರಿಗೂ ಯೂರೋಪಿಯನ್ ಪ್ಲಾಂಟರುಗಳಿಗೂ ಸಂಬಂಧ. ಆ ಪ್ಲಾಂಟರುಗಳು ರೈತರನ್ನು ಮೊದಲು ಬಲಾತ್ಕಾರವಾಗಿ ನೀಲಿ ಬೆಳೆಯಲು ಒಪ್ಪಿಸಿ, ಅನಂತರ ನೀಲಿಯಲ್ಲಿ ಫಾಯಿದೆಯಿಲ್ಲದುದರಿಂದ ಅದನ್ನು ಬೆಳೆಯಬೇಡವೆಂದು ಹೇಳಿ, ನೀಲಿಯನ್ನು ಬೆಳೆಯದುದರಿಂದ ಉಂಟಾದ ನಷ್ಟ ಎಕರೆಗೆ ಇಷ್ಟು ಕೊಡಬೇಕು, ಇಲ್ಲದಿದ್ದರೆ ನಿನಗೆ ಬೇರೆ ಆಹಾರ ಪದಾರ್ಥಗಳನ್ನು ನೀನು ಬೆಳೆಯಲು ಅವಕಾಶ ಕೊಡುವುದಿಲ್ಲ. ಎಂದು ಹೇಳಿ ೧೯೧೬ ರ ಹೊತ್ತಿಗೆ ಒಬ್ಬೊಬ್ಬ ಕಾರ್ಖಾನೆಯವರು ರೈತರಿಂದ ೪-೫ ಲಕ್ಷ ರೂ. ದಂಡ ವಸೂಲ್ಮಾಡಿದ್ದರು. ಬೆಟ್ಟಯ್ಯ ರಾಜರೂ ರಾಮನಗರ ರಾಜರೂ ಸೋಮೇಶ್ವರಶತಕದಲ್ಲಿ ಹೇಳಿರುವಂತೆ 'ಪುರದುರ್ಗಂಗಳ ಬಲ್ಮೆ ಮಾಡದೆ ಜನಕ್ಷೋಭಂಗಳಂ ನೋಡದೆ . . . ಮದನಂಗಾಳಾಗಿಹಂ ಧೊರೆಯೇ ಸೊಕ್ಕಿದ ಕೋಣನೈ' ಎಂಬಂತೆ ಸುಖವಾಗಿದ್ದರು.

ಗಾಂಧಿ ಸಮಿತಿಯ ತೀರ್ಮಾನಗಳನ್ನು ಒಳಪಡಿಸಿ ಬೀಹಾರ್ ಸರ್ಕಾರವು ಚಂಪಾರಣ್ಯ ವ್ಯವಸಾಯಗಾರರ ಮಸೂದೆಯನ್ನು ಅಂಗೀಕರಿಸಿ ರೈತರ ಕಷ್ಟವನ್ನು ಬಿಡುಗಡೆಮಾಡಿತು. ಭಾರತದಲ್ಲಿ ಇದು ಸತ್ಯಾಗ್ರಹದ ಮೊದಲನೆಯ ಜಯ. ಅನಂತರ ಕೈರಾದಲ್ಲಿಯೂ ಅಹಮ್ಮದಾಬಾದ್ ಗಿರಣಿಯ ಕೂಲಿಗಾರರ ಸಂಬಂಧದಲ್ಲಿ ನಡೆದ ಚಳುವಳಿಯಲ್ಲಿಯೂ, ಗಾಂಧಿಯವರ ಸತ್ಯಾಗ್ರಹ ತತ್ತ್ವಕ್ಕೆ ಅಂದರೆ ನಮ್ಮ ಕಷ್ಟದಿಂದ ಎದುರಾಳಿಯನ್ನು ನಮ್ಮ ದಾರಿಗೆ ಒಲಿಸಿಕೊಳ್ಳಬೇಕೆಂಬ ಸತ್ಯಕ್ಕೆ ಜಯವಾಯಿತು. ೧೯೧೮ ರಲ್ಲಿ ಮಹಾಯುದ್ಧವು ಮುಗಿಯಿತು. ಪ್ರಪಂಚದಲ್ಲಿ ಪ್ರಜಾಪಕ್ಷಕ್ಕೆ ಜಯವಾಯಿತೆಂದು ಗೆದ್ದ ರಾಷ್ಟ್ರಗಳೂ ಬ್ರಿಟಿಷರೂ ಸಾರಿದರು. ಯುದ್ಧಕ್ಕೆ ಗಾಂಧಿಯವರೂ ಸಹಾಯಮಾಡಿದ್ದರು. ಬ್ರಿಟಿಷರಿಂದ ಭಾರತಕ್ಕೆ ಒಳ್ಳೆಯದಾಗುವುದೆಂಬ ಅವರ ನಂಬಿಕೆ ಕಡಿಮೆಯಾಗಿರಲಿಲ್ಲ. ಭಾರತೀಯರಂತೂ, ಬ್ರಿಟಿಷರಿಗೆ ಜಯವಾದ ಕೂಡಲೆ, ಅವರು ಅದುವರೆಗೆ ಹೇಳುತ್ತಿದ್ದ ಜಗತ್ಕಲ್ಯಾಣವನ್ನು ಕೈಯಲ್ಲಿ ಮಾಡಿ ತೋರಿಸಿ ಭಾರತಕ್ಕೆ ಅಲ್ಪ ಸ್ವಲ್ಪವಾದರೂ ಸ್ವಾತಂತ್ರ್ಯವನ್ನು ಕೊಡುವರೆಂದು ತಿಳಿದಿದ್ದರು. ಆದರೆ ಯುದ್ಧ ಮುಗಿದ ಮೇಲೆ, ಯಾವ ರಾಜ್ಯಗಳ ದುರಾಶೆಯನ್ನು ತಾವು ಗೆದ್ದೆವೆಂದು ಬ್ರಿಟಿಷರು, ಹೇಳುತ್ತಿದ್ದರೋ, ಆ ದುರಾಸೆಯು ಅವರಲ್ಲಿ ಪೂರ್ಣವಾಗಿ ತುಂಬಿರುವುದು ಭಾರತೀಯರಿಗೂ ಜಗತ್ತಿಗೂ ತೋರಿತು. ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವುದಾಗಿ ಬ್ರಿಟಿಷ್ ಪ್ರಧಾನಾಮಾತ್ಯರು ಮಾಡಿದ್ದ ವಾಗ್ದಾನವನ್ನು ಬ್ರಿಟಿಷ್ ಸರ್ಕಾರವು ಹುಲ್ಲು ಕಡ್ಡಿಯಂತೆ ತಳ್ಳಿಹಾಕಿತು. ಆಮೇಲೆ ನಡೆದ ವಿಚಾರಗಳು ಎಲ್ಲರಿಗೂ ತಿಳಿದೇ ಇವೆ. ರೌಲೆಟ್ ಕಾಯಿದೆ; ಹರತಾಳ; ಡಿಲ್ಲಿ ಅಮೃತಸರಗಳಲ್ಲಿ ಪೋಲಿಸರು ಗುಂಡು ಹಾರಿಸಿ ಅನೇಕರನ್ನು ಕೊಂದುದು; ಅಮೃತಸರ ಅಹಮದಾಬಾದಿನಲ್ಲಿ ಜನರ ದಂಗೆ, ಜಲಿಯನ್‌ವಾಲಾ ಬಾಗ್ ನರಮೇಧ, ಪಂಜಾಬಿನಲ್ಲಿ ಮಾರ್ಷಿಯಲ್‌ಲಾ, ಡೈಯರನ ಪೌರುಷ. ೧೯೧೯ ನೇ ಇಸವಿಯಲ್ಲಿ ಅಮೃತಸರ ಕಾಂಗ್ರೆಸ್‌ನಲ್ಲಿ ಅಸಹಕಾರದ ನಿರ್ಣಯ ಅಂಗೀಕೃತವಾಯಿತು. ಅಮೃತಸರದ

ಕಾಂಗ್ರೆಸ್ಸು ಅನೇಕ ದೃಷ್ಟಿಯಿಂದ ಪ್ರಾಮುಖ್ಯವಾಗಿದ್ದಿತು. ಲೋಕ ಮಾನ್ಯ ತಿಲಕರು ತಮ್ಮ ಅನುಯಾಯಿಗಳೊಡನೆ ಕಾಂಗ್ರೆಸ್ಸಿಗೆ ಬಂದು ಅನೇಕ ಚರ್ಚೆಗಳಲ್ಲಿ ಭಾಗಿಗಳಾದರು. ಆದರೆ ಮಹಾತ್ಮ ಗಾಂಧಿಯವರ ಕಡೆ ದೇಶವು ನಾಯಕತ್ವಕ್ಕಾಗಿ ನೋಡುತ್ತಿದ್ದಿತೆಂಬುದರಲ್ಲಿ ಸಂದೇಹ ವಿಲ್ಲ. ಮಹಾತ್ಮ ಗಾಂಧಿಕಿ ಜೈ ಎಂಬ ಧ್ವನಿ ಭಾರತದಲ್ಲಿ ಎಲ್ಲೆಲ್ಲೂ ಪ್ರತಿಧ್ವನಿತವಾಗತೊಡಗಿತು ಅಸಹಕಾರದ ಚಳುವಳಿ ಎಲ್ಲೆಲ್ಲೂ ಬಲ ವಾಯಿತು. ಭಾರತದ ರಾಜಕೀಯದಲ್ಲಿ ಹೊಸದಾರಿಯೂ ಹೊಸ ಕ್ರಾಂತಿಯೂ ಉಂಟಾಯಿತು.

೫

ಸುಮಾರು ಒಂದು ನೂರು ಐವತ್ತು ವರುಷಗಳಿಂದ ಪರದಾಸ್ಯ ದಲ್ಲಿ ಮಲಗಿದ್ದ ಭಾರತ ಇದ್ದಕ್ಕಿದ್ದಂತೆ ಎಚ್ಚೆತ್ತಿತು. ಭಾರತದ ಸ್ವಾತಂತ್ರದ ಸೂರ್ಯ ಉದಯಿಸಿದನು. ನಮ್ಮ ಸ್ವಾತಂತ್ರ್ಯಕ್ಕಿಂತ ಹಿರಿದಾದುದು ಯಾವುದೂ ಇಲ್ಲ. ಸ್ವಾತಂತ್ರವೇ ಸ್ವರ್ಗ" ಎಂಬ ಮಾತು ಭಾರತೀಯರೆಲ್ಲರ ರಕ್ತನಾಳಗಳಲ್ಲೂ ಪಸರಿಸತೊಡಗಿತು. ಮಂತ್ರದಿಂದ ಮುಗ್ಧವಾಗಿದ್ದಂತೆ ಅನೇಕ ವರುಷಗಳಿಂದ ಸುಪ್ತವಾಗಿದ್ದ ಭಾರತ, ಮುಚ್ಚಿದ್ದ ಕಣ್ಣನ್ನು ತೆರೆಯಿತು. "ಬ್ರಿಟಿಷ್ ಚಕ್ರಾಧಿಪತ್ಯ ಜಗತ್ತಿನಲ್ಲಿ ಅಂತ್ಯಂತ ಪ್ರಬಲವಾದ ಚಕ್ರಾಧಿಪತ್ಯ. ಇದನ್ನು ಎದುರಿ ಸಲು ನಮ್ಮಲ್ಲಿ ಮದ್ದು ಗುಂಡು ಎಲ್ಲಿದೆ? ಮದ್ದು ಗುಂಡು ಇಲ್ಲದುದರಿಂದ ಬರಿಯ ಅಹವಾಲುಗಳನ್ನು ಹೇಳಿಕೊಳ್ಳಬೇಕು. ಆದರೆ ಅಹವಾಲುಗ ಳನ್ನು ಹೇಳಿ ಹೇಳಿ ೧೫೦ ವರುಷ ಕಳೆಯಿತು. ದಾಸ್ಯದ ಶ್ಯಂಖಲೆಗಳು ಬಿಗಿಯಾದವೇ ಹೊರತು ಸಡಿಲವಾಗಲಿಲ್ಲ. ಜನರಿಗೆ ಯಾವ ರೀತಿ ದಬ್ಬಾಳಿಕೆಯನ್ನು ಎದುರಿಸಬೇಕು ಎಂಬುದು ತಿಳಿದಿರಲಿಲ್ಲ. ಕಷ್ಟವನ್ನು ಸಹಿಸಿದಲ್ಲದೆ ನಮಗೆ ಮೋಕ್ಷವಿಲ್ಲ ಎಂದು ತಿಳಿದರೂ, ಆ ಕಷ್ಟವನ್ನು ಫಲಸಾಧನೆಗೆ ಹೇಗೆ ಉಪಯೋಗಿಸಬೇಕು. ಕಷ್ಟವನ್ನು ಪ್ರೇರಿಸುವ ಆದ ರ್ಶಯಾವುದು. ಮದ್ದು ಗಂಡುಗಳಿಗೆ ಎದುರಾಗಿ ಮಾತು ನಿಲ್ಲುವುದೆ? ದೇಹ ತನಗೆ ಬರುವ ಕಷ್ಟಗಳನೆಲ್ಲಾ ಎದುರಿಸಿ ನಿಂತು, ದೌರ್ಬಲ್ಯಕ್ಕೆ ಒಳಗಾಗದೇ ಆತ್ಮದ ಬಲವನ್ನು ಪ್ರಕಟಿಸಬಲ್ಲದೆ ? ಇದಕ್ಕೆ ದಾರಿಯಾ

ವುದು ? ಮಾರ್ಗ ದರ್ಶಕ ಯಾರು ? ”

ಇಂತಹ ಸಮಯಲ್ಲಿ, ಭಾರತದಲ್ಲಿ ಪೂರ್ವದ ಋಷಿಗಳು ಹೇಳುತ್ತಿದ್ದ ಅದ್ಭುತ ವಾಕ್ಯಗಳು ಕೇಳಲು ಪ್ರಾರಂಭವಾದುವು. ಗಾಂಧಿಯವರು ಹೇಳಿದರು “ನಮಗೆ ಆಯುಧಗಳಿಲ್ಲ ನಿಜ. ನಾವು ಎದುರಾಳಿಯನ್ನು ಕೊಲ್ಲಕೂಡದು ನಿಜ. ಆದರೆ ನಮ್ಮ ಧ್ಯೇಯಸಾಧನೆಗಾಗಿ ನಾವೇ ಸಾಯಬಹುದು. ನಾವು ಒಂದು ಕೆಲಸ ಮಾಡಬೇಕೆಂದು ಒಂದು ಶಕ್ತಿ ಪ್ರೇರಿಸುತ್ತದೆ. ಅದನ್ನು ಮಾಡಲು ನಾವು ಒಪ್ಪುವುದಿಲ್ಲ. ಆ ಶಕ್ತಿ ಅಥವಾ ಆ ಮನುಷ್ಯ ನಮ್ಮನ್ನು ಕೊಲ್ಲುತ್ತಾನೆ. ಜಯಿಸಿದರಾರು ? ಅವನೋ ನಾವೊ ; ನಾವೇ ! ಅವನು ಎಷ್ಟು ಶಕ್ತನಾದರೂ ನಮ್ಮಿಂದ ಕೆಲಸವನ್ನು ಮಾಡಿಸಲು ಅವನಿಗೆ ಆಗಲಿಲ್ಲ. ನಾವೇ ಜಯಿಸಿದವರು.”

ಪ್ರತಿಯೊಂದು ಮಾತೂ ಒಂದೊಂದು ವೇದಾಂತ ಸೂತ್ರದಂತೆ ಜನರಿಗೆ ಹಿಡಿಯಿತು. ಭಾರತದ ರಾಜಕೀಯದಲ್ಲಿ ಇದ್ದಕ್ಕಿದ್ದಂತೆ ವಿದ್ಯುತ್ ಪ್ರವಹಿಸಿತು. ಗಾಂಧಿಯವರ ನೇತೃತ್ವದಲ್ಲಿ ಪ್ರಜೆಗಳು ಸರ್ಕಾರದೊಂದಿಗೆ ಅಸಹಕಾರ ಮಾಡಿದರು. ಸತ್ಯ ಅಹಿಂಸೆ ಧೈರ್ಯ ಸ್ವಾವಲಂಬನೆ ಇವು ರಾಜಕೀಯ ಕ್ಷೇತ್ರದಲ್ಲಿ ತಲೆಹಾಕಿದವು. ತುರಂಗವಾಸವು ದೇಶಭಕ್ತರ ಕಿರೀಟವಾಯಿತು. ಭಾರತವು ಬಹುಕಾಲದ ಅಲಸಿಕೆಯನ್ನು ತೊರೆದು ಸ್ವಾತಂತ್ರ್ಯದ ದಾರಿ ಹಿಡಿಯಿತು. ಜನರಿಗೆ ಭಯವೆಂಬುದೇ ಇಲ್ಲವಾಯಿತು.

೬

ಆ ವರುಷ ಭಾರತ ಸೆಕ್ರೆಟರಿ ಮಾಂಟೆಗು ಭಾರತಕ್ಕೆ ಪ್ರವಾಸ ಬಂದಿದ್ದರು. ಈ “Damned Bureucracyಗೆ (ಮೂರ್ಖ ಸಾಮ್ರಾಜ್ಯವಾದಿಗೆ) ಜ್ವಾಲಾಮುಖಿಯ ಮೇಲೆ ಕುಳಿತಿದ್ದೇವೆಂಬುದು ಏನು ಮಾಡಿದರೂ ತಿಳುಯುವುದಿಲ್ಲ” ಎಂದು ಕೊರಗಿದರು.

ಆ ವರುಷದ ಕೊನೆಯಲ್ಲಿ ಗಾಂಧಿಯವರು “ಹೊಸದು ಬರಲಿ. ಹಳೆಯದು ಹೋಗಲಿ” ಎಂಬ ಹೆಸರಿನಲ್ಲಿ ಯಂಗ್ ಇಂಡಿಯದಲ್ಲಿ ಹೀಗೆ ಬರೆದರು. ಅದೇ ಭಾರತದ ರಣಭೇರಿಯಾಯಿತು.

"ಹೋದವರುಷ ೧೯೧೯ ನಾವು ಸಂಪಾದಿಸಿದುದು ಏನು ಎಂದು ಹೇಳುವುದು ಕಷ್ಟ. ಯುದ್ಧವೇನೋ ಮುಗಿಯಿತು. ಆದರೆ ಏನೂ ಫಲವಾಗಲಿಲ್ಲ. ಆ ಯುದ್ಧ ಏಳಿಸಿದ ಆಸೆಗಳು ಹಾಗೆಯೇ ಉಳಿದಿವೆ. ಶಾಶ್ವತವಾದ ಶಾಂತಿ ಎಂದು ಅವರು ಮಾಡಿದುದು ಹೆಸರಿಗೆ ಶಾಂತಿಯಾಗಿದೆ. ಈ ಯುದ್ಧ ಮಹಾಭಾರತ ಯುದ್ಧಕ್ಕಿಂತ ಹೆಚ್ಚು ದೊಡ್ಡ ಯುದ್ಧವಾಯಿತು. ಆದರೆ ಇದು ಮುಂದಲ ಇನ್ನೊಂದು ಯುದ್ಧಕ್ಕೆ ದಾರಿಯಾಗಿದೆ. .... ಇಲ್ಲಿ ಭಾರತದಲ್ಲಿ ನಮಗೆ ಎಲ್ಲೆಲ್ಲು ನಿರುತ್ಸಾಹವೇ. ಯುದ್ಧದನಂತರ ಭಾರತಕ್ಕೆ ಏನಾದರೂ ದೊರೆತೀತು ಎಂದು ಆಶಿಸಿದ್ದೆವು ಆದರೆ ಆ ಆಶೆ ನಿರಾಶೆಯಾಯಿತು. ಪಂಜಾಬಿನಲ್ಲಿ ಭೀಭತ್ಸವಾದ ದಂಗೆ ನಡೆದಿದೆ, ನಿರಾಯುಧರು ಸತ್ತಿದ್ದಾರೆ. ಅಲ್ಲಿ ಮಿಲಿಟರಿ ರಾಜ್ಯವೇ ನಡೆದುಹೋಯಿತು. ಪ್ರಜೆಗಳಿಗೂ ಆಳುವವರಿಗೂ ನಡುವೆ ಅಂತರ ಹೆಚ್ಚಾಗುತ್ತಿದೆ.....

"ಆದರೆ ಈ ನಿರಾಶೆಯಲ್ಲಿ ಆಶಾಕಿರಣವಿದೆಯೇ? ಭಾರತದಲ್ಲಿ ಸತ್ಯಾಗ್ರಹ ಸೂರ್ಯ ೬ನೇ ಎಪ್ರೆಲ್ ಉದಯವಾದ. ಇದೇ ಕಳೆದ ವರುಷದ ಅತ್ಯಂತ ಮಹತ್ವದ ಸಂಗತಿ. ಈಸೂರ್ಯನನ್ನು, ಪ್ರಜೆಗಳೂ ಆಳುವವರೂ ಸ್ವೀಕರಿಸಿದರು. ಭಾರತದ ಶುಭವಿರುವುದು ಸತ್ಯಾಗ್ರಹದಲ್ಲಿಯೇ. ಸತ್ಯಾಗ್ರಹ ವೆಂಬುದೇನು? ಅದನ್ನು ಅನೇಕ ಸಲ ವಿವರಿಸಿದುದಾಗಿದೆ. ಆದರೆ ಸೂರ್ಯನನ್ನು ಹೇಗೆ ಸಾವಿರ ನಾಲಿಗೆಯ ಆದಿಶೇಷ ಸಹ ವರ್ಣಿಸಲಾರನೋ, ಹಾಗೆಯೇ ಸತ್ಯಾಗ್ರಹವನ್ನು ವರ್ಣಿಸುವುದು ಸಾಧ್ಯವಿಲ್ಲ. ನಾವು ಸೂರ್ಯನನ್ನು ನಿತ್ಯ ನೋಡುತ್ತೇವೆ. ಆದರೆ ಅವನ ವಿಚಾರ ನಮಗೆ ಏನೂ ತಿಳಿಯದು. ಹಾಗೆಯೇ ಸತ್ಯಾಗ್ರಹವನ್ನು ಯಾವಾಗಲೂ ನೋಡುತ್ತಿದ್ದರೂ ಅದರ ವಿಚಾರ ನಮಗೆ ತಿಳಿಯದು.

"ಸತ್ಯಾಗ್ರಹದ ಅಂಗಗಳು, ಸ್ವದೇಶಿ,' ಸಮಾಜ ಸುಧಾರಣೆ ಮತ್ತು ರಾಜಕೀಯಸುಧಾರಣೆ. ಇವುಗಳಲ್ಲಿ ಎಷ್ಟರಮಟ್ಟಿಗೆ ಸತ್ಯಾಗ್ರಹವನ್ನು ಅನುಸರಿಸುತ್ತೇವೆಯೋ ಅಷ್ಟರಮಟ್ಟಿಗೆ ಆ ಜಯ ಶಾಶ್ವತ. ಸತ್ಯಾಗ್ರಹದ ಮಾರ್ಗ ಹೊಸಮಾರ್ಗ. ಈ ಮಾರ್ಗದಲ್ಲಿ ಜನ ನಡೆದಿಲ್ಲ. ಆದುದರಿಂದ ಈ ಹೊಸಮಾರ್ಗವೆಂದರೆ ಹೆದರುತ್ತಾರೆ. ಸತ್ಯಾಗ್ರಹವೆಂದರೆ

ಬರಿಯ ಕಾಯಿದೆಯ ಭಂಗವಲ್ಲ. ಸತ್ಯಾಗ್ರಹದಲ್ಲಿ ಕಾಯಿದೆ ಭಂಗ ವೇನೋ ಸೇರಿದೆ. ಕಾಯಿದೆಯಂತೆ ನಡೆಯುವ ಶಕ್ತಿಯಾರಿಗೆ ಇದೆಯೋ ಅವನು ಮಾತ್ರ ಕಾಯಿದೆ ಭಂಗಮಾಡಬಲ್ಲ. ಕಟ್ಟುವುದಕ್ಕೆ ಯಾರಿಗೆ ಆಗುತ್ತದೋ ಅವನೇ ಕೆಡವ ಬಲ್ಲ. ಕವಿ ಹೀಗೆ ಹೇಳಿದ್ದಾನೆ.

"ಸತ್ಯದ ಮಾರ್ಗ ಧೀರರ ಮಾರ್ಗ ಹೇಡಿಗಳಿಗೆ ಆ ಶಕ್ತಿ ಇಲ್ಲ ಸ್ವದೇಶಿಯು ಸತ್ಯಾಗ್ರಹ, ಹೇಡಿಗಳಿಗೆ ಸ್ವದೇಶಿ ಆಚರಣೆ ಪ್ರಚಾರ ಸಾಧ್ಯ ವಿಲ್ಲ. ಮುಸಲ್ಮಾನರಿಂದ ಏಟು ತಿಂದು ಶಾಂತಿಯಿಂದಿರಲು ಹೇಡಿ ಯಾದ ಹಿಂದೂವಿಗೆ ಸಾಧ್ಯವಿಲ್ಲ. ಹಿಂದೂವಿನಿಂದ ಏಟು ತಿಂದೂ ಸಹನೆಯಿಂದಿರಲು ಹೇಡಿ ಮುಸಲ್ಮಾನನಿಗೆ ಸಾಧ್ಯವಿಲ್ಲ. ಇಬ್ಬರೂ ಪರ ಸ್ಪರ ಸಹನೆಯುಳ್ಳವರಾದರೆ ಸ್ವರಾಜ್ಯ ಕರಗತ." ಇದೇ ನಮ್ಮ ಈ ಹೊಸವರ್ಷದ ಪ್ರಾರ್ಥನೆಯಾಗಲಿ.

"ಪ್ರಭು, ಭಾರತವನ್ನು ಸತ್ಯದ ಮಾರ್ಗದಲ್ಲಿ ನಡೆಸು. ಭಾರತಕ್ಕೆ ಸ್ವದೇಶೀಧರ್ಮ ಕಲಿಸು. ಹಿಂದೂ ಮುಸಲ್ಮಾನ್ ಪಾರಸಿ, ಕ್ರಿಸ್ತ, ಜ್ಯು ಇವರಲ್ಲಿ ಐಕ್ಯವನ್ನುಂಟುಮಾಡು.

---

# ಅಹಿಂಸೆಯ ವ್ಯಾಪ್ತಿ

## ೧

" ಬ್ರಿಟಿಷ್ ಸರ್ಕಾರದೊಂದಿಗೆ ಕಾದಾಡಿ ೧೯೩೧ ರಲ್ಲಿ ಆ ಸರ್ಕಾರ ಯಂತ್ರವನ್ನು ಸ್ವಲ್ಪ ಹೆಚ್ಚು ಕಡಿಮೆ ನಿಲ್ಲಿಸಿಬಿಟ್ಟ ಗಾಂಧಿ, ಭಾರತ ದಲ್ಲಿ ಬ್ರಿಟಿಷರ ಅತ್ಯಂತ ಮಿತ್ರ. ಈ ೧೧೨ ಪೌಂಡು ಮನುಷ್ಯ, ರಬ್ಬರ್ ನಂತೆ ಚಟುವಟಿಕೆಯುಳ್ಳವನಾಗಿ ಕೌಪೀನಧಾರಿಯಾಗಿ ಚರಕದ ಮುಂದೆ ಕುಳಿತುಕೊಂಡು, ಜಗತ್ತಿನಲ್ಲೆಲ್ಲಾ ಅತ್ಯಂತ ದೊಡ್ಡದಾದ ಶಕ್ತವಾದ ವ್ಯವಸ್ಥಿತವಾದ ಬಹುಕಾಲದ ಮಹಾಸಾಮ್ರಾಜ್ಯವನ್ನು ಎದುರಿಸಿ, ಸ್ವಲ್ಪ ಹೆಚ್ಚು ಕಡಿಮೆ ಅದನ್ನು ಜಯಿಸಿಯೇ ಬಿಟ್ಟನು. ಅವನು ಎದುರಿಸಿದುದು ವಿಧಿ—ವಿಧಿಗಿಂತ ಹೆಚ್ಚು ಶಕ್ತವಾಗಿದ್ದ—ಬ್ರಿಟಿಷ್ ಸಾಮ್ರಾಜ್ಯ, ಭಾರತದಲ್ಲಿ ಅವನಿಗೆ ಸರಿಹೋಗುವ ಮನುಷ್ಯ ಯಾರೂ ಇಲ್ಲ. ಭಾರತದಲ್ಲಿ ಎರಡು ಗಂಟೆ ಇರುವುದರೊಳಗಾಗಿ ಕಾಂಗ್ರೆಸ್ಸನ್ನು ಆಳುವವರು ಗಾಂಧಿಯೆ ಎಂದು ಚೆನ್ನಾಗಿ ಗೊತ್ತಾಗು ತ್ತದೆ ಭಾರತದ ೩೫ ಕೋಟಿ ಪ್ರಜೆಗಳ ಮೇಲಿನ ಅವರ ಪ್ರಭುತ್ವ ಅದ್ಭುತವಾದುದು. ಅವರು ಆಳುವುದು ಪ್ರೇಮದ ಬಲದಿಂದ. ಜನರು ಅವರನ್ನು ಪೂಜಿಸುತ್ತಾರೆ ಪ್ರೀತಿಸುತ್ತಾರೆ. ಅವರ ಭಾವಚಿತ್ರ ಪ್ರತಿ ಮನೆಗಳಲ್ಲೂ ಇದೆ. ರೋಗಿಷ್ಠರಾದ ಮಕ್ಕಳಿಗೆ ಖಾಯಿಲೆಗಳನ್ನು ಗುಣಪಡಿಸಲು ಅವನ ಭಾವಚಿತ್ರವನ್ನು ಮುಟ್ಟಿಸುತ್ತಾರೆ. ಅವರು ಕುಳಿತಿರುವ ರೈಲುಗಾಡಿ ಹೋಗುತ್ತಿರುವುದನ್ನು ನೋಡಲು—ಅವರು ಕಣ್ಣಿಗೆ ಕಾಣದಿದ್ದರೂ ಚಿಂತೆಯಿಲ್ಲ—ರೈತರು ೨೦ ಮೈಲಿ ನಡೆದು ಕೊಂಡೇ ಬರುತ್ತಾರೆ. ಭಾರತದ ಅವಿದ್ಯಾವಂತರಾದ ದರಿದ್ರರಾದ ರೈತರು ಅವರ ಅದ್ಭುತಶಕ್ತಿಯನ್ನು ಕಂಡಿದ್ದಾರೆ. ಭಾರತದಲ್ಲಿ ಅವರ ಹೆಸರು ಹೇಳಿದರೆ ಸಾಕು. ಜನರ ಮುಖಗಳು ಸಂತೋಷದಿಂದ ಅರಳು ತ್ತಿದ್ದುದನ್ನು ನಾನು ನೋಡುತ್ತಿದ್ದೆ. ಭಾರತದಲ್ಲಿ, ಭಾರತದ ೩೫ ಕೋಟಿ ಜನರಲ್ಲಿ, ಜಗತ್ತಿನ ೧/೫ ಭಾಗ ಜನಸಂಖ್ಯೆಯಲ್ಲಿ, ಮತ್ತೆ ಒಂದು

ಮಾತಿನಿಂದ, ಕಿರುಬೆರಳನ್ನು ಅಲುಗಾಡಿಸುವುದರಿಂದ ಸವಿನಯ ಕಾಯಿದೆ ಭಂಗವನ್ನು ನಡೆಸುವ ಶಕ್ತಿ ಅವರೊಬ್ಬರಿಗೆ ಮಾತ್ರ ಇದೆ. . . ಅಬ್ಬ! ಅವರ ಜೀವನವೂ ಕಾರ್ಯಕ್ರಮವೂ ಎಷ್ಟು ಅದ್ಭುತವಾದುದಾಗಿದೆ! ಭಾರತದ ಪ್ರಜೆಗಳಿಗೆ ಒಂದು ಹೊಸ ಶಕ್ತಿಯನ್ನೂ ಹೊಸ ಒಗ್ಗಟ್ಟನ್ನೂ ಕೊಟ್ಟಿರುವುದು ಅವರು ಮಾಡಿರುವ ಕೆಲಸಗಳಲ್ಲಿ ಅತ್ಯಂತ ಮುಖ್ಯವಾದುದು" ಎಂದು ಗಾಂಧಿಯವರನ್ನು ನೋಡಿದ ಜಾನ್‌ಗಂತರ್ ಹೇಳಿದ್ದಾರೆ.

ಅಹಿಂಸೆ, ಗಾಂಧಿಯವರಿಗೆ ಮೊದಲನೆಯ ಧರ್ಮ. ಈ ಅಹಿಂಸೆ, ಇತರರಿಗೆ ಕಷ್ಟ ಅಥವ ಹಿಂಸೆಯನ್ನು ಕೊಡಬಾರದು ಎಂಬ ಅರ್ಥದಲ್ಲಿ ಮಾತ್ರ ಉಪಯೋಗವಲ್ಲ. ಹಿಂಸೆ ಮಾಡಕೂಡದು ಎಂಬುದಂತೂ ಸರಿ. ಆದರೆ ಇದು ಬರಿಯ ಹೊರಗಡೆಯ ಅರ್ಥ ಮಾತ್ರವಾಯಿತು. ಮತ್ತು ಈ ಬಗೆಯ ಅಹಿಂಸೆ ಕೇವಲ ಅಶಕ್ತನ ಅಹಿಂಸೆ. ಅನೇಕವೇಳೆ ಈ ಅಶಕ್ತನ ಅಹಿಂಸೆ ಇರುವುದು ಹೇಡಿತನ. ಗಾಂಧಿಯವರು ಹೇಡಿತನವನ್ನು ಎಂದೂ ಒಪ್ಪುವುದಿಲ್ಲ. "ಹಿಂಸೆ ಮತ್ತು ಹೇಡಿತನ ಇವೆರಡರ ಪೈಕಿ ನಾನು ಹಿಂಸೆಯನ್ನೇ ಒಪ್ಪುತ್ತೇನೆ. ಕೊಲ್ಲದೆ ಸಾಯುವ ಸ್ಥಿಮಿತವಾದ ಧೈರ್ಯವನ್ನು ನಾನು ಅಭ್ಯಾಸಮಾಡುತ್ತಿದ್ದೇನೆ. ಆದರೆ ಈ ಧೈರ್ಯ ಯಾರಿಗೆ ಇಲ್ಲವೋ ಅವರು ಕೊಲ್ಲುವ ಮತ್ತು ಕತ್ತಿಗೆ ಎದೆಯೊಡ್ಡುವ ವಿದ್ಯೆಯನ್ನು ಕಲಿಯಬೇಕು. ಅಪಾಯದ ಮುಖದಿಂದ ಪರಾರಿಯಾಗುವುದು ಶುದ್ಧ ಹೇಡಿತನ. ಯಾರು ಓಡುತ್ತಾರೋ ಅವರ ಮನಸ್ಸು ಹಿಂಸೆಯಲ್ಲಿ ತೊಡಗಿಯಾಯಿತು. ಸಾಯಲು ಧೈರ್ಯವಿಲ್ಲದುದರಿಂದ ಅವರು ಕತ್ತಿಯನ್ನು ಕಂಡು ಓಡುತ್ತಾರೆ ಈ ಒಂದು ಪೂರ್ಣ ಜನಾಂಗ ನಪುಂಸಕವಾಗುವುದಕ್ಕಿಂತ ಹಿಂಸಾವಾದಿಯಾಗುವುದನ್ನು ನಾನು ಒಪ್ಪುತ್ತೇನೆ. ಆದರೆ ಅಹಿಂಸೆ, ಹಿಂಸೆಗಿಂತ ಸಾವಿರಪಾಲು ಮೇಲಾದುದು. ಕ್ಷಮಿಸುವುದು ಶಿಕ್ಷಿಸುವುದಕ್ಕಿಂತ ಉತ್ತಮವಾದುದು ಎಂದು ನನಗೆ ಗೊತ್ತು. ಶಿಕ್ಷಿಸಲು ಶಕ್ತಿಯಿರುವಾಗ ಮಾತ್ರ ಶಿಕ್ಷಿಸದಿರುವುದು ಕ್ಷಮೆ. ಭಾರತವು ನಿಶ್ಶಕ್ತವೆಂದು ನನಗೆ ಅನ್ನಿಸುವುದಿಲ್ಲ. ಕೆಲವು ಸಹಸ್ರ ಇಂಗ್ಲೀಷರು ೩೫ ಕೋಟಿ ಭಾರತೀಯರನ್ನು ಹೆದರಿಸ

ಲಾರರು. ಶಕ್ತಿ, ಬರಿಯ ದೇಹದ ಪಶು ಶಕ್ತಿಯಲ್ಲಿ ಮಾತ್ರ ಇಲ್ಲ. ಬಗ್ಗಿಸಲಸಾಧ್ಯವಾದ ಮನಸ್ಥೈರ್ಯ, ಇಚ್ಛಾಶಕ್ತಿ ಇವೇ ನಿಜವಾದ ಶಕ್ತಿ, ನಿಜವಾದ ಶಕ್ತಿ ಬರಿಯ ದೇಹದಿಂದ ಬರುವುದಿಲ್ಲ, ಅಹಿಂಸೆ ಎಂಬುದು ದುಷ್ಟರು ಮಾಡಿದಂತೆ ಮಾಡಲಿ ಎಂದು ಒಪ್ಪಿ ಸುಮ್ಮನಿರುವುದಲ್ಲ. ಆತ್ಮದ ಪೂರ್ಣ ಬಲದಿಂದ ದುಷ್ಟರ ಹಿಂಸೆಯನ್ನು ಎದುರಿಸುವುದೇ ಅಹಿಂಸೆ. ಒಬ್ಬನೇ ಒಬ್ಬ ಮನುಷ್ಯ, ಹೀಗೆ ಒಂದು ಚಕ್ರಾಧಿಪತ್ಯವನ್ನು ಎದುರಿಸಿ ಅದನ್ನು ನಾಶಮಾಡಬಲ್ಲನು."

ಗಾಂಧಿಯವರು ಬರಿಯ ಭಾವನಾಪ್ರಪಂಚದಲ್ಲಿ ವಿಹರಿಸುವವರಲ್ಲ. ಆದುದರಿಂದ ಅವರು "ಈ ಅಹಿಂಸೆ ಬರಿಯ ಋಷಿಗಳಿಗೆ ಮಾತ್ರ ಸೇರಿದುದಲ್ಲ. ಇದನ್ನು ಸಾಮಾನ್ಯರೂ ಆಚರಿಸಬಹುದು. ಅಹಿಂಸೆ ಮನುಷ್ಯನ ಗುಣ. ಹಿಂಸೆ ಪಶುಗಳ ಲಕ್ಷಣ. ಪಶುಗಳ ಆತ್ಮ ನಿದ್ರಿಸುತ್ತಿದೆ. ಅದಕ್ಕೆ ದೇಹಶಕ್ತಿ ಹೊರತು ಮತ್ತಾವುದೂ ತಿಳಿದಿಲ್ಲ. ಆದರೆ ಮನುಷ್ಯನ ಘನತೆ, ಇದಕ್ಕಿಂತ ಮೇಲಿನ, ಆತ್ಮದಶಕ್ತಿಗೆ ಅಧೀನವಾಗಿರುತ್ತದೆ ಇದಕ್ಕೆ ಮುಖ್ಯವಾದುದು ತ್ಯಾಗ ; ಆತ್ಮದ ಬಲಿದಾನ. ಈ ಹಿಂದಲ ಧರ್ಮವನ್ನು ಭಾರತದ ಮುಂದೆ ಇಟ್ಟಿದ್ದೇನೆ. ಅಹಿಂಸೆಯನ್ನು ಕಂಡುಹಿಡಿದ ಋಷಿಗಳು ನ್ಯೂಟನ್‌ನಿಗಿಂತ ದೊಡ್ಡವರಾಗಿದ್ದರು. ವೆಲ್ಲಿಂಗ್ಟನ್‌ನಿಗಿಂತ ದೊಡ್ಡ ಯೋಧರರಾಗಿದ್ದರು. ಆಯುಧಗಳನ್ನು ತಾವೇ ಉಪಯೋಗಿಸಿ ಅವುಗಳ ಅಪ್ರಯೋಜಕತೆಯನ್ನು ಅರಿತು ಬಳಲಿದ ಜಗತ್ತಿಗೆ "ಹಿಂಸೆಯಿಂದ ಮೋಕ್ಷವಿಲ್ಲ. ಅಹಿಂಸೆಯಿಂದ ಮಾತ್ರ ಮೋಕ್ಷ" ಎಂಬುದನ್ನು ಬೋಧಿಸಿದರು. ಅರಿತೊ ಅರಿಯದೆಯೋ ನಾವೆಲ್ಲಾ ಒಬ್ಬರೊಂದಿಗೊಬ್ಬರು ಅಹಿಂಸೆಯಿಂದಲೇ ನಡೆಯುತ್ತಿದ್ದೇವೆ. ಎಲ್ಲ ವ್ಯವಸ್ಥಿತವಾದ ಸಮಾಜಗಳೂ ಅಹಿಂಸೆಯ ಏರ್ಪಾಡಿನಮೇಲೆಯೇ ಅವಲಂಬಿಸಿವೆ. ಜೀವ, ಸಾವಿನ ಜತೆಯಲ್ಲಿ ಬದುಕಿದೆ. ಆದುದರಿಂದ ನಾಶಕ್ಕಿಂತ ಹೆಚ್ಚಾದ ಒಂದು ಸಂರಕ್ಷಕ ಶಕ್ತಿ ಜಗತ್ತಿನಲ್ಲಿದೆ. ಅಂತಹ ಶಕ್ತಿಯ ಸಂರಕ್ಷಣೆಯಲ್ಲಿ ಮಾತ್ರ ನಾವು ಸುಖವಾಗಿ ಸುವ್ಯವಸ್ಥಿತವಾಗಿ ಜೀವಿಸಬಹುದು. ಈ ಧರ್ಮವನ್ನು ನಮ್ಮ ಜೀವನದಲ್ಲಿ ನಾವು ನಿತ್ಯ ಬಾಳಿ ತೋರಿಸಬೇಕು. ಎಲ್ಲಿ ವಿರೋಧ ಬರಲಿ,

ಎಲ್ಲಿ ಕಷ್ಟಬರಲಿ, ಅಲ್ಲೆಲ್ಲಾ ಪ್ರೀತಿಯಿಂದ ಜಯಿಸಿಬೇಕು. ನನ್ನ ಜೀವ ಈ ತತ್ವದ ಮೇಲೆ ನಿಂತಿದೆ. ಹಿಂಸೆ ನಾಶ ಇವುಗಳಿಂದ ಎಂದೆಂದಿಗೂ ಸಾಧ್ಯವಿಲ್ಲದ ಕೆಲಸಗಳನೆಲ್ಲಾ ಈ ಪ್ರೀತಿ, ಮಾಡಿದೆ. ಫಲ ಹೇಗಾದರೂ ಇರಲಿ. ಅಹಿಂಸೆಯ ಮಾರ್ಗವನ್ನು ಅನುಸರಿಸ ಬೇಕೆಂಬುದೇ ನನ್ನ ಜೀವನದಲ್ಲಿ ಯಾವಾಗಲೂ ನಡೆಯುವ ಹೋರಾಟ. ಈ ಹೋರಾಟ ದಿಂದ ನನ್ನ ಶಕ್ತಿ ಹೆಚ್ಚುತ್ತಿದೆ. ಅಹಿಂಸೆ ಪ್ರಬಲರ ಆಯುಧ. ನಿಶ್ಶಕ್ತರ ಅಹಿಂಸೆ ಬರಿಯ ಬೂಟಾಟಿಕೆ. ಭಯವೂ ಪ್ರೇಮವೂ ಎಂದಿಗೂ ಒಟ್ಟಿಗೆ ಎಲ್ಲಿಯೂ ಇರಲಾರವು. ಪ್ರೇಮ ತನಗೆ ಪ್ರತಿಫಲ ಬರಲಿ ಬಿಡಲಿ ತನ್ನಲ್ಲಿರುವುದನೆಲ್ಲಾ ಕೈ ಹಿಡಿಯದೆ ಕೊಟ್ಟುಬಿಡುತ್ತದೆ. ನಾವು ಒಪ್ಪಲಿ ಅಥವ ಬಿಡಲಿ ಪ್ರೇಮದ ಧರ್ಮವು "ಗುರುತ್ವಾಕರ್ಷಣ" ದತೆ ಕೆಲಸ ಮಾಡುತ್ತದೆ. ಈ ಧರ್ಮವನ್ನು ಅನುಸರಿಸಿದಂತೆಲ್ಲಾ ಜೀವನದ ಲ್ಲಿಯೂ ಜಗತ್ತಿನ ಏರ್ಪಾಡಿನಲ್ಲಿಯೂ ನನ್ನ ಆನಂದ ಹೆಚ್ಚುತ್ತಿದೆ. ನಾನು ವರ್ಣಿಸಲಾಗದ ಶಾಂತಿಯನ್ನೂ, ಬ್ರಂಹ್ಮಾಡದ ರಹಸ್ಯಗಳಿಗೆ ಅರ್ಥವನ್ನು ಅದು ಕೊಡುತ್ತದೆ.

"ಈ ಅಹಿಂಸೆ ಬರಿಯ ರಾಜಕೀಯದಲ್ಲಿ ಮಾತ್ರ ಕಾರ್ಯಕಾರಿಯಾ ಗುವುದೆಂದು ನಾನು ಹೇಳುವುದಿಲ್ಲ. ಮನುಷ್ಯನ ಎಲ್ಲಾ ಕಷ್ಟಗಳಿಗೂ ಇದರಲ್ಲಿ ನಿವಾರಣೋಪಾಯಗಳಿವೆ. ಒಂದೇ ಸಂಸಾರದಲ್ಲಿ ಒಬ್ಬರಿಂ ದೊಬ್ಬರಿಗೆ ಕಷ್ಟಉಂಟಾದರೂ ಅನ್ಯಾಯವುಂಟಾದರೂ ಈ ಅಸ್ತ್ರವನ್ನು ಉಪಯೋಗಿಸಬಹುದು. ಆದರೆ ಇದರಲ್ಲಿ ಬಲಾತ್ಕಾರದ ಸ್ವಭಾವ ಇರ ಬಾರದು. ಈ ಅಹಿಂಸೆಯ ದಾರಿಯನ್ನು ಅನುಸರಿಸುವವರಿಗೆ ಕಷ್ಟವು ಸಿದ್ಧ. ಕಷ್ಟದ ಬೆಂಕಿಯಲ್ಲಿ ಶುದ್ದಿಯಾಗದೆ ಯಾವ ರಾಷ್ಟ್ರವೂ ಮುಂದಕ್ಕೆ ಬಂದಿಲ್ಲ. ಹರಿಶ್ಚಂದ್ರನು ಸತ್ಯದ ರಾಜ್ಯವನ್ನು ಸ್ಥಾಪಿಲು ಅವರ್ಣನೀಯ ವಾದ ಕಷ್ಟಗಳನ್ನು ಅನುಭವಿಸಿದನು. ಆದರೆ ಅಹಿಂಸೆ, ಸತ್ಯದ ಜತೆ ಯಲ್ಲಿಯೇ ಇರುತ್ತದೆ. ಸತ್ಯದ ಅನುಯಾಯಿಯಾದ ಹೊರತು ಅಹಿಂಸೆ ನಮ್ಮ ಕರಗತವಾಗುವುದಿಲ್ಲ. ಸತ್ಯವಿಲ್ಲದೆ ಅಹಿಂಸೆ ಸಾಧ್ಯವಿಲ್ಲ. ಸತ್ಯ ಮತ್ತು ಅಹಿಂಸೆ ಇಲ್ಲದೆ ಭಾರತಕ್ಕೆ ಸ್ವಾತ್ರಂತ್ರ್ಯಬಂದರೂ ಪ್ರಯೋಜನ ವಿಲ್ಲ. ಸತ್ಯ ಅಹಿಂಸೆಲ್ಲಿಯ ಭಾರತವು ಪೂರ್ಣವಾಗಿ ಜಯಶಾಲಿಯಾದಲ್ಲಿ

## ಸ್ವರಾಜ್ಯವನ್ನು ತಡೆಯುವರಾರು ?

೨

ಈ ಸತ್ಯ ಅಹಿಂಸೆಗಳ ಅಸ್ತ್ರವನ್ನು ರಾಜಕೀಯದಲ್ಲಿ ಜಯಪ್ರದವಾಗಿ ಪ್ರಯೋಗಿಸಬಹುದು. ಈ ತತ್ವವನ್ನು ಭಾರತ ರಾಜಕಾರಣದಲ್ಲಿ ಗಾಂಧೀಜೀಯವರು ಆಚರಣೆಗೆ ತಂದರು. ಲೋಕಮಾನ್ಯ ಬಾಲಗಂಗಾಧರ ತಿಲಕ್‌ರವರಿಗೂ ಗಾಂಧಿಯವರಿಗೂ ಈ ವಿಚಾರದಲ್ಲಿ ಸ್ವಲ್ಪ ಭಿನ್ನಾಭಿಪ್ರಾಯವಿದೆ. ಬಾಲಗಂಗಾಧರ ತಿಳಕರಿಗೆ ಮುಂಚೆ ಬ್ರಿಟಿಷ್ ಸಾಮ್ರಾಜ್ಯದ ಕೇಡನ್ನು ನಮಗೆ ತೋರಿಸಿ ನಮ್ಮವರಲ್ಲಿ ದೇಶಾಭಿಮಾನವನ್ನು ಹಾಗೆ ಉಜ್ವಲಗೊಳಿಸಿದವರು ಯಾರೂ ಇಲ್ಲ. ಪೂರ್ಣ ದೇಶಾಭಿಮಾನ, ಅದ್ಭುತವಾದ ಪಾಂಡಿತ್ಯ, ತ್ಯಾಗಶಕ್ತಿ ಇವುಗಳಿಂದ ತಿಳಕರು ಭಾರತದ ಪೂಜಾವಸ್ತುವಾಗಿದ್ದರು. ದೇಶ ಸೇವೆಗಾಗಿ ಯಾವ ತ್ಯಾಗವನ್ನು ಮಾಡುವುದಕ್ಕೂ ಅವರು ಹಿಂದೆಗೆಯುತ್ತಿರಲಿಲ್ಲ. ದೇಶದ ಕಲ್ಯಾಣಕ್ಕಾಗಿ ಅವರು ಯಾರನ್ನು ಬೇಕಾದರೂ—ಅವರು ಎಷ್ಟೇ ದೊಡ್ಡವರಾಗಿರಲಿ ಅಥವಾ ಧನಿಕರಾಗಿರಲಿ—ಎದುರಿಸುತ್ತಿದ್ದರು. ಅವರು ಜೀವಮಾನದಲ್ಲಿ ಅನೇಕ ಮರಾಠ ಮುಖಂಡರು, ರಾನಡೆ, ಭಂಡಾರ್ಕರ್ ಗೋಖಲೆ ಮತ್ತು ಕೆಲವು ಮರಾಠ ರಾಜರೊಂದಿಗೆ ಸಹ ಹೊಡೆದಾಡಬೇಕಾಯಿತು. ಸೂರತ್ ಕಾಂಗ್ರೆಸ್‌ನಲ್ಲಿ ಅವರು ಭಾರತದ ಎಲ್ಲಾ ಮುಖಂಡರನ್ನೂ ಎದುರಿಸಿದರು. ೧೯೧೮ ರಲ್ಲಿ ಬೊಂಬಾಯಿ ಗೌರ್ನರರನ್ನು ಅವರ ಸಮ್ಮುಖದಲ್ಲಿಯೇ ಯುದ್ಧದ ವಿಚಾರದಲ್ಲಿ ಎದುರಿಸಿದರು ಅವರ ಶಕ್ತಿ ಹಾಗಿತ್ತು. ತಿಳಕರಿಗೂ ಗಾಂಧಿಯವರಿಗೂ ರಾಜಕೀಯದಲ್ಲಿ ಸತ್ಯದ ಉಪಯೋಗದ ವಿಚಾರದಲ್ಲಿ ಇದ್ದ ಅಭಿಪ್ರಾಯಗಳನ್ನು ಅನೇಕವೇಳೆ ಜನ ತಪ್ಪಾಗಿ ತಿಳಿದಿದ್ದಾರೆ. ತಿಳಕರು ಗಾಂಧಿಯವರಿಗೆ ಒಂದು ಸಲ ಹೀಗೆ ಬರೆದರು "ನೀವು, ನಾನು ರಾಜಕೀಯದಲ್ಲಿ ಎಲ್ಲಾ ಸರಿ ಎಂದುಹೇಳಿದೆನೆಂದುಅರ್ಥ ಬರುವ ಹಾಗೆ ಪ್ರಕಟಿಸಿದ್ದೀರಿ. ಅದು ನನ್ನ ಅಭಿಪ್ರಾಯವಲ್ಲ." ರಾಜಕೀಯವು ಪ್ರಪಂಚದಲ್ಲಿರುವ ವ್ಯವಹಾರಿಗಳ ಆಟ. ಇದು ಸಾಧುಗಳಿಗೆ

ಅಲ್ಲ. ಬುದ್ಧನು ಹೇಳಿದಂತೆ ಅಕ್ರೋದೇನ ಜಿನೆ ಕೋಧವಮ್ (ಅಕ್ರೋದೇನ ಜಿನೆ ಕ್ರೋಧಮ್) ಎಂಬುದಕ್ಕೆ ಬದಲಾಗಿ, ನಾನು ಶ್ರೀ ಕೃಷ್ಣನು ಹೇಳಿದ, ಯೇ ಯಥಾ ಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ ಎಂಬುದರ ಮೇಲೆ ಅವಲಂಬಿಸುತ್ತೇನೆ. Responsive Cooperation (ನಿನ್ನ ನಡತೆಗೆ ಉಚಿತವಾದ ಸಹಕಾರ) ಎಂಬುದರ ಅರ್ಥ ಅದೇಯೆ. ಎರಡುದಾರಿಗೂ ಸತ್ಯ ಮಾರ್ಗಗಳೆ. ಆದರೆ ಕೃಷ್ಣನ ದಾರಿ ಬುದ್ಧನ ದಾರಿಗಿಂತ ಈ ಜಗತ್ತಿಗೆ ಹೆಚ್ಚು ಅನಕೂಲವಿದೆ. "

ಗಾಂಧಿಯವರು ನಾನು "ರಾಜಕೀಯದಲ್ಲಿ ಎಲ್ಲಾ ಸರಿ " ಎಂಬುದಾಗಿ ತಿಲಕರ ಅಭಿಪ್ರಾಯವನ್ನು ಹೇಳಿದಾಗ ಅವರು ಅನೇಕ ಸಲ ಹೇಳಿದ್ದ ಶಠಂಪ್ರತಿಶಾಠ್ಯಂ ಎಂಬುದು ನನ್ನ ಜ್ಞಾಪಕದಲ್ಲಿದ್ದಿತು. ನನಗೆ ಇದು ಕೆಟ್ಟ ಧರ್ಮವಾಗಿ ಕಂಡಿತು. ತಿಲಕರು ತಮ್ಮ ಈ ಧರ್ಮ ತಪ್ಪು ಎಂದು ಇಷ್ಟರಲ್ಲಿಯೇ ಒಂದು ತೀರ್ಮಾನಕ್ಕೆ ಬಂದು, ಅದನ್ನು ಪ್ರಕಟಿಸಿದರೆ ನಾನು ಆಶ್ಚರ್ಯ ಪಡುವುದಿಲ್ಲ, ನಾನಂತೂ ನನ್ನ ೩೦ ವರುಷಗಳ ರಾಜಕೀಯ ಅನುಭವದಿಂದ ಶಠಂಪ್ರತಿ ಶಾಠ್ಯಂ ಎಂಬ ತತ್ವ ತಪ್ಪೆಂದೂ "ಶಾಠ್ಯಂಪ್ರತಿಸತ್ಯಂ ಎಂಬದೇ ಸರಿಯೆಂದು ಹೇಳುತ್ತೇನೆ" ಎಂದರು.

## ೩

## (ಗೀತೆಯಲ್ಲಿ ಅಹಿಂಸೆ)

ಗಾಂಧಿಯವರಿಗೆ ಭಗವದ್ಗೀತೆಯು ಅಹಿಂಸೆಯ ಪ್ರತಿಪಾದನೆ. ಅಲ್ಲಿ ಹಿಂಸೆಗೆ ಸ್ಥಳವಿಲ್ಲ, "ನಮ್ಮ ಮನಸ್ಸಿನ ಒಲವು ಯಾವ ಕಡೆಗೆ ಇದೆಯೋ ಅದಕ್ಕೆ ಅನುಸಾರವಾಗಿ ನಾವು ವಾದಿಸುತ್ತೇವೆ. ಬುದ್ಧಿಗೆ ಯಾವ ಉತ್ತರ ಬೇಕೋ ಅದನ್ನೇ ಹೃದಯವು ಹೊರಡಿಸುತ್ತದೆ. ಆದರೆ ಶಾಸ್ತ್ರೀಯವಾದ ಆಧಾರಗಳೊಂದಿಗೆ ನನ್ನ ಅಭಿಪ್ರಾಯವನ್ನು ಪುಷ್ಟೀಕರಿಸುವ ವಾದವನ್ನು ನಾನು ಕೊಡಬಲ್ಲೆ. ಉಪನಿಷತ್ತುಗಳು ಅಹಿಂಸೆಯನ್ನು ಮಾತ್ರ ಬೋಧಿಸುತ್ತವೆ. ಉಪನಿಷತ್ತಿನ ಕೆನೆಯೇ ಆದ ಗೀತೆ ಮತ್ತೇನನ್ನು ತಾನೆ ಬೋಧಿಸಬಲ್ಲದು? ಗೀತೆಯ ಮೂಲಕ್ಕೇ ಹೋಗೋಣ. ಗೀತೆಯ ಉದ್ದೇಶದ ವಿಷಯದಲ್ಲಿ ಅನುಮಾನ ಬರಲು

ಕಾರಣ ಅದು ಹೊದ್ದಿರುವ ಮುಸುಕು. ಅದರ ಬಾಹ್ಯವೇಷ, ಯುದ್ಧ ಮತ್ತು ಯುದ್ಧಭೂಮಿ. ಹೊರಗಿನ ವೇಷವನ್ನು ಸರಿಸಿ ಒಳಕ್ಕೆ ನೋಡದೆ ಇರುವವನಿಗೆ, ಗೀತೆಯ ಒಳಭಾಗವೂ ಯುದ್ಧದಂತೆಯೇ ಕಾಣುತ್ತದೆ. ಆದರೆ ಗೀತೆಯು ರಾಮನ ಹಾಗೆ. ಅವನ ಬಾಹ್ಯರೂಪ ಕಠಿಣ, ಕ್ರೂರ. ಆದರೆ ಹೃದಯ ಕುಸುಮದಂತೆ ಕೋಮಲ. ತೆಂಗಿನ ಕಾಯಿಯ ಒಳಗೆ ಇರುವ ಸಿಹಿಯಾದ ಮೃದುವಾದ ತಿರುಳು ಸಿಕ್ಕ ಬೇಕಾದರೆ ಮೇಲೆ ಇರುವ ಬಲವಾದ ಕರಟವನ್ನು ಒಡೆಯಬೇಕು.

ಗೀತೆಯ ಈ ಕರಟದ ಮುಸುಕನ್ನು ಒಡೆಯೋಣ. ಅರ್ಜುನನನ್ನು ಹಿಂಸಿಸುತ್ತಿರುವ ಪ್ರಶ್ನೆ ಯಾವದು? ಅವನಿಗೆ ಸಮಸ್ಯೆಯಾಗಿರುವದು ಹಿಂಸೆ ಒಳ್ಳೆಯದೇ ಅಥವ ಅಹಿಂಸೆ ಒಳ್ಳೆಯದೆ ಎಂಬುದೇ; ಯುದ್ಧ ಸರಿಯೇ ತಪ್ಪೇ ಎಂಬುದೆ. ಅರ್ಜುನನ ಮಾತಿನಲ್ಲಿಯೇ ಕೇಳೋಣ.

ನಚ ಶ್ರೇಯೋನುಪಶ್ಯಾಮಿ ಹತ್ವಾಸ್ವಜನ ಮಾಹವೆ.

ಸ್ವಜನವನ್ನು ಕೊಲ್ಲುವದರಲ್ಲಿ ನನಗೆ ಶ್ರೇಯಸ್ಸು ಕಾಣುವದಿಲ್ಲ. ಅರ್ಜುನನಿಗೆ ಮಂಕನ್ನು ಉಂಟುಮಾಡಿದುದು, ಸ್ವಜನರು ಶತ್ರುಗಳಾದರೆಂಬುದೇ ಹೊರತು, ಯುದ್ಧ ಮಾಡಬೇಕೆಂಬುದಲ್ಲ. ಸ್ವಜನರೋ— ಅವರು ಅಲ್ಪರಲ್ಲ. ಅಜ್ಜಂದಿರು, ತಂದೆಗಳು, ಹಿರಿಯರು ಚಿಕ್ಕಪ್ಪ ದೊಡ್ಡಪ್ಪ ಅಣ್ಣ ತಮ್ಮ ಮಾವ ಅಳಿಯ ಅತ್ಯಂತ ಸಮೀಪದ ಬಂಧುಗಳು—ಅರ್ಜುನನು ಯಾವಾಗಲೂ ಯುದ್ಧಕ್ಕೂ ಶತ್ರುಗಳನ್ನು ಕೊಲ್ಲುವುದಕ್ಕೂ ಹಿಂದೆಗೆದಿಲ್ಲ. ಆದರೆ ಗೌರವಕ್ಕೆ ಅರ್ಹರಾದ ಹಿರಿಯರಿಂದೊಡಗೂಡಿದ ಈ ಶತ್ರುಗಳನ್ನು ಕೊಲ್ಲುವುದನ್ನು ಅವನಿಂದ ಸಹಿಸಲು ಆಗಲಿಲ್ಲ. ಈ ಸ್ವಜನರನ್ನು ಯುದ್ಧದಲ್ಲಿ ಎದುರಿಸಲು ಅವನಿಗೆ ಕಷ್ಟವಾದುದರಿಂದ ಯುದ್ಧವನ್ನೇ ತಿರಸ್ಕರಿಸುತ್ತಾನೆ. ಯುದ್ಧದ ಭೀಕರತೆಯನ್ನೂ, ಗೃಹಸ್ಥಧರ್ಮದ ವಿನಾಶವನ್ನೂ, ಸ್ತ್ರೀಯರ ಪಾರಿಶುದ್ಧತೆಯನ್ನೂ ಕುರಿತು ಉಪನ್ಯಸಿಸುತ್ತಾನೆ. ಅವನು ಕುರುಕ್ಷೇತ್ರದ ಯುದ್ಧಕ್ಕಿಂತ ಮುಂಚೆ ಅನೇಕ ಯುದ್ಧಗಳಲ್ಲಿ ಕಾದಿದ್ದಾನೆ. ಆದರೆ ಯಾವಾಗಲೂ ಅವನಿಗೆ ಯುದ್ಧದ ಮೇಲೆ ತಿರಸ್ಕಾರ ಬಂದಿರಲಿಲ್ಲ.

ಹತ್ಯಾಕಾರಿಗಳಿಗೆ ಮರಣದಂಡನೆ ಶಿಕ್ಷೆಯನ್ನು ಯಾವಾಗಲೂ ಕೊಟ್ಟು ಅಭ್ಯಾಸವಾಗಿದ್ದ ನ್ಯಾಯಾಧಿಪತಿ, ತನ್ನ ಮಗನೇ ಖೂನಿಗಾರನೆಂದು ತಿಳಿದಾಗ ಅವನಿಗೆ ಮರಣದಂಡನೆಯ ಶಿಕ್ಷೆಯನ್ನು ಕೊಡಲು ಹಿಂದೆಗೆಯುವಂತೆ ಆಗಿದೆ, ಅರ್ಜುನನ ಸ್ಥಿತಿ. ಆಗ ಅವನು ದೊಡ್ಡ ದೊಡ್ಡ ಮಾತುಗಳ ವಾದವನ್ನು ಹೂಡುತ್ತಾನೆ. ಆಸೆಯಿಂದ ಹಿಡಿಯಲ್ಪಟ್ಟ ಮನುಷ್ಯ ಹೀಗೆ ಅನೇಕ ವೇಳೆ ತನಗೆ ಅನುಕೂಲವಾದ ಶಾಸ್ತ್ರವನ್ನು ತನ್ನ ಸಹಾಯಕ್ಕೆ ತೆಗೆದುಕೊಳ್ಳುತ್ತಾನೆ. ಮಹತ್ತರವಾದ ಗಳಿಗೆಯಲ್ಲಿ ಮಹತ್ತರವಾದ ತೀರ್ಮಾನವನ್ನು ಜನರು ಮಾಡಿಕೊಳ್ಳುವದಿಲ್ಲವೆಂದಲ್ಲ. ಆದರೆ ಅರ್ಜುನನಲ್ಲಿ ಅಂತಹ ಜಾಗ್ರತಿಏನೂ ಉಂಟಾಗಿಲ್ಲ.

ಇನ್ನು ಕೃಷ್ಣನ ಕಡೆ ನೋಡಿ. ಯುದ್ಧದ ಕ್ರೌರ್ಯವನ್ನು ಕುರಿತು ಅರ್ಜುನನು ಹೇಳಿದುದಕ್ಕೆ ಕೃಷ್ಣ ಏನೂ ಉತ್ತರ ಕೊಡುವುದಿಲ್ಲ. ಯುದ್ಧ ಭಯಂಕರ, ಯುದ್ಧ ನೀಚವಾದುದು. ಆದರೆ ಅರ್ಜುನನಿಗೋ? ಕೃಷ್ಣನು ಅರ್ಜುನನಿಗೆ "ನೀನು ಪ್ರಾಜ್ಞರ ಮಾತನ್ನು ಅನುಕರಿಸುತ್ತಿರುವೆ." ಎನ್ನುತ್ತಾನೆ. ಅರ್ಜುನ ಹೇಳಿದ ಮಾತೆಲ್ಲಾ ನಿಜ. ಆದರೆ ಅರ್ಜುನನ ಬಾಯಲ್ಲಿ ಆ ಮಾತುಗಳು ಆಶ್ಚರ್ಯಕರವಾಗಿ ಅಸ್ವಾಭಾವಿಕವಾಗಿ ತೋರುತ್ತವೆ.

ಅರ್ಜುನನಿಗೆ ನಿಜವಾಗಿ ಯುದ್ಧದಲ್ಲಿ ತಿರಸ್ಕಾರವೂ, ಕೊಲ್ಲುವುದರಲ್ಲಿ ದ್ವೇಷವೂ ಉಂಟಾಗಿದ್ದರೆ, ಕೃಷ್ಣನ ಉಳಿದ ವಾದಕ್ಕೆಲ್ಲ ಅವನು ಸರಿಯಾಗಿಯೇ ಪ್ರತ್ಯುತ್ತರವನ್ನು ಕೊಡುತ್ತಿದ್ದನು.

ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಾಮಿತೇತ್ವಯಂ
ಸಂಭಾವಿ ತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೆ

ಮುಂದಲ ಜನಾಂಗ ನಿನ್ನ ಅಕೀರ್ತಿಯನ್ನು ಸಾರುತ್ತದೆ. ಸಂಭಾವಿತರಿಗೆ ಅಕೀರ್ತಿಗಿಂತ ಮರಣವೇ ಲೇಸು. ಅರ್ಜುನನು ಹೇಳಬಹುದಾಗಿತ್ತು "ನನಗೆ ಕೀರ್ತಿ ಬೇಕಿಲ್ಲ. ರಕ್ತದಲ್ಲಿ ಕೈ ಅದ್ದಲು ನನಗೆ ಇಷ್ಟವಿಲ್ಲ" ಎಂದು. ಕೃಷ್ಣನು ಅರ್ಜುನನು ಅಧೈರ್ಯವನ್ನೂ ಹೇಡಿತನವನ್ನೂ ವ್ಯಕ್ತಪಡಿಸುತ್ತಿರುವನೆಂದನು. ಅರ್ಜುನನು "ನಾನು ಯುದ್ಧ ಮಾಡುವುದಿಲ್ಲ. ಅದು ಹೇಡಿತನವಲ್ಲ. ಅದೇ ನನ್ನ ಹೃದಯದ ಶಕ್ತಿ"

ಎನ್ನಬಹುದಾಗಿತ್ತು. ಆದರೆ ಅವನು ಏನನ್ನೂ ಮಾಡಲಿಲ್ಲ. ಅವನಿಗೆ ಯುದ್ಧ ಬೇಕು. ಆದರೆ ಸ್ವಜನರು ಶತ್ರುಗಳಾಗಿರುವುದು ಅವನಿಗೆ ವಿಷಾದವಾಗಿದೆ. ಗೀತೆಯು ಹಿಂಸೆ ಮತ್ತು ಅಹಿಂಸೆಯ ಪ್ರಶ್ನೆ ಯಾಗಿದ್ದು ಅರ್ಜುನನು ಹಿಂಸೆಗೇ ಸಿದ್ಧವಾಗಿದ್ದರೆ ಗೀತೆಯನ್ನು ಪೂರ್ತಾ ಹೇಳುವ ಪ್ರಮೇಯವೇ ಕೃಷ್ಣನಿಗೆ ಉಂಟಾಗುತ್ತಿರಲಿಲ್ಲ. ಆದರೆ ಅರ್ಜುನನ ಯುದ್ಧದ ಅಸಮಾಧಾನ ಸಾತ್ವಿಕವಾದುದಲ್ಲ. ಆದರೆ ಮೋಹದ ಕಾರಣ, ತಮಸ್ಸಿನ ಕಾರಣ "ಮೋಹ ತಸ್ಯ" ಅಥವ ಅದು ರಾಜಸವೂ ಆಗಬಹುದು. "ದುಃಖಮಿತ್ಯೇವ."

ಆದುದರಿಂದ ಇಲ್ಲಿಯು ಮುಖ್ಯ ಪ್ರಶ್ನೆ ಅರ್ಜುನನ ಅಜ್ಞಾನ ಮತ್ತು ಮೋಹ. ಈ ಮೋಹವನ್ನು ನಾಶಮಾಡುವುದಕ್ಕಾಗಿಯೇ ಗೀತೆ ಹುಟ್ಟಿದುದು. ಪ್ರಾರಂಭದಲ್ಲಿಯೇ ಅರ್ಜುನನು ತನ್ನ ಮನೋ ಭಾವವನ್ನು ಈ ಮಾತುಗಳಲ್ಲಿ ಹೇಳುತ್ತಾನೆ. ಕಾರ್ಪಣ್ಯದೋಷೋಪ ಹತ ಸ್ವ ಭಾವಃ ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ | "ದೈನ್ಯ ದಿಂದಲೂ ಪಾಪಶಂಕೆಯಿಂದಲೂ ನನ್ನ ಧೀರಸ್ವಭಾವವೇ ಹೋಗಿ ನಿನ್ನನ್ನು ಕೇಳುತ್ತಿದ್ದೇನೆ." ಗೀತೆಯ ಉಪದೇಶದಿಂದ ಅಜ್ಞಾನವನ್ನು ಹೋಗಲಾಡಿಸಲು ಪ್ರಯತ್ನಿಸಿದವನಾಗಿ ಕಡೆಯಲ್ಲಿ ಕೃಷ್ಣನು ಅರ್ಜುನ ನನ್ನು ಹೀಗೆ ಕೇಳುತ್ತಾನೆ. "ಕಚ್ಚಿದಜ್ಞಾನ ಸಂಮೋಹಃ ಪ್ರಣಷ್ಟಸ್ತೇ ಧನಂಜಯ" ಅಜ್ಞಾನದಿಂದ ಉಂಟಾದ ಮೋಹವು ನಾಶವಾಯಿತೇ ಅರ್ಜುನ?"ಎಂದು. ಕೃಷ್ಣನು ಕೇಳಿದಾಗ ಅರ್ಜುನನು ಎಲ್ಲಾ ಭಾರತೀ ಯರಿಗೂ ಗೊತ್ತಿರುವ ಈ ಮುಂದಲ ಮಾತುಗಳಲ್ಲಿ ಪ್ರತ್ಯುತ್ತರವನ್ನು ಕೊಡುತ್ತಾನೆ.—

ನಷ್ಟೋ ಮೋಹ ಸ್ಮೃತಿರ್ಲಬ್ಧ ತ್ವತ್ಪ್ರಸಾದಾತ್ ಮಯಾಚ್ಯುತ

ನಿನ್ನ ದಯದಿಂದ (ಪ್ರಸಾದದಿಂದ) ಮೋಹ ನಷ್ಟವಾಯಿತು. ಜ್ಞಾನ ಮತ್ತೆ ಉಂಟಾಯಿತು.

ಇದು ಒಂದು ವಿಚಾರವಾಯಿತು. ಮುಂದಲ ವಿಚಾರ ಇದು· ಸಕಾರಣವಾದ ತರ್ಕವಾದದಂತೆ ಒಂದು ವಾದಕ್ಕೆ ಪ್ರತ್ಯುತ್ತರ ಕೊಡದೆ ಇದ್ದರೆ ಆ ವಾದವನ್ನು ಒಪ್ಪಿದಂತೆ ಆಯಿತು. ಯುದ್ಧದ ಹಿಂಸೆ

ಅನ್ಯಾಯಗಳಿಗೆ ಕೃಷ್ಣ ಎಲ್ಲೂ ಸಮಾಧಾನವನ್ನು ಹೇಳಿಲ್ಲ.

ಹಿಂಸೆಯ ಪ್ರತಿಪಾದನೆಗೆ ಕೆಲವು ಶ್ಲೋಕಗಳನ್ನು ಹೇಳುತ್ತಾರೆ. ಆದರೆ ಆ ಶ್ಲೋಕಗಳು ಹಿಂಸೆಯನ್ನು ಪ್ರತಿಪಾದಿಸುವುದೇ ಇಲ್ಲ. ಉದಾಹರಣೆಗಾಗಿ ಎಂಟನೆಯ ಅಧ್ಯಾಯದಲ್ಲಿ ಕೃಷ್ಣನು ಹೀಗೆ ಹೇಳುತ್ತಾನೆ:

ತಸ್ಮಾತ್ ಸರ್ವೇಷು ಕಾಲೇಷು ಮಾಮನು ಸ್ಮರ ಯುಧ್ಯ ಚ—ಆದುದರಿಂದ ಎಲ್ಲಾ ಕಾಲಗಳಲ್ಲೂ ನನ್ನನ್ನು ಧ್ಯಾನಿಸುತ್ತಾ ಯುದ್ಧ ಮಾಡು. ಯಾವಾಗಲೂ ಯುದ್ಧಮಾಡು ಎಂಬುದರ ಅರ್ಥವೇನು? ಕುರುಕ್ಷೇತ್ರದ ಯುದ್ಧಮಾಡು ಎಂದು ಎಂದಿಗೂ ಅಲ್ಲ. ಕೃಷ್ಣನು ಅರ್ಜುನನಿಗೆ ಹೇಳುತ್ತಿರುವುದು ಸಾಂಕೇತಿಕವಾಗಿ.

ಸಾಯುವಾಗ ನನ್ನನ್ನು ಕುರಿತು ಯೋಚಿಸುವವರು ನನ್ನಲ್ಲಿಗೆ ಬರುತ್ತಾರೆ.

ನನ್ನನ್ನು ಕುರಿತು ಯಾವಾಗಲೂ ಯೋಚಿಸುವವರು ಸಾಯುವಾಗ ನನ್ನನ್ನು ಕುರಿತು ಯೋಚಿಸುತ್ತಾರೆ.

ಯಾವಾಗಲೂ ನನ್ನನ್ನು ಕುರಿತು ಯೋಚಿಸುವವರು ನನ್ನಲ್ಲಿಗೆ ಬರುತ್ತಾರೆ.

ಆದುದರಿಂದ ಕೃಷ್ಣನನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಹೂಡುವ ಯುದ್ಧ ಯಾವ ಒಂದು ಯುದ್ಧವೂ ಅಲ್ಲ. ಅದು ರಾಕ್ಷಸೀ ಮತ್ತು ತಾಮಸಪ್ರವೃತ್ತಿಗಳಿಗೆ ಎದುರಾದ ಎಂದೆಂದಿನ ಅಂತ್ಯವಿಲ್ಲದ ಯುದ್ಧ.

ಈಗ ಗೀತೆಯ ನೇರವಾದ ಸ್ಪಷ್ಟವಾದ ಬೋಧನೆಯನ್ನು ನೋಡೋಣ. ಜ್ಞಾನಿಗೇ ಆಗಲಿ ಭಕ್ತನಿಗೇ ಆಗಲಿ ಯೋಗಿಗೇ ಆಗಲಿ, ಅಹಿಂಸೆಯೇ ಗೀತೆಯ ಧ್ಯೇಯ. ದೇವತ್ವವು, ಅಹಿಂಸೆಯಿಲ್ಲದೆ ಸಾಧ್ಯವಿಲ್ಲ. ಕ್ರೋಧವಿಲ್ಲದೆ ಇರುವುದು, ಶಾಂತಿ—ದಯೆ, ಕರುಣೆ ಮತ್ತು ಶಮೆ ಇವು ಅಹಿಂಸೆಯ ಬೇರೆ ಬೇರೆ ರೂಪಗಳು. ಏಳನೆ ಅಧ್ಯಾಯದಲ್ಲಿ ದೇಹ, ಮನಸ್ಸು, ಮಾತು ಇವುಗಳ ಸಂಪೂರ್ಣವಾದ ದೋಷರಹಿತವಾದ ಪೂರ್ಣ ಸ್ವರೂಪವನ್ನು ಹೇಳಿದ್ದಾರೆ. ಅಹಿಂಸೆಯಿಲ್ಲದೆ ದೇಹವು ಪೂರ್ಣವೂ ದೋಷರಹಿತವೂ ಆಗುವುದಿಲ್ಲ. ಇತರರನ್ನು ಹಿಂಸಿಸದ ಮಾತುಗಳು ಇಲ್ಲದ ಹೊರತು, ಮಾತು ದೋಷರಹಿತ

ವಾಗುವುದಿಲ್ಲ. ಮನಸ್ಸು ದೋಷರಹಿತವಾಗಿರುವುದೆಂದರೆ ಅಹಿಂಸೆಯಿಂದಲ್ಲದೆ ಸಾಧ್ಯವೇ ಇಲ್ಲ ಭಗವಂತನಿಗೆ ಪ್ರಿಯನಾದ ಭಕ್ತನ ವರ್ಣನೆಯನ್ನು ೧೨ನೇ ಅಧ್ಯಾಯದಲ್ಲಿ ನೋಡಿ. ಅವನ ಗುಣಗಳಲ್ಲಿ ಅಹಿಂಸೆ ಮೊದಲನೆಯದು ಅಹಿಂಸೆಯೇ ಕಡೆಯದು. ಅಹಿಂಸೆಯೇ ಮಧ್ಯದ್ದು. ಎಲ್ಲೂ ಅಹಿಂಸೆಯೇ. ಮೊದಲನೆಯ ಶ್ಲೋಕದಲ್ಲಿಯೇ ಅವನು ಯಾರನ್ನೂ ದ್ವೇಷಿಸಕೂಡದೆಂದು, ದಯಾಶಾಲಿಯಾಗಿರಬೇಕೆಂದೂ ಹೇಳಿದೆ. ಇನ್ನೊಂದು ಶ್ಲೋಕದಲ್ಲಿ ಭಕ್ತನು ಯಾರನ್ನೂ ಹಿಂಸಿಸುವುದಿಲ್ಲ. ಯಾರೂ ಅವನನ್ನು ಹಿಂಸಿಸುವುದಿಲ್ಲ ಎಂದು ಹೇಳಿದೆ. ಕೊನೆಯ ಶ್ಲೋಕದಲ್ಲಿ ಮತ್ತೆ ಅವನು ಶತ್ರು ಮಿತ್ರರಲ್ಲಿ ಒಂದೇ ಸಮನಾಗಿರುವನೆಂದು ಹೇಳಿದೆ. ಕ್ಷತ್ರಿಯನ ಗುಣಗಳು " ಶೌರ್ಯಂ, ತೇಜೋಧೃತಿರ್ದಕ್ಷಂ ಯುದ್ಧೇಚಾಪ್ಯಪಲಾಯನಂ—ಇವುಗಳೆಲ್ಲಾ ಧೀರನ ಲಕ್ಷಣಗಳು. ಇವುಗಳು ಕೊಲ್ಲುವ ಧ್ಯೇಯವೇ ಹೊರತು ಕೊಲ್ಲುವುದರಲ್ಲಿ ಪ್ರಾವೀಣ್ಯವಲ್ಲ.

ಕೊನೆಯಲ್ಲಿ ವ್ಯಾಖ್ಯಾನಕಾರರ ವಿಚಾರ ತೆಗೆದುಕೊಳ್ಳೋಣ. ಅವರಲ್ಲಿ ಯಾರೂ ಗೀತೆಯಲ್ಲಿ ಹಿಂಸೆ ಇದೆ ಎಂದು ಹೇಳುವುದಿಲ್ಲ. ಯುಧ್ಯಸ್ವ, ಯುದ್ಧಾಯ ಯುಜ್ಯಸ್ವ, ಎಂದು ವಿಧಿ ಹೇಳಿರುವಲ್ಲಿ ಶಂಕರಾಚಾರ್ಯರು ಇದು ಅಪ್ಪಣೆಯಲ್ಲ, ಅನುಜ್ಞೆ ಎಂದು ಹೇಳುತ್ತಾರೆ."

೪

ಹೀಗೆ ಗಾಂಧಿಯವರ ಮುಖ್ಯಧರ್ಮ ಅಹಿಂಸೆ. ಅದಕ್ಕಿಂತ ದೊಡ್ಡ ಧರ್ಮವಿಲ್ಲ. ಅದರ ಸಾಧನೆಗೆ ಸತ್ಯ ಮೆಟ್ಟಿಲು. ಅಥವಾ ಅಹಿಂಸೆ ಸತ್ಯ ಎರಡೂ ಒಂದೇ ನಾಣ್ಯದ ಎರಡು ಕಡೆಗಳು. ಈ ಸತ್ಯವೇ ದೇವರು. ಕಾಯಾ ವಾಚಾ ಮನಸಾ ಸತ್ಯದ ಅನ್ವೇಷಣೆಯೇ ಗಾಂಧಿಯವರ ಧ್ಯೇಯ. ಅವರ ಜೀವನವೆಲ್ಲಾ ಸತ್ಯಶೋಧನೆಯೇ. ಈ ಸತ್ಯದ ಮಾರ್ಗವೇ ಭಕ್ತಿಯ ಮಾರ್ಗ. ಈ ಮಾರ್ಗದಲ್ಲಿ ಹೇಡಿತನಕ್ಕೂ ಸೋಲಿಗೂ ಸ್ಥಳವಿಲ್ಲ-ಗಾಂಧಿಯವರು ಸತ್ಯವೆನ್ನುವುದು, ಭಗವಂತನೇ ಸ್ವರೂಪವಾದ ಸತ್ಯಕ್ಕೂ ಅನ್ವಯಿಸುತ್ತದೆ. ಹಾಗೆಯೇ ವ್ಯವಹಾರಜೀವನದ ನಿತ್ಯಗಟ್ಟಲೆಯ ಸತ್ಯವೆಂಬುದಕ್ಕೂ ಅನ್ವಯಿಸು

ತ್ತದೆ. ಸತ್ಯವಿಲ್ಲದ ಯಾವ ವ್ಯವಹಾರದಲ್ಲಿಯೂ ಅವರು ಸಂಬಂಧ ವನ್ನು ಇಟ್ಟುಕೊಳ್ಳುವುದಿಲ್ಲ. ಗಾಂಧಿಯವರು ಭಾರತಕ್ಕೆ ಬಂದ ಪ್ರಾರಂಭದಲ್ಲಿ ರೌಲೆಟ್ ಕಾಯಿದೆಗಳನ್ನು ವಿರೋಧಿಸುವ ಸಂದರ್ಭದಲ್ಲಿ ಉಮರ್ ಸೋಹಾನಿಯವರು ಒಂದು ಸಣ್ಣ ಪುಸ್ತಕವನ್ನು ಪ್ರಕಟಿ ಸಿದ್ದರು. ಅದರ ಮೇಲೆ ಎಷ್ಟು ಪ್ರತಿ ಪ್ರಕಟವಾಗಿದೆ ಎಂದು ಬರೆದಿ ದ್ದಿತೋ ಅದಕ್ಕಿಂತ ಹೆಚ್ಚು ಪ್ರತಿಗಳನ್ನು ಅವರು ಅಚ್ಚುಹಾಕಿಸಿದ್ದರು. ಗಾಂಧಿಯವರಿಗೆ ಇದು ತಿಳಿದರೆ ಏನಾಗುವುದೆಂಬುದು ಅವರ ಲಕ್ಷ್ಯಕ್ಕೆ ಬಂದಕೂಡಲೆ ಅವರು ಆ ಪ್ರತಿಗಳನ್ನು ಅರ್ಧರಾತ್ರಿಯಲ್ಲಿ ಸೆವ್ರಿಗೆ ತೆಗೆದುಕೊಂಡುಹೋಗಿ ಸುಟ್ಟುಹಾಕಿದರು. ಆದರೆ ಗಾಂಧಿಯವರಿಗೆ ವಿಚಾರ ತಿಳಿಯಿತು. ಪೋಲೀಸ್ ಕಮಿಷನರಲ್ಲಿ ಹೋಗಿ ತಮ್ಮ ತಪ್ಪನ್ನು ಒಪ್ಪಿಕೊಳ್ಳಬೇಕೆಂದು ಗಾಂಧಿ ಅವರಿಗೆ ಹೇಳಿದರು. ಆದರೆ ಗರ್ವಿಷ್ಠರಾದ ಸೊಹಾನಿಯವರು ಇದಕ್ಕೆ ಒಪ್ಪಲಿಲ್ಲ. ಅವರು ಬೇಕಾದಂತೆ ನೆಗೆದಾಡಿದರು, ಹಾರಾಡಿದರು, ಕೂಗಾಡಿದರು. ಆದರೆ ಗಾಂಧಿ ಕದಲಲಿಲ್ಲ. ಮಾಡಿದ ತಪ್ಪನ್ನು ಒಪ್ಪದಿದ್ದರೆ ತಾವು ರಾಜೀ ನಾಮೆ ಕೊಡುವುದಾಗಿ ಹೇಳಿದರು. ಸೋಹಾನಿ, ಗುಂಡಿನ ಬಾಯಿಗೆ ಕಟ್ಟಿದರೂ ಹೆದರದವರು, ಪೋಲೀಸ್ ಕಮಿಷನರಲ್ಲಿ ಹೋಗಿ ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡರು. ಆ ಬಲಿಷ್ಠನಾದ ಸಿಂಹ ತಪ್ಪನ್ನು ಒಪ್ಪಿಕೊಳ್ಳುತ್ತಿರುವುದರ ಹಿಂದೆ ಗಾಂಧಿಯವರ ಪ್ರಭಾವವನ್ನು ಅರಿತ ಪೋಲೀಸ್ ಕಮಿಷನರಿಗೆ ನಗು ಬಂದಿತು.

ಅಮೃತಸರ್ ಕಾಂಗ್ರೆಸ್‌ನಲ್ಲಿ ಜಲಿಯನ್‌ವಾಲಾಬಾಗ್ ಅತ್ಯಾ ಚಾರಗಳನ್ನು ಖಂಡಿಸುವ ಠರಾವು ಇಡಲ್ಪಡುವುದೆಂದು ಜನರು ನಿರೀಕ್ಷಿ ಸುತ್ತಿದ್ದರು. ಠರಾವೇನೋ ಬಂದಿತು ಆದರೆ ಅದರ ಜತೆಯಲ್ಲಿ ಜಲಿಯನ್‌ವಾಲಾಬಾಗ್‌ದಲ್ಲಿ ಭಾರತೀಯರು ನಡೆಸಿದ ಅತ್ಯಾಚಾರ ವನ್ನೂ ಖಂಡಿಸುವ ಭಾಗ ಅದರಲ್ಲಿ ಸೇರಿತ್ತು. ಪಂಜಾಬಿನಲ್ಲಿ ನಡೆ ದಿದ್ದ ಅನ್ಯಾಯಗಳನ್ನು ಕೇಳಿ ಜನರ ಹೃದಯ ದುಃಖದಿಂದ ವಿದೀರ್ಣ ವಾಗಿತ್ತು. ನಿರಾಯುಧರಾದ ಒಬ್ಬಿಬ್ಬರು ಭಾರತೀಯರು ನಡೆಸಿದ ಅತ್ಯಾಚಾರ, ಡೈಯರ್ ಮಾಡಿದ ನರಮೇಧಕ್ಕೆ ಸಮಾನವಾದುದೆ?

ಎರಡು ಕಡೆಯ ಅತ್ಯಾಚಾರವನ್ನೂ ಒಂದೇ ವಿಧವಾಗಿ ಖಂಡಿಸುವುದೇ ತಾರತಮ್ಯಜ್ಞಾನವೇ ಬೇಡವೆ? ಅನೇಕ ಮುಖಂಡರಿಗೆ ಆ ಠರಾವನ್ನು ಕಂಡು ಕೋಪ ಬಂತು. "ಇದರಲ್ಲಿ ಬೆಸಂಟ್‌ಳ ಕೈವಾಡವಿದೆ. ಅವಳು ಎಂದಿದ್ದರೂ ಬ್ರಿಟಿಷ್'' ಎಂದು ಅನೇಕರು ಯೋಚಿಸಿದರು. ಪಂಜಾಬ್ ಮುಖಂಡರೊಬ್ಬರು "ಭಾರತಮಾತೆಯ ಮಗನಾದವನು ಯಾವನೂ ಈ ನಿರ್ಣಯವನ್ನು ಸಭೆಯ ಮುಂದೆ ತರಲಾರ." ಎಂದು ಹೇಳಿದರು. ಲೋಕಮಾನ್ಯರೂ ಬಿಪಿನ್ ಚಂದ್ರಪಾಲರೂ ದೇಶಬಂಧು ದಾಸರೂ ಠರಾವಿನ ಎರಡನೆ ಭಾಗವನ್ನು ಉಗ್ರವಾಗಿ ಪ್ರತಿಭಟಿಸಿದರು. ಸರ್ಕಾರದ ಅತ್ಯಾಚಾರವನ್ನು ಖಂಡಿಸುವ ಠರಾವು ಮಾತ್ರ ಅಂಗೀಕಾರವಾಯಿತು. ನಮ್ಮವರ ಅತ್ಯಾಚಾರವನ್ನು ಖಂಡಿಸುವ ಭಾಗ, ಬಿದ್ದುಹೋಯಿತು. ಸದಸ್ಯರೆಲ್ಲಾ ಸಂತೋಷದಿಂದ ಮನೆಗಳಿಗೆ ತೆರಳಿದರು.

ಮರುದಿನ ಬೆಳಗಾಗುವ ವೇಳೆಗೆ, ಠರಾವಿನ ಉತ್ತರಾರ್ಧ ಅಂಗೀಕಾರವಾಗದುದರಿಂದ, ಮಹಾತ್ಮರು ರಾತ್ರಿಯೆಲ್ಲಾ ನಿದ್ರೆಮಾಡ ಲಿಲ್ಲವೆಂದು ತಿಳಿಯಿತು. ಕಾಂಗ್ರೆಸ್ ಸದಸ್ಯರನೇಕರು "ಸರಿ, ಒಳ್ಳೆಯ ಸನ್ಯಾಸಿ. ಇವನಿಗೆ ರಾಜಕೀಯವ್ಯಾಕೆ?" ಎಂದು ನಕ್ಕುಬಿಟ್ಟರು. ಮರುದಿನ ರಾಷ್ಟ್ರಪತಿಗಳು, ಮೊದಲ ದಿನದ ಠರಾವನ್ನು ಮತ್ತೆ ಚರ್ಚೆಗೆ ತೆಗೆದುಕೊಳ್ಳಬೇಕೆಂದು ಹೇಳಿದರು. ಗಾಂಧಿಯವರು ಮೇಜಿನ ಮೇಲೆ ಕುಳಿತುಕೊಂಡೇ ಮಾತನಾಡಿದರು. ಗಾಂಧಿಯವರು "ಪಂಜಾಬಿನ ಮುಖಂಡರು ಭಾರತ ರಮಣಿಯ ಹೊಟ್ಟೆಯಲ್ಲಿ ಹುಟ್ಟಿದವರ್ಯಾರೂ ಈ ಠರಾವಿನ ಉತ್ತರಾರ್ಧವನ್ನು ಬರೆದಿರಲಾರರು" ಎಂದು ಹೇಳಿದು ದನ್ನು ಕೇಳಿ ನಾನು ಬಹಳ ಯೋಚಿಸಿದೆ. ಯಾಕೆಂದರೆ ಆ ಠರಾವನ್ನು ರಚಿಸಿದವನು ನಾನೇ. ನನ್ನ ಹೃದಯವನ್ನು ಬಹಳ ಕಾಲ ಪರೀಕ್ಷಿಸಿ ನೋಡಿದನಂತರ ಭಾರತಮಾತೆಯ ಪುತ್ರನಿಗೆ ಹೊರತು ಮತ್ತಾರಿಗೂ ಈ ಠರಾವನ್ನು ರಚಿಸಲು ಸಾಧ್ಯವಿಲ್ಲ ಎಂದು ನನಗೆ ನಂಬಿಕೆಯಾಗಿದೆ." ಎಂದು ಪ್ರಾರಂಭಿಸಿ ತಮ್ಮ ಹೃದಯವನ್ನು ಸಭಿಕರ ಮುಂದೆ ತೆರೆದರು. ಸುಮಾರು ಒಂದು ಗಂಟೆಯಕಾಲ ತಮ್ಮ ಮಾತುಗಳ ಮೇಲೆಯೇ ತಮ್ಮ ಜೀವ ಅವಲಂಬಿಸಿದ್ದಂತೆ ಅವರು ಮಾತನಾಡಿದರು. ಆ ಮಾತು

ಗಳ ಮಂತ್ರ, ನಿಧಾನವಾಗಿ ಸಭಿಕರ ಬಗೆಯನ್ನು ಮುಟ್ಟತೊಡಗಿತು. "ಈ ಠರಾವು ಇಲ್ಲದಿದ್ದರೆ ಉಳಿದ ಠರಾವುಗಳೆಲ್ಲ ವ್ಯರ್ಥ. ನಮ್ಮವರು ಮಾಡಿದ ಅತ್ಯಾಚಾರಗಳನ್ನು ಖಂಡಿಸದೆ ಸರ್ಕಾರದವರು ಮಾಡಿದ ಅತ್ಯಾಚಾರಗಳನ್ನು ಖಂಡಿಸುವುದಾಗಲಿ, ಜನರಲ್ ಡೈಯರ್ ಸರ್ ಮೈಕೆಲ್ ಒಡ್ವೈಯರ್ ಇವರನ್ನು ಖಂಡಿಸುವುದಾಗಲಿ, ವೈಸರಾಯರನ್ನು ಹಿಂದಕ್ಕೆ ಕರೆಸಿ, ಎಂದು ಹೇಳುವುದಾಗಲಿ ಅರ್ಥವಿಲ್ಲದ ಮಾತು. ಏಪ್ರೆಲ್ ತಿಂಗಳಿನಲ್ಲಿ ನಮ್ಮ ಜನರು ಮಾಡಿದ ಅತ್ಯಾಚಾರಕ್ಕೆ ಈ ಠರಾವು ಪ್ರಾಯಶ್ಚಿತ್ತದಂತೆ. ನಾವು ಶಿಸ್ತಿನಿಂದ ಮುಂದುವರಿಸಬೇಕಾದರೆ ನಮ್ಮವರು ಯಾವ ರೂಪದಲ್ಲೇ ಆಗಲಿ ಮಾಡುವ ಹಿಂಸೆಯನ್ನು ನಾವು ಖಂಡಿಸಬೇಕು. ಪಾಶ್ಚಾತ್ಯರಲ್ಲಿ ಆಗಾಗ್ಗೆ ಜನರು ಹಿಂಸೆಯ ಮಾರ್ಗವನ್ನು ಅವಲಂಬಿಸುತ್ತಾರೆಂಬುದು ನಿಶ್ಚಯ. ಆದರೆ ಸಾರ್ವಜನಿಕ ಅಭಿಪ್ರಾಯವನ್ನು ಅಹಿಂಸೆಗೆ ಅಭಿಮುಖವಾಗಿ ಬೆಳೆಯಿಸಿ ಇಂಡಿಯಾದಲ್ಲಿ ಹಿಂಸೆ ಸಾಧ್ಯವಾಗದಂತೆ ನಾವು ಮಾಡಬೇಕು. ಏಪ್ರೆಲ್ ೬ನೇ ತಾರೀಖು ನಮಗೆ ನಿಜವಾದ ಶಕ್ತಿ ಬಲ ಬಂದಿತು. ನಮ್ಮ ಸ್ವಂತ ತಪ್ಪಿನಿಂದಲೇ ಸತ್ಯಾಗ್ರಹ ಏಪ್ರೆಲ್‌ನಲ್ಲಿ ಅಪಜಯವನ್ನು ಹೊಂದಿತು. ಹಾಗೆ ಆಗದೆ ಇದ್ದಿದ್ದರೆ ರ್‍ಲೆಟ್ ಕಾನೂನು ರದ್ದಾಗುತ್ತಿದ್ದಿತು. ಮತ್ತು ಬ್ರಿಟಿಷ್ ಜನರಲ್ ಹುಚ್ಚನಾಗಿ ನಡೆಯುವ ಅವಮಾನಕರವಾದ ಪ್ರಸಂಗವನ್ನು ನಾವು ನೋಡುವುದೂ ತಪ್ಪುತ್ತಿದ್ದಿತು. ಸ್ವರಾಜ್ಯ ನಮ್ಮ ಸ್ವಾಧೀನಕ್ಕೆ ಬಂದನಂತರ, ಸಂಯಮವಿಲ್ಲದೆ ಯಾವ ಕೆಲಸವನ್ನೂ ಮಾಡಲು ಸಾಧ್ಯವಾಗುವುದಿಲ್ಲವೆಂಬುದು ನಮಗೆ ಗೊತ್ತು. ಸ್ವಾಭಾವಿಕವಾಗಿ ಜನ ಶಾಂತವಾಗಿರುವ ಈ ದೇಶದಲ್ಲಿ, ಹಿಂಸೆ ಜನರ ಸ್ವಭಾವವಾದರೆ, ಸರ್ಕಾರವನ್ನು ನಡೆಸುವುದೇ ಕಷ್ಟವಾಗುತ್ತದೆ. ಈ ಹಿಂಸೆಯ ಮನೋಭಾವವನ್ನು ಬದಲಾಯಿಸಲು ಆಯುಧಗಳಿಗಿಂತ ಸಾರ್ವಜನಿಕ ಅಭಿಪ್ರಾಯಗಳು ಹೆಚ್ಚು ಫಲಕಾರಿಯಾಗುತ್ತವೆ. ನಮ್ಮ ನಡತೆ ಸರಿ ಎಂಬುದರ ಗುರುತಿಗಾಗಿಯೂ ದೇಶಕ್ಕೆ ಮೇಲುಪಂಗ್ತಿಯಾಗುವುದಕ್ಕಾಗಿಯೂ ಈ ಠರಾವಿಗೆ ನಾನು ಮೊದಲನೆ ಸ್ಥಾನವನ್ನು ಕೊಡುತ್ತೇನೆ." ಗಾಂಧಿಯವರು ಮಾತನಾಡು

ತ್ತಿರುವಾಗ ಸಭಿಕರು ನಿಶ್ಯಬ್ದವಾಗಿ ಕುಳಿತಿದ್ದರು. ಲೋಕಮಾನ್ಯ ತಿಲಕರೂ ಅಲ್ಲಿ ಇದ್ದರು. ಮೊದಲ ದಿವಸ ಠರಾವನ್ನು ವಿರೋಧಿಸಿದವರೇ ಮರುದಿವಸ ಒಪ್ಪಿದರು. ಹಳೆಯ ಮುಖಂಡರನೇಕರು ಠರಾವಿನ ಸೂಚಕರನ್ನು ಮನಸ್ಸಿನಲ್ಲಿಯೇ ಹರಿದು ಚೂರುಚೂರು ಮಾಡಿದರು; ಆದರೆ ಕೊನೆಯಲ್ಲಿ ಗಾಂಧಿಯವರ ಠರಾವು ಅದು ಇದ್ದಂತೆ ಅಂಗೀಕೃತವಾಯಿತು. ಗಾಂಧಿಯವರು ಅಂದಿನಿಂದಲೇ ಭಾರತದ ನೇತೃವಾದರು.

ಅಹಿಂಸೆ ಹೇಡಿಗಳ ಅಸ್ತ್ರವಲ್ಲ. ಹೇಡಿಗಳು ಮಾಡುವ ಅಹಿಂಸೆಯಿಂದ ರಾಷ್ಟ್ರವು ನೀತಿರಹಿತವಾಗುತ್ತದೆ. ಮತ್ತೊಬ್ಬನನ್ನು ಆಯುಧದಿಂದ ಕೊಲ್ಲಲು ಎಷ್ಟು ಧೈರ್ಯ ಬೇಕೋ, ಅವನ ಕತ್ತಿಗೆ ಎದೆಯನ್ನು ಒಡ್ಡಲು ಅಷ್ಟೇ ಧೈರ್ಯ ಬೇಕು. ಅದಕ್ಕಿಂತ ಹೆಚ್ಚಾದ ಧೈರ್ಯ ಬೇಕು. ಅಹಿಂಸೆ ಎಲ್ಲ ರೋಗಗಳಿಗೂ ಸಂಜೀವಿನಿ, ಬ್ರಹ್ಮಾಸ್ತ್ರ. ಇದು ಕೆಲಸಮಾಡದ ಜಾಗವೂ ಸನ್ನಿವೇಶವೂ ಯಾವುದೂ ಇಲ್ಲ. ಸಂಸಾರದಲ್ಲಿ, ರಾಜ್ಯದ ಆಡಳಿತದಲ್ಲಿ ಹಿಂದು ಮುಸಲ್ಮಾನರ ಐಕ್ಯತೆಯಲ್ಲಿ ದೇಶದ ಒಳಗಿನ ಶಾಂತಿ ರಕ್ಷಣೆಯಲ್ಲಿ, ಹೊರಗಿನಿಂದ ಶತ್ರುಗಳು ಮೇಲೆ ಬಂದು ಬಿದ್ದಲ್ಲಿ, ಒಟ್ಟಿನಲ್ಲಿ ಯಾವಾಗಲೂ ಅಂಹಿಸೆ ಸಂಜೀವಿನಿಯಂತಹ ಅಸ್ತ್ರ. ಆದರೆ ಇದನ್ನು ಉಪಯೋಗಿಸುವವನು ಅದನ್ನು ಉಪಯೋಗಿಸುವ ವಿದ್ಯದಲ್ಲಿ ಪಾರಂಗತನಾಗಿರಬೇಕು. ಅಹಿಂಸೆಯೂ ಒಂದು ಶಾಸ್ತ್ರದಂತೆ. ಅದರಲ್ಲಿ ಅಧಿಕಾರವುಳ್ಳವರಿಗೆ ಮಾತ್ರ, ಅದು ಕರಗತವಾಗುತ್ತದೆ. ಶಸ್ತ್ರದ ಯುದ್ಧದಲ್ಲಿ ತಯಾರಿ ತೆಗೆದುಕೊಳ್ಳುವಂತೆ ಅಹಿಂಸೆಯ ಯುದದಲ್ಲಿಯೂ ತಯಾರಿ ತೆಗೆದುಕೊಳ್ಳಬೇಕು. ಕೆಲವು ಸಂದರ್ಭದಲ್ಲಿ ಅಹಿಂಸೆಯಿಂದ ನಮಗೆ ಬೇಕಾದ ಜಯ ಲಭಿಸದಿದ್ದರೆ ತಪ್ಪು ಅಹಿಂಸೆಯದಲ್ಲ. ಅದನ್ನು ಉಪಯೋಗಿಸುವವರಲ್ಲಿ ಅದಕ್ಕೆ ಬೇಕಾದ ತ್ಯಾಗವೂ ಎದುರು ಕಕ್ಷಿಯ ವಿಷಯದಲ್ಲಿ ನಮ್ಮ ಹೃದಯದಲ್ಲಿ ಪ್ರೇಮವೂ ಇದ್ದಿರಲಿಲ್ಲವೆನ್ನಬೇಕು. ಹಿಂಸೆ ಎಲ್ಲಿ ಯಾವ ರೂಪದಲ್ಲಿ ತೋರಿದರೂ ಅದು ಪಶುಶಕ್ತಿಯೇ. ಕಾಂಗ್ರೆಸ್ ಮಂತ್ರಿಗಳು ಜನರನ್ನು ಹತೋಟಿಗೆ ತರಲು ಹಿಂಸಾಮಾರ್ಗವನ್ನು ಅನುಸರಿಸಿದುದು,

ಅಹಿಂಸೆ ಅವರ ರಕ್ತಗತವಾಗಿಲ್ಲವೆಂಬುದನ್ನು ತೋರಿಸುತ್ತದೆ. ಅವರೂ ಬ್ರಿಟಿಷ್ ಸರ್ಕಾರದವರಂತೆ ಬಂದೂಕದಿಂದಲ್ಲದೆ ಆಳಲು ಸಾಧ್ಯವಿಲ್ಲ ವೆನ್ನುವುದಾದರೆ ಅವರಿಗೂ ಪರದೇಶದ ಸರ್ಕಾರಕ್ಕೂ ವ್ಯತ್ಯಾಸವೇನು? ಕಾಂಗ್ರೆಸ್ ಮಂತ್ರಿಗಳು ಅಹಿಂಸಾಮಾರ್ಗವನ್ನು ಅವಲವಂಬಿಸಬೇಕು. ಆ ಪ್ರಯತ್ನದಲ್ಲಿ ದೇಹತ್ಯಾಗಮಾಡಬೇಕು. ಹಿಂದು ಮುಸ್ಲಿಂ ಕದನ ದಲ್ಲಿ, ಅಹಿಂಸೆಯಿಂದ, ಗಣೇಶಶಂಕರ ವಿದ್ಯಾರ್ಥಿಯಂತೆ ದೇಹತ್ಯಾಗ ಮಾಡಬೇಕು ಹಿಂಸೆಯಿಂದ ಹೊಂದಿದ ಜಯ ಜಯುವೇ ಅಲ್ಲ.

ಹಿಂಸೆಯ ಜಯ, ಗೋಳಿನ ವೈಭವದಲ್ಲಿ ಕೊನೆಯಾಗುತ್ತದೆ. ಹಿಂಸೆ ಗಾಂಧಿಯವರ ಎದೆಯನ್ನು ನಡುಗಿಸುವಷ್ಟು ಮತ್ತಾವುದೂ ನಡುಗಿಸುವುದಿಲ್ಲ. ಹಿಂಸೆಗೆ ಅವರೇ ಬಾರಾಮಿಟರ್. ದೇಶದಲ್ಲಿ ಎಲ್ಲಿ ಯಾವ ರೂಪದಲ್ಲಿ ಹಿಂಸೆ ನಡೆಯಲಿ, ಅವರು ತತ್‌ಕ್ಷಣ ಮಂಕಾಗು ತ್ತಾರೆ. ಭಗವಂತನಲ್ಲಿ ಮರೆಹೊಗುತ್ತಾರೆ. ೧೯೩೭ನೇ ಕಾಂಗ್ರೆಸ್ ಪ್ರಾಂತಸರ್ಕಾರಗಳ ಕಾಲದಲ್ಲಿ, ಹಿಂಸೆ ದಂಗೆ ನಡೆದಾಗ, ಗಾಂಧಿ ಸೇವಾ ಸಂಘದ ಸದಸ್ಯರನ್ನು ಕುರಿತು, ಅವರು ಹೇಳಿದ ಮಾತುಗಳು ಹಿಂಸೆ ಯನ್ನು ಎದುರಿಸುವ ಸಲುವಾಗಿ ಆ ಜೀವದ ಕಾತರತೆಯನ್ನು ತೋರಿ ಸುತ್ತವೆ "ನಮ್ಮದು ಅಹಿಂಸೆಯ ಧರ್ಮ. ಈ ಧರ್ಮವನ್ನು ಪ್ರತಿದಿನವೂ ನಾವು ಜೀವನದಲ್ಲಿ ನಿತ್ಯ ವ್ಯವಹಾರದಲ್ಲಿ ತೋರಿಸದಿದ್ದರೆ ಆ ಧರ್ಮಕ್ಕೆ ಏನಾದರೂ ಬೆಲೆಯುಂಟೆ? ನಮ್ಮ ಧ್ಯೇಯದ ಕಡೆಗೆ ನಾವು ನಿತ್ಯ ಹೋಗುತ್ತಿದ್ದೇವೆ ಎಂದು ನಮಗೆ ಅನ್ನಿಸುತ್ತಿದೆಯೆ? ನಾವು ಈಗ ಒಂದು ವರುಷದಲ್ಲಿ ಸೇರಿದಾಗ ಇದ್ದುದಕ್ಕಿಂತ ಈಗ ಇನ್ನೂ ಹೆಚ್ಚು ಹಿಂಸಾಪ್ರೇಮಿಗಳಿದ್ದೇವೆಯೆ? ನಾವು ಕೋಪವನ್ನೂ ಬೇಸರಿಕೆ ಯನ್ನೂ ತೋರಿಸುತ್ತಿರುವ ಸಂದರ್ಭಗಳು ಕಡಿಮೆಯಾಗುತ್ತಿವೆಯೆ? ನಾವು ಈ ಪ್ರಶ್ನೆಗಳನ್ನು ನಮ್ಮನ್ನು ಪದೇ ಪದೇ ಕೇಳಿಕೊಳ್ಳಬೇಕು. ಯಾಕೆಂದರೆ ಅಹಿಂಸೆಯ ಮತ್ತು ಸತ್ಯದ ಮಾರ್ಗ ಕತ್ತಿಯ ಅಲಗಿ ನಂತೆ ಹರಿತವಾಗಿದೆ. ಅದರ ಅಭ್ಯಾಸ, ನಿತ್ಯದ ಆಹಾರಕ್ಕಿಂತ ನಮಗೆ ಹೆಚ್ಚು ಆವಶ್ಯಕವಾದುದು. ಸರಿಯಾಗಿ ತೆಗೆದುಕೊಂಡ ಆಹಾರ ದೇಹವನ್ನು ಪೋಷಿಸುತ್ತದೆ. ಸರಿಯಾಗಿ ಅಭ್ಯಾಸಮಾಡಿದ ಅಹಿಂಸೆ

ಆತ್ಮವನ್ನು ಪೋಷಿಸುತ್ತದೆ. ದೇಹಕ್ಕೆ ಆಹಾರವನ್ನು ಕ್ಲಿಪ್ತವಾದ ಕಾಲಗಳಲ್ಲಿ ಕ್ಲಿಪ್ತವಾದ ಅಳತೆಯಲ್ಲಿ ತೆಗೆದುಕೊಳ್ಳಬೇಕು. ಆದರೆ ಆತ್ಮದ ಆಹಾರವಾದ ಅಹಿಂಸೆಯನ್ನು ಉಸಿರಿನಂತೆ ಯಾವಾಗಲೂ ತೆಗೆದುಕೊಳ್ಳುತ್ತಲೇ ಇರಬೇಕು. ಇದರಲ್ಲಿ ತೃಪ್ತಿ ಎಂಬುದಿಲ್ಲ. ಪ್ರತಿಯೊಂದು ನಿಮಿಷದಲ್ಲಿಯೂ ಆ ಗುರಿಯ ಕಡೆಗೆ ಎಚ್ಚರಿಕೆಯಿಂದ ಹೋಗುವ ಪ್ರಯತ್ನ ಮಾಡಬೇಕು. ನಮ್ಮ ಎಲ್ಲಾ ಕೆಲಸಗಳನ್ನೂ ಆದರ ದೃಷ್ಟಿಯಲ್ಲಿ ಪರೀಕ್ಷಿಸಬೇಕು.

"ಅಹಿಂಸೆಗೆ ಮೊದಲನೆಯ ಮೆಟ್ಟಲು, ನಮ್ಮ ನಿತ್ಯ ವ್ಯವಹಾರದಲ್ಲಿ, ನಮ್ಮ ನಮ್ಮೊಳಗೆ ಸತ್ಯ ನಮ್ರತೆ ಸಹನೆ ಪ್ರೀತಿ ಕರುಣೆ ಇವುಗಳನ್ನು ಅಭ್ಯಾಸಮಾಡುವುದು. ಇಂಗ್ಲಿಷಿನಲ್ಲಿ ಪ್ರಾಮಾಣಿಕತೆ ಉತ್ತಮವಾದ ದಾರಿ ಎನ್ನುತ್ತಾರೆ. ಆದರೆ ಅಹಿಂಸೆ ಬರಿಯ ದಾರಿಯಲ್ಲ. ದಾರಿಗಳು ಬದಲಾಯಿಸುತ್ತವೆ. ಬದಲಾಯಿಸಬಹುದು. ಅಹಿಂಸೆಯು ಬದಲಾವಣೆ ಹೊಂದದ ಧರ್ಮ. ನಿಮ್ಮ ಸುತ್ತ ಹಿಂಸೆಯು ಉರಿ ಉರಿಯಾಗಿ ಏಳುತ್ತಿದ್ದರೂ, ಅಹಿಂಸೆಯನ್ನು ಅನುಸರಿಸಿಕೊಂಡು ಹೋಗಬೇಕಾಗುತ್ತದೆ. ಅಹಿಂಸೆಯನ್ನು ಅನುಸರಿಸುವವನೊಂದಿಗೆ ಅಹಿಂಸೆಯಿಂದಿರುವುದು ಹೆಚ್ಚಲ್ಲ. ಅದು ಅಹಿಂಸೆಯೋ ಅಲ್ಲವೋ ಹೇಳುವುದೇ ಕಷ್ಟವಾಗುತ್ತದೆ ಆದರೆ ಹಿಂಸೆಗೆ ಎದುರಾಗಿ ಅಹಿಂಸೆಯನ್ನು ನಿಲ್ಲಿಸಿದರೆ ಆಗ ನಿಜವಾದ ವ್ಯತ್ಯಾಸ ಗೊತ್ತಾಗುತ್ತದೆ. ಇದನ್ನು ಮಾಡಬೇಕಾದರೆ ನಾವು ಯಾವಾಗಲೂ ಎಚ್ಚರವಾಗಿರಬೇಕು. ಯಾವಾಗಲೂ ಕಣ್ಣು ಬಿಟ್ಟುಕೊಂಡಿರಬೇಕು. ಯಾವಾಗಲೂ ಪ್ರಯತ್ನಿಸುತ್ತಿರಬೇಕು. ಇಲ್ಲದಿದ್ದರೆ ಸಾಧ್ಯವಿಲ್ಲ.

"ಹರಿಪುರದಲ್ಲಿ ನನಗೆ–ನಮ್ಮ ಕುಂದುಕೊರತೆಗಳು ಏನೇ ಇರಲಿ,- ನನ್ನ ಜೀವಿತ ಕಾಲದಲ್ಲಿ ಸ್ವರಾಜ್ಯ ನಮ್ಮ ಕರಗತವಾಗಬಹುದೆಂದು ತೋರಿತು. ವರುಷ ಮುಗಿಯುವುದರೊಳಗಾಗಿ ನಮಗೆ ಆ ಶಕ್ತಿ ಬರಬಹುದೆಂದು ನಾನು ತಿಳಿದೆ. ಆದರೆ ಅಲಹಾಬಾದ್ ಮತ್ತು ಇತರ ಸ್ಥಳಗಳ ದಂಗೆಗಳು ಸಿಡಿಲಿನಂತೆ ಬಂದವು. ನಾವು ನಾಚಿಕೆಯಿಲ್ಲದೆ ಪೋಲಿಸು ಮತ್ತು ಸೈನ್ಯದ ಸಹಾಯವನ್ನು ಪಡೆದುದು

ನಮಗೆ ಬಹಳ ಅವಮಾನವಾಯಿತು.

" ವೈಸರಾಯ್, ಕಾಂಗ್ರೆಸ್ ಅಧ್ಯಕ್ಷರಿಗೆ ಹೇಳಿಕಳುಹಿಸಿ ರಾಜಿ ಮಾಡಿಕೊಳ್ಳಲು ಇಷ್ಟಪಡುತ್ತಾರೆಂದು ಇಟ್ಟುಕೊಳ್ಳಿ. ಆಗ ಕಾಂಗ್ರೆಸ್ ಅಧ್ಯಕ್ಷರಿಗೆ " ಕಾಂಗ್ರೆಸ್‌ಗೆ ರಾಜ್ಯದ ಸೂತ್ರ ವಹಿಸಿಕೊಳ್ಳುವ ದಕ್ಷತೆ ಇದೆ. ಬ್ರಿಟಿಷರು ಹೋಗಬಹುದು '' ಎಂದು ಹೇಳುವ ಶಕ್ತಿ ಇದೆಯೆ ? " ನಮಗೆ ಪೋಲಿಸು ಮಿಲಿಟರಿ ಬೇಡ. ಅವುಗಳ ಸಹಾಯವಿಲ್ಲದೆ ನಾವು ದೇಶಿಯ ರಾಜರು ಜಮಿನ್‌ದಾರರು ಮುಸಲ್ಮಾನರು ಇವರೊಡನೆ ತೀರ್ಮಾನಕ್ಕೆ ಬರುತ್ತೇವೆ '' ಎಂದು ಹೇಳಲು ನಮಗೆ ಆಗುತ್ತದೆಯೆ ? ಇವರೊಂದಿಗೆ ನಾವು ಸುಲಭವಾಗಿ ತೀರ್ಮಾನಕ್ಕೆ ಬರುತ್ತೇವೆಂದು ಹೇಳುವುದು ನಮಗೆ ಕಷ್ಟವಾಗುವುದೆಂದು ನನಗೆ ತೋರುವುದು. ಆದರೂ ನಾವು ನಿಜವಾಗಿ ಅಹಿಂಸಾವಾದಿಗಳಾಗಿದ್ದರೆ ಹೀಗೆ ಹೇಳಬಹುದಾಗಿತ್ತು. ಮತ್ತು ಅದರಂತೆ ಸುಲಭವಾಗಿ ಮಾಡಬಹುದಾಗಿತ್ತು.

" ಆದುದರಿಂದ ನಾನು ನಿಮ್ಮನ್ನೂ ನನ್ನನ್ನೂ ಈ ಪ್ರಶ್ನೆಯನ್ನು ಕೇಳುತ್ತೇನೆ. ನಮ್ಮ ಅಹಿಂಸೆ ದುರ್ಬಲರ ಅಹಿಂಸೆಯೇ ಅಥವ ಬಲಶಾಲಿಗಳ ಅಹಿಂಸೆಯೆ. ಅದು ಸ್ವಲ್ಪಮಟ್ಟಿಗೆ ದುರ್ಬಲರ ಕೈಯಲ್ಲಿ ಉಪಯೋಗಕ್ಕೆ ಬರುತ್ತದೆ ಎಂಬುದು ನಿಶ್ಚಯ. ಹಾಗೆ ಅದು ನಮಗೆ ಉಪಯೋಗಕ್ಕೆ ಬಂದಿದೆ. ಆದರೆ ಅದು ನಮ್ಮ ದೌರ್ಬಲ್ಯಕ್ಕೆ ಒಂದು ಮುಸುಕು ಆದಾಗ ನಮ್ಮನ್ನು ನಪುಂಸಕರನ್ನಾಗಿ ಮಾಡುತ್ತದೆ. ಈ ನಪುಂಸಕತೆಗಿಂತ, ದೇಹದ ಶಕ್ತಿಯನ್ನು ಉಪಯೋಗಿಸುವವರ ಧೈರ್ಯ ಬಹಳ ಉತ್ತಮವಾದುದು. ಪ್ರಾರಂಭದಲ್ಲಿ ನಾವೆಲ್ಲ ಬಹುಶಃ ಪಶುಗಳೇ ಆಗಿದ್ದೆವು. ನಿಧಾನವಾಗಿ ಅನೇಕ ಜನ್ಮಗಳ ನಂತರ ನಾವು ಪಶುಗಳಿಂದ ಮನುಷ್ಯರಾಗಿದ್ದೇವೆಂದು ನಾನು ನಂಬಲು ಸಿದ್ಧನಾಗಿದ್ದೇನೆ. ಹೀಗೆ ನಾವು ಪಶುಶಕ್ತಿಯೊಂದಿಗೆ ಜನಿಸಿದೆವು, ಆದರೆ ನಮ್ಮಲ್ಲಿ ವಾಸಿಸುವ ದೇವರನ್ನು ನಾವು ತಿಳಿಯಲೆಂದು ಮನುಷ್ಯರಾಗಿ ಹುಟ್ಟಿದೆವು. ಅದೇ ಮನುಷ್ಯನ ಹೆಚ್ಚಾದ ಹಕ್ಕು. ಅದೇ ಪ್ರಾಣಿಗಳಿಂದ ಅವನನ್ನು ಬೇರೆಯಾಗಿ ಮಾಡುವುದು. ಆದರೆ

ದೇವರನ್ನು ಹಾಗೆ ತಿಳಿಯಬೇಕಾದರೆ ಜೀವವಿರುವುದರಲ್ಲೆಲ್ಲಾ ಅವನನ್ನು ಕಾಣಬೇಕು. ಸೃಷ್ಟಿಯೊಂದಿಗೆ ಒಂದಾಗಬೇಕು. ನಾವು ಸ್ವಂತ ಇಚ್ಛೆಯಿಂದ ಪಶುಶಕ್ತಿಯನ್ನು ತಿರಸ್ಕರಿಸಿ, ನಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ಅಡಗಿ ಇರುವ ಅಹಿಂಸೆಯ ಕಿಡಿಯನ್ನು ಬೆಳಗಿಸಿದುದಲ್ಲದೆ ಇದು ಸಾಧ್ಯವಿಲ್ಲ. ಹೀಗಾಗುವುದು ನಮ್ಮ ಶಕ್ತಿಯಿಂದ ಮಾತ್ರ ಸಾಧ್ಯ. ಬಲಶಾಲಿಗಳ ಅಹಿಂಸೆ ನಮ್ಮಲ್ಲಿದೆಯೆ? ಇದು ಅಸಾಧ್ಯವಾದ ಧ್ಯೇಯವೆಂದು ಅದನ್ನು ಬಿಟ್ಟು ಹಿಂಸೆಯ ಮಾರ್ಗವನ್ನು ಅವಲಂಬಿಸಲು ನಮಗೆ ಅವಕಾಶವುಂಟು. ಆದರೆ ನಾವು ಯಾವ ದಾರಿಯನ್ನು ಅನುಸರಿಸುತ್ತೇವೆ ಎಂಬುದನ್ನು ಯೋಚಿಸಿ ಆರಿಸಿಕೊಳ್ಳಬೇಕು.

"ಇದು ಬಲಿಷ್ಠರ ಆಯುಧವಾದರೆ, ಸ್ವಾಭಾವಿಕವಾಗಿ ಕೆಲವು ತೀರ್ಮಾನಕ್ಕೆ ನಾವು ಅನಿವಾರ್ಯವಾಗಿ ಬರಬೇಕಾಗುತ್ತದೆ. ಹಿಂದು ಮುಸಲ್ಮಾನರ ಮನಸ್ಸುಗಳನ್ನು ಸರಿಯಾದ ಹತೋಟಿಗೆ ತಂದು ಎರಡು ಪಂಗಡದವರಿಗೂ ಇರುವ ವೈಮನಸ್ಸನ್ನು ಕಡಿಮೆಮಾಡಲು ನಾವು ಶಕ್ತರಾಗಬೇಕು. ಅಹಿಂಸೆಯ ಅನುಯಾಯಿಗಳಾದ ನಾವು ದಂಗೆಗಳನ್ನು ನಿಲ್ಲಿಸಲು ಏನುಮಾಡಬೇಕು? ಎಂಬುದಾಗಿ ನೀವು ಕೇಳಬಹುದು. ಈ ದಂಗೆಗಳನ್ನು ಅಡಗಿಸುವುದು ಮುಖ್ಯವಾಗಿ ಕಾಂಗ್ರೆಸ್ ಕಮಿಟಿಗಳ ಕೆಲಸವಾಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿದ್ಧರಾಗಿರಲು ನಾವು ಸಾವಿರಾರು ಕಾಂಗ್ರೆಸ್ ಸ್ವಯಂಸೇವಕರನ್ನು ಇಟ್ಟುಕೊಂಡಿರಬೇಕು ೧೯೨೧ರಲ್ಲಿ ಸ್ವಯಂಸೇವಕರು ಮಾತಿನಲ್ಲಿಯೂ ಯೋಚನೆಯಲ್ಲಿಯೂ ಕಾರ್ಯದಲ್ಲಿಯೂ ಅಹಿಂಸೆಯುಳ್ಳವರಾಗಿರಬೇಕೆಂದು ಒಂದು ಪ್ರಮಾಣವಚನವನ್ನು ತೆಗೆದುಕೊಂಡರು. ಖಿಲಾಫತ್‌ನವರೂ ಸ್ವೀಕರಿಸಿದ ಆ ಪ್ರಮಾಣವಚನವನ್ನು ಕಾಂಗ್ರೆಸ್ ಅಧ್ಯಕ್ಷರಾದ ಹಕ್ಕಿಂ ಅಜಮಲ್‌ಖಾನರೂ ಸ್ವೀಕರಿಸಿದರು. ಖಿಲಾಫತ್ ಸಮ್ಮೇಳನದವರು ಸುಲಭವಾಗಿ ಆ ಪ್ರಮಾಣವಚನವನ್ನು ತೆಗೆದುಕೊಳ್ಳಲಿಲ್ಲ. ಸ್ವಯಂಸೇವಕನು ಮಾತಿನಲ್ಲಿಯೂ ಕಾರ್ಯದಲ್ಲಿಯೂ ಅಹಿಂಸಾಯುತನಾಗಿರುವುದು ಸರಿ. ಆದರೆ ಯೋಚನೆಯಲ್ಲಿಯೂ

ಅಹಿಂಸಾಯುತನಾಗಿರಬೇಕಾದರೆ ಅಸಾಧ್ಯ ಎಂದು ಕೆಲವು ಮುಸಲ್ಮಾನರು ಹೇಳಿದರು. ಅವರು, "ನಾನು ಅವರ ಮನಸ್ಸಿಗೂ ಯಜಮಾನನಾಗಲು ಬಯಸುತ್ತಿರುವೆನೆಂದು" ಹೇಳಿದರು. ನಾನು "ಇಲ್ಲ ಯಜಮಾನಿಕೆ ಅಹಿಂಸೆಯದೇ ಹೊರತು ಯಾವನೊಬ್ಬನದೂ ಅಲ್ಲ" ಎಂದು ಹೇಳಿದೆ. ಕೊನೆಯಲ್ಲಿ ಅವರು ಪ್ರಮಾಣವಚನವನ್ನು ಸ್ವೀಕರಿಸಿದರು. ಹದಿನೇಳು ವರುಷವಾದರೂ ಆ ಅಹಿಂಸೆಯಿಂದ ಬರಬೇಕಾದ ಅಸಾಧ್ಯವಾದ ಶಕ್ತಿ ನಮಗೆ ಇನ್ನೂ ಬರಲಿಲ್ಲ. ಇದಕ್ಕೆ ಕಾರಣ ಅಂತಹ ಅಹಿಂಸೆಯ ಸೈನ್ಯವನ್ನು ಸಿದ್ಧಪಡಿಸಲು ನಾವು ದುಡಿದಿಲ್ಲ, ಕಷ್ಟಪಟ್ಟಿಲ್ಲ, ಕೆಲಸ ಮಾಡಿಲ್ಲ. ನಾವು ಹಾಗೆ ಮಾಡಲಾರೆವಾದರೆ, ನಮ್ಮ ಪ್ರಮಾಣವಚನದಂತೆ ನಾವು ನಡೆಯಲಾರೆವಾದರೆ, ನಮ್ಮ ಅಭಿಪ್ರಾಯಗಳನ್ನು ಮತ್ತೆ ಬದಲಾಯಿಸುವುದು ವಾಸಿ. ಆದರೆ ಪ್ರಮಾಣವಚನ ಇನ್ನೂ ಜಾರಿಯಲ್ಲಿದೆ, ಆದರೆ ಕಾಗದದಲ್ಲಿ ಮಾತ್ರ ಇದೆ. ಇದು ದುಃಖಕರ. ಆ ಪ್ರಮಾಣವಚನದಿಂದ ದೊರಕಬಹುದಾದಂತಹ ಅಹಿಂಸೆಯ ಸೈನ್ಯ ನಮ್ಮಲ್ಲಿ ಇದ್ದರೆ, ಈ ದಂಗೆಗಳು ಉಂಟಾಗುತ್ತಲೇ ಇರಲಿಲ್ಲ. ಅಪಾಯ ಉಂಟಾದರೆ ಅವರು ದಂಗೆಗಳನ್ನು ಅಡಗಿಸುತ್ತಿದ್ದರು. ಅಥವಾ ಆ ಪ್ರಯತ್ನದಲ್ಲಿ ಸಾಯುತ್ತಿದ್ದರು. ಸತ್ತ ಒಬ್ಬನ ಹೆಸರು ಮಾತ್ರ ನಮಗೆ ಗೊತ್ತು. ಅವನ ಆತ್ಮಯಜ್ಞವನ್ನು ಪ್ರಶಂಸಿಸುತ್ತೇನೆ. ಆದರೆ ಅನೇಕ ಗುಪ್ತರು ಆಗಿದ್ದರೆ ನನ್ನ ಹೃದಯ ಆನಂದದಿಂದ ಉಬ್ಬುತ್ತಿದ್ದಿತು.*

"ಇದು ಬರಿಯ ಒಣಕನಸು ಎಂದು ನಿಮಗೆ ಅನ್ನಿಸುವುದೆ? ಅಂತಹ ಅಹಿಂಸೆಯ ಸೈನ್ಯವಿದ್ದರೂ ದಂಗೆಗಳನ್ನು ಅಡಗಿಸುವುದು ಸಾಧ್ಯವಿಲ್ಲವೆಂದು ನೀವು ಹೇಳುತ್ತೀರಾ? ನೀವು ಚೆನ್ನಾಗಿ ಆಲೋಚನೆ ಮಾಡಿ ಆ ತೀರ್ಮಾನಕ್ಕೆ ಬಂದಿದ್ದರೆ, ಸ್ವರಾಜ್ಯವನ್ನು ಅಹಿಂಸೆ

---

* ಪಶುಪತಿಗುಪ್ತನಿಗೆ ಚೆನ್ನಾಗಿ ಕತ್ತಿಯ ಇರಿತ ಬಿದ್ದರೂ ಅವರು ಸಾಯಲಿಲ್ಲವೆಂದು ಈಚೆಗೆ ತಿಳಿಯಿತು. ಗಣೇಶ ಶಂಕರ ವಿದ್ಯಾರ್ಥಿ ಮಾತ್ರ ಸತ್ತನು.

ಯಿಂದ ಸಂಪಾದಿಸುವುದೂ ಸಾಧ್ಯವಿಲ್ಲವೆಂದು ನಾನು ನಿಮಗೆ ಹೇಳ ಬೇಕಾಗುತ್ತದೆ.

ಕಾಂಗ್ರೆಸ್ ಸರ್ಕಾರಗಳು, ಹಿಂದು-ಮುಸಲ್ಮಾನರ ದಂಗೆಗಳನ್ನು ಅಡಗಿಸಲು ಪೋಲಿಸ್ ಮಿಲಿಟರಿಗಳ ಸಹಾಯವನ್ನು ಬಯಸಿದುದು, ಅವರು ಅಹಿಂಸೆಯನ್ನು ನಿರಾಕರಿಸಿದಂತೆಯೇ ಆಯಿತೆಂದು ಗಾಂಧಿಯವರು ಹೇಳಿದರು. "ನಮ್ಮ ಕಾಂಗ್ರೆಸ್ ಮಂತ್ರಿಗಳು ಪೋಲಿಸ್ ಮತ್ತು ಮಿಲಿಟರಿ ಸಹಾಯವನ್ನು ಪಡೆಯಬೇಕಾಗಿ ಬಂದುದು ನಮ್ಮ ನಾಚಿಕೆಗೇಡು. ಮಂತ್ರಿಗಳು ಎದುರು ಪಕ್ಷದವರಿಗೆ ಪ್ರತ್ಯುತ್ತರ ಕೊಡುವಾಗ ಆ ಮಾತುಗಳನ್ನು ಉಪಯೋಗಿಸಿದುದಕ್ಕಾಗಿ ನನಗೆ ಬಹಳ ನಾಚಿಕೆಯಾಗಿದೆ. ಕಾಂಗ್ರೆಸ್ ಸೋತಿತು. ಬ್ರಿಟಿಷ್ ಸರಕಾರ ಗೆದ್ದಿತು ಎಂದು ನನಗೆ ತೋರುತ್ತದೆ. ನಮ್ಮ ಅಹಿಂಸೆ ಅಂತಹ ಸಮಯದಲ್ಲಿ ಯಾಕೆ ತನ್ನ ಸರ್ವ ಶಕ್ತಿಯನ್ನೂ ತೋರಿಸುವುದಿಲ್ಲ? ಹಾಗಾದರೆ ಇದು ಹೇಡಿಗಳ ಅಹಿಂಸೆಯೆ? ಘಾತುಕರು ನಮ್ಮ ಎದುರಿಗೆ ಬಂದರೂ ನಾವು ನಮ್ಮ ಅಹಿಂಸೆಯ ಮಾರ್ಗವನ್ನು ಬಿಡಬಾರದು. ನಿಮ್ಮನ್ನು ನೇತುಹಾಕುತ್ತೇವೆ ಅಥವಾ ಬಂದೂಕದಿಂದ ಹೊಡೆದು ಕೊಲ್ಲುತ್ತೇವೆ ಎನ್ನಬಾರದು. ಅವರೂ ನಮ್ಮವರೇ ಅಲ್ಲವೆ? ನಮ್ಮನ್ನು ಅವರು ಕೊಲ್ಲುತ್ತೇವೆ ಎಂದರೆ ಕೊಲ್ಲಲು ಬಿಡಬೇಕು. ವ್ಯವಸ್ಥಿತವಾದ ಹಿಂಸೆಯ ಎದುರಿಗೆ ಹೇಡಿಗಳ ಅಹಿಂಸೆಯನ್ನು ಒಡ್ಡುವುದು ಸಾಧ್ಯವಿಲ್ಲ. ಬಲಶಾಲಿಗಳ ಅಹಿಂಸೆಯನ್ನೇ ಒಡ್ಡಬೇಕು. ನಾವು ಅಹಿಂಸೆಯುಳ್ಳವರು. ಕಾನೂನು ಭಂಗದ ಕಾಲದಲ್ಲಿ ಲಾಠಿ ಏಟು ತಿಂದೆವು. ಇನ್ನು ಅನೇಕ ಕಷ್ಟಗಳನ್ನು ಅನುಭವಿಸಿದೆವು. ಎಂಬುದಾಗಿ ನೀವು ಹೇಳುತ್ತೀರಿ ನಿಜ. ಆದರೆ ಅದು ಸಾಲದು. ನಮ್ಮದು, ಶೂರರ ಪೂರ್ಣವಾದ ಅಹಿಂಸೆಯಾಗಿರಲಿಲ್ಲವಾದುದರಿಂದ ದಂಡಿಯಾತ್ರೆಯ ಕೊನೆಯಲ್ಲಿ ನಾವು ಸ್ವರಾಜ್ಯವನ್ನು ಸಂಪಾದಿಸಲಿಲ್ಲ.

೫೫

ಇಂತಹ ಬಲಿಷ್ಟರ ಅಹಿಂಸೆಯಿಂದ ಸಾಧ್ಯವಾಗದುದು ಯಾವುದೂ ಇಲ್ಲ. ಜರ್ಮನಿಯಲ್ಲಿ ಯಹೂದ್ಯರಿಗೆ ಹಿಂಸೆಯಾದಾಗ

ಗಾಂಧಿಯವರು ನೀವು ಅಹಿಂಸೆಯನ್ನು ಕೈಕೊಳ್ಳಿ ಎಂದರು. ಜೆಕ್‌ರ ಮೇಲೆ ಜರ್ಮನರು ಬಿದ್ದಾಗ ಅವರಿಗೂ ಅಹಿಂಸೆಯನ್ನು ಕೈಕೊಳ್ಳಿ ಎಂದರು. ಚೀನಾವಿಗೂ ಅಹಿಂಸೆಯನ್ನು ಕೈಕೊಳ್ಳಿ ಎಂದರು. ಕೊನೆಯಲ್ಲಿ ರಣಧೀರರಾದ ಇಂಗ್ಲಿಷರಿಗೂ ಅಹಿಂಸೆಯನ್ನೇ ಕೈಕೊಳ್ಳಿ ಎಂದರು. ಚರ್ಚಿಲ್‌ರಂಥವರಿಗೆ ಆಯುಧಗಳನ್ನು ಎಸೆದು ಬಿಡಿ ಎಂದು ಹೇಳುವುದು ಸಾಮಾನ್ಯವಲ್ಲ. ಅದನ್ನು ಹೇಳುವವನಿಗೆ ಅಹಿಂಸೆಯಲ್ಲಿ ನಂಬಿಕೆ ಪೂರ್ಣವಾಗಿರಬೇಕು. ಮತ್ತು ಅವನ ಧೈರ್ಯವೋ? ಅವನು ದೇವರಿಗೆ ಮಾತ್ರ ಹೆದರುವವನಾಗಿರಬೇಕು. ಗಾಂಧಿಯವರು, "ಬ್ರಿಟಿಷರಿಗೆ ಆಯುಧಗಳನ್ನು ಎಸೆದುಬಿಡಿ'' ಎಂದು ಹೇಳಿದ ಸಂದೇಶ, ಯೋಗಿಯು ಸತ್ಯವನ್ನು ಕಂಡುಹಿಡಿದು ಹೇಳುವ ಮಾತುಗಳಂತೆ ಕಾವುಳ್ಳವುಗಳಾಗಿವೆ. ಆ ಮಾತುಗಳೇ ಒಂದು ಕಾವ್ಯ.

ಗಾಂಧಿ ಹೀಗೆ ಹೇಳಿದರು "ದಕ್ಷಿಣ ಆಫ್ರಿಕಕ್ಕೆ ಕೂಲಿಗಳಾಗಿ ವ್ಯಾಪಾರಿಗಳಾಗಿ ಅಥವಾ ಅವರ ಸಹಾಯಕರಾಗಿ ಹೋಗಿದ್ದ ನಮ್ಮ ದೇಶದವರಾದ ಭಾರತೀಯರ ಪರವಾಗಿ ನಾನು ೧೮೯೬ ನೇ ಇಸವಿಯಲ್ಲಿ ದಕ್ಷಿಣ ಆಫ್ರಿಕದಲ್ಲಿದ್ದ ಪ್ರತಿಯೊಬ್ಬ ಬ್ರಿಟಿಷ್ ಪ್ರಜೆಯನ್ನೂ ಕುರಿತುಒಂದು ಪ್ರಾರ್ಥನೆ ಮಾಡಿಕೊಂಡೆ. ಅದು ಫಲಕಾರಿಯಾಯಿತು. ನನ್ನ ದೃಷ್ಟಿಯಿಂದ ಅದು ಎಷ್ಟೇ ಮಹತ್ವದ್ದಾಗಿದ್ದರೂ ಆ ಪ್ರಾರ್ಥನೆಯ ಉದ್ದೇಶವನ್ನು ಈ ಪ್ರಾರ್ಥನೆಯ ಉದ್ದೇಶಕ್ಕೆ ಹೋಲಿಸಿಕೊಂಡರೆ, ಅದು ಬಹಳ ಅಲ್ಪವಾದುದಾಗಿತ್ತು. ಬ್ರಿಟಿಷ್‌ಪ್ರಜೆ ಎಲ್ಲೇ ಇರಲಿ ಒಂದು, ದೇಶದವರು ಮತ್ತೊಂದು ದೇಶದೊಂದಿಗೆ ವ್ಯವಹರಿಸಬೇಕಾದಾಗಲೂ ಇತರ ಸಂದರ್ಭಗಳಲ್ಲಿಯೂ ಯುದ್ಧದ ಬದಲು ಅಹಿಂಸೆಯ ಮಾರ್ಗವನ್ನೇ ಅನುಸರಿಸಬೇಕೆಂದು ನಾನು ಪ್ರಾರ್ಥಿಸುತ್ತೇನೆ. ಇದು ಪ್ರಜಾಸ್ವಾತಂತ್ರ್ಯಕ್ಕಾಗಿ ಯುದ್ಧ ಎಂದು ನೀವು ಹೇಳಿದ್ದೀರಿ. ಈ ಯುದ್ಧವನ್ನು ಪುಷ್ಟೀಕರಿಸುವುದಕ್ಕಾಗಿ ಇನ್ನೂ ಅನೇಕ ಕಾರಣಗಳನ್ನು ಕೊಟ್ಟಿದ್ದೀರಿ. ಅದೆಲ್ಲಾ ನಿಮಗೆ ಚೆನ್ನಾಗಿ ಕಂಠಪಾಠವೇ ಆಗಿದೆ. ಯುದ್ಧದನಂತರ ಯಾವ ಪಕ್ಷ ಜಯಿಸಿದರೂ ಸರಿಯೆ, ನೀವು ಸಂರಕ್ಷಿಸಲು ಪ್ರಜಾಪ್ರಭುತ್ವವೆಂಬುದೇ ಇರುವುದಿಲ್ಲ. ಜಗತ್ತಿಗೆ ಈ ಯುದ್ಧ

ಬಂದಿರುವುದು ಒಂದು ಶಾಪ; ಮತ್ತು ನಮಗೆ ಒಂದು ಎಚ್ಚರಿಕೆ. ಹಿಂದೆ ಎಂದೂ ಮಾಡದಷ್ಟು ನೀಚವಾಗಿ ಇದು ಮನುಷ್ಯನನ್ನು ಪಶುವಾಗಿ ಮಾಡುವುದರಿಂದ ಇದು ಶಾಪ. ಕಾದಾಡುವವನು ಕಾದಾಡದವನು ಎಂಬ ವ್ಯತ್ಯಾಸವೇ ಈಗ ಇಲ್ಲ. ಯಾರನ್ನೂ ಏನನ್ನೂ ಉಳಿಸುವಂತೆ ಇಲ್ಲ. ಸುಳ್ಳು ಎಂಬುದು ಒಂದು ವಿದ್ಯವಾಗಿ ಹೋಗಿದೆ. ಇಂಗ್ಲೆಂಡು ಸಣ್ಣಸಣ್ಣ ರಾಜ್ಯಗಳನ್ನು ಸಂರಕ್ಷಿಸುತ್ತೇನೆಂದು ಹೇಳುತ್ತಿತ್ತು. ಅವುಗಳೆಲ್ಲಾ ಒಂದೊಂದಾಗಿ—ಸದ್ಯಕ್ಕಾದರೂ ಕಣ್ಮರೆಯಾಗಿವೆ. ಅದೂ ಒಂದು ಎಚ್ಚರಿಕೆ, ನಡೆಯುತ್ತಿರುವುದನ್ನು ತಿಳಿದುಕೊಳ್ಳದೆ ಹೋದರೆ ಮನುಷ್ಯನು ಪಶುಗಳ ಮಟ್ಟಕ್ಕೆ ಬರುವನೆಂದು; ತನ್ನ ನಡತೆಯಿಂದ ಪಶುಗಳಿಗೂ ಸಹ ನಾಚಿಕೆಯಾಗುವಂತೆ ಮಾಡುತ್ತಿರುವ ಯುದ್ಧವು ಪ್ರಾರಂಭವಾದಾಗ, ನನಗೆ ಇದು ಗೊತ್ತಾಯಿತು. ಎಲ್ಲವೂ ಪೂರ್ಣವಾಗಿ ನಾಶವಾಗುವುದಕ್ಕೆ ಮುಂಚೆ ಇದನ್ನು ಹೇಳುವ ಧೈರ್ಯವನ್ನು ದೇವರು ನನಗೆ ಕೊಟ್ಟನು.

"ಯುದ್ಧವನ್ನು ನಿಲ್ಲಿಸಿ" ಎಂದು ನಾನು ಹೇಳುತ್ತೇನೆ. ಇದಕ್ಕೆ ಕಾರಣ ನೀವು ಬಹಳ ಸೋತಿರುವಿರಿ ಎಂಬುದಲ್ಲ. ಯುದ್ಧವು ಸ್ವಭಾವತಃ ಕೆಟ್ಟದ್ದೆಂದು. ನೀವು ನಾಜಿಸಂ ಕೊಲ್ಲಲು ಬಯಸುತ್ತೀರಿ ಅದೇ ನಾಜಿಸಂನ್ನು ಸ್ವಲ್ಪ ಕಡಿಮೆ ರೂಪದಲ್ಲಿ ಅನುಸರಿಸುವುದರಿಂದ ನೀವು ಅದನ್ನು ಕೊಲ್ಲುವುದಕ್ಕಾಗುವುದಿಲ್ಲ ಜರ್ಮನಿಯವರು ಮಾಡುವಂತೆ ನಿಮ್ಮ ಶಿಪಾಯಿಗಳೂ ನಾಶಮಾಡುತ್ತಿದ್ದಾರೆ. ಏನು ವ್ಯತ್ಯಾಸವೆಂದರೆ ಬಹುಶಃ ನೀವು ಜರ್ಮನರಷ್ಟು ಶಿಸ್ತಿನಿಂದ ಪೂರ್ಣವಾಗಿ ಮಾಡುತ್ತಿಲ್ಲ. ಹಾಗಾದರೆ ನಿಮ್ಮದೂ ಜಾಗ್ರತೆ ಅವರಷ್ಟೆ—ಇನ್ನೂ ಹೆಚ್ಚಾಗಿ ಇಲ್ಲದಿದ್ದರೂ—ಶಿಸ್ತಿನಿಂದ ನಡೆಯುತ್ತದೆ. ಇದರ ಹೊರತು ಮತ್ತಾವ ದಾರಿಯಿಂದಲೂ ನೀವು ಯುದ್ಧವನ್ನು ಜಯಿಸಲಾರಿರಿ. ಬೇರೆ ಮಾತಿನಲ್ಲಿ ಹೇಳಬೇಕಾದರೆ ನೀವು ನಾಜಿಗಳಿಗಿಂತ ಹೆಚ್ಚು ಕ್ರೂರಿಗಳಾಗಬೇಕು. ಉದ್ದೇಶ ಎಷ್ಟೇ ನ್ಯಾಯವಾದುದಿರಲಿ, ನಿಮಿಷ ನಿಮಿಷವೂ ನಡೆಯುತ್ತಿರುವ ಈ ತಾರತಮ್ಯವಿಲ್ಲದ ಕೊಲೆಗೆ ಕಾರಣವೇ ಇಲ್ಲ. ಇಂದು ನಡೆಯುತ್ತಿರುವ ಕ್ರೂರವಾದ ಪೈಶಾಚಿಕ ಕೃತ್ಯಗಳಿಗೆ

ಕಾರಣವಾದ ಉದ್ದೇಶ ಯಾವುದೇ ಆಗಲಿ, ಅದು ನ್ಯಾಯವಾದುದೆಂದು ಎಂದೂ ಹೇಳುವುದಕ್ಕಾಗುವುದಿಲ್ಲ.

“ ಇಂಗ್ಲೆಂಡು ಸೋಲಬೇಕೆಂಬುದು ನನ್ನ ಇಷ್ಟವಲ್ಲ. ಅಥವ ದೇಹದ ಅಥವ ಬುದ್ಧಿಯ ಬಲದಿಂದ ಅದು ಗೆಲ್ಲಬೇಕೆಂಬುದೂ ನನ್ನ ಇಷ್ಟವಲ್ಲ. ನಿಮ್ಮ ಶಕ್ತಿ ಎಲ್ಲರಿಗೂ ತಿಳಿದೇ ಇದೆ. ನಿಮ್ಮ ದೇಹದ ಶಕ್ತಿಯಂತೆ ನಿಮ್ಮ ಬುದ್ಧಿಶಕ್ತಿಯೂ ನಾಶದ ಕೆಲಸದಲ್ಲಿ ಅದ್ವಿತೀಯ ವಾದುದೆಂಬುದನ್ನು ನೀವು ತೋರಿಸಬೇಕಾದುದಿಲ್ಲ. ನೀವು ನಾಜಿ ಗಳೊಂದಿಗೆ ಈ ಮರ್ಯಾದೆರಹಿತವಾದ ಪೈಪೋಟಿಗೆ ನಿಲ್ಲುವುದಕ್ಕೆ ಇಷ್ಟ ಪಡುವುದಿಲ್ಲವೆಂದು ನಂಬುತ್ತೇನೆ. ನಾನು, ಧೀರರಾದ ಯೋಧರಿಗೆ ಅರ್ಹವಾದ ಅತ್ಯಂತ ಉತ್ತಮವಾದ ಮತ್ತು ಇನ್ನೂ ಹೆಚ್ಚು ಧೈರ್ಯದ ದಾರಿಯನ್ನು ಹೇಳುತ್ತೇನೆ. ನೀವು ನಾಜಿಗಳೊಂದಿಗೆ ಆಯುಧಗಳಿಲ್ಲದೆ, ಯುದ್ಧದ ಮಾತಿನಲ್ಲೇ ಹೇಳಬೇಕಾದರೆ, ಅಹಿಂಸೆಯ ಅಸ್ತ್ರಗಳೊಡನೆ ಕಾದಾಡಬೇಕೆಂದು ನಾನು ಬಯಸುತ್ತೇನೆ. ನಿಮ್ಮಲ್ಲಿರುವ ಆಯುಧ ಗಳು ನಿಮ್ಮನ್ನು ಸಂರಕ್ಷಿಸುವುದಕ್ಕೂ ಜಗತ್ತನ್ನು ಸಂರಕ್ಷಿಸುವುದಕ್ಕೂ ಅಪ್ರಯೋಜಕವಾದುವೆಂದು ನೀವು ಅವುಗಳನ್ನು ಎಸೆದುಬಿಡಬೇಕೆಂದು ನಾನು ಬಯಸುತ್ತೇನೆ. ನಿಮ್ಮ ಸ್ವಾಸ್ಥ್ಯಗಳೆಂದು ನೀವು ಹೇಳಿ ಕೊಳ್ಳುವ ದೇಶಗಳಿಂದ, ಅವರಿಗೆ ಬೇಕಾದುವನ್ನು ತೆಗೆದುಕೊಳ್ಳಲು ನೀವು ಹರ್ ಹಿಟ್ಲರನನ್ನು ಸಿಗ್ನರ್ ಮುಸಲೋನಿಯನ್ನೂ ಆಹ್ವಾನಿಸಿರಿ. ಅನೇಕ ಸುಂದರವಾದ ಕಟ್ಟಡಗಳಿಂದೊಡಗೂಡಿದ ನಿಮ್ಮ ಸುಂದರ ವಾದ ದ್ವೀಪವನ್ನು ಅವರು ಆಕ್ರಮಿಸಿಕೊಳ್ಳಲಿ. ಇವೆಲ್ಲವನ್ನೂ ಕೊಡಿ. ಆದರೆ ನಿಮ್ಮ ಮನಸ್ಸನ್ನು ಕೊಡಬೇಡಿ. ಆತ್ಮವನ್ನು ಕೊಡ ಬೇಡಿ. ಆ ಗೃಹಸ್ಥರು ನಿಮ್ಮ ಮನೆಗಳನ್ನು ಸ್ವಾಧೀನಪಡಿಸಿಕೊಳ್ಳಲು ಇಷ್ಟಪಟ್ಟರೆ, ನಿಮ್ಮ ಮನೆಗಳನ್ನು ಖಾಲಿ ಮಾಡಿಕೊಡಿ. ನೀವು ಹೊರಕ್ಕೆ ಸ್ವತಂತ್ರವಾಗಿ ಹೋಗಲು ಅವರು ಅವಕಾಶಕೊಡದಿದ್ದರೆ ನೀವು ಹೆಣ್ಣು ಗಂಡು ಮಕ್ಕಳು ಎಲ್ಲರೂ, ಅವರು ಕೊಂದರೂ ಕೊಲ್ಲಿಸಿ ಕೊಳ್ಳಿ. ಆದರೆ ಅವರಿಗೆ ವಿಧೇಯರಾಗಬೇಡಿ.

“ ಈ ಕ್ರಮ ಅಥವ ಮಾರ್ಗವನ್ನು ನಾನು ಅಹಿಂಸೆಯ ಅಸಹ

ಕಾರವೆಂದು ಕರೆದಿದ್ದೇನೆ. ಇದರ ಉಪಯೋಗದಿಂದ ಭಾರತದಲ್ಲಿ ತಕ್ಕಮಟ್ಟಿಗೆ ಜಯವಾಗದೆ ಇಲ್ಲ. ಭಾರತದಲ್ಲಿರುವ ನಿಮ್ಮ ಪ್ರತಿನಿಧಿಗಳು ನನ್ನ ಜಯವನ್ನು ಒಪ್ಪದಿರಬಹುದು. ಅವರು ಒಪ್ಪದಿದ್ದರೆ ಅವರನ್ನು ಕಂಡು ನಾನು ಅಯ್ಯೋ ಪಾಪ ಎನ್ನುತ್ತೇನೆ. ನಮ್ಮ ಅಸಹಕಾರವು ಪೂರ್ಣವಾಗಿ ಅಹಿಂಸಾತ್ಮಕವಾಗಿರಲಿಲ್ಲವೆಂದೂ ಅದು ದ್ವೇಷದಿಂದ ಹುಟ್ಟಿತೆಂದೂ ಅವರು ಹೇಳಬಹುದು. ಹಾಗೆ ಅವರು ಹೇಳಿದರೆ ನಾನು ಅಲ್ಲವೆನ್ನುವುದಿಲ್ಲ. ಆ ಚಳುವಳಿ ಪೂರ್ಣವಾಗಿ ಅಹಿಂಸಾತ್ಮಕವಾಗಿದ್ದಿದ್ದರೆ, ಎಲ್ಲಾ ಅಸಹಕಾರಿಗಳೂ ನಿಮ್ಮ ವಿಷಯದಲ್ಲಿ ಪ್ರೇಮದಿಂದ ಕೂಡಿದ್ದಿದ್ದರೆ, ಈಗ ಭಾರತದ ಯಜಮಾನರಾಗಿರುವ ನೀವು ಅವಳ ಶಿಷ್ಯರಾಗುತ್ತಿದ್ದಿರಿ ಮತ್ತು ನಮಗಿಂತ ಹೆಚ್ಚು ನಿಪುಣತೆಯಿಂದ ಈ ಅಸದೃಶವಾದ ಆಯುಧವನ್ನು ದೋಷರಹಿತವಾಗಿ ಮಾಡಿ, ಅದರಿಂದ ಜರ್ಮನ್ ಮತ್ತು ಇಟಲಿ ಮಿತ್ರರ ಅಪಘಾತವನ್ನು ಎದುರಿಸುತ್ತಿದ್ದಿರಿ, ಎಂದು ನಾನು ಧೈರ್ಯದಿಂದ ಹೇಳುತ್ತೇನೆ. ನಿಜವಾಗಿಯೂ ಕಳೆದ ಕೆಲವು ತಿಂಗಳ ಯೂರೋಪಿನ ಚರಿತ್ರೆಯೇ ಬೇರೆಯಾಗುತ್ತಿದ್ದಿತು. ಯೂರೋಪಿನಲ್ಲಿ ರಕ್ತಸಮುದ್ರವೂ ಸಣ್ಣ ಸಣ್ಣ ರಾಷ್ಟ್ರಗಳ ಮಾನಹಾನಿಯೂ ದ್ವೇಷದ ವಿಕಟನರ್ತನವೂ ಇಲ್ಲದಂತಾಗುತ್ತಿದ್ದಿತು.

"ಇದು, ತನ್ನ ಕೆಲಸ ತನಗೆ ತಿಳಿಯದ ಮನುಷ್ಯನು ಮಾಡುವ ಪ್ರಾರ್ಥನೆಯಲ್ಲ. ನಾನು ಶಾಸ್ತ್ರೀಯವಾಗಿ ೫೦ ವರುಷಗಳಿಂದ ಅಹಿಂಸೆಯನ್ನೂ ಅದರ ವ್ಯಾಪ್ತಿಯನ್ನೂ ಕುರಿತು ಅಭ್ಯಾಸಮಾಡುತ್ತಿದ್ದೇನೆ. ಅದನ್ನು ನಾನು ಸಂಸಾರ, ಸಂಸ್ಥೆ, ಆರ್ಥಿಕ ರಾಜಕೀಯ ಮುಂತಾದ ಎಲ್ಲಾ ಜೀವನ ಭಾಗಗಳಿಗೂ ಅನ್ವಯಿಸಿದ್ದೇನೆ. ಅದು ಅಪಜಯಹೊಂದಿದ ಉದಾಹರಣೆ ನನಗೆ ತಿಳಿದಮಟ್ಟಿಗೆ ಒಂದೂ ಇಲ್ಲ. ಅದು ಅಪಜಯವನ್ನು ಹೊಂದಿದಂತೆ ತೋರಿದಾಗ, ಅದು ನನ್ನ ದೋಷದಿಂದ ಎಂದು ನಾನು ಹೇಳಿದ್ದೇನೆ. ನಾನು ಪೂರ್ಣನೂ ದೋಷರಹಿತನೂ ಅಲ್ಲ. ಆದರೆ ನಾನು ಸತ್ಯದ ಶ್ರದ್ಧಾಳುವಾದ ಶೋಧಕ. ಸತ್ಯ, ದೇವರಿಗೆ ಮತ್ತೊಂದು ಹೆಸರು. ಆ ಶೋಧನೆಯ

ಕಾಲದಲ್ಲಿ ಅಹಿಂಸೆ ನನಗೆ ಪ್ರಸನ್ನವಾಯಿತು. ಅದರ ಪ್ರಚಾರವೇ ನನ್ನ ಜೀವನ ಧ್ಯೇಯ. ಆ ಧ್ಯೇಯವನ್ನು ಮುಂದುವರಿಸುವುದಕ್ಕಾಗಿ ಹೊರತು, ಬದುಕುವುದರಲ್ಲಿ ನನಗೆ ಬೇರೆ ಉತ್ಸಾಹವಿಲ್ಲ.

"ನಾನು ನನ್ನ ಜೀವಮಾನವೆಲ್ಲಾ ಬ್ರಿಟಿಷರ, ಅವ್ಯಾಜಮಿತ್ರನಾಗಿದ್ದೇನೆಂದು ಹೇಳಿಕೊಳ್ಳುತ್ತೇನೆ. ಒಂದು ಕಾಲದಲ್ಲಿ ನಾನು ನಿಮ್ಮ ಚಕ್ರಾಧಿಪತ್ಯವನ್ನೂ ಪ್ರೀತಿಸುತ್ತಿದ್ದೆನು. ಆ ಚಕ್ರಾಧಿಪತ್ಯ ಭಾರತಕ್ಕೆ ಮಂಗಳವನ್ನು ಉಂಟುಮಾಡುತ್ತಿರುವುದೆಂದು ತಿಳಿದಿದ್ದೆನು. ಸ್ವಾಭಾವಿಕವಾಗಿ ಸಾಮ್ರಾಜ್ಯದಿಂದ ಭಾರತಕ್ಕೆ ಒಳ್ಳೆಯದಾಗುವುದು ಸಾಧ್ಯವಿಲ್ಲವೆಂದು ನನಗೆ ಕಂಡಮೇಲೆ, ಅದಕ್ಕೆದುರಾಗಿ ಹೊಡೆದಾಡಲು ಅಹಿಂಸೆಯ ಅಸ್ತ್ರವನ್ನು ಉಪಯೋಗಿಸಿದೆ, ಉಪಯೋಗಿಸುತ್ತಿದ್ದೇನೆ. ನನ್ನ ದೇಶದ ಅದೃಷ್ಟ ಹೇಗಾದರೂ ಆಗಲಿ. ನಿಮ್ಮಲ್ಲಿ ನನ್ನ ಪ್ರೇಮ ಒಂದೇ ಸಮನಾಗಿ ಇದ್ದೇ ಇದೆ. ಮುಂದೆಯೂ ಕಡಿಮೆಯಾಗುವಂತಿಲ್ಲ. ನನ್ನ ಅಹಿಂಸೆಗೆ ಬೇಕಾದುದು ಜಗತ್ತಿನ ಪ್ರೇಮ ; ಅದರಲ್ಲಿ ನೀವೇನು ಸ್ವಲ್ಪ ಭಾಗವಲ್ಲ. ಈ ಪ್ರಾರ್ಥನೆಯನ್ನು ಪ್ರೇರಿಸಿರುವುದು ಆ ಪ್ರೇಮವೇ.

"ದೇವರು ನನ್ನ ಪ್ರತಿಯೊಂದು ಮಾತಿಗೂ ಶಕ್ತಿಯನ್ನು ಕೊಡಲಿ. ಅವನ ಹೆಸರಿನಲ್ಲಿ ಇದನ್ನು ಬರೆಯಲು ಪ್ರಾರಂಭಿಸಿದೆ. ಅವನ ಹೆಸರಿನಲ್ಲಿಯೇ ಇದನ್ನು ಮುಗಿಸುತ್ತೇನೆ. ನನ್ನ ಪ್ರಾರ್ಥನೆಗೆ ಕಿವಿಗೊಡುವ ಧೈರ್ಯವೂ ವಿವೇಕವೂ ನಿಮ್ಮ ರಾಜಕಾರಣಪಟುಗಳಿಗೆ ಉಂಟಾಗಲಿ. ಈ ಪ್ರಾರ್ಥನೆಯ ಧ್ಯೇಯಸಾಧನೆಯಲ್ಲಿ ನನ್ನ ಸೇವೆ ಬೇಕೆಂದು ನಿಮ್ಮ ಸರ್ಕಾರಕ್ಕೆ ತೋರಿದರೇ ಆ ಸೇವೆಗೆ ಸಿದ್ಧನಾಗಿರುವೆನೆಂದು ವೈಸರಾಯರಿಗೆ ತಿಳಿಸಿದ್ದೇನೆ."

* * * *

ಆದರೆ ಅಹಿಂಸೆಯ ಮಾರ್ಗ ಕಠಿಣ. ಇದು ಖಡ್ಗದ ಅಲಗಿನ ಮೇಲೆ ನಡೆದಂತೆ. ಕತ್ತಿಯಲ್ಲಿ ಹೊಡೆಯುವುದಕ್ಕೆ ಧೈರ್ಯಬೇಕು. ಆದರೆ ಮತ್ತೊಬ್ಬನ ಕತ್ತಿಗೆ ಎದೆಯೊಡ್ಡುವುದು ಅದಕ್ಕಿಂತ ಹೆಚ್ಚು ಧೈರ್ಯ. ಎದುರಾಳಿಯನ್ನು ಕೊಲ್ಲಲು ದಿನದಿನವೂ ಹೊಸ ಹೊಸ ಆಯುಧ

ಗಳನ್ನೂ ಮದ್ದು ಗುಂಡುಗಳನ್ನೂ ಕಂಡುಹಿಡಿಯುತ್ತಿರುವವರು ಅಹಿಂಸೆ ಒಂದು ಅಸ್ತ್ರ ಎಂದು ಭಾವಿಸುವುದಿಲ್ಲ. ಯುದ್ಧಕಾಲದಲ್ಲಿ ಇದನ್ನು ಫಲಕಾರಿಯಾಗಿ ಉಪಯೋಗಿಸುವವರು ಆ ಶಾಸ್ತ್ರದಲ್ಲಿ ಒಳ್ಳೆಯ ಪ್ರಾವೀಣ್ಯವುಳ್ಳವರಾಗಿರಬೇಕು ಗಾಂಧಿಯವರು ಪೋಲ್ ರಿಗೂ ಜೆಕ್ ಜನರಿಗೂ ಜ್ಯೂಗಳಿಗೂ "ನೀವು ಅಹಿಂಸೆಯಿಂದ ನಿಮ್ಮ ಹಿಂಸಕರನ್ನು ಎದುರಿಸಿ" ಎಂದಾಗ ಡಾ|| ಮಾಟ್‌ರವರು "ನಿಮ್ಮ ಉಪದೇಶದಿಂದ ನನಗೆ ಬಹಳ ಸ್ಫೂರ್ತಿಯುಂಟಾಯಿತು" ಎಂದರು.

೬

ಅಹಿಂಸೆಯ ಅಸ್ತ್ರವನ್ನು ಉಪಯೋಗಿಸುವವನು ಯಾವಾಗಲೂ ನಮ್ರನಾಗಿರಬೇಕು. ಈ ನಮ್ರತೆ ಅಹಿಂಸೆಯ ಲಕ್ಷಣ. ಅನೇಕ ವೇಳೆ ಹಿಂಸೆ ಯಾವುದು, ಅಹಿಂಸೆಯಾವುದು ಎಂದು ತಿಳಿಯುವುದೇ ಕಷ್ಟ. ಅಂತಹ ಸಂದರ್ಭದಲ್ಲಿ ಪರಮಾತ್ಮನೇ ಮಾರ್ಗದರ್ಶಕನೆಂದು ಗಾಂಧಿಯವರು ಹೇಳುತ್ತಾರೆ. ಅಹಿಂಸಾವಾದಿ ತನ್ನ ಬುದ್ಧಿಗೆ ಯಾವುದು ಅಹಿಂಸೆ ಎಂದು ತೋರುವುದೋ ಅದನ್ನೇ ಮಾಡುತ್ತಾನೆ. ಅದೂ ಉದ್ದಕ್ಕೂ ಪ್ರಯೋಗವೇ. ಎಂತಹವರೂ ಈ ಶಾಸ್ತ್ರದಲ್ಲಿ ತಪ್ಪು ಮಾಡುವುದುಂಟು. ಅಂತಹ ತಪ್ಪುಮಾಡಿದವನು ಎಷ್ಟೇ ದೊಡ್ಡವನಾಗಿದ್ದರೂ ಸಾರ್ವಜನಿಕರು ಅವನನ್ನು ಸುಮ್ಮನೆ ಬಿಡುವುದಿಲ್ಲ ಗಾಂಧಿಯವರ ಅಹಿಂಸೆ ಹೀಗೆ ಅನೇಕ ಸಂದರ್ಭದಲ್ಲಿ ತರ್ಕಕ್ಕೆ ವಿಷಯವಾಗಿದೆ. ಜವಹರ್‌ಲಾಲ್ ನೆಹ್ರುರವರೇ "ಯಾವುದೋ ಒಂದೆಡೆ ಯಾವಾಗಲೋ ಹಿಂಸೆಯಾಯಿತೆಂದು ದೇಶದಲ್ಲಿ ಅಹಿಂಸೆಯ ವಾತಾವರಣವಿಲ್ಲ" ಎಂದು ಭಾವಿಸಬಹುದೇ ಎಂದರು. ೧೯೨೦-೨೨ ರಲ್ಲಿ ಸವಿನಯ ಕಾಯಿದೇ ಭಂಗಕ್ಕೆ ಗಾಂಧಿಯವರು ಗುಜರಾತಿನ ಬರಡೋಲಿ ತಾಲ್ಲುಕನ್ನು ಸಿದ್ಧಪಡಿಸಿದ್ದರು ಆದರೆ ಆಗ ಚೌರಿಚುರ ಎಂಬಲ್ಲಿ ಜನರು ಉದ್ರೇಕಗೊಂಡು ಪೋಲೀಸಿನವರ ಮೇಲೆ ಬಿದ್ದು ಕೆಲವರನ್ನು ಕೊಂದರು ಚೌರಿಚುರಿಯ ಹಿಂಸೆಗೂ ಬರಡೋಲಿಯಲ್ಲಿಯ ಅಹಿಂಸೆಗೂ ಏನು ಸಂಬಂಧ ಎಂದು ಭಾರತೀಯರೇ ಕೇಳಿದರು. ಚೌರಿಚುರದಲ್ಲಿ ಹಿಂಸೆ ಯಾರಿಂದಲೋ ನಡೆದರೆ—ಕಾಂಗ್ರೆಸ್

ನವರಿಂದಲ್ಲ – ನಾವು ಯಾಕೆ ನಮ್ಮ ಕಾರ್ಯಕ್ರಮ ಬಿಡಬೇಕು ಎಂದು ವರ್ಕಿಂಗ್ ಸಮಿತಿಯವರೇ ಗಾಂಧಿಯವರೊಡನೆ ವಾದಿಸಿದರು. ಆದರೆ ಗಾಂಧಿಯವರು ಹೀಗೆ ಹೇಳಿದರು.

"ಚೌರಿಚುರದ ಉದಾಹರಣೆ ನಮಗೆ ತೋರಬೆರಳು. ಸರಿಯಾದ ಎಚ್ಚರಿಕೆ ತೆಗೆದುಕೊಳ್ಳದಿದ್ದರೆ, ಭಾರತ ಯಾವ ದಾರಿಯಲ್ಲಿ ಹೋಗುವುದೆಂಬುದು ಇದರಿಂದ ಗೊತ್ತಾಗುತ್ತದೆ. ನಮ್ಮ ಅಹಿಂಸೆಯಿಂದ ಹಿಂಸೆ ಉಂಟಾಗದಿರಬೇಕಾದರೆ, ನಮ್ಮ ಹೆಜ್ಜೆಗಳನ್ನು ಬೇಗ ಹಿಂದೆ ಇಟ್ಟು ಶಾಂತಿಯ ವಾತಾವರಣವನ್ನು ಕಲ್ಪಿಸಬೇಕು" ಹೀಗೆ ಗಾಂಧಿಯವರು ಹೆಜ್ಜೆಯನ್ನು ಹಿಂದಿಟ್ಟುದಲ್ಲದೆ "ನಾನು ಇನ್ನೂ ಪರಿಶುದ್ಧನಾಗಬೇಕು. ನಮ್ಮ ಸುತ್ತಲ ನೀತಿ ಜೀವನ ನನ್ನಲ್ಲಿ ಪ್ರತಿಬಿಂಬಿತವಾಗಬೇಕು ನನ್ನ ಪ್ರಾರ್ಥನೆಯಲ್ಲಿ ಹೆಚ್ಚು ಸತ್ಯವೂ ನಮ್ರತೆಯೂ ಇರಬೇಕು" ಎಂದು ಐದು ದಿನ ಉಪವಾಸಮಾಡಿದರು.

"ಭಾರತದ ಮುಂದೆ ಎರಡು ದಾರಿಗಳಿವೆ. ಪಾಶ್ಚಾತ್ಯರ ಹಿಂಸಾ ಮಾರ್ಗ; ಪೌರ್ವಾತ್ಯರ ಅಹಿಂಸಾಮಾರ್ಗ. ಪಾಶ್ಚಾತ್ಯರದು ಶಕ್ತಿಯೇ ನ್ಯಾಯ ಎಂಬ ದಾರಿ. ಆದರೆ "ಮಧ್ಯದಲ್ಲಿ ಯಾವ ಕಷ್ಟ ಬರಲಿ ಸತ್ಯವೇ ಜಯಿಸುತ್ತದೆ. ಈ ಸತ್ಯದಿಂದಲೇ ಪ್ರಬಲರಿಗೂ ದುರ್ಬಲರಿಗೂ ನ್ಯಾಯ ದೊರೆಯುತ್ತದೆ" ಎಂಬುದು ನಮ್ಮ ಮಾರ್ಗ. ಈ ಮಾರ್ಗವನ್ನೇ ಕೂಲಿಕಾರರೂ ಅನುಸರಿಸಬೇಕು. ಕೂಲಿಕಾರರು, ಹಿಂಸಾಮಾರ್ಗದಿಂದ ತಮ್ಮ ಕೂಲಿಯನ್ನು ಹೆಚ್ಚಿಸಿಕೊಳ್ಳಬೇಕೆ? ಅದು ಸಾಧ್ಯವಾದರೂ, ಅವರಿಗೆ ಆಗಿರುವ ಅನ್ಯಾಯ ಸತ್ಯವಾದರೂ, ಅವರು ಆ ಮಾರ್ಗವನ್ನು ಅವಲಂಬಿಸಕೂಡದು. ಕತ್ತಿಯಿಂದ ಜೀವಿಸುವವರು ಕತ್ತಿಯಿಂದಲೇ ಸಾಯುತ್ತಾರೆ. ಈಜುಗಾರ ನೀರಿನಲ್ಲಿ ಮುಳುಗಿಯೇ ಸಾಯುತ್ತಾನೆ. ಯೂರೋಪಿನ ಕಡೆ ನೋಡಿ ಅಲ್ಲಿ ಯಾರಿಗೂ ಸುಖವಿಲ್ಲ. ಯಾರಿಗೂ ತೃಪ್ತಿಯಿಲ್ಲ. ಬಂಡವಾಳಗಾರನಿಗೆ ಕೂಲಿಯಲ್ಲಿ ನಂಬಿಕೆ ಇಲ್ಲ ಕೂಲಿಗೆ ಬಂಡವಾಳಗಾರನಲ್ಲಿ ನಂಬಿಕೆ ಇಲ್ಲ. ಇಬ್ಬರಿಗೂ ಶಕ್ತಿ ಇದೆ. ಆದರೆ ಈ ಶಕ್ತಿ ಹೋರಿಗಳಿಗೂ ಇದೆ. ಇಬ್ಬರೂ ಕೊನೆಯವರೆಗೆ ಕಾದುತ್ತಾರೆ. ಎಲ್ಲಾ ವಿಧ

ವಾದ ಚಲನೆಯೂ ಪ್ರಗತಿಯಲ್ಲ ಯೂರೋಪಿನ ಜನ ಪ್ರಗತಿಯ ಮಾರ್ಗದಲ್ಲಿ ಹೋಗುತ್ತಿದ್ದಾರೆಂದು ಭಾವಿಸಲು ನಮಗೆ ಆಧಾರವಿಲ್ಲ. ಅವರಲ್ಲಿ ಐಶ್ವರ್ಯವಿದ್ದಮಾತ್ರಕ್ಕೆ ಆತ್ಮಶಕ್ತಿ ಇದೆ ಎಂದು ಭಾವಿಸಲು ಸಾಧ್ಯವಿಲ್ಲ. ದುರ್ಯೋದನನ ಐಶ್ವರ್ಯ ಇಂದ್ರವೈಭವವಾಗಿದ್ದಿತು. ಆದರೆ ವಿದುರ ಸುದಾಮರ ಜತೆ ಹೋಲಿಸಿದರೆ, ಅವನು ದರಿದ್ರನೇ ಇಂದು ಜಗತ್ತು ವಿದುರ ಸುದಾಮರನ್ನು ನೆನೆಯುತ್ತದೆ. ದುರ್ಯೋದನನ ಹೆಸರಿನ ಜತೆಯಲ್ಲಿ ದುರ್ಗುಣಗಳು ಸೇರಿವೆ."

೭

ಅತ್ಯಂತ ಸೂಕ್ಷ್ಮಧರ್ಮವಾದ ಅಹಿಂಸೆಯ ಧರ್ಮದ ಒರೆಗಲ್ಲು ಮನುಷ್ಯನ ಹೃದಯವೆ. ಒಂದು ಸಲ ಅಹಮ್ಮದಾಬಾದಿನಲ್ಲಿ ಕೆಲವು ನಾಯಿಗಳಿಂದ ಜನರಿಗೆ ಬಹು ತೊಂದರೆಯಾಗುತ್ತಿದ್ದುದರಿಂದ ಅವುಗಳನ್ನು ಕೊಲ್ಲುವುದನ್ನು ಗಾಂಧಿ ಒಪ್ಪಿದರು. ಕೂಡಲೇ ದೇಶದ ಯಾವಯಾವುದೋ ಮೂಲೆಯಲ್ಲಿದ್ದವರೆಲ್ಲಾ, ಒಂಟೊಂಟಿಯಾಗಿಯೂ ಗುಂಪುಗುಂಪಾಗಿಯೂ ಗಾಂಧಿಯವರ ಮೇಲೆ ಬಿದ್ದರು. ಆಗ ಗಾಂಧಿ ಯವರು ಕೊಟ್ಟ ಸಮಜಾಯಿಶಿ ಪದೇ ಪದೇ ಏಳುವ ಈ ಬಗೆಯ ಪ್ರಶ್ನೆಗಳಿಗೆಲ್ಲಾ ಉತ್ತರವಾಗಿದೆ.

" ಮನುಷ್ಯ ಅಪೂರ್ಣ, ತಪ್ಪುಮಾಡುವುದು ಅವನ ಸ್ವಭಾವ. ಆದರೆ ಹುಚ್ಚು ನಾಯಿಗಳನ್ನು ಕೊಲ್ಲುವುದರ ಹೊರತು ನಮಗೆ ಬೇರೆ ಮಾರ್ಗವಿಲ್ಲ. ಒಂದೊಂದು ವೇಳೆ, ಜನರನ್ನು ಕೊಲ್ಲುವುದರಲ್ಲಿ ನಿರತ ನಾದ ಮತ್ತೊಬ್ಬ ಮನುಷ್ಯನನ್ನೂ ಸಹ. ನಾವು ಕೊಲ್ಲುವ ಪ್ರಸಂಗ ಬರಬಹುದು.

" ಪೋಲಿ ನಾಯಿಗಳನ್ನು ನಾವು ಸಾಕಲು ಮೊದಲು ಮಾಡಿದರೆ ಅವುಗಳಿಗೆ 'ಹಿಡ' ಮಾಡಬೇಕಾಗುವುದು. ಅಥವ ಅವುಗಳಿಗಾಗಿ ಒಂದು ಪಿಂಜರಾಪೋಲು ಬೇಕು. ನಮ್ಮ ದನಗಳಿಗೇ ಗೋರಕ್ಷಣ ಶಾಲೆ ಸಾಧ್ಯವಿಲ್ಲದಿರುವಾಗ, ಇನ್ನು ನಾಯಿಗಳಿಗೆ ಮಾಡುತ್ತೇವೆಂಬ ಮಾತಿಗೆ ಅರ್ಥವೇ ಇಲ್ಲ.

" ಪೋಲಿ ನಾಯಿಗಳಿಗೆ ಆಹಾರ ಕೊಡುವುದು ಪಾಪ. ಪೋಲಿ

ನಾಯಿಗಳನ್ನೆಲ್ಲಾ ಕೊಲ್ಲಬೇಕೆಂದು ಕಾನೂನು ಮಾಡಿದರೆ ಅನೇಕ ನಾಯಿಗಳು ಬದುಕಿಕೊಳ್ಳುತ್ತವೆ. ದಯೆಯ ತಪ್ಪು ಜ್ಞಾನದಿಂದ ಪೋಲಿನಾಯಿಗಳಿಗೆ ಆಹಾರ ಕೊಡುವವರು, ಅದಕ್ಕಾಗಿ ಒಂದು ದಂಡ ಕೊಟ್ಟರೂ ಪೋಲಿ ನಾಯಿಗಳು ಇಲ್ಲವಾಗುತ್ತವೆ. ದಯೆ ಮನುಷ್ಯನ ಹೃದಯದ ಅದ್ಭುತ ಗುಣ. ಕೆಲವು ಮೀನುಗಳನ್ನೂ ನಾಯಿಗಳನ್ನೂ ಕಾಪಾಡುವುದರಿಂದ ಆ ಗುಣ ಮುಗಿದುಹೋಗುವುದಿಲ್ಲ. ಆ ರಕ್ಷಣೆ ಪಾಪ ಸಹ ಆಗಬಹುದು. ನನ್ನ ಮನೆಯಲ್ಲಿ ಇರುವೆಯ ಗೂಡು ಇದೆ ಎಂದುಕೊಳ್ಳೋಣ. ಅದಕ್ಕೆ ಯಾರಾದರೂ ಆಹಾರ ಹಾಕಲು ಪ್ರಾರಂಭಿಸಿದರೆ ಅವನು ಮಾಡುವುದು ಪಾಪ. ದೇವರು ಇರುವೆಗೆ ಆಹಾರ ಒದಗಿಸಿದ್ದಾನೆ. ಆದರೆ ಹೀಗೆ ಅವಕ್ಕೆ ಆಹಾರ ಕೊಡುವವನು ನನ್ನ ಮನೆ ನಾಶಮಾಡುತ್ತಾನೆ. ನಾಯಿಗಳನ್ನು ಸಾಕಿ ದಯೆ ತೋರಿಸಿದ್ದೇವೆ ಎನ್ನಬಹುದು ನೀವು. ಆದರೆ ನನ್ನ ಪ್ರಾಣಕ್ಕೆ ಅದರಿಂದ ಅಪಾಯ ವಿವೇಕ ದಯೆ ಧೈರ್ಯ ನಮ್ರತೆ ಸ್ಪಷ್ಟವಾದ ತೀರ್ಮಾನ ಇವು ಇಲ್ಲದೆ ಮನುಷ್ಯತ್ವ ಸಾಧ್ಯವಿಲ್ಲ. ಅಹಿಂಸೆಯ ಮಾರ್ಗ ಕತ್ತಿಯ ಅಲಗು. ಹಣದಿಂದ ಇದಕ್ಕೆ ಪ್ರಯೋಜನವಿಲ್ಲ. ಕೋಪ ಅಹಿಂಸೆಯ ಶತ್ರು, ಅಹಂಕಾರ ಅದನ್ನು ನುಂಗಿಯೇ ಬಿಡುತ್ತದೆ.

"ಒಬ್ಬರು ಹೀಗೆ ಕೇಳುತ್ತಾರೆ" ಪೋಲಿ ನಾಯಿಗಳಿಗೆ ಆಹಾರ ಹಾಕಬೇಡಿ ಎನ್ನುತ್ತೀರಿ ನೀವು. ಆದರೆ ನಾವು ಅವನ್ನು ಆಹ್ವಾನಿಸುವುದಿಲ್ಲ. ಅವು ತಾವಾಗಿಯೇ ಬರುತ್ತವೆ. ಅವುಗಳನ್ನು ಓಡಿಸುವುದು ಹೇಗೆ?.... ನಾಯಿಗಳನ್ನು ಸಾಕುವುದರಿಂದ ಮನುಷ್ಯನ ದಯಾಗುಣ ವೃದ್ಧಿಯಾಗುವುದಿಲ್ಲವೆ? ನಾವೆಲ್ಲಾ ಪಾಪಿಗಳು. ಈ ಅಲ್ಪವಾದ ದಯೆಯನ್ನು ನಾವು ಯಾಕೆ ಅಭ್ಯಸಿಸಬಾರದು ?"

"ಈ ದಯೆಯ ತಪ್ಪು ತಿಳಿವಳಿಕೆಯಿಂದ ನಾವು ಅಹಿಂಸೆಯ ಹೆಸರಿನಲ್ಲಿ ಹಿಂಸೆ ಮಾಡುತ್ತಿದ್ದೇವೆ. ಮೇಲಿನ ವಾದದ ಪರೀಕ್ಷೆ ಮಾಡೋಣ. ಬಾಗಿಲಿಗೆ ಬಂದ ಬಿಕ್ಷುಕನಿಗೆ ಒಂದು ಹಿಡಿ ಅಕ್ಕಿ ಹಾಕಿ ನಮಗೆ ಧರ್ಮ ಬಂದಿತೆಂದು ನಾವು ಸಮಾಧಾನ ಪಟ್ಟುಕೊಳ್ಳುವುದರಿಂದ, ಭಿಕ್ಷುಕರ ಸಂಖ್ಯೆ ಏನೋ ಹೆಚ್ಚಾಗುತ್ತದೆ. ಆ ಸಮಸ್ಯೆ ಕಠಿಣ

ವಾಗುತ್ತದೆ. ಸೋಮಾರಿತನ ಅಧರ್ಮ ಹೆಚ್ಚುತ್ತದೆ. ಹಾಗೆಂದ ಮಾತ್ರಕ್ಕೆ ನಿಜವಾದ ಅರ್ಹರಾದ ಭಿಕ್ಷುಕರಿಗೆ ಸಹಾಯಮಾಡಕೂಡ ದೆಂದಲ್ಲ. ದುರ್ಬಲರನ್ನೂ ಅಂಗಹೀನರನ್ನೂ ಸಂರಕ್ಷಿಸುವುದು ಸಮಾಜದ ಕರ್ತವ್ಯ. ಆದರೆ ಈ ಜವಾಬ್ದಾರಿ ಪ್ರತಿಯೊಬ್ಬರೂ ತೆಗೆದುಕೊಳ್ಳಕೂಡದು. ಸಾರ್ವಜನಿಕ ಸಂಸ್ಥೆ ಅಥವ ಸರ್ಕಾರ ತೆಗೆದುಕೊಳ್ಳಬೇಕು. ಉದಾರವಾದ ಮನೋಭಾವವುಳ್ಳವರು ಧನಸಹಾಯಮಾಡಿ ವ್ಯವಸ್ಥೆಯಿಂದ ನಡೆಸಬೇಕು. ಮಹಾಜನರು ಪರಿಶುದ್ಧರಾದ ಮನಸ್ಸುಳ್ಳವರಾದರೆ, ಈ ಭಿಕ್ಷುಕರಸ್ಥಿತಿ ಪರಿಶೀಲಿಸಿ, ಯೋಗ್ಯರಿಗೆ ಆಶ್ರಯ ಕೊಡಬೇಕು. ಹೀಗೆ ಮಾಡದಿದ್ದರೆ ಮಾಡುವ ಸಹಾಯ ಅವಿವೇಕವಾಗುತ್ತದೆ. ಭಿಕ್ಷುಕರ ವೇಷದ ಕಳ್ಳರು ಹೆಚ್ಚುತ್ತಾರೆ. ದೇಶದ ದಾರಿದ್ರ್ಯ ಹೆಚ್ಚುತ್ತದೆ.

“ವ್ಯಕ್ತಿಯು ತಾನು ಭಿಕ್ಷುಕರಿಗೆ ಸಹಾಯಮಾಡುವುದು ಹೇಗೆ ಪಾಪವೋ, ಪೋಲಿನಾಯಿಗಳಿಗೆ ಅನ್ನ ಹಾಕುವುದೂ ಹಾಗೆಯೇ ಪಾಪ. ಅದು ದಯೆಯ ವಿಷಯದಲ್ಲಿ ತಪ್ಪು ತಿಳುವಳಿಕೆ. ಸಾಯುತ್ತಿರುವ ನಾಯಿಗೆ ಒಂದು ಎಂಜಲು ಎಲೆ ಎಸೆಯುವುದು ಅದರ ಅವಮಾನ. ನಾಯಿಗಳು ಪೋಲಿ ತಿರುಗುತ್ತಿರುವುದರಿಂದ ಸಮಾಜದ ದಯ ವ್ಯಕ್ತವಾಗುವುದಿಲ್ಲ. ಸಮಾಜದ ಅಲಸಿಕೆ ಗೊತ್ತಾಗುತ್ತದೆ. ಪ್ರಾಣಿಗಳು ನಮ್ಮ ಅಣ್ಣ ತಮ್ಮಂದಿರು. ಹುಲಿ ಸಿಂಹ ಸಹ; ಈ ಪ್ರಾಣಿಗಳೊಂದಿಗೂ ಹಾವುಗಳೊಂದಿಗೂ ಹೇಗೆ ಜೀವಿಸಬೇಕೆಂಬುದು ನಮ್ಮ ಅಜ್ಞಾನದಿಂದ ನಮಗೆ ಗೊತ್ತಿಲ್ಲ. ಮನುಷ್ಯನ ಜ್ಞಾನ ಅಭಿವೃದ್ಧಿಯಾದರೆ ಈ ಪ್ರಾಣಿಗಳಿಗೆ ಸ್ನೇಹಿತನಾಗುವುದು ಅವನಿಗೆ ತಿಳಿಯುತ್ತದೆ.

“ನಾಯಿ ನಂಬಿಕೆಯಾದ ಪ್ರಾಣಿ ನಾಯಿ ಮತ್ತು ಕುದುರೆಯ ನಂಬಿಕೆಯ ಉದಾಹರಣೆಗಳು ಅಸಂಖ್ಯಾತವಾಗಿವೆ. ಹಾಗೆಂದ ಮೇಲೆ ನಾವು ಅವುಗಳನ್ನು ಇಟ್ಟುಕೊಂಡು ಸ್ನೇಹಿತರಂತೆ ಸಾಕಬೇಕು. ಅಲೆಯುವುದಕ್ಕೆ ಬಿಡಬಾರದು. ಪೋಲಿ ಅಲೆಯುವ ನಾಯಿಗಳು ಇರುವವರೆಗೆ ನಾಯಿಗಳ ವಿಷಯದಲ್ಲಿ ನಮ್ಮ ಕರ್ತವ್ಯ ಪಾಲನೆಯಾದಂತೆ ಆಗುವುದಿಲ್ಲ. ಆದುದರಿಂದ ಪೋಲಿನಾಯಿಗಳಿರುವುದು ನಮಗೆ ನಾಚಿಕೆ

ಕೇಡು ಎಂದು ಅರಿತು ನಾವು ಅವುಗಳಿಗೆ ಆಹಾರ ಕೊಡದಿದ್ದರೆ ಅದ ರಿಂದ ನಾಯಿಗಳ ನಿಜವಾದ ಸೇವೆ ಆಗುವುದು.

"ದಯೆಯುಳ್ಳ ಮನುಷ್ಯ ಪೋಲಿ ನಾಯಿಗಳ ವಿಚಾರದಲ್ಲಿ ಮಾಡ ಬಹುದಾದುದೇನು? ಆತ ತನ್ನ ಆದಾಯದಲ್ಲಿ ಒಂದು ಭಾಗವನ್ನು ಬೇರೆ ತೆಗೆದಿಟ್ಟು, ಈ ನಾಯಿಗಳ ಸಂರಕ್ಷಣೆಗಾಗಿ ಒಂದು ಸಂಘವಿದ್ದರೆ ಅವರಿಗೆ ಕಳುಹಿಸಬೇಕು. ಅಂತಹ ಸಂಘ ಇಲ್ಲದಿದ್ದರೆ—ಈ ಸಂಘ ನಡೆಸುವುದು ಕಷ್ಟ ಎಂದು ನಾನು ಬಲ್ಲೆ—ಆತ ಒಂದು ಎರಡು ನಾಯಿ ಇಟ್ಟುಕೊಳ್ಳಬೇಕು. ಅದು ಸಾಧ್ಯವಿಲ್ಲವಾದರೆ ನಾಯಿಯ ಪ್ರಶ್ನೆಯನ್ನು ಬಿಟ್ಟು, ತನ್ನ ದಯೆಯನ್ನು ಇತರ ಪ್ರಾಣಿಗಳ ಸೇವೆಗೆ ತಿರುಗಿಸಬೇಕು.

"ಗೋವುಗಳನ್ನು ನಾವು ಸಂರಕ್ಷಿಸಲಾರೆವು ನಾಯಿಗಳನ್ನು ದೊಣ್ಣೆಗಳಿಂದ ಬಡಿಯುತ್ತೇವೆ ಅವುಗಳು ಮೂಳೆ ಬಿಟ್ಟುಕೊಂಡಿವೆ. ಆದರೂ ನಾವು ನಾಚಿಕೆಯಿಲ್ಲದೆ, ಒಂದು ಪೋಲಿ ನಾಯಿಯನ್ನು ಕೊಂದರೆ ಹೋ ಎಂದು ಕಿರುಚುತ್ತೇವೆ.

"ನನಗೆ ತಿಳಿದಮಟ್ಟಿಗೆ ನಾಯಿಗಳ ವಿಷಯದಲ್ಲಿ ನಮ್ಮ ಕರ್ತವ್ಯ ವೇನೆಂಬುದನ್ನು ವಿವರಿಸಿದ್ದೇನೆ ಪ್ರತಿಯೊಬ್ಬನೂ ತನ್ನ ಬೆಳಕಿಗೆ ಅನುಸಾರವಾಗಿ ನಡೆಯಬೇಕು. ನಾಶಮಾಡುವುದು ಕರ್ತವ್ಯ ವೆಂಬುದನ್ನು ನನ್ನಿಂದ ಯಾರೂ ಕಲಿಯದಿರಲಿ. ಕೆಲವು ಸಂದರ್ಭ ದಲ್ಲಿ ಮನುಷ್ಯ ಹಾಗೆ ಮಾಡಬೇಕಾಗಬಹುದು ನಾನು ಇದರ ವ್ಯಾಪ್ತಿ ಹೇಳಿದೆ. ಪ್ರತಿಯೊಬ್ಬನೂ ತನ್ನ ಶಕ್ತಿಗನುಸಾರವಾಗಿ ಈ ಧರ್ಮ ಅನುಸರಿಸಬೇಕು—ಅನುಸರಿಸುತ್ತಾನೆ. ಸಮಾಜದಲ್ಲಿ ಸಾಧ್ಯವಾದ ಮಟ್ಟಿಗೆ ಅಹಿಂಸೆಯ ಅಸ್ತ್ರವನ್ನೇ ಉಪಯೋಗಿಸಬೇಕು ಸಂಸಾರದಲ್ಲಿ ಒಬ್ಬರೊಂದಿಗೆ ಒಬ್ಬರು ಅಹಿಂಸೆಯನ್ನೇ ಅನುಸರಿಸಬೇಕು. ನಮ್ಮಲ್ಲಿ ಧೈರ್ಯ ಎಷ್ಟು ಹೆಚ್ಚಾಗಿರುವುದೋ ಅಹಿಂಸೆ ಅಷ್ಟೇ ಹೆಚ್ಚಾಗಿರುತ್ತದೆ. ಹೇಡಿಗಳಿಗೆ ಯಾವ ಒಳ್ಳೆಯದೂ ಉಂಟಾಗುವುದಿಲ್ಲ. ಧೈರ್ಯವೇ ಮುಖ್ಯ ವಾದುದು. ಧೈರ್ಯಶಾಲಿಯಾದವನು ಹಿಂದೂ ಮುಸಲ್ಮಾನ ದಂಗೆಯಲ್ಲಿ ಸಹ ಮಧ್ಯೆ ಪ್ರವೇಶಿಸಿ ತನ್ನ ಪ್ರಾಣವನ್ನೇ ಬಲಿಕೊಟ್ಟು ಶಾಂತಿಯನ್ನು ಸ್ಥಾಪಿಸುತ್ತಾನೆ."

* * * * *

ಭಾರತದಲ್ಲಿ ಎರಡನೆಯ ಮಹಾಯುದ್ಧದ ಕಾರಣದಿಂದ ಬಂದು ನೆರೆದ ಸೈನಿಕರು ಸ್ತ್ರೀಯರ ಮೇಲೆ ಅತ್ಯಾಚಾರ ಮಾಡುವುದು ಹೆಚ್ಚಾಯಿತು. ಅವರ ಎದುರಿಗೆ ಅಹಿಂಸೆಯನ್ನು ತೋರಿಸುವುದು ಹೇಗೆ ಎಂಬ ಪ್ರಶ್ನೆಗೆ ಗಾಂಧಿ ಹೀಗೆ ಹೇಳಿದರು " ಭಾರತದ ರಕ್ಷಣೆಗೆ ಬಂದೆವೆಂದುಕೊಂಡು ಈಗ ಇಲ್ಲಿ ಅಸಂಖ್ಯಾತ ಬಿಳಿಯ ಸಿಪಾಯಿಗಳು ಇದ್ದಾರೆ. ಹಾಗೆಯೇ ಭಾರತದ ಸಿಪಾಯಿಗಳು ಇದ್ದಾರೆ. ಇವರು ತಿಂದು ಕುಡಿದು ಮತ್ತರಾಗಿ ಭಾರತೀಯರ ಮೇಲೆ ಬೀಳುತ್ತಾರೆ. ಭಾರತ ಸ್ತ್ರೀಯರ ಮಾನಹಾನಿ ಸಹ ಮಾಡುತ್ತಾರೆ. " ಈಗ ಜಗತ್ತಿನ ಪರೀಕ್ಷೆಯೇ ನಡೆಯುತ್ತಿದೆ. ಯುದ್ಧದಿಂದ ತಪ್ಪಿಸಿಕೊಳ್ಳುವುದು ಯಾರಿಂದಲೂ ಸಾದ್ಯವಿಲ್ಲ. ರಾಮಾಯಣ ಭಾರತಗಳು ಕವಿಯ ಊಹನಾ ಶಕ್ತಿಯ ಫಲಗಳಾದರೂ ಆ ಕವಿಗಳು ಬರಿಯ ಪದಗಳನ್ನು ಕಟ್ಟುವವರಾಗಿರಲಿಲ್ಲ. ಅವರು ಋಷಿಗಳಾಗಿದ್ದರು ಅವರು ಚಿತ್ರಿಸಿದುದು ಇಂದು ನಮ್ಮ ಕಣ್ಣೆದುರಿಗೇ ನಡೆಯುತ್ತಿದೆ. ರಾವಣರುಗಳು ಒಬ್ಬರೊಂದಿಗೆ ಒಬ್ಬರು ಕಾದುತ್ತಿದ್ದಾರೆ ಅವರ ಶಕ್ತಿ ಒಬ್ಬರಿಗಿಂತ ಒಬ್ಬರಿಗೆ ಅಸಾಧ್ಯವಾಗಿದೆ. ಪ್ರಾಣಾಪಾಯವಾದ ಆಯುಧಗಳನ್ನು ಪ್ರಯೋಗಿಸುತ್ತಿದ್ದಾರೆ. ಯುದ್ಧ ಭೂಮಿಯಲ್ಲಿ ಅವರು ತೋರಿಸದ, ಅವರ ಊಹನೆಗೆ ಮೀರಿದ ಧೈರ್ಯ, ಯಾವುದೂ ಇಲ್ಲ.

" ಮನುಷ್ಯ ಹೀಗೆ ಕಾದುವುದಿಲ್ಲ. ನಿಜವಾಗಿಯೂ ದೇವರೂ ಹೀಗೆ ಕಾದುವುದಿಲ್ಲ. ಪಶುಗಳು ಮಾತ್ರ ಹೀಗೆ ಕಾದಬಲ್ಲವು. ಕುಡಿತದಿಂದ ಮತ್ತರಾದ ಸಿಪಾಯಿಗಳು ಅಂಗಡಿಗಳ ಲೂಟಿಮಾಡುತ್ತಾರೆ. ಸ್ತ್ರೀಯರ ಅವಮಾನ ಮಾಡುವುದಕ್ಕೂ ನಾಚುವುದಿಲ್ಲ ಯುದ್ಧಕಾಲದಲ್ಲಿ ಇಂತಹ ಅನ್ಯಾಯಗಳನ್ನು ತಪ್ಪಿಸಲು ಸರ್ಕಾರಕ್ಕೆ ಶಕ್ತಿ ಇಲ್ಲ. ಸೈನ್ಯ ಅವರ ಮುಖ್ಯ ಸೇವೆ ಮಾಡುತ್ತದೆ. ಸೈನ್ಯದ ತಪ್ಪನ್ನು ನೋಡಿಕೊಂಡು ಸರ್ಕಾರ ಸುಮ್ಮನೇ ಇರುತ್ತದೆ. ದೇಶ ಪೂರ್ತಿ ಸೈನ್ಯವೇ ಆದಮೇಲೆ ದೇಶದ ನಾಗರೀಕತೆ ಸೈನ್ಯದ ಜೀವನದಂತೆಯೇ ಆಗುತ್ತದೆ. ಆದುದರಿಂದ ಸಿಪಾಯಿಗಳು ಹೀಗೆ ಮಾಡಿದರೆ ಸರ್ಕಾರ ಅವರನ್ನು ದೂರುವುದೇ ಇಲ್ಲ. ಆದರೆ ತಾನೂ ಹೀಗೆ ಆಗಬೇಕಾದರೆ

ಭಾರತಕ್ಕೆ ಅನೇಕ ಶತಮಾನ ಕಳೆಯಬೇಕು.

ಆದುದರಿಂದ ಒಬ್ಬ ಸಹೋದರಿ ಕಳುಹಿಸಿರುವ ಈ ಕೆಳಗಿನ ಪ್ರಶ್ನೆಗಳು ಏಳುತ್ತವೆ."

(೧) "ಒಬ್ಬ ಸಿಪಾಯಿ, ಸ್ತ್ರೀಯ ಅವಮಾನಮಾಡಿದರೆ ಅವಳ ಪಾತಿವ್ರತ್ಯ ಹೋಯಿತೆ ?

(೨) ಅಂತಹ ಸ್ತ್ರೀಯನ್ನು ಸಮಾಜದಿಂದ ಬಹಿಷ್ಕರಿಸಿ ದೂರ ಇಡಬೇಕೇ ?

(೩) ಇಂತಹ ಪರಿಸ್ಥಿತಿಯಲ್ಲಿ ಸ್ತ್ರೀಯರೂ ಸಾರ್ವಜನಿಕರೂ ಮಾಡಬೇಕಾದುದೇನು ?

ಹೆಣ್ಣಿನ ಪಾತಿವ್ರತ್ಯವೇನೋ ಭಂಗವಾಯಿತು. ಆದರೆ ಸಮಾಜ ಅವಳನ್ನು ಬಹಿಷ್ಕರಿಸಿ ಹೊರಗೆ ಹಾಕಕೂಡದು. ಅವಳಿಗೆ ನಮ್ಮ ಸಹಾನುಭೂತಿ ಕೊಡಬೇಕು. ಕ್ರೂರವಾದ ಅವಳ ಘಾಯಗಳನ್ನು, ರೋಗಿಯನ್ನು ಉಪಚರಿಸುವಂತೆ ಉಪಚರಿಸಿ ಗುಣಪಡಿಸಬೇಕು.

"ಹೆಣ್ಣು ತಾನು ಒಪ್ಪಿ ಈ ಕೃತ್ಯ ನಡೆದರೆ ಆಗ ಅವಳಿಗೆ ಅವಮಾನ ನ್ಯಾಯ. ವ್ಯಭಿಚಾರ ಮತ್ತು ಬಲಾತ್ಕಾರ ಮಾನಭಂಗ ಎರಡೂ ಯಾವಾಗಲೂ ಒಂದೇ ಅಲ್ಲ. ಸ್ತ್ರೀಯರಿಗೆ ನನ್ನ ಉಪದೇಶ ಇದು. 'ಅವರು ಪಟ್ಟಣಗಳನ್ನು ಬಿಟ್ಟು ಹಳ್ಳಿಗಳಿಗೆ ಹೋಗಬೇಕು. ಅಲ್ಲಿ ಸೇವೆಮಾಡಲು ಅವರಿಗೆ ಒಳ್ಳೆಯ ಅವಕಾಶವಿದೆ. ಆದರೆ ಮುಖ್ಯವಾದುದು, ಸ್ತ್ರೀ ನಿರ್ಭೀತಿಯಿಂದ ಇರುವುದನ್ನು ಕಲಿಯುವುದು. ಪಾತಿವ್ರತ್ಯ ತನ್ನ ಗುರಾಣಿ ಎಂದು ತಿಳಿದಿರುವ ಭಯವಿಲ್ಲದ ಹೆಣ್ಣಿಗೆ ಎಂದಿಗೂ ಅವಮಾನವಾಗುವುದಿಲ್ಲವೆಂಬುದು ನನ್ನ ನಂಬಿಕೆ. ಮನುಷ್ಯ ಎಂತಹ ಪಶುವಾಗಿದ್ದರೂ ಆಕೆಯ ಹೊಳೆಯುವ ಪಾರಿಶುಧ್ಯದ ಎದುರಿಗೆ ನಾಚಿಕೆಯಿಂದ ತಲೆ ತಗ್ಗಿಸುತ್ತಾನೆ. ಆಧುನಿಕ ಕಾಲದಲ್ಲಿ ಸಹ ಹೀಗೆ ಸಂರಕ್ಷಣೆ ಮಾಡಿಕೊಂಡ ಸ್ತ್ರೀಯರ ಉದಾಹರಣೆ ನನ್ನ ಎದುರಿಗೆ ಇದೆ. ಆದುದರಿಂದ ಈ ಲೇಖನ ಓದುವ ಸ್ತ್ರೀಯರು ಅಂತಹ ಧೈರ್ಯ ಅವಲಂಬಿಸಬೇಕೆಂದು ಹೇಳುತ್ತೇನೆ. ಅತ್ಯಾಚಾರದ ಹೆಸರನ್ನು ಕೇಳಿದರೇ ಅವರು ನಡುಗುತ್ತಾರೆ. ಅದನ್ನು ಬಿಟ್ಟರೆ ಅವರಿಗೆ ನಿಜವಾಗಿ

ಧೈರ್ಯವುಂಟಾಗುವುದು. ಈ ಧೈರ್ಯ ಪರೀಕ್ಷಿಸಿಕೊಳ್ಳಲು ಹೆಣ್ಣು ಕ್ರೂರವಾದ ಅನುಭವವನ್ನು ಹೊಂದಲೇಬೇಕಾದುದಿಲ್ಲ. ಎಲ್ಲಾ ಸಿಪಾಯಿಗಳೂ ದನಗಳಲ್ಲ. ಹೀಗೆ ನಾಚಿಕೆಗೆಡುವವರು ಕೆಲವರು ಮಾತ್ರ. ಹಾವುಗಳಲ್ಲಿ ಶೇಕಡ ಒಂಕ್ಕೆ ಮಾತ್ರ ವಿಷವಿದೆ, ಅವುಗಳಲ್ಲಿಯೂ ಕೆಲವು ಮಾತ್ರ ಕಡಿಯುತ್ತವೆ. ಆದರೆ ಅವುಗಳನ್ನು ನೋಡಿದ ಕೂಡಲೇ ಹೆದರುವವರಿಗೆ ಈ ಜ್ಞಾನದಿಂದ ಪ್ರಯೋಜನವಿಲ್ಲ. ಸ್ತ್ರೀಯರು ನಿರ್ಭಯವುಳ್ಳವರಾಗಿರುವುದನ್ನು ಗಂಡಂದಿರೂ ಪೋಷಕರೂ ಅವರಿಗೆ ಕಲಿಸಬೇಕು. ದೇವರಲ್ಲಿ ನಿಜವಾದ ಭಕ್ತಿಯಿಂದ ಇದು ಸಾಧ್ಯ. ದೇವರು ಕಣ್ಣಿಗೇನೋ ಕಾಣುವುದಿಲ್ಲ. ಆದರೆ ಆತನೇ ಉತ್ತಮ ರಕ್ಷಕ. ಈ ನಂಬಿಕೆ ಯಾರಿಗೆ ಇದೆಯೋ ಅವರದೇ ಎಲ್ಲರಿಗಿಂತ ಹೆಚ್ಚು ನಿರ್ಭಯ.

"ಆದರೆ ಇಂತಹ ನಂಬಿಕೆ ಧೈರ್ಯ ಒಂದೇ ದಿನದಲ್ಲಿ ಬರುವುದಿಲ್ಲ. ಅಲ್ಲಿಯವರಿಗೆ ಇತರ ಮಾರ್ಗ ಹುಡುಕಬೇಕು. ಹೆಣ್ಣಿನ ಮೇಲೆ ಅತ್ಯಾಚಾರ ನಡೆಯುವಾಗ ಆಗ ಹಿಂಸೆ ಅಹಿಂಸೆ ಎಂದು ಯೋಚಿಸಲು ಅವಕಾಶವಿಲ್ಲ. ಅವಳ ಮೊದಲನೆಯ ಕೆಲಸ ಆತ್ಮರಕ್ಷಣೆ. ತನ್ನ ಮಾನ ಉಳಿಸಿಕೊಳ್ಳಲು ಅವಳು ತನಗೆ ತೋರಿದ ಯಾವ ಮಾರ್ಗ ಬೇಕಾದರೂ ಅನುಸರಿಸಬಹುದು. ದೇವರು ಆಕೆಗೆ ಹಲ್ಲು ಉಗುರು ಕೊಟ್ಟಿದ್ದಾನೆ. ಆಕೆ ಅವುಗಳನ್ನೇ ಉಪಯೋಗಿಸಬೇಕು. ಆವಶ್ಯಕ ಬಂದರೆ ಆ ಪ್ರಯತ್ನದಲ್ಲಿ ಮಡಿಯಬೇಕು. ಭಯವನ್ನು ಜಯಿಸಿದ ಹೆಣ್ಣೇ ಗಂಡು. ಹೀಗೆ ಜೀವವನ್ನು ತ್ಯಾಗಮಾಡುವುದರಿಂದ ಆಕೆ ತನ್ನನ್ನು ಮಾತ್ರವೇ ಅಲ್ಲ. ಇತರರನ್ನೂ ರಕ್ಷಿಸಬಲ್ಲಳು.

"ನಿಜವಾಗಿಯೂ ನಮಗೆ ಮರಣವೆಂದರೆ ಅತಿಭಯ. ಆದುದರಿಂದ ನಾವು ಕೊನೆಗೆ ಪಶು ಶಕ್ತಿಗೆ ತಲೆ ಬಾಗುತ್ತೇವೆ. ಕೆಲವರು ಶತ್ರುವಿಗೆ ವಿಧೇಯರಾಗುತ್ತಾರೆ. ಕೆಲವರು ಲಂಚಕೊಡುತ್ತಾರೆ. ಕೆಲವರು ಹೊಟ್ಟೆಯಲ್ಲಿ ತೆವಳುತ್ತಾರೆ. ಇತರ ಅವಮಾನಗಳಿಗೂ ಒಪ್ಪುತ್ತಾರೆ. ಕೆಲವು ಸ್ತ್ರೀಯರು ಸಾಯುವ ಬದಲು ದೇಹವನ್ನೇ ನೀಡುತ್ತಾರೆ. ಇದನ್ನು ನಾನು ತಿರಸ್ಕಾರದಿಂದ ಬರೆದಿಲ್ಲ. ಮನುಷ್ಯ ಸ್ವಭಾವ ತೋರಿಸುತ್ತಿ

ಷ್ಟೇನೆ ನಾವು ನಮ್ಮ ಹೊಟ್ಟೆಯಲ್ಲಿ ತಿವಳಲಿ ಅಥವ ಹೆಂಗಸು ಗಂಡಸಿಗೆ ತನ್ನ ದೇಹ ನೀಡಲಿ ಇವೆರಡೂ ಜೀವ ಭಯದ ಗುರುತು. ಆದುದರಿಂದ ಜೀವವನ್ನು ಬಿಡುವವನೇ ಜೀವವನ್ನು ಅನುಭವಿಸುತ್ತಾನೆ "ತೇನ ತ್ಯಕ್ತೇನ ಭುಂಜೀಥಾ" ಈ ಅಮೂಲ್ಯವಾದ ಶ್ಲೋಕವನ್ನು ಎಲ್ಲ ವಾಚಕರೂ ಹೃದ್ಗತಮಾಡಿಕೊಳ್ಳಬೇಕು. ಆದರೆ ಸುಮ್ಮನೆ ಆ ಶ್ಲೋಕ ಬಾಯಲ್ಲಿ ಹೇಳುವುದರಿಂದ ಫಲವಿಲ್ಲ. ಅದು ಹೃದಯದ ಅಂತ ರಾಳವನ್ನು ಪ್ರವೇಶಿಸಬೇಕು. ಜೀವನವನ್ನು ಅನುಭವಿಸಬೇಕಾದರೆ, ಜೀವದ ಆಸೆಗಳನ್ನು ಬಿಡಬೇಕು. ಹಾಗೆ ಬಿಡುವುದು ನಮ್ಮ ಸ್ವಭಾವ ವಾಗಬೇಕು.

"ಹೆಣ್ಣು ಮಾಡಬೇಕಾದುದೇನು ಎಂಬುದಕ್ಕೆ ಇಷ್ಟು ಹೇಳಿದೆ. ಆದರೆ ಇಂತಹ ಕ್ರೌರ್ಯವನ್ನು ನೋಡುತ್ತಾ ನಿಂತಿರುವ ಗಂಡಸು ಏನು ಮಾಡಬೇಕು? ಅದಕ್ಕೂ ಮೇಲಿನದರಲ್ಲಿಯೇ ಉತ್ತರವಿದೆ ಆತ ಸುಮ್ಮನೆ ನೋಡುತ್ತಾ ನಿಂತಿರಕೂಡದು. ಅವನು ಸ್ತ್ರೀಯನ್ನು ರಕ್ಷಿಸ ಬೇಕು. ಸಹಾಯಕ್ಕಾಗಿ ಪೋಲಿಸಿನವರಲ್ಲಿಗೆ ಹೋಗಕೂಡದು. ರೈಲಿನಲ್ಲಿ ಎಚ್ಚರಿಕೆಯ ಸರಪಳಿ ಎಳೆದರೆ ತನ್ನ ಕರ್ತವ್ಯವಾಯಿತೆಂದು ಭಾವಿಸಕೂಡದು. ಆತನಿಗೆ ಅಹಿಂಸೆಯ ಅಭ್ಯಾಸವಿದ್ದರೆ ಅವನು ಈ ಪ್ರಯತ್ನದಲ್ಲಿ ಸತ್ತು ಕಷ್ಟಕ್ಕೆ ಸಿಕ್ಕಿರುವ ಸ್ತ್ರೀಯನ್ನು ರಕ್ಷಿಸಬೇಕು. ಅವನಿಗೆ ಅಹಿಂಸೆಯಲ್ಲಿ ನಂಬಿಕೆಯಿಲ್ಲದಿದ್ದರೆ ಅಥವ ಅಹಿಂಸೆಯನ್ನು ಅಭ್ಯಾಸಮಾಡಲು ಸಾಧ್ಯವಿಲ್ಲದಿದ್ದರೆ, ತನ್ನ ಕೈಯಲ್ಲಾದ ಶಕ್ತಿಯನ್ನೆಲ್ಲಾ ಉಪಯೋಗಿಸಿ ಆಕೆಯನ್ನು ಅವನು ರಕ್ಷಿಸಬೇಕು. ಯಾವ ಮಾರ್ಗ ದಲ್ಲಾದರೂ ತನ್ನ ಪ್ರಾಣಕೊಡಲು ಅವನು ಸಿದ್ಧನಾಗಿರಬೇಕು.

"ನಾನು ಮುದುಕ, ದುರ್ಬಲ, ಹಲ್ಲಿಲ್ಲ. ಆದರೆ ತಂಗಿಯ ಮೇಲೆ ಅತ್ಯಾಚಾರ ನಡೆದಾಗ ನಾನು ದುರ್ಬಲ ಎಂಬ ಸಬೂಬನ್ನು ಹೇಳಿ ಕೊಂಡು ಸುಮ್ಮನೆ ನೋಡುತ್ತ ನಿಂತರೆ ನನ್ನ ಮಹಾತ್ಮಾಗಿರಿ ಹಾಸ್ಯಾ ಸ್ಪದವಾಗುತ್ತದೆ. ನಾನೇ ಆಗಲಿ ಅಥವ ಎದುರಿಗಿರುವ ಮತ್ತಾರೇ ಆಗಲಿ ಯಾವ ಮಾರ್ಗದಿಂದಲೂ ಮಧ್ಯೆನುಗ್ಗಿ ಪ್ರಾಣಕೊಟ್ಟರೆ, ಹೆಣ್ಣಿನ ಮಾವ ಉಳಿಯುವುದು. ಇಲ್ಲದಿದ್ದರೂ ನಾನು ಜೀವದೊಂದಿಗೆ ಆಕೆಯ

ಅವಮಾನ ನೋಡುವುದು ತಪ್ಪುವುದು.

"ಇದು ನೋಡುವವರನ್ನು ಕುರಿತು. ಆದರೆ ಈ ಧೈರ್ಯದ ವಾತಾವರಣ ನಮ್ಮ ದೇಶದಲ್ಲಿ ಪ್ರಚಾರವಾದರೆ, ಸ್ತ್ರೀಯರ ಅವಮಾನವನ್ನು ಭಾರತೀಯರು ಸಹಿಸುವುದಿಲ್ಲ ಎಂಬುದು ಸ್ಪಷ್ಟವಾಗಿ ಪ್ರಚಾರವಾದರೆ, ಯಾವ ಸಿಪಾಯಿಯೂ ಭಾರತದ ಸ್ತ್ರೀಯರನ್ನು ಮುಟ್ಟಲು ಎದೆಗಾರನಾಗುವುದಿಲ್ಲವೆಂಬುದು ನನ್ನ ನಂಬಿಕೆ. ಆ ವಾತಾವರಣವಿಲ್ಲದುದು ನಮ್ಮ ಅವಮಾನ. ಧೈರ್ಯ ದೇಹಕ್ಕೆ ಸೇರಿದ ಗುಣವಲ್ಲ. ದೇಹ ನಿಶ್ಶಕ್ತವಾಗಿದ್ದರೂ ಧೈರ್ಯ ಅದರ ಅದ್ಭುತ ಗುಣವಾಗುತ್ತದೆ

"ಆತ್ಮಗೌರವವುಳ್ಳ ಯಾವ ಮನುಷ್ಯನೂ ತನ್ನ ಮತ್ತು ತನ್ನ ಸಂಸಾರದವರ ಕ್ಷೇಮಕ್ಕಾಗಿ ಇತರರ ಮೇಲೆ ಅವಲಂಬಿಸುವುದಕ್ಕಿಂತ ಅವಮಾನ ಬೇರೆ ಇಲ್ಲ. ನಮ್ಮ ಮನುಷ್ಯತ್ವವನ್ನು ಕಳೆದುಕೊಂಡು ಬಾಳುವುದಕ್ಕಿಂತ ನನ್ನ ಸರ್ವಸ್ವವೂ ನಾಶವಾಗುವುದು ಲೇಸು. ನಮ್ಮ ನಿತ್ಯ ವ್ಯವಹಾರದಿಂದ ನಾವು ದೇವರನ್ನು ಬಹಿಷ್ಕರಿಸಿರುವುದರಿಂದಲೇ ನಾವು ಹೀಗೆ ನಿಸ್ಸಹಾಯರಾಗಿದ್ದೇವೆ. ವಾಸ್ತವವಾಗಿ ನಾವೆಲ್ಲಾ ನಾಸ್ತಿಕರೇ ಆಗಿದ್ದೇವೆ. ಆದುದರಿಂದಲೇ ಕೊನೆಯಲ್ಲಿ ಹಿಂಸೆಯಿಂದಲೇ ನಮಗೆ ರಕ್ಷಣೆ ಎಂದು ಭಾವಿಸುತ್ತೇವೆ. ನಮ್ಮ ದೇಹಕ್ಕೆ ಅಪಾಯ ಒದಗಿದಾಗ ನಮ್ಮ ವೇದಾಂತವೆಲ್ಲಾ ಗಾಳಿಗೆ ಹಾರಿಹೋಗುತ್ತದೆ. ನಮ್ಮ ನಿತ್ಯಜೀವನ, ಪರಮಾತ್ಮನ ನಿರಾಕರಣೆಯೇ ಆಗಿದೆ."

* * * * *

ಭಾರತದ ರಾಜಕೀಯದಲ್ಲಿ ಮಹಾತ್ಮರ ಪ್ರವೇಶದಿಂದ ಅದ್ಭುತ ಬದಲಾವಣೆಯಾಯಿತು. ಎಲ್ಲದಕ್ಕಿಂತ ಹೆಚ್ಚಾಗಿ ನಾವು ಸಂಪಾದಿಸಿದುದು ಧೈರ್ಯ. ನಿರಾಯುಧರು ಧೈರ್ಯದಿಂದ ಜಗತ್ತನ್ನೇ ಎದುರಿಸಬಹುದೆಂದು ಗಾಂಧಿ ಬೋಧಿಸಿದರು.

"ಮರಣದ ಭಯವನ್ನು ಜಡುವುದೇ ಸ್ವರಾಜ್ಯ. ಮರಣದ ಭಯದಿಂದ ಯಾವಾಗಲೂ ವಿಚಲಿತವಾಗುವ ದೇಶಕ್ಕೆ ಸ್ವರಾಜ್ಯ ದೊರೆಯುವುದಿಲ್ಲ. ದೊರೆತರೂ ಆ ದೇಶಕ್ಕೆ ಅದು ಉಳಿಯುವುದಿಲ್ಲ.

"ಇಂಗ್ಲಿಷ್ ಜನರು ತಮ್ಮ ಪ್ರಾಣವನ್ನು ತಮ್ಮ ಕಿಸೆಯಲ್ಲಿ ಇಟ್ಟು

ಕೊಂಡು ಹೋಗುತ್ತಾರೆ ಅರಬರಿಗೂ ಪಠಾಣರಿಗೂ ಮರಣ ಒಂದು ಸಣ್ಣ ಖಾಯಿಲೆಯಂತೆ. ಬಂಧುಗಳು ಸತ್ತರೆ ಅವರು ಅಳುವುದೇ ಇಲ್ಲ ಬೋಯರ್ ಸ್ತ್ರೀಯರಿಗೆ ಮರಣ ಭಯವೇ ಇರಲಿಲ್ಲ. ಬೋಯರ್ ಯುದ್ಧದಲ್ಲಿ ಸಾವಿರಾರು ಯುವತಿಯರು ವಿಧವೆಯರಾದರು. ಅವರು ಹೆಚ್ಚು ಯೋಚಿಸಲಿಲ್ಲ. "ಗಂಡನೋ ಮಗನೋ ಪ್ರಾಣಬಿಟ್ಟರೆ ಚಿಂತೆಯಿಲ್ಲ. ದೇಶದ ಗೌರವ ಉಳಿಯಬೇಕು" ಎಂದು ಅವರು ಹೇಳಿದರು "ದೇಶವು ಗುಲಾಮಗಿರಿಗೆ ಬಿದ್ದರೆ ಗಂಡನಿದ್ದರೆ ತಾನೆ ಏನು ಲಾಭ? ಮಗನ ನಶ್ವರವಾದ ದೇಹವನ್ನು ಹೂಳಿ, ಅವನ ಆಚಂದ್ರಾರ್ಕವಾದ ಕೀರ್ತಿಯನ್ನು ಕೊಂಡಾಡುವುದು, ಮಗನನ್ನು ಸಾಕಿ ದೊಡ್ಡ ಗುಲಾಮನನ್ನಾಗಿ ಮಾಡುವುದಕ್ಕಿಂತ ಸಾವಿರ ಪಾಲು ಮೇಲು." ಹೀಗೆ ಬೋಯರ್ ಸ್ತ್ರೀಯರು ತಮ್ಮ ಪ್ರಿಯರನ್ನು ಮರಣದೇವತೆಗೆ ಅರ್ಪಿಸಿ ಹೃದಯವನ್ನು ಕಲ್ಲುಮಾಡಿಕೊಂಡರು.

"ನಾನು ಮೇಲೆ ಹೇಳಿರುವವರು ಕೊಲ್ಲುತ್ತಾರೆ, ಕೊಲ್ಲಿಸಿಕೊಳ್ಳುತ್ತಾರೆ. ಆದರೆ ಕೊಲ್ಲದೆ ತಾವೇ ಕೊಲ್ಲಿಸಿಕೊಳ್ಳುವವರ ವಿಚಾರವೋ ಜಗತ್ತೇ ಅವರನ್ನು ಕೊಂಡಾಡುತ್ತದೆ. ಅವರೇ ಭೂಮಿಯ ಉಪ್ಪು.

"ಇಂಗ್ಲಿಷರೂ ಜರ್ಮನರೂ ಒಬ್ಬರೊಡನೊಬ್ಬರು ಹೋರಾಡಿ ಪರಸ್ಪರ ಕೊಂದರು ಫಲ ಒಬ್ಬರ ಮೇಲೆ ಒಬ್ಬರಿಗೆ ಇನ್ನೂ ಹೆಚ್ಚು ದ್ವೇಷ. ಅಶಾಂತಿಗೆ ಕೊನೆಯೇ ಇಲ್ಲ. ಯೂರೋಪಿನ ಸ್ಥಿತಿ ಕರುಣಾಜನಕವಾಗಿದೆ. ಮೋಸ ಮೊದಲಿಗಿಂತ ಹೆಚ್ಚಾಗಿದೆ. ಒಬ್ಬರನ್ನೊಬ್ಬರು ಗುಂಡಿಗೆ ತಳ್ಳಲು ಪ್ರಯತ್ನಿಸುತ್ತಿದ್ದಾರೆ.

"ಆದರೆ ನಾವು ಬೆಳೆಸಿಕೊಳ್ಳುತ್ತಿರುವ ಧೈರ್ಯ ಉಚ್ಚ ದರ್ಜೆಯದು, ಶುದ್ಧವಾದುದು. ಆದುದರಿಂದಲೇ ನಮಗೆ ಜಯ ಬಹು ಬೇಗ ಲಭಿಸುತ್ತದೆ. ಸ್ವರಾಜ್ಯ ಬರುವವೇಳೆಗೆ ನಮ್ಮಲ್ಲಿ ಅನೇಕರಿಗೆ ಮರಣದ ಭಯ ತಪ್ಪಿರುತ್ತದೆ. ಇಲ್ಲದಿದ್ದರೆ ನಮ್ಮ ಸ್ವರಾಜ್ಯ ಸ್ವರಾಜ್ಯವಲ್ಲ. ಇಲ್ಲಿಯವರಿಗೆ ಯುವಕರೇ ಬಲಿಯಾಗಿದ್ದಾರೆ. ಅಲಿಘರ್‌ನಲ್ಲಿ ಆಹುತಿಯಾದವರು ೨೧ ವರುಷಗಳಿಗಿಂತ ಕೆಳಗಿನ ಹುಡುಗರು. ಅವರು ಯಾರು ಎಂಬುದು ತಿಳಿಯಲೇ ಇಲ್ಲ. ಮತ್ತೆ ಸರ್ಕಾರ ಬಂದೂಕ

ಹಾರಿಸಿದರೆ ಕೆಲವು ಉತ್ತಮ ಕಾಂಗ್ರೆಸ್ಸಿಗರು ತಾವಾಗಿಯೇ ಆಹುತಿಯಾಗುವುದರಲ್ಲಿ ಸಂದೇಹವಿಲ್ಲ.

"ಮಕ್ಕಳು, ಮುದುಕರು ಯುವಕರು ಸತ್ತರೆ ನಾವ್ಯಾಕೆ ಗಾಬರಿಗೊಳ್ಳಬೇಕು. ಈ ಜಗತ್ತಿನಲ್ಲಿ ಒಬ್ಬರು ಜನಿಸದ, ಒಬ್ಬರು ಸಾಯದ ಗಳಿಗೆ ಯಾವುದೂ ಇಲ್ಲ. ಹುಟ್ಟಿಗಾಗಿ ಸಂತೋಷಿಸುವುದರ, ಸಾವಿಗಾಗಿ ದುಃಖಿಸುವುದರ ಮೌಢ್ಯ ನಮಗೆ ತಿಳಿಯಬೇಕು. ಆತ್ಮವಿದೆಯೆಂದು ನಂಬುವವರು ಹಿಂದುಗಳು. ಆತ್ಮ ಸಾಯುವುದಿಲ್ಲವೆಂದು ತಿಳಿದೇ ಇದ್ದಾರೆ. ಸತ್ತವರ ಆತ್ಮವೂ ಉಳಿದ ಎಲ್ಲರ ಆತ್ಮಗಳೂ ಒಂದೇ —ಸೃಷ್ಟಿಲಯ ಎಂದೆಂದಿಗೂ, ಬಿಡುವಿಲ್ಲದೆ ನಡೆಯುತ್ತಲೇ ಇರುತ್ತದೆ. ನಾವು ಆನಂದಿಸುವ ಅಥವ ದುಃಖಿಸುವ ಪ್ರಮೇಯ ಅಲ್ಲಿ ಏನೂ ಇಲ್ಲ. ನಮ್ಮ ದೇಶದಲ್ಲಿ ಜನಿಸುವವರೆಲ್ಲಾ ನಮ್ಮ ಸಂಸಾರದಲ್ಲಿ ಜನಿಸಿದವರೆಂದು ನಾವು ಭಾವಿಸಿದರೂ ಎಷ್ಟೊಂದು ಜನನ ಸಂಭ್ರಮವನ್ನು ನಾವು ಆಚರಿಸಬೇಕು? ಹಾಗೆಯೇ ನಮ್ಮ ದೇಶದವರ ಮರಣಕ್ಕೆಲ್ಲ ನಾವು ಅಳುವುದಾದರೆ ನಮ್ಮ ಕಣ್ಣಿನ ನೀರು ಎಂದಿಗೂ ಆರುವುದೇ ಇಲ್ಲ. ಈ ಭಾವನೆ ಮರಣದ ಭಯವನ್ನು ನಮಗೆ ತಪ್ಪಿಸಬೇಕು.

"ಭಾರತ ವೇದಾಂತಿಗಳ ದೇಶವೆನ್ನುತ್ತಾರೆ. ಆ ಗೌರವವನ್ನು ನಮ್ಮದನ್ನಾಗಿ ಮಾಡಿಕೊಳ್ಳುವುದಕ್ಕೂ ನಮಗೆ ಸಂಕೋಚವಿಲ್ಲ. ಆದರೂ ಮರಣದ ಎದುರಿಗೆ, ಯಾವ ರಾಷ್ಟ್ರವೂ ನಮ್ಮಷ್ಟು ದುರ್ಬಲರಲ್ಲ. ಮತ್ತೆ ಭಾರತದಲ್ಲಿ, ಮರಣದ ವಿಷಯದಲ್ಲಿ ಹಿಂದುಗಳಷ್ಟು ಹೆದರುವವರು ಯಾರೂ ಇಲ್ಲ. ಒಂದು ಜನನವಾದರೆ ಹುಚ್ಚರಂತೆ ಆನಂದಿಸುತ್ತೇವೆ. ಒಂದು ಮರಣವಾದರೆ ಸುತ್ತಮುತ್ತಲವರಿಗೆ ರಾತ್ರಿಯೆಲ್ಲಾ ನಿದ್ರೆಬಾರದಂತೆ ಆರ್ಭಟಿಸಿ ರೋದಿಸುತ್ತೇವೆ. ಸ್ವರಾಜ್ಯವನ್ನು ಸಂಪಾದಿಸಿ ಹೆಮ್ಮೆಯಿಂದ ಅನುಭವಿಸುವವರು ನಾವಾದರೆ ಈ ಕಣ್ಣು ಘೋರವನ್ನು ಇಲ್ಲದಂತೆ ಮಾಡಬೇಕು.

"ಇನ್ನು ಮರಣವನ್ನೇ ಲಕ್ಷಿಸದವನಿಗೆ ತುರಂಗವಾಸ ಏನು ಮಾಡಬಲ್ಲದು? ಸ್ವರಾಜ್ಯವು ಯಾಕೆ ಸಾವಕಾಶವಾಗಿದೆ ಎಂದರೆ ಮರಣವನ್ನೂ ಅದಕ್ಕಿಂತ ಕಡಿಮೆಯಾದ ಅಪಾಯಗಳನ್ನೂ ನಾವು

ಶಾಂತರಾಗಿ ಎದುರಿಸಲು ಸಿದ್ಧರಾಗಿಲ್ಲದಿರುವುದರಿಂದಲೇ ಸ್ವರಾಜ ನಮಗೆ ಇನ್ನೂ ದೊರೆತಿಲ್ಲ.

“ಶುದ್ಧರಾದ ನಿರಪರಾಧಿಗಳಾದ ಜನ, ಸಹಸ್ರಾರು ಸಂಖ್ಯೆಯಲ್ಲಿ ಮರಣವನ್ನಪ್ಪಲು ಬರತೊಡಗಿದರೆ, ಆ ತ್ಯಾಗದಿಂದ ಇತರರಿಗೆ ಶುಭವಾಗುವುದು. ನೋವು ಕಡಿಮೆಯಾಗುವುದು. ನಗುನಗುತ್ತಾ ಎದುರುಗೊಂಡರೆ ನೋವು ನೋವಾಗುವುದಿಲ್ಲ. ಅದು ಅವರ್ಣನೀಯವಾದ ಆನಂದವಾಗುವುದು. ದುಃಖದಿಂದಲೂ ನೋವಿನಿಂದಲೂ ತಪ್ಪಿಸಿಕೊಂಡು ಓಡುವವನು, ಇನ್ನೂ ಹೆಚ್ಚು ದುಃಖವನ್ನು ಅನುಭವಿಸುತ್ತಾನೆ. ನೋವು ತನ್ನನ್ನು ಮುಟ್ಟುವ ವೇಳೆಗೇ ಅರ್ಧ ಸತ್ತಿರುತ್ತಾನೆ. ಆದರೆ ಎಲ್ಲಾ ನೋವಿಗೂ ಸಿದ್ಧವಾಗಿರುವವನು, ನೋವನ್ನು ಅನುಭವಿಸುವುದೇ ಇಲ್ಲ. ಅವನ ಆನಂದವೇ ಅವನ ಸರ್ವೌಷಧಿಯಾಗುತ್ತದೆ.”

# ೬. ವಾರ್ಧಾದಲ್ಲಿ ನಡೆದ ಎ.ಐ.ಸಿ.ಸಿ.*

## ೧

### ವಾರ್ಧಾಕ್ಕೆ ಪ್ರಯಾಣ.

ಗಾಂಧಿಜಿಯವರು ವರ್ಧಾದಲ್ಲಿ ಬಂದು ನೆಲಸಿದ ಮೇಲೆ, ವಾರ್ಧಾ ಹಿಂದೂ ದೇಶದವರಿಗೆಲ್ಲಾ ಪವಿತ್ರಸ್ಥಳವಾಯಿತು. ದೇವರಲ್ಲಿ ಮಹಿಮೆಯಿದ್ದರೆ ದೇವಸ್ಥಾನ ಪವಿತ್ರವಾಗುತ್ತದೆ ಗುರುವಿನಲ್ಲಿ ಗುಣವಿದ್ದರೆ ತೀರ್ಥ ರುಚಿ. ಗಾಂಧಿಜಿಯವರು ವಾರ್ಧಾಕ್ಕೆ ಹೋದಮೇಲೆ ಅದರ ಮಹಿಮೆ ಇದ್ದಕ್ಕಿದ್ದಂತೆ ಏರಿತು. ಅಯೋಧ್ಯಾ, ಮಧುರೆ, ಕಾಶಿ, ಕಂಚಿ ಇವುಗಳಂತೆ ವಾರ್ಧಾವೂ ಪವಿತ್ರವಾದ ಯಾತ್ರಾಕ್ಷೇತ್ರವಾಯಿತು. ಹಿಂದೂದೇಶದ ರಾಜಕೀಯ, ಸಾಮಾಜಿಕ ನಾಡಿ ಅಲ್ಲಿಂದ ಮಿಡಿಯತೊಡಗಿತು ಗಾಂಧಿಜಿಯವರು ಇದ್ದ ಕಡೆಯೇ ಹಿಂದೂದೇಶದ ಇತಿಹಾಸನಿರ್ಮಾಣ, ಎಂಬುದರಲ್ಲಿ ಸಂದೇಹವಿಲ್ಲ. ಇಲ್ಲಿಯವರೆಗೆ ಭಾರತದ ಮುಂದಾಳುಗಳಿಗೆ ಅವರನ್ನು ಬಿಟ್ಟು ಯಾವ ಕೆಲಸವನ್ನೂ ಮಾಡಲು ಸಾಧ್ಯವಾಗಿಲ್ಲ. ವಾರ್ಧಾವನ್ನು ಬಿಟ್ಟು ಗಾಂಧಿ ಬರ್ದೋಲಿಗೆ ಹೋದಾಗ, ಕಾಂಗ್ರೆಸ್ ವರ್ಕಿಂಗ್ ಕಮಿಟಿಯೂ ಅಲ್ಲಿಯೇ

* ೧೯೪೨ ನೇ ಜನವರಿ.

ಸೇರಿತು. ಅನಂತರ ಅವರು ವಾರ್ಧಾಕ್ಕೆ ಬಂದ ಮೇಲೆ ಆಲ್ ಇಂಡಿಯ ಕಾಂಗ್ರೆಸ್ ಕಮಿಟಿ ಸಭೆಯು ಜನವರಿ ೧೫ನೇ ತಾರೀಖು ವಾರ್ಧಾದಲ್ಲಿ ಸೇರಿತು.

ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಈ ಸಭೆಯು ಅನೇಕ ರೀತಿಯಲ್ಲಿ ಬಹು ಪ್ರಾಮುಖ್ಯವಾದುದು. ೧೯೪೦ನೇ ಇಸವಿ ಜುಲೈ ೧೫ ನೇ ತಾರೀಖಿನಲ್ಲಿ ಸೇರಿದ್ದ ಸಭೆಯಿಂದ ಈಚೆಗೆ ೧೪ ತಿಂಗಳು ಕಾಂಗ್ರೆಸ್ ಸಭೆ ನಡೆದಿರಲಿಲ್ಲ. ೧೯೪೦ನೇ ಇಸವಿ ಜುಲೈ ೧೫ರಲ್ಲಿ, ಅಖಿಲ ಭಾರತ ಕಾಂಗ್ರೆಸ್ ಸಭೆಯು, ಗಾಂಧಿಯವರಿಗೆ, ಕಾಂಗ್ರೆಸ್ ಪರವಾಗಿ ಸತ್ಯಾಗ್ರಹವನ್ನು ನಡೆಸುವ ಅಧಿಕಾರವನ್ನು ಕೊಟ್ಟಿತು. ಗಾಂಧಿಜಿಯವರು ತಮಗೆ ಅರ್ಹರೆಂದು ತೋರಿದವರನ್ನು ಮಾತ್ರ ಸತ್ಯಾಗ್ರಹಿಗಳನ್ನಾಗಿ ಮಾಡುತ್ತಾ, ಯುದ್ಧವಿರುದ್ಧ ಸತ್ಯಾಗ್ರಹವನ್ನು ೧೪ ತಿಂಗಳ ಕಾಲ ನಡೆಸಿಕೊಂಡು ಬಂದರು. ಆದರೆ ೧೯೪೧ನೇ ಡಿಸೆಂಬರ ಕೊನೆಯಲ್ಲಿ ಒಂದು ಸಂದಿಗ್ಧ ಪರಿಸ್ಥಿತಿಯೊದಗಿತು. ಬೊಂಬಾಯಿನಲ್ಲಿ ಮಾಡಿದ ಕಾಂಗ್ರೆಸ್ ನಿರ್ಣಯದಂತೆ, ಅಹಿಂಸೆಯ ಕಾರಣದಿಂದಲೇ, ಈ ಯುದ್ಧವನ್ನೂ, ಎಲ್ಲಾ ಯುದ್ಧಗಳನ್ನೂ ತಾವು ವಿರೋಧಿಸುವುದಾಗಿ ಗಾಂಧಿಜಿಯವರು ಆ ನಿರ್ಣಯಕ್ಕೆ ಅರ್ಥಮಾಡಿದರು. ಆದರೆ ಕೆಲವು ವರ್ಕಿಂಗ್ ಕಮಿಟಿ ಸದಸ್ಯರು, ಕಾಂಗ್ರೆಸ್ಸು ಯುದ್ಧವನ್ನು ವಿರೋಧಿಸುವುದು ಆ ಅಹಿಂಸೆಯ ಕಾರಣದಿಂದ ಅಲ್ಲವೆಂದೂ, ಬ್ರಿಟನ್ನು ನಮ್ಮ ಸ್ವಾತಂತ್ರ್ಯಾಭಿಲಾಷೆಯನ್ನು ಪೂರೈಸದೆ ಇರುವುದರಿಂದ ಅದರೊಂದಿಗೆ ಅಸಹಕಾರವೆಂದೂ, ಬ್ರಿಟನ್‌ನೊಂದಿಗೆ ಚರ್ಚೆ ನಡೆಸಿ ಯುದ್ಧದಲ್ಲಿ ಅವರಿಗೆ ಸಹಾಯಮಾಡಲು ಈ ನಿರ್ಣಯದಲ್ಲಿ ಅವಕಾಶವಿದೆಯೆಂದೂ ಅಭಿಪ್ರಾಯಪಟ್ಟರು. ಗಾಂಧಿಜಿಯವರು ಮತ್ತೆ ಬೊಂಬಾಯಿ ನಿರ್ಣಯವನ್ನು ಓದಿ, ತಾವು ಮೊದಲು ಅರ್ಥ ಮಾಡಿಕೊಂಡುದು ತಪ್ಪೆಂದೂ, ವರ್ಕಿಂಗ್ ಕಮಿಟಿಯ ಅರ್ಥವೇ ಸರಿಯೆಂದೂ, ಕಾಂಗ್ರೆಸ್ ಪರವಾಗಿ ತಾವು ಸತ್ಯಾಗ್ರಹವನ್ನು ಮಾಡಿದರೆ ತಾವು ಹಿಂಸೆಯಲ್ಲಿ ಭಾಗಿಯಾದಂತೆ ಆಗುವುದರಿಂದ, ಆ ಜವಾಬ್ದಾರಿಯನ್ನು ತಮಗೆ ತಪ್ಪಿಸಬೇಕೆಂದೂ, ಕಾಂಗ್ರೆಸ್ ಪ್ರೆಸಿಡೆಂಟ್‌ರವರಿಗೆ ೩೦-೧೨-೪೧ ರಲ್ಲಿ ಕಾಗದ

ಬರೆದರು. ವರ್ಕಿಂಗ್ ಕಮಿಟಿಯವರು ಗಾಂಧಿಜಿಯವರ ಮಾತಿನ ಸೂಕ್ತತೆಯನ್ನು ಒಪ್ಪಿ ಅವರಿಗೆ ವಹಿಸಿದ್ದ ಸತ್ಯಾಗ್ರಹದ ಜವಾಬ್ದಾರಿಯಿಂದ ಅವರನ್ನು ಬಿಡುಗಡೆ ಮಾಡಿ, ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಒಪ್ಪಿಗೆಯನ್ನು ಪಡೆಯಲು ವಾರ್ಧಾದಲ್ಲಿ ಜನವರಿ ೧೫ ರಲ್ಲಿ ಎ. ಐ. ಸಿ. ಸಿ. ಸಭೆ ಸೇರಿಸಿದರು.

* * * * * * * *

ನಾವು ವಾರ್ಧಾಕ್ಕೆ ಹೋಗುವುದಕ್ಕಾಗಿ ಮೊದಲು ಹೈದರಾಬಾದು ಗಾಡಿಯಲ್ಲಿ ಕುಳಿತೆವು. ಬೆಂಗಳೂರಿನಿಂದ ಹೈದರಾಬಾದಿಗೆ ಒಂದು ಗಾಡಿಯನ್ನು ರೈಲಿನಲ್ಲಿ 'ಥ್ರೂ' ಆಗಿ ಹಾಕಿರುತ್ತಾರೆ ಅದರಲ್ಲಿ ಕುಳಿತರೆ ಗುಂತುಕಲ್ ಮತ್ತು ದ್ರೋಣಾಚಲಂ ಎಂಬ ಎರಡು ಸ್ಥಳಗಳಲ್ಲಿ ರೈಲನ್ನು ಬದಲಾಯಿಸಬೇಕಾಗಿಲ್ಲ. ಈ ಹೈದರಾಬಾದು ಗಾಡಿಯನ್ನೇ ಆಯಾ ಬದಲಾವಣೆಯ ಸ್ಥಳಗಳಲ್ಲಿ ಉಳಿದ ಗಾಡಿಗಳೊಂದಿಗೆ ಸೇರಿಸಿಕೊಳ್ಳುತ್ತಾರೆ. ಸ್ವಾಭಾವಿಕವಾಗಿ ಬೆಂಗಳೂರಿನಿಂದ ಹೊರಡುವ ಈ 'ಥ್ರೂ' ಗಾಡಿಯಲ್ಲಿ ಜನಸಂಖೆ ಹೆಚ್ಚು. ನಾವು ಕುಳಿತ ದಿನವೂ ಹಾಗೆಯೇ ಆಗಿತ್ತು. ರೈಲು ೨-೩ ಸ್ಟೇಶನ್ನು ಹೋದನಂತರವೂ ನಾವು ಇನ್ನೂ ಗಾಡಿಯಲ್ಲಿ ನಿಂತುಕೊಂಡೇ ಇದ್ದೆವು. ಒಬ್ಬ ಪ್ರಯಾಣಿಕರು 'ನೀವು ಎಲ್ಲಿಗೆ?' ಎಂದರು. "ವಾರ್ಧಾಕ್ಕೆ" ಎಂದೆ. ಕೂಡಲೆ ಅವರ ಮುಖದಲ್ಲಿ ಒಂದು ಹೊಸ ಬೆಳಕು ಉಂಟಾಯಿತು. "ವಾರ್ಧಾದಲ್ಲಿ ಮಹಾತ್ಮರು ಇರುವವರಲ್ಲವೆ?" ಎಂದರು. ಪುಣ್ಯಶ್ಲೋಕರ ಹೆಸರು, ಉಚ್ಚರಿಸಿದವರನ್ನು ಪವಿತ್ರರನ್ನಾಗಿ ಮಾಡುತ್ತದೆ. ವಾರ್ಧಾ ಎಂಬ ಹೆಸರಿನ ಮಾತ್ರದಿಂದಲೇ ನಮಗೆ ಗಾಡಿಯಲ್ಲಿ ಕೂಡುವುದಕ್ಕೆ ಸ್ಥಳ ದೊರೆಯಿತು.

ಹೈದರಾಬಾದಿನಲ್ಲಿ ನಾವು ಮತ್ತೊಂದು ವಿಶೇಷವನ್ನು ಅರಿತುಕೊಂಡೆವು. ಈಗ ಎಲ್ಲೆಲ್ಲೂ ಯುದ್ಧನಿಧಿಗಾಗಿ ಯಾವ ಯಾವ ರೂಪದಲ್ಲಿಯೂ ಹಣವನ್ನು ಶೇಖರಿಸುತ್ತಿದ್ದಾರಷ್ಟೆ. ನಮ್ಮ ಮೈಸೂರಿನಲ್ಲಿ ರೈಲು ಪ್ರಯಾಣಿಕರಿಂದ ರೂಪಾಯಿಗೆ ಒಂದಾಣೆಯಂತೆ ತೆಗೆದುಕೊಳ್ಳುತ್ತಿದ್ದಾರೆ. ಆದರೆ ಹೈದರಾಬಾದಿನಲ್ಲಿ ಹೈದರಾಬಾದ್ ದೇಶದೊಳಗೆ

ತಿರುಗಾಡುವವರಿಂದ ಈ ಒಂದು ಆಣೆಯನ್ನು ವಸೂಲ್ಮಾಡುವುದಿಲ್ಲ. ಹೈದರಾಬಾದನ್ನು ಬಿಟ್ಟು ಹೊರಕ್ಕೆ ಪ್ರಯಾಣ ಮಾಡುವವರಿಂದ ಮಾತ್ರ ತೆಗೆದುಕೊಳ್ಳುತ್ತಾರೆ. ಇದರಿಂದ ರೈಲ್ವೆ ಪ್ರಯಾಣಿಕರಿಂದ ಬರುವ ಯುದ್ಧನಿಧಿ ಕಡಿಮೆಯಾಗುತ್ತದೆ. ಯಾಕೆಂದರೆ ಹೈದರಾಬಾದ್‌ನೊಳಗೆ ತಿರುಗುವವರ ಸಂಖ್ಯೆ ಹೈದರಾಬಾದನ್ನು ಬಿಟ್ಟು ಹೊರಗೆ ಹೋಗುವವರ ಸಂಖ್ಯೆಗಿಂತ ಬಹಳ ಹೆಚ್ಚು. ಹೈದರಾಬಾದು ನಿಜಾಮರು ತಮ್ಮ ಸ್ವಂತ ಖಜಾನೆಯಿಂದ ಯುದ್ಧನಿಧಿಗೆ ಕೊಟ್ಟು ಈ ಕೊರತೆಯನ್ನು ಸರಿಮಾಡುತ್ತಾರೆ. ಹೈದರಾಬಾದು ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಯಾವ ಪ್ರೊಫೆಸರರೂ ಇಂಗ್ಲಿಷ್‌ನಲ್ಲಿ ಮಾತನಾಡುವುದಿಲ್ಲ. ಇಂಗ್ಲಿಷ್ ಪ್ರೊಫೆಸರ್ ಸಹ ಉರ್ದುವಿನಲ್ಲಿ ಮಾತನಾಡುತ್ತಾರೆ. ವಿಶ್ವವಿದ್ಯಾಲಯಕ್ಕೆ ಹೋದರೆ ಇಂಗ್ಲಿಷು ಅದರ ಸ್ವಾಭಾವಿಕವಾದ ಸ್ಥಾನದಲ್ಲಿರುವುದು ಗೊತ್ತಾಗುವುದು. ಅಲ್ಲಿ ಉರ್ದು ಪ್ರೊಫೆಸರುಗಳಾಗಲಿ ಕನ್ನಡ ಪ್ರೊಫೆಸರುಗಳಾಗಲಿ ಸಂಸ್ಕೃತ ಪ್ರೊಫೆಸರುಗಳಾಗಲಿ "ಇಂಗ್ಲೀಷು ಬಿಟ್ಟರೆ ನಾವು ಮುಳುಗಿದೆವು" ಎಂದು ಹಟ ತೊಟ್ಟಿರುವುದು ಕಾಣುವುದಿಲ್ಲ. ಅಲ್ಲಿಯ ಪ್ರೊಫೆಸರುಗಳನ್ನು ನಾನು ಇಂಗ್ಲಿಷಿನಲ್ಲಿ ಮಾತನಾಡಿಸಿದಾಗ ಅವರು 'ದತ್‌ಪತ್' ಎಂದು ಉರ್ದುವಿನಲ್ಲಿ ಜವಾಬು ಕೊಟ್ಟು ತಮ್ಮ ಉರ್ದು ನನಗೆ ತಿಳಿಯಿತೋ ಇಲ್ಲವೊ ಎಂಬುದನ್ನು ಕೂಡ ಲಕ್ಷಿಸದೆ ಹೊರಟುಹೋದರು. ಉರ್ದು ಅಲ್ಲಿ ವಿರಾಜಿಸುವಂತೆ ಕನ್ನಡ (ಇಂಗ್ಲಿಷ್ ಅಲ್ಲ) ಮೈಸೂರು ವಿಶ್ವವಿದ್ಯಾಲಯದಲ್ಲಿ ವಿರಾಜಿಸಲು ಅಡ್ಡಿಯೇನು? ನಮ್ಮ ಶ್ರೀಮನ್ಮಹಾರಾಜರು ಒಂದು ಮಾತಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಕನ್ನಡ ವಿಶ್ವವಿದ್ಯಾನಿಲಯವಾಗಿ ಮಾಡಬಹುದು. ಉರ್ದುವನ್ನು ಮುಖ್ಯ ಭಾಷೆಯಾಗಿ ಇಟ್ಟುಕೊಂಡುದರಿಂದ ಉಸ್ಮಾನಿಯ ವಿಶ್ವವಿದ್ಯಾಲಯದ ಯೋಗ್ಯತೆ ಮತ್ತು ಪ್ರಾಶಸ್ತ್ಯಗಳಿಗೆ ಯಾವ ರೀತಿಯಿಂದಲೂ ಕುಂದು ಉಂಟಾಗಿಲ್ಲವೆಂಬುದನ್ನು ಜ್ಞಾಪಕದಲ್ಲಿಡಬೇಕು.

## ಅಭಯಂಕರ್ ನಗರ

ಜನವರಿ ೧೫ ನೇ ತಾರೀಖು ಅಖಿಲ ಭಾರತ ರಾಷ್ಟ್ರೀಯ ಮಹಾ

ಸಭೆಯ ಕಮಿಟಿ ಅಧಿವೇಶನ ಗೊತ್ತಾಗಿದ್ದಿತು. ನಾವು ೧೪ನೇ ತಾರೀಖು ಬೆಳಿಗ್ಗೆ ವಾರ್ಧಾವನ್ನು ತಲುಪಿದೆವು. ಎ. ಐ. ಸಿ. ಸಿ. ಸಭೆ, ಬಜಾಜರ ಮನೆ ಮುಂದೆ ಮತ್ತು ಸುತ್ತ ಹರಡಿರುವ ವಿಶಾಲವಾದ ಮೈದಾನದಲ್ಲಿ ನಡೆಯಲು ಏರ್ಪಾಡಾಗಿತ್ತು. ಅಲ್ಲಿ ಇದ್ದ ಗೊಬ್ಬಳೀ ಮರದ ಮುಳ್ಳುಗಳನ್ನೆಲ್ಲಾ ಆರಿಸಿ, ಕರೆ ಭೂಮಿಯುನ್ನು ಚೆನ್ನಾಗಿ ಉತ್ತು ಪಾಕ ಮಾಡಿ ರಮ್ಯವಾಗಿ ಬಿದಿರಿನ ನಗರವನ್ನು ನಿರ್ಮಿಸಿದ್ದರು. ಸ್ನಾನಗ್ರಹ, ಅತಿಥಿಗಳಿಗೆ ಬಿಡಾರ, ಪತ್ರಿಕಾಕರ್ತರ ಬಿಡಾರ, ಊಟದ ಮನೆ, ಸ್ವಾಗತ ಸಮಿತಿಯ ಭವನ, ಕಾಂಗ್ರೆಸ್ ಕಮಿಟಿಯ ಬಹಿರಂಗ ಅಧಿವೇಶನ ಭವನ, ಎಲ್ಲವೂ ಒಂದಕ್ಕಿಂತ ಒಂದು ಚೆನ್ನಾಗಿ ಶಶಿರೇಖಾ ಪರಿಣಯದ ಮಾಯಾಬಜಾರಿನಂತೆ ಗಳಿಗೆ ಗಳಿಗೆಗೂ ಹೊಸ ಹೊಸ ರೂಪವನ್ನು ಹೊಂದುತ್ತಿದ್ದುವು. ಈ ಮಾಯಾಬಜಾರಿಗೆ ಮಹಾರಾಷ್ಟ್ರದ ದೇಶಭಕ್ತ ಅಭಯುಂಕರರ ಹೆಸರನ್ನು ಇಟ್ಟಿದ್ದರು. 'ಅಭಯಂಕರ್ ನಗರ್' ಎಂಬುದು ಕಾಂಗ್ರೆಸ್ ಅಧಿವೇಶನಕ್ಕೆ ಅನ್ವರ್ಥವಾದ ಹೆಸರು. ನಗರದ ಮಹಾದ್ವಾರದಲ್ಲಿ ಅಭಯಂಕರರ ದೊಡ್ಡದಾದ ಭಾವಚಿತ್ರವನ್ನು ಹಾಕಿದ್ದರು. ಅದರ ಎದುರಿಗೆ ಸ್ವಲ್ಪ ದೂರದಲ್ಲಿ ಫಾರ್‌ವರ್ಡ್ ಬ್ಲಾಕಿನವರು ತಮ್ಮ ಸಭೆಯ ಮಂಟಪದಲ್ಲಿ ಸುಭಾಷ್ ಬೋಸರ ಬಹಳ ಸೊಗಸಾದ ಚಿತ್ರವನ್ನು ಹಾಕಿದ್ದರು. ಕಾಂಗ್ರೆಸ್ ವರ್ಕಿಂಗ್ ಕಮಿಟಿಯವರು ಬಜಾಜರ ಬಿಡಾರದಲ್ಲಿ ೧೩ ನೇ ತಾರೀಖು ೪ ಗಂಟೆಗಳ ಕಾಲ ಸೇರಿದ್ದರು. ೧೪ ನೇ ತಾರೀಖು ೨ ಗಂಟೆಗೆ ಮತ್ತೆ ಸೇರಿದರು. ಗಾಂಧಿಯವರು ಆವತ್ತೂ ವರ್ಕಿಂಗ್ ಕಮಿಟಿ ಅಧಿವೇಶನಕ್ಕೆ ಬಂದಿದ್ದರು. ಸಾಯಂಕಾಲ ಸುಮಾರು ೫॥ ಗಂಟೆ ಹೊತ್ತಿಗೆ ಬಜಾಜರ ಅತಿಥಿಭವನದ ಮುಂದೆ ಭಾರಿ ಜನಗಳ ಗುಂಪೇ ಸೇರಿಬಿಟ್ಟಿತ್ತು. ಹಿಂದೂ ದೇಶದ ಜನರ ಹೃದಯ ತಂತಿಯನ್ನು ನುಡಿಸುವುದನ್ನು ಗಾಂಧಿಯವರಂತೆ ಬಲ್ಲ ಬೇರೆ ಮಾಂತ್ರಿಕ ಇನ್ನೂ ಹುಟ್ಟಿಲ್ಲ. ಅವರು ನಮ್ಮ ಜನರಿಗೆ ಎಂದಿಗೂ ತೃಪ್ತಿ ಮತ್ತು ಬೇಜಾರನ್ನು ಹುಟ್ಟಿಸದ ಗಾರುಡಿಗರು. ಅವರು ಪ್ರತಿದಿನವೂ ವಾರ್ಧಾಕ್ಕೆ ಬರುತ್ತಿದ್ದರೂ ಅವರ ದರ್ಶನವನ್ನು ಪಡೆಯಲು ಜನ ನೆರೆದೇ ಇರುತ್ತದೆ. ಅವರನ್ನು ಎಷ್ಟು ನೋಡಿದರೂ ನಮ್ಮವರಿಗೆ ಸಾಕು ಎನ್ನಿಸು

ವುದೇ ಇಲ್ಲ. ಸುಮಾರು ೫॥ ಗಂಟೆಗೆ ವರ್ಕಿಂಗ್ ಕಮಿಟಿ ಸಭೆ ಮುಗಿಯಿತು. ಗಾಂಧಿಯವರು ಅತಿಥಿಭವನದಿಂದ ಹೊರಕ್ಕೆ ಹೊರಟರು. ಜತೆಯಲ್ಲಿ ಅಬ್ದುಲ್ ಗಫಾರ್ ಖಾನ್, ಬಜಾಜ್, ಪಂಡಿತ ಜವಹರ್ ಲಾಲ್ ಮುಂತಾದವರೆಲ್ಲಾ ಹೊರಕ್ಕೆ ಬಂದರು. ಅತಿಥಿಭವನದಿಂದ ಬಜಾಜರ ಸ್ವಂತ ಮನೆ ಸುಮಾರು ೧೦ ಮಾರು ದೂರದಲ್ಲಿದೆ. ಗಾಂಧಿಯವರು ಹಾಸ್ಯವಾಗಿ ಮಾತನಾಡುತ್ತಾ ನಗುತ್ತಾ ಶಿಷ್ಯಳೊಬ್ಬಳ ಹೆಗಲ ಮೇಲೆ ಕೈಯಿಟ್ಟು ಕೊಂಡು ನಿಂತಿದ್ದರು. ಎದುರಿಗೆ ಬಜಾಜ್, ಗಫಾರ್ ಖಾನ್, ವರ್ಕಿಂಗ್ ಕಮಿಟಿ ಸದಸ್ಯರು ಸುತ್ತಾ ನೂರಾರು ಜನ ನೆರೆದಿದ್ದರು. ಗಾಂಧಿಯವರು ತಮ್ಮ ಮಹಿಮೆ ತಮಗೆ ತಿಳಿಯದೋ ಎಂಬಂತೆ, ಸಂತೆಯಲ್ಲೂ ಕೂಟದಲ್ಲೂ ನೂರಾರು ಜನರ ಮಧ್ಯೆ ಅನಾಮಧೇಯರಾದವರು ಒಬ್ಬರಂತೆ ನಿಂತಿದ್ದರು. ಆ ಅವರ ಮುಖದಲ್ಲಿಯ ತೇಜಸ್ಸು ಎಲ್ಲಿಯಾದರೂ ಇವರು ಮಹಾತ್ಮರು ಎಂಬುದನ್ನು ತೋರಿಸುವಂತಿತ್ತು. ಗಾಂಧಿಯವರ ಮುಖ, ಬಾಯೊಳಗೆ ಹತ್ತಿಸಿರುವ ಬಲ್ಪನ್ನು ಇಟ್ಟುಕೊಂಡಿದ್ದರೆ ಹೇಗೋ ಹಾಗೆ ಹೊಳೆಯುತ್ತದೆ ಅವರ ಕೆನ್ನೆಯ ಮೇಲೆ ಗಡ್ಡ ಬೆಳೆದುದನ್ನು ಯಾರೂ ಕಾಣರು. ಹಾಗೆ ಅವರು ಕ್ಷೌರ ಮಾಡಿಕೊಂಡಿರುತ್ತಾರೆ ಸುತ್ತಲೂ ನಿಂತಿದ್ದ ಜನರ ಮಧ್ಯೆ ಗಾಂಧಿಯವರು ಹಿಂದಿಯಲ್ಲಿ ಹಾಸ್ಯವಾಗಿ ಏನೇನೋ ಹೇಳುತ್ತಿದ್ದರು. ಜನರು ಗಳಿಗೆಗೆ ಒಂದು ಸಲ ಘೊಳ್ಳೆಂದು ನಗುತ್ತಿದ್ದರು ನನಗೆ ಹಿಂದಿ ಚೆನ್ನಾಗಿ ತಿಳಿಯದುದರಿಂದ ಈ 'ಭಾರತ ಭಾಗ್ಯವಿಧಾತ'ನ ಮಾತುಗಳ ಸ್ವಾರಸ್ಯ ತಿಳಿಯುತ್ತಿರಲಿಲ್ಲ ಒಂದೆರಡು ಗಳಿಗೆ ಹೀಗೆ ಮಾತನಾಡುತ್ತಾ ನಿಂತಿದ್ದ ನಂತರ ಬಜಾಜರು ಏನೋ ಹೇಳಿಕೊಂಡು ನಗುತ್ತಾ ಗಫಾರ್ ಖಾನರ ಕೈಯನ್ನು ಹುಡುಗರು ಎಳೆಯುವಂತೆ ದರದರನೆ ಎಳೆದುಕೊಂಡು ಹೋಗಲು ಯತ್ನಿಸಿದರು ಗಫಾರ್ ಖಾನರು ಬಜಾಜರಿಗೆ ೧॥ ಯಷ್ಟು ಇದ್ದಾರೆ. ಗಾಂಧಿಯವರು ಬಜಾಜರಿಗೆ "ಆದರೆ ಅವನು ಪಠಾನ್, ಪಠಾನ್, ಎಚ್ಚರಿಕೆ" ಎಂದರು. ನೆರೆದ ಜನ ನಗುವೇ ನಗುವಾಯಿತು.

ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿ ಅಧಿವೇಶನದಲ್ಲಿ ಭಾರತದ

ಎಲ್ಲ ಕಣ್ಮಣಿಗಳನ್ನೂ ನೋಡಬಹುದು. ೧೫ನೇ ತಾರೀಖು ಮಧ್ಯಾಹ್ನ ೨॥ ಗಂಟೆಗೆ ಅಧಿವೇಶನ ಪ್ರಾರಂಭವಾಗುವುದಿತ್ತು. ಡೆಲಿಗೇಟುಗಳ ಬಿಡಾರದಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ ಇಳಿದುಕೊಂಡಿದ್ದರು. ಆದರೆ ಅವರು ಒಂದು ಸಲ ಟಿಕೆಟ್ ಇಲ್ಲದೆ ಬಂದಾಗ ಅಲ್ಲಿ ನಿಂತಿದ್ದ ಸ್ವಯಂಸೇವಕ ಅವರನ್ನು ಒಳಕ್ಕೆ ಬಿಡಲಿಲ್ಲ. ಅವರು ಟಿಕೆಟ್ ತರಲು ವಾಪಸು ಹೋದಾಗ ಸ್ವಯಂಸೇವಕನು "ನನಗೆ ಇವರು ಯಾರು ಎಂಬುದು ಗೊತ್ತು. ಆದರೆ ನನ್ನ ಕರ್ತವ್ಯ ನಾನು ಮಾಡಬೇಕು" ಎಂದು ಬಾಯ ಮೇಲೆ ಕೈಯಿಟ್ಟುಕೊಂಡನು ಕಮಲಾದೇವಿ ಸ್ವಲ್ಪವೂ ಬೇಜಾರುಪಟ್ಟು ಕೊಳ್ಳದೆ, 'ನಾನು ಯಾರು ನಿನಗೆ ತಿಳಿಯದೆ?' ಎಂದು ಮುಂತಾಗಿ ಗದರಿಸದೆ ಮತ್ತೆ ಟಿಕೆಟ್ಟನ್ನು ತೋರಿಸಿ ಒಳಕ್ಕೆ ಹೋದರು. ಸುಮಾರು ಎರಡು ಗಂಟೆಯಿಂದಲೇ ಸಭಾಭವನವು ತುಂಬಲು ಪ್ರಾರಂಭವಾಯಿತು. ಮಂಗಳವಾದ್ಯಗಳು ಭಾರತದ ಭವಿಷ್ಯವನ್ನೆಲ್ಲಾ ತಮ್ಮ ಕೊರಲಿನಿಂದ ಮಿಡಿಯುವ ಹಾಗೆ ಮೊಳಗುತ್ತಿದ್ದವು. ನಿಧಾನವಾಗಿ ಮಹಾ ಮಹಾ ನಾಯಕರು, ಧೀರರು, ಶೂರರು ಪ್ರಜಾ ಪ್ರತಿನಿಧಿಗಳು ಸರ್ಕಾರದವರಿಂದ ಪುಂಡರು ಎನಿಸಿಕೊಂಡವರು ಬರ ತೊಡಗಿದರು. ಒಬ್ಬೊಬ್ಬರು ಒಂದೊಂದು ನಕ್ಷತ್ರಗಳಂತೆ, ಅಷ್ಟ ದಿಕ್ಪಾಲಕರಂತೆ, ಹಿಂದೂದೇಶದ ಮಾನ ಮರ್ಯಾದೆ ಸ್ವಾತಂತ್ರ್ಯಗಳು ಮೂರ್ತಿವೆತ್ತಂತೆ ಒಳಕ್ಕೆ ಬರತೊಡಗಿದರು. ಆ ಸಭಾಮಂಟಪದಲ್ಲಿ ಎಲ್ಲೆಲ್ಲೂ ರತ್ನಗಳನ್ನು ದೇಶಸೇವಕರು ಕಾಣುತ್ತಿದ್ದರು. ಎಲ್ಲಿ ನಮಗೆ ಕಾಣದೆ ಆ ರತ್ನಗಳನ್ನು ತುಳಿದೇ ಬಿಡುತ್ತೇವೋ ಎಂಬಂತೆ ಅವರು ನಮ್ಮ ಹಿಂದೆ ಮುಂದೆ, ಎಲ್ಲಿ ಕಣ್ಣು ಎತ್ತಿದರೆ ಅಲ್ಲಿ ಬೆಳಗುತ್ತಿದ್ದರು. ಎಡಗೈಯಲ್ಲಿ ಒಂದು ಖಾದಿ ಚೀಲವನ್ನೂ ಬಲಗೈಯಲ್ಲಿ ಒಂದು ಕೋಲನ್ನೂ ಹಿಡಿದುಕೊಂಡು ಬಿ. ಜಿ ಖೇರ್ ಒಳಕ್ಕೆ ಬಂದರು ಬಂದವರೇ ಏನೂ ತಿಳಿಯದವರಂತೆ ಒಂದು ಕಂಬದ ಮಗ್ಗುಲಲ್ಲಿ ಹೋಗಿ ಕುಳಿತುಕೊಂಡರು. ಒಂದು ಗಳಿಗೆಯನಂತರ ರವಿಶಂಕರ್ ಶುಕ್ಲ ಒಳಕ್ಕೆ ಬಂದರು. ಇಸಮು ಅಜಾನ ಬಾಹುವಾಗಿ ಕೆಂಪಗೆ ಪೇಶ್ವೆ ಬಾಜಿರಾಯನಂತೆ, ವಿಶ್ವಾಮಿತ್ರ ಋಷಿಯಂತೆ ಇದ್ದಾರೆ. ಆ ಮೇಲೆ

ಗೋವಿಂದವಲ್ಲಭ ಪಂತ್; ಇವರು ಜಗಜಟ್ಟಿ. ಯಾವುದಕ್ಕೂ ಹೆದರುವ ಮನುಷ್ಯನೇ ಅಲ್ಲ. ಮತ್ತೊಂದು ಬಾಗಿಲಿನಿಂದ ವಿಶ್ವನಾಥ್‌ದಾಸ್, ಸಿನ್ಹ, ಮದರಾಸಿನ ಡಾಕ್ಟರ್ ರಾಜನ್, ಎಲ್ಲೆಲ್ಲಿ ನೋಡಿದರೂ ಮಂತ್ರಿಗಳೇ ಘಟಾನುಘಟಿಗಳೇ! ಆವತ್ತು ಮಂತ್ರಿಗಳಾಗಿದ್ದವರು ಇವತ್ತು ಹೀಗೆ ಪ್ರಜೆಗಳೊಂದಿಗೆ ಸಮಾನವಾಗಿ ಅವರ ಮಧ್ಯೆ ಹೋಗಿ ಕುಳಿತುಕೊಳ್ಳುವುದೇ ಸಾಕು; ನಮ್ಮ ಜನರಿಗೆ ಪ್ರಜಾಸತ್ತೆಯನ್ನು ಕಲಿಸುವುದಕ್ಕೆ, ಸರ್ಕಾರಕ್ಕೂ ಪ್ರಜೆಗಳಿಗೂ ಇರಬೇಕಾದ ಬಾಂಧವ್ಯವನ್ನು ತೋರಿಸುವುದಕ್ಕೆ.

## ವೇದಿಕೆಯ ಮೇಲೆ

ಸಭಾಂಗಣದ ಮಧ್ಯದಲ್ಲಿ ಎತ್ತರವಾದ ವೇದಿಕೆಯನ್ನು ಹಾಕಿದ್ದರು. ಇದು ಸುಮಾರು ೫೦ ಜನ ಹಿಡಿಯುತ್ತಿತ್ತು. ಆದರಲ್ಲಿ ಭಾರಿ ಭಾರಿ ದಿಂಬುಗಳನ್ನಿಟ್ಟು ಕುಳಿತುಕೊಳ್ಳುವುದಕ್ಕೆ ಸುಖವಾಗುವಂತೆ ಮಾಡಿ, ಮೇಲುಗಡೆ ಅನೇಕ ಬಲ್ಬುಗಳ ಒಂದು ಗೊಂಚಲನ್ನೇ ನೇತು ಹಾಕಿದ್ದರು. ಸಭಾಕಾರ್ಯಪ್ರಾರಂಭವಾಗುವುದಕ್ಕೆ ೧೦ ನಿಮಿಷ ಮುಂಚೆ ಕೃಪಲಾನಿ ಬಂದು ವ್ಯವಸ್ಥೆಯನ್ನೆಲ್ಲಾ ನೋಡಿಕೊಂಡು ಹೋದರು. ಕೃಪಲಾನಿ, ಕೇಸರವನ್ನು ಕೆದರಿಕೊಂಡಿರುವ ಸಿಂಹದ ಹಾಗೆ ಇದ್ದಾರೆ. ಮನುಷ್ಯ ಬೆಂಕಿ. ವಿನೋದಿಯೂ ಹೌದು. ಆ ವೇದಿಕೆಯ ಮಧ್ಯದಲ್ಲಿ ಒಂದು ಕುರ್ಚಿ ಹಾಕಿ ಅದರ ಮೇಲೆ ಒಂದು ಖಾದಿ ಅರಿವೆ ಹೊದಿಸಿದ್ದರು. ಮುಂದೆ ಇದ್ದ ಮೇಜಿನ ಮೇಲೆ ಮೈಕ್ರೋಫೋನ್ ಇತ್ತು. ಇದರ ಹೊರತು ಅಲ್ಲಿ ಯಾವ ಕುರ್ಚಿ ಮೇಜುಗಳೂ ಇರಲಿಲ್ಲ. ಪತ್ರಿಕೆಗಳ ಬಾತ್ಮಿದಾರರು ಬಿಟ್ಟ ಕಣ್ಣು ಮುಚ್ಚದೆ ಬಾಗಿಲಿನ ಕಡೆಗೆ ನೋಡುತ್ತಿದ್ದರು. ಫೋಟೋಗ್ರಾಫರು ಎಲ್ಲೆಲ್ಲೂ ಉತ್ಸಾಹದಿಂದ ಕ್ಲಿಕ್ ಕ್ಲಿಕ್ ಎನಿಸುತ್ತ ಸಿದ್ಧರಾಗಿದ್ದರು. ಮಾರ್ಚ್ ಆಫ್ ಟೈಂ (March of Time) ಎಂಬ ಅಮೇರಿಕೆಯ ಚಲನಚಿತ್ರದವರು, ಅಧಿವೇಶನದ ಚಲನಚಿತ್ರವನ್ನು ತಯಾರಿಸಲು ಸಿದ್ಧರಾಗಿದ್ದರು. ಜನರಲ್ಲಿ "ಬಂದರು ಬಂದರು" ಎಂದು ಗುಜುಗುಜು ಪ್ರಾರಂಭವಾಯಿತು. ಒಂದು ನಿಮಿಷದೊಳಗೆ ರಾಷ್ಟ್ರಪತಿ ಆಜಾದ್, ಗಾಂಧಿಯವರು, ರಾಜೇಂದ್ರಬಾಬು,

ಬಜಾಜ್, ಭುಲಾಬಾಯಿ ದೇಸಾಯಿ, ಪಂಡಿತ ನೆಹರು, ರಾಜ ಗೋಪಾಲಾಚಾರಿ, ಪ್ರಫುಲ್ಲಚಂದ್ರಘೋಷ್, ಗಫಾರ್ ಖಾನ್, ಸರೋಜಿನೀದೇವಿ, ಕಮಲಾದೇವಿ, ಪ್ರಕಾಶಂ ಎಲ್ಲರೂ ವೇದಿಕೆಗೆ ಬಂದರು. ಮಧ್ಯದಲ್ಲಿ ಗಾಂಧಿ, ಆಜಾದ್, ಕೃಪಲಾನಿ, ಕುಳಿತರು. ಅವರ ಹಿಂದೆ ಗಫಾರ್‌ಖಾನರು ಅರ್ಧ ಒರಗಿಕೊಂಡೇ ಕುಳಿತರು. ಗಫಾರ್‌ಖಾನರ ಗಾತ್ರ ಮತ್ತು ಎತ್ತರದ ಕಾರಣದಿಂದ ಅವರು ಸಾಧ್ಯ ವಾದ ಕಡೆಗಳಲ್ಲೆಲ್ಲಾ ಅರ್ಧ ಮಲಗಿಕೊಳ್ಳುತ್ತಾರೆ. ಹಿಂದಲ ಸಾಲಿ ನಲ್ಲಿ ದಿಂಬಿಗೆ ಒರಗಿಕೊಂಡು ರಾಜಾಜಿ, ಭುಲುಭಾಯಿ, ಬಜಾಜ್, ರಾಜೇಂದ್ರಬಾಬು, ಜಯರಾಮ್‌ದಾಸ್ ದೌಲತ್‌ರಾಮ್ ಇವರು ಕುಳಿ ತರು. ಪಂಡಿತ ಜವಹರ್‌ಲಾಲರು, ಕೈಯಲ್ಲಿ ಒಂದು ಚೀಲವನ್ನು ಹಿಡಿದುಕೊಂಡು, ವೇದಿಕೆಯ ಮೇಲೆ ಆಚೆ ಈಚೆ, ಅಲ್ಲಿ ಇಲ್ಲಿ ಹುಡುಗ ರಂತೆ ಜಾಗವನ್ನು ಹುಡುಕಾಡಿ ಕೊನೆಗೆ ಹಿಂದುಗಡೆ ಹಾಸಿದ್ದ ದಿಂಬಿನ ಮೇಲೆ—ಕಾಲುಮಣೆಯ ಮೇಲೆ ಕುಳಿತುಕೊಳ್ಳುವಂತೆ—ಸ್ವಲ್ಪ ಎತ್ತರ ದಲ್ಲಿ ಕುಳಿತರು. ಶಂಕರರಾವ್ ದೇವ್ ಎಲ್ಲಿಂದಲೋ ಹಿಂದಲ ಬಾಗಿಲಿ ನಿಂದ ಯಾರಿಗೂ ಕಾಣದಂತೆ ಬಂದು ವೇದಿಕೆ ಏರಿದರು. ಶಂಕರರಾವ್ ದೇವ್ ಅವರದು ಸ್ವಲ್ಪ ಸಂಕೋಚಸ್ವಭಾವ. ಇವರು ಯಾವಾಗಲೂ ಹಿಂದೆಯೇ ಇರುತ್ತಾರೆ. ಇವರ ಗಡ್ಡ ಯಾವಾಗಲೂ ಬೆಳದೇ ಇರು ತ್ತದೆ. ಗಾಂಧಿಯವರ ಗಡ್ಡ ಬೆಳೆದುದನ್ನು ಯಾರೂ ಕಾಣರು. ಶಂಕರ ರಾವ್ ದೇವರ ಗಡ್ಡ ಬೋಳಿಸಿದುದನ್ನು ಯಾರೂ ಕಾಣರು. ಮಹಾ ರಾಷ್ಟ್ರರಲ್ಲಿ, ನಮ್ಮ ಮೈಸೂರಿನ ಬ್ರಹ್ಮಚಾರಿಗಳಂತೆ ಅಥವಾ ಮದರಾಸಿ ನವರಂತೆ ದಟ್ಟಿ ಪಂಚೆ ಉಡುವ ಸ್ವಭಾವವಿಲ್ಲ ಆದರೆ ದೇವ್ ಮಾತ್ರ ದಟ್ಟಿಯುಡುತ್ತಾರೆ. ಬನೀನು ಶರಟು ಹಾಕುವುದಿಲ್ಲ. ಒಂದು ದುಪಟಿ ಹೊದೆಯುತ್ತಾರೆ. ಅವರ ಮುಖದಲ್ಲಿ ಯಾವಾಗಲೂ ಸ್ವಲ್ಪ ಯೋಚನೆ. ಗಾಂಭೀರ್ಯ, ಭಾವುಕತೆ ಇವು ತೋರುತ್ತವೆ. ಅವರನ್ನು ನೋಡಿದರೆ ಇವರು ಶಂಕರರಾವ್‌ದೇವ್, ವರ್ಕಿಂಗ್ ಕಮಿಟಿ ಸದಸ್ಯರು, ಮಹಾ ರಾಷ್ಟ್ರದ ಪ್ರಮುಖ ಪತ್ರಿಕೆಯ ಸಂಪಾದಕರು, ಎಂಬುದು ಗೊತ್ತಾಗುವು ದಿಲ್ಲ. ಯಾವನೋ ಅರ್ಧಸನ್ಯಾಸಿ, ಭಾವನಾಜಗತ್ತಿನಲ್ಲಿ ವಿಹರಿಸು

ತ್ತಿರುವವನೆಂದು ಕಾಣುತ್ತದೆ. ಗಾಂಧಿಯವರ ಹಿಂದೆ ಮಶ್ರೂವಾಲಾ, ಮಹದೇವ ದೇಸಾಯಿ, ಬಂದು ಕುಳಿತುಕೊಂಡರು. ಅಲ್ಲಿ ಗಾಂಧಿಯವರ ರಾಜಕೀಯ ವ್ಯವಹಾರಗಳಿಗೆಲ್ಲಾ ಮಹದೇವದೇಸಾಯಿ ಕಾರ್ಯದರ್ಶಿಯೆಂದೂ, ವೇದಾಂತ ವಿಚಾರಗಳಿಗೆಲ್ಲಾ ಮಶ್ರೂವಾಲಾ ಕಾರ್ಯದರ್ಶಿಯೆಂದೂ ಜನ ಹೇಳುತ್ತಾರೆ. ಅವರಿಬ್ಬರ ಕೈಯಲ್ಲೂ ಒಂದೊಂದು ದಪ್ಪನಾದ ಬಿಳಿಯ ಕಾಗದದ ಪುಸ್ತಕ. ಮಶ್ರೂವಾಲಾ ಉರ್ದುವಿನಲ್ಲಿಯೇ ಎಲ್ಲಾ ಭಾಷಣಗಳನ್ನೂ ಬರೆದುಕೊಳ್ಳುತ್ತಿದ್ದರು. ಅದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಯಿತು. ಈ ಉರ್ದು ಪಾಂಡಿತ್ಯದಿಂದ ಅವರ ಇಂಗ್ಲೀಷು, ಗುಜರಾತಿ ಜ್ಞಾನಕ್ಕೆ ಬಾಧಕವುಂಟಾಗಿಲ್ಲ. ಅವರು ಇಂಗ್ಲೀಷಿನಲ್ಲಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಭಾರತದ ಕಣ್ಮಣಿಗಳೆಲ್ಲಾ ಹೀಗೆ ವೇದಿಕೆಯ ಮೇಲೆ ನೆರದರು. ಅವರ ಮಧ್ಯೆ ವಸಿಷ್ಠ ಋಷಿಯಂತೆ ಗಾಂಧಿಯವರು ಕಂಗೊಳಿಸುತ್ತಿದ್ದರು. ಗಾಂಧಿಯವರ ಜತೆಯಲ್ಲಿ ಅವರ ರಾಟೆಯೂ ಬಂದಿತ್ತು. ವೇದಿಕೆಗೆ ಬಂದ ಕೂಡಲೇ ಗಾಂಧಿಯವರು ನೂಲುವುದಕ್ಕೆ ಪ್ರಾರಂಭಿಸಿದರು. ಮೈಕ್ರೋಫೋನಿನ ಮೂಲಕ ಆ ಧ್ವನಿಯು ಗರಗರನೆ ಸಭಾಮಂಟಪದ ಎಲ್ಲಾ ಕಡೆಗೂ ಕೇಳಿಸುತ್ತಿತ್ತು. ಮಹದೇವ ದೇಸಾಯಿ ಸಹ ಕದರಿನಲ್ಲಿ ನೂಲುತ್ತಿದ್ದರು. ವೇದಿಕೆಯ ಮೇಲಕ್ಕೆ ಇಬ್ಬರು ಶೋಭನೆಯರು ಬಂದು ಕೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡು ಶಾರದೆ ಲಕ್ಷ್ಮಿಯರಂತೆ " ವಂದೇ ಮಾತರಂ " ಹಾಡನ್ನು ಹಾಡಿದರು. ಮೊದಲು ಗಾಂಧಿಯವರು, ಅನಂತರ ನೆರೆದಿದ್ದ ಸಮಸ್ತ ಜನರೂ ರಾಷ್ಟ್ರಗೀತಕ್ಕೆ ಗೌರವವನ್ನು ತೋರಿಸುವ ಸಲುವಾಗಿ ಎದ್ದು ನಿಂತರು. ಕೃಪಲಾನಿ ಶಾಲುವನ್ನು ದಿಕ್ಕಾಪಾಲಾಗಿ ಸೊಂಟಕ್ಕೆ ಸುತ್ತಿಕೊಂಡು ನಿಂತರು. ಭಾರತದ ಸಮಸ್ತ ಶಕ್ತಿಯೂ ಸದ್ಗುಣವೂ ಆತ್ಮಬಲವೂ ಮೂರ್ತಿವೆತ್ತಂತೆ ಗಾಂಧಿಯವರು ರಾಷ್ಟ್ರಗೀತೆಯಲ್ಲಿ ಮಗ್ನರಾಗಿ ಕಣ್ಣುಮುಚ್ಚಿ ನಿಂತಿದ್ದರು. ಆ ಪ್ರಾತಃಕಾಲ, ಜವಹರ್‌ಲಾಲ್ ನೆಹರೂರವರ ನೇತೃತ್ವದಲ್ಲಿ ನಡೆದಿದ್ದ ಧ್ವಜವಂದನೆಯನ್ನಾಗಲಿ, ಈ ರಾಷ್ಟ್ರಗೀತೆ ಜನರ ಮನಸ್ಸಿನ ಮೇಲೆ ಉಂಟುಮಾಡಿದ ಪರಿಣಾಮವನ್ನಾಗಲಿ ನೋಡಿದವರಿಗೆ,

ಭಾರತವ ಶಕ್ತಿಸಾಮರ್ಥ್ಯ, ಜಗತ್ತಿನ ಮಂಗಳದಲ್ಲಿ ಇದರ ಮುಖ್ಯ ಭಾಗ, ಇವುಗಳ ವಿಷಯದಲ್ಲಿ ಯಾವ ಸಂದೇಹವೂ ಉಂಟಾಗುತ್ತಿರಲಿಲ್ಲ.

## ಮೌಲಾನಾ ಆಜಾದ್ ಮತ್ತು ಗಾಂಧಿಯವರ ಭಾಷಣಗಳು

ಅನಂತರ "ವಿಶ್ವಕವಿ ಟಾಗೂರರ ಅದ್ಭುತ ಸಾಧನೆ, ಭಾರತಕ್ಕೂ ಪ್ರಪಂಚಕ್ಕೂ ಅವರು ಸಲ್ಲಿಸಿರುವ ಸೇವೆ, ಭರತಖಂಡದ ಹಿಂದಲ ಮಹರ್ಷಿಗಳಿಗೆ ಅವರು ಸಮಾನವಾಗಿ ಸಂಪಾದಿಸಿರುವ ಜ್ಞಾನ, ಅವರಲ್ಲಿ ಮಿಳಿತವಾಗಿದ್ದ ಭಾರತದ ಅತ್ಯುತ್ಕೃಷ್ಟ ಸಂಸ್ಕೃತಿ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿ ಇವುಗಳು, ಅವರು ತಮ್ಮ ಗಾನದಿಂದ ನಮ್ಮ ಕಾರ್ಪಣ್ಯವನ್ನು ಕಡಿಮೆ ಮಾಡಲು ಯತ್ನಿಸಿ, ನಮ್ಮ ಜೀವಕ್ಕೆ ತಂದ ಸೌಂದರ್ಯ, ಭಾರತದ ಮುಂದಲ ಮತ್ತು ಇಂದಿನ ಸಂಸ್ಕೃತಿಗೆ ಅವರ ಜೀವ ಇತ್ತಿರುವ ಸ್ಫೂರ್ತಿ, ನಿಜವಾದ ಭಾರತದ ಪುತ್ರರಂತೆ ಅವರು ಇಲ್ಲಿಯ ದಾರಿದ್ರ್ಯವನ್ನು ನೀಗಲು ಮಾಡಿದ ಸಾಹಸಗಳು, ಭಾರತದ ಸ್ವಾತಂತ್ರ್ಯದಲ್ಲಿ ಅವರಿಗಿದ್ದ ಉತ್ಕಟವಾದ ಅಭಿಲಾಷೆ, ಜಗತ್ತಿನ ಪೂರ್ಣ ಮಂಗಳಕ್ಕಾಗಿ ಅವರು ವಿಶಾಲ ಹೃದಯದಿಂದ ದುಡಿದು ಸ್ಥಾಪಿಸಿರುವ ಶಾಂತಿನಿಕೇತನ ವಿಶ್ವಭಾರತೀ, ಅವುಗಳನ್ನು ಬೆಳೆಸುವುದಕ್ಕೆ ನಮ್ಮವರು ಮಾಡಬೇಕಾದ ಕರ್ತವ್ಯ" ಇವುಗಳನ್ನೆಲ್ಲಾ ಒಳಗೊಂಡ ದೀರ್ಘವಾದ ನಿರ್ಣಯವು ಸಭೆಯ ಮುಂದೆ ಅಂಗೀಕೃತವಾಯಿತು. ಶ್ರೀ ಎಸ್. ಶ್ರೀನಿವಾಸಯ್ಯಂಗಾರ್ಯರ ನಿಧನದ ಮೇಲೂ ನಿರ್ಣಯವು ಅಂಗೀಕೃತವಾಯಿತು. ರಾಷ್ಟ್ರಪತಿ ಆಜಾದರು ಮಾತನಾಡಲು ಎದ್ದು ನಿಂತರು. ದೇವಸ್ಥಾನದಲ್ಲಿ ದೊಡ್ಡವರ ತಲೆಗೆ ಮುಗುಟವನ್ನು ಸುತ್ತಿ ಗೌರವಿಸುವಂತೆ ಅವರು ನಿಂತಕೂಡಲೆ, ಸ್ವಾಗತಸಮಿತಿಯ ಅಧ್ಯಕ್ಷರು ಅವರ ಅಂಗಿಗೆ, ಅವಶ್ಯಕವಾದ ಬ್ಯಾಡ್ಜ್ ಒಂದನ್ನು ಸಿಕ್ಕಿಸಿದರು. ಈ ವೇಳೆಗೆ ೨-೪೦ ಗಂಟೆ ಆಯಿತು. ಅನಂತರ ಆಜಾದರು ತಮ್ಮ ಭಾಷಣವನ್ನು ಪ್ರಾರಂಭಿಸದರು.

ಸುಮಾರು ಒಂದು ಗಂಟೆ ೨೦ ನಿಮಿಷಗಳು, ನಿರರ್ಗಳವಾಗಿ, ನಿಟ್ಟೋಟವಾಗಿ, ಖಡಾಖಂಡಿತವಾಗಿ, ಸ್ಪಷ್ಟವಾಗಿ ಆಜಾದರು, ದೇಶದ

ಮನೋಭಾವವನ್ನು ವಿವರಿಸಿ ಉಪನ್ಯಾಸ ಮಾಡಿದರು. ಕೆಲವರು ಊಹಿಸಿರುವಂತೆ ವರ್ಕಿಂಗ್ ಕಮಿಟಿ ಸದಸ್ಯರಲ್ಲಿ ಲಡಾಯಿ ಉಂಟಾಗಿದೆ ಎಂಬುದು ಸುಳ್ಳು ಎಂದೂ, ಎಲ್ಲರೂ ಚೆನ್ನಾಗಿ ಯೋಚಿಸಿ ಚರ್ಚಿಸಿಯೇ ಈ ತೀರ್ಮಾನಕ್ಕೆ ಬಂದಿರುವುದಾಗಿಯೂ ತಿಳಿಸಿದರು. ಅನಂತರ ೧ ಗಂಟೆ ೧೦ ನಿಮಿಷದಿಂದ ೫-೩೦ರ ವರೆಗೆ ಗಾಂಧಿಯವರು ಕುರ್ಚಿಯ ಮೇಲೆ ಕುಳಿತುಕೊಂಡೇ ಭಾಷಣ ಮಾಡಿದರು. ಭಾಷಣವನ್ನು ಪ್ರಾರಂಭಿಸುವುದಕ್ಕೆ ಮುಂಚೆ, ವ್ಯವಸ್ಥಾಪಕರು ವೇದಿಕೆಯ ಮೇಲುಗಡೆ ತೂಗು ಹಾಕಿದ್ದ ದೀಪಗಳನ್ನು ಹತ್ತಿಸಿದರು. ಅದರ ಬೆಳಕು ಗಾಂಧಿಯವರ ಮುಖದ ಮೇಲೆ ಅವರ ಸೌಮ್ಯವಾಗಿದ್ದ ಮುಖವನ್ನು ಚುಚ್ಚುವಂತೆ ಬಿದ್ದಿತು. ಗಾಂಧಿಯವರು 'ಬೆಳಕು ಬೇಡ, ತೆಗೆಯಿರಿ' ಎಂದರು. ವ್ಯವಸ್ಥಾಪಕರು ಕೇಳಲಿಲ್ಲ. ಆಗ ಗಾಂಧಿಯವರು ತಲೆಗೆ ಮುಸುಕ ಹಾಕಿಕೊಂಡು ಸುಮ್ಮನೆ ಕೂತರು. ಅವರದು ಅಹಿಂಸೆಯ ಮಾರ್ಗ. ದೀಪ ಹತ್ತಿಸಬೇಡಿ ಎಂದು ಗದರಿಸಿದ್ದರೆ, ಸ್ವಾಗತಸಮಿತಿ ವ್ಯವಸ್ಥಾಪಕರು ದೀಪವನ್ನು ಆರಿಸುತ್ತಿದ್ದರು. ಗಾಂಧಿಯವರು ಮುಸುಕು ಹಾಕಿಕೊಂಡ ಕೂಡಲೇ ಜನ ಘೊಳ್ಳೆಂದು ನಕ್ಕಿತು. ಅನಂತರ ವ್ಯವಸ್ಥಾಪಕರು ದೀಪಗಳನ್ನು ಆರಿಸಿದರು ಮುಂದೆ ಗಾಂಧಿಯವರು ಬರ್ದೋಲಿ ನಿರ್ಣಯವನ್ನು ಅಂಗೀಕರಿಸಬೇಕೆಂದು ಹಿಂದಿಯಲ್ಲಿ ಒಂದು ಗಂಟೆ ೨೦ ನಿಮಿಷ, ಪ್ರತಿಯೊಂದು ಮಾತೂ ಜನರ ಮನಸ್ಸಿಗೆ ಪೂರ್ಣವಾಗಿ ನಾಟುವಂತೆ ತುಂಬ ಶ್ರದ್ಧೆಯಿಂದ ಹೇಳಿದರು. ನನಗೆ ಹಿಂದಿ ಚೆನ್ನಾಗಿ ತಿಳಿಯದುದರಿಂದ ಗಾಂಧಿಯವರು ಹೇಳಿದುದು ಪೂರ್ಣವಾಗಿ ಅರ್ಥವಾಗಲಿಲ್ಲ. ಅವರ ಮಾತುಗಳಲ್ಲಿ ಬಹಳ ಹಾಸ್ಯ ಇತ್ತು. ಅದರ ಸುಖವನ್ನು ಪ್ರೇಕ್ಷಕರು ಅನುಭವಿಸಿ ಮಧ್ಯೆ ಮಧ್ಯೆ ನಗುತ್ತಿದ್ದರು. ನನಗೆ ಹಿಂದಿ ಬರದುದರಿಂದ, ಭಾರತದ ಹೃದಯವನ್ನು ಬಿಚ್ಚುತ್ತಿದ್ದ ಅವರ ಭಾಷಣ ತಿಳಿಯಲಿಲ್ಲ. ಇಂಗ್ಲಿಷಿನಲ್ಲಿ ಮಾತನಾಡಿದರೆ ನನಗೆ ತಿಳಿಯುತ್ತಿದ್ದಿತು. ಆದರೆ ಇಂಗ್ಲಿಷ್ ಭಾಷೆಯ ಪ್ರಾಬಲ್ಯದ ಕಾಲ ಹೋಯಿತು. ಸಂಸ್ಕೃತ ಬಿಟ್ಟರೆ ಆಗುವುದಿಲ್ಲ ಎಂದು ನಮ್ಮಲ್ಲಿ ಒಂದು ಬಗೆಯ ಹಳೆಯ ಕಾಲದ ಜನ ಇರುವಂತೆ, ಇಂಗ್ಲಿಷ್ ಬಿಟ್ಟರೆ ಆಗುವು

ದಿಲ್ಲ, ಎಂಬ ಮತ್ತೊಂದು ಬಗೆಯ ಹಳೆಯ ಕಾಲದ ಜನ ಇದ್ದಾರೆ. ಅವರು ಸಂಸ್ಕೃತ ಗೊಡ್ಡು. ಇವರು ಇಂಗ್ಲಿಷ್ ಗೊಡ್ಡು. ಅವರಿಗಿರುವಷ್ಟೇ ಅಸಹನೆ ಇವರಿಗೂ ಇದೆ. ಇಬ್ಬರಿಗೂ ಜಗತ್ತು ಬದಲಾವಣೆಯಾಗುತ್ತಿದೆ, ಮುಂದೆ ಓಡುತ್ತಿದೆ ಎಂಬುದು ತಿಳಿಯುವುದಿಲ್ಲ. ನನಗೆ ಇಂಗ್ಲಿಷ್ ಬರುತ್ತಿತ್ತು. ಆದರೆ ಪ್ರಯೋಜನವೇನು? ಚರ್ಚಿಲ್ ರಾಗಲಿ ರೂಸೊವೆಲ್ಟ್ ಆಗಲಿ ನನ್ನನ್ನು ತಮ್ಮ ಆಡಳಿತದಲ್ಲಿ ಸೇರಿಸಿಕೊಳ್ಳುವಂತೆ ಇಲ್ಲ. ಎಷ್ಟೇ ಚೆನ್ನಾಗಿ ನಮ್ಮ ಇಂಗ್ಲಿಷ್ ಪ್ರೊಫೆಸರುಗಳು ಇಂಗ್ಲಿಷಿನಲ್ಲಿ ಮಾತನಾಡಿದರೂ, ಇವರ ಭಾವಚಿತ್ರಗಳನ್ನು ಬ್ರಿಟಿಷ್ ಅಃಕಾಡಮಿಯಲ್ಲಿ ಅನಾವರಣ ಮಾಡುವಂತೆ ಇಲ್ಲ. ನಮ್ಮ ಈ ಸರ್ಕಸ್ ನೋಡಿ ಆಂಗ್ಲೆಯ ಬಟ್ಲರರು ನಗುವುದನ್ನು ಬಿಡುವಂತೆ ಇಲ್ಲ. ಹಿಂದೀ ಬರದುದರಿಂದ ನಾನು ಬಹಳ ಆನಂದವನ್ನೂ ಜ್ಞಾನವನ್ನೂ ಕಳೆದು ಕೊಂಡೆ. ಹಿಂದಿ ಬರದ ಮಾತ್ರಕ್ಕೇನೆ ನಮ್ಮವರ ಕನ್ನಡದ ಜ್ಞಾನ ಹೆಚ್ಚುವುದಿಲ್ಲ. ಒಂದು ಪಕ್ಷ ಬಂತು ಎನ್ನಿ. ಆಗ ನಮ್ಮ ಕನ್ನಡಜ್ಞಾನ ಕಡಿಮೆಯಾಗುವುದಿಲ್ಲ. ಭಾರತಭಾಗ್ಯವಿಧಾತರು ಆಡುವ ಮಾತುಗಳು ನಮಗೂ ಅರ್ಥವಾಗುತ್ತವೆ. ಅಷ್ಟೆ. ರಾಜಕೀಯದಲ್ಲಿ ಮಂದಗಾಮಿ, ಲಿಬರಲ್ ಖಂಜೂಷಬಹದ್ದೂರ್ (Conservative) ತೀವ್ರಗಾಮಿ (Extremist) ಇರುವಂತೆ ಸಾಹಿತ್ಯದಲ್ಲೂ ಇದ್ದಾರೆನ್ನಲು ಅಡ್ಡಿ ಇಲ್ಲ ಇಂದಿನ ಹಿಂದುಸ್ಥಾನದಲ್ಲಿ ಹಿಂದೂಸ್ಥಾನಿ ಬೇಡವೆನ್ನುವವರನ್ನು, ಕಲಿಯದೆ ಇರುವ ನನ್ನಂಥವರನ್ನು, ಕನ್‌ಸರ್‌ವೆಟಿವ್ ಎನ್ನಲು ಅಡ್ಡಿ ಇಲ್ಲ.

## ಗಾಂಧಿಯವರ ಔದಾರ್ಯ

ಗಾಂಧಿಯವರ ಭಾಷಣ ಮುಗಿದಮೇಲೆ ಪ್ರಕಾಶಂರವರು ಎದ್ದು "ಗಾಂಧಿಜಿ, ನನಗೆ ಸರಿಯಾಗಿ ಅರ್ಥವಾಗಿಲ್ಲ. ಸ್ವಲ್ಪ ಇಂಗ್ಲಿಷಿನಲ್ಲಿ ಹೇಳಿ" ಎಂದರು. ಅಧ್ಯಕ್ಷರು "ಯಾರೂ ಕಾಂಗ್ರೆಸ್ಸಿನಲ್ಲಿ ಇಂಗ್ಲಿಷಿನಲ್ಲಿ ಮಾತನಾಡಕೂಡದೆಂದು ನಿಯಮವಿದೆ" ಎಂದರು. ಗಾಂಧಿಯವರು "ಪ್ರಕಾಶಂ ನನ್ನಂತೆ ಮುದುಕರು. ಅವರು ಕಷ್ಟಪಟ್ಟು ಹಿಂದಿ ಕಲಿಯುತ್ತಿದ್ದಾರೆ ಎಂದು ನನಗೆ ಗೊತ್ತು. ನನ್ನ ಭಾಷಣವನ್ನು ಅನುಸರಿ

ಸಲು ಅವರು ಸಾಹಸಪಡುತ್ತಿದ್ದುದನ್ನು ನೋಡಿದೆ. ಇವತ್ತು ಖಂಡಿತ ಇಂಗ್ಲಿಷಿನಲ್ಲಿ ಮಾತನಾಡುವುದೇ ಇಲ್ಲವೆಂದು ನಾನು ತೀರ್ಮಾನಿಸಿದ್ದೆ. ಆದರೆ ಪ್ರಕಾಶಂರವರಿಗಾಗಿ ಆಡುತ್ತೇನೆ'' ಎಂದು ಹೇಳಿ " ಈ ಠರಾವು ಕಾಂಗ್ರೆಸಿನ ಮನಸ್ಸನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಇದು ಒಂದು ತರಹ ಕಿಚಡಿ, ಇದರಲ್ಲಿ ರಾಜಾಜಿ ಒಂದು ಮೆಣಸಿನಕಾಯನ್ನೂ ಹಾಕಿದ್ದಾರೆ. ಸದ್ಯಕ್ಕೆ ಸತ್ಯಾಗ್ರಹದ ಮಾತು ಬಿಡಿ. ರಚನಾತ್ಮಕ ಕಾರ್ಯಗಳೇ ಮುಖ್ಯವಾದವು ಸುಮ್ಮನೆ ಜೈಲಿಗೆ ಹೋದರೇನೆ ಹೆಚ್ಚು ಎಂದುಕೊಳ್ಳಬೇಡಿ. ಹಿಂದೂದೇಶವೇ ದೊಡ್ಡ ಜೈಲು. ರಚನಾತ್ಮಕ ಕಾರ್ಯದಲ್ಲಿ ತೊಡಗುವವರೆಲ್ಲರೂ, ಭಲ್ಲುಭಾಯಿ ದೇಸಾಯಿ ಕೌನ್ಸಿಲ್ಲಿನಲ್ಲಿ ಮಾಡುವಷ್ಟು ಕೆಲಸ ಮಾಡುತ್ತಾರೆಂದು ನನ್ನ ಅಭಿಪ್ರಾಯ. ರಚನಾತ್ಮಕವಾದ ಎಲ್ಲಾ ಕೆಲಸಗಳನ್ನೂ ಮಾಡಿ ಗ್ರಾಮ ಕೈಗಾರಿಕೆಗಳನ್ನೆಲ್ಲಾ ಅಭಿವೃದ್ಧಿಪಡಿಸಿ. ಇನ್ನು ೬ ತಿಂಗಳಿನಲ್ಲಿ ಹಿಂದೂದೇಶದ ಸ್ಥಿತಿ ಬದಲಾಗುವುದು ಖಂಡಿತ, ಹೇಳುತ್ತೇನೆ" ಎಂದರು.

ಅನಂತರ ಜವಹರ್‌ಲಾಲ್ ನೆಹ್ರು ಅವರು ವರ್ಕಿಂಗ್ ಕಮಿಟಿಯ ಠರಾವನ್ನು ಮುಂದೆ ಇಟ್ಟರು. ಆ ಸಂದರ್ಭದಲ್ಲಿ ಅವರು ಗಾಂಧಿಯವರನ್ನು ಕುರಿತು ಹೇಳಿದ ಮಾತುಗಳು ಗಮನಾರ್ಹವಾದವು. " ಗಾಂಧಿಯವರು ತಾವು ಬರಿಯ ಭಾವನಾ ಊಹನಾಪ್ರಪಂಚದಲ್ಲಿ ಇದ್ದೇವೆಂದೂ ತಮಗೆ ವ್ಯಾವಹಾರಿಕಜ್ಞಾನ ಅಷ್ಟೇನೂ ಇಲ್ಲವೆಂದೂ, ತಾವು ತಪ್ಪು ಮಾಡಿದ್ದರೂ ಮಾಡಿರಬಹುದೆಂದೂ ಹೇಳಿದರು ಆದರೆ ನನ್ನ ಮಾತನ್ನು ಕೇಳಿ ನನಗೆ ೨೫ ವರುಷಗಳಿಂದ ಗಾಂಧಿಯವರ ಕೈ ಕೆಳಗೆ ಕೆಲಸ ಮಾಡುವ ಭಾಗ್ಯ ದೊರೆತಿದೆ. ಅವರ ವ್ಯಾವಹಾರಿಕ ಜ್ಞಾನ ಅದ್ಭುತವಾದದ್ದು. ಅವರು ಬರಿಯ ಕಲ್ಪನಾ ವಾದಿ ಮಾತ್ರವೇ ಅಲ್ಲ. ಹಾಗೆ ನೋಡಿದರೆ ನಾನೇ ಕಲ್ಪನಾವಾದಿ, ಹೂ ನಾನೇ ಕಲ್ಪನಾವಾದಿ (ನಗು). ಭಾರತದ ಹೃದಯವನ್ನು ಗಾಂಧಿಯವರಂತೆ ಬಲ್ಲವರು ಯಾರೂ ಇಲ್ಲ. ಅವರ ನೇತೃತ್ವವುಳ್ಳ ನಾವೇ ಪುಣ್ಯಶಾಲಿಗಳು." ಜವಾಹರ್‌ಲಾಲ್ ನೆಹ್ರು ಒಂದು ಗಂಟೆಕಾಲ ಅದ್ಭುತವಾದ ಹಿಂದುಸ್ತಾನಿಯಲ್ಲಿ ಮಾತನಾಡಿ ಠರಾವನ್ನು ಸಭೆಯ ಅನುಮೋದನೆಗಾಗಿ

ಇಟ್ಟರು. ರಾಜಗೋಪಾಲಚಾರಿಯವರು ಅದನ್ನು ಅನುಮೋದಿಸಿ, ಸಂಬಂಧಪಟ್ಟ ಭಾಷಣವನ್ನು ಮರುದಿವಸ ಮಾಡುವುದಾಗಿ ಹೇಳಿದರು. ಅಲ್ಲಿಗೆ ರಾತ್ರಿ ೭-೧೫ ಗಂಟೆಗೆ ಅಖಿಲಭಾರತ ಕಾಂಗ್ರೆಸ್ ಸಮಿತಿಯ ಮೊದಲನೆಯ ದಿವಸದ ಕಾರ್ಯಕ್ರಮಗಳು ಮುಕ್ತಾಯವಾದವು.

## ಊಟದ ಮನೆಯಲ್ಲಿ

ರಾತ್ರಿ ೮-೩೦ ಗಂಟೆಗೆ ಊಟಕ್ಕೆ ಹೋದೆವು. ಊಟದ ಚಪ್ಪರದಲ್ಲಿ ಒಂದೊಂದು ಸಲಕ್ಕೆ ೫೦೦ ಎಲೆಗಳನ್ನು ಹಾಕುತ್ತಿದ್ದರು ಸ್ವಲ್ಪ ಅನ್ನ, ಚಪಾತಿ, ತರಕಾರಿ ಇವೇ ಆಹಾರ.' ಮಜ್ಜಿಗೆ ಅನ್ನ, ಮಜ್ಜಿಗೆ ಇಲ್ಲ. ಚಪಾತಿ ಆದನಂತರ ನಾವು ಏಳದಿದ್ದರೆ ಮತ್ತೆ ಮತ್ತೆ ಚಪಾತಿಯನ್ನೇ ತರುತ್ತಿರುತ್ತಾರೆ. ಅದು ಗೊತ್ತಿಲ್ಲದೆ ಇರುವವರು 'ಚಪಾತಿ ಬೇಡ' ಎಂದು ಹೇಳಿ ಮತ್ತೆ ಎಲೆಯ ಮುಂದೆಯೇ ಕುಳಿತಿರುತ್ತಾರೆ. ಎಲ್ಲರೂ ಎದ್ದು ಹೋದನಂತರ ಅವರಿಗೂ ಗೊತ್ತಾಗಿ ಎದ್ದು ಹೋಗುತ್ತಾರೆ. ಅನ್ನಾವತಾರವನ್ನು ಪ್ರತ್ಯಕ್ಷಮಾಡಿಕೊಂಡು ಬೆಕ್ಕು ಹಾರಲಾರದ, ಕೆಲವು ವೇಳೆ ಮೇಕೆ ಸಹ ಹಾರಲಾರದ ರಾಶಿಗಳಲ್ಲಿ ಪುಂಡರೀಕಾಕ್ಷ (ನಮ್ಮ ಕಡೆ ಅನ್ನಕ್ಕೆ ವಿನೋದವಾಗಿ ಹೇಳುವ ಹೆಸರು)ವನ್ನು ಸೇದುವ ನಮಗೆ, ಆ ಊಟ ಬಹಳ ಕಿರುಕಳ ಕೊಡುತ್ತೆ. ಸಾಲಾಗಿ ಕುಳಿತಿರುವಾಗ ನನ್ನ ಹಿಂದೆ ಯಾರೋ "ಆಪ್ ಕಾ Favours ಎಂಬುವಾಗ Favours ಎಂಬುದಕ್ಕೆ ನೀವು ಹಿಂದಿಯಲ್ಲಿ ಏನು ಹೇಳುತ್ತೀರಿ?" ಎಂದು ಕೇಳಿದರು. ತಿರುಗಿ ನೋಡುತ್ತೇನೆ, ರಾಜಾಜಿ ಊಟಕ್ಕೆ ಕುಳಿತಿದ್ದಾರೆ! ಆಗ ಮಗ್ಗುಲಲ್ಲಿ ಒಬ್ಬರು. "Favours ಎಂಬುದಕ್ಕೆ ಮೆಹರ್ಬಾನಿ ಎನ್ನಬಹುದು" ಎಂದು ರಾಜಾಜಿಗೆ ಹೇಳಿದರು. ಮತ್ತೊಬ್ಬರು 'ಪಟ್ಟಾಭಿಯನ್ನು ಕೇಳಿ' ಎಂದರು. ಪಟ್ಟಾಭಿಯದು ಬಹು ತೀಕ್ಷ್ಣಬುದ್ಧಿ, ವಿನೋದಸ್ವಭಾವ. ಅವರು ಏನು ಹೇಳಿದರೂ ಅದರಲ್ಲಿ ಹಾಸ್ಯ ಇಟ್ಟೇ ಇರುತ್ತಾರೆ ರಾಜಾಜಿ "ಪಟ್ಟಾಭಿ ಸರಿಯಾದ ಪದವನ್ನೇ ಹೇಳುತ್ತಾರೆ. ಆದರೆ ಅದಕ್ಕೆ ಒಂದೊಂದು ಕಡೆ ಒಂದೊಂದು ಅರ್ಥವಾಗುತ್ತದೆ." ಎಂದರು. ವಾರ್ಧಾದಲ್ಲಿ ಅಡಿಗೆ ಥೇಟ್ ಮಹಾರಾಷ್ಟ್ರ ಸಂಪ್ರದಾಯ; ಯಾವುದಕ್ಕೂ ಬೆಲ್ಲ ಹೆಚ್ಚು. ಪಟ್ಟಾಭಿ ಆಂಧ್ರರು.

ಅವರಿಗೆ ಖಾರ ಗುರು; ಪಟ್ಟಾಭಿಯವರು, ರಾಜಾಜಿಗೆ "ಎಲ್ಲಿ ಇವರು ಎಲ್ಲಾದಕ್ಕೂ ಬೆಲ್ಲ ಹಾಕಿಬಿಡುತ್ತಾರೋ ಎಂದು ನಾನು ನಡುಗುತ್ತೇನೆ (terribly afraid)" ಎಂದರು. ದೇಶದ ನಾಯಕರು, ತಾವು ಬೇರೆ ಒಂದು ಸಾಲಿನಲ್ಲಿ ಆಗಲಿ ಅಥವಾ ಗುಟ್ಟಾಗಿ ತಮ್ಮ ಬಿಡಾರದಲ್ಲೇ ಆಗಲಿ ಊಟ ಮಾಡುವುದಿಲ್ಲ. ಸ್ಪೆಷಲ್ ಆಹಾರವನ್ನೂ ತೆಗೆದು ಕೊಳ್ಳುವುದಿಲ್ಲ. ಅವರು ಎಲ್ಲರಂತೆ ಭೋಜನಗೃಹಕ್ಕೆ ಬಂದು ಎಲ್ಲರ ಮಧ್ಯೆ ಯಾವ ಸ್ಥಳದಲ್ಲಿ ಎಲೆ ಖಾಲಿ ಬಿದ್ದಿದ್ದರೆ ಅಲ್ಲಿ ಕುಳಿತುಕೊಳ್ಳು ತ್ತಾರೆ. ಜವಹರ್‌ಲಾಲ್ ನೆಹ್ರು, ರಾಜೇಂದ್ರ ಬಾಬು, ಅಬ್ದುಲ್ಲ ಗಫಾರ್‌ಖಾನ್, ಶಂಕರ್‌ರಾವ್ ದೇವ್, ಗೋವಿಂದವಲ್ಲಭ ಪಂತ್ ಸರೋಜಿನಿ ನಾಯಿಡು ಎಲ್ಲರೂ ಒಬ್ಬರಾದ ಮೇಲೆ ಒಬ್ಬರು ಬಂದು ಕುಳಿತುಕೊಂಡು ಊಟವನ್ನು ಪ್ರಾರಂಭಿಸಿದರು. ಪ್ರಿಯದರ್ಶಿ, ಇಂದಿರಾ ನೆಹ್ರು ಜವಹರ್‌ಲಾಲರ ಜತೆಯಲ್ಲಿ ಕುಳಿತಿದ್ದಳು. ಎಲ್ಲರಿ ಗಿಂತ ಮುಂಚೆ ರಾಜಾಜಿಯವರು ಊಟವನ್ನು ಮುಗಿಸಿ, ಕಡ್ಡಿಯಲ್ಲಿ ಹಲ್ಲನ್ನು ಉಜ್ಜುತ್ತಾ ಕುಳಿತುಕೊಳ್ಳುತ್ತಿದ್ದರು. ಹೀಗೆ ಪ್ರಜೆಗಳ ನಿಜ ವಾದ ಮುಖಂಡರ ಸಾಮೀಪ್ಯದಿಂದ ಭೋಜನಗೃಹವು ಕಾಂತಿಯುಕ್ತ ವಾಗುತ್ತಿದ್ದಿತು. ಹೊಸದಾಗಿ ಕಾಂಗ್ರೆಸ್ ನೋಡಲು ಬಂದವ ರಿಗೂ, ಯುವಕರಿಗೂ ಅವರನ್ನು ಎಷ್ಟು ನೋಡಿದರೂ ತೃಪ್ತಿಯೇ ಆಗ ತ್ತಿರಲಿಲ್ಲ. ಯಾವಾಗಲೂ ಜನರ ಮಧ್ಯೆ ಇದ್ದರೂ ಬೆಂಕಿಯಂತೆ ತಮ್ಮ ತೇಜಸ್ಸಿನಿಂದ ಹೆಚ್ಚು ಹೆಚ್ಚು, ಮೇಲುಮಟ್ಟವನ್ನು ಏರುತ್ತಾ ಜನರ ಆದರ್ಶವೆಲ್ಲ ತಮ್ಮಲ್ಲಿ ಮೂರ್ತಿಮತ್ತಾಗಿ ಇರುವಂತೆ ನಡೆದುಕೊಳ್ಳುವ ಅವರ ಮಾರ್ಗ ಕೇವಲ ಧೀರರಾದ ತ್ಯಾಗಿಗಳ ಮಾರ್ಗ. ರಾಜಾಜಿ ಯನ್ನೂ ಶಂಕರರಾವ್ ದೇವರನ್ನೂ ನೋಡಿದರೆ ಇದೇನು ಸಾಧಾರಣ ಮನುಷ್ಯ' ಎನ್ನುವಂತೆ ತೋರುವುದು. ಆದರೆ ಅವರ ಹತ್ತಿರ ಮಾತ ನಾಡುವುದಕ್ಕೆ ಪ್ರಾರಂಭಿಸಿದರೆ, ಒಂದು ದಿನ ಅವರನ್ನು ಅನುಸರಿಸಿದರೆ "ಈ ಜೀವ ಮಹತ್ತಾದುದು; ನಮ್ಮ ದೇಶದ ಜನರ ಕಷ್ಟವನ್ನು ಕಂಡು ಇದು ಪಡುವ ಸಂಕಟ ಮೇರೆ ಇಲ್ಲದುದು. ಇದನ್ನು ನೋಡವ

ಭಾಗ್ಯ ನಮಗೆ ಉಂಟಾದುದರಿಂದ ನಾವೇ ಪುಣ್ಯಶಾಲಿಗಳು ಎಂಬ ನಂಬಿಕೆ ನಮಗೆ ದೃಢವಾಗುತ್ತದೆ. ಎಲ್ಲರಿಗೂ ಊಟ ಆರಂಭವಾದ ಮೇಲೆ ಭುಲಾಬಾಯಿ ದೇಸಾಯಿಯವರು ಹಿಂದುಗಡೆಗೆ ಕೈಕಟ್ಟಿ ಕೊಂಡು ನಿಧಾನವಾಗಿ ಬಂದರು. ಸ್ವಯಂಸೇವಕಿಯೊಬ್ಬಳು (ವಾರ್ಧಾ ದಲ್ಲಿ ಈಸಲದ ಕಾಂಗ್ರೆಸ' ಕಮಿಟಿಯ ಭೋಜನದ ಏರ್ಪಾಡು ಬಡಿಸು ವುದು ಎಲ್ಲಾ ಸ್ವಯಂಸೇವಕಿಯರದೆ) ಅವರಿಗೆ ಏನೋ ಉಪಚಾರದ ಮಾತುಗಳನ್ನು ಹೇಳಿದಳು. ಭುಲಾಬಾಯಿ "ನಾನು ನನ್ನ ಒಂಟಿ ಯಾದ ವೈಭವಕ್ಕೇ ಹೋಗುತ್ತೇನೆ. I will go to my solitary glory" ಎಂದು ಹೇಳಿ ಒಂದು ಮೇಜದ ಮುಂದೆ ಕಾಲುಮಣೆ ಹಾಕಿ ಕೊಂಡು ಕುಳಿತರು. ಭುಲಾಭಾಯಿಯವರಿಗೆ ನೆಲದಮೇಲೆ ಊಟಕ್ಕೆ ಕುಳಿತು ಅಭ್ಯಾಸವಿಲ್ಲ. ಅವರು ಹಿಂದಲಕಾಲದಲ್ಲಿ ಹುಟ್ಟಿದ್ದರೆ ನವಾ ಬರೋ ಪಾಳೆಯಗಾರರೋ ಆಗಿರುತ್ತಿದ್ದುದರಲ್ಲಿ ಸಂದೇಹವಿಲ್ಲ. ಅವರು ಹಿಂದೆ ಬೆಂಗಳೂರಿಗೆ ಬಂದು ವೆಸ್ಟ್ ಎಂಡ್ ಹೊಟೇಲಿನಲ್ಲಿ ಇಳಿದು ಕೊಂಡಾಗ, ಅವರ ಉಡುಪಿನ ಪೆಟ್ಟಿಗೆಗಳು ನೂರಾರು ಬೆಂಗಳೂರು ರೈಲ್ವೆ ಸ್ಟೇಷನ್ನಿನಲ್ಲಿ ಬಂದು ಬಿದ್ದಿದ್ದುದು, ಅವರ ಪ್ರಯಾಣದ ವ್ಯವ ಸ್ಥಾಪಕರಾಗಿದ್ದ ಶ್ರೀಮಾನ್ ಕೆ. ಸಂಪದ್ಗಿರಿರಾವ್ ಅವರಿಗೆ ಜ್ಞಾಪಕ ವಿರಬಹುದು. ಇಂತಹ ಪಾಳೆಯಗಾರ, ಗಾಂಧಿಯವರ ಮಂತ್ರಕ್ಕೆ ಮುಗ್ಧನಾಗಿ, ತನ್ನ ಸುಖಲೋಲುಪತೆಯನ್ನು ತೊರೆದು ಯಾವ ಸ್ಪೆಷಲ್ ಆಹಾರವನ್ನೂ ಬಯಸದೆ ಎಲ್ಲರಂತೆ ಎಲ್ಲರ ನಡುವೆ ಬಂದು ಊಟಕ್ಕೆ ಕುಳಿತುದೇ, ಕಾಂಗ್ರೆಸ್ಸಿನಲ್ಲಿ ಬಡವರ ಸೇವಕರಿಗೆ ಮಾತ್ರ ಸ್ಥಳವಿದೆಯೆಂಬುದನ್ನು ಸ್ಥಿರಪಡಿಸುತ್ತದೆ.

ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಎರಡನೆಯ ದಿವಸದ ಕಾರ್ಯಕ್ರಮಗಳು ಬಹಳ ಜೋರಿನಿಂದಲೇ ಪ್ರಾರಂಭವಾದುವು. ಮೊದಲ ದಿವಸ ರಾತ್ರಿ ಸ್ವಲ್ಪ ಮಳೆ ಬಂದಿತು. ಬರಿಯ ಬಿದಿರಿನ ನಗರವಾದ ಅಭಯಂಕರ್ ನಗರದಲ್ಲಿ ಸೋರಲು ಪ್ರಾರಂಭಿಸಿತು. ಬಿಡಾರಗಳಲ್ಲಿ ಇಳಿದುಕೊಂಡಿದ್ದವರು ಗಾಬರಿಯಿಂದ ಆಚೆ ಈಚೆ ಓಡಲು ಪ್ರಾರಂಭಿಸಿ ದರು. ಪಂಡಿತ ಜವಹರ್‌ಲಾಲರು, ಬಜಾಜರ ಅಥಿತಿಗೃಹದಲ್ಲಿ ಇಳಿದು

ಕೊಂಡಿದ್ದವರು, ಒಂದು ಶಾಲನ್ನು ಹೊದೆದುಕೊಂಡು, ಕೈಯಲ್ಲಿ ಒಂದು ಟಾರ್ಚನ್ನು ಹಿಡಿದುಕೊಂಡು ನಮ್ಮ ಕ್ಯಾಂಪ್‌ಗೆ ಬಂದರು. ಕಮಲಾ ದೇವಿ ಚಟ್ಟೋಪಾಧ್ಯಾಯ ಮತ್ತು ಮೆಹತಾ (ಸಮತಾವಾದಿ) ಅವರೂ ಎದುರಿಗೆ ಬಂದರು; ಮೆಹತಾ, ನೆಹ್ರುರವರೊಂಗೆ "ಇಷ್ಟುಹೊತ್ತಿನಲ್ಲಿ ಈ ಮಳೆಯಲ್ಲಿ ನೆಹ್ರು ಇಲ್ಲಿ ಏನುಮಾಡುತ್ತಿದ್ದಾರೆ? ಎಂದು ಕಮಲಾ ದೇವಿ ಕೇಳಿದಳು. "ಅಲೆಯುತ್ತಿದ್ದಾರೆ ಎಂದು ನಾನು ಹೇಳಿದೆ" ಎಂದರು. ಜವಾಹಿರಲಾಲ್ ನೆಹ್ರುರವರು "ಹೌದು. ಈ ಶಾಲುವನ್ನು ಸಾಲವಾಗಿ ತೆಗೆದುಕೊಂಡು ಬಂದೆ" ಎಂದರು. ಅವರು ನೇರವಾಗಿ ಯು ಪಿ ಕ್ಯಾಂಪಿಗೆ ಹೋಗಿ ಕುಳಿತರು. ಮೇಲೆ ಮಳೆ ಬೀಳುತ್ತಲೇ ಇದ್ದಿತು. ನೆಹ್ರುರವರು ½ ಗಂಟೆಗಳಕಾಲ ನೆರೆದಿದ್ದವರೊಂದಿಗೆ ವಿನೋದ ವಾಗಿ ಮಾತನಾಡುತ್ತಿದ್ದರು. ನಮಗೆಲ್ಲಾ ಮಳೆಯ ಜ್ಞಾನ ಮರೆಯಿತು. ಮಳೆ ಯಾವಾಗ ನಿಂತಿತೋ ಗೊತ್ತೇ ಆಗಲಿಲ್ಲ. ಅನಂತರ ನಾವು ನಮ್ಮ ನಮ್ಮ ಗುಡಿಸಿಲುಗಳಿಗೆ ಹೋಗಿ ಮಲಗಿದೆವು. ಮರುದಿವಸ ಸಭಾಭವ ನಕ್ಕೆ ಕಾಂಗ್ರೆಸ್ ಕಮಿಟಿ ಮೀಟಿಂಗಿಗೆ ಹೋದಾಗ ನೆಲದ ಮೇಲೆ ಹಾಸಿದ್ದ ಗೋಣಿ ಚೀಲಗಳು ನೆನೆದಿದ್ದವು. ಆದರೆ ಆವತ್ತಿನ ಚರ್ಚೆ ಯಿಂದ ಹೊರಡುವ ಕಾವಿನಿಂದ ಅವು ಬಹು ಬೇಗ ಒಣಗುವದೆಂಬುದ ರಲ್ಲಿ ನಮಗೆ ಅನುಮಾನವಿರಲಿಲ್ಲ.

ಒಬ್ಬರಾದ ಮೇಲೆ ಒಬ್ಬರಂತೆ, ಒಬ್ಬರಾದಮೇಲೆ ಒಬ್ಬರಂತೆ, ಅನೇಕರು ಭಾಷಣಮಾಡಿ, ಯಾವ ರೀತಿಯಲ್ಲೂ ಬ್ರಿಟಿಷ್ ಸರ್ಕಾರದ ಯುದ್ಧದ ಉದ್ಯಮಕ್ಕೆ ಬೆಂಬಲವನ್ನು ಕೊಡಬಾರದೆಂದು ವಾದಿಸಿದರು. ಬರ್ದೋಲಿ ನಿರ್ಣಯವನ್ನು ಪ್ರತಿಭಟಿಸಿದರು. ಆದರೆ ನಿರ್ಣಯವು ಸರ್ವಾನುಮತದಿಂದ ಅಂಗೀಕೃತವಾಗುವುದರಲ್ಲಿ ಯಾರಿಗೂ ಸಂದೇಹ ವಿರಲಿಲ್ಲ. ಎಲ್ಲ ತಿದ್ದುಪಡಿಗಳಮೇಲೂ ಭಾಷಣಗಳಾದಮೇಲೆ ರಾಜಾ ಜಿಯವರು, ಎದ್ದು ತಮ್ಮ ಭಾಷಣ ಮಾಡಿದರು. ಅನಂತರ ಪಂಡಿತ ನೆಹ್ರು, ರಾಜೇಂದ್ರ ಬಾಬು ಇವರು ಭಾಷಣ ಮಾಡಿದರು. ಆಕ್ರಮಣಕ್ಕೆ ಒಳಗಾದ ರಾಷ್ಟ್ರಗಳು, ಬ್ರಿಟಿಷರ ಆಕ್ರಮಣಕ್ಕೆ ಒಳಗಾದರೂ ಸರಿಯೆ (ಇರಾಣ್ ಸಿರಿಯಾಗಳಂತೆ) ಜರ್ಮನರ ಆಕ್ರಮಣಕ್ಕೆ ಒಳಗಾದರೂ

ಸರಿಯೆ (ಫ್ರಾನ್ಸ್, ಬೆಲ್‌ಜಿಯುಮ್‌ಗಳಂತೆ) ಅವುಗಳಿಗೆ ಕಾಂಗ್ರೆಸ್ಸು ಸಹಾನುಭೂತಿ ತೋರಿಸಬೇಕೆಂಬ ಒಂದು ತಿದ್ದುಪಡಿಯೊಂದಿಗೆ ಬರ್ದೋಲಿ ನಿರ್ಣಯು ಅಂಗೀಕೃತವಾಯಿತು.

## ಗಾಂಧಿಯವರ ಮಾರ್ಗ.

೨ನೆಯ ದಿವಸದ ಸಾಯಂಕಾಲದ ಹೊತ್ತಿಗೆ, ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಕಾರ್ಯಕ್ರಮಗಳು ಮುಕ್ತಾಯವಾದುವು. ಆಮೇಲೆ ಹಸ್ತಾಕ್ಷರಗಳನ್ನು ಬೇಟೆಯಾಡುವವರ ಸಂಖ್ಯೆ ಪ್ರಾರಂಭವಾಯಿತು. ಗಫಾರ್ ಖಾನರು ಒಬ್ಬರಿಗೆ 'ಪ್ರೇಮವೇ ಧರ್ಮ ಧರ್ಮವೇ ಪ್ರೇಮ' ಎಂದು ಬರೆದು ಕೆಳಗೆ ಹಸ್ತಾಕ್ಷರವನ್ನು ಹಾಕಿದರು. ರಾಜಾಜಿಯವರು 'ನಿನ್ನ ಕರ್ತವ್ಯವನ್ನು ನೀನು ಮಾಡು' ಎಂದು ಬರೆದರು. ಒಬ್ಬ ಉತ್ಸಾಹಿ ಸ್ವಯಂಸೇವಕ ತಿಳಿಯದೆ ನನ್ನ ಹತ್ತಿರವೂ ಬಂದು ಹಸ್ತಾಕ್ಷರವನ್ನು ಬೇಡಿದ. ನನಗೆ ನಗು ಬಂತು. "ಪುಸ್ತಕ ಯಾಕೆ ಹಾಳು ಮಾಡುತ್ತೀಯ? ನಾನು ಯಾರೋ ಮಹನೀಯನೆಂದು ನೀನು ತಿಳಿದುಕೊಂಡಿರುವೆ. ರುಜು ಹಾಕಿದ ಮೇಲೆ ನನ್ನ ಹೆಸರನ್ನು ಯಾರೂ ಕೇಳಿಲ್ಲವೆಂಬುದು ನಿನಗೆ ಗೊತ್ತಾಗುತ್ತೆ" ಎಂದೆ.

ನಾನೂ ನನ್ನ ಒಬ್ಬ ಬೆಂಗಳೂರಿನ ಸ್ನೇಹಿತರೂ, ವಾರ್ಧಾದಿಂದ ಒಂದು ಟಾಂಗಾದಲ್ಲಿ ಸೇವಾಗ್ರಾಮಕ್ಕೆ ಹೋಗಿದ್ದೆವು. ನಾವು ಅಲ್ಲಿ ನೋಡುತ್ತಿರುವಾಗ ಟಾಂಗಾದವನು, ಎರಡು ಬಾಡಿಗೆ ಗಿಟ್ಟಿಸುವ ಆಸೆಯಿಂದ ಇನ್ನಿಬ್ಬರು ಪ್ರಯಾಣಿಕರನ್ನು, ಹಿಂದಕ್ಕೆ ವಾರ್ಧಾ ಕಡೆಗೆ ಗೊತ್ತುಮಾಡಿಕೊಂಡಿದ್ದನು. ಅವರಲ್ಲಿ ಒಬ್ಬರು ಮಶ್ರುವಾಲ, ಗಾಂಧೀ ಸೇವಾ ಸಂಘದ ಅಧ್ಯಕ್ಷರು. ನಮ್ಮನ್ನು ನೋಡಿ ಮಶ್ರುವಾಲಾ "ನಾವು ನಿಮ್ಮ ಟಾಂಗಾ ತೆಗೆದುಕೊಂಡಿದ್ದೇವೆ" ಎಂದರು. ದಾರಿಯಲ್ಲಿ ಟಾಂಗಾ, ಹಿಂದೀ ಪ್ರಚಾರ ಸಂಸ್ಥೆಯ ಎದುರಿಗೆ ಒಂದುಗಳಿಗೆ ನಿಂತಿತು. ಆಗ ಒಬ್ಬ ಹಸ್ತಾಕ್ಷರದ ಕಿರಾತರು ಅಲ್ಲಿ ಬಂದು ಮಶ್ರುವಾಲಾರವರನ್ನು ಮುತ್ತಿದರು. ಅವರು "ನಿಮಗೆ ಯಾಕೆ ಶ್ರಮ. ನಾನು ಗಾಂಧಿಯಲ್ಲ" ಎಂದರು. ವಾರ್ಧಾದಲ್ಲಿ ಕೆಳಕ್ಕೆ ಇಳಿದಾಗ ನಾವು ಟಾಂಗಾದವನೊಂದಿಗೆ "ನಿನಗೆ ಬಾಡಿಗೆ ಸ್ವಲ್ಪ ಕಡಿಮೆ ಕೊಡುತ್ತೇವೆ. ನೀನು ಅವರನ್ನು ಕೂರಿಸಿದೆ"

ಎಂದೆವು. ಮುಶ್ರುವಾಲಾ ನಮ್ಮಷ್ಟೆ ಬಾಡಿಗೆ ಕೊಟ್ಟು, "ನೀವು ಈ ಗಾಡಿಯಲ್ಲಿ ಕುಳಿತಾಗ ಇಲ್ಲಿಗೆ ಹಿಂದಕ್ಕೆ ಬರುವುದು ನಿಮ್ಮ ಉದ್ದೇಶವಾಗಿತ್ತು, ಬಂದದ್ದಾಯಿತು. ಟಾಂಗಾದವನಿಗೆ ೪ ಕಾಸು ಹೆಚ್ಚಾಗಿ ಬಂದರೆ ನಿಮಗೆ ಸಂತೋಷವೇ ಅಲ್ಲವೆ?" ಎಂದರು. ಯಾವುದು ಹೇಗಾದರೂ ಆಗಲಿ. ತಮ್ಮ ಕೆಲಸ ತಾವು ಮಾಡಿಕೊಂಡು ಹೋಗುವುದೇ ಗಾಂಧಿ ಅನುಯಾಯಿಗಳ ತತ್ವ.

## ಸ್ವಯಂಸೇವಕರ ಸಿಸ್ತು.

ಜನವರಿ ೧೬ ನೇ ತಾರೀಖು ಸಾಯಂಕಾಲ ೨ನೇ ದಿವಸದ ಕಾರ್ಯಕಲಾಪಗಳೊಂದಿಗೆ, ರಚನಾತ್ಮಕ ಕಾರ್ಯಕ್ರಮದ ಠರಾವಿನೊಂದಿಗೆ, ರಾಜೇಂದ್ರಬಾಬು, ಗೋವಿಂದ ವಲ್ಲಭಪಂತ್ (ಇವರಿಗೆ 'ತ್ರಿಪುರಿಧೀರ' ಎಂದು ಹೆಸರು. ತ್ರಿಪುರಿಯಲ್ಲಿ ಇವರು ಬೋಸರವರನ್ನು ತಲೆ ಕೆಳಕು ಮಾಡಿದರು. ಇವರು ಶಾಂತವಾಗಿ ಸ್ವಲ್ಪವೂ ಗಾಬರಿಯಿಲ್ಲದೆ ೪-೫ ಗಂಟೆಗಳ ಕಾಲ ಬೇಕಾದರೂ ಒಂದೇ ಸಮನಾಗಿ ಭಾಷಣ ಮಾಡಬಲ್ಲರು.) ಭಾಷಣ ಮಾಡಿದನಂತರ ಮುಕ್ತಾಯವಾಯಿತು. ಮರುದಿವಸ ಮಧ್ಯಾಹ್ನ ೩ ಗಂಟೆಗೆ, ಗಾಂಧಿಯವರು ರಚನಾತ್ಮಕ ಕಾರ್ಯಕ್ರಮವನ್ನು ಕುರಿತು ಪ್ರತಿಪ್ರಾಂತದ ಮೂರು ಮೂರು ಪ್ರತಿನಿಧಿಗಳಿಗೆ ಒಂದು ಭಾಷಣ ಕೊಡುವುದಾಗಿ ಹೇಳಿದ್ದರು. ಅಲ್ಲಿ ಪತ್ರಿಕಾಪ್ರತಿನಿಧಿಗಳಿಗೂ ಸಾರ್ವಜನಕರಿಗೂ ಅವಕಾಶವಿರಲಿಲ್ಲ. ಆದರೆ ಗಾಂಧಿಯವರ ಭಾಷಣವನ್ನು ಕೇಳಲು ಸಾರ್ವಜನಿಕರೆಲ್ಲಾ ಉತ್ಸಾಹದಿಂದ ಹೊರಗಡೆ ನಿಂತಿದ್ದರು. (ಹೊರಕ್ಕೆ ಮೈಕ್ರೋಫೋನಿನಲ್ಲಿ ಕೇಳುತ್ತದೆ) ಗಾಂಧಿಯವರ ಈ ಭಾಷಣಕ್ಕೆ ಹೋಗಲು ಕೃಪಲಾನಿಯ ಒಪ್ಪಿಗೆ ಪಡೆಯಬೇಕೆಂದು ಮೊದಲನೆ ಸಾಯಂಕಾಲ ಅವರಲ್ಲಿಗೆ ನಾನು ಹೋದೆ. ಅತಿಥಿಗೃಹದ ಮಹಡಿಯ ಮೇಲಿನ ಕೊಠಡಿಯಲ್ಲಿ ಕೃಪ್ಲಾನಿ ನೆಲದ ಮೇಲೆ ಹಾಸಿದ ಜಮಖಾನದಮೇಲೆ ಬಿದ್ದಿದ್ದರು. ಮಗ್ಗುಲಲ್ಲಿ ಬಜಾಜ್ ಕುಳಿತಿದ್ದರು. ಮಂಚದ ಮೇಲೆ ಕೃಪ್ಲಾನಿಯ ಹೆಂಡತಿ ಶ್ರೀಮತಿ ಸುಚಿತಾದೇವಿ ಕುಳಿತಿದ್ದರು. ನಾನು ಕೃಪ್ಲಾನಿಯವರೊಂದಿಗೆ "ನಿಮ್ಮ ಸ್ವಯಂಸೇವಕರು ಪಠಾನರು, ನಮ್ಮ ಕತ್ತು ಹಿಡಿದು ದಬ್ಬುತ್ತಾರೆ. ಒಂದು ಚೀಟಿ ಕೊಡಿ"

ಎಂದೆ. ಕೃಪ್ಲಾನಿಯವರು "ಚೀಟಿ ಸ್ವಾಗತಸಮಿತಿಯ ಅಧ್ಯಕ್ಷರು ಕೊಡಬೇಕು. ನಾನು ಹೇಗೆ ಕೊಡಲಿ" ಎಂದರು ನಾನು "ಹಾಗಾದರೆ ನಾನು ಹೇಗೆ ಮೀಟಿಂಗಿಗೆ ಹೋಗಲಿ?" ಎಂದೆ ಆಗ ಶ್ರೀಮತಿ ಸುಚೇತಾದೇವಿಯವರು "ಸಭಾಮಂಟಪದ ಹತ್ತಿರ ಬಂದು ಕೃಪ್ಲಾನಿಯ ಹೆಸರನ್ನು ಹೇಳಿ ಒಳಕ್ಕೆ ಹೋಗಿ" ಎಂದರು. ಬಜಾಜರು ನನ್ನ ಕಡೆ ನೋಡುತ್ತಾ "ನೋಡಿ ಅಲ್ಲಿ ಉಪಾಯ ಕುಳಿತಿದೆ" ಎಂದರು. ಕೃಪ್ಲಾನಿಯವರು ನಗುತ್ತಾ "ನನ್ನ ಹೆಸರಿನಲ್ಲಿ ನಿನಗೆ ಅಷ್ಟು ಮೋಹವಿರಬಹುದು. ಆದರೆ ಇವರು ಹೇಳುವಂತೆ, ಸ್ವಾಗತಸಮಿತಿಯ ಸ್ವಯಂಸೇವಕರ ಕಿವಿಗೆ ಅದೇನೂ ಸಂಗೀತವಲ್ಲ. ಏನೋ ಹೆಸರಿನ ಬಲವನ್ನು ಪರೀಕ್ಷಿಸಲಿ" ಎಂದರು. "ನಿಮ್ಮ ಹೆಂಡತಿಯವರಿಗೆ ಇರುವ ಕರುಣೆ ನಿಮಗೆ ಇಲ್ಲ" ಎಂದುಕೊಂಡು ನಾನು ಹೊರಕ್ಕೆ ಬಂದೆ ಗಾಂಧಿಯವರ ಭಾಷಣವೆಂದರೆ ಸ್ವಯಂಸೇವಕರಿಗೆ ಎಂದೂ ಇಲ್ಲದ ಪ್ರಾಶಸ್ತ್ಯ, ಖಡಾಖಂಡಿತ. ಭಾರಿ ಭಾರಿಯವರೆಲ್ಲಾ, ಚೀಟಿಗಳಿಲ್ಲದುದರಿಂದ ಹೊರಗೆ ನಿಲ್ಲಬೇಕಾಯಿತು. ನಾನು ಬಾಗಿಲಿಗೆ ಹೋಗಿ "ಕೃಪ್ಲಾನಿಯವರು ಒಳಕ್ಕೆ ಹೋಗಬಹುದೆಂದು ಹೇಳಿದ್ದಾರೆ" ಎಂದೆ. ಈ ಸರ್ಕಸ್ ಆ ಸ್ವಯಂಸೇವಕನಿಗೆ ಹೆಚ್ಚಾಗಿ ಪರಿಚಯವಾಗಿದ್ದಿತೆಂದು ಕಾಣುತ್ತದೆ ಅವನು "ನಿಮಗೊಬ್ಬರಿಗೇ ಯಾಕೆ. ಇಲ್ಲಿರುವವರಿಗೆಲ್ಲಾ (ನೆರದಿದ್ದವರನ್ನು ತೋರಿಸಿ) ಅವರು ಹಾಗೆ ಹೇಳಿದ್ದಾರೆ" ಎಂದನು. ಅಷ್ಟು ಹೊತ್ತಿಗೆ ಕೃಪ್ಲಾನಿ ಅಲ್ಲಿಗೆ ಬರದೆ ಇದ್ದಿದ್ದರೆ ನನಗೆ ಖಂಡಿತ ಒಳಕ್ಕೆ ಹೋಗಲು ಆ ಯಮದೂತರು ಅವಕಾಶ ಕೊಡುತ್ತಿರಲಿಲ್ಲ. ಸ್ವಯಂಸೇವಕರ ಶಿಸ್ತನ್ನು ನೋಡಿ ನಾನು ಬೆರಗಾದೆ. ಆಗ ಮದರಾಸ್ ಕಾಂಗ್ರೆಸ್ಸಿನಲ್ಲಿ, ನನ್ನ ಮಿತ್ರರೇ ಆದ ಸ್ವಯಂಸೇವಕರೊಬ್ಬರು, ಅಧ್ಯಕ್ಷರಾದ ಡಾಕ್ಟರ್ ಅನ್‌ಸಾರಿಯವರನ್ನು ಪ್ರವೇಶದ ಚೀಟಿ ಇಲ್ಲವೆಂದು ಒಳಕ್ಕೆ ಬಿಡದೆ ತಡೆದುದು ಜ್ಞಾಪಕಕ್ಕೆ ಬಂದಿತು.

ಆ ಸಾಯಂಕಾಲ ೩ರಿಂದ ೫ರವರೆಗೆ ಗಾಂಧಿಯವರು ತಮ್ಮ ಹೃದಯವನ್ನೇ ಬಿಚ್ಚಿ ಸಭೆಯ ಮುಂದೆ ಇಟ್ಟರು. ಅವರ ಮಾತುಗಳನ್ನು ಕೇಳಿದ ಪುಣ್ಯಶಾಲಿಗಳಿಗೆ, ತಾವು ಒಂದು ಅವತಾರ ಪುರುಷನ ಸನ್ನಿಧಿಯಲ್ಲಿರುವುದು ಅನುಭವವಾಯಿತು. ಆ ಮಾತುಗಳ ಪರಿಣಾಮವನ್ನು,

ಬಾಯಲ್ಲಿ ಹೇಳಿ ವಿವರಿಸುವುದು ಸಾಧ್ಯವಿಲ್ಲ. ಅದು ಒಂದು ರೀತಿಯಲ್ಲಿ ಪೂರ್ವಕಾಲದ ಋಷಿಗಳು, ತಮ್ಮ ಮೆಚ್ಚಿಗೆಯ ಶಿಷ್ಯರಿಗೆ ಆತ್ಮಜ್ಞಾನದ ರಹಸ್ಯವನ್ನು ಬೋಧಿಸುವಂತೆ ಇತ್ತು. ಸಭೆಯು ಮುಗಿದನಂತರ ಗಾಂಧಿಯವರು ಪ್ರಿಯದರ್ಶಿನಿ ಇಂದಿರಾ ನೆಹರುವಿನ ಹೆಗಲಿನಮೇಲೆ ಕೈಯ್ಯಿಟ್ಟುಕೊಂಡು ಮತ್ತೊಂದು ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಹೊರಡಲು ಅನುವಾಗಿ ನಿಂತರು. ಮೈಕ್ರೊಫೋನ್ ರಾಷ್ಟ್ರಗೀತೆಯನ್ನು ಹಾಡಿತು

"ಜನಗಣ ಮನದ ಅಧಿನಾಯಕನೆ

ಹೆ! ಭಾರತ ಭಾಗ್ಯವಿದಾತಾ! ನಿನಗೆ ಜಯವಾಗಲಿ!

"ಪಂಜಾಬು, ಸಿಂಧು ಗುಜರಾಥ ಮರಾಠಾ ದ್ರಾವಿಡ ಉತ್ಕಲ ವಂಗದೇಶಗಳೂ ವಿಂಧ್ಯ ಹಿಮಾಚಲ ಪರ್ವತಗಳೂ ಗಂಗಾ ಯಮುನ ತರಂಗಗಳೊಡಗೂಡಿ ನಿನ್ನ ಹೆಸರಿನಿಂದ ಜಾಗ್ರತವಾಗುತ್ತವೆ, ನಿನ್ನ ಶುಭವನ್ನು ಬಯಸುತ್ತವೆ. ನಿನ್ನ ಜಯವನ್ನು ಬೇಡುತ್ತವೆ

ಹೆ! ಭಾರತ ಭಾಗ್ಯ ವಿಧಾತಾ!

" ಹಗಲೂ ರಾತ್ರಿಯೂ ನಿನ್ನ ಉದಾರವಾದ ವಾಣಿಯು ಹಿಂದು, ಬೌದ್ಧ, ಸಿಕ್, ಜೈನ, ಪಾರಸಿಕ ಮುಸಲ್ಮಾನ ಕ್ರಿಸ್ತರನ್ನು, ನಿನ್ನ ಸಿಂಹಾಸನದ ಸುತ್ತ ನೆರೆಯಲು ಕರೆಯುತ್ತಿದೆ. ಪೂರ್ವಪಶ್ಚಿಮದಿಂದ ಎಲ್ಲರನ್ನೂ, ನಿನಗೆ ಪ್ರೇಮದ ಹಾರವನ್ನು ಹಾಕಲು ಕರೆಯುತ್ತಿದೆ.

ಹೆ! ಜನಗಣ ಐಕ್ಯವಿಧಾಯಕ!

ನಾಶವನ್ನು ಹೊಂದಿದ ಅನೇಕ ದೇಶಗಳನ್ನು ನೋಡುತ್ತಾ ಯಾತ್ರಿಕರ ಗುಂಪು ಹೋಗುತ್ತಾ ಇದೆ. ಎಲೈ! ಸಾರಥಿಯೇ, ನಿನ್ನ ಚಕ್ರದ ಧ್ವನಿ, ಪ್ರತಿಧ್ವನಿತವಾಗುತ್ತಿದೆ. ಭಯಂಕರವಾದ ದುಃಖ, ವಿಪ್ಲವದ ಮಧ್ಯದಲ್ಲಿ ನಿನ್ನ ಮಂಗಳಕರವಾದ ಶಂಖಧ್ವನಿ ಬಾರಿಸುತ್ತಿದೆ. ಹೆ! ಸಂಕಟ ದುಃಖದಿಂದ ನಮ್ಮನ್ನು ಪಾರುಮಾಡುವವನೇ ಜನಗಣ ಪಥಪರಿಚಾಯಕನೆ.

ಹೆ! ಭಾರತ ಭಾಗ್ಯ ವಿಧಾತಾ!

ಘೋರವಾದ ಘನವಾದ ನಿಬಿಡವಾದ ರಾತ್ರಿಯಲ್ಲಿ ದುಃಖದಿಂದ ಪೀಡಿತವಾದ ಮೂರ್ಛೆಯಲ್ಲಿ ಈ ದೇಶ ಮಲಗಿತ್ತು.

ಆಗ ನಿನ್ನ, ತಾಯಿಯ ಕೈಗಳಂತಹ ಮಂಗಳ ಕರಗಳಾದ ಕೈಗಳು ಅದನ್ನು ಮುಟ್ಟಿದವು. ಅದರ ದುಸ್ವಪ್ನ ಹರಿಯಿತು. ಅದು ಅರ್ಧ ಕಣ್ಣು ತೆರೆಯಿತು. ನಿನ್ನ ಸ್ನೇಹಸ್ಪರ್ಶಕ್ಕೆ ಒಳಗಾಯಿತು.
ಹೇ ಜನಗಣಗಳ ದುಃಖವನ್ನು ಹೋಗಲಾಡಿಸುವವನೆ ಭಾರತ ಭಾಗ್ಯ
ವಿಧಾತಾ !

ರಾತ್ರಿ ಕಳೆಯಿತು. ಪೂರ್ವಗಿರಿಯಲ್ಲಿ ಪ್ರಕಾಶವಾಗಿ ರವಿ ಉದಯಿಸಿದನು. ವಿಹಂಗಮಗಳು ಹಾಡುತ್ತಿವೆ, ನವಜೀವನ ರಸವನ್ನು ಹೊತ್ತುಕೊಂಡು ಪುಣ್ಯಸಮಾರಣ ಬೀಸುತ್ತಿದೆ ನಿನ್ನ ಕರುಣೆ ಈ ದೇಶವನ್ನು ಮುಟ್ಟಿದೆ. ಮಲಗಿದ್ದ ಭಾರತ ಎಚ್ಚೆತ್ತಿದೆ. ನಿನ್ನ ಚರಣಕ್ಕೆ ತಲೆಬಾದೆಗಿ.
ಹೆ ! ಜಯ ರಾಜೇಶ್ವರ ಭಾರತ ಭಾಗ್ಯ ವಿಧಾತಾ
ಜಯ ಹೇ ಜಯ ಹೇ ಜಯ ಹೇ,"

ಹೀಗೆ ಭಾರತ ಭಾಗ್ಯವಿಧಾತನ ದರ್ಶನವನ್ನೇ ನೆನೆಯುತ್ತಾ ಊರಿನ ದಾರಿ ಹಿಡಿದೆ.

---

# ೭. ಭಾರತದ ಸ್ವಾತಂತ್ರ್ಯಕ್ಕಾಗಿ ಮಹಾತ್ಮಾ ಗಾಂಧಿಯವರು ಹೂಡಿದ ಸತ್ಯಾಗ್ರಹಗಳು

೧

ಮಹಾತ್ಮ ಗಾಂಧಿಯವರು ಭಾರತರಾಷ್ಟ್ರದ ನಿರ್ಮಾಪಕರು ಮತ್ತು ಪಿತೃ. ಭಾರತದಲ್ಲಿ ಗಾಂಧಿಯವರು ಉದಯಿಸುವುದಕ್ಕಿಂತ ಮುಂಚೆ, ಭಾರತ ಪಾರತಂತ್ರ್ಯದಲ್ಲಿ ಸುಮಾರು ಒಂದೂವರೆ ಶತಮಾನ ಸೊರಗಿತ್ತು, ನಿರ್ವೀರ್ಯವಾಗಿ ನಿಶ್ಶಕ್ತವಾಗಿ ತೇಜೋರಹಿತವಾಗಿ, ಜಡವಾಗಿ ಮಲಗಿದ್ದ ಈ ಪ್ರಾಚೀನ ರಾಷ್ಟ್ರವನ್ನು ಗಾಂಧಿಯವರು ಮಂತ್ರದಿಂದಲೋ ಎಂಬಂತೆ ಎಚ್ಚರಿಸಿ, ಇದಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿದುದು ಮಾತ್ರವಲ್ಲದೆ, ಜಗತ್ತಿನ ರಾಷ್ಟ್ರಗಳ ಪಂಕ್ತಿಯಲ್ಲಿ ಭಾರತಕ್ಕೆ ಉತ್ತಮಸ್ಥಾನವನ್ನು ಗಳಿಸಿಕೊಟ್ಟರು. ಗಾಂಧಿಯವರು ಭಾರತದಲ್ಲಿ ಹೂಡಿದ ಆ ಸ್ವಾತಂತ್ರ್ಯದ ಹೋರಾಟಗಳ ಇತಿಹಾಸ ಅದ್ಭುತವಾಗಿ, ಕಾದಂಬರಿಗಳಂತೆ ರೋಮಾಂಚಕಾರಿಗಳಾಗಿವೆ. ಒಂದೇ ಒಂದು ವ್ಯಕ್ತಿ ಒಂದು ರಾಷ್ಟ್ರದ ಸ್ವಾತಂತ್ರ್ಯವನ್ನು, ಮದ್ದುಗುಂಡುಗಳ ಸಹಾಯವಿಲ್ಲದೆ ಬರಿಯ ನೀತಿಯ ಬಲದಿಂದಲೇ ಆತ್ಮಶಕ್ತಿಯಿಂದಲೇ ಗಳಿಸಿದುದಲ್ಲದೆ, ಈ ಆತ್ಮಶಕ್ತಿಯ ಮಾರ್ಗ ಜಗತ್ತಿಗೂ ಆದರ್ಶವೆಂದು ತೋರಿಸಿದುದು ಇತಿಹಾಸದಲ್ಲಿಯೇ ವಿರಳ. ಭಾರತೀಯರು ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ಹೂಡಿದ ಆತ್ಮಶಕ್ತಿಯ ಸ್ವಾತಂತ್ರ್ಯ ಸಂಗ್ರಾಮಗಳ ಸ್ಥೂಲ ರೂಪರೇಖೆಗಳನ್ನು ಮಾತ್ರ ಈ ಲೇಖನದಲ್ಲಿ ಕೊಡಲಾಗುವುದು.

## ೨ ಅಸಹಕಾರ

ರಾಜಕೀಯದಲ್ಲಿ ನೀತಿಯನ್ನು ಪ್ರವೇಶಗೊಳಿಸಿ, ವ್ಯಕ್ತಿಯ ಜೀವನ ಹೇಗೆ ಶುದ್ಧವಾಗಿರಬೇಕೋ ಸಾರ್ವಜನಿಕ ಕ್ಷೇತ್ರವೂ ಹಾಗೆಯೇ ಶುದ್ಧವಾಗಿರಬೇಕೆಂಬ ತತ್ವವನ್ನು ಮೊದಲು ರಾಜಕಾರಣದಲ್ಲಿ ಭಾರತದಲ್ಲಿ ತಂದವರು ಗಾಂಧಿಯವರು. ಈ ಸತ್ಯನೀತಿಗಳು

ಪ್ರಾರಂಭದಿಂದಲೂ ಮಹಾತ್ಮಾಗಾಂಧಿಯವರ ಜೀವನದ ಅಡಿಗಲ್ಲುಗಳು. ಯುವಕ ಬ್ಯಾರಿಸ್ಟರ್ ಆಗಿ, ದಕ್ಷಿಣ ಆಫ್ರಿಕಕ್ಕೆ ಹೋದಕೂಡಲೆ ಗಾಂಧಿಯವರು ಅಲ್ಲಿಯ ವರ್ತಕರಿಗೆ ಮಾಡಿದ ಮೊದಲನೆಯ ಭಾಷಣ 'ವ್ಯಾಪಾರವೂ ಸತ್ಯವೂ' ಎಂಬ ವಿಷಯವನ್ನು ಕುರಿತುದಾಗಿದ್ದಿತು. ಗಾಂಧಿಯವರು ಇಪ್ಪತ್ತು ವರುಷಗಳ ಕಾಲ ದಕ್ಷಿಣ ಆಫ್ರಿಕದಲ್ಲಿ ಭಾರತೀಯರ ಹಕ್ಕುಗಳಿಗಾಗಿ ಹೋರಾಡಿದರು. ಸತ್ಯಾಗ್ರಹವೆಂಬುದು ಆಗ ಅವರು ಕಂಡುಹಿಡಿದ ಅಹಿಂಸಾಯುದ್ಧಮಾರ್ಗ. ಎದುರಾಳಿಗೆ ಹಿಂಸೆಮಾಡದೆ, ಅವನಲ್ಲಿ ಕೋಪಗೊಳ್ಳದೆ, ಅವನನ್ನು ದ್ವೇಷಿಸದೆ ಆತ್ಮಗೌರವಕ್ಕೆ ವಿರೋಧವಾದ ಕಾನೂನುಗಳನ್ನೆಲ್ಲಾ ಶಾಂತರೀತಿಯಿಂದ ಎದುರಿಸಿ, ಬರುವ ಕಷ್ಟಗಳನ್ನೂ ಸಾವನ್ನೂ ಎದುರಿಸುವುದೇ ಸತ್ಯಾಗ್ರಹದ ತತ್ವ. ನಮ್ಮ ಪುರಾಣಗಳಲ್ಲಿ ಪ್ರಹ್ಲಾದ ಇಂತಹ ಸತ್ಯಾಗ್ರಹಿ. ದಕ್ಷಿಣ ಆಫ್ರಿಕದಲ್ಲಿ ಗಾಂಧಿಯವರು ಈ ಸತ್ಯಾಗ್ರಹ ಮಾರ್ಗದಿಂದ ಅದ್ಭುತ ಜಯವನ್ನು ಗಳಿಸಿ ೧೯೧೫ನೆಯ ಸಂವತ್ಸರದಲ್ಲಿ ಭಾರತಕ್ಕೆ ಬಂದರು.

೧೯೧೮ನೆಯ ಇಸವಿ ನವೆಂಬರ್ ಹನ್ನೊಂದನೆಯ ತಾರೀಖು ಮೊದಲನೆಯ ಮಹಾಯುದ್ಧ ಮುಗಿಯಿತು ಜಗತ್ತಿನಲ್ಲೆಲ್ಲ ಶಾಂತಿಯುಂಟಾದರೂ ಭಾರತಕ್ಕೆ ಶಾಂತಿ ದೊರೆಯಲಿಲ್ಲ ಬ್ರಿಟಿಷರು ತಮಗೆ ದೊರೆತ ಜಯವನ್ನು, ಭಾರತದ ಸಂಕೋಲೆಗಳನ್ನು ಬಲಪಡಿಸಲು ಉಪಯೋಗಿಸಿದರು ಮೊದಲನೆಯ ಮಹಾಯುದ್ಧದಿಂದ, ಭಾರತೀಯರು ತಾವು ಸ್ವತಂತ್ರರಾಗುವುದಾಗಿ ನಿರೀಕ್ಷಿಸಿದ್ದರು ಭಾರತ ಬ್ರಿಟಿಷರಿಗೆ ಆ ಯುದ್ಧದಲ್ಲಿ ಪೂರ್ಣವಾಗಿ ಸಹಾಯ ಮಾಡಿದ್ದಿತು. ಆದರೆ ಯುದ್ಧದಲ್ಲಿ ಜಯ ದೊರೆತನಂತರ ಬ್ರಿಟಿಷರು ತಮ್ಮ ಧ್ವನಿಯನ್ನೇ ಬದಲಾಯಿಸಿದರು. ಇದ್ದ ಸ್ವಾತಂತ್ರ್ಯವನ್ನು ಇನ್ನೂ ಕಡಮೆಮಾಡುವ ರೌಲೆಟ್ ಕಾನೂನುಗಳು ಎಂಬವು ಜಾರಿಗೆ ಬಂದುವು. ಮಹಾತ್ಮ ಗಾಂಧಿಯವರು, ಭಾರತದೇಶಕ್ಕೆ ದೇಶವೇ ಆ ಕಾನೂನುಗಳನ್ನು ಪ್ರತಿಭಟಿಸಬೇಕೆಂದು ಸತ್ಯಾಗ್ರಹಸಮಿತಿಗಳನ್ನು ನಿಯಮಿಸಿದರು. ಜಗತ್ತಿನಲ್ಲಿ ಯಾವ ರಾಷ್ಟ್ರದ ಕಾನೂನನ್ನೂ ಪ್ರಜೆಗಳು ಹೀಗೆ ಬಹಿರಂಗವಾಗಿ

ಸುವ್ಯವಸ್ಥಿತವಾಗಿ ಪ್ರತಿಭಟಿಸಿದುದು ಇತಿಹಾಸದಲ್ಲಿ ಇಲ್ಲ. ಅಲ್ಲಿಂದ ಮುಂದೆ ಬ್ರಿಟಿಷ್ ಸರ್ಕಾರದ ಮುಖಕ್ಕೆ ಎಂದೆಂದಿಗೂ ಮಸಿಯನ್ನು ಬಳಿದ ಪಂಜಾಬು ಅತ್ಯಾಚಾರಗಳು ನಡೆದುವು. ೧೯೧೯ನೆಯ ಇಸವಿ ಏಪ್ರಿಲ್ ೧೩ನೆಯ ತಾರೀಖು, ಜನರಲ್ ಡೈಯರ್ ಎಂಬ ಬ್ರಿಟಿಷ್ ಅಧಿಕಾರಿ ಜಲಿಯನ್‌ವಾಲಾಭಾಗ್ ಎಂಬಲ್ಲಿ, ಜನರನ್ನು ಬೆದರಿಸುವುದಕ್ಕಾಗಿಯೇ ಗುಂಡು ಹೊಡೆದು ಅನೇಕ ಸಹಸ್ರ ಸ್ತ್ರೀ ಪುರುಷ, ಮಕ್ಕಳನ್ನು ಕೊಂದನು. ಅದರ ಫಲವಾಗಿ ಪಂಜಾಬಿನಲ್ಲಿ ಮಿಲಿಟರಿ ಕಾಯಿದೆ ಜಾರಿಗೆ ಬಂದು. ಸಾರ್ವಜನಿಕ ಛಟಿಕಿ( ಹೊಡೆತ Whipping). ಹೊಟ್ಟೆಯ ಮೇಲೆ ತೆವಳುವುದು ಮುಂತಾದ ಅಮಾನುಷ ಶಿಕ್ಷೆಗಳಿಗೆ ಭಾರತೀಯರು ಒಳಗಾದರು.

ಪಂಜಾಬಿನ ಅತ್ಯಾಚಾರ ಕಾಂಗ್ರೆಸ್‌ನ ಆವರೆಗಿನ ಸ್ವರೂಪವನ್ನೇ ಬದಲಾಯಿಸಿತು. ತೀವ್ರವಾದ ಕಾರ್ಯಕ್ರಮವನ್ನು ಕೈಕೊಂಡಲ್ಲದೆ ಬ್ರಿಟಿಷ್ ಸರ್ಕಾರದ ಮನೋಭಾವವನ್ನು ಬದಲಾಯಿಸುವುದು ಸಾಧ್ಯವಲ್ಲವೆಂಬುದು ಭಾರತೀಯರಿಗೆ ಮನದಟ್ಟಾಯಿತು. ಗಾಂಧಿಯವರ ನೇತೃತ್ವದಲ್ಲಿ, ಸರ್ಕಾರದೊಂದಿಗೆ ಪೂರ್ಣವಾಗಿ ಅಸಹಕಾರ ಮಾಡಬೇಕೆಂದು ದೇಶ ನಿರ್ಣಯಿಸಿತು ಬ್ರಿಟಿಷ್ ಸರ್ಕಾರದವರು ಆ ವೇಳೆಗೆ ಸರಿಯಾಗಿ ಖಿಲಾಫತ್ ಪ್ರಶ್ನೆಯಲ್ಲಿ ಒಂದು ಅನ್ಯಾಯ ಮಾಡಿದರು ಮಹಾಯುದ್ಧವು ನಡೆದಾಗ, ಮುಸ್ಲಿಂ ಚಕ್ರಾಧಿಪತ್ಯವಾದ ಒಟ್ಟೊಮನ್ ಸಾಮ್ರಾಜ್ಯವನ್ನು ಯಾವ ರೀತಿಯಲ್ಲಿಯೂ ಕತ್ತರಿಸುವುದಿಲ್ಲವೆಂದು ಬ್ರಿಟಿಷ್ ಮುಖ್ಯ ಮಂತ್ರಿ ಕೊಟ್ಟಿದ್ದ ಭರವಸೆಯನ್ನು ಯುದ್ಧದನಂತರ ಬ್ರಿಟಿಷ್ ಸರ್ಕಾರ ಪಾಲಿಸಲಿಲ್ಲ. ಅದು ಉದ್ದಕ್ಕೂ ಇಂಗ್ಲಿಷಿನವರ ಸ್ವಭಾವವೇ. ಹೀಗೆ ಕೊಟ್ಟ ಭಾಷೆಗೆ ತಪ್ಪುವ ಸರ್ಕಾರದೊಂದಿಗೆ ಸಹಕಾರ ಮಾಡುವುದು ಇಸ್ಲಾಂ ಧರ್ಮಕ್ಕೆ ವಿರುದ್ಧವಾದುದು. ಆದುದರಿಂದ ನಿಜವಾದ ಮುಸಲ್ಮಾನರೆಲ್ಲ ಅಂತಹ ರಾಕ್ಷಸೀ ಸರ್ಕಾರವನ್ನು ಎದುರಿಸಬೇಕು. ಹಿಂದುಗಳೂ ಅವರಿಗೆ ಸಹಾಯ ಮಾಡಬೇಕು. ಹೀಗೆ ಖಿಲಾಫತ್ ನ್ಯಾಯಕ್ಕಾಗಿಯೂ, ಭಾರತೀಯರ ಸ್ವಾತಂತ್ರ್ಯ ಸಂಪಾದನೆಗಾಗಿಯೂ ಸರ್ಕಾರದೊಂದಿಗೆ ಜನ ಅಸಹ

ಕಾರವನ್ನು ಹೂಡಬೇಕೆಂದು ಗಾಂಧಿಯವರು ದೇಶದಲ್ಲಿ ಪ್ರಚಾರ ಮಾಡಿದರು.

ಆದರೆ ದೇಶದ ಪ್ರಮುಖ ರಾಜಕೀಯ ಸಂಸ್ಥೆಯಾದ ಕಾಂಗ್ರೆಸ್ಸನ್ನು ಈ ಕಾರ್ಯಕ್ರಮಕ್ಕೆ ಒಪ್ಪಿಸಿದ ಹೊರತು ಅಸಹಕಾರಕ್ಕೆ ವಿಧಿವತ್ತಾದ ಶಾಸ್ತ್ರೀಯ ಸ್ವರೂಪವು ಬರುವಂತಿರಲಿಲ್ಲ. ಗಾಂಧಿಯವರು ಯಾವ ಕಾರ್ಯವನ್ನೂ ಹಾಗೆ ಆತುರವಾಗಿ ಮಾಡುವವರಾಗಿರಲಿಲ್ಲ. ಅವರು ಕಾಂಗ್ರೆಸ್ಸಿನ ಮುಂದೆ ಇಟ್ಟ ಅಸಹಕಾರ ಚಳುವಳಿಯಲ್ಲಿ ನಾಲ್ಕು ಅಂಗಗಳು ಮುಖ್ಯವಾಗಿದ್ದುವು: (೧) ದೇಶದ ಪ್ರಜೆಗಳು ತಮ್ಮ "ಬಿರುದು ಬಾವಲಿ" ಗಳನ್ನು ಸರ್ಕಾರಕ್ಕೆ ಹಿಂದಿರುಗಿಸಬೇಕು (೨) ಸರ್ಕಾರದಲ್ಲಿ ಯಾರೂ ಹುದ್ದೆದಾರರಾಗಿರಕೂಡದು ಅಥವಾ ಅಧಿಕಾರಿಗಳೆಲ್ಲಾ ರಾಜೀನಾಮೆ ಕೊಡಬೇಕು (೩) ಕರನಿರಾಕರಣೆ (೪) ಪೋಲೀಸಿನವರನ್ನೂ ಮಿಲಿಟರಿಯವರ್ನೂ ಕೆಲಸದಿಂದ ಬಿಡಿಸುವುದು.

ಈ ಮೇಲಿನ ನಾಲ್ಕು ಕಾರ್ಯಕ್ರಮಗಳನ್ನು ಆಚರಣೆಗೆ ತರುವಾಗಲೂ, ಯಾವಾಗಲೂ, ಸತ್ಯ ಅಹಿಂಸೆಯಿಂದಿರಬೇಕೆಂದೂ, ಈ ಚಳುವಳಿ ಧರ್ಮಯುದ್ಧವೆಂಬುದಾಗಿಯೂ, ಶಕ್ತಿಯಿಂದ ಕೌರವರನ್ನು ವಸ್ತ್ರಾಪಹರಣಕಾಲದಲ್ಲಿ ನಾಶಮಾಡಬಹುದಾಗಿದ್ದರೂ ಪಾಂಡವರು ಧರ್ಮಕ್ಕಾಗಿ ಮಾಡಲಿಲ್ಲವೆಂದೂ, ಹಿಂಸೆ ತಲೆಹಾಕಿದರೆ ತಾವು ಚಳುವಳಿಯನ್ನು ನಿಲ್ಲಿಸಿಬಿಡುವುದಾಗಿಯೂ ಗಾಂಧಿಯವರು ಬರವಣಿಗಯ ಮೂಲಕವೂ ಉಪನ್ಯಾಸಗಳ ಮೂಲಕವೂ ದೇಶದಲ್ಲೆಲ್ಲಾ ಪ್ರಚಾರಮಾಡಿದರು. ಇವುಗಳ ಜತೆಯಲ್ಲಿ ಖಾದಿಯ ತಯಾರಿಕೆ, ಪಾನನಿರೋಧ, ಸರ್ವಸಮಾನತೆ ಹಿಂದೂ ಮುಸ್ಲಿಂ ಪಾರ್ಸಿ ಕ್ರಿಸ್ತ ಯೆಹೂದಿ ಐಕ್ಯ.—ಈ ಎಲ್ಲ ವಿಧಾಯಕ ಕಾರ್ಯಗಳೂ ಆ ಹೊಸ ಚಳುವಳಿಯ ಅಂಗಗಳಾದುವು. ಗಾಂಧಿಯವರು ತಾವು ಮಾಡಿ ತೋರಿಸದೆ ಯಾವ ಕಾರ್ಯಕ್ರಮವನ್ನೂ ಜನರ ಮುಂದೆ ಇಡುವುದಿಲ್ಲ. ೧೯೨೦ನೆಯ ಆಗಸ್ಟ್ ೨೦ ರಲ್ಲಿ ಅವರು, ತಮಗೆ ಬ್ರಿಟಿಷ್ ಸರ್ಕಾರದಿಂದ ದೊರೆತಿದ್ದ **ಕೇಸರಿ-ಇ-ಹಿಂದ್** ಬಿರುದನ್ನು ವೈಸ್‌ರಾಯರಿಗೆ ಹಿಂದಕ್ಕೆ ಕೊಟ್ಟರು. "ಕೊಟ್ಟಮಾತಿಗೆ ತಪ್ಪುವ ಸರ್ಕಾ

ರದಲ್ಲಿ ನನಗೆ ನಂಬಿಕೆಯೂ ಗೌರವವೂ ಇಲ್ಲ" ಎಂದು ತಿಳಿಸಿದರು. ಅಸಹಕಾರ ಕಾರ್ಯಕ್ರಮಕ್ಕೆ ದೇಶವನ್ನು ಒಪ್ಪಿಸಲು ಕಾಂಗ್ರೆಸ್ಸಿನ ವಿಶೇಷಾಧಿವೇಶನವು ೧೯೨೦ ನೆಯ ಇಸವಿ ಸೆಪ್ಟೆಂಬರ್ ತಿಂಗಳಿನಲ್ಲಿ ಕಲ್ಕತ್ತೆಯಲ್ಲಿ ನಡೆಯಿತು. ಮದನಮೋಹನ ಮಾಳವೀಯ, ದೇಶಬಂಧು ಚಿತ್ತರಂಜನ್‌ದಾಸ್, ಬಿಪಿನ್ ಚಂದ್ರಪಾಲ್, ಜಿನ್ನಾ ಮೊದಲಾದವರು ಅಸಹಕಾರವನ್ನು ವಿರೋಧಿಸಿದರು. ಆನಿಬೆಸೆಂಟರೂ ವಿರೋಧಿಸಿದರು; ಆದರೆ ಒಟ್ಟು ಕಾಂಗ್ರೆಸ್ ಅಸಹಕಾರವನ್ನು ಒಪ್ಪಿತು. ಅಸಹಕಾರ ಚಳುವಳಿಯನ್ನು ಹೂಡುವುದಕ್ಕೆ ಮುಂಚೆ ಇಂಗ್ಲೆಂಡಿಗೆ ಒಂದು ನಿಯೋಗ ಹೋಗಬೇಕೆಂಬ ತಿದ್ದುಪಡಿ ಸಹ ಬಿದ್ದುಹೋಯಿತು. ಅಸಹಕಾರದ ಠರಾವನ್ನು ಸಭೆಯ ಮುಂದೆ ಇಡುತ್ತಾ ಗಾಂಧಿಯವರು "ನಾನು ದೇವರಲ್ಲಿ ಭಯಸ್ಥನಾಗಿ ನಿಮ್ಮ ಮುಂದೆ ನಿಂತಿದ್ದೇನೆ. ದೇಶಕ್ಕೆ ನನ್ನ ಹೊಣೆ ಏನೆಂಬುದು ನನಗೆ ಗೊತ್ತು. ಈ ಠರಾವನ್ನು ಅನುಮೋದಿಸಿ" ಎಂದು ಕೇಳಿದರು. ಆ ಸಲದ ಕಾಂಗ್ರೆಸ್‌ಗೆ ೫,೮೧೪ ಜನ ಪ್ರತಿನಿಧಿಗಳಾಗಿದ್ದರು. ಆದರೆ ಠರಾವಿಗೆ ತಮ್ಮ ಮತವನ್ನು ಕೊಟ್ಟವರು ೨,೭೨೮ ಜನರು ಮಾತ್ರ. ೧,೮೫೫ ಪ್ರತಿನಿಧಿಗಳು ಠರಾವಿನ ಪರವಾಗಿಯೂ ೮೭೩ ಪ್ರತಿನಿಧಿಗಳು ವಿರೋಧವಾಗಿಯೂ ಮತವನ್ನು ಕೊಟ್ಟರು. ಅದೇ ವರುಷದ ನಾಗಪುರದ ಕಾಂಗ್ರೆಸ್ ಅಧಿವೇಶನದಲ್ಲಿ ದೇಶವು ಪೂರ್ಣವಾಗಿ ಅಸಹಕಾರಕಾರ್ಯಕ್ಕೆ ಬೆಂಬಲ ಕೊಟ್ಟಿತು.

ನಾಗಪುರದ ಕಾಂಗ್ರೆಸ್ಸು ಭಾರತದ ಇತಿಹಾಸದಲ್ಲಿ ಪರ್ವಕಾಲ. ದೇಶದ ಜನರಲ್ಲಿ ಒಂದು ಧರ್ಮಯುದ್ಧದ ಭಾವನೆಯೂ ಆತ್ಮಶಕ್ತಿಯ ಭಾವನೆಯೂ ಉಂಟಾಯಿತು. ಶ್ರೀರಾಮಚಂದ್ರನು, ನಿರಾಯುಧರಾದ ಕಪಿಗಳನ್ನು ರಾವಣನ ಮದ್ದುಗುಂಡು ಆಕಾಶವಿಮಾನಕ್ಕೆ ಎದುರಾಗಿ ನಿಲ್ಲಿಸಿ ಗೆದ್ದಂತೆ, ಗಾಂಧಿಯವರು ಹೆಜ್ಜೆ ಹೆಜ್ಜೆಗೆ ಗೆಲ್ಲತೊಡಗಿದರು. ಯಾವ ಆಯುಧವೂ ಇಲ್ಲದೆ ನಿರಾಶೆಯಿಂದಿದ್ದ ಭಾರತೀಯರಿಗೆ ತಮ್ಮ ಕೈಯಲ್ಲಿಯೂ ಒಂದು ಹೊಸ ಆಯುಧವಿರುವ ಭಾವನೆ ಬಂದಿತು. ನಿಶ್ಶಕ್ತರಿಗೆ ಸತ್ಯ ಧರ್ಮಗಳೇ ಆಯುಧಗಳೆಂಬುದೂ ಆ ಆಯುಧಗಳ ಪ್ರಾಬಲ್ಯ ಮದ್ದು ಗುಂಡುಗಳಿಗಿಂತ ಹೆಚ್ಚೆಂಬುದೂ ಭಾರತೀಯರ

ಮತ್ತು ಜಗತ್ತಿನ ಅನುಭವಕ್ಕೆ ಬಂದಿತು. ವಿದ್ಯಾರ್ಥಿಗಳು ಸರ್ಕಾರಿ ಶಾಲೆ ಕಾಲೇಜುಗಳನ್ನು ಬಿಟ್ಟರು; ವಕೀಲರು ಕೋರ್ಟುಗಳಿಗೆ ಹೋಗುವುದನ್ನು ಬಿಟ್ಟರು ಅನೇಕ ಅಧಿಕಾರಿಗಳು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಜನರ ಉತ್ಸಾಹವೂ ತ್ಯಾಗಬುದ್ಧಿಯೂ ಅದ್ಭುತವಾದುವು. ಅದೇ ವರ್ಷ (೧೯೨೧ ನೇ ನವಂಬರ್) ಆಗಿನ ವೇಲ್ಸ್ ರಾಜಕುಮಾರರಾದ ಎಡ್ವರ್ಡರು ಭಾರತಕ್ಕೆ ಬಂದರು. ಜನರು ಅವರನ್ನು ಎಲ್ಲೆಲ್ಲಿಯೂ ಬಹಿಷ್ಕರಿಸಿದರು. ರಾಜಕುಮಾರರಿಗೆ ಸಹ ಭಾರತೀಯರ ಸ್ವಾತಂತ್ರ್ಯದಾಹ ಸ್ಪಷ್ಟವಾಗಿ ವ್ಯಕ್ತವಾಯಿತು.

ಅಸಹಕಾರದ ಮೂರನೆಯ ಕಾರ್ಯಕ್ರಮವಾದ ಕರನಿರಾಕರಣೆಯನ್ನು ಅಹಮದಾಬಾದಿನ ಬರಡೋಲಿ ತಾಲ್ಲೂಕಿನಲ್ಲಿ ಮೊದಲು ಪ್ರಾರಂಭಿಸ ಬೇಕೆಂದು ಗಾಂಧಿಯವರು ನಿಶ್ಚಯಿಸಿದರು. ಕರನಿರಾಕರಣೆಯನ್ನು ಪ್ರಾರಂಭಿಸುವುದಕ್ಕೆ ಮುಂಚೆ ಅನುಸರಿಸಬೇಕಾಗಿದ್ದ ನಿಯಮಗಳೂ ಬಹಳ ಕಠಿಣವಾಗಿದ್ದುವು. ತಾಲ್ಲೂಕು ಸರ್ವವಿಧದಲ್ಲಿಯೂ ಸ್ವಾವ ಲಂಬಿಯಾಗಿ ಅಹಿಂಸಾ ಪೂರ್ಣವಾಗಿದ್ದರೆ ಮಾತ್ರ ಅದಕ್ಕೆ ಕರನಿರಾ ಕರಣೆ ಮಾಡಲು ಗಾಂಧಿಯವರು ಅನುಮತಿ ಕೊಡುತ್ತಿದ್ದರು. ೧೯೨೧ ನೆಯ ಡಿಸೆಂಬರ್‌ನಲ್ಲಿ ಅಹಮ್ಮದಾಬಾದ್ ಕಾಂಗ್ರೆಸ್ ಆಯಿತು. ಅದರ ಅಧ್ಯಕ್ಷ ದೇಶಬಂಧು ದಾಸರನ್ನು ಸರ್ಕಾರ ಸೆರೆಹಿಡಿದುದರಿಂದ ಹಕೀಮ್ ಅಜಮಲ್‌ಖಾನರೇ ಅಧ್ಯಕ್ಷರಾದರು. ಕಾಂಗ್ರೆಸ್ ಮುಗಿದ ಕೂಡಲೆ ಗಾಂಧಿಯವರು, ವೈಸ್‌ರಾಯ್ ಲಾರ್ಡ್ ರೀಡಿಂಗ್‌ರಿಗೆ ಒಂದು ಕಾಗದವನ್ನು ಬರೆದರು. ಪ್ರಜಾಭಿಪ್ರಾಯಕ್ಕೆ ಅನುಗುಣವಾಗಿ ನಡೆಯ ದಿದ್ದಲ್ಲಿ ಬರಡೋಲಿಯಲ್ಲಿ ಕರನಿರಾಕರಣೆಯನ್ನು ಪ್ರಾರಂಭಿಸುವು ದಾಗಿಯೂ ಅದರಲ್ಲಿ ತಿಳಿಸಿದರು. ವೈಸ್‌ರಾಯರಿಂದ ಸಮರ್ಪಕವಾದ ಉತ್ತರ ದೊರೆಯಲಿಲ್ಲ.

ಆದರೆ ಫೆಬ್ರುವರಿ ೧೪ ರಂದು (೧೪-೨-೧೯೨೨) ಚೌರಿಚೌರಾ ಎಂಬಲ್ಲಿ ಒಂದು ಹಿಂಸಾಕೃತ್ಯ ನಡೆಯಿತು. ಜನರು ಉದ್ರೇಕಗೊಂಡು ಪೋಲೀಸರನ್ನು ಒಂದು ಮನೆಯಲ್ಲಿ ಕೂಡಿ ಮನೆಯನ್ನು ಸುಟ್ಟರು. ಇದರಿಂದ ಕೆಲವು ಪೋಲೀಸರು ಮರಣಹೊಂದಿದರು. ಕರನಿರಾಕಣ

ಚಳುವಳಿಗೆ ಆವಶ್ಯಕವಾದ ಅಹಿಂಸೆಯ ವಾತಾವರಣ ದೇಶದಲ್ಲಿ ಉಂಟಾಗಿಲ್ಲವೆಂದು, ಗಾಂಧಿಯವರು ಬರ್ದೋಲಿ ಕರನಿರಾಕರಣವನ್ನು ನಿಲ್ಲಿಸಿಬಿಟ್ಟರು. ಅಸಹಕಾರಿಗಳಲ್ಲಿಯೇ ಅನೇಕರು ಗಾಂಧಿಯವರ ಈ ಕಾರ್ಯವನ್ನು ಒಪ್ಪಲಿಲ್ಲ. ಆದರೆ ಗಾಂಧಿಯವರು "ಇದು ನನಗೆ ಭಗವಂತನು ಕೊಟ್ಟ ಎಚ್ಚರಿಕೆ" ಎಂದು ತಮ್ಮ ನಿರ್ಧಾರವನ್ನು ಬದಲಾಯಿಸಲೇ ಇಲ್ಲ. ಸರ್ಕಾರದವರು ಮಾತ್ರ ದಬ್ಬಾಳಿಕೆಯನ್ನು ನಡೆಸುತ್ತಲೇ ಹೋದರು. ಈ ಚಳುವಳಿಯಲ್ಲಿ ಸುಮಾರು ಒಂದು ಲಕ್ಷ ಅಸಹಕಾರಿಗಳು ಸೆರೆಮನೆ ಸೇರಿದರು. ಮಾರ್ಚಿ ಹತ್ತರಂದು ಗಾಂಧಿಯವರ ಬಂಧನವಾಯಿತು.

ಗಾಂಧಿಯವರ ಬಂಧನವಾಗುವುದು ಕೆಲವು ದಿನಗಳಿಂದಲೇ ಗೊತ್ತಿದ್ದಿತು. "ರಾಜದ್ರೋಹವೇ ಧರ್ಮ; ಸಮಸ್ಯೆಯೂ ಅದರ ಪರಿಹಾರವೂ; ಸಿಂಹದ ಕೇಸರವನ್ನು ಅಲ್ಲಾಡಿಸುವುದು" ಮೊದಲಾದ ಅವರ ಲೇಖನಗಳಿಗಾಗಿ ಅವರ ಮೇಲೆ ಖಟ್ಲೆಗಳನ್ನು ಹಾಕಿದರು. ಪ್ರಸಿದ್ಧವಾದ ಈ ವಿಚಾರಣೆಯು ಜಗತ್ತಿನ ಲಕ್ಷ್ಯವನ್ನೆಲ್ಲಾ ಎಳೆಯಿತು. ಇಂದಿಗೂ ಈ ವಿಚಾರಣೆಯನ್ನು ಜನ ಮರೆತಿಲ್ಲ. ಅದನ್ನು ಎರಡು ಸಾವಿರ ವರುಷಗಳ ಕೆಳಗೆ ನಡೆದ ಯೇಸುಕ್ರಿಸ್ತನ ವಿಚಾರಣೆಗೆ ಹೋಲಿ ಬಹುದು. ಆ ಪ್ರಸಿದ್ಧವಾದ ವಿಚಾರಣೆಯನ್ನು ಕುರಿತು ಇಲ್ಲಿ ನಾವು ಹೆಚ್ಚಿಗೆ ಹೇಳುವುದಿಲ್ಲ. ಅದರ ವಿವರಣೆ ಎಲ್ಲೆಲ್ಲಿಯೂ ದೊರೆಯುತ್ತದೆ. ನ್ಯಾಯಾಧಿಪತಿ ಗಾಂಧಿಯವರಿಗೂ, ನವಜೀವನದ ಪ್ರಕಾಶಕರಾದ ಶ್ರೀ ಶಂಕರಲಾಲ್ ಬ್ಯಾಂಕರರಿಗೂ ಆರುವರುಷ ಕಠಿಣಶಿಕ್ಷೆ ವಿಧಿಸಿದರು. ಆದರೆ ಗಾಂಧಿಯವರು ಆ ಆರು ವರುಷದ ಶಿಕ್ಷೆಯನ್ನು ಪೂರ್ತ ಅನುಭವಿಸಲಿಲ್ಲ. ಇಪ್ಪತ್ತುಮೂರು ತಿಂಗಳನಂತರ, ಅಂದರೆ ೧೯೨೪ನೆಯ ಫೆಬ್ರುವರಿಯಲ್ಲಿ ಅವರಿಗೆ ಶಸ್ತ್ರಚಿಕಿತ್ಸೆಯಾಗಿ ಅವರ ಬಿಡುಗಡೆ ಆಯಿತು.

೩

ಹೀಗೆ ಅಸಹಕಾರದ ಚಳುವಳಿ ಮುಕ್ತಾಯವಾಯಿತು. ಸ್ವರಾಜ್ಯ ದೊರೆಯದಿದ್ದರೂ, ಸ್ವರಾಜ್ಯದಾಹ ಜನರಿಗೆ ತೀವ್ರವಾಯಿತು. ದೇಶ ಮತ್ತೆ ನಿದ್ರೆಹೋಗುವ ಸಂಭವ ಇನ್ನು ಇರಲಿಲ್ಲ. ಗಾಂಧಿಯವರು

ಇಪ್ಪತ್ತನಾಲ್ಕನೇ ಇಸವಿ ಏಪ್ರಿಲ್ ತಿಂಗಳಿನಲ್ಲಿ ಮತ್ತೆ 'ಯಂಗ್ ಇಂಡಿಯ' ಮತ್ತು 'ನವಜೀವನ' ಪತ್ರಿಕೆಗಳನ್ನು ಆರಂಭಿಸಿದರು. ಮತ್ತೆ ಮತ್ತೆ ಚಳುವಳಿ ಹೂಡಿ ಎಂದು ಜನರು ಬಲಾತ್ಕರಿಸುತ್ತಿದ್ದರೂ ಗಾಂಧಿಯವರು ನಿಧಾನವಾಗಿ ದೇಶದ ಸ್ಥಿತಿಯನ್ನು ಪರೀಕ್ಷಿಸುತಿದ್ದರು. ರಚನಾತ್ಮಕ ಕಾರ್ಯದಲ್ಲಿಯೇ ಮತ್ತೆ ಮುಂದೆ ಆರು ವರ್ಷ ಕಳೆಯಿತು. ಆ ಮಧ್ಯೆ ಬರಡೋಲಿಯ ಸತ್ಯಾಗ್ರಹ ನಡೆದು ಗಾಂಧಿಯವರ ಅಸಕಾರ ಕ್ರಮಕ್ಕೆ ಪೂರ್ಣ ಜಯ ದೊರೆಯಿತು. ಮದರಾಸು ಲಾಹೋರು ಕಾಂಗ್ರೆಸ್ಸುಗಳಲ್ಲಿ "ಇನ್ನು ನಮಗೆ ಬ್ರಿಟಿಷರ ಸಂಬಂಧ ಬೇಡ, ಪೂರ್ಣ ಸ್ವರಾಜ್ಯವೇ ನಮ್ಮ ಧ್ಯೇಯ" ಎಂದು ಸಾರಲಾಯಿತು.

೧೯೩೦ ನೆಯ ವರ್ಷದ ಪ್ರಾರಂಭದಲ್ಲಿಯೇ ಭಾರತೀಯ ರಾಜಕೀಯ ಆಕಾಶ ಸಿಡಿಲು ಮಿಂಚುಗಳಿಂದ ಆವೃತವಾಯಿತು. ಆಗ ಲಾರ್ಡ್ ಇರ್ವಿನ್‌ರು ವೈಸರಾಯ್ ಪದವಿಯಿಂದ ನಿವೃತ್ತರಾಗುವ ಕಾಲವಾಗಿತ್ತು. ಗಾಂಧಿಯವರು ಮತ್ತೊಂದು ಹೋರಾಟಕ್ಕೆ ದೇಶವನ್ನು ತಯಾರಿಸುತ್ತಿದ್ದರು. ಅದು ಸವಿನಯ ಕಾಯಿದೆಭಂಗ ಎಂಬುದು ಎಲ್ಲರಿಗೂ ಗೊತ್ತಿದ್ದಿತು. ಆದರೆ ಆ ಕಾಯಿದೆಭಂಗ ಯಾವ ರೂಪವನ್ನು ಹೊಂದುತ್ತದೆ, ಭಂಗಿಸುವ ಕಾಯಿದೆ ಯಾವುದು ಎಂಬುದು ಸಾರ್ವಜನಿಕರಿಗೆ ಬೇಗ ಗೊತ್ತಾಗಲಿಲ್ಲ. ಅಹಮ್ಮದಾಬಾದಿನಲ್ಲಿ ನಡೆದ ವರ್ಕಿಂಗ್ ಕಮಿಟಿಯು (೧೫-೨-೧೯೩೦) ಗಾಂಧಿಯವರಿಗೆ ಸರ್ವಾಧಿಕಾರವನ್ನು ಕೊಟ್ಟಿತು. ಗಾಧಿಯವರು ಆಗ ಭಂಗಿಸಲು ಆರಿಸಿದ ಕಾನೂನು, ಅವರು ಜನರ ಹೃದಯವನ್ನು ಹೇಗೆ ಬಲ್ಲರೆಂಬುದನ್ನು ತೋರಿಸುತ್ತದೆ. ಭಾರತ ದೇಶದ ಎಲ್ಲಾ ಪ್ರಜೆಗಳಿಗೂ ಒಂದಿಲ್ಲ ಒಂದು ರೀತಿಯಿಂದ ಕಿರುಕುಳವಾಗಿದ್ದ ಉಪ್ಪಿನ ಕಾನೂನನ್ನು, ದೇಶವು ಮುರಿಯಬೇಕೆಂದು ಗಾಂಧಿಯವರು ಸೂಚಿಸಿದರು. ಗಾಂಧಿಯವರೇ ತಮ್ಮ ೮೭ ಜನ ಅನುಯಾಯಿಗಳೊಂದಿಗೆ ಗುಜರಾತಿನ ದಂಡಿ ಎಂಬಲ್ಲಿಗೆ ಹೋಗಿ ಉಪ್ಪನ್ನು ತಯಾರಿಸಿ ಕಾನೂನನ್ನು ಮುರಿದರು. ದೇಶದ ಮೇಲೆ ಅದರ ಪರಿಣಾಮ ಅದ್ಭುತವಾಯಿತು. ಜನರು ಎಲ್ಲೆಲ್ಲಿಯೂ

ಉಪ್ಪಿನ ಕಾನೂನನ್ನು ಮುರಿದರು. ಉಪ್ಪಿನ ಕೋಠಿಗಳಿಗೆ ಮುತ್ತಿಗೆ ಹಾಕಿದರು. ಸರ್ಕಾರದವರು ಅನೇಕ ಆರ್ಡಿನೆನ್ಸ್‌ಗಳನ್ನು ಹೊರಡಿಸಿದರು. ಅನೇಕ ಲಕ್ಷ ಜನರನ್ನು ಸೆರೆಮನೆಗೆ ತುಂಬಿದರು. ಮೇ ೪ ನೆಯ ರಾತ್ರಿ ಮಹಾತ್ಮ ಗಾಂಧೀಯವರನ್ನು ಸೆರೆಹಿಡಿದರು.

ದೇಶವೆಲ್ಲ ಪೋಲೀಸರ ರಾಜ್ಯವಾಯಿತು. ಸರ್ಕಾರದ ಬಾಲಬಡಕರ ಹೊರತು ಉಳಿದವರಾರೂ ದೇಶದಲ್ಲಿ ಸ್ವತಂತ್ರವಾಗಿ ಉಳಿಯುಲಿಲ್ಲ. ಜಗತ್ತಿನಲ್ಲಿ ಭಾರತಸರ್ಕಾರದ ಮುಖಕ್ಕೆ ಎಲ್ಲೆಲ್ಲಿಯೂ ಮಸಿ ಬಳಿಯಿತು. ಇಂಗ್ಲೆಂಡಿನ ಶತ್ರುಗಳು ಇಂಗ್ಲೀಷರ ದಬ್ಬಾಳಿಕೆಯನ್ನು ನಾನಾವಿಧವಾಗಿ ತಿರಸ್ಕರಿಸಿದರು. ಭಾರತವೇ ಒಂದು ದೊಡ್ಡ ಸೆರೆಮನೆಯಾಯಿತು. ಆಗ ಬ್ರಿಟಿಷ್ ಸರ್ಕಾರದವರು ಒಂದು ದುಂಡುಮೇಜಿನ ಸಭೆ ಕರೆದರು. ಮೊದಲನೆಯ ಸಭೆಗೆ ಕಾಂಗ್ರೆಸ್ಸಿನವರು ಹೋಗಲಿಲ್ಲ. ಅನಂತರ ಇರ್ವಿನ್‌ರಿಗೂ ಗಾಂಧಿಯವರಿಗೂ ಒಪ್ಪಂದವಾಯಿತು. ಮಹಾತ್ಮ ಗಾಂಧಿಯವರು ಎರಡನೆಯ ದುಂಡುಮೇಜಿನ ಪರಿಷತ್ತಿಗೆ ತೆರಳಿದರು. ಆ ಪರಿಷತ್ತಿಲ್ಲಿ ಕಾಂಗ್ರೆಸ್ ಬೇಡಿಕೆಗೆ ಮನ್ನಣೆ ದೊರೆಯುಲಿಲ್ಲ. ಆದರೆ ಗಾಧಿಯವರು ಪರಿಷತ್ತಿನಲ್ಲಿ ಭಾಗ ವಹಿಸಿದುದರಿಂದ ಭಾರತದ ನಿಜವಾದ ಆಸೆ ಜಗತ್ತಿಗೆ ತಿಳಿಯಿತು. ಭಾರತದ ಘನತೆ ಏರಿತು ದುಂಡುಮೇಜಿನ ಪರಿಷತ್ತಿನಿಂದ ಭಾರತಕ್ಕೆ ಹಿಂದಿರುಗಿದ ಗಾಂಧಿಯವರು " ನಾನು ಬರಿಯ ಕೈಯಲ್ಲಿ ಹಿಂದಿರುಗಿದೆ ನಿಜ, ಆದರೆ ದೇಶದ ಮಾನವನ್ನು ನಾನು ಮಾರಿಲ್ಲ " ಎಂದು ಹೇಳಿದರು.

ಗಾಂಧಿಯವರು ಇಂಗ್ಲೆಂಡಿನಿಂದ ೧೯೩೧ ನೆಯ ಡಿಸೆಂಬರ್ ೨೮ ನೆಯ ತಾರೀಖು ಭಾರತಕ್ಕೆ ಬಂದರು ಆ ವೇಳೆಗೆ ಭಾರತದಲ್ಲಿ ವೆಲ್ಲಿಂಗ್‌ಡನ್‌ರ ವೈಸರಾಯ್ಟಿಕೆ ಪ್ರಾರಂಭವಾಗಿತ್ತು. ವೆಲ್ಲಿಂಗ್ಡನ್ನರು ಚರ್ಚಿಲ್‌ರಂತೆ. ಕಾಂಗ್ರೆಸ್ಸನ್ನು ಸಾಯಿಸಬೇಕೆಂಬುದು ವೆಲ್ಲಿಂಗ್ಡನ್ನರ ಆಸೆಯಾತ್ತು. ಲಂಡನ್ನಿನಲ್ಲಿ ಬ್ರಿಟಿಷ್ ಸರ್ಕಾರವು ಗಾಂಧಿಯವರೊಂದಿಗೂ ಭಾರತದ ಪ್ರಧಾನಿಗಳೊಂದಿಗೂ ಒಳ್ಳೆಯ ಮಾತನ್ನೇ ಆಡುತಿದ್ದರೂ ಭಾರತದಲ್ಲಿ ದಬ್ಬಾಳಿಕೆ ಕಡಿಮೆಯಾಗಲಿಲ್ಲ. ಇರ್ವಿನ್‌ರು ಗಾಂಧಿಯವರೊಂದಿಗೆ ಮಾಡಿಕೊಂಡ ಒಪ್ಪಂದನವನ್ನು, ಇರ್ವಿನ್‌ರ

ವೈಸರಾಯ್ ಪದವಿ ಹೊದ ಕೂಡಲೇ ಬ್ರಿಟಿಷ್ ಸರ್ಕಾರದವರು ಮುರಿದರು. ಒಪ್ಪಂದವು ಇನ್ನೂ ನಡೆಯುತ್ತಿರುವಾಗಲೇ ವೆಲ್ಲಿಂಗ್ಡನ್ನರು ಪಂಡಿತ ಜವಾಹರಿಲಾಲ್ ನೆಹರುರವರನ್ನೂ ಗಫಾರ್ ಖಾನರನ್ನೂ, ಇತರ ಬಂಧವಿಮುಕ್ತರಾಗಿದ್ದ ಎಲ್ಲಾ ಕಾಂಗ್ರೆಸ್ಸಿಗರನ್ನೂ ಸೆರೆ ಹಿಡಿದರು. ಬೇರೆ ಬೇರೆ ಆರ್ಡಿನೆನ್ಸ್‌ಗಳನ್ನು ಹೊರಡಿಸಿದರು. ಗಾಂಧಿಯವರು ಹಾಸ್ಯವಾಗಿ "ಈ ಆರ್ಡಿನೆನ್ಸುಗಳು ಭಾರತಕ್ಕೆ ವೆಲ್ಲಿಂಗ್ಡನ್ನರ ಕ್ರಿಸ್‌ಮಸ್ ಪಾರಿತೋಷಕ" ಎಂದರು ಭಾರತಕ್ಕೆ ಹಿಂದಿರಿಗಿದ ಒಂದು ವಾರದೊಳಗಾಗಿ ವೆಲ್ಲಿಂಗ್ಡನ್ನರು ಗಾಂಧಿಯವರನ್ನು ಮತ್ತೆ ಸೆರೆ ಹಿಡಿದರು. ಪುನಃ ಭಾರತದವೆಲ್ಲಾ ಸೆರೆಮನೆಯಾಗಿ, ದೇಶದಲ್ಲಿ ಲಕ್ಷ ಸಂಖ್ಯೆಯಲ್ಲಿ ಜನರು ಕಾಯಿದೆ ಭಂಗಮಾಡಿದರು. ೧೯೩೫ ನೆಯ ಇಸವಿಯ ವೇಳೆಗೆ ಆ ಸತ್ಯಾಗ್ರಹಿಗಳೆಲ್ಲಾ ಬಿಡುಗಡೆ ಹೊಂದಿದರು. ೧೯೩೫ ನೆಯ ಇಂಡಿಯಾ ಆಕ್ಟನ್ನು ಅನುಸರಿಸಿ ಪ್ರಾಂತ್ಯಗಳಲ್ಲೆಲ್ಲಾ ಕಾಂಗ್ರೆಸ್ ಸರ್ಕಾರಗಳು ಏರ್ಪಟ್ಟವು ಆ ಸರ್ಕಾರಗಳು ಪಾನನಿರೋಧ, ಖಾದಿಪ್ರೋತ್ಸಾಹ, ವ್ಯವಸಾಯಗಾರರ ಸಾಲ ನಿರ್ಮೂಲನ ಮುಂತಾದ ದೇಶದ ಏಳಿಗೆಗೆ ಆವಶ್ಯಕವಾದ ಕಾರ್ಯಗಳಲ್ಲಿ ತೊಡಗಿ ರಾಜ್ಯದ ಆಡಳಿತವನ್ನು ನಡೆಸತೊಡಗಿದ್ದವು.

ಜಗತ್ತಿನ ಎರಡನೆಯ ಮಹಾಯುದ್ಧ ಪ್ರಾರಂಭವಾಯಿತು. ಭಾರತೀಯರನ್ನು ಕೇಳದೆ ಭಾರತವನ್ನು ಯುದ್ಧದಲ್ಲಿ ತಳ್ಳಿದುದರಿಂದ ಭಾರತದಲ್ಲಿ ಕಾಂಗ್ರೆಸ್ ಸರ್ಕಾರಗಳು ರಾಜಿನಾಮೆ ಕೊಟ್ಟವು. ಗಾಂಧಿಯವರು ಯೂರೋಪನ್ನು ಯುದ್ಧದಲ್ಲಿ ಮುಳಗಿಸಬಾರದೆಂದು ಹಿಟ್ಲರ್‌ನಿಗೆ ಒಂದು ಕಾಗದ ಬರೆದರು. ಅಹಿಂಸಾ ಮಾರ್ಗದಿಂದ ಹಿಟ್ಲರನನ್ನು ಎದುರಿಸಬೇಕೆಂದು ಜಗತ್ತಿಗೆ ಬೋಧಿಸಿದರು. ಆದರೆ ಹಿಟ್ಲರನ ರಾಕ್ಷಸ ವೃತ್ತಿಗೆ ಎದುರಾಗಿ ಹೋರಾಡುತಿದ್ದ ಬ್ರಿಟಿಷ್ ಸರ್ಕಾರವನ್ನು ಕಷ್ಟದಲ್ಲಿ ಕೆಡಹುವುದು ಅವರ ಇಚ್ಛೆಯಾಗಿರಲಿಲ್ಲ. ಬ್ರಿಟಿಷರು ಭಾರತವನ್ನು ಪರತಂತ್ರದಲ್ಲಿಟ್ಟು, ಯುದ್ಧಪ್ರಯತ್ನಕ್ಕಾಗಿ ಭಾರತವನ್ನು ಸುಲಿಗೆ ಮಾಡುವುದನ್ನೂ ಗಾಂಧಿಯವರು ಒಪ್ಪಲಿಲ್ಲ. ಈಕಾರಣದಿಂದ ಗಾಂಧಿಯವರು ಬ್ರಿಟಿಷರಿಗೆ ನೀತಿಬಲವನ್ನು ಕೊಡದೆ ತಮ್ಮ ಅಸಹಕಾರವನ್ನು

ವ್ಯಕ್ತಿಸತ್ಯಾಗ್ರಹದ ಮೂಲಕ ತೋರ್ಪಡಿಸಿದರು. ಈ ವ್ಯಕ್ತಿಸತ್ಯಾಗ್ರಹವೇ ವಾಕ್‌ಸ್ವಾತಂತ್ರ್ಯ ಚಳುವಳಿಯೂ ಆಯಿತು. ಆ ವೇಳೆಗಾಗಲೇ ಸರ್ಕಾರ ಪಂಡಿತ ನೆಹರೂರವರನ್ನು ಬಂಧಿಸಿತ್ತು. ವ್ಯಕ್ತಿಸತ್ಯಾಗ್ರಹವು ನೀತಿಯ ಹೋರಾಟವಾದುದರಿಂದ ಸತ್ಯಾಗ್ರಹಿಗಳು ಆದರ್ಶವ್ಯಕ್ತಿ ಗಳಾಗಬೇಕಾಗಿತ್ತು. ಆಚಾರ್ಯ ವಿನೋಬಭಾವೆಯವರು ಮೊದಲನೆಯ ಸತ್ಯಾಗ್ರಹಿಯಾದರು. ಸತ್ಯಾಗ್ರಹಿಗಳಾಗುವವರು ಮಹಾತ್ಮರ ಒಪ್ಪಿಗೆ ಪಡಿಯಬೇಕಾಗಿತ್ತು. ಮಹಾತ್ಮರು ಅರ್ಹರಾದವರಿಗೆ ಮಾತ್ರವೇ ಒಪ್ಪಿಗೆ ಕೊಡುತಿದ್ದರು. ಹೀಗೆ ಸರ್ಕಾರ ನಿಧಾನವಾಗಿ ಸ್ವಾತಂತ್ರ್ಯ ಪ್ರೇಮಿಗಳನ್ನೆಲ್ಲಾ ಸೆರೆಯಲ್ಲಿ ಹಾಕಿತು.

೪

ಅನಂತರ ೧೯೪೨ ನೆಯ ಮಾರ್ಚಿಯಲ್ಲಿ ಸರ್‌ಸ್ಟ್ರಾಫರ್ಡ್ ಕ್ರಿಪ್ಸರು ಭಾರತಕ್ಕೆ ಬಂದರು. ಭಾರತೀಯರ ಬಯಕೆಯನ್ನು ಈಡೇರಿಸುವುದಾದರೆ! ಭಾರತೀಯರು ಯುದ್ಧಪ್ರಯತ್ನದಲ್ಲಿ ಸಂಪೂರ್ಣ ಸಹಾನುಭೂತಿ, ಸಹಾಯ ಮಾಡುವುದಾಗಿ ಪುಣೆಯ ಎ. ಐ ಸಿ. ಸಿ. ಯಲ್ಲಿ ತೀರ್ಮಾನವಾಗಿದ್ದಿತು. ಗಾಂಧಿಯವರು ಕಾಂಗ್ರೆಸ್ಸಿನಿಂದ ಹಿಂದೆ ಸರಿದಿದ್ದರು. ಆದರೆ ರಕ್ಷಣೆಯ ಖಾತೆಯ ಸಂಬಂಧದಲ್ಲಿ ಕ್ರಿಪ್ಸರಿಗೂ ಕಾಂಗ್ರೆಸ್ಸಿಗರಿಗೂ ಒಪ್ಪಂದವಾಗಲಿಲ್ಲ. ಕ್ರಿಪ್ಸರು ಬಂದ ದಾರಿ ಹಿಡಿದು ಹಿಂತಿರುಗಿದರು.

ಅಲ್ಲಿಂದ ಮುಂದೆ ಮಹಾತ್ಮ ಗಾಂಧಿಯವರು ದೇಶವನ್ನು ಕೊನೆಯ ಸ್ವಾತಂತ್ರ್ಯ ಹೋರಾಟಕ್ಕೆ ಸಿದ್ಧಗೊಳಿಸತೊಡಗಿದರು. " ಕ್ವಿಟ್ ಇಂಡಿಯ (ಬ್ರಿಟಿಷರೇ ಭಾರತದಿಂದ ಹೊರಡಿ) ' ' ಕರೇಂಗೆಯಾ ಮರೇಂಗೆ (ಮಾಡು ಅಥವಾ ಮಾಡಿ) ' ಎಂಬ ಮಾತುಗಳು ದೇಶದ ಮಂತ್ರಗಳಾದವು. ದೇಶವು ಪೂರ್ಣ ಉತ್ಸಾಹದಿಂದ ಹೋರಾಟ ಮಾಡಲು ಸನ್ನದ್ಧವಾಗಿತ್ತು. ಭಾರತೀಯರಿಗೆಲ್ಲಾ ಆ ಅಂತಿಮ ಹೋರಾಟ ಒಳ್ಳೆಯ ಸಂಭ್ರಮವಾಗಿತ್ತು. ಅದರ ತ್ಯಾಗ ಕಷ್ಟನಷ್ಟಗಳು ಯಾರಿಗೂ ತಿಳಿಯದೆ ಇರಲಿಲ್ಲ. ಆದರೂ ಸ್ವಾತಂತ್ರ್ಯವೆಂಬ ಅಮೃತ, ತ್ಯಾಗ ಮರಣಗಳಿಲ್ಲದೆ ಸಾಧ್ಯವಿಲ್ಲವೆಂದು ಎಲ್ಲರೂ ಅರಿತಿದ್ದರು.

೧೯೪೨ ನೆಯ ಆಗಸ್ಟ್‌ನಲ್ಲಿ ಬೊಂಬಾಯಿಯ ಎ. ಐ ಸಿ. ಸಿ. ಸಭೆಯಲ್ಲಿ "ಭಾರತದಿಂದ ಹೊರಡಿ" ಎಂಬ ತೀರ್ಮಾನ ಮಂಜೂರಾಗುವುದನ್ನು ದೇಶ ಉತ್ಸಾಹದಿಂದ ನಿರೀಕ್ಷಿಸುತ್ತಿದ್ದಿತು.

ಬೊಂಬಾಯಿ ಎ. ಐ ಸಿ. ಸಿ. ದೇವತೆಗಳ ನೋಟಕ್ಕೆ ಅರ್ಹವಾದ ದೃಶ್ಯ. ಗಾಂಧಿಯವರು ನಾಲ್ಕಾರು ತಿಂಗಳುಗಳಿಂದ ದೇಶವನ್ನು "ಕರೇಂಗೆ ಯಾ ಮರೇಂಗೆ" ಕಾರ್ಯಕ್ರಮಕ್ಕೆ ಸಿದ್ಧಗೊಳಿಸಿದ್ದರು. ಎರಡು ದಿನಗಳಿಗೆ ಮುಂಚೆ ವರ್ಕಿಂಗ್ ಕಮಿಟಿಯ ತೀರ್ಮಾನ ಹೊರಬಿದ್ದಿತ್ತು. "ಭಾರತಕ್ಕೆ ಪರಕೀಯರ ಧಾಳಿಯ ಭಯ ಸನ್ನಿಹಿತವಾಗಿದೆ. ಭಾರತ ಸ್ವತಂತ್ರವಾದ ಹೊರತು ಪರರ ಧಾಳಿಯನ್ನು ಮೆಟ್ಟಿಸಲು ಸಾಧ್ಯವಿಲ್ಲ. ಆದುದರಿಂದ ಸ್ವಾತಂತ್ರ್ಯಕ್ಕಾಗಿ ಕಾಂಗ್ರೆಸ್ಸು ಚಳುವಳಿ ಹೂಡುವುದು. ಕಳೆದ ಇಪ್ಪತ್ತು ವರ್ಷಗಳಿಂದ ದೇಶ ಗಳಿಸಿರುವ ಅಹಿಂಸಾಶಕ್ತಿಯಿಂದ ಹೋರಾಡುವುದು" ಎಂಬುದೇ ವರ್ಕಿಂಗ್ ಕಮಿಟಿಯ ತೀರ್ಮಾನವಾಗಿತ್ತು.

ಕಾಂಗ್ರೆಸ್ ಅಧ್ಯಕ್ಷ ಮೌಲಾನಾ ಆಜಾದ್‌ರು ಪ್ರಾರಂಭಭಾಷಣ ಮಾಡಿದರು. ಅನಂತರ ಸತ್ಯಾಗ್ರಹ ಚಳುವಳಿಯ ನಾಯಕರಾದ ಗಾಂಧಿಯವರು, 'ಭಾರತದಿಂದ ತೊಲಗಿ' ಎಂಬ ಠರಾವನ್ನು ಮಂಡಿಸುತ್ತಾ ಎ. ಐ. ಸಿ ಸಿ. ಸದಸ್ಯರನ್ನು ಕುರಿತು ಹೀಗೆ ಹೇಳಿದರು: "ಕಾಂಗ್ರೆಸ್ ಸಂಸ್ಥೆ ಭಾರತದ ಪೂರ್ಣ ಪ್ರತಿನಿಧಿ. ನಮ್ಮ ಕರ್ತವ್ಯವನ್ನು ನಾವು ಈ ಕಾಲದಲ್ಲಿ ಮಾಡದಿದ್ದರೆ ಕರ್ತವ್ಯಚ್ಯುತರಾಗುತ್ತೇವೆ. ಇಂಗ್ಲೆಂಡು ಅಮೇರಿಕಾಗಳು ಮಾತ್ರ ಹೋರಾಡುವುದು; ನಮ್ಮ ದೇಶದ ಹಣವನ್ನು ಮಾತ್ರ ದೋಚಿಕೊಂಡು ಹೋಗುವುದು; ಇಷ್ಟೇ ಆದರೆ ಅದು ನಮಗೆ ಹಿತಕರವಲ್ಲ. ಯುದ್ಧ ನಮ್ಮ ಯುದ್ಧವಾದರೆ ನಮ್ಮ ನಿಜವಾದ ಶಕ್ತಿಯನ್ನು ತೋರಿಸಬಹುದು ಆಗ ನಮ್ಮ ಒಂದು ಮಗುವೂ ಸಹ ಧೀರವಾಗುತ್ತದೆ. ನಮ್ಮ ಸ್ವಾತ್ರ್ಯವನ್ನು ನಾವು ಹೋರಾಡಿಯೇ ಸಂಪಾದಿಸಬೇಕು. ಅದು ಅಂತರಿಕ್ಷದಿಂದ ಬೀಳುವುದಿಲ್ಲ. ನಾವು ತಕ್ಕಷ್ಟು ತಾಗಮಾಡಿ ನಮ್ಮ ಶಕ್ತಿಯನ್ನು ತೋರಿಸಿದರೆ, ಬ್ರಿಟಿಷರು ಸ್ವಾತಂತ್ರ್ಯವನ್ನು ಕೊಡುವರೆಂಬುದನ್ನು ನಾನು ಬಲ್ಲೆ.

ಬ್ರಿಟಿಷರನ್ನು ಕಂಡರೆ ನಮ್ಮ ಹೃದಯದಲ್ಲಿರುವ ದ್ವೇಷ ಭಾವನೆಯನ್ನು ಕಿತ್ತು ಒಗೆಯಬೇಕು. ನಾನು ಹಿಂದೆ ಇದ್ದುದಕಿಂತ ಈಗ ಇನ್ನೂ ಹೆಚ್ಚಾಗಿ ಬ್ರಿಟಿಷರ ಸ್ನೇಹಿತ. ಯಾಕೆಂದರೆ ಈಗ ಬ್ರಿಟಿಷರು ಕಷ್ಟದಲ್ಲಿ ದ್ದಾರೆ. . . . . . .

ದೇಶವನ್ನು ಸ್ವತಂತ್ರಮಾಡುವ ಧರ್ಮಯುದ್ಧದ ಚಳುವಳಿಯಲ್ಲಿ ತೊಡಗುವಾಗ ಗಾಂಧಿಯವರು ತಮಗೆ ಯಾರಲ್ಲಿಯೂ ದ್ವೇಷವಿಲ್ಲ ವೆಂಬುದನ್ನು ಸಾರಿ ಹೇಳಿದರು "ಕೋಪದಲ್ಲಿ ಬ್ರಿಟಿಷರು ಉದ್ರೇಕ ವಾಗುವಂತಹ ಕೆಲಸಗಳನ್ನು ಮಾಡಬಹುದು. ಆದರೂ ನೀವು ಹಿಂಸಾವೃತ್ತಿಯುಳ್ಳವರಾಗಿ ಅಹಿಂಸೆಯನ್ನು ನಾಚಿಕೆಗೊಳಿಸಬೇಡಿ. ಹೀಗಾಗುವುದಾದರೆ ನಾನು ಎಲ್ಲಿದ್ದರೂ ಪ್ರಾಣಬಿಡುವೆನು. ಆ ಪಾಪ ನಿಮ್ಮ ತಲೆಯ ಮೇಲೆ, ಇದು ನಿಮಗೆ ಸರಿಯಾ ಅರ್ಥವಾಗಬೇಕು. ಇಲ್ಲವಾದರೆ ಈ ಠರಾವನ್ನು ವಿರೋಧಿಸುವುದೇ ಲೇಸು."

ಠರಾವನ್ನು ಸಭೆಯ ಮುಂದೆ ಇಟ್ಟಾಗ ಅದಕ್ಕೆ ಬಹುಮತದ ಒಪ್ಪಿಗೆ ದೊರೆಯಿತು. ಕೋಲಾಹಲದೊಡನೆ ಸಭೆಯು ಠರಾವನ್ನು ಅನುಮೋದಿಸಿತು. ಗಾಂಧಿಯವರು ಕೊನೆಯಲ್ಲಿ ಹೀಗೆ ಹೇಳಿದರು: "ಈ ಹೋರಾಟದಲ್ಲಿ ನಿಮ್ಮ ನಾಯಕನಾಗುವ ಜವಾಬ್ದಾರಿಯನ್ನು ನಾನು ವಹಿಸುತ್ತೇನೆ. ನಾನು ನಿಮ್ಮ ಅಧಿಪತಿಯಲ್ಲ, ಸೇವಕ. ಯಾರು ಉತ್ತಮನಾದ ಸೇವಕನೋ ಅವನೇ ಮುಖಂಡನಾಗುತ್ತಾನೆ. ನಾನು ದೇಶದ ಮುಖ್ಯ ಸೇವಕ."

ವೈಸ್‌ರಾಯರನ್ನು ನೋಡಿ ಅವರಿಂದ ಸಮರ್ಪಕವಾದ ಉತ್ತರ ದೊರಕದಿದ್ದರೆ ಅನಂತರ, ಹೋರಾಟವನ್ನು ಪ್ರಾರಂಭಿಸುವುದು, ಗಾಂಧಿಯವರ ಗುರಿಯಾಗಿತ್ತು. ವೈಸ್‌ರಾಯರು ಮನಸ್ಸು ಮಾಡಿದರೆ ಚಳುವಳಿಯೇ ಆಗದಂತೆ ಮಾಡಬಹುದೆಂಬುದೂ ಗಾಂಧಿಯವರ ಆಸೆಯಾಗಿತ್ತು. ಆದುದರಿಂದ ಅವರು ಹೀಗೆ ಹೇಳಿದರು: "ನಮ್ಮ ಹೋರಾಟ ಈಗ ಆರಂಭವಾಗುವುದಿದೆ. ಚಳುವಳಿ ಪ್ರಾರಂಭವಾಗು ವುದಕ್ಕೆ ಮುಂಚೆ ವೈಸ್‌ರಾಯರಿಗೆ ಕಾಗದ ಬರೆದು ಪ್ರತ್ಯುತ್ತರವನ್ನು ನಿರೀಕ್ಷಿಸುತ್ತೇನೆ. ಅದಕ್ಕೆ ಒಂದು ವಾರವೋ ಎರಡು ವಾರವೋ

ಮೂರು ವಾರವೋ ಆಗಬಹುದು. ನಮ್ಮ ಪ್ರಯತ್ನಗಳೆಲ್ಲಾ ವ್ಯರ್ಥವಾದರೆ ಚಳುವಳಿ ನಡೆಸಲೇಬೇಕು. ಸೋಲಲಿ ಗೆಲ್ಲಲಿ ಮುಳುಗಲಿ ತೇಲಲಿ ಹೋರಾಟವೇ ಈಗ ನಮ್ಮ ಗುರಿ."

ವೈಸ್‌ರಾಯರು ಮಹಾತ್ಮ ಗಾಂಧಿಯವರ ಪತ್ರಕ್ಕಾಗಿ ಕಾಯಲೇ ಇಲ್ಲ. ತಾ|| ೯-೮-೪೨ರ ಬೆಳಗ್ಗೆ ಮಹಾತ್ಮ ಗಾಂಧಿಯವರನ್ನೂ ಇತರ ವರ್ಕಿಂಗ್ ಕಮಿಟಿ ಸದಸ್ಯರನ್ನೂ ಸರ್ಕಾರದವರು ಬಂಧಿಸಿದರು. ಶ್ರೀಮತಿ ಕಸ್ತೂರಿ ಬಾ ಗಾಂಧಿ, ಪ್ಯಾರಿಲಾಲ್ ಮೊದಲಾದ ಗಾಂಧಿ ಕುಟುಂಬದವರೂ ಬಂಧಿತರಾದರು. ಸರ್ಕಾರದವರು ಕಾಂಗ್ರೆಸ್‌ನವರಾರನ್ನೂ ಬಿಡಲಿಲ್ಲ ಭಾರತವು ದೊಡ್ಡ ಸೆರೆಮನೆಯೇ ಆಯಿತು. ಅನೇಕ ಕಡೆ ರೊಚ್ಚಿಗೆದ್ದ ಜನ ಹಿಂಸಾಕೃತ್ಯದಲ್ಲಿ ತೊಡಗಿದರು. ಸರ್ಕಾರದವರು ಯುದ್ಧಮಾಡುವಂತೆ ಜನರ ಮೇಲೆ ದಬ್ಬಾಳಿಕೆ ನಡೆಸಿದರು. ಜನರ ಹಿಂಸಾಕೃತ್ಯಗಳು ಖಂಡನೀಯವಾಗಿದ್ದರೂ ಸರ್ಕಾರದ ದಬ್ಬಾಳಿಕೆ ಕಾರ್ಯವನ್ನು ವಿವರಿಸಲು ಪದಗಳೇ ಇಲ್ಲ.

ಸೆರೆಮನೆಯನ್ನು ಸೇರಿದೊಡನೆಯೇ, ಗಾಂಧಿಯವರು ವೈಸ್‌ರಾಯರಿಗೆ ಮತ್ತೆ ಪತ್ರಗಳನ್ನು ಬರೆಯತೊಡಗಿದರು. "ನೀವು ದುಡುಕಿದಿರಿ, ತಪ್ಪು ಮಾಡಿದಿರಿ" ಎಂದರು. ಸರ್ಕಾರದವರು ಕಾಂಗ್ರೆಸ್ಸಿನ ಮೇಲೆ ತಪ್ಪುಹಾಕಿ ಅದು ಜಪಾನರ ಪಕ್ಷಪಾತಿ ಎಂದು ಪ್ರಕಟಿಸಿದರು. ಗಾಂಧಿಯವರು ಆ ಆಪಾದನೆಗಳನ್ನೆಲ್ಲಾ ಖಂಡಿಸಿದುದಲ್ಲದೆ, ದೇಶದಲ್ಲಿ ಹಿಂಸಾ ಪ್ರವೃತ್ತಿಗೆ ಸರ್ಕಾರದ ನಿರಂಕುಶವರ್ತನೆಯೇ ಕಾರಣವೆಂದು ಸಾಧಿಸಿದರು. ಸರ್ಕಾರದವರು ಗಾಂಧಿ, ಜಪಾನರ ಪರವಾದ ಪಂಚಮದಳ ಎಂದು ಸಾಧಿಸತೊಡಗಿದರು. ಸರ್ ಸ್ಟ್ಯಾಫರ್ಡ್ ಕ್ರಿಪ್ಸ್‌ರೂ ಸಹ ಗಾಂಧಿಯವರ ಮೇಲೆ ಅಪಪ್ರಚಾರ ಮಾಡಲು ಹಿಂದೆಗೆಯಲಿಲ್ಲ. ಆದರೆ ಜಗತ್ತಿನ ಕಣ್ಣಿಗೆ ಮಣ್ಣೆರಚಲು ಇಂಗ್ಲೆಂಡಿಗೆ ಸಾಧ್ಯವಾಗಲಿಲ್ಲ. ಭಾರತದಲ್ಲಿ ಇಂಗ್ಲೆಂಡು ನಡೆದುಕೊಂಡ ರೀತಿಯಿಂದ ಜಗತ್ತಿನಲ್ಲಿ ಇಂಗ್ಲೆಂಡಿಗೆ ಮನ್ನಣೆ ಕಡಮೆಯಾಗಿದ್ದಿತು. ಲೂಯಿಫಿಷರ್ ಎಂಬ ಅಮೆರಿಕದ ಪ್ರಸಿದ್ಧ ಪತ್ರಿಕೋದ್ಯೋಗಿ ಗಾಂಧಿಯವರ ವಾದ ಹೇಗೆ ನ್ಯಾಯವಾದುದೆಂಬುದನ್ನು ಜಗತ್ತಿಗೆ ತೋರಿಸಿದರು. ಫೀಲ್ಡ್‌ಮಾ

ರ್ಚಲ್ ಸ್ಮಟ್ಸ್‌ರು ಲಂಡನ್ನಿನಲ್ಲಿ ಮಾತನಾಡುತ್ತಾ "ಗಾಂಧಿ ಪಂಚಮ ದಳ ಎನ್ನುವುದು ಬರಿಯ ಅರ್ಥವಿಲ್ಲದ ಮಾತು" ಎಂದರು.

ಗಾಂಧಿಯುವರು ವೈಸ್‌ರಾಯರಿಗೆ "ನಮ್ಮ ವಿಚಾರಣೆ ನಡೆಸಿ. ಅಂತರ ರಾಷ್ಟ್ರೀಯ ಸಮಿತಿಯ ಮುಂದೆ ಬೇಕಾದರೂ ವಿಚಾರಣೆ ನಡಸಿ" ಎಂದು ಕೇಳಿದರು. ಭಾರತ ಸರ್ಕಾರಕ್ಕೂ ಗಾಂಧಿಯವರಿಗೂ ಪತ್ರವ್ಯವಹಾರ ನಡೆಯಿತು. ಲಿನ್‌ಲಿತ್‌ಗೊ, ಚರ್ಚಿಲ್, ಅಮೆರಿ ತ್ರಿಮೂರ್ತಿಗಳು ಹಠವಾದಿಗಳಾಗಿ ಕುಳಿತರು. ಹೀಗೆ ವಿಚಾರಣೆಯನ್ನೂ ಮಾಡದೆ, ಬಿಕ್ಕಟ್ಟನ್ನು ಪರಿಹರಿಸಲು ಸಹ ಅವಕಾಶಕೊಡದೆ ಬ್ರಿಟಿಷ್ ಸರ್ಕಾರದವರು ಲಕ್ಷಾವಧಿ ಕಾಂಗ್ರೆಸ್ಸಿಗರನ್ನು ಬಂಧಿಸಿದುದನ್ನು ಪ್ರತಿಭ ಟಿಸುವುದಕ್ಕಾಗಿ ಗಾಂಧಿಯವರು ೧೯೪೩ನೆಯ ಫೆಬ್ರುವರಿ ೧೦ನೆಯ ತಾರೀಖಿನಿಂದ ಮೂರು ವಾರಗಳ ಉಪವಾಸವನ್ನು ಪ್ರಾರಂಭಿಸಿದರು. ಉಪವಾಸದ ಸುದ್ದಿ ಹರಡಿದ ಕೂಡಲೇ ಜಗತ್ತಿನಲ್ಲೆಲ್ಲಾ ಅದರ ಪ್ರತಿ ಕ್ರಿಯೆಯುಂಟಾಯಿತು. ಭಾರತಸರ್ಕಾರದ ಕೆಲವು ಮಂತ್ರಿಗಳು ರಾಜೀ ನಾಮೆ ಕೊಟ್ಟರು. ಭಾರತೀಯರೆಲ್ಲಾ ಹೊಸ ದೆಹಲಿಯಲ್ಲಿ ಸಭೆ ಸೇರಿ ಪಕ್ಷ ಪಂಗಡಗಳ ವ್ಯತ್ಯಾಸವಿಲ್ಲದೆ, ಗಾಂಧಿಯವರನ್ನು ಬಿಡುಗಡೆ ಮಾಡಬೇಕೆಂದು ಒತ್ತಾಯ ಮಾಡಿದರು. ಇಂಗ್ಲೆಂಡ್ ಅಮೆರಿಕದ ಪತ್ರಿಕೆಗಳೂ ಗಾಂಧಿಯವರನ್ನು ಬಿಡುಗಡೆ ಮಾಡಬೇಕೆಂದು ಬರೆ ದುವು ಆದರೆ ಚರ್ಚಿಲ್ ಸರ್ಕಾರ ಯಾವುದಕ್ಕೂ ಒಡಂಬಡಲಿಲ್ಲ. ಪರಮಾತ್ಮನ ದಯದಿಂದ ಗಾಂಧಿಯವರು ೨೧ ದಿನದ ಉಪವಾಸವನ್ನು ಯಶಸ್ವಿಯಾಗಿ ಆಗಾಖಾನ್ ಅರಮನೆಯಲ್ಲಿಯೇ ಮುಗಿಸಿದರು.

೫

ಮಹಾಯುದ್ಧ ಮುಗಿಯಿತು. ಇಂಗ್ಲೆಂಡಿನಲ್ಲಿ ಕೂಲಿಕಾರರ ಸರ್ಕಾರವು ಅಧಿಕಾರಕ್ಕೆ ಬಂದಿತು. ೧೯೪೬ನೆಯ ಸೆಪ್ಟೆಂಬರ್‌ನಲ್ಲಿ ಜವಹರ್‌ಲಾಲರ ನೇತೃತ್ವದಲ್ಲಿ ತಾತ್ಕಾಲಿಕ ರಾಷ್ಟ್ರಸರ್ಕಾರ ಸ್ಥಾಪನೆ ಯಾಯಿತು. ೧೯೪೭ನೇ ಆಗಸ್ಟ್ ೧೫ರಲ್ಲಿ ಭಾರತ ಸ್ವತಂತ್ರ ಡೊಮಿ ನಿಯನ್ ಆಯಿತು. ಮಹಾತ್ಮಾ ಗಾಂಧಿಯವರು ಹೇಳುತ್ತಿದ್ದಂತೆ ೧೯೪೨ರ ಸತ್ಯಾಗ್ರಹವೇ ಭಾರತದ ಸ್ವಾತಂತ್ರ್ಯ ಹೋರಾಟದ ಕೊನೆಯ

ಹೋರಾಟವಾಯಿತು. ಜಗತ್ತಿನ ಅತಿ ಪ್ರಬಲವಾದ ಬ್ರಿಟಿಷ್ ರಾಷ್ಟ್ರ- ಅಹಿಂಸಾ ಯುದ್ಧಕ್ಕೆ ತಲೆಬಾಗಿತು. ಒಂದು ತೊಟ್ಟು ರಕ್ತವನ್ನೂ ಹರಿಸದೆ ಸ್ವಾತಂತ್ರ್ಯವನ್ನು ಸಂಪಾದಿಸಿದ ರಾಷ್ಟ್ರ ಜಗತ್ತಿನಲ್ಲಿ ಭಾರತ ಒಂದೇ. ಪೂರ್ವಕಾಲದ ಋಷಿಗಳಂತೆ ಮಹಾತ್ಮ ಗಾಂಧಿಯವರ ತಪಃಫಲದಿಂದ ಇದು ಸಾಧ್ಯವಾಯಿತು. ಸತ್ಯ ಅಹಿಂಸೆಗಳನ್ನು ಗಾಂಧಿ ಯವರು ನಿತ್ಯವ್ಯವಹಾರದ ಬಳಕೆಗೆ ತಂದರು. ಭಾರತವು ರಾಜಕೀಯ ಕ್ಷೇತ್ರದಲ್ಲಿ ಆ ಮಟ್ಟದಲ್ಲಿ ಕೆಲಸ ಮಾಡುವಂತೆ ಪ್ರೇರಿಸಿದರು. ಕೊನೆ ಯಲ್ಲಿ ಹಿಂದೂ ಮುಸಲ್ಮಾನರ ಐಕ್ಯಕ್ಕಾಗಿ, ಯೇಸುಕ್ರಿಸ್ತನಂತೆ, ತಮ್ಮ ಪ್ರಾಣವನ್ನೇ ಬಲಿಕೊಟ್ಟರು ಅವರ ಆದರ್ಶವನ್ನು ಅನುಸರಿಸಿದರೆ ಮಾತ್ರ ಭಾರತವು ತಾನು ಗಳಿಸಿಕೊಂಡಿರುವ ಸ್ವಾತಂತ್ರ್ಯವನ್ನು ಉಳಿ ಸಿಕೊಳ್ಳಬಲ್ಲದು.

ಪರಮಾತ್ಮನು ಭಾರತವನ್ನು ಆ ಮಾರ್ಗದಲ್ಲಿ ನಡೆಸಲಿ.

---

# ೮. ಕರ್ಮಯೋಗಿ

## ಸ್ವಾತಂತ್ರ್ಯ ಮೊದಲ ಧರ್ಮ

ಗಾಂಧಿಯವರನ್ನು ಮೊದಲು ನೋಡಿದ ಕೂಡಲೆ ಅವರು ಕರ್ಮಯೋಗಿ ಎಂಬುದು ಯಾರಿಗಾದರೂ ಗೊತ್ತಾಗುತ್ತದೆ. ಕರ್ಮ ಮಾಡುತ್ತಲೇ ಎಷ್ಟು ವರ್ಷ ಬೇಕಾದರೂ ಜೀವಿಸಿರಬಹುದು ಎಂಬ ಉಪನಿಷತ್ ವಾಕ್ಯ ಗಾಂಧಿಯವರ ಬಾಳಿಗೆ ಪೂರ್ಣವಾಗಿ ಅನ್ವಯಿಸುತ್ತದೆ. ಭಾರತದ ಕಲ್ಯಾಣ, ದರಿದ್ರನಾರಾಯಣನ ಸೇವೆ, ಜಗತ್ತಿನ ಮಂಗಳ ಕೊನೆಯಲ್ಲಿ ಈ ಕರ್ಮ ತಪಸ್ಸುಗಳ ಮೂಲಕವೇ ಭಗವಂತನ ಸಾಕ್ಷಾತ್ಕಾರ, ಇವೇ ಈ ಕರ್ಮಯೋಗಿಯ ಧ್ಯೇಯಗಳು. ಈ ಧ್ಯೇಯದ ಸಾಧನೆ ಸುಲಭವಲ್ಲ. ಇದು ಅಹಂಕಾರ ಮಮಕಾರಗಳಿಂದ ದೊರೆಯುವುದಲ್ಲ. ಇದು ಜಗತ್ತಿನಿಂದ ಬೇರೆಯಾಗಿ ಹಿಮಾಲಯದ ತುದಿಯಲ್ಲಿಯೋ ಗವಿಯಲ್ಲಿಯೋ ಕುಳಿತುಕೊಳ್ಳುವುದರಿಂದಲೂ ಸಾಧ್ಯವಿಲ್ಲ. "ದೇವರನ್ನು ಎದುರಿಗೇ ನೋಡಬೇಕೆಂಬುದು ನನ್ನ ಗುರಿ. ದೇವರೇ ಸತ್ಯ, ಆ ದೇವರನ್ನು ಕಾಣುವ ಮಾರ್ಗ ಪ್ರೇಮ. ನಾನು ಬಾಳುವುದು ಭಾರತದ ಸ್ವಾತಂತ್ರ್ಯಕ್ಕಾಗಿ. ನಾನು ಸಾಯುವುದು ಭಾರತ ಸ್ವಾತಂತ್ರ್ಯಕ್ಕಾಗಿ; ಯಾಕೆಂದರೆ ಭಾರತ ಸ್ವಾತಂತ್ರ್ಯವು ಸತ್ಯದ ಅಂಗ. ಸ್ವತಂತ್ರಭಾರತ ಮಾತ್ರ ಭಗವಂತನನ್ನು ಸರಿಯಾಗಿ ಪೂಜಿಸಬಲ್ಲದು. ಭಾರತದಲ್ಲಿ ಜನಿಸಿದ ನಾನು ಭಾರತದ ಸೇವೆಗೆ ಅರ್ಹ. ನನ್ನ ಮೊದಲನೆಯ ಕರ್ತವ್ಯ ಭಾರತದ ಸೇವೆ. ಆದರೆ ಇದು ಸಂಕುಚಿತವಾದ ಮಾರ್ಗವಲ್ಲ. ಈ ನನ್ನ ದೇಶಭಕ್ತಿಯಿಂದ ಯಾವ ರಾಜ್ಯಕ್ಕೂ ಹಿಂಸೆಯಿಲ್ಲ. ನಿಜವಾಗಿ ನೋಡಿದರೆ ಇದರಿಂದ ಜಗತ್ತಿಗೆ ಮಂಗಳ; ನನ್ನ ಮಾರ್ಗದಲ್ಲಿ ಭಾರತ ಸ್ವಾತಂತ್ರ್ಯವನ್ನು ಗಳಿಸಿದರೆ ಅದರಿಂದ ಜಗತ್ತಿಗೆ ನೋವಿಲ್ಲ."

ಪಾರತಂತ್ರ್ಯದಲ್ಲಿರುವ ರಾಷ್ಟ್ರದಲ್ಲಿ, ಸ್ವಾತಂತ್ರ್ಯಸಾಧನೆ ಎಂತವರಿಗೂ ಮೊದಲನೆಯ ಕರ್ತವ್ಯ. ಯೋಗಿಗೂ ಇದೇ ಕರ್ತವ್ಯ. ಇದೇ

ಮೊದಲನೆಯ ಧರ್ಮ. ಸ್ವಾತಂತ್ರ್ಯವಿಲ್ಲದ ರಾಷ್ಟ್ರ ಏನನ್ನೂ ಸಾಧಿಸಲಾರದು. ಅದು ಜೀವವಿಲ್ಲದ ದೇಹದಂತೆ. ಯುದ್ಧಕಾಲದಲ್ಲಿ ಕವಿ ತನ್ನ ಕಾವ್ಯ ಕೆಳಗಿಟ್ಟು ಯುದ್ಧಕ್ಕೆ ಹೊರಡಬೇಕು. ವಕೀಲರೂ ವಿದ್ಯಾರ್ಥಿಗಳೂ ಪುಸ್ತಕ ಕೆಳಗಿಟ್ಟು ಯುದ್ಧಕ್ಕೆ ಹೊರಡಬೇಕು. ಯುದ್ಧ ಮುಗಿದ ಮೇಲೆ ಕವಿ ತನ್ನ ಚೈತನ್ಯದಾಯಕವಾದ ಹಾಡನ್ನು ಹಾಡಬೇಕು. ಮನೆಗೆ ಬೆಂಕಿ ಬಿದ್ದಾಗ ಮನೆಯವರೆಲ್ಲಾ ಬಿಂದಿಗೆಗಳಲ್ಲಿ ನೀರು ತೆಗೆದುಕೊಂಡು ಓಡುತ್ತಾರೆ. ಇಂದು ಭಾರತ ಬೆಂಕಿ ಬಿದ್ದ ಮನೆಯಂತಿದೆ. ಆದುದರಿಂದ ಭಾರತದಲ್ಲಿ ಜನಿಸಿದ ಪ್ರತಿ ಒಬ್ಬನಿಗೂ ಭಾರತ ಸ್ವಾತಂತ್ರ್ಯಸಾಧನೆಯೇ ಮೊದಲನೆಯ ಧರ್ಮ. ಇಂದಿನ ಭಾರತೀಯನಿಗೆ ಇದಕ್ಕಿಂತ ದೊಡ್ಡ ಧರ್ಮವಿಲ್ಲ. ದೇವರನ್ನು ನೋಡುವುದೂ ಇದರಷ್ಟು ಪುಣ್ಯವಾದುದಲ್ಲ. ಸ್ವಾತಂತ್ರಸಾಧನೆಗೆ ವಿನಿಯೋಗವಾಗದ ಯಾವ ಶಕ್ತಿಯಿಂದಲೂ ಪ್ರಯೋಜನವಿಲ್ಲ. ಲೋಕಮಾನ್ಯ ತಿಲಕರು ಇದಕ್ಕೆ ದೊಡ್ಡ ಆದರ್ಶ.

## ತಿಲಕರ ಆದರ್ಶ

"ತಿಲಕರ ಮಿತ್ರರೊಬ್ಬರು ಒಂದು ಸಲ ಅವರನ್ನು "ಬಲವಂತರಾಯರೇ ಸ್ವರಾಜ್ಯ ಸರ್ಕಾರದಲ್ಲಿ ನಿಮ್ಮ ಅಧಿಕಾರ ಯಾವುದು? ಮುಖ್ಯಮಂತ್ರಿಯಾಗುತ್ತೀರೋ ಅಥವ ವಿದೇಶಾಂಗ ಮಂತ್ರಿಯಾಗುತ್ತೀರೋ? ಎಂದು ಕೇಳಿದರು, ತಿಲಕರು, "ಇಲ್ಲ. ಸ್ವರಾಜ್ಯ ಸಾಧಿಸಿದ ಕೂಡಲೇ ನಾನು ದೇಶೀಯ ಕಾಲೇಜಿನಲ್ಲಿ ಗಣಿತದ ಪ್ರೊಫೆಸರ್ ಆಗಿ, ಸಾರ್ವಜನಿಕ ಜೀವನದಿಂದ ನಿವೃತ್ತನಾಗುತ್ತೇನೆ. ನನಗೆ ರಾಜಕಾರಣವೆಂದರೆ ದ್ವೇಷ. ಡಿಫರೆನ್ಸಿಯಲ್ ಕಾಲ್‌ಕುಲಸ್ (Differential Calculus) ಮೇಲೆ ಒಂದು ಪುಸ್ತಕ ಬರೆಯಬೇಕೆಂದು ನನಗೆ ಇನ್ನೂ ಆಸೆ. ದೇಶದ ಸ್ಥಿತಿ ಬಹು ಹೀನವಾಗಿದೆ. ನೀವು ಯಾರೂ ಅದಕ್ಕಾಗಿ ಯಾವ ಕೆಲಸವನ್ನೂ ಮಾಡುತ್ತಿಲ್ಲ. ಆದುದರಿಂದ ನಾನೇ ಮಾಡಬೇಕಾಗಿದೆ" ಎಂದರು.

"ಬೊಂಬಾಯಿನಲ್ಲಿ ಅನೇಕ ಮೇಧಾವಿಗಳ ಒಂದು ಸಭೆ ನೆರೆದಿದ್ದಿತು. ತಿಲಕರು ಚಾಲ್‌ಡೀನ್ (Chaldean) ನಾಗರೀಕತೆಯ

ಮೇಲೆ ಸ್ವತಂತ್ರವಾದ ಶ್ರೇಷ್ಠವಾದ ಒಂದು ಉಪನ್ಯಾಸ ಮಾಡಿದರು. ಆ ನಾಗರೀಕತೆಗೂ ಭಾರತದ ನಾಗರೀಕತೆಗೂ ಇರುವ ಸಮಾನತೆಗಳನ್ನು ತೋರಿಸಿದರು. ಸಭೆ ಮುಗಿದಮೇಲೆ ಸಭೆಯ ಅಧ್ಯಕ್ಷರಾಗಿದ್ದ ಒಬ್ಬ ಪಾರಸಿ ಗೃಹಸ್ಥರು "ತಿಲಕರೆ, ನಿಮ್ಮ ಶಕ್ತಿಗಳನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದೀರಿ. ಇಂತಹ ತೀಕ್ಷ್ಣವಾದ ಬುದ್ಧಿಯುಳ್ಳ ನೀವು, ಇತಿಹಾಸಶೋಧನೆಗೆ ನಿಮ್ಮ ಬುದ್ಧಿಯನ್ನೆಲ್ಲಾ ವಿನಿಯೋಗಿಸಿದರೆ, ನಿಮ್ಮ ಕೀರ್ತಿ ಜಗತ್ತಿನಲ್ಲೆಲ್ಲಾ ಹರಡುವುದು. ಇದನ್ನು ಬಿಟ್ಟು ಈ ರಾಜಕೀಯದ ಗೊಂದಲದಲ್ಲಿ ಯಾಕೆ ತೊಳಲುತ್ತೀರಿ?" ಎಂದರು ತಿಲಕರು ಹೀಗೆ ಜವಾಬು ಕೊಟ್ಟರು. "ಭಾರತ ಬಂಜೆ ಹೆಣ್ಣಲ್ಲ. ಸ್ವರಾಜ್ಯ ಬಂದಮೇಲೆ ನನ್ನಂತಹ ಸಾವಿರಾರು ಮೇಧಾವಿಗಳು ಉಂಟಾಗುವರು. ಇವತ್ತು ಬೇಕಾಗಿರುವುದು ಸ್ವರಾಜ್ಯ ಸಾಧನೆ. ಸ್ವರಾಜ್ಯ ಸಾಧನೆಗಾಗಿ ಪ್ರತಿಯೊಬ್ಬ ಭಾರತೀಯನೂ ಸಮಸ್ತವನ್ನೂ ತೊರೆಯಬೇಕು."

"ಬೊಂಬಾಯಿನಲ್ಲಿ ರಾಷ್ಟ್ರಮಾತಾ ಪತ್ರಿಕೆಯನ್ನು ಲೋಕಮಾನ್ಯರು ಸ್ಥಾಪಿಸಿದಾಗ, ಆಫೀಸಿಗೆ ಕುರ್ಚಿ ಮೇಜ ಬೇಕು ಎಂಬ ಗದ್ದಲವೆದ್ದಿತು. ತಿಲಕರು ಹೀಗೆ ಹೇಳಿದರು 'ಕೇಸರಿ ಮತ್ತು ಮರಾಠ ಪತ್ರಿಕೆಗಳನ್ನು ನಾವು ಸ್ಥಾಪಿಸಿದಾಗ ಈ ಗೌರವ ಚಿನ್ಹೆಗಳಿಲ್ಲದೆಯೇ ಪ್ರಾರಂಭಿಸಿದೆವು. ನಮಗೆ ಪತ್ರಿಕೆಗಳಿಂದ ಒಂದು ಕಾಸೂ ಬರಲಿಲ್ಲ. ನಮ್ಮ ಹಾಸಿಗೆಗಳನ್ನು ಸುತ್ತಿ ಅವನ್ನೇ ಮೇಜವಾಗಿ ಮಾಡಿಕೊಂಡು ಬರೆಯುತ್ತಿದ್ದೆವು. ಅಂತಹ ಮೃದುವಾದ ವಸ್ತುಗಳಮೇಲೆ ಬರೆದ ನಮ್ಮ ಲೇಖನಗಳಲ್ಲಿ ಕಾವು ಕಡಿಮೆ ಇರಲಿಲ್ಲ."

ತಿಲಕರು ತಾವು ನಡೆಸುತ್ತಿದ್ದ ಪಾಠಶಾಲೆಯಿಂದ ತಿಂಗಳಿಗೆ ೩೦ ರೂಪಾಯಿ ಸಂಬಳ ತೆಗೆದುಕೊಳ್ಳುತ್ತಿದ್ದರು. ಅವರ ಒಬ್ಬ ಉಪಾಧ್ಯಾಯ ಸ್ನೇಹಿತರು "ಈ ಸಂಬಳದಿಂದ ನಮ್ಮ ಹೆಣ ಸುಡುವುದಕ್ಕೆ ಸೌದೆಗಾಗಿ ಕೂಡ ಒಂದು ಕಾಸೂ ಉಳಿಸಲು ಸಾಧ್ಯವಿಲ್ಲ" ಎಂದರು. ತಿಲಕರು "ಅದು ಸಮಾಜದ ಪಾಡು. ನಾವು ಧೀರರೆಂಬುದಕ್ಕಾಗಿ ಅಲ್ಲದಿದ್ದರೂ ಆರೋಗ್ಯದ ಕಾರಣಕ್ಕಾಗಿಯಾದರೂ ಸಮಾಜ

ನಮ್ಮ ಹೆಣವನ್ನು ಸುಟ್ಟೇ ಸುಡುವುದು" ಎಂದರು. ಆದುದರಿಂದ ಭಾರತದಲ್ಲಿ ಹುಟ್ಟಿದ ಪ್ರತಿಯೊಬ್ಬರೂ ಕರ್ಮಯೋಗಿಯೇ. ಸ್ವರಾಜ್ಯ ಸಾಧನೆಯೇ ಆ ಯೋಗ."

[ಗಾಂಧಿಯವರು ತಿಲಕರನ್ನು ಕುರಿತು ಹೇಳಿದ ಮಾತುಗಳು ಇವು]

ದೇಶವನ್ನು ಸ್ವರಾಜ್ಯಮಾರ್ಗದಲ್ಲಿ ತೆಗೆದುಕೊಂಡು ಹೋಗುವವನು ಪರಿಶುದ್ಧನಾಗಿರಬೇಕು! ಈ ಪಾರಿಶುದ್ಧತೆ ಭಗವಂತನ ಧ್ಯಾನದಿಂದ, ಪ್ರಾರ್ಥನೆಯಿಂದ ಮಾತ್ರ ದೊರೆಯುತ್ತದೆ. ಪರಮಾತ್ಮನ ಕರುಣೆಯಿಲ್ಲದೆ ಮನುಷ್ಯ ಏನನ್ನೂ ಮಾಡಲು ಸಾಧ್ಯವಿಲ್ಲ. ಇಂತಹ ಅದ್ಭುತವನ್ನು ಸಾಧಿಸಲು ಹೊರಟವನು ಭಗವಂತನ ಧ್ಯಾನದಿಂದ ಪಳಗಿಸಿದ ಮನಸ್ಸುಳ್ಳ ಸಂಯಮಿಯಾಗಿಬೇಕು.

ಈ ಸಂಯಮವು ಸತ್ಯಾನ್ವೇಷಣೆ ಮತ್ತು ಪ್ರಾರ್ಥನೆಯಿಂದ ಮಾತ್ರ ಸಾಧ್ಯ.

## ಸತ್ಯವೇ ದೇವರು

ಗಾಂಧಿಯವರ ಆತ್ಮಕತೆಗೆ ಸತ್ಯಶೋಧನೆ ಎಂಬ ಹೆಸರು ಅನ್ವರ್ಥವಾಗಿದೆ. ಪೂರ್ವಕಾಲದ ಋಷಿಗಳನ್ನು ಹೊರತು ಆಧುನಿಕ ಕಾಲದಲ್ಲಿ ಹೀಗೆ ಸತ್ಯದ ಅನ್ವೇಷಕರು ಮತ್ತಾರೂ ಇರುವಂತೆ ನಮಗೆ ತೋರುವುದಿಲ್ಲ. ಸತ್ಯಾನ್ವೇಷಣೆಯಲ್ಲಿ ಗಾಂಧಿಯವರ ಬಾಳು, ಶ್ರೀರಾಮನ ನಡವಳಿಕೆಯನ್ನು ಜ್ಞಾಪಕಕ್ಕೆ ತರುತ್ತದೆ. ಆದರೆ ರಾಜಕೀಯದಲ್ಲಿ ಸತ್ಯದ ಪ್ರವೇಶ ಮಾಡಿಸಿದವರು ಯಾವ ದೇಶದಲ್ಲಿಯೂ ಇಲ್ಲ. ರಾಜತಂತ್ರ ವ್ಯವಹಾರ, ದಕ್ಷರ ಆಟ. ಇಲ್ಲಿ ಯಾವುದು ಗೆಲ್ಲುವುದೋ ಅದು ಸರಿ. ಬ್ರಿಟಿಷ್ ಸರ್ಕಾರದೊಂದಿಗೆ ವ್ಯವಹರಿಸಿದವರಿಗೆ ಇದು ಚೆನ್ನಾಗಿ ಮುಂದಟ್ಟಾಗುತ್ತದೆ. ಅಲ್ಲಿ ಅತ್ಯಂತ ಉತ್ತಮವಾದ ರಾಜಕಾರಣಪಟು ಎಂದರೆ ಒಳ್ಳೆಯ ಸುಳ್ಳು ಹೇಳುವವನು ಎಂದು ಅರ್ಥ. ಖಿಲಾಪತ್ ವಿಚಾರದಲ್ಲಿ ಬ್ರಿಟಿಷ್ ಸರ್ಕಾರ ಕೊಟ್ಟ ವಾಗ್ದಾನವನ್ನು ಮುರಿದುದು ಇದಕ್ಕೆ ಒಂದು ಉದಾಹರಣೆ. ಇಂತಹ ರಾವಣರಿಗೆ ಎದುರಾಗಿ ಸತ್ಯವೆಂಬ ಆಯುಧವನ್ನು

ಇಟ್ಟುಕೊಂಡು ಹೊಡೆದಾಡುವುದು, ಭಾರತದಲ್ಲಿ ಹೊರತು ಮತ್ತೆಲ್ಲಿಯೂ ಕಾಣದ ದೃಶ್ಯ.

' ಸತ್ಯವೇ ದೇವರು. ಸತ್ಯಕ್ಕಿಂತ ದೊಡ್ಡ ದೇವರಿಲ್ಲ. ನಾನು ಮೊದಲು ದೇವರಲ್ಲಿ ಸತ್ಯವಿದೆ ಎಂದುಕೊಂಡಿದ್ದೆ. ಆದರೆ ಅದು ಈಚಿನ ಅನುಭವದಿಂದ ಬೇರೆಯಾಯಿತು. ದೇವರೂ ಸತ್ಯದಲ್ಲಿಯೇ ಇದ್ದಾನೆ. ಸತ್ಯವೂ ಅಹಿಂಸೆಯೂ ಒಂದಾದರೆ ಜಗತ್ತು ನಿಮಗೆ ತಲೆ ಬಾಗುವುದು. ಸತ್ಯಾಗ್ರಹ ಎಂಬುದು ರಾಜಕಾರಣದಲ್ಲಿ, ರಾಷ್ಟ್ರ ಜೀವನದಲ್ಲಿ, ಸತ್ಯ ಅಹಿಂಸೆಯ ಪ್ರವೇಶದ ಹೊರತು ಮತ್ತೇನೂ ಅಲ್ಲ. ರಾಷ್ಟ್ರ ಜೀವನದಲ್ಲಿ ಪೂರ್ಣ ಸತ್ಯವನ್ನೂ ಪ್ರಾಮಾಣಿಕತೆಯನ್ನೂ ಅನುಸರಿಸುವದು ಖಂಡಿತ ಸಾಧ್ಯವೆಂದು ನನ್ನ ಅಭಿಪ್ರಾಯ. ದೇವರಲ್ಲಿ ಭಕ್ತಿಯುಳ್ಳವರಾಗಿ ಧರ್ಮವನ್ನು ಅರಿತವರೊಂದಿಗೆ ಜಗತ್ತು ಕಾದುವುದಿಲ್ಲ. ಜನರು ಹಾಗೆ ತಮ್ಮೊಂದಿಗೆ ಕಾದಾಡಿದರೂ, ಆ ಧರ್ಮಾತ್ಮರು ಒಳ್ಳೆಯ ಮಾರ್ಗಗಳಿಂದ ಆ ಜನರ ಕೋಪವನ್ನು ಬೇರೆ ಕಡೆ ತಿರುಗಿಸುತ್ತಾರೆ. ಧರ್ಮವೆಂದರೆ ಸುಮ್ಮನೆ ನಮಾಜ್ ಮಾಡುವುದು ಅಥವ ದೇವಸ್ಥಾನಕ್ಕೆ ಹೋಗುವುದಲ್ಲ; ಧರ್ಮವನ್ನು ತಿಳಿದವನು ಎಂದರೆ ಆತ್ಮಜ್ಞಾನಿ ಎಂದು ಅರ್ಥ; ನೆಯಿಗೆಯ ವಿದ್ಯೆ ತಿಳಿಯದವನು ನೆಯ್ಗೆಯವನಾಗಲಾರ; ಹಾಗೆಯೇ ಕೆಲವು ನಿಯಮಾನುಸಾರವಾಗಿ ಹೊರತು ಮನುಷ್ಯ ಆತ್ಮಜ್ಞಾನಿಯಾಗಲಾರ; ಆ ನಿಯಮಗಳಲ್ಲಿ ಮೂರು ಯಾವಾಗಲೂ ಅನ್ವಯಿಸುವುವೇ. ಅವುಗಳಲ್ಲಿ ಮೊದಲನೆಯದು ಸತ್ಯ. ಸತ್ಯವನ್ನು ಹೇಳಲು, ಅನುಸರಿಸಲು, ತಿಳಿಯದವನು ಸಮುಕಲು ನಾಣ್ಯದಂತೆ ಅಪ್ರಯೋಜಕ. ಎರಡನೆಯದು ಇತರರಿಗೆ ಹಿಂಸೆ ಮಾಡದಿರುವುದು; ಇತರರಿಗೆ ಹಿಂಸೆಮಾಡುವವನೂ ಅಸೂಯೆ ಪಡುವವನೂ ಜಗತ್ತಿನಲ್ಲಿರಲು ಅನರ್ಹ. ಯಾಕೆಂದರೆ ಜಗತ್ತು ಅವನೊಂದಿಗೆ ಕಾದಾಡುತ್ತಲೇ ಇರುತ್ತದೆ. ಅದರಿಂದ ಅವನಿಗೆ ಭಯ. ನಾವೆಲ್ಲ ಪ್ರೇಮದಿಂದ ಬಂದಿತರು. ಪ್ರೇಮದ ಶಕ್ತಿಯಿಲ್ಲದಿದ್ದರೆ ಜಗತ್ತು ಬದುಕುವುದಿಲ್ಲ. ಅಣ್ಣ ತಮ್ಮಂದಿರನ್ನೂ ತಂದೆ ಮಕ್ಕಳನ್ನೂ ಗಂಡ ಹೆಂಡತಿಯರನ್ನೂ ಸ್ನೇಹಿತರನ್ನೂ ಬಂಧಿಸುವುದು ಈ ಪ್ರೇಮವೇ.

ಆದರೆ ಲೋಕದಲ್ಲಿರುವ ಚರಾಚರ ವಸ್ತುಗಳೆಲ್ಲವನ್ನೂ ಪ್ರೇಮ ಮಾಡುವುದನ್ನು ನಾವು ಕಲಿಯಬೇಕು. ಎಲ್ಲಿ ಪ್ರೇಮವೋ ಅಲ್ಲಿ ನಾವು. ಮೂರನೆಯ ಧರ್ಮ ಬ್ರಹ್ಮಚರ್ಯ. ನಮ್ಮ ಕಾಮಗಳನ್ನು ನಾವು ಜಯಿಸಬೇಕು. ಮದುವೆ ಆಗದೆ ಇರುವವನೂ, ಮದುವೆಯಾಗಿ ಏಕಪತ್ನೀ ವ್ರತಸ್ಥನಾಗಿರುವವನೂ ಇತರ ಸುಖಗಳಿಗೆ ಆಳಾದರೆ ಅವನು ಬ್ರಹ್ಮಚಾರಿಯಲ್ಲ. ತನ್ನ ಕಾಮಗಳೆಲ್ಲವನ್ನೂ ಯಾರು ಸ್ವಾಧೀನದಲ್ಲಿಟ್ಟುಕೊಳ್ಳಬಲ್ಲನೋ ಅವನೇ ಬ್ರಹ್ಮಚಾರಿ. ಯಾರು ಸಂಯಮಿಯೋ ಅವನೇ ಬ್ರಹ್ಮಚಾರಿ. ಇವೆಲ್ಲಾ ಸತ್ಯಾನ್ವೇಷಣೆಯಿಂದಲೇ ಸಾಧ್ಯ" ಎಂದು ಗಾಂಧಿ ಹೇಳಿದ್ದಾರೆ.

ಮುರಿಯಲ್ ಲೆಸ್ಟರ್ ಗಾಧಿಯವರನ್ನು ಸಂದೇಶಕ್ಕಾಗಿ ಕೇಳಿದಾಗ ಗಾಂಧಿ ಹೀಗೆ ಹೇಳಿದರು : "ಭಯವಿಲ್ಲದೆ ಅತಿಶಯೋಕ್ತಿಯಿಲ್ಲದೆ ಸತ್ಯವನ್ನೇ ಹೇಳಿ. ನಿಮ್ಮ ಕೆಲಸಕ್ಕೆ ಸಂಬಂಧಪಟ್ಟವರನ್ನೆಲ್ಲಾ ನೋಡಿ. ನೀವು ಮಾಡುತ್ತಿರುವುದು ದೇವರ ಕೆಲಸ. ಮನುಷ್ಯನ ತಿರಸ್ಕಾರಕ್ಕೆ ಹೆದರಬೇಡಿ, ಅವರು ನಿಮ್ಮ ಪ್ರಾರ್ಥನೆಯನ್ನು ಕೇಳಿ ನಡೆಸಿಕೊಟ್ಟರೆ ನಿಮಗೆ ಸಮಾಧಾನವಾಗುವುದು. ಅವರು ನಿಮ್ಮ ಪ್ರಾರ್ಥನೆಯನ್ನು ತಿರಸ್ಕರಿಸಿದರೆ ಆ ತಿರಸ್ಕಾರವನ್ನೇ ನಿಮ್ಮ ಶಕ್ತಿಯಾಗಿ ಮಾಡಿಕೊಳ್ಳಿ" ಮುರಿಯಲ್ ಲೆಸ್ಟರ್ ಹೀಗೆ ಹೇಳುತ್ತಾಳೆ. ಮುಂದೆ ನಾನು ಇಂಗ್ಲೆಂಡಿನಲ್ಲಿ ಇಂಡಿಯಾ ಆಫೀಸಿನ ಅಧಿಕಾರಿಗಳನ್ನು ಪ್ರತಿಸಲ ನೋಡಿದ ಮೇಲೂ, ನನ್ನ ಶಕ್ತಿ ಹೆಚ್ಚುತ್ತಿದ್ದಂತೆ ನನಗೆ ತೋರಿತು. ಕೆಲವರು ನನ್ನ ಮಾತಿಗೆ ಆಧಾರವೇ ಇಲ್ಲವೆಂದರು; ಆಗ ಸತ್ಯದ ಕಡೆಗೆ ಗಾಂಧಿ ನನ್ನ ಮನಸ್ಸನ್ನು ಅಷ್ಟು ಖಂಡಿತವಾಗಿ ತಿರುಗಿಸಿದುದಕ್ಕೆ ನಾನು ಅವರನ್ನು ಮನಸ್ಸಿನಲ್ಲಿ ವಂದಿಸಿದೆ. ಆಧಾರವಿಲ್ಲದ ಯಾವ ಮಾತನ್ನೂ ನಾನು ಆಡಿಲ್ಲವೆಂದು ಇಂಡಿಯಾ ಆಫೀಸಿನವರ ಬಾಯಿ ಮುಚ್ಚಿಸಿದೆ."

ಸತ್ಯವೆಂಬುದರಲ್ಲಿ ಎಲ್ಲ ಸಗುಣಗಳೂ ಅಡಕವಾಗಿವೆ. ಯಾವ ಕಷ್ಟದ ಭಯದಿಂದಲೂ ಸತ್ಯವನ್ನು ಬಿಡಕೂಡದು. ಯಾವ ಲಾಭದ ಆಸೆಯಿಂದಲೂ ಅಸತ್ಯವನ್ನು ಹಿಡಿಯಕೂಡದು. ಸತ್ಯದ ಮಾರ್ಗ

ದಲ್ಲಿಯೇ ನಡೆಯಬೇಕು. ಬಂದುದಕ್ಕೆ ಎದೆಕೊಟ್ಟು ಎದುರಿಸಿ ಸಹಿಸ ಬೇಕು. ಇದೇ ಈ ಭಾಳಿನಲ್ಲಿ ಪರಮಾತ್ಮನನ್ನು ಕಾಣುವ ಗುಟ್ಟು.

## ಪ್ರಾರ್ಥನೆ

"ಪ್ರಾರ್ಥನೆ ನನ್ನ ಪ್ರಾಣ ಉಳಿಸಿದೆ. ಅದಿಲ್ಲದಿದ್ದರೆ ನಾನು ಎಷ್ಟೋ ವರುಷಗಳ ಹಿಂದೆಯೇ ಹುಚ್ಚನಾಗಬೇಕಾಗಿದ್ದಿತು. ಜೀವನದ ಅನೇಕ ಕಹಿ ಅನುಭವಗಳು ನನಗೆ ಉಂಟಾಗಿವೆ, ಎಂಬುದು ನನ್ನ ಆತ್ಮ ಕತೆಯಿಂದ ತಿಳಿಯುತ್ತದೆ. ಆ ಕಾರಣದಿಂದ ಆಗಾಗ ನಾನು ಪೂರ್ಣ ವಾಗಿ ನಿರುತ್ಸಾಹಿಯಾಗುತ್ತಿದ್ದೆ, ಆದರೆ ಪ್ರಾರ್ಥನೆ ನನ್ನನ್ನು ಆ ನಿರು ತ್ಸಾಹದಿಂದ ಮೇಲೆ ಎತ್ತುತ್ತಿದ್ದಿತು. ಸತ್ಯ ಹೇಗೆ ನನ್ನ ಜೀವನದ ಭಾಗವೋ ಪ್ರಾರ್ಥನೆಯೂ ಹಾಗೆಯೇ ಜೀವನದ ಭಾಗ; ಪ್ರಾರ್ಥನೆ ಯಿಲ್ಲದೆ ಸುಖವಿಲ್ಲ, ಎಂಬುದು ನನ್ನ ಅನುಭವಕ್ಕೆ ಬಂದಾಗ ಪ್ರಾರ್ಥನೆ ಆವಶ್ಯಕವಾಗಿ ನನ್ನ ಬಾಳಿಗೆ ಹೊಂದಿಕೊಂಡಿತು. ಕಾಲಕಳೆದಂತೆ ದೇವರಲ್ಲಿ ನನ್ನ ನಂಬಿಕೆ ಹೆಚ್ಚುತ್ತ ಬಂದಿತು, ಪ್ರಾರ್ಥನೆಯ ಆವಶ್ಯ ಕತೆಯೂ ಹೆಚ್ಚತೊಡಗಿತು. ಪ್ರಾರ್ಥನೆಯಿಲ್ಲದ ಬಾಳು ಬರಿಯ ಬಾಳಾಗಿ ತೋರಿತು. ದಕ್ಷಿಣ ಆಫ್ರಿಕದಲ್ಲಿ ಚರ್ಚಿನಲ್ಲಿ ಕ್ರಿಸ್ತರ ಪ್ರಾರ್ಥನೆಯಲ್ಲಿ ಭಾಗ ವಹಿಸಿದ್ದೆ. ಆದರೆ ಅದು ನನ್ನನ್ನು ಆಕರ್ಶಿಸ ಲಿಲ್ಲ. ನಾನು ಅವರ ಪ್ರಾರ್ಥನೆಯಲ್ಲಿ ಒಂದಾಗಲಿಲ್ಲ. ಅವರು ದೇವ ರನ್ನು ಬೇಡುತ್ತಿದ್ದರು. ನಾನು ಹಾಗೆ ಮಾಡಲಾರದವನಾದೆ. ನಾನು ಬಾಳಿನಲ್ಲಿ ಅರಕೆ ತೋರುವವರೆಗೆ ದೇವರನ್ನು ನಂಬಲಿಲ್ಲ. ಅನಂತರ ದೇಹಕ್ಕೆ ಆಹಾರ ಹೇಗೆ ಆವಶ್ಯಕವೂ ಹಾಗೆಯೇ ಆತ್ಮಕ್ಕೂ ಪ್ರಾರ್ಥನೆ ಆವಶ್ಯಕ ಎಂದು ನನಗೆ ಅನುಭವವಾಯಿತು; ಅಷ್ಟೇ ಅಲ್ಲ. ಆತ್ಮಕ್ಕೆ ಪ್ರಾರ್ಥನೆ, ದೇಹಕ್ಕೆ ಆಹಾರಕ್ಕಿಂತ ಹೆಚ್ಚು ಆವಶ್ಯಕ. ಯಾಕೆಂದರೆ ದೇಹವನ್ನು ಆರೋಗ್ಯವಾಗಿ ಇಟ್ಟಿರಬೇಕಾದರೆ ಕೆಲವು ವೇಳೆ ಉಪ ವಾಸ ಆವಶ್ಯಕ. ಆದರೆ ಪ್ರಾರ್ಥನೆಗೆ ಉಪವಾಸವಿಲ್ಲ. ಪ್ರಾರ್ಥನೆಯ ಅಜೀರ್ಣವಾಗುವುದಿಲ್ಲ. ಜಗತ್ತಿನ ಮೂವರು ಗುರುಗಳೂ ಬುದ್ಧ ಕ್ರಿಸ್ತ ಮಹಮುದ್, ಪ್ರಾರ್ಥನೆಯಿಂದಲೇ ತಮಗೆ ಬೆಳಕು ತೋರಿ ತೆಂದೂ ಪ್ರಾರ್ಥನೆಯಿಲ್ಲದೆ ಬದುಕುವುದೇ ಸಾಧ್ಯವಿಲ್ಲವೆಂದೂ ಸ್ಪಷ್ಟ

ವಾಗಿ ಹೇಳಿದ್ದಾರೆ. ಹಿಂದುಗಳು ಮುಸಲ್ಮಾನರು ಕ್ರಿಸ್ತರು ಕೋಟಿ ಸಂಖ್ಯೆಯಲ್ಲಿ ಪ್ರಾರ್ಥನೆ ಮಾಡುತ್ತಾರೆ. ಶಾಂತಿ ಹೊಂದುತ್ತಾರೆ. ಪ್ರಾರ್ಥನೆಯಿಂದ ಆತ್ಮ ಉನ್ನತಿಯಾಗುವುದಿಲ್ಲವಾದರೆ ಅವರು ಸುಳ್ಳುಗಾರರಾಗಿರಬೇಕು. ಇಲ್ಲವೇ ತಮಗೇ ತಾವು ಮೋಸ ಮಾಡಿಕೊಳ್ಳುವವರಾಗಿರಬೇಕು. ಪ್ರಾರ್ಥನೆ ನನ್ನ ಬಾಳಿನ ಆಸರೆ, ಊರುಗೋಲು. ಇದಿಲ್ಲದೆ ನಾನು ಒಂದು ಗಳಿಗೆಯೂ ಬಾಳಲಾರೆ. ರಾಜಕೀಯದಲ್ಲಿ ನನ್ನ ಎದುರಿಗೆ ಪೂರ್ಣ ಕಾರ್ಮೋಡ ಕಂಡರೂ ನನ್ನ ಶಾಂತಿ ಯಾವಾಗಲೂ ಭಂಗವಾಗಿಲ್ಲ. ಜನ, ನನ್ನ ಶಾಂತಿಯನ್ನು ಕಂಡು ಹೊಟ್ಟೆಕಿಚ್ಚುಪಡುತ್ತಾರೆ. ಈ ಶಾಂತಿ ಪ್ರಾರ್ಥನೆಯಿಂದ ದೊರೆಯುತ್ತದೆ. ನಾನು ಹೆಚ್ಚು ವಿದ್ಯಾವಂತನಲ್ಲ. ಆದರೆ ನಾನು ಪ್ರಾರ್ಥನೆ ಮಾಡುವವ. ಈ ಪ್ರಾರ್ಥನೆ ಯಾವ ರೂಪ ಎಂಬುದು ಮುಖ್ಯವಲ್ಲ. ಪ್ರತಿಯೋಬ್ಬನೂ ತನಗೆ ತಾನೇ ಸ್ವತಂತ್ರ. ಆದರೆ ದಾರಿ ಸವೆದ ಕೆಲವು ಗುರುತುಗಳಿವೆ. ಪ್ರಾಚೀನರು ನಡೆದ ಆ ಮಾರ್ಗ ದಲ್ಲಿ ಅಪಾಯವಿಲ್ಲ. ಇದು ನನ್ನ ಸ್ವಂತ ಅನುಭವ. ಪ್ರತಿಯೊಬ್ಬರೂ ಪ್ರಯತ್ನಿಸಿ ನೋಡಲಿ. ಪ್ರಾರ್ಥನೆಯಿಂದ ಅವರ ಬಾಳಿಗೆ ಹೆಚ್ಚು ಪೂರ್ಣತೆಯುಂಟಾಗುವದು.

" ದೇವರ ಪ್ರಾರ್ಥನೆ ಎಂಬುದು ದೇವರ ನಾಮ ಸಂಕೀರ್ತನೆ. ನಮ್ಮ ದೌರ್ಬಲ್ಯ ಅನರ್ಹತೆಗಳನ್ನು ಒಪ್ಪಿಕೊಳ್ಳುವುದೇ ಪ್ರಾರ್ಥನೆ. ಪರಮಾತ್ಮನ ಹೆಸರುಗಳು ಸಾವಿರ ಅಥವ ಆತನಿಗೆ ಹೆಸರುಗಳೇ ಇಲ್ಲ. ನಮಗೆ ಇಷ್ಟವಾದ ಹೆಸರಿನಲ್ಲಿ ಆತನನ್ನು ಪೂಜಿಸಬಹುದು ಪ್ರಾರ್ಥಿಸ ಬಹುದು. ರಾಮ, ಕೃಷ್ಣ, ರಹಿಮ್—ಎಲ್ಲರೂ ಪೂಜಿಸುವುದು, ಒಂದೇ ಶಕ್ತಿ. ಆದರೆ ಎಲ್ಲ ಆಹಾರವೂ ಎಲ್ಲರಿಗೂ ಒಗ್ಗದಂತೆ ಎಲ್ಲ ಹೆಸರುಗಳು ಎಲ್ಲರಿಗೂ ಹಿಡಿಯುವುದಿಲ್ಲ. ಪ್ರತಿಯೊಬ್ಬನೂ ತನಗೆ ಬೇಕಾದ ಹೆಸ ರನ್ನು ಆರಿಸಿಕೊಳ್ಳುತ್ತಾನೆ. ಆದರೆ ಪರಮಾತ್ಮನಿಗೆ ಗೊತ್ತು. ಯಾವ ಹೆಸರಿನಲ್ಲಿ ಕರೆದರೂ ಕಿವಿಗೊಡುತ್ತಾನೆ.

"ಆದುದರಿಂದ ಪ್ರಾರ್ಥನೆ, ಪೂಜೆ, ಬರಿಯ ಮಾತಲ್ಲ. ಹೃದಯ ದಿಂದ ಬರಬೇಕು. ಕುರುಡರೂ ಮೂಕರು ಉಗ್ಗರೂ ದಡ್ಡರೂ

ಪ್ರಾರ್ಥನೆ ಮಾಡಬಹುದು. ಬಾಯಲ್ಲಿ ಅಮೃತ ಸೋರಿಸುವರಾದರೂ ಹೃದಯ ಪರಿಶುದ್ಧವಿಲ್ಲದಿದ್ದರೆ ಅವರ ಪ್ರಾರ್ಥನೆ ಭಗವಂತನಿಗೆ ಕೇಳುವುದಿಲ್ಲ. ಆದುದರಿಂದ ಭಗವಂತನನ್ನು ಪ್ರಾರ್ಥಿಸುವವರು ಹೃದಯ ಪರಿಶುದ್ಧಿಮಾಡಿಕೊಳ್ಳಬೇಕು. ರಾಮನು ಹನುಮಂತನ ಬಾಯಲ್ಲಿ ಮಾತ್ರ ಇರಲಿಲ್ಲ. ಹನುಮನ ಹೃದಯ ರಾಮನ ಸಿಂಹಾಸನವಾಗಿದ್ದಿತು. ಆದರಿಂದಲೇ ಹನುಮಂತನ ಶಕ್ತಿ ಅಸಾಧ್ಯವಾಯಿತು. ಆ ಶಕ್ತಿಯಿಂದ ಹನುಮಂತ ಬೆಟ್ಟ ಎತ್ತಿದ; ಸಮುದ್ರ ಹಾರಿದ; ಜೀವನದ ಬಿರುಗಾಳಿಗಳಿಂದ ನಮ್ಮನ್ನು ರಕ್ಷಿಸುವದು ನಂಬಿಕೆಯೆ; ಬೆಟ್ಟವನ್ನು ಚಲಿಸುವಂತೆ ಮಾಡುವುದೂ ಸಮುದ್ರವನ್ನು ಹಾರುವಂತೆ ಮಾಡುವುದೂ ನಂಬಿಕೆಯೇ. ನಮ್ಮಲ್ಲಿ ದೇವರಿದ್ದಾನೆ. ಎಂಬ ಎಚ್ಚರಿಕೆಯೇ ಆ ನಂಬಿಕೆ. ಆ ನಂಬಿಕೆಯುಂಟಾದವನಿಗೆ ಇನ್ನೇನೂ ಬೇಕಿಲ್ಲ. ದೇಹದಲ್ಲಿ ರೋಗವಿದ್ದರೂ ಅವನ ಆತ್ಮ ದೃಢ.

"ಆದರೆ ಹೃದಯವನ್ನು ಹೀಗೆ ಶುದ್ಧಿಮಾಡಿಕೊಳ್ಳುವುದು ಹೇಗೆ? ಬಾಯಿಮಾತು ಯಾರೂ ಕಲಿಸಬಹುದು ಆದರೆ ಹೃದಯದ ಮಾತನ್ನು ಕಲಿಸುವವರು ಯಾರು? ಭಕ್ತನೊಬ್ಬನಿಗೆ ಮಾತ್ರ ಇದು ಗೊತ್ತು. ಇದನ್ನು ಅವನು ಮಾತ್ರ ಕಲಿಸಬಲ್ಲನು. ಗೀತೆಯಲ್ಲಿ ಭಕ್ತನ ವಿಚಾರ ಹೇಳಿದೆ. ಆದರೆ ಅಂತಹ ಭಕ್ತರು ಜಗತ್ತಿನಲ್ಲಿ ಅಪರೂಪ. ಆದುದರಿಂದ ನನ್ನ ದಾರಿ ಸೇವಾಧರ್ಮ. ಸೇವಾ ಕರ್ಮದಲ್ಲಿ ತೊಡಗಿರುವವನ ಹೃದಯವನ್ನು ಹುಡುಕಿಕೊಂಡು ಬಂದು ದೇವರೇ ನೆಲೆಸುತ್ತಾನೆ. ಆದುದರಿಂದಲೇ ನರಸಿಂಹ ಮೆಹತ ಹೀಗೆ ಹಾಡಿದರು. "ಇತರರ ದುಃಖದಿಂದ ಯಾವನ ಹೃದಯ ಕರಗುತ್ತದೋ ಅವನೇ ನಿಜವಾದ ವೈಷ್ಣವ; ಅಂತಹವನೇ ಅಬುಬೆನ್ ಆಡಮ್. ಆತ ತನ್ನವರ ಸೇವೆಮಾಡಿದ. ಭಕ್ತಶಿಖಾಮಣಿ ಎನಿಸಿಕೊಂಡ.

"ಹಾಗಾದರೆ ದುಃಖಿಗಳು ದಲಿತರು ಎನ್ನುವವರು ಯಾರು? ದರಿದ್ರರೂ ದಬ್ಬಾಳಿಕೆಗೆ ಒಳಗಾದವರೂ; ಆದುದರಿಂದ ಭಕ್ತನಾದವನು ಕಾಯಾವಾಚ ಮನಸಾ ಇವರ ಸೇವೆ ಮಾಡಬೇಕು. ದಲಿತ

ರನ್ನು ಅಸ್ಪೃಶ್ಯರೆಂದು ಪರಿಗಣಿಸುವವನು ಅವರನ್ನು ಕಾಯಾ ಹೇಗೆ ಸೇವಿಸಬಲ್ಲನು? ಆದುದರಿಂದ ಯಾವ ಹೆಸರಿನಿಂದ ಬೇಕಾದರೂ ಪ್ರಾರ್ಥನೆ ಮಾಡಬಹುದು? ಇದಕ್ಕೆ ಮಾರ್ಗ ಪ್ರಾರ್ಥನೆಯ ಹೃದಯ. ಸೇವೆಯೇ ಹೃದಯವನ್ನು ಪ್ರಾರ್ಥನೆಯ ಮಂದಿರವಾಗಿ ಮಾಡುವುದು. ಈ ಕಾಲದಲ್ಲಿ ಅಸ್ಪೃಶ್ಯರನ್ನು ಶುದ್ಧವಾದ ಹೃದಯದಿಂದ ಸೇವಿಸುವ ಹಿಂದುಗಳು ನಿಜವಾಗಿಯೂ ಪ್ರಾರ್ಥನೆ ಮಾಡುತ್ತಾರೆ."

## ದೇವರು ಬುದ್ಧಿಗೆ ನಿಲುಕುವುದಿಲ್ಲ

"ಆದರೆ ದೇವರಲ್ಲಿಯೂ ದೇವರ ಶಕ್ತಿಯಲ್ಲಿಯೂ ನಂಬಿಕೆ ಬರುವುದಿಲ್ಲವಲ್ಲ ಏನು ಮಾಡುವುದು. ನೀವು ದೇವರಲ್ಲಿ ನಂಬಿಕೆ ಇಟ್ಟುಕೊಂಡು ನಿಮ್ಮ ಕೆಲಸ ಪ್ರಾರಂಭಿಸುತ್ತೀರಿ. ನಾವು ಅಪನಂಬಿಕೆ ಯಿಂದಲೇ ಪ್ರಾರಂಭಿಸುತ್ತೇವಲ್ಲ?" ಎಂದು ಒಬ್ಬ ಯುವಕ ಗಾಂಧಿಯ ವರನ್ನು ಕೇಳಿದನು. ಗಾಂಧಿ ಹೀಗೆ ಹೇಳಿದರು.

"ನಿಜ. ದೇವರಲ್ಲಿ ನಿಮಗೆ ಭಕ್ತಿಯನ್ನುಂಟುಮಾಡುವುದು ನನ್ನ ಶಕ್ತಿಗೆ ಮೀರಿದುದು. ಕೆಲ ವಿಷಯಗಳಿಗೆ ಆ ವಿಷಯಗಳೇ ಸಾಕ್ಷಿ ಮತ್ತೆ ಕೆಲವಕ್ಕೆ ಸಾಕ್ಷಿಗಳೇ ಇಲ್ಲ. ದೇವರು ಇದಾನೆ ಎಂಬುದು ಒಂದು ಒಪ್ಪಿದ ಸತ್ಯ. ಅದನ್ನು ನಮ್ಮ ಹೃದಯದಿಂದಲೂ ಹಿಡಿಯುವುದು ಸಾಧ್ಯವಿಲ್ಲ. ಇನ್ನು ಬುದ್ಧಿಯಿಂದ ಸಾಧ್ಯವೇ ಇಲ್ಲ. ಬುದ್ಧಿಯ ಪ್ರಯತ್ನ ವ್ಯರ್ಥ. ಸಕಾರಣವಾಗಿ ತರ್ಕ ಸಹಿತವಾಗಿ ಚರ್ಚಿಸುವುದ ರಿಂದ ದೇವರಲ್ಲಿ ನಂಬಿಕೆ ಉಂಟಾಗುವುದಿಲ್ಲ ಯಾಕೆಂದರೆ ಇದು ಬುದ್ಧಿಗೆ ನಿಲುಕುವುದಿಲ್ಲ. ಇದು ಬುದ್ಧಿಯನ್ನು ಮೀರಿದುದು. ನಡೆಯುವ ಅನೇಕ ಸಂಗತಿಗಳಿಂದ ದೇವರು ಇದ್ದಾನೆ ಎಂದು ತೋರಿಸಬಹುದು. ಆದರೆ ಆ ಕಾರಣಗಳನ್ನು ಹೇಳಿ ನಿಮ್ಮ ಬುದ್ಧಿಯನ್ನು ನಾನು ತಿರಸ್ಕರಿಸುವುದಿಲ್ಲ. ಕಾರಣವಾದಗಳನ್ನೆಲ್ಲಾ ಆಚೆ ತಳ್ಳಿ ಮಗುವಿನ ವಾಗೆ ದೇವರಲ್ಲಿ ನಂಬಿಕೆಯಿಟ್ಟು ಇಂದಿನಿಂದ ನಿಮ್ಮ ಜೀವನ ಪ್ರಾರಂಭಿಸಿ. ನಾನು ಇರುವುದು ಉಂಟಷ್ಟೆ? ಹಾಗಾದರೆ ದೇವರೂ ಇದ್ದಾನೆ. ಅನೇಕ ಕೋಟಿ ಜನರಿಗೆ ಹೇಗೋ ಹಾಗೆ ನನಗೂ ಅದು ಆವಶ್ಯಕ; ಅದನ್ನು ಕುರಿತು ಅವರು ಮಾತನಾಡಲು ಶಕ್ತರಾಗದೆ ಇರಬಹುದು; ಆದರೆ ಅವರ

ಜೀವನವನ್ನು ನೋಡಿದರೆ ದೇವರಲ್ಲಿ ನಂಬಿಕೆ ಅವರ ಜೀವನದ ಭಾಗ ಎಂಬುದು ನಿಮಗೆ ಗೊತ್ತಾಗುತ್ತದೆ. ನೀವು ಕಳೆದುಕೊಂಡಿರುವ ನಂಬಿಕೆ ನಿಮಗೆ ಉಂಟಾಗಲಿ ಎಂದು ನನ್ನ ಪ್ರಯತ್ನ. ಹಾಗೆ ಮಾಡಬೇಕಾದರೆ ನಿಮ್ಮ ಬುದ್ಧಿಗೆ ಮಂಕು ಕವಿಸಿ ಗಾಬರಿಯನ್ನು ಉಂಟು ಮಾಡುವ ಅನೇಕ ಸಂಗತಿಗಳನ್ನು (ನೀವು ಕಲಿತಿರುವುದನ್ನು) ನೀವು ಮರೆಯಬೇಕಾಗಿದೆ "ನಮಗೆ ಏನೂ ತಿಳಿಯದು ನಾವು ಜಗತ್ತಿನಲ್ಲಿ ದೂಳಿಗಿಂತ ಕಡೆ" ಎಂಬ ನಮ್ರತೆಯಿಂದ ಪ್ರಾರಂಭಿಸಿ; ನಾವು ಅಣುವಿಗಿಂತ ಕಡಿಮೆ ಎಂದು ಹೇಳುತ್ತೇನೆ; ಯೇಕೆಂದರೆ ಅಣು ತನ್ನ ಸೃಷ್ಟಿಕರ್ತನ ನಿಯಮವನ್ನು ಪಾಲಿಸುತ್ತದೆ. ನಾವಾದರೋ ನಮ್ಮ ಅಹಂಕಾರ ಅಜ್ಞಾನದಲ್ಲಿ ಪ್ರಕೃತಿಯ ನಿಯಮಗಳನ್ನು ಮೀರುತ್ತೇವೆ ಆದರೆ ನಂಬಿಕೆ ಇಲ್ಲದವರಲ್ಲಿ ನಂಬಿಕೆ ಯುಂಟುಮಾಡುವ ಬುದ್ಧಿಯುವಾದ, ನನಗೆ ಇಲ್ಲ.

"ದೇವರು ಇದ್ದಾನೆ ಎಂದು ಒಂದು ಸಲ ನೀವು ಒಪ್ಪಿದರೆ ಪ್ರಾರ್ಥನೆ ಆವಶ್ಯಕ ಎಂಬುದು ನಿಮಗೇ ಗೊತ್ತಾಗುತ್ತದೆ "ನಮ್ಮ ಪೂರ್ಣ ಜೀವನವೇ ಪ್ರಾರ್ಥನೆ, ಆದುದರಿಂದ ಯಾವುದೋ ಒಂದು ಗಳಿಗೆ ಪ್ರಾರ್ಥನೆಗಾಗಿ ಕೂರಬೇಕಾದುದಿಲ್ಲ" ಎಂಬ ಅಹಂಕಾರದ ಮಾತು ನಮಗೆ ಬೇಡ. ಯಾವಾಗಲೂ ಪರಮಾತ್ಮನಲ್ಲಿ ಲೀನರಾಗಿದ್ದ ಋಷಿಗಳು ಸಹ ಇಂತಹ ಮಾತನ್ನು ಹೇಳಲಿಲ್ಲ. ಅವರ ಜೀವನ ಕಾರ್ಯಗಳು ಎಂದಿಗೂ ಮುಗಿಯದ ಪ್ರಾರ್ಥನೆಗಳಾಗಿದ್ದವು. ಆದರೂ ಅವರು ನಮ್ಮ ಮೇಲುಪಂಗ್ತಿಗಾಗಿ ಒಂದು ಪೃಥಕ್ಕಾದ ಕಾಲದಲ್ಲಿ ಪ್ರಾರ್ಥನೆ ಮಾಡಿದರು, ಭಗವಂತನಲ್ಲಿ ಭಕ್ತಿಯನ್ನು ದಿನ ದಿನವೂ ಹೊಸ ಹೊಸದಾಗಿ ಪುನರುಜ್ಜೀವಿಸಿಕೊಂಡರು. ದೇವರು ನಮ್ಮ ವಾಗ್ದಾನವನ್ನು ಕೇಳುವುದಿಲ್ಲ. ಆದರೆ ನಾವು ಆ ವಾಗ್ದಾನವನ್ನು ನಿತ್ಯ ಜ್ಞಾಪಿಸಿಕೊಳ್ಳಬೇಕು. ಆಗ ನಮ್ಮ ಬಾಳಿನ ನಿಜವಾದ ಮತ್ತು ಸುಳ್ಳಾದ ಕಷ್ಟಗಳೆಲ್ಲಾ ಪರಿಹಾರವಾಗುವುವು."

ಹೀಗೆ ಭಗವಂತ ಉಂಟು ಎಂಬ ಸೂಚನೆಯಿಂದ ನಮ್ರರಾಗಿ ಆತನ ಧ್ಯಾನ ಮಾಡುತ್ತ ಆತನ ಹೆಜೆಯ ಗುರುತು ಹುಡುಕುವವರಿಗೆ

ಪರಮಾತ್ಮ ಒಂದಿಲ್ಲೊಂದು ಕಾಲದಲ್ಲಿ ವ್ಯಕ್ತನಾಗಿಯೇ ಆಗುತ್ತಾನೆ. ಡಾ|| ಮಾಟ್ ಎಂಬುವರು ಗಾಂಧಿಯವರಿಗೆ "ಪರಮಾತ್ಮ ಇದ್ದೇ ಇದ್ದಾನೆ ಎಂಬ ನಂಬಿಕೆ ದೃಢವಾಗುವಂತಹ ಸಂದರ್ಭ ನಿಮಗೆ. ಯಾವಾಗಲಾದರೂ ಒದಗಿತೇ ?" ಎಂದು ಕೇಳಿದಾಗ ಗಾಂಧಿಯವರು ಹೀಗೆ ಉತ್ತರವಿತ್ತರು : "ಪರಮಾತ್ಮ ಯಾವಾಗಲೂ ಕಣ್ಣಿಗೆ ಕಂಡು ದಿಲ್ಲ. ಪರಮಾತ್ಮ ಕಾಣುವುದು ಕಾರ್ಯದಲ್ಲಿಯೇ ಹೊರತು ಪ್ರತ್ಯಕ್ಷ ವಾಗಿ ಅಲ್ಲ. ದಕ್ಷಿಣ ಆಫ್ರಿಕದಲ್ಲಿ ನನಗೆ ಪೂರ್ಣವಾಗಿ ಏಟು ಬಿದ್ದು ಅವಮಾನವಾದಾಗ, ಇಲ್ಲಿಯೇ ನಿಂತು ಈ ಅನ್ಯಾಯಕ್ಕೆ ಎದುರಾಗಿ ಹೋರಾಡು ಎಂದು ನನ್ನ ಮನಸ್ಸು ನನಗೆ ಹೇಳಿದಾಗ, ಅದು ದೇವರ ಧ್ವನಿ ಎಂದು ಅರಿತೆ ಭಾರತದಲ್ಲಿ ಹರಿಜನರಿಗಾಗಿ ನಾನು ಮೊದಲನೆಯ ಸಲ ೨೧ ದಿನದ ಉಪವಾಸ ಪ್ರಾರಂಭಿಸಿದಾಗ, ಉಪ ವಾಸ ಮಾಡು ಎಂಬ ಧ್ವನಿ ನನಗೆ ಸ್ಪಷ್ಟವಾಗಿ ಕೇಳಿಸಿತು. ಅದೇ ಭಗವಂತನ ದರ್ಶನವೆಂದು ಭಾವಿಸುತ್ತೇನೆ."

## ದೇಶಸೇವೆಯೇ ನನ್ನ ಮೋಕ್ಷ

ಈ ಕರ್ಮ ಯೋಗಿಯ ಮೊದಲನೆಯ ಗುರಿ ಭಾರತದ ಸ್ವರಾಜ್ಯ ಸಾಧನೆ; ಆ ಸಾಧನೆಯ ಮೂಲಕ ಆತ್ಮಸಾಕ್ಷಾತ್ಕಾರ ಬುದ್ಧ ಭಿಕ್ಷು ಒಬ್ಬನು ಗಾಂಧಿಯವರನ್ನು "ನೀವು ಪ್ರಾರ್ಥನೆಯಲ್ಲಿ ಮಾಡುವು ದೇನು" ಎಂದು ಕೇಳಿನು ಗಾಂಧಿಯವರು "ನಾನು ಪ್ರಾರ್ಥನೆ ಮಾಡುವಾಗ ಸ್ವರಾಜ್ಯಕ್ಕಾಗಿ ಪ್ರಾರ್ಥಿಸುತ್ತೇನೆ. ಸ್ವರಾಜ್ಯಸಾಧನೆ ಯಲ್ಲಿ ನನ್ನಿಂದ ಸಾಧ್ಯವಾದುದನ್ನೆಲ್ಲಾ ಮಾಡುವ ಶಕ್ತಿ ನನಗೆ ಉಂಟಾಗಲೆಂದು ಪ್ರಾರ್ಥಿಸುತ್ತೇನೆ" ಎಂದರು

. ಇದು, ಬರಿಯ ಮೂಲೆಯಲ್ಲಿ ಕುಳಿತುಕೊಂಡು ಜಗತ್ತು ಬೇಡ ಎನ್ನುವವನ ಕರ್ಮಯೋಗವಲ್ಲ, ರವೀಂದ್ರನಾಥ ಟಾಗೂರರು ಗಾಂಧಿಯವರಿಗೆ "ನೀವು ಇನ್ನು ರಾಜಕೀಯ ಬಿಟ್ಟು ವಿಶ್ರಾಂತಿ ಹೊಂದಿ" ಎಂದರು. ಗಾಂಧಿ ನಗುತ್ತಾ "ಆಗ ನಾನು ಜಗತ್ತಿಗೆ ಅಪ್ರಯೋಜಕನಾಗುತ್ತೇನೆ'' ಎಂದರು. ಭಾರತದಂತಹ ಪಾರ ತಂತ್ರದ ದೇಶದಲ್ಲಿ ಯಾರೂ "ನಾನು ಸನ್ಯಾಸಿಯಾಗಿರುತ್ತೇನೆ.

ಎಂದು ಮೂಲೆಯಲ್ಲಿ ಕೂರಲು ಸಾಧ್ಯವಿಲ್ಲ. ಈ ದಾರಿದ್ರ್ಯ ದುಃಖ ನಿರುದ್ಯೋಗ ಅವಿದ್ಯೆ ಇವು ಯಾವ ಸನ್ಯಾಸಿಗೂ ಶಾಂತಿ ಕೊಡುವುದಿಲ್ಲ. ಅಸ್ವತಂತ್ರ ಭಾರತದಲ್ಲಿ ಸನ್ಯಾಸಿಯಾಗುವ ಶಾಂತಿ ತಾನೆ ಯಾರಿಗೆ ಉಂಟಾದೀತು? ಅದೂ ಒಂದು ಬಗೆಯ ಸ್ವಾರ್ಥವೆ?

ಗಾಂಧಿಯವರು ೧೯೨೪ ರ ಸೆರೆಯಿಂದ ಬಿಡುಗಡೆ ಹೊಂದಿದ ನಂತರ ಪಂಡಿತ ಗಾಸೀತ್‌ರಾಮ್ ಎಂಬುವರು ಅವರಿಗೆ ಹೀಗೆ ಬರೆದರು. "ಜೈಲುವಾಸದಿಂವ ನಿಮ್ಮ ಶಕ್ತಿ ನಿಶ್ಶಕ್ತವಾಯಿತು. ಇನ್ನು ಬ್ರಿಟಿಷ್‌ರಿಂದ ಭಾತವನ್ನು ಸ್ವತಂತ್ರ ಮಾಡಲು ಹೊಡೆದಾಟ ಸಾಕು. ನಿಮ್ಮ ವಯಸ್ಸಿನಲ್ಲಿ ಯಾವುದಾದರೊಂದು ಗವಿಯಲ್ಲಿ ಕುಳಿತು ಹಿಂದಲ ಭಾರತ ಋಷಿಗಳಂತೆ ತಪಸ್ಸು ಮಾಡುತ್ತಾ ನಿಮ್ಮ ಮುಕ್ತಿ ಸಾಧಿಸಿ. ಮತ್ತೆ ರಾಜಕೀಯಕ್ಕೆ ಬರಬೇಡಿ" ಆ ಪ್ರಾಣಿ ಇದನ್ನು ಹೇಳಿದ ಈಚೆಗೆ ಗಾಂಧಿಯವರು ಅದ್ಭುತಸಾಧನೆ ಮಾಡಿದ್ದಾರೆ. ದಂಡಿ ದಂಡಯಾತ್ರೆ ಉಪ್ಪಿನ ಸತ್ಯಾಗ್ರಹ, ೧೯೩೪ ರಲ್ಲಿ ಹರಿಜನರಿಗಾಗಿ ದೇಶಸಂಚಾರ, ಖಾದಿ, ಗಾಂದಿ, ಇರ್ವಿನ್ ಒಪ್ಪಂದ, ಲಂಡನ್‌ನಲ್ಲಿ ದುಂಡುಮೇಜು ಪರಿಷತ್ತು, ಅಖಿಲಭಾರತ ಗ್ರಾಮೋದ್ಯೋಗ "ಭಾರತದಿಂದ ತೊಲಗಿ" ಎಂಬ ಕೊನೆಯ ಚಳುವಳಿಯಿಂಪ ಸ್ವಾತಂತ್ರ್ಯಸಾಧನೆ." ಆದರೆ ಗಾಂಧಿ ಆಗ ಹೀಗೆ ಉತ್ತರವಿತ್ತರು. ಪೂರ್ವದ ಋಷಿಗಳ ಜತೆಯಲ್ಲಿ ಸೇರುವಷ್ಟು ಅರ್ಹವಾದುದಲ್ಲ ನನ್ನ ಹೆಸರು. ನಾನು ನಮ್ರತೆಯಿಂದ ಸತ್ಯದ ಮಾರ್ಗದಲ್ಲಿ ನಡೆಯುವವನು. ನನಗೆ ಈ ಬಾಳಿನಲ್ಲಿಯೇ ಮೋಕ್ಷ ಬೇಕೆಂದು ಆಸೆ. ಈ ಮೋಕ್ಷಕ್ಕೆ ಮಾರ್ಗವೇ ನನ್ನ ದೇಶಸೇವೆ. ನನಗೆ ಪ್ರಾಪಂಚಿಕ ಸುಖಗಳಲ್ಲಿ ಆಸೆ ಇಲ್ಲ. ಆದರೆ ನನ್ನ ಗುರಿಯನ್ನು ಸಾಧಿಸಲು ನಾನು ಗವಿಗಳಲ್ಲಿಯೂ ಬೆಟ್ಟದ ತುದಿಯಲ್ಲಿಯೂ ಕುಳಿತುಕೊಳ್ಳಬೇಕಾದುದಿಲ್ಲ. ನನಗೆ ಗೊತ್ತಾಗುವುದಾದರೆ ನಾನು ಇರುವೆಡೆಯಲ್ಲೆಲ್ಲಾ ಗವಿ ನನ್ನಲ್ಲಿಯೇ ಇದೆ. ಗವಿಯಲ್ಲಿ ಕುಳಿತವನು ಗಾಳಿಗೋಪುರ ಕಟ್ಟಬಹುದು. ಆದರೆ ಜನಕ ಮಹಾರಾಜನಂತೆ ಅರಮನೆಯಲ್ಲಿರುವವನಿಗೆ ಇಂತಹ ಗೋಪುರಗಳಿಲ್ಲ. ಗವಿಯಲ್ಲಿ ಕುಳಿತು ಜಗತ್ತಿನೆಡೆ ಆಸೆಯ ರೆಕ್ಕೆ ಬೀಸುವ ಸನ್ಯಾ

ಸಿಗೆ ಶಾಂತಿ ಇಲ್ಲ. ಆದರೆ ಸುಖದ ಮಧ್ಯೆ ಇದ್ದರೂ ಜನಕ ಮಹಾರಾಜ ಅವರ್ಣನೀಯವಾದ ಶಾಂತಿ ಪಡೆದ. ನನ್ನ ಮೋಕ್ಷದ ಮಾರ್ಗ ನನ್ನ ದೇಶದ ಅವಿಶ್ರಾಂತ ಸೇವೆ. ಅದರ ಮೂಲಕ ಜಗತ್ತಿನ ಸೇವೆ ಸಮಸ್ತ ಪ್ರಾಣಿಗಳೊಂದಿಗೂ ಒಂದಾಗಲು ನಾನು ಬಯಸುತ್ತೇನೆ. ಶತ್ರು ಮಿತ್ರರೊಡನೆ ಒಂದಾಗಿರಬೇಕೆಂದು ಬಯಸುತ್ತೇನೆ. ಆದುದರಿಂದ ಮುಸಲ್ಮಾನ ಮಿತ್ರರಾಗಲಿ ಹಿಂದು ಕ್ರಿಸ್ತ ಮಿತ್ರರಾಗಲಿ ನನ್ನನ್ನು ದ್ವೇಷಿಸಿದರೂ ನಾನು ಅವರ ಸೇವೆ ಮಾಡಲು ಬಯಸುತ್ತೇನೆ.—ನನ್ನ ಹೆಂಡತಿ ಮಕ್ಕಳು ದ್ವೇಷಿಸಿದರೂ ಅವರ ಸೇವೆ ಮಾಡುವಂತೆ—ಶಾಶ್ವತವಾದ ಶಾಂತಿಗೆ ಪರಮಾತ್ಮನ ಸಾನ್ನಿಧ್ಯವನ್ನು ಹೊಂದಲು ನನ್ನ ದೇಶಭಕ್ತಿ ನನಗೆ ಒಂದು ಮೆಟ್ಟಲು. ಆದುದರಿಂದ ನನಗೆ ಧರ್ಮವಿಲ್ಲದೆ ರಾಜಕೀಯವಿಲ್ಲ. ರಾಜಕೀಯ ಧರ್ಮಕ್ಕೆ ಅಧೀನ. ಯಾಕೆಂದರೆ ಧರ್ಮವಿಲ್ಲದ ರಾಜಕೀಯ ಹೃದಯವನ್ನು, ಕೊಲ್ಲುತ್ತದೆ."

ಗಾಂಧಿಯವರ ಬಾಳಿನಲ್ಲಿ ಒಂದು ಗಳಿಯೂ ವಿಶ್ರಾಂತಿಯಿಲ್ಲ. ಅವರು ಮಾಡಿದ ಒಂದೊಂದು ಕೆಲಸಕ್ಕೆ ಸಾಧಾರಣರಾದವರಿಗೆ ನೂರು ನೂರು ವರುಷಗಳಾದರೂ ಬೇಕು. ಆ ಯಾವ ಕೆಲಸಗಳೂ ಅಪೂರ್ಣಗಳಲ್ಲ. ಪ್ರತಿಯೊಂದೂ ಹೇಗೆ ಹೇಗೆ ಆಗಬೇಕೋ ಹಾಗೆಯೇ ಆಗಿವೆ. ಯಾವುದರಲ್ಲಿಯೂ ಕರ್ಮ ಕೌಶಲ್ಯ ಕಡಿಮೆಯಾಗಿಲ್ಲ. ಗೀತೆಯಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳನ್ನು ವಿವರಿಸುವಾಗ "ಅನಪೇಕ್ಷಃ ಶುಚಿಃ ದಕ್ಷಃ ಉದಾಸೀನೋಗತ ವ್ಯಥಃ। ಸರ್ವಾರಂಭ ಪರಿತ್ಯಾಗೀ ಯೋಮದ್ಭಕ್ತಸ್ಸಮೇ ಪ್ರಿಯಃ॥ ಎಂದು ಹೇಳಿದೆ. ಇಲ್ಲಿ ಪರಮಾತ್ಮನು ದಕ್ಷಃ ಎಂಬ ಮಾತನ್ನು ಉಪಯೋಗಿಸಿದ್ದಾನೆ. ದಕ್ಷಃ ಎಂದರೆ ಶಕ್ತ ಎಂದು ಅರ್ಥ. ದಕ್ಷನಲ್ಲದವನು ಯಾವ ಕೆಲಸವನ್ನೂ ಸಾಧಿಸಲಾರ. ದಕ್ಷನಲ್ಲದವನು ಹಿಡಿದ ಕಾರ್ಯ ಎಷ್ಟೇ ಮಹತ್ವದ್ದಾದರೂ ಅವನ ದೌರ್ಬಲ್ಲದಿಂದಲೇ ಅದು ನಿಶ್ಶಕ್ತವಾಗುತ್ತದೆ. ಗಾಂಧಿಯವರ ಎಲ್ಲಾ ಕಾರ್ಯಗಳಲ್ಲಿಯೂ ಅವರು ನಿರೀಕ್ಷಿಸಿದುದಕ್ಕಿಂತ ಹೆಚ್ಚು ವ್ಯವಸ್ಥೆಯಿಂದ ಫಲ ದೊರೆತಿದೆ. ತನ್ನ ದೇಹದ ಮೇಲೆ ಪೂರ್ಣವಾದ

ಸ್ವಾಧೀನವುಳ್ಳವನಾಗಿ ಅದನ್ನು ಯಂತ್ರದಂತೆ ನಡಿಸುವುದೇ ಕರ್ಮ ಯೋಗಿಯ ಲಕ್ಷಣ. ಗಾಂಧಿಯವರು ಈ ವಿಷಯದಲ್ಲಿ ತಮ್ಮ ದೇಹ ದಲ್ಲಿಯೂ ದಯೆಯುಳ್ಳವರಲ್ಲವೆಂಬುದು ಎಲ್ಲರೂ ತಿಳಿದ ವಿಷಯ. ಜಲಿಯನ್‌ವಾಲಾಬಾಗ್ ಅತ್ಯಾಚಾರದ ವರದಿ ತಯಾರಿಸುವಾಗ ಗಾಂಧಿಯವರೊಬ್ಬರೇ ದಿನಕ್ಕೆ ೨೦ ಗಂಟೆ ಕೆಲಸಮಾಡುತ್ತಿದ್ದರು. ಹೀಗೆ ದೇಹವನ್ನು ದುಡಿಸುವ ಅವರ ಶಕ್ತಿ ಅದ್ಭುತವಾದುದು.

೧೯೩೦ ನೆಯ ಇಸವಿಯಲ್ಲಿ ಸವಿನಯ ಕಾಯಿದೆ ಭಂಗ ಮತ್ತು ಉಪ್ಪಿನ ಸತ್ಯಾಗ್ರಹದ ನಂತರ, ಗಾಂಧಿ ಇರ್ವಿನ್ ಒಪ್ಪಂದವಾಯಿತಷ್ಟೆ. ಆ ಕಾಲದಲ್ಲಿ ಗಾಂಧಿಯವರು ಹೀಗೆ ಕೆಲಸ ಮಾಡಿದರು.

ತಾರೀಖು ೨-೩-೩೦ ಭಾನುವಾರ ಬೆಳಿಗ್ಗೆ ವರ್ಕಿಂಗ್ ಕಮಿಟಿ ಸಭೆ
ಮಧ್ಯಾಹ್ನ ೨-೩೦ ರಿಂದ ೫-೩೦ ವೈಸರಾಯರೊಡನೆ ಮಾತು
ಸಂಜೆ ೬-೩೦ ರಿಂದ ೮-೧೫ ವೈಸರಾಯಿಯ ಜತೆ ನಡೆದುದನ್ನು ವರ್ಕಿಂಗ್ ಸಮಿತಿಗೆ ವಿವರಿಸುವುದು
ರಾತ್ರಿ ೯-೩೦ ಮತ್ತೆ ವೈಸರಾಯ್ ಭವನಕ್ಕೆ ಗಾಂಧಿಯವರು ಆ ಐದು ಮೈಲಿ ನಡೆದುಕೊಂಡೇ ಹೋದರು
ರಾತ್ರಿ ೯-೩೦ ರಿಂದ ೧೨-೧೫ ವೈಸರಾಯರೊಂದಿಗೆ ಹೆಚ್ಚಿಗೆ ಮಾತುಕತೆ.
೧೨-೧೫ ಹೆಗಲಿನ ಮೇಲೆ ಖಾದಿ ಶಾಲು ಹೊದೆದು ಕೈಯ್ಯಲ್ಲಿ ದೊಣ್ಣೆ ಹಿಡಿದುಕೊಂಡು ೫ ಮೈಲಿ ಮತ್ತೆ ನಡೆದುಕೊಂಡೇ ಡಾಕ್ಟರ್ ಅನಸಾರಿಯವರ ಬಂಗಲೆಗೆ ಬಂದರು
ಅರ್ಧರಾತ್ರಿ ೧-೩೦ ವರ್ಕಿಂಗ್ ಸಮಿತಿ ಸದಸ್ಯರನ್ನು ಎಬ್ಬಿಸಿದರು.
,, ೧-೪೦ ರಿಂದ ಮುಂಜಾನೆ ೫ ರ ವರೆಗೆ ಸಮಿತಿಗೆ ವೈಸರಾಯರೊಂದಿಗೆ ನಡೆದ ಸಂಭಾಷಣೆ ವರದಿ ಮಾಡಿದರು.

ಕಾರ್ಯವನ್ನು ಆವಶ್ಯಕವಾಗಿ ಮಾಡಬೇಕಾದಾಗ ಹಗಲು ರಾತ್ರಿ ಎಂಬ ನಿಯಮ, ವಿಶ್ರಾಂತಿ ಸುಧಾರಣೆ ಯಾವುದು ಇಲ್ಲ. ಮೇಲಿನ ಪಟ್ಟಿ ನೋಡಿದರೆ "ಯಾ ನಿಶಾ ಸರ್ವ ಭೂತಾನಾಂ ತಸ್ಯಾಂ ಜಾಗರ್ತಿ ಸಂಯಮಿ ಯಸ್ಯಾಂ ಜಾಗ್ರತಿ ಭೂತಾನಿ ಸಾನಿಶಾ ಪಶ್ಯತೋ ಮುನೇಃ"

ಎಂಬ ಗೀತಾವಾಕ್ಯ ಜ್ಞಾಪಕ ಬರುತ್ತದೆ. ಅದೇ ಆಂಗ್ಲೇಯ ಸುದ್ಧಿಗಾರರು ಹೀಗೆ ಮುಂದುವರಿಸುತ್ತಾರೆ. "ಚರ್ಚಿಲ್, ತನ್ನ ಉದ್ಧತವಾದ ಜಂಭದ ಮಾತುಗಳ ಆರ್ಭಟದಲ್ಲಿ, ಗಾಂಧಿ ಬೆತ್ತಲೆಯ ಫಕೀರ್ ಎಂದು ಹೇಳಿದುದು ಆಶ್ಚರ್ಯವಲ್ಲ. ಆದರೆ ಚರ್ಚಿಲ್, ಗಾಂಧಿಯನ್ನು ನೋಡಿದ್ದರೆ ಹೀಗೆ ಹೇಳುತ್ತಿರಲಿಲ್ಲ. ನನ್ನ ಅನುಭವ ಇಷ್ಟು. ಗಾಂಧಿ ಮಾತನಾಡಲು ಪ್ರಾರಂಭಿಸಿದ ಕೂಡಲೇ ಅವರ ರೂಪ ಮರೆಯುತ್ತದೆ. ನಮ್ಮ ಎದುರಿಗೆ ಜಗತ್ತಿನ ಒಬ್ಬ ಮಹದ್ವ್ಯಕ್ತಿ ಇದ್ದಾನೆ ಎಂಬುದು ನಮಗೆ ತತ್‌ಕ್ಷಣ ಹೊಳೆಯುತ್ತದೆ. ಕೋಪ ತಾಪು ಇಲ್ಲದೆ ಅವರು ಶಾಂತವಾಗಿ ಮಾತನಾಡುತ್ತಾರಾದರೂ ಆ ಮಾತುಗಳ ಮಾಟ, ನಮ್ಮ ಮನಸ್ಸನ್ನು ಹಿಡಿದುಕೊಳ್ಳುತ್ತದೆ. ಮಾತುಗಳು ಮನಸ್ಸನ್ನು ಪೂರ್ಣವಾಗಿ ಆಕರ್ಶಿಸುತ್ತವೆ. ಅವರೊಂದಿಗೆ ಅರ್ಧಗಂಟೆ ಮಾತನಾಡುವುದರಲ್ಲಿ ಸುಸ್ತಾಗಿ ಹೋಗುತ್ತದೆ. ಯಾಕೆಂದರೆ ಅವರು ಇತರರಂತೆ ಮಾತನಾಡುವುದಿಲ್ಲ. ಋಷಿಯಂತೆ ಮಾತನಾಡುತ್ತಾರೆ.... ಋಷಿ ಹೇಗೆಯೋ ಹಾಗೆಯೇ ದಕ್ಷನಾದ ರಾಜತಂತ್ರಜ್ಞ. ಪತ್ರಿಕಾ ಸುದ್ದಿಗಾರರ ಯಾವ ಘಾಟಿ ಸವಾಲಿಗೂ ಅವರು ಸರಿಯಾದ ಪ್ರತ್ಯುತ್ತರ ಕೊಡುತ್ತಾರೆ. ರಾಜಕೀಯ ಚಳುವಳಿ ಪ್ರಚಾರದಲ್ಲಿ ಲಾಯಡ್ ಜಾರ್ಜರೂ ಇವರಿಂದ ಪಾಠ ಕಲಿಯಬಹುದು. ಆದರೆ ಗಾಂಧಿಯವರ ಸ್ವಭಾವ ಮಗುವಿನಂತಹ ಸ್ವಭಾವ. ಜಗತ್ತಿನ ದುಃಖವೆಲ್ಲ ಅವರ ಕಣ್ಣಿನಲ್ಲಿ ರೂಪವೆತ್ತಂತೆ ಇದೆ. ಭಾರತೀಯರ ಸ್ವಾಭಾವಿಕ ದೌರ್ಬಲ್ಯಗಳನ್ನು ಅವರು ಜೀವನದಲ್ಲಿ ಉದ್ದಕ್ಕೂ ಜಯಿಸಿದ್ದಾರೆ. ಅವರು ಆಗಾಗ ಸಾರ್ವಜನಿಕವಾಗಿ ಉಪವಾಸ ಮಾಡುವುದುಂಟು. ಆದರೆ ಅವರ ಜೀವನ ಒಂದು ದೊಡ್ಡ ಉಪವಾಸವೇ.

"ಭಾರತದಮೇಲೆ ಪೂರ್ಣ ಪರಿಣಾಮವುಂಟುಮಾಡಿರುವ ಮೊದ

ಲನೆಯ ಭಾರತೀಯರೆಂದರೆ ಗಾಂಧಿಯೆ. ಋಷಿ, ರಾಜತಂತ್ರಜ್ಞ ಭಾರತದ ಮುಕ್ಕಾಲು ಜನರಿಗೆ ದೇವರು. ಜಗತ್ತಿನ ಅರ್ಧ ಜನರಿಗೆ ಆದರ್ಶ. ಆಧುನಿಕ ಕಾಲದ ಅತ್ಯಂತ ಶಕ್ತರಾಷ್ಟ್ರವಾದ ಬ್ರಿಟನ್ನನ್ನು ಎದುರಿಸುವ ಶಕ್ತಿಯನ್ನು ಅವರು ಭಾರತಕ್ಕೆ ಉಂಟುಮಾಡಿದ್ದಾರೆ. ಕೆಲವು ಸಂಗತಿಗಳಲ್ಲಿ ಗಾಂಧಿ ಅನೇಕ ತಲೆಮಾರು ಮುಂದೆ. ಕೆಲವಲ್ಲಿ ಅನೇಕ ತಲೆಮಾರು ಹಿಂದೆ. ಸನ್ಯಾಸಿ, ಫಕೀರ್ ಯೋಗಿ, ಬ್ರಿಟಿಷ ರಾಜರ ವಿರೋಧಿ. ಗಾಂಧಿಯವರೊಂದಿಗೆ ವ್ಯವಹರಿಸುವುದೆಂದರೇ ಅದ್ಭುತ ನಾವು, ಭಾರತ ೧೮೫೭ರ ಸ್ವಾತಂತ್ರ್ಯದ ದಂಗೆಯಲ್ಲಿದ್ದುದಕ್ಕಿಂತ ಹತ್ತರಷ್ಟು ಆಯುಧಗಳ ಶಕ್ತಿಯುಳ್ಳವರಾಗಿದ್ದೇವೆ. ಆದರೆ ನಮ್ಮ ನೀತಿಯ ಬಲ ಆಗಿನದಕ್ಕಿಂತ ೩೦ರಷ್ಟು ಕಡಿಮೆಯಾಗಿದೆ. ಈಗ ನಮ್ಮ ಶಕ್ತಿ ಅಸಾಧ್ಯ ಆದರೆ ನಮ್ಮ ಅಧಿಕಾರವನ್ನು ಈಗ ನಾವು ಅನಿವಾರ್ಯ ವಾಗಿ ಬಿಡಲೇಬೇಕಾಗಿದೆ.

"ಮಿಸ್ ಸ್ಲೇಡ್ ಗಾಂಧಿಯ ಆಹಾರ ತೆಗೆದುಕೊಂಡು ವೈಸ ರಾಯ್ ಭವನಕ್ಕೆ ಬಂದಳು. (40 ಖರ್ಜೂರ ಮತ್ತು ಆಡಿನ ಹಾಲು) ಗಾಂಧಿ ಅದನ್ನು ವೈಸರಾಯ್ ಆಫೀಸಿನಲ್ಲಿಯೇ ಕುಳಿತು ತಿಂದರು. ಅಬ್ಬ ಕರ್ಜನ್ನಿನ ಭೂತ! ಗಾಂಧಿ, ಜಗತ್ತಿನ ಅತಿ ಸಾಮರ್ಥ್ಯದ ಚಕ್ರಾಧಿಪತ್ಯವನ್ನು ಸೋಲಿಸಿದ್ದಾರೆ. ಎಲ್ಲಿಯವರೆಗೆ ಅಸಹಕಾರವೋ ಅಲ್ಲಿಯವರೆಗೆ ಸರ್ಕಾರ ನಾಚಿಕೆಯಲ್ಲಿತ್ತು. ಲಾರ್ಡ್ ಇರ್ವಿನ್‌ರು ಸರ್ಕಾ ರದ ಘನತೆ ಹಾಳುಮಾಡಲಿಲ್ಲ. ಅದು ಆಗಲೇ ಹೋಗಿ ಆಗಿದ್ದಿತು. ಗಾಂಧಿಯವರೊಂದಿಗೆ ಒಪ್ಪಂದಕ್ಕೆ ಬಂದುದರಿಂದ ಬ್ರಿಟಿಷರ ಘನತೆ ಸ್ವಲ್ಪ ಹೆಚ್ಚಾಯಿತು. ಗಾಂಧಿ ಬರಿಯ ರಾಜತಂತ್ರಜ್ಞನಲ್ಲ, ಯೋಗಿ ಎಂಬುದನ್ನು ಅರಿತ ಇಂಗ್ಲೀಷರ ಪೈಕಿ ಇರ್ವಿನ್‌ರೇ ಮೊದಲನೆಯವರು.

"ಗಾಂಧಿ ಮತ್ತು ವೈಸರಾಯ್ ಎರವಾಡ ಸೆರೆಮನೆಯನ್ನು ಕುರಿತು ಸಹ ವಿನೋದವಾಗಿ ಮಾತನಾಡಿದರು. ಇರ್ವಿನ್ ನಗುತ್ತಾ "ಗಾಂಧಿ ಸೆರೆಮನೆಗೆ ಹೋಗಲು ನಿಮ್ಮ ಗಂಟು ಸಿದ್ಧವಾಗಿದೆಯೇ ಸೆರೆ ಮನೆ ಅಧಿಕಾರಿಗೆ ನಿಮ್ಮಲ್ಲಿ ಬಹಳ ಪ್ರೀತಿ. ನಿಮ್ಮನ್ನು ನೋಡದೆ ಅವರು ಬಹು ಒಂಟಿಯಾಗಿದ್ದಾರೆ" ಎನ್ನುತ್ತಿದ್ದರು. ಅವರಿಬ್ಬರೂ

ಚರ್ಚಿಲರ ಆರ್ಭಟವನ್ನು ಕುರಿತು ನಕ್ಕರೆಂದೂ ನಾನು ಕೇಳಿದೆ. ಒಂದುಸಲ ಗಾಂಧಿಯವರು ಎದ್ದು ಹೊರಟಾಗ ತಮ್ಮ ಖಾದಿ ಶಾಲನ್ನು ಕುರ್ಚಿಮೇಲೆ ಬಿಟ್ಟರು. ಇರ್ವಿನರು ಅದನ್ನು ಹಿಡಿದುಕೊಂಡು ಬಾಗಿಲಿಗೆ ಬಂದು "ಗಾಂಧಿ ನಿಮ್ಮ ಶಾಲು ಹಿಂದೆ ಬಿಟ್ಟಿರಿ, ಇದನ್ನು ಹಿಂದೆ ಬಿಟ್ಟುಹೋಗುವಷ್ಟು ಹೆಚ್ಚು ಬಟ್ಟೆಗಳು ನಿಮ್ಮಲ್ಲಿಲ್ಲವೆಂದು ನಿಮಗೆ ಗೊತ್ತು" ಎಂದರು.

ಯೋಗಿಯಾದವನು ಗಳಿಗೆ ಗಳಿಗೆಯೂ ಆತ್ಮದ ಅನ್ವೇಷಣದಲ್ಲಿ ಬಾಳನ್ನು ಶುದ್ಧಿಮಾಡಿಕೊಳ್ಳುವುದರಲ್ಲಿ, ಜಗತ್ತನ್ನು ಪ್ರೀತಿಸುವುದರಲ್ಲಿ ತೊಡಗಿರುತ್ತಾನೆ. "ಈ ಸಾಧನೆ ಮುಗಿಯಿತು ನಾನು ಸಿದ್ಧನಾದೆ" ಎಂದು ಅವನು ಎಂದಿಗೂ ಹೇಳುವುದು ಸಾಧ್ಯವಿಲ್ಲ. "ಮನುಷ್ಯ ತಪ್ಪು ಮಾಡುವವನೇ, ತನ್ನದಾರಿ ಸರಿ ಎಂದು ಅವನಿಗೆ ತೋರಿದರೂ ಅದು ಸರಿಯಾಗಿರದೆ ಇರಬಹುದು. ತನ್ನ ಪ್ರಾರ್ಥನೆಗೆ ಉತ್ತರ ಎಂದು ಅವನು ತಿಳಿದಿರುವುದು ಅವನ ಹೆಮ್ಮೆಯ ಪ್ರತಿಧ್ವನಿಯೇ ಆಗಿರಬಹುದು. ನಿರ್ದೋಷಿಯಾಗಿರಬೇಕಾದರೆ ಹೃದಯ ಪರಿಶುದ್ಧವಾಗಿರಬೇಕು. ನನ್ನವಿಷಯದಲ್ಲಿ ಹಾಗೆ ಹೇಳಲಾರೆ, ಮನುಷ್ಯನ ಅಪರಿಶುದ್ಧವಾದ ಆತ್ಮ, ತಪ್ಪು ಮಾಡುತ್ತಾ ಮೇಲಕ್ಕೆ ಹೋಗುವುದು. ಇತರರ ಮೇಲೂ ನನ್ನ ಮೇಲೂ ಪ್ರಯೋಗಗಳನ್ನು ಮಾಡುತ್ತ ಮಾತ್ರ ನಾನು ಮೇಲೆ ಏರಬಲ್ಲೆ. ದೇವರು ಒಂದೇ ಆದುದರಿಂದ ಮನುಷ್ಯ ಜಗತ್ತು ಒಂದೇ. ನಮ್ಮ ದೇಹಗಳು ಬೇರೆ ಬೇರೆಯಾದರೂ ಆತ್ಮ ಒಂದೇ. ಎಲ್ಲದರ ಮೂಲವೂ ಒಂದೇ. ಆದುದರಿಂದ ನಾನು ಕೆಟ್ಟವರೊಂದಿಗೂ ಒಂದು, ಒಳ್ಳೆಯವರೊಂದಿಗೂ ಒಂದು. ನನ್ನ ಸತ್ಯಶೋಧದ ಪ್ರಯೋಗದಲ್ಲಿ ನನ್ನಂತಪರೆಲ್ಲಾ ಒಳಗಾಗಿಯೇ ಆಗುತ್ತಾರೆ. ಪ್ರಯೋಗವಿಲ್ಲದೆ ನಾನು ಇರಲಾರೆ, ಜೀವನ ಪ್ರಯೋಗವೇಯೆ."

ಯೋಗಿಯಾದವನು ನಿರಾಹಾರಿಯಾಗಿ ದೇಹವನ್ನು ಶೋಷಿಸಬೇಕಾಗುವುದು. ಈ ದೃಷ್ಟಿಯಿಂದ ಗಾಂಧಿ ಪದೇಪದೆ ಉಪವಾಸ ಕೈಕೊಂಡಿದ್ದಾರೆ. "ನನ್ನಲ್ಲಿ ಇರುವ ಯಾವುದೋ ಕುಂದಕದಿಂದಲೇ ನನ್ನ ಕೆಲಸಗಳಿಗೆ ಒದಗಬೇಕಾದ ಜಯ ಒದಗಲಿಲ್ಲ. ಆದುದರಿಂದ

ಈ ದೇಹವನ್ನು ಇನ್ನೂ ಹೆಚ್ಚು ಪರಿಶುದ್ಧಮಾಡಬೇಕು. ಭಗವಂತನ ಸಂದೇಶ ನನ್ನ ಮೂಲಕ ಜನರಿಗೆ ತಲಪುವಂತೆ ಆಗಬೇಕಾದರೆ ನಾನು ಇನ್ನೂ ಹೆಚ್ಚು ಅರ್ಹನಾಗಬೇಕು" ಎಂಬುದು ಗಾಂಧಿಯವರ ಮತ. ಡಾಕ್ಟರ್ ಮಾಟ್‌ರವರೊಡದೆ ಗಾಂಧಿಯವರು "ದೇಹವನ್ನು ದಂಡಿಸ ಬೇಕು. ಇಲ್ಲದಿದ್ದರೆ ದೇವರು ಕಾಣುವುದಿಲ್ಲ, ದೇವರು ವಾಸಿಸುವ ದೇವಾಲಯ ಎಂದು ದೇಹಕ್ಕೆ ಕೊಡುವ ಗೌರವ ಬೇರೆ. ಆದರೆ ಚೇಷ್ಟೆ ಮಾಡುವ ಇಂದ್ರಿಯಗಳ ಸದನವೆಂದು ಇದನ್ನು ಹತೋಟಿಯಲ್ಲಿ ಡುವುದು ಬೇರೆ. ಆತ್ಮದ ಕಲ್ಯಾಣದ ದೃಷ್ಟಿಯಿಂದ ಉಪವಾಸ ಮಾಡ ಬೇಕೆಂದು ತೋರಿದಾಗ ಮಾಡಬೇಕು. ಆಗ ಇತರರನ್ನು ಕೇಳಬೇಕಾ ದುದಿಲ್ಲ, ಇದು ತನಗೂ ದೇವರಿಗೂ ಸಂಬಂಧಪಟ್ಟ ವಿಚಾರವೇ ಹೊರತು ಇದರಲ್ಲಿ ಇತರರ ಕೈವಾಡ ಏನೂ ಇಲ್ಲ. ಶ್ರೀರಾಮನು ಕಾಡಿಗೆ ಹೋಗುವಾಗ ಚರ್ಚಿಸುತ್ತ ನಿಂತಿದ್ದರೆ ಕಾಡಿಗೆ ಹೋಗುವುದಕ್ಕೇ ಆಗುತ್ತಿರಲಿಲ್ಲ. ಆತ ವಾದ ಮಾಡಲು ನಿಲ್ಲಲಿಲ್ಲ. ತಂದೆಯ ಮಾತಿಗೆ ಅನುಸಾರವಾಗಿ ಕಾಡಿಗೆ ಹೋದನು. ದೇವರಲ್ಲಿ ಯಾರಿಗೆ ನಂಬಿಕೆ ಇದೆಯೋ ಅವನು ಮಾತ್ರ ಅದ್ಭುತ ಕೆಲಸಗಳನ್ನು ಮಾಡುವ ನಿಶ್ಚಯ ಮಾಡಬಲ್ಲನು." ಎಂದಿದ್ದಾರೆ.

## ದರಿದ್ರ ನಾರಾಯಣ

ಇಂತಹ ಯೋಗಿಯ ಪ್ರೇಮಕ್ಕೆ ಹೊರತಾದುದು ಯಾವುದೂ ಇಲ್ಲ. ಅದರಲ್ಲಿಯೂ ದರಿದ್ರರೂ ದಲಿತರೂ ತುಳಿಯಲ್ಪಟ್ಟವರೂ ಹರಿಜನರೂ ಅವರ ಅಪಾರವಾದ ಕರುಣೆಯ ಕಟಾಕ್ಷಕ್ಕೆ ಮೊದಲು ಬರುತ್ತಾರೆ. ಭಾರತದ ಅತ್ಯಂತ ದೊಡ್ಡ ಸಮಸ್ಯೆ ಇಲ್ಲಿಯ ದಾರಿದ್ರ್ಯ. ಒಂದು ಕಾಲದಲ್ಲಿ ಅತ್ಯಂತ ವೈಭವದಿಂದ ಬೆಳಗುತ್ತಾ ತನ್ನ ಐಶ್ವರ್ಯ ದಿಂದ ಜಗತ್ತನ್ನೆಲ್ಲಾ ಆಕರ್ಷಿಸಿದ ಭಾರತ ಇಂದು ಹೊಟ್ಟೆಗಿಲ್ಲದೆ ಸಾಯುತ್ತಿದೆ. ಇಂತವರ ಸೇವೆ ಮಾಡುವವನು ಅವರಿಗಿಂತಲೂ ಹೆಚ್ಚು ಕಷ್ಟಕ್ಕೆ ಸಿದ್ಧನಾಗಿರಬೇಕು. ಭಾರತದ ಈ ದಾರಿದ್ರ್ಯದ ಕಾರಣ ವೇನು? ಒಂದೇ ಮಾತಿನಲ್ಲಿ ಹೇಳಬೇಕಾದರೆ ಭಾರತದ ಪಾರತಂತ್ರ್ಯವೇ ಭಾರತದ ದಾರಿದ್ರ್ಯಕ್ಕೆ ಕಾರಣ.

ಗಾಂಧಿಯವರು ದುಂಡುಮೇಜು ಪರಿಷತ್ತಿಗಾಗಿ ಲಂಡನ್ನಿಗೆ ಹೋಗಿದ್ದಾಗ, ಇಂಗ್ಲೆಂಡಿನ ಕಾರ್ಮಿಕರು ಅವರನ್ನು ಸಂಧಿಸಿದರು. (ಭಾರತೀಯರ ಪರದೇಶಿ ಬಟ್ಟೆಗಳ ಬಹಿಷ್ಕಾರ ಚಳುವಳಿಯಿಂದ ಅವರೆಲ್ಲಾ ನಿರುದ್ಯೋಗಿಗಳಾಗಿದ್ದವರು) ಭಾರತದ ವ್ಯವಸಾಯ, ಭಾರತದ ರೈತರಿಗೆ ಯಾಕೆ ವರುಷದಲ್ಲಿ ಆರು ತಿಂಗಳು ಕೆಲಸವಿಲ್ಲ? ಮುಂತಾದ ಪ್ರಶ್ನೆಗಳನ್ನೆಲ್ಲಾ ಆ ಕಾರ್ಮಿಕರು ಕೇಳಿದರು; ಭಾರತೀಯರ ಜೀವನದ ಮಟ್ಟ ಕುರಿತು ಪ್ರಶ್ನೆ ಕೇಳಿದರು. ಅವರಿಗೂ ನಿರುದ್ಯೋಗ, ಆದರೆ ಅವರದು ಭಾರತದವರಂತೆ ದಟ್ಟದರಿದ್ರವಲ್ಲ. ಹಿಂದೆ ಒಂದು ಷಿಲಿಂಗ್ ವೆಚ್ಚಮಾಡುತ್ತಿದ್ದವನು ಈಗ ಅರ್ಧ ಷಿಲಿಂಗ್ ವೆಚ್ಚಮಾಡಬೇಕಾಗಿದೆ. ಅಷ್ಟೇ. ಅನೇಕರು ಏನನ್ನೂ ಉಳಿಸಲು ಸಾಧ್ಯವಿಲ್ಲದವರಾಗಿದ್ದಾರೆ. ಕೆಲವರು ಹಿಂದೆ ಉಳಿಸಿದುದನ್ನೂ ಖರ್ಚುಮಾಡುತ್ತಿದ್ದಾರೆ. ಈಗ ಅವರಿಗೆ ನಿರುದ್ಯೋಗದ ಭತ್ಯ ವಾರಕ್ಕೆ ಗಂಡಸಿಗೆ ೧೭ ಷಿಲಿಂಗ್, ಹೆಂಗಸಿಗೆ ೧೫ ಷಿಲಿಂಗ್ ಮಗುವಿಗೆ ೨ ಷಿಲಿಂಗ್ ಹೀಗೆ ಇದೆ. ಎಲ್ಲವನ್ನೂ ಕೇಳಿ ಗಾಂಧಿಯವರು ಹೀಗೆ ಹೇಳಿದರು " ಇದು (ನಿರುದ್ಯೋಗ ಭತ್ಯ) ಒಂದು ಆಸ್ತಿಯೇ. ಹೊಸಹೊಸ ಕೆಲಸಗಳನ್ನು ಕಂಡುಹಿಡಿಯುವುದರಲ್ಲಿ ಚತುರರಾದ ನಿಮಗೆ ಇನ್ನೂ ಹೊಸ ಕೈಗಾರಿಕೆ ಕಂಡುಹಿಡಿಯುವುದು ಕಷ್ಟವಿಲ್ಲ ಆದರೆ ನಮ್ಮ ಕೋಟಿ ಸಂಖ್ಯೆಯ ಉಪವಾಸವಿರುವವರಿಗೆ ಬೇರೆ ಯಾವ ಕಸಬೂ ಇಲ್ಲವೇ ಇಲ್ಲ. ನೀವು ಯಾರಾದರೂ ಪ್ರವೀಣರು ಒಂದು ಉದ್ಯೋಗ ಕಂಡುಹಿಡಿದರೆ, ನೂಲುವುದರ ಸ್ಥಳದಲ್ಲಿ ಅದನ್ನು ಇಡುತ್ತೇನೆ."

ಆದರೆ ಯಾರೂ ಯಾವ ಕಸಬನ್ನೂ ಸೂಚಿಸಲಿಲ್ಲ. ಭಾರತದ ದಾರಿದ್ರ್ಯ, ಇದ್ದಂತೆಯೇ ಇದೆ. ಗಾಂಧಿಯವರು ಈ ದರಿದ್ರನಾರಾಯಣನ ಪ್ರತಿನಿಧಿ. ಅವರಿಗೆ ಇಲ್ಲದ ಯಾವ ಸುಖವೂ ನನಗೆ ಬೇಡ ಎನ್ನುತ್ತಾರೆ ಗಾಂಧಿ. ಅವರ ಆಹಾರ ಉಡುಪು ಎಲ್ಲವೂ ಇದಕ್ಕೆ ಅನುಸಾರವಾಗಿದೆ. ಅವರದೆಂದುಕೊಳ್ಳುವ ವಸ್ತು ಪ್ರಪಂಚದಲ್ಲಿ ಯಾವುದೂ ಇಲ್ಲ. ಆದರೆ ಜಗತ್ತೂ ಜಗತ್ತಿನ ಭಂಡಾರವೂ ಅವರದೇ. ತೇನ ತ್ಯಕ್ತೇನ ಭುಂಜೀಥ (ತ್ಯಜಿಸುವುದರಿಂದ ಅನುಭವಿಸು) ಎಂಬುದು ಅವರ ಬಾಳಿಗೆ ಚೆನ್ನಾಗಿ ಅನ್ವಯಿಸುತ್ತದೆ.

ಖಾದಿ, ಗ್ರಾಮೋದ್ಯೋಗ ಚಳುವಳಿ, ವಾರ್ಧಾ ಶಿಕ್ಷಣ ಕ್ರಮ ಇವುಗಳೆಲ್ಲಾ ಈ ಗುರಿಯಿಂದಲೇ ಹೊರಟಿವೆ. ಭಾರತ, ಪರಕೀಯರ ಆಡಳಿತಕ್ಕೆ ಒಳಗಾಗಿರುವುದರಿಂದ ಇಲ್ಲಿನ ಸರ್ಕಾರದ ಪ್ರತಿಯೊಂದು ಕೆಲಸದಿಂದಲೂ ಜನರ ದಾರಿದ್ರ್ಯವೇ ಹೆಚ್ಚುತ್ತಿದೆ. ಗಾಂಧಿಯವರು ೧೯೩೦ನೆಯ ಇಸವಿಯಲ್ಲಿ ಉಪ್ಪಿನ ಸತ್ಯಾಗ್ರಹದ ಕಾಲದಲ್ಲಿ ವೈಸರಾಯರಿಗೆ ಬರೆದ ಕಾಗದದಲ್ಲಿ ತೋರಿಸಿದ ಭಾರತದ ಸ್ಥಿತಿ ಇಂದೂ ಇದೆ. ಆಗ ಗಾಂಧಿಯವರು, ಹೀಗೆ ಹೇಳಿದರು. "ಸರ್ಕಾರದ ಉತ್ಪತ್ತಿಯ ಹೆಚ್ಚು ಭಾಗವಾದ ಭೂಕಂದಾಯದ ನೀತಿ ಬದಲಾವಣೆಯಾಗಬೇಕು. ಅಷ್ಟೇ ಅಲ್ಲ, ಆ ನೀತಿಯನ್ನು ರೈತನ ಹಿತಕ್ಕೆ ಅನುಕೂಲವಾಗುವಂತೆ ಬದಲಾಯಿಸಬೇಕೇ ಹೊರತು, ರೈತನನ್ನು ಅದು ಅರೆಯುವುದಾಗಿರಬಾರದು. ಆದರೆ ಬ್ರಿಟಿಷರ ಆಡಳಿತದಲ್ಲಿ ರೈತನ ನಾಶವಾಗುತ್ತಿದೆ. ಅವನು ತಿನ್ನುವ ಉಪ್ಪಿನ ಮೇಲಿನ ಕಂದಾಯದ ಹೆಚ್ಚು ಭಾಗವೂ ಅವನ ಮೇಲೆಯೇ ಬಿದ್ದಿದೆ. ಮಾದಕ ಪದಾರ್ಥ ಮತ್ತು ಹೆಂಡ ಸಾರಾಯಿಗಳ ಉತ್ಪತ್ತಿಯೂ ಬಡವರಿಂದಲೇ ಬರುತ್ತದೆ. ಕುಡಿತ ಬಡವರ ನೀತಿಯನ್ನೂ ಶಕ್ತಿಯನ್ನೂ ನಾಶಮಾಡುತ್ತದೆ. ಇದನ್ನು ವ್ಯಕ್ತಿಗೆ ಸ್ವಾತಂತ್ರ್ಯ ಎಂಬ ಹೆಸರಿನಲ್ಲಿ ನಡೆಸುತ್ತಿದ್ದೀರಿ. ಆದರೆ ವಾಸ್ತವವಾಗಿ ಸರ್ಕಾರದ ಆದಾಯಕ್ಕಾಗಿಯೇ ಇದು ಇರುವುದು."

"ಪರದೇಶದ ಈ ದೊಡ್ಡ ಸರ್ಕಾರ ಇಲ್ಲಿ ನಡೆಯಬೇಕಾಗಿರುವುದರಿಂದ ಈ ಅಸಮಾನತೆ ಪಕ್ಷಪಾತ ಇವೆ. ಜಗತ್ತಿನಲ್ಲಿ ಮತ್ತಾವ ಸರ್ಕಾರದ ವೆಚ್ಚವೂ ಇಷ್ಟು ಇಲ್ಲ. ಉದಾಹರಣೆಗೆ ನಿಮ್ಮ (ವೈಸರಾಯ್) ಸಂಬಳವನ್ನೇ ತೆಗೆದುಕೊಳ್ಳಿ. ನಿಮ್ಮ ಸಂಬಳ ತಿಂಗಳಿಗೆ ೨೧೦೦೦ ರೂ. ಇದರ ಜತೆಗೆ ಇನ್ನೂ ಅಪ್ರತ್ಯಕ್ಷವಾಗಿ ಏನೇನೋ ತೆಗೆದುಕೊಳ್ಳುತ್ತೀರಿ. ಬ್ರಿಟಿಷ್ ಮುಖ್ಯ ಮಂತ್ರಿಗೆ ವರುಷಕ್ಕೆ ೫೦೦೦ ಪೌಂಡು ಅಥವ ತಿಂಗಳಿಗೆ ೫೪೦೦ ರೂ ಸಂಬಳ. ಭಾರತೀಯನ ನಿತ್ಯದ ಸರಾಸರಿ ಉತ್ಪತ್ತಿ ಎರಡು ಆಣೆ. ನೀವು ನಿತ್ಯ ೭೦೦ ರೂಪಾಯಿ ತೆಗೆದುಕೊಳ್ಳುತ್ತೀರಿ. ಇಂಗ್ಲೆಂಡಿನ ಮುಖ್ಯ ಮಂತ್ರಿಗೆ ದಿನಕ್ಕೆ ೧೮೦ ರೂಪಾಯಿ. ಇಂಗ್ಲೆಂಡಿನ ಪ್ರತಿ ಮನುಷ್ಯನ ಸರಾಸರಿ ಉತ್ಪತ್ತಿ ದಿನಕ್ಕೆ

೨ ರೂಪಾಯಿ. ಭಾರತದ ಸಾಮಾನ್ಯ ಮನುಷ್ಯನ ಉತ್ಪತ್ತಿಯ ಐದು ಸಾವಿರದಷ್ಟು ನಿಮ್ಮ ಸಂಬಳ. ಬ್ರಿಟಿಷ್ ಮುಖ್ಯ ಮಂತ್ರಿಗೆ ಬ್ರಿಟಿಷರ ಸರಾಸರಿ ಉತ್ಪತ್ತಿಯ ೯೦ರಷ್ಟು ಸಂಬಳ. ಈ ವಿಚಿತ್ರ ಕುರಿತು ಯೋಚಿಸಿ. ಇಂತಹ ಏರ್ಪಾಡಿನ ಸರ್ಕಾರ ತಕ್ಷಣ ನಿಲ್ಲಬೇಕು. ವೈಸ ರಾಯರ ಸಂಬಳಕ್ಕೆ ಅನ್ವಯಿಸುವ ಮಾತು ಇತರ ಅಧಿಕಾರಿಗಳ ಸಂಬ ಳಕ್ಕೂ ಅನ್ವಯಿಸುತ್ತದೆ.

"ಆದುದರಿಂದ ಕಂದಾಯದ ಹೊರೆಯನ್ನ ಕಡಿಮೆ ಮಾಡಬೇಕಾ ದರೆ ಸರ್ಕಾರದ ಆಡಳಿತದ ಖರ್ಚು ಕಡಿಮೆ ಆಗಬೇಕು. ಅಂದರೆ ಸರ್ಕಾ ರದ ಆಡಳಿತಕ್ರಮವೇ ಬದಲಾಯಿಸಬೇಕು. ಸ್ವಾತಂತ್ರ್ಯವಿಲ್ಲದೆ ಈ ಬದಲಾವಣೆ ಸಾಧ್ಯವಿಲ್ಲ ಭಾರತದ ರೈತರಿಗೆ, ಸ್ವಾತಂತ್ರ್ಯವೆಂದರೆ ಈ ಹೊರೆಯ ಬಿಡುಗಡೆ ಎಂದೇ ಅರ್ಥ. ಭಾರತ ಒಗ್ಗಟ್ಟಾಗಿ ಒಂದೇ ಧ್ವನಿಯಿಂದ ಪ್ರತಿಭಟಿಸುತ್ತಿದ್ದರೂ, ಇಂಗ್ಲೆಂಡಿನಲ್ಲಿರುವ ಯಾವ ಬ್ರಿಟಿಷ್ ಸರ್ಕಾರದ ಪಕ್ಷವೂ ಭಾರತದ ಲೂಟಿಯಿಂದ ಬರುವ ಲಾಭ ವನ್ನು ಬಿಡಲು ಸಿದ್ಧವಾಗಿಲ್ಲ. ಆದರೂ ಭಾರತ ಒಂದು ರಾಷ್ಟ್ರವಾಗಿ ಉಳಿಯಬೇಕಾದರೆ, ಹಸಿವಿನಿಂದ ಅದು ನಿಧಾನವಾಗಿ ಸಾಯುವುದನ್ನು ತಪ್ಪಿಸಬೇಕಾದರೆ, ಯಾವುದಾದರೂ ಬಿಡುಗಡೆಯ ಮಾರ್ಗ ಹಿಡಿಯಲೇ ಬೇಕು. ಬ್ರಿಟಿಷ್ ಸರ್ಕಾರ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಭಾರತದ ವ್ಯಾಪಾರವನ್ನು ಹಿಡಿದುಕೊಳ್ಳುವುದರಲ್ಲಿ ಸಂದೇಹವಿಲ್ಲ. ಈ ಮೃತ್ಯುವಿನ ಆಲಿಂಗನದಿಂದ ತಪ್ಪಿಸಿಕೊಳ್ಳಲು ಭಾರತ ಶಕ್ತಿ ಗಳಿಸ ಬೇಕು."

ಆದುದರಿಂದ ದಾರಿದ್ರ್ಯವೆಂಬ ಪಿಶಾಚವನ್ನು ಹೋಗಲಾಡಿಸಿದ ಹೊರತು ಭಾರತ ಸುಖಿಯಾಗುವುದಿಲ್ಲ. ಭಾರತದಲ್ಲಿ, ಆಳುವವರದೇ ಒಂದು ಜಾತಿಗೆ ಅವಕಾಶವಿಲ್ಲ. ಮುಂದಾಳುಗಳೆನ್ನಿಸಿಕೊಳ್ಳುವವರಿಗೆ ಹೆಚ್ಚು ಸುಖ ಹೆಚ್ಚು ಧನ ದೊರೆಯಲು ಅವಕಾಶವಿಲ್ಲ. ಇದೇ ಕಾರಣ ದಿಂದ ಗಾಂಧಿಯವರು, ಮುಂದಾಳುಗಳೂ ಹಿಂಬಾಲಕರಷ್ಟೇ ಸರಳ ರಾಗಿರಬೇಕೆಂದು ಬೋಧಿಸಿದರು. ಹರಿಪುರದ ಕಾಂಗ್ರೆಸ್‌ನಲ್ಲಿ ಸರ್ ದಾರ್ ಪಟೇಲರು, ಕಾಂಗ್ರೆಸ್ ನಗರವನ್ನೆಲ್ಲಾ ತೋರಿಸುತ್ತಾ ಗಾಂಧಿ

ಯವರನ್ನು ಕರೆದುಕೊಂಡುಹೋದರು. ಗಾಂಧಿಯವರು ತಮಗಾಗಿ ಸಿದ್ಧವಾಗಿದ್ದ ಗುಡಿಸಲನ್ನು ತೀಕ್ಷ್ಣದೃಷ್ಟಿಯಿಂದ ನೋಡಿ " ಈ ಸ್ಪೆಷಲ್ ಮಂಟಪ ಯಾಕೆ ನನಗೆ? ಸೂರಿಗೆ ತಾಳೆಗರಿ ಮತ್ತು ಖಾದಿ ಹೊದಿಕೆ ಯಾಕೆ?" ಎಂದು ಕೇಳಿದರು. ಕಾಂಗ್ರೆಸ್ ನಡೆಯುತ್ತಿರುವಾಗಲೇ ಅಸಾಧ್ಯವಾದ ಧೂಳೂ ಮಳೆಯೂ ಬಂದಿತು. ಆಗ ಗಾಂಧಿಯವರಿಗೆ ಒಂದು ಮೂಗರ್ಜಿ ಬಂದಿತು. ಅದರ ಒಕ್ಕಣೆ ಹೀಗೆ ಇತ್ತು.

## ಮುಂದಾಳುಗಳೆಲ್ಲ ಆಷಾಡಭೂತಿಗಳು

" ನಾವು ಛಳಿಯಲ್ಲಿ ನಡುಗುತ್ತಿದ್ದೇವೆ. ನೀವು ಸುಖವಾಗಿ ನಿಮ್ಮ ಸುಂದರವಾದ ಗುಡಿಸಲುಗಳಲ್ಲಿ ಕುಳಿತಿದ್ದೀರಿ. ನಮಗೆ ಅನ್ನಕ್ಕಿಂತ ಧೂಳೇ ಹೆಚ್ಚಾಗಿ ಸಿಕ್ಕುತ್ತಿದೆ. ಹಾಲು ತುಪ್ಪ ಇಲ್ಲವೇ ಇಲ್ಲ. 'ಮುಂದಾಳು'ಗಳಾದ ನೀವು ಸುಖವನ್ನು ಅನುಭವಿಸುತ್ತಿದ್ದೀರಿ. ಸಾರ್ವಜನಿಕ ಅಡಿಗೆ ಮನೆಯಲ್ಲಿ ನಮ್ಮ ಕಡೆಗೆ ಆಹಾರ ಎಸೆಯುತ್ತಾರೆ. ಆದರೆ ನಿಮಗೆ ಸೊಗಸಾದ ಉಡುಗೆಯನ್ನು ಧರಿಸಿದ ಸುಂದರ ಸೇವಕಿಯರು ಬಡಿಸುತ್ತಾರೆ ನೀವು ಮೋಟಾರುಕಾರುಗಳಲ್ಲಿ ಓಡಾಡುತ್ತೀರಿ. ಆ ಧೂಳು ನಮ್ಮ ಕಣ್ಣನ್ನು ಕುರುಡು ಮಾಡುತ್ತದೆ. ನಮ್ಮ ಉಸಿರು ಕಟ್ಟಿಸುತ್ತಿದೆ. ಮುಂದಾಳುಗಳಾದ ನಿಮ್ಮ ರಕ್ಷಣೆ ಎಲ್ಲಾ ರೀತಿಯಿಂದಲೂ ಆಗುತ್ತಿದೆ. ಆದರೆ ಬಡಪಾಯಿಗಳಾದ ನಾವು ಧೂಳಿಗಿಂತ ಕಡೆ. ನನಗೆ ನ್ಯುಮೋನಿಯ ಬಂತು ಆಸ್ಪತ್ರೆ ಸೇರಿದೆ. ನನ್ನ ದುಡ್ಡಿಗೆ ತಕ್ಕ ಹಾಲು ಹಣ್ಣು ಸಹ ನನಗೆ ದೊರೆಯಲಿಲ್ಲ. ಸ್ವಲ್ಪ ಹುಷಾರಾದ ಕೂಡಲೆ ಹೊರಟು ಬಂದೆ ನೀವೆಲ್ಲಾ ಬೂಟಾಟಿಕೆಯವರು, ಆಷಾಡಭೂತಿಗಳು."

ಗಾಂಧಿಯವರು ಫೈಸ್ ಪುರದಲ್ಲಿ ಹೀಗೆ ಹೇಳಿದ್ದರು " ಕಾಂಗ್ರೆಸ್‌ನಲ್ಲಿ ಪಟ್ಟಣದ ಅನುಕೂಲ ಸುಖ ಬೇಕಿಲ್ಲ. ಇದು ನಮ್ಮ ಯಾತ್ರಾಸ್ಥಳ, ನಮ್ಮ ಕಾಶಿ, ನಮ್ಮ ಮಕ್ಕ; ಸ್ವಾತಂತ್ರ ದೇವತೆಯ ಆರಾಧನೆಗೆ ಇಲ್ಲಿ ಬಂದಿದ್ದೇವೆ. ಪವಿತ್ರರಾಗಲು ಇಲ್ಲಿ ಬಂದಿದ್ದೇವೆ. ರೈತರ ಮೇಲೆ ಅಧಿಕಾರ ಮಾಡುತ್ತ ದೊಡ್ಡಸ್ತಿಕೆ ತೋರಿಸುವುದಕ್ಕಲ್ಲ ಇಲ್ಲಿ ಬಂದಿರುವುದು; ರೈತನ ಜೊತೆಯಲ್ಲಿ ಝಾಡಮಾಲಿ ಕೆಲಸ

ಮಾಡುವುದಕ್ಕೂ, ನಿಮ್ಮ ಬಟ್ಟೆ ನೀವು ಒಗೆದುಕೊಳ್ಳುವುದಕ್ಕೂ, ಅವನ ಹೊರೆಯನ್ನು ಕಡಿಮೆ ಮಾಡುವುದಕ್ಕೂ, ಬಂದಿದ್ದೀರಿ" ಎಂದಿದ್ದರು.

## ಖಾದೀ ಧರ್ಮ

"ಹೀಗೆ ಬಡವರೊಂದಿಗೆ ಬಡವರಾಗುವುದೇ ಖಾದಿ ಧರ್ಮ. ಎಷ್ಟೆಷ್ಟು ಹೆಚ್ಚಾಗಿ ನಾವು ಖಾದಿ ಧರ್ಮವನ್ನು ಅನುಸರಿಸುತ್ತೇವೆಯೊ ಅಷ್ಟಷ್ಟೂ ಹೆಚ್ಚಾಗಿ ನಾವು ದರಿದ್ರ ನಾರಾಯಣನ ಸೇವಕರಾಗುತ್ತೇವೆ. ದೇಶದಲ್ಲಿ ಅರ್ಧ ಜನ ಒಂದು ಊಟದಲ್ಲಿರುವಾಗ ಜೀವನದ ಮಟ್ಟದ ಪ್ರಶ್ನೆ ಏಳುವುದೇ ಇಲ್ಲ. ಅದು ಬರಿಯ ಪಠ್ಯ ಪುಸ್ತಕದ ಪಾಠ. ಖಾದಿ ಹೃದಯವಿಲ್ಲದವನು ದರಿದ್ರ ಭಾರತದ ಹೃದಯವನ್ನು ಅರಿಯಲಾರ." ಹರಿಪುರದ ಕಾಂಗ್ರೆಸ್ ವಿಠಲ ನಗರಕ್ಕೆ ಏಳುವರೆ ಲಕ್ಷ ರೂಪಾಯಿ ಖರ್ಚು, ಇಲ್ಲಿ ಅನೇಕ ವಿಷಯ ನನಗೆ ಹಿತವಾಗಿದೆ. ಆದರೆ ಇಲ್ಲಿ ಖಾದಿಯ ಆತ್ಮವಿಲ್ಲ. ಈ ನಗರವನ್ನು ನಿರ್ಮಿಸಿದ ಸರದಾರರೂ ನಾನೂ ಒಬ್ಬರಂತೆ ನಡೆಯುತ್ತೇವೆ. ಆದರೆ ಬಹುಶಃ ಖಾದಿಯ ಪೂರ್ಣ ರಹಸ್ಯ ಸರದಾರರಿಗೂ ತಿಳಿದಿಲ್ಲ. ಕಾಂಗ್ರೆಸ್ಸನ್ನು ೫೦೦೦ ರೂಪಾಯಿ ಖರ್ಚಿನಲ್ಲಿ ನಡೆಸಬೇಕೆಂದು ನಾನು ಹೇಳಿದೆ. ಫೈಜ್‌ಪುರ್ ಕಾಂಗ್ರೆಸ್‌ಗೆ ಮುಂಚೆ ಶಂಕರ್‌ರಾವ್ ದೇವ್‌ರವರಿಗೆ ೫೦೦೦/-ದಲ್ಲಿ ಮಾಡಿದರೇನೆ ನನಗೆ ಒಪ್ಪಿಗೆ ಎಂದೆ. ಆ ಗುರಿ ಇನ್ನೂ ನನ್ನ ಮನಸ್ಸು ಬಿಟ್ಟಿಲ್ಲ. ಹಾಗೆ ಮಾಡದಿದ್ದರೆ ನಾವು ಸ್ವರಾಜ್ಯದ ನಿಜವಾದ ಸಿಪಾಯಿಗಳಲ್ಲ ನಾವು ಇನ್ನೂ ಹಳ್ಳಿಯರಾಗಿಲ್ಲವೆಂದು ಅರ್ಥ. ಗ್ರಾಮ ಸಂಸ್ಕೃತಿಯೂ ಎಲೆಕ್ಟ್ರಿಕ್ ದೀಪವೂ ಒಂದಕ್ಕೊಂದು ಸೇರುವುದಿಲ್ಲ. ಅಲ್ಲಿ ಕಾರು ಲಾರಿ ಬಸ್‌ಗಳಿಗೆ ಜಾಗವಿಲ್ಲ. ನನ್ನನ್ನು ಫೈಜಪುರಕ್ಕೂ ಕಾರಿನಲ್ಲಿ ಕರೆದುಕೊಂಡು ಹೋದರು. ಇಲ್ಲಿಗೂ ಕಾರಿನಲ್ಲಿ ಕರೆದುಕೊಂಡು ಬಂದರು. ನಡೆದುಕೊಂಡು ಬರಲು ನನಗೆ ಅವಕಾಶ ಕೊಡಲಿಲ್ಲ. ಎತ್ತಿನಗಾಡಿ ಹತ್ತುವುದಕ್ಕೂ ಬಿಡಲಿಲ್ಲ. ಅದು ಸುಭಾಷ್ ಬಾಬುವಿಗೆ ಕಾದಿಟ್ಟದ್ದಾಯಿತು. ಎತ್ತಿನ ಗಾಡಿಯಲ್ಲಿ ನನ್ನನ್ನು ಕರೆದುಕೊಂಡು ಬಂದಿದ್ದರೆ ಕೆಲವು ಗಂಟೆ ಸಾವಕಾಶವಾಗುತ್ತಿದ್ದಿತು ನಿಜ. ಅದರಿಂದ ಬಾಧಕವೇನು? ನಾವೆಲ್ಲಾ ರಾಜರಾಗಿ ಬಿಟ್ಟಿದ್ದೇವೆ! ದಾರಿ

ನಡೆಯುತ್ತಿದ್ದವರು ಕೆಲವರು ಕಾರುಗಳನ್ನು ಅಡ್ಡಹಾಕಿ "ನಮ್ಮನ್ನು ಕೂರಿಸಿ ಇಲ್ಲದಿದ್ದರೆ ಸತ್ಯಾಗ್ರಹ ಹೂಡುತ್ತೇವೆ" ಎಂದರಂತೆ. ನಾವು ಖಾದಿ ಮನಸ್ಸುಳ್ಳವರಾಗಿದ್ದರೆ ಇಲ್ಲಿ ಏಳು ಲಕ್ಷ ಹಣ ಖರ್ಚು ಮಾಡ ಬೇಕಾದುದಿರಲಿಲ್ಲ. ಇಲ್ಲಿ ಪೆಟ್ರೋಲ್ ಮತ್ತು ಎಣ್ಣೆ ಯಂತ್ರಗಳಿವೆ. ನಲ್ಲಿಗಳು, ಸ್ಟೋವುಗಳು, ವಿದ್ಯುಚ್ಛಕ್ತಿ, ಹಲ್ಲು ಅಂಟು, ಬ್ರಷ್, ಕೇಶತೈಲ ಮುಂತಾದ ಎಲ್ಲ ಪಟ್ಟಣಿಗರ ಸಾಮಾನುಗಳೂ ಇವೆ. ಹಳ್ಳಿಯುವನಿಗೆ ಈ ದುರ್ಗುಣಗಳಿರಬಾರದು. ಅವನ ಬ್ರಷ್ ಬೇವಿನ ಕಡ್ಡಿ. ಅವನ ಪುಡಿ ಇದ್ದಲು ಮತ್ತು ಉಪ್ಪು. ನಾನು ಹೇಳುವುದು ತಿರಸ್ಕಾರಕ್ಕೆ ಅರ್ಹ ಎಂದು ತೋರಿದರೆ ತಿರಸ್ಕರಿಸಿಬಿಡಿ; ಮಾಡುವುದನ್ನು ಭಾರತಕ್ಕಾಗಿ ಮಾಡಿ ನನಗಾಗಿ ಅಲ್ಲ; ನಾನು ಮಣ್ಣಿನ ಬೊಂಬೆ, ಒಂದು ದಿನ ಬೂದಿ ಯಾಗಲೇ ಬೇಕು. ನನಗಾಗಿ ನೀವು ಖಾದಿ ಧರಿಸಿದರೆ, ನನ್ನನ್ನು ದಹನ ಮಾಡಿದ ದಿನ ನೀವು ಖಾದಿಯನ್ನೂ ಸುಡುವಿರಿ. ಆದರೆ ಖಾದಿ ತತ್ವ, ಖಾದಿ ಧರ್ಮ, ಖಾದಿ ಆತ್ಮ, ನಿಮ್ಮ ಹೃದಯವನ್ನು ಹೊಕ್ಕಿದ್ದರೆ ನನ್ನ ನಂತರವೂ ಖಾದಿ ಉಳಿಯುವುದು. ಖಾದಿ ಜೀವವಿಲ್ಲದ ಗುರು ತಲ್ಲ. ಅದನ್ನು ಪೂಜಿಸಬೇಕಾದುದಿಲ್ಲ, ಧರಿಸಬೇಕು. ಇಪ್ಪತ್ತು ವರುಷ ನಾನು ಖಾದಿ ಸಂದೇಶ ಸಾರಿದ್ದೇನೆ ಇಂದು ಮರುಣಪ ಮೆಟ್ಟಲಿನಲ್ಲಿರುವಾಗಲೂ ಅದನ್ನೇ ಸಾರುತ್ತೇನೆ. ಖಾದಿಯಲ್ಲಿ ಸ್ವರಾಜ್ಯ ಸ್ವಾತಂತ್ರ್ಯ ಇದೆ"

ಭಾರತದ ದಾರಿದ್ರ್ಯದ ಪರಿಚಯ ಗಾಂಧಿಯವರಿಗಿರುವಂತೆ ಮತ್ತಾರಿಗೂ ಇಲ್ಲ. ಗಾಂಧಿಯವರಂತೆ ಭಾರತದ ಹಳ್ಳಿಗಳನ್ನೂ ಅನೇಕ ಸಲ ತಿರುಗಿರುವವರು ಯಾರೂ ಇಲ್ಲ. ಗಾಂಧಿ ದಾರಿದ್ರ್ಯದ ಪ್ರತಿನಿಧಿ ಮಾತ್ರವಲ್ಲ. ದಾರದ್ರ್ಯದಲ್ಲಿಯೂ ದೇವರನ್ನು ಕಾಣುವವರು ದಾರಿದ್ರ್ಯದಲ್ಲಿ ದೇವರನ್ನು ಕಾಣುವವರೆಂದರೆ, ದಾರಿದ್ರ್ಯವಿದ್ದೆಡೆ ದೇವ ರಿದ್ದಾನೆ ಎಂದು ಹೇಳುವವರಲ್ಲ. ಸಾಧಾರಣವಾಗಿ ಜನ ಯಾವುದನ್ನು ತಿರಸ್ಕರಿಸುತ್ತಾರೆಯೋ ಅಲ್ಲಿಯೂ ಮನುಷ್ಯತ್ವ ದೇವತ್ವವನ್ನು ಕಾಣು ವವರು. ಬಡವರ ಜತೆ ತಾವೂ ಪೂರ್ಣಬಡವರಾಗಬೇಕೆಂಬ ಉದ್ದೇಶ ದಿಂದ ಗಾಂಧಿ ಪೂರ್ಣವಿರಕ್ತರೇ ಆಗಿದ್ದಾರೆ. ಅವರದು ಎನ್ನಿಸಿ

ಕೊಳ್ಳುವ ಒಂದು ಹುಲ್ಲುಕಡಿಯೂ ಅವರಲ್ಲಿ ಇಲ್ಲ. ಆದರೆ ಇದೂ ಒಂದು ಅಪಪ್ರಚಾರಕ್ಕೆ ಅವಕಾಶ ಕೊಡದೆ ಇರಲಿಲ್ಲ

## ಗಾಂಧಿಯವರ ಮೇಲೆಯೂ ದೋಷಾರೋಪಣೆ

ಗಾಂಧಿಯವರಿಗೆ ಒಬ್ಬರು ಒಂದು ಸಲ ಈ ಪ್ರಶ್ನೆ ಹಾಕಿದರು. "ಜನರು, ಗಾಂಧಿ ಹೇಳಿದಂತೆ ನಡೆಯುವುದಿಲ್ಲವೆಂದು ಹೇಳುತ್ತಾರೆ. ಅವರ, ದಾರಿದ್ರ್ಯವನ್ನು ಬೋಧಿಸುತ್ತಾರೆ. ಆಸ್ತಿ ಇಟ್ಟು ಕೊಂಡಿದ್ದಾರೆ–ಇತರರು ದರಿದ್ರರಾಗಬೇಕೆಂದು ಅವರು ಹೇಳುತ್ತಾರೆ. ತಾವು ಮಾತ್ರ ಧನಿಕರಾಗಿದ್ದಾರೆ. ಜನರು ಸರಳವಾಗಿ ಖರ್ಚು ಇಲ್ಲದೆ ಬಾಳಬೇಕೆಂದು ಅವರು ಬೋಧಿಸುತ್ತಾರೆ. ತಾವು ಮಾತ್ರ ಹೆಚ್ಚು ಖರ್ಚು ಮಾಡುತ್ತಾರೆ." ಎಂದು. ಆದುದರಿಂದ ಈ ಮುಂದಲ ಪ್ರಶ್ನೆಗಳಿಗೆ ಉತ್ತರಕೊಡಿ "ಗುಜರಾತ್ ಕಾಂಗ್ರೆಸ್ ಸಮಿತಿ ಅಥವ ಅಖಿಲ ಭಾರತ ಕಾಂಗ್ರೆಸ್ ಸಮಿತಿಯಿಂದ ನಿಮ್ಮ ಜೀವನದ ಖರ್ಚಿಗೂ ಪ್ರಯಾಣದ ಖರ್ಚಿಗೂ ಏನಾದರೂ ತೆಗೆದುಕೊಳ್ಳುತ್ತೀರಾ ? ತೆಗೆದುಕೊಳ್ಳುವುದಾದರೆ ಎಷ್ಟು ? ಹಾಗಲ್ಲದ ಮೇಲೆ, ನೀವು ಆಸ್ತಿ ಮುಂತಾದುವಿಲ್ಲದ ದರಿದ್ರರಾದರೆ ನಿಮ್ಮ ಜೀವನ ಹೇಗೆ ನಡೆಸುತ್ತೀರಿ ?" ಅದಕ್ಕೆ ಗಾಂಧಿಯವರು ಹೀಗೆ ಪ್ರತ್ಯುತ್ತರ ಕೊಟ್ಟರು.

"ನಾನು ಹೇಳುವಂತೆ ನಾನು ನಡೆಯುತ್ತೇನೆ ಎನ್ನಲಾರೆ. ಆದರೆ ನನ್ನ ಮನಸ್ಸಿನಲ್ಲಿರುವಷ್ಟು ನಾನು, ಖರ್ಚು ಕಡಿಮೆಮಾಡಲು ಆಗಿಲ್ಲವೆಂದು ಒಪ್ಪಲೇ ಬೇಕು. ನನಗೆ ಖಾಯಿಲೆಯಾದ ಈಚೆಗೆ ನನ್ನ ಆಹಾರಕ್ಕೆ ಸ್ವಲ್ಪ ಹೆಚ್ಚಾಗಿಯೇ ಖರ್ಚಾಗುತ್ತಿದೆ. ಅದೇ ಕಾರಣದಿಂದ ಈಚೆಗೆ ಮೂರನೆಯತರಗತಿಯಲ್ಲಿ ಪ್ರಯಾಣ ಮಾಡಲು ನನಗೆ ಸಾಧ್ಯವಾಗುತ್ತಿಲ್ಲ. ಈಗ ನನ್ನ ಪ್ರಯಾಣದಲ್ಲಿ ಒಬ್ಬ ಜತೆಗಾರರೂ ಇರಬೇಕಾಗಿದೆ. ಇದೆಲ್ಲಾ ದಾರಿದ್ರ್ಯ, ಸರಳತೆ ಅಲ್ಲ. ಅದರ ವಿರೋಧ. ಗುಜರಾತ್ ಕಾಂಗ್ರೆಸ್ ಸಮಿತಿಯಿಂದಲೂ ಅಖಿಲಭಾರತ ಕಾಂಗ್ರೆಸ್ ಸಮಿತಿಯಿಂದಲೂ ನಾನು ಏನನ್ನೂ ತೆಗೆದುಕೊಳ್ಳುವುದಿಲ್ಲ. ಸ್ನೇಹಿತರು ನನ್ನ ಪ್ರಯಾಣದ ಖರ್ಚನ್ನೂ ಆಹಾರ ಬಟ್ಟೆಯನ್ನೂ ಒದಗಿಸುತ್ತಾರೆ. ನನ್ನನ್ನು ಆಹ್ವಾನಿಸುವವರು ರೈಲುಟಿಕೆಟ್ ಕೊಂಡು

ಕೊಳ್ಳುತ್ತಾರೆ. ನಾನು ಯಾರ ಜತೆ ಉಳಿಯುತ್ತೇನೆಯೋ ಅವರು ಯಾವಾಗಲೂ ನನಗೆ ಸಂಕೋಚವಾಗುವಷ್ಟು ಉಪಚಾರ ಮಾಡುತ್ತಾರೆ. ನನ್ನ ಪ್ರವಾಸದಲ್ಲಿ ಜನರು ನನಗೆ ಬೇಕಾದುದಕ್ಕಿಂತ ಹೆಚ್ಚು ಖಾದಿ ನನಗೆ ಕಾಣಿಕೆ ಕೊಡುತಾರೆ. ಉಳಿದುದನ್ನು ಆವಶ್ಯಕವಿರುವವರು ತೆಗೆದು ಕೊಳ್ಳುತ್ತಾರೆ. ಅಥವ ಸಾರ್ವಜನಿಕ ಧ್ಯೇಯದಿಂದ ನಡೆಯುವ ಆಶ್ರಮದ ಖಾದಿಜತೆ ಅವೂ ಸೇರುತ್ತವೆ. ನನಗೆ ಆಸ್ತಿಇಲ್ಲ. ಆದರೆ ನಾನು ಧನಿಕ ಎಂಬುದು ನನ್ನ ಭಾವನೆ. ನನಗೇ ಆಗಲಿ ನನ್ನ ಸಂಸ್ಥೆಗೇ ಆಗಲಿ ಯಾವಾಗಲೂ ಹಣದ ಅಭಾವವುಂಟಾಗಿಲ್ಲ. ದೇವರು ಯಾವಾಗಲೂ ನನಗೆ ಸಹಾಯ ಮಾಡಿದ್ದಾನೆ. ನನ್ನ ಕಾರ್ಯಗಳಲ್ಲಿ, ಒಂದು ಕಾಸೂ ಇಲ್ಲದೆ ಇದ್ದ ಅನೇಕ ಸಂದರ್ಭ ನನಗೆ ಜ್ಞಾಪಕಕ್ಕೆ ಬರುತ್ತದೆ. ಆದರೆ ಅನಿರೀಕ್ಷಿತವಾದ ಕಡೆಗಳಿಂದ ಅಂತಹ ವೇಳೆಗಳಲ್ಲಿ ಹಣ ಬಂದಿದೆ. ಈ ಸಹಾಯದಿಂದ ನಾನು ನಮ್ರನಾಗಿದ್ದೇನೆ. ಕಷ್ಟದ ಕಾಲದಲ್ಲಿ ಭಗವಂತ ಸಹಾಯಕ್ಕೆ ಬರುವನೆಂಬ ನಂಬಿಕೆ ನನಗೆ ಉಂಟಾಗಿದೆ. ಆದುದರಿಂದ ನನ್ನ ಆಸ್ತಿಯನ್ನೆಲ್ಲಾ ನಾನು ಬಿಟ್ಟುಬಿಟ್ಟುದರಿಂದ ಜಗತ್ತು ಬೇಕಾದರೆ ನಗಬಹುದು, ನನಗೇನೋ ಹಾಗೆ ತ್ಯಾಗ ಮಾಡಿದುದೇ ಲಾಭವಾಗಿದೆ. ನನ್ನ ತೃಪ್ತಿ ಯಾರಿಗೂ ಇಲ್ಲ, ಅದೇ ನನ್ನ ದೊಡ್ಡ ಆಸ್ತಿ. ಆದುದರಿಂದ ನಾನು ಬಡತನವನ್ನು ಬೋಧಿಸಿದರೂ ಧನಿಕನಾಗಿರುವೆನೆಂದು ಹೇಳಿದರೆ ತಪ್ಪಿಲ್ಲ"

## ಬಡವರ ಪ್ರತಿನಿಧಿ

ಗಾಂಧಿಯವರ ಚಳುವಳಿಯನ್ನು ಒಂದು ಮಾತಿನಲ್ಲಿ ಹೇಳಬೇಕಾದರೆ ಅದು "ಬಡವರ ಮೇಲಿನ ದಬ್ಬಾಳಿಕೆಯ ಪ್ರತಿಭಟನೆ" ಎಂದು ದೀನಬಂಧು ಆಂಡ್ರ್ಯೂಸ್‌ರವರು ಹೇಳುತ್ತಾರೆ ಗಾಂಧಿ ಇರ್ವಿನ್ ಒಪ್ಪಂದದ ನಂತರ ಗಾಂಧಿಯವರು ದುಂಡುಮೇಜು ಪರಿಷತ್ತಿನಲ್ಲಿ ಭಾಗವಹಿಸಲು ಸೀಮೆಗೆ ಹೊರಟರು ಅವರ ಜತೆಯಲ್ಲಿ ಪ್ಯಾರಿಲಾಲ್, ದೇವದಾಸ್‌ಗಾಂಧಿ, ಮಹದೇವದೇಸಾಯಿ, ಮಾಳವ್ಯ, ಸರೋಜಿನಿ ಇವರು ಇದ್ದರು. "ಕೊನೆಯ ತರಗತಿಯಲ್ಲಿ ನಮಗೆ ಜಾಗಮಾಡಿ" ಎಂದು ಗಾಂಧಿ ಒಬ್ಬ ಸ್ನೇಹಿತರಿಗೆ ಬರೆದಿದ್ದರು. ಆ ಕೊನೆಯ ತರಗತಿ ಎರಡನೆಯ ತರಗತಿಯಾಗಿದ್ದಿತು.

"ಹಡಗಿನಲ್ಲಿ ಕುಳಿತ ಸ್ವಲ್ಪ ಹೊತ್ತಿನ ನಂತರ ಗಾಂಧಿ ತಮ್ಮ ಸುತ್ತ ನೋಡತೊಡಗಿದರು. ನಮ್ಮ ಸಾಮಾನು ಅಸಾಧ್ಯವಾಗಿತ್ತು. 'ನಾವೇನೋ ಎರಡನೆಯ ತರಗತಿಯಲ್ಲಿ ಇದ್ದೇವೆ. ಆದರೆ ಡೆಕ್‌ನಲ್ಲಿ ಇದ್ದಿದ್ದರೆ ನಮ್ಮ ಸಾಮಾನುಗಳ ಗತಿ ಏನು?' ಎಂದರು. ಒಬ್ಬರು "ಎರಡು ಮೂರು ಗಂಟೆಗಳೊಳಗೆ ನಾವು ಸಿದ್ಧರಾಗಬೇಕಾಗಿತ್ತು. ಅದಕ್ಕೆ ಹೀಗೆ ಆಯಿತು? ಎಂದರು, ಇನ್ನೊಬ್ಬರು ಈ ಸೂಟ್‌ಕೇಸ್ ಗಳನ್ನೆಲ್ಲ ಸಾಲ ತೆಗೆದುಕೊಂಡು ಬಂದಿದ್ದೇವೆ. ಹಿಂದಿರುಗಿದ ಕೂಡಲೆ ಅವನ್ನೆಲ್ಲಾ ಅವರಿಗೇ ತಲುಪಿಸಬೇಕು." ಎಂದರು. ಮೂರನೆಯ ಸಬೂಬು "ಸ್ನೇಹಿತರು ತಮ್ಮ ಹತ್ತಿರ ಇದ್ದ ಹೆಚ್ಚಾದ ಪದಾರ್ಥ ಗಳನ್ನೆಲ್ಲಾ ನಮಗೆ ಕೊಟ್ಟುಬಿಟ್ಟಿದ್ದಾರೆ. ನಾವೇನು ಮಾಡೋಣ" ಎಂಬುದು. ಮತ್ತೂ ಒಂದು ಸಬೂಬು "ನಾವು ಈ ಪ್ರಯಾಣದಲ್ಲಿ ಅಪರಿಚಿತರು. ಇಂತಿಂತಹ ಸಾಮಾನುಗಳಿರಬೇಕೆಂದು ಸ್ನೇಹಿತರು ಹೇಳಿದರು. ಅದರ ಹೊರತು ಹೆಚ್ಚಿಗೆ ಇಲ್ಲ."

ಮಹದೇವದೇಸಾಯಿ ಮುಂದೆ ಹೀಗೆ ಹೇಳುತ್ತಾರೆ "ಈ ಸಬೂಬುಗಳಿಂದ ನಮ್ಮ ಸ್ಥಿತಿ ಇನ್ನೂ ಬಲಹೀನವಾಯಿತು. ನಮಗೆ ಈ ರಿಯಾಯ್ತಿ ಬೇಕು ಎಂದಂತೆ ಗಾಂಧಿಗೆ ಭಾಸವಾಯಿತು. ಅವರಿಗೆ ಕೋಪ ಬಂತು. ಭಾರತದ ದರಿದ್ರರ ಪ್ರತಿನಿಧಿ, ಅನೇಕ ಸೂಟ್‌ಕೇಸ್ ಗಳೊಡನೆ ಅವು ಸಾಲವಾಗಿ ಬಂದಿರಲಿ ಅಥವಾ ದಾನವಾಗಿ ಬಂದಿರಲಿ– ಪ್ರಯಾಣಮಾಡುವುದೇ ಅವರ ಹೃದಯವನ್ನು ಕೊರೆಯಿತು. ನಮಗೆಲ್ಲ ನಮ್ಮನಮ್ಮ ಭಾಗದ ಛೈಗಳವಾಯಿತು "ಸಿದ್ಧವಾಗಲು ಕಾಲಾವಕಾಶ ವಿರಲಿಲ್ಲ'' ಎಂಬುದು ಪ್ರಯೋಜನವಿಲ್ಲ. ಯಾವ ಸಿದ್ಧತೆಯೂ ಬೇಕೇ ಇರಲಿಲ್ಲ ಸಿಕ್ಕಿದುದನ್ನೆಲ್ಲಾ ಸಂಗ್ರಹಿಸಿಕೊಳ್ಳುವ ಬದಲು 'ನಮಗೆ ಇವುಗಳ ಆವಶ್ಯಕತೆ ಇಲ್ಲ' ಎಂದು ಹೇಳಬಹುದಾಗಿದ್ದಿತು. ಬೊಂಬಾ ಯಿನ ಖಾದಿ ಅಂಗಡಿಯಲ್ಲಿ ಕೆಲವು ಉಣ್ಣೆ ಮತ್ತು ಹತ್ತಿಯ ಬಟ್ಟೆ ಗಳನ್ನು ತೆಗೆದುಕೊಳ್ಳಬಹುದಾಗಿದ್ದಿತು. ಆದರೆ ನೀವು ಸಿಕ್ಕಿದ್ದನ್ನೆಲ್ಲ ತೆಗೆದುಕೊಂಡುಬಿಟ್ಟಿರಿ. ಏನು? ಇಂಗ್ಲೆಂಡಿನಲ್ಲಿ ೫ ವರುಷ ಇರುತ್ತೀರಾ? ಬೇಕಾದುದನ್ನು ಅಲ್ಲಿ ಕೊಳ್ಳಬಹುದು. ಹಿಂದಿರುಗುವಾಗ ಅಲ್ಲಿಯ

ಬಡವರಿಗೆ ಅದನ್ನು ಬಿಡಬಹುದು" ಎಂದರು "ಪೆಟ್ಟಿಗೆಗಳನ್ನು ನೀವು ಹಿಂತಿರುಗಿಸುತ್ತೀರಿ ಎಂಬುದರಿಂದ ನಿಮ್ಮ ತಪ್ಪು ಕಡಿಮೆಯಾಗಲಿಲ್ಲ. ಹಿಂದಿರುಗಿಸದೆ ನೀವೇ ಇಟ್ಟುಕೊಳ್ಳುತ್ತೀರಿ ಎಂದು ನಾನು ಭಾವಿಸಿಲ್ಲ. ಆದರೆ ಈ ಲೆದರ್ ಸೂಟ್‌ಕೇಸ್‌ಗಳನ್ನು ತೆಗೆದುಕೊಳ್ಳಲು ನೀವು ಸ್ವಲ್ಪವೂ ಹಿಂದೆಗೆಯದಿರುವುದು, ದಾರಿದ್ರ್ಯ, ಅಪರಿಗ್ರಹ ಎಂದರೆ ನಿಮ್ಮ ಭಾವವೇನೆಂಬುದನ್ನು ನನಗೆ ತೋರಿಸುತ್ತದೆ. "ಕೆಲವು ಪದಾರ್ಥಗಳು ಹಳೆಯವು. ಸ್ನೇಹಿತರಿಗೆ ಹೆಚ್ಚಾದುದರಿಂದ ಕೊಟ್ಟಿದ್ದಾರೆ, ಎನ್ನುತ್ತೀರಿ. ನೀವು ನಿಮ್ಮನ್ನು ಮೋಸಮಾಡಿಕೊಳ್ಳುತ್ತಿದ್ದೀರಿ. ಅಥವ ನನ್ನನ್ನೇ ಮೋಸಮಾಡುತ್ತಿದ್ದೀರಿ ಅವು ಅನವಶ್ಯಕವಾಗಿದ್ದರೆ ಅವರೇ ಅವುಗಳನ್ನು ಎಸೆಯಬಹುದಾಗಿದ್ದಿತು. ನೀವು "ಬೇಕು" ಎಂದು ಹೇಳದಿದ್ದಿದ್ದರೆ ಅವರು ನಿಮಗೆ ಅವನ್ನು ಕೊಡುತ್ತಿರಲಿಲ್ಲ. ತಿಳಿದವರ ಮಾತಿನಂತೆ ನಡೆದೆವು ಎಂಬುದಕ್ಕೆ ಅರ್ಥವಿಲ್ಲ. ಅವರ ಸಲಹೆಯಂತೆ ನಡೆಯಬೇಕಾದರೆ ಅವರೊಂದಿಗೆ ಇರಬೇಕು. ಆದರೆ ಇಲ್ಲಿ ನೀವು ನನ್ನೊಂದಿಗೆ ಇದ್ದೀರಿ. ನನ್ನ ಸಲಹೆಯಂತೆ ನಡೆಯಬೇಕು" ಎಂದರು.

"ನಾಲ್ಕನೆಯ ದಿನ ನಮ್ಮ ಪದಾರ್ಥಗಳನ್ನೆಲ್ಲಾ ಗಾಂಧಿಯವರ ಪರೀಕ್ಷೆಗೆ ಬಿಟ್ಟೆವು. ಗಾಂಧಿ ಹೀಗೆ ಹೇಳಿದರು "ನಿಮ್ಮ ಪಟ್ಟಿಯನ್ನು ಈಗ ಅಲ್ಲಾಡಿಸುವುದಿಲ್ಲ. ಸಿಮ್ಲಾದಲ್ಲಿ ಒಂದು ಪಂಚೆ ಒಂದು ಬನೀನು (ಕುರ್ತ) ಒಂದು ಜೊತೆ ಪಾದರಕ್ಷೆ ಸಾಕಾದಮೇಲೆ, ಇಂಗ್ಲೆಂಡಿನಲ್ಲಿ ಹಾಗೇ ಇರಲು ನಿಮ್ಮನ್ನು ಪ್ರತಿಬಂಧಿಸುವವರು ಯಾರೂ ಇಲ್ಲ. ನಿಮ್ಮ ಉಡುವು ನಿಮಗೆ ಸಾಲದು ಎಂದು ನನಗೆ ತೋರಿದರೆ ನಾನೇ ಕೂಡಲೇ ಉಣ್ಣೆಬಟ್ಟೆ ಕೊಂಡುಕೊಳ್ಳಿ ಎಂದು ಎಚ್ಚರಿಸುತ್ತೇನೆ. ಆದರೆ ನೀವು ಕೆಲವು ಪದಾರ್ಥ ಧರಿಸದಿದ್ದರೆ, ಕೆಲವು ಪದಾರ್ಥ ತೆಗೆದುಕೊಂಡು ಹೋಗದಿದ್ದರೆ, ಇಂಗ್ಲಿಷರು ಹಾಸ್ಯಮಾಡುತ್ತಾರೆಂಬ ಭಾವವನ್ನು ಬಿಡಿ. ನಾನೂ ನೀವೂ ಈ ಕೊಬ್ಬಿದ ಸೂಟ್‌ಕೇಸ್‌ಗಳನ್ನು ತೆಗೆದುಕೊಂಡು ಹೋದರೆ ನಮ್ಮನ್ನು ಹಾಸ್ಯಮಾಡುವುದು ಸತ್ಯವೆಂದು ತಿಳಿಯಿರಿ" ಎಂದರು. ಒಂದು ಚರ್ಮದ ಕಂಪನಿ ಉಚಿತವಾಗಿ ಕಳುಹಿಸಿದ

ಚರ್ಮದ ಕೈಚೀಲ ನೋಡಿ "ಭಾರತದಲ್ಲಿ ಖಾದಿ ಚೀಲವೇ ಸಾಕು. ಇಂಗ್ಲೆಂಡಿನಲ್ಲಿ ಯಾಕೆ ಆಗುವುದಿಲ್ಲ? ಇಂಗ್ಲೆಂಡಿನಲ್ಲಿ ಜನರೆಲ್ಲಾ ನಿಮ್ಮಂತೆ ಇಂತಹ ಚೊಕ್ಕನಾದ ಚಕ್ಕಳದ ಚೀಲದಲ್ಲಿ ತಮ್ಮ ಕಾಗದ ಪತ್ರಗಳನ್ನೆಲ್ಲಾ ತೆಗೆದುಕೊಂಡು ಹೋಗುತ್ತಾರೆಂದು ತಿಳಿದಿರಾ? ಖಂಡಿತ ಇಲ್ಲ. ಧನಿಕರಾದ ಬ್ಯಾಂಕ್‌ನವರು, ಲ್ಯಾಂಬರ್ಡ ಬೀದಿಯ ವರ್ತಕರು,ಮುಖ್ಯವಾದ ಸರ್ಕಾರದ ಕಾಗದ ಪತ್ರಗಳುಳ್ಳ ರಾಜಕಾರಣ ಪಟುಗಳು, ಇವುಗಳನ್ನು ಇಟ್ಟುಕೊಂಡಿರಬಹುದು. ಆದರೆ ನಿಮ್ಮ ಕೈಯಲ್ಲಿ ಅವು ಹಾಸ್ಯಾಸ್ಪದ" ಎಂದರು. ಸಾಧಾರಣವಾಗಿ ನಿತ್ಯ ನಾವು ಏನನ್ನು ಉಪಯೋಗಿಸುವುದಿಲ್ಲವೋ ಅವು ನಮ್ಮಲ್ಲಿ ಇರಕೂಡದು ಎಂಬ ತತ್ವದಂತೆ ಒಂದು ಬೈನಾಕುಲರ್ ಸಹ ಬೇಡವಾಯಿತು.

ಕೋಪ ಸ್ವಲ್ಪ ಶಮನವಾಗುವ ಸಂದರ್ಭಗಳೂ ಅಲ್ಲಿಯೇ ಉಂಟಾಗುತ್ತಿದ್ದವು. ಒಬ್ಬ ಸ್ನೇಹಿತರು ಗಾಂಧಿಯವರು ಹಡಗಿನ ಡೆಕ್‌ನಲ್ಲಿ ಉಪಯೋಗಿಸಲು ಬೇಕಾಗುವುದೆಂದು ಒಂದು ಅಮೆರಿಕನ್ ಕ್ಯಾಂಪು ಮಂಚ ಕೊಟ್ಟಿದ್ದರು. ಅದನ್ನು ನೋಡಿ ಗಾಂಧಿ ಅದು ಕ್ಯಾಂಪ್ ಮಂಚವೇ. ನಾನು ಅದು ಹಾಕಿ ಸೆಟ್ (hockey set) ಎಂದುಕೊಂಡೆ. ಹಾಕಿಸೆಟ್ ಬೇಡ, ಹೋಗಲಿ. ನಾನು ಯಾವಾಗ ಲಾದರೂ ಅದರ ಮೇಲೆ ಮಲಗಿದುದನ್ನು ನೀವು ನೋಡಿದ್ದೀರಾ? ಎಂದು ಕೇಳಿದರು. ಆ ವೇಳೆಗೆ ಅಲ್ಲಿಗೆ ಶೇಬ್ ಖುರೇಷಿ ಬಂದರು. ಗಾಂಧಿಯವರು ನಗುತ್ತಾ "ಶೇಬ್, ನಿಮ್ಮ ರಾಜರ ಪರಿವಾರದಲ್ಲಿ ಯಾರಿಗಾದರೂ ಕಾಶ್ಮೀರ್ ಶಾಲು ಬೇಕಾದರೆ ಹೇಳಿ. ಸ್ನೇಹಿತರು ನನಗೆ ಕೊಟ್ಟಿರುವ ಶಾಲುಗಳಿಂದ ನಾನು ಒಂದು ಅಂಗಡಿ ನಡೆಸ ಬಹುದು. ಈ ಶಾಲುವಿನ ಬೆಲೆ ೭೦೦ ರೂಪಾಯಿ. ಅತ್ಯಂತ ನವಿರಾಗಿ ನಯವಾಗಿ ನಾಜೂಕಾಗಿದೆ. ಇದನ್ನು ಒಂದು ಉಂಗುರದಲ್ಲಿ ಹೊರಕ್ಕೆ ತೆಗೆಯಬಹುದು ನಾನು ಎಷ್ಟು ಅರ್ಹನಾದ ಭಾರತದ ಬಡವರ ಪ್ರತಿ ನಿಧಿ ಎಂಬುದನ್ನು ತೋರಿಸಲು ಇದನ್ನು ದುಂಡುಮೇಜಿನ ಪರಿಷತ್ತಿನಲ್ಲಿ ಧರಿಸಬೇಕೆಂದು (ಇದನ್ನು ನನಗೆ ಕೊಟ್ಟ ಮಿತ್ರರು) ಯೋಚಿಸಿರ ಬಹುದು. ಪಾಪ! ನಿಮ್ಮ ಮಹಾರಾಣಿ ನನಗೆ ೭೦೦೦ ರೂಪಾಯಿ

ಕೊಟ್ಟು, ಈ ಆಸ್ತಿಯನ್ನು ನನ್ನಿಂದ ಬಿಡಿಸಲಿ. ಆ ಹಣ ಬಡವರಿಗೆ ಉಪಯೋಗವಾಗುತ್ತದೆ. ಬಡವರ ಏಕಮಾತ್ರ ಪ್ರತಿನಿಧಿಯಾದ ನನಗೆ ಇದರಿಂದ ಮತ್ತೇನೂ ಪ್ರಯೋಜನವಿಲ್ಲ." ಎಂದರು.

ಭಾರತದ ಬಡವರ ಏಕಮಾತ್ರ ಪ್ರತಿನಿಧಿಯಾದವರು, ಭಾರತ ಸರ್ಕಾರದ ಮಿತ್ರರಾಗಿ ಬ್ರಿಟಿಷ್ ಸರ್ಕಾರದ ಆಹ್ವಾನದಂತೆ ಇಂಗ್ಲೆಂಡಿಗೆ ಹೋದರೂ, ಬಡವರ ಮನೆಯಲ್ಲಿಯೇ ಉಳಿದರು. ಶ್ರೀಕೃಷ್ಣ ವಿದುರನ ಮನೆಯಲ್ಲಿ ಉಳಿದಂತೆ. ಸ್ನೇಹಿತರು "ಸೇಂಟ್ ಜೇಮ್ಸ್ ಅರಮನೆ ಸುತ್ತಮುತ್ತ ನಮ್ಮ ಮನೆಗಳಿಗೆ ಬನ್ನಿ. ಇಲ್ಲವಾದರೆ ಎಲ್ಲಿಯಾದರೂ ಹತ್ತಿರದ ಹೋಟಲುಗಳಲ್ಲಿ ಇರಿ" ಎಂದರು. ಗಾಂಧಿ "ಬೇಡ, ನಾನು ಇಲ್ಲಿರುವುದು ಸರಿ. ಇಲ್ಲಿಯವರು ನನ್ನ ಬಾಳುಹೇಗೆ ಇರಬೇಕೆಂದು ನಾನು ಮಾಡಿಕೊಂಡಿದ್ದನೋ ಹಾಗೆಯೇ ಇದ್ದಾರೆ. ಮಿಸ್ ಲೆಸ್ಟರ್ ನನಗಾಗಿ ಏನೂ ಖರ್ಚುಮಾಡಿಲ್ಲ. ಆದರೆ ಆಕೆಯೂ ಆಕೆಯ ಜತೆಗಾರರೂ ನಮ್ಮ ದೆಸೆಯಿಂದ ಹೆಚ್ಚು ಕಷ್ಟ ಅನುಭವಿಸುತ್ತಿದ್ದಾರೆ. ಕೊಠಡಿಗಳನ್ನು ನಮಗಾಗಿ ಬಿಟ್ಟು ತಾವು ಅಂಗಳದಲ್ಲಿ ಮಲಗುತ್ತಿದ್ದಾರೆ. ತಮ್ಮ ಕೆಲಸ ಮಾಡಿಕೊಂಡು ನಮಗಾಗಿಯೂ ದುಡಿಯುತ್ತಿದ್ದಾರೆ. ನಾನು ಹೇಗೆ ತಾನೆ ಇವರನ್ನು ಬಿಟ್ಟು ಬೇರೆ ಕಡೆ ಹೋಗಲಿ" ಎಂದರು. ಹೀಗೆ ಚರ್ಚೆಯಾಗುತ್ತಿರುವಾಗ ೮೦ ವರ್ಷ ವಯಸ್ಸಿನ ಒಬ್ಬ ಮುದುಕಿ ಬಂದು "ಈ ಸ್ಥಳ ಬಿಡಬೇಡಿ, ಇದು ಮುರಿಯಲ್ ಲೆಸ್ಟರ ಸ್ವಂತ ಮನೆಯೂ ಅಲ್ಲ, ಇದನ್ನು ಅವಳಿಗಾಗಿ ಕಟ್ಟಿಲ್ಲ. ಗಾಂಧಿಯವರು ಯಾವ ಧ್ಯೇಯದ ಪ್ರತಿನಿಧಿಯೋ ಆ ಧ್ಯೇಯಕ್ಕಾಗಿ ಆಕೆಯ ಅಣ್ಣ ಇದನ್ನು ಕಟ್ಟಿದರು" ಎಂದಳು. ಹೀಗೆ ಗಾಂಧಿ ಎಲ್ಲಿ ಬಡವರೊಂದಿಗೆ ಹೆಚ್ಚು ಬಳಕೆ ಇಟ್ಟುಕೊಳ್ಳಬಹುದೋ ಅಲ್ಲಿಯೇ ಉಳಿದರು.

## ದೇಶ ಸೇವಕರು ದರಿದ್ರರಾಗಬೇಕು

ದರಿದ್ರರ ದೇಶದಲ್ಲಿ, ದೇಶಸೇವಕರೂ ದರಿದ್ರರಾಗಬೇಕು. ಗಾಂಧಿಯವರು ಶ್ರೀರಾಮ ಲಂಕೆಗೆ ಹೊರಟಂತೆ ದಂಡಿಯಾತ್ರೆ ಹೊರಟಾಗ ಮಾರ್ಗದಲ್ಲಿ ಜನರು ಅವರಿಗೂ ಅವರ ಪರಿವಾರಕ್ಕೂ ಬೇಕಾದಂತೆ ಭಕ್ಷ್ಯ ಹಣ್ಣುಗಳನ್ನು ಒದಗಿಸತೊಡಗಿದ್ದರು. ಅದು ಅವರ ಭಕ್ತಿ

ಯಾಯಿತು. ಆದರೆ ಒಂದೆರಡು ದಿನಗಳನಂತರ ಗಾಂಧಿಯವರು ತಮಗೂ ತಮ್ಮ ಪರಿವಾರಕ್ಕೂ ಅಂತಹ ಸುಖವಾದ ಆಹಾರ ಕೊಡ ಕೂಡದೆಂದೇ ನಿಷೇಧಿಸಿದರು. "ನಾನು ಸ್ಪಷ್ಟವಾಗಿ ಮಾತನಾಡು ವವನು. ಸರ್ಕಾರದ ಬೆಟ್ಟದಷ್ಟು ಎತ್ತರವಾದ ತಪ್ಪನ್ನು ಹೇಳಲು ಹಿಂಜರಿದಿಲ್ಲ. ಹಾಗೆಯೇ ನಮ್ಮ ತಪ್ಪು ಸಣ್ಣದಾದರೂ ಅದನ್ನು ಬೆಟ್ಟ ದಷ್ಟು ಮಾಡಲೂ ಹಿಂದೆಗೆದಿಲ್ಲ. ನಾನೆ ಹಿಂದೆ ಹೀಗೆ ಮಾಡಿದುದರಿಂದ ಅನೇಕ ಸ್ನೇಹಿತರ ಮನಸ್ಸಿಗೆ ನೋವಾಗಿದೆ. ಕೆಲವರು ನನ್ನ ಸ್ನೇಹ ವನ್ನೂ ಬಿಟ್ಟಿದ್ದಾರೆ. ಈಗ ಈ ಅಹಿತವಾದ ಕೆಲಸ ನಾನು ಮತ್ತೆ ಮಾಡಬೇಕಾಗಿದೆ. ಈ ಬೆಳಗಿನ ಪ್ರಾರ್ಥನೆಯ ಕಾಲದಲ್ಲಿ ನಾನು ಕಾಯಿದೆ ಭಂಗಮಾಡಬೇಕಾದ ಈ ಜಿಲ್ಲೆಯವರು ಇನ್ನೂ ಹೆಚ್ಚು ಪರಿ ಶುದ್ಧರಾಗಿರಬೇಕೆಂದು ಹೇಳುತ್ತಿದ್ದೆ. ಇಲ್ಲಿ ರಾಜಕೀಯ ಕಾರ್ಯ ಚೆನ್ನಾಗಿ ನಡೆದಿದೆ. ಹೆಚ್ಚು ಕೆಲಸಗಾರರು ಇದ್ದಾರೆ ಆದುದರಿಂದ ನಮ್ಮನ್ನು ಮುದ್ದಿಸುವವರು ಹೆಚ್ಚು. ಈ ಆರೈಕೆಗೆ ನಾವು ಒಳಗಾಗ ಬಾರದೆಂದು ತಿಳಿಸಿದೆ. ನಾವು ದೇವತೆಗಳಲ್ಲ. ಆದುದರಿಂದ ನಮ್ಮ ದೌರ್ಬಲ್ಯ ಹೆಚ್ಚು. ದೇವರು ದೊಡ್ಡವನು. ಇವತ್ತು ನಮ್ಮ ದೌರ್ಬಲ್ಯ ಕೆಲವು ಪ್ರಕಾಶಕ್ಕೆ ಬಂದಿತು. ನಮ್ಮ ಕುಂದನ್ನು ಕುರಿತು ನಾನು ಚಿಂತಿಸುತ್ತಿರುವಾಗ ಒಬ್ಬ ಸತ್ಯಾಗ್ರಹಿ ತನ್ನ ತಪ್ಪನ್ನು ತಾನು ಒಪ್ಪಿಕೊಂಡರು. ನಾನು ಎಚ್ಚರಿಕೆ ಕೊಡುತ್ತಿರುವುದು ಸಕಾಲವಾಗಿದೆ. ಸ್ಥಳದ ಕೆಲಸಗಾರರು ಸೂರತ್ತಿನಿಂದ ಮೋಟಾರಿನಲ್ಲಿ ಹಾಲು ತರಿಸಿದ್ದರು. ಇನ್ನೂ ನಾನು ಒಪ್ಪದ ಇತರ ಖರ್ಚುಗಳನ್ನೂ ಮಾಡಿದ್ದರು. ಅವರಿಗೆ ಜೋರಾಗಿ ಹೇಳಿದೆ. ಆದರೆ ಅದರಿಂದ ನನ್ನ ದುಃಖ ಕಡಿಮೆಯಾಗ ಲಿಲ್ಲ. ತಪ್ಪುಗಳನ್ನು ಯೋಚಿಸಿದಂತೆ ನನ್ನ ದುಃಖ ಹೆಚ್ಚಾಯಿತು.

"ಹೀಗಿರುವಲ್ಲಿ ವೈಸರಾಯರು ನಮ್ಮ ಭಾರತೀಯರ ಉತ್ಪನ್ನದ ೫೦೦೦ದಷ್ಟು ಸಂಬಳ ತೆಗೆದುಕೊಳ್ಳುತ್ತಿದ್ದಾರೆಂದು ಆಕ್ಷೇಪಿಸಲು ನನ ಗೇನು ಹಕ್ಕು? ತಿಂಗಳಿಗೆ ೨೧ ಸಾವಿರವಿರಲಿ, ನಾನು ತಿಂಗಳಿಗೆ ೨೧೦೦ ರೂ ಕೊಡಲು ಸಹ ಒಪ್ಪುವುದಿಲ್ಲ. ಆದರೆ ನಾನು ವೈಸರಾಯರ ಸಂಬಳವನ್ನು ಎದುರಿಸುವುದು ಯಾವಾಗ? ನಾನೇ ಜನರಿಂದ ಅವರು

ಕೊಡಲಾರದ ಹಣ ತೆಗೆದುಕೊಳ್ಳುವಾಗಲಂತೂ ಖಂಡಿತ ಅಲ್ಲ. ನನ್ನ ಬದುಕಿಗೂ ನಮ್ಮ ಜನರ ಬದುಕಿಗೂ ಸ್ವಲ್ಪ ಸಂಬಂಧವಿದ್ದರೆ ನಾನು ಎದುರಿಸಬಹುದು. ನಾವು ದೇವರ ಹೆಸರಿನಲ್ಲಿ ಹೋಗುತ್ತಿದ್ದೇವೆ. ಹಸಿದಿರುವವರ ಬೆತ್ತಲೆ ಇರುವವರ, ನಿರುದ್ಯೋಗಿಗಳ, ಪ್ರತಿನಿಧಿಗಳೆಂದು ನಾವು ಹೇಳಿಕೊಳ್ಳುತ್ತೇವೆ. ನಮ್ಮ ದೇಶದ ಸಾಮಾನ್ಯನ ಉತ್ಪತ್ತಿಯ ಐವತ್ತರಷ್ಟು ನಾವು ವೆಚ್ಚಮಾಡುವುದಾದರೆ (ಐವತ್ತು, ಒಂದೂ ಮುಕ್ಕಾಲಾಣೆ) ವೈಸರಾಯ್ ಸಂಬಳ ಹೆಚ್ಚು ಎಂದು ಹೇಳಲು ನನಗೆ ಅಧಿಕಾರವಿಲ್ಲ. ಖರ್ಚಿನ ಪಟ್ಟಿ ಕೊಡಬೇಕೆಂದು ನಾನು ಕೆಲಸಗಾರರನ್ನು ಕೇಳಿದ್ದೇನೆ. ಈಗ ನಡೆಯುತ್ತಿರುವುದನ್ನು ನೋಡಿದರೆ ನಮ್ಮ ಖರ್ಚು ಐವತ್ತು ಸಲ ಒಂದೂಮುಕ್ಕಾಲಾಣೆ ಆದರೂ ಆಗಬಹುದು. ಸೊಗಸಾದ ಕಿತ್ತಲೆಹಣ್ಣು ದ್ರಾಕ್ಷಿ ಇವುಗಳನ್ನು ಎಲ್ಲಿದ್ದರೂ ನನಗೆ ತಂದುಕೊಡುವುದ ರಿಂದ ಇದು ತಾನೆ ಫಲ? ೧೨ ಹಣ್ಣು ಬೇಕಾದ ಕಡೆ ೧೨೦ ಹಣ್ಣು ತಂದರೆ ಹೀಗೆತಾನೆ ಆಗಬೇಕು? ತಿನ್ನದೆ ಇದ್ದರ ನಿಮಗೆ ಕೋಪ ಬರುವುದೆಂದು ನಾವು, ನೀವು ನಮ್ಮ ಮುಂದೆ ಇಡುವ ತಿಂಡಿಗಳನ್ನೆಲ್ಲಾ ತಿನ್ನುತ್ತೇವೆ. ಧನಿಕನಾದ ರೈತ ಕೊಟ್ಟ ಎಂದು ನೀವು ರುಚಿರುಚಿಯಾದ ಹಣ್ಣುಗಳನ್ನು ನಮಗೆ ಕೊಡುತ್ತೀರಿ. ನಾವು ತಿನ್ನುತ್ತೇವೆ. ಅನಂತರ ಹೀಗೆ ಊಹಿಸಿಕೊಳ್ಳಿ. ನಾನು ನಿರಾಳವಾದ ಮನಸ್ಸಿನಿಂದ, ಯಾರೋ ಬಹುಮಾನವಾಗಿ ಕೊಟ್ಟ ಉತ್ಕೃಷ್ಟವಾದ ಕಾಗದದಲ್ಲಿ ಉತ್ತಮವಾದ ಫೌಂಟೆನ್ ಪೆನ್‌ನಲ್ಲಿ ವೈಸರಾಯರಿಗೆ ಕಾಗದ ಬರೆಯುತ್ತೇನೆ. ಹೀಗೆ ಬರೆದ ಕಾಗದದಿಂದ ಏನಾದರೂ ಫಲವಾದೀತೆ?

"ಹೀಗೆ ಬಾಳುವುದು ಅಖೋಭಗವತ್‌ರ ಪದ್ಯದ ಉದಾಹರಣೆ ಯಾಗುತ್ತದೆ "ಕದ್ದ ಆಹಾರ, ಪಾದರಸವನ್ನು ಪರಿಶುದ್ಧ ಮಾಡದೆ ತಿಂದಂತೆ". ದೇಶದ ಯೋಗ್ಯತೆಗೆ ಮೀರಿದಂತೆ ಬಾಳುವದು, ತಿನ್ನುವುದು, ಆಹಾರ ಕದ್ದು ತಿಂದಂತೆ. ಕದ್ದು ತಿಂದ ಆಹಾರದಿಂದ ಈ ಯುದ್ಧವನ್ನು [ಉಪ್ಪಿನ ಸತ್ಯಾಗ್ರಹ] ಜಯಿಸಲು ಸಾಧ್ಯವಿಲ್ಲ. ನಮ್ಮ ಯೋಗ್ಯತೆ ಮೀರಿ ಊಟಮಾಡುವ ಉದ್ದೇಶಕ್ಕಾಗಿ ನಾನು ಈ ಮಹಾಯಾತ್ರೆ ಪ್ರಾರಂಭಿಸಲಿಲ್ಲ. ದೇಶದ ಈ ಕರೆ ಕೇಳಿ ಸಾವಿರಾರು ದೇಶಸೇವಕರು

ಬರುತ್ತಾರೆ. ಅವರನ್ನೆಲ್ಲಾ ಯೋಗ್ಯತೆ ಮೀರಿದ ಆಹಾರದಿಂದ ಸಾಕುವುದು ಸಾಧ್ಯವಿಲ್ಲ. ನನ್ನ ಜೀವನ ಕರ್ಮಪೂರ್ಣ. ನನ್ನ 80 ಸ್ನೇಹಿತರೊಂದಿಗೂ ಬೇರೆ ಬೇರೆಯಾಗಿ ಮಾತುಕತೆ ಆಡಲು ನನಗೆ ಅವಕಾಶವಿಲ್ಲ. ಆದುದರಿಂದ ಹೀಗೆ ಸಾರ್ವಜನಿಕವಾಗಿ ನನ್ನ ಹೃದಯ ಬಿಚ್ಚಿದ್ದೇನೆ. ಈ ಸಂದೇಶದ ತಿರುಳು ನಿಮಗೆ ತಿಳಿಯಬೇಕು. ಇಲ್ಲ ದಿದ್ದರೆ ಸ್ವರಾಜ್ಯದ ಆಸೆ ಇಲ್ಲ. ನಾವು ಮೂಕರಾದ ಪ್ರಜಾಕೋಟಿಗೆ ಹೊಣೆಗಾರರು.

"ಸ್ಥಳದ ಕೆಲಸಗಾರರಿಗೆ ನನ್ನ ಮನೋವೇದನೆ ತಿಳಿಯಲಿ. ನಾವು ದುರ್ಬಲರು, ಆಶೆಗೆ ಬಲಿಬೀಳುವವರು, ಯಾವಾಗಲೂ ಜಾರು ವವರು. ನಮ್ಮನ್ನು ಪರೀಕ್ಷಿಸಬೇಡಿ. ಆಕರ್ಷಿಸಬೇಡಿ. ಈ ವೈಭವ ಗಳನ್ನು ನಮ್ಮ ಹಳ್ಳಿಗಳಲ್ಲಿ ಸ್ಥಾಪಿಸಲು ಸಾಧ್ಯವಿಲ್ಲ. ಒಂದು ಲಕ್ಷ ಜನ ನಮ್ಮನ್ನು ಊಟಮಾಡುವುದು ಸಾಲದೆ? ನಮ್ಮಲ್ಲಿ ಒಬ್ಬರನೊಬ್ಬರು ಊಟಮಾಡಲು ಪ್ರಾರಂಭಿಸಿದರೆ ಹೇಗಾಗುತ್ತದೆ? ನಾಯಿಗಳು ನಮ್ಮ ಹೆಣಗಳನ್ನು ತಿನ್ನುವುವು.

"ನನ್ನ ಮನಸ್ಸಿನಲ್ಲಿರುವ ದುಂದುವೆಚ್ಚಕ್ಕೆ ಈ ದೀಪಗಳು ಒಂದು ಉದಾಹರಣೆ. ಈ ನಿದ್ರೆಯಿಂದ ನಾವು ಏಳಬೇಕು. ಸ್ವಯಂ ಸೇವಕರು ಪ್ರತಿಯೊಂದು ಕಾಸಿಗೂ ಲೆಕ್ಕ ಇಡಬೇಕು. ಸರ್ಕಾರಕ್ಕೆ ಎದುರಾಗಿ ಸತ್ಯಾಗ್ರಹ ಹೂಡಿದಂತೆ ನಮ್ಮವರಿಗೂ ಎದುರಾಗಿ ನಾನು ಹೂಡಬಲ್ಲೆ. ಸರ್ಕಾರಕ್ಕೆ ಎದುರಾಗಿ ಹೂಡಲು ಬಹುಕಾಲ ತೆಗೆದು ಕೊಂಡೆ. ಆದರೆ ನಮ್ಮವರಿಗೆ ಎದುರಾಗಿ ಹೂಡಲು ಇಷ್ಟುಕಾಲ ಬೇಕಿಲ್ಲ. ಆದುದರಿಂದ ನಮ್ಮಂತಹ ಸೇವಕರಿಗೆ ಉಪಚಾರಮಾಡು ವಾಗ ಜಿಪುಣರಾಗಿರಿ. ಸಿಕ್ಕದಿದ್ದ ಪದಾರ್ಥಗಳಿಗಾಗಿ ನಾನು ದೂರುವು ದಿಲ್ಲ. ನನಗೆ ಆಡಿನ ಹಾಲು ಬೇಕೆಂದು, ಬಡಸ್ತ್ರೀಯರ ಮಕ್ಕಳಿಗೆ ಹಾಲಿಲ್ಲದಂತೆ ಮಾಡಬೇಡಿ. ನೀವು ಹಾಗೆ ಮಾಡಿದರೆ ಅದು ವಿಷವಾಗುತ್ತದೆ. ಸೂರತ್‌ನಿಂದ ಹಾಲು ತರ್ಕಾರಿ ಬರಬೇಕಾದುದಿಲ್ಲ. ಅವಶ್ಯಕವಾದರೆ ಇವೆಲ್ಲ ಇಲ್ಲದೆ ಇರಬಹುದು. ಮಾತನಾಡಿದ್ದಕ್ಕೆಲ್ಲ ಮೋಟಾರಿನಲ್ಲಿ ಹೋಗಬೇಡಿ. ನಡೆಯಲು ಸಾಧ್ಯವಿರುವಾಗ ವಾಹನ

ಬೇಡ. ಇದು ಹಣದಿಂದ ನಡೆಸುವ ಯುದ್ಧವಲ್ಲ. ಜನರ ಚಳುವಳಿಯನ್ನು ದುಡ್ಡಿನಿಂದ ನಡೆಸುವುದು ಸಾಧ್ಯವಿಲ್ಲ. ಹೇಗೂ ಬೇಕಾದಂತೆ ದುಡ್ಡು ಎರಚಿ ಚಳುವಳಿ ನಡೆಸುವುದು ನನ್ನಿಂದಂತೂ ಸಾಧ್ಯವಿಲ್ಲ.

"ಈ ಚಳುವಳಿಯಲ್ಲಿ ದುಂಡುವೆಚ್ಚಕ್ಕೆ ಜಾಗವಿಲ್ಲ. ಬಿರುಗಾಳಿಯಂತಹ ಚಳುವಳಿ ನಡೆಸದೆ, ಜನ ಸೇರುವುದಿಲ್ಲವಾದರೆ, ನಾನು ಅರ್ಧಡಜ಼ನ್ ಸ್ತ್ರೀಪುರುಷರಿಗೆ, ತೃಪ್ತನಾಗಿ ಭೋಧಿಸುತ್ತೇನೆ. ಜಯ ನಮ್ಮ ಅತಿ ಬುದ್ಧಿಯಮೇಲೆ ಅವಲಂಬಿಸಿಲ್ಲ. ಅದು ಅವಲಂಬಿಸಿರುವುದು ದೇವರಮೇಲೆ; ಆತ ನಮ್ಮರನ್ನೂ ಎಚ್ಚರಿಕೆಯುಳ್ಳವರನ್ನೂ ಕಾಯುತ್ತಾನೆ.

"ಯಾರೂ ಅಲ್ಪರಲ್ಲ. ಒಬ್ಬ ಕೂಲಿ ಗ್ಯಾಸ್‌ಲೈಟ್ ದೊಡ್ಡ ಲಾಂದ್ರವನ್ನು ಸ್ಟೂಲಿನ ಮೇಲೆ ಇಟ್ಟುಕೊಂಡು ಹೋಗುತ್ತಿದ್ದುದನ್ನು ನೋಡಿದೆ. ಇದು ನಾಚಿಕೆಕೇಡು ಅವನನ್ನು ಬೇಗ ಬೇಗ ಹೋಗು ಎಂದು ಹೇಳುತ್ತಿದ್ದರು. ನನಗೆ ನೋಡುವುದೇ ಕಷ್ಟವಾಯಿತು. ಆದುದರಿಂದ ನಾನು ವೇಗವಾಗಿ ಹೊರಟು ಎಲ್ಲರನ್ನೂ ಹಿಂದೆ ಹಾಕಿದೆ. ಅದರಿಂದಲೂ ಪ್ರಯೋಜನವಾಗಲಿಲ್ಲ. ಕೂಲಿಯೂ ನನ್ನಷ್ಟು ಓಡಿಕೊಂಡು ಬಂದ ನನ್ನ ಅವಮಾನ ಪೂರ್ಣವಾಯಿತು. ಅಂತಹ ಭಾರವನ್ನು ಹೊರಲೇಬೇಕಾದರೆ ನಮ್ಮಲ್ಲಿಯೇ ಒಬ್ಬರು ಹೊತ್ತಿದ್ದರೆ ನನಗೆ ಸಂತೋಷವಾಗುತ್ತಿದ್ದಿತು. ಆಗ ದೀಪ ಸ್ಟೂಲು ಎರಡೂ ಇಲ್ಲವಾಗುತ್ತಿದ್ದಿತು. ಅಷ್ಟುಭಾರ ಯಾವ ಕೂಲಿಯೂ ಹೊರಲಾರ ಸ್ವರಾಜ್ಯದಲ್ಲಿ ಅಸ್ಪೃಶ್ಯರು ಒಬ್ಬರು, ಕೂಲಿಗಳಲ್ಲಿ ಒಬ್ಬರು, ಭಾರತಭಾಗ್ಯದ ಅಧ್ಯಕ್ಷರಾಗುತ್ತಾರೆ. ಆದುದರಿಂದ ನಮ್ಮ ದಾರಿ ನಾವು ತಿದ್ದಿಕೊಳ್ಳದಿದ್ದರೆ, ನಾವು ಹೇಳುವ ಸ್ವರಾಜ್ಯ ನಮಗೆ ಇಲ್ಲ".

## ದಾರಿದ್ರ್ಯ ಸ್ವಂತ ಇಚ್ಛೆ

ದಾರಿದ್ರ್ಯವನ್ನು ಗಾಂಧಿ ಒಂದು ವ್ರತವಾಗಿ ಆರಿಸಿಕೊಂಡಿದ್ದಾರೆ. ಲಂಡನ್‌ನಲ್ಲಿ ಗಿಲ್ಡ್ ಹೌಸ್‌ನಲ್ಲಿ ೧೯೩೧ನೆ ಇಸವಿ ೨ನೆ ಸೆಪ್ಟಂಬರಿನಲ್ಲಿ "ದಾರಿದ್ರ್ಯವನ್ನು ನಾನು ಸ್ವಂತ ಇಚ್ಛೆಯಿಂದ ಆರಿಸಿಕೊಂಡೆ" ಎಂಬುದಾಗಿ ಹೇಳಿ ಅವರ ಮನಸ್ಸು ಅದರೆಡೆಗೆ ಪರಿಪಕ್ವವಾದುದನ್ನು ಹೀಗೆ ವಿವರಿಸಿದರು.

“ ರಾಜಕೀಯು ಗೊಂದಲ ನನ್ನನ್ನು ಎಳೆದ ಕೂಡಲೆ, ನಾನು ನನ್ನನ್ನೇ ಹೀಗೆ ಕೇಳಿಕೊಂಡೆ. ರಾಜಕೀಯು ಲಾಭ ಅನೀತಿ ಅಸತ್ಯ ಇವು ನನ್ನ ಹತ್ತಿರ ಬರದಂತೆ ಇರಬೇಕಾದರೆ ನಾನು ಏನು ಮಾಡ ಬೇಕು ”....ಆ ಎಲ್ಲಾ ಕಾರ್ಯಕ್ರಮುಗಳನ್ನೂ ನಿಮುಗೆ ಈಗ ಹೇಳುವು ದಿಲ್ಲ. ನನಗೇನೋ ಅವು ಪವಿತ್ರವಾದುವೆ. ಆದರೆ ಇಷ್ಟನ್ನು ಮಾತ್ರ ಹೇಳುತ್ತೇನೆ ಪ್ರಾರಂಭದಲ್ಲಿ ಬಹು ಕಷ್ಟವಾಯಿತು. ನನ್ನ ಹೆಂಡತಿ ಯೊಂದಿಗೂ ಮಕ್ಕಳೊಂದಿಗೂ ಹೋರಾಟವಾಯಿತು. ಈಗ ಅವೆಲ್ಲಾ ಸ್ಪಷ್ಟವಾಗಿ ನನ್ನ ಕಣ್ಣಮುಂದೆ ನಿಲ್ಲುತ್ತವೆ. ಅದು ಹೇಗಾದರೂ ಇರಲಿ. ನಾನು ಈ ತೀರ್ಮಾನಕ್ಕೆ ಬಂದೆ ನಮ್ಮ ಜನರ ಸೇವೆ ಮಾಡಬೇಕಾ ದರೆ ನಾನು ದರಿದ್ರನಾಗಿರಬೇಕು.

“ ಈ ನಂಬಿಕೆ ಬಂದಕೂಡಲೇ ನಾನು ನನ್ನಲ್ಲಿದ್ದದನ್ನೆಲ್ಲಾ ಕೂಡಲೆ ಬಿಟ್ಟೆ ಎಂದು ಹೇಳಲಾರೆ. ಪ್ರಾರಂಭದಲ್ಲಿ ಕೆಲಸ ಬಹಳ ನಿಧಾನವಾಯಿತು. ಈಗ ಅವುಗಳನ್ನೆಲ್ಲಾ ಯೋಚಿಸಿಕೊಂಡರೆ, ಪ್ರಾರಂಭದಲ್ಲಿ ಅವುಗಳಿಂದ ಮನಸ್ಸಿಗೂ ನೋವಾಯಿತು ದಿವಸಗಳು ಕಳೆದಂತೆ ನನ್ನದೆನ್ನುವ ಅನೇಕ ಪದಾರ್ಥಗಳನ್ನು ನಾನು ಬಿಡುವುದು ಅವಶ್ಯಕವಾಯಿತು. ಕೆಲವು ಕಾಲದಮೇಲೆ ಬಿಡುವುದೇ ನನ್ನ ಆನಂದ ವಾಯಿತು. ಅನಂತರ ಪದಾರ್ಥಗಳು ಒಂದೊಂದಾಗಿ ನನ್ನಿಂದ ಬೇಗ ಬೇಗ ಹೋಗತೊಡಗಿದವು. ನನ್ನ ಹೆಗಲಿನ ಮೇಲಿನ ಒಂದು ಭಾರ ಕಡಿಮೆಯಾಗಿ ಹಗುರವಾಯಿತು. ನಾನು ಮನಸ್ಸಮಾಧಾನ ಹೊಂದಿದೆ. ಹೆಚ್ಚು ಸುಖದಿಂದ ಸಂತೋಷದಿಂದ ನಮ್ಮವರ ಸೇವೆ ಮಾಡತೊಡಗಿದೆ. ಅಲ್ಲಿಂದ ಮುಂದೆ ಯಾವುದನ್ನಾದರೂ ಇಟ್ಟುಕೊಳ್ಳುವುದೆಂಬುದು ಹಿಂಸೆಯೂ ಹೊರೆಯೂ ಆಯಿತು ”

“ ಆ ಆನಂದದ ಕಾರಣವನ್ನು ಕುರಿತು ಯೋಚಿಸುವಾಗ ನನಗೆ ಹೀಗೆ ತೋರಿತು. ನಾನು ನನ್ನದೆಂದು ಏನನ್ನಾದರೂ ಇಟ್ಟುಕೊಂಡರೆ ಲೋಕದಿಂದಲೆಲ್ಲಾ ಅದನ್ನು ಕಾಯ್ದುಕೊಳ್ಳಬೇಕು. ಅನೇಕರಲ್ಲಿ ಆ ಪದಾರ್ಥವಿಲ್ಲ. ಆದರೆ ಅದು ಅವರಿಗೆ ಬೇಕು. ಹಸಿದವರು ದರಿದ್ರರು. ನಾನು ಒಬ್ಬನೇ ಇರುವಾಗ ಆ ಪದಾರ್ಥವನ್ನು ನನ್ನಿಂದ ಪೂರ್ಣ

ವಾಗಿಯಾಗಲಿ ಅರ್ಥವಾಗಲಿ ತೆಗೆದುಕೊಳ್ಳಲು ಪ್ರಯತ್ನಿಸಿದರೆ, ನಾನು ಪೋಲೀಸರ ಆಶ್ರಯ ರಕ್ಷಣೆ ಪಡೆಯಬೇಕು. ನಾನು ಹೀಗೆ ಹೇಳಿಕೊಂಡೆ. ಅವರಿಗೆ ಬೇಕಾಗುವ ವೇಳೆಗೆ ಅವರು ತೆಗೆದುಕೊಳ್ಳುತ್ತಾರೆ. ಅವರಿಗೇನೂ ನನ್ನಲ್ಲಿ ದ್ವೇಷವಿಲ್ಲ. ಅವರ ಆವಶ್ಯಕತೆ ನನ್ನ ಆವಶ್ಯಕತೆಗಿಂತ ಹೆಚ್ಚಾಗಿರುವುದರಿಂದಲೇ ಅವರು ತೆಗೆದುಕೊಳ್ಳುತ್ತಾರೆ."

"ಮತ್ತು ನನಗೇ ನಾನು ಹೀಗೆ ಹೇಳಿಕೊಂಡೆ 'ವಸ್ತುಗಳನ್ನು ಇಟ್ಟುಕೊಳ್ಳುವುದೊಂದೇ ತಪ್ಪು ಎಂದು ತೋರುತ್ತದೆ. ಇತರರಿಗೆ ಆ ಪದಾರ್ಥಗಳು ಸಿಕ್ಕುವುದಾದರೆ ಆಗ ಮಾತ್ರ ನಾನು ಅವುಗಳನ್ನು ಇಟ್ಟುಕೊಳ್ಳಬಹುದು. ಆದರೆ ಅನುಭವದಿಂದ ನಮಗೆಲ್ಲರಿಗೂ ಗೊತ್ತು. ಇದು ಸಾಧ್ಯವಿಲ್ಲ. ಆದುದರಿಂದ ಎಲ್ಲರೂ ಇಟ್ಟುಕೊಳ್ಳಬಹುದಾದ ವಸ್ತು "ಇಟ್ಟುಕೊಳ್ಳದಿರುವುದು" ಎಂಬುದೇ ಬೇರೆ ಮಾತಿನಲ್ಲಿ ಹೇಳುವುದಾದರೆ ಸ್ವಂತ ಇಚ್ಛೆಯಿಂದ ತ್ಯಾಗಮಾಡುವುದು.

"ಆದರೆ ನೀವು ಹೀಗೆ ಕೇಳಬಹುದು. ಏನನ್ನೂ ಇಟ್ಟುಕೊಳ್ಳಬಾರದು ಎಂದು ಹೇಳುತ್ತಲೇ ಇದ್ದೀರಿ. ಆದರೆ ನಿಮ್ಮ ಮೈಮೇಲೆ ಅನೇಕ ವಸ್ತುಗಳಿವೆ' ಎಂದು ನನ್ನ ಮಾತಿನ ಅರ್ಥ ನಿಮಗೆ ಸರಿಯಾಗಿ ಆಗಿದ್ದರೆ, ನಿಮ್ಮ ಆಕ್ಷೇಪಣೆ ನ್ಯಾಯ. ಮನೋಭಾವ ಮುಖ್ಯ. ನಿಮ್ಮ ದೇಹವಿರುವವರೆಗೆ ದೇಹಕ್ಕೆ ವಸ್ತ್ರಬೇಕೇ ಬೇಕು. ಆದರೆ ನಿಮ್ಮ ದೇಹಕ್ಕಾಗಿ ಸಿಕ್ಕಿದುದನ್ನೆಲ್ಲಾ ನೀವು ತೆಗೆದುಕೊಳ್ಳಕೂಡದು. ಯಾವುದು ಅತ್ಯವಶ್ಯಕವೋ ಅದನ್ನು ಮಾತ್ರ ತೆಗೆದುಕೊಳ್ಳಬೇಕು. ನಿಮಗೆ ಅನೇಕ ಅರಮನೆಗಳು ಬೇಕಿಲ್ಲ. ಅತ್ಯಾವಶ್ಯಕವಾದ ಗುಡಿಸಲು ಸಾಕು. ಹಾಗೆಯೇ ನಿಮ್ಮ ಆಹಾರ ಮತ್ತು ಇತರ ಅವಶ್ಯಕತೆಗಳೂ ಕೂಡ.

"ಈಗ ಯಾವುದು ನಾಗರೀಕತೆ ಎಂದು ನೀವು ತಿಳಿದಿದ್ದೀರೋ ಅದಕ್ಕೂ ಇದಕ್ಕೂ ವ್ಯತ್ಯಾಸವಿದೆ. ನಾಗರೀಕತೆ ಎಂದರೆ ನಿಮ್ಮ ಅವಶ್ಯಕತೆಗಳನ್ನು ಹೆಚ್ಚಿಸಿಕೊಳ್ಳುವುದೆಂದು ಈಗಿನ ತಿಳಿವಳಿಕೆ. ನಿಮಗೆ ಒಂದು ಕೊಠಡಿ ಇದ್ದರೆ, ಸಾಲದು ಎರಡು ಬೇಕು. ಮೂರು ಬೇಕು. ಎಷ್ಟು ಹೆಚ್ಚಾದರೆ ಅಷ್ಟುಸೊಗಸು. ಹಾಗೆಯೇ ನಿಮ್ಮ ಮನೆ ಎಷ್ಟು ಹಿಡಿಯು

ತ್ತದೋ ಅಷ್ಟು ಮೇಜ ಕುರ್ಚಿ ಇಡಬೇಕು ಹೀಗೆ ಇದಕ್ಕೆ ಕೊನೆ ಇಲ್ಲ. ನಿಮ್ಮ ಅವಶ್ಯಕತೆ ಹೆಚ್ಚಿದಷ್ಟೂ ನಿಮ್ಮ ನಾಗರೀಕತೆ ಹೆಚ್ಚೆಂದು ನಿಮ್ಮ ಭಾವನೆ. ನಾನು ಹೇಳುವುದು ಆ ನಾಗರೀಕತೆಯ ಪ್ರಚಾರಕರು ಹೇಳುವಷ್ಟು ಸೊಗಸಾಗಿರಲಾರದು. ಆದರೆ ನನಗೆ ಅದು ತಿಳಿದ ರೀತಿಯಲ್ಲಿ ನಿಮಗೆ ತಿಳಿಸುತ್ತಿದ್ದೇನೆ.

“ ಈ ಮತ್ತೊಂದು ದೃಷ್ಟಿ ನೋಡಿ. ನಿಮ್ಮಲ್ಲಿ ವಸ್ತುಗಳು ಎಷ್ಟು ಕಡಿಮೆಯಾಗಿದ್ದರೆ, ನಿಮ್ಮ ಅವಶ್ಯಕತೆ ಎಷ್ಟು ಕಡಿಮೆಯಾಗಿದ್ದರೆ ನೀವು ಅಷ್ಟು ನಾಗರೀಕರು ಸುಖಿ. ಸುಖಿಯಾಕೆ ? ನಿಮ್ಮ ಸ್ವಂತಸುಖಕಲ್ಲ. ನಿಮ್ಮ ಜನರ ಸೇವೆಯ ಸುಖಕ್ಕೆ. ಆ ಸೇವೆಗೆ ನೀವು ದೇಹ ಆತ್ಮ ಎರಡನ್ನೂ ಮೀಸಲು ಮಾಡುತೀರಿ. ದೇಹ ಕೂಡ ನಿಮ್ಮದಲ್ಲ. ಭಗವಂತ ಈ ದೇಹವನ್ನು ನಿಮಗೆ ತಾತ್ಕಾಲಿಕವಾಗಿ ಕೊಟ್ಟಿದ್ದಾನೆ. ನಿಮಗೆ ಇದನ್ನು ಕೊಟ್ಟವನೇ ತೆಗೆದುಕೊಳ್ಳಲೂ ಬಹುದು.

“ ಆದುದರಿಂದ ನನ್ನ ನಂಬಿಕೆ ಹೀಗೆ ಇರುವುದರಿಂದ ಈ ದೇಹ ನನ್ನ ಸ್ವಾಧೀನದಲ್ಲಿರುವವರೆಗೆ ಇದನ್ನು ಸರಿಯಾಗಿ ಉಪಯೋಗಿಸ ಬೇಕು. ಸುಖಕ್ಕಲ್ಲ, ನನ್ನ ಖುಷಿಗಲ್ಲ. ಎಚ್ಚರವಾಗಿರುವ ಕಾಲದ ಲ್ಲೆಲ್ಲಾ ನಮ್ಮವರ ಸೇವೆಗಾಗಿಯೇ ಈ ದೇಹವನ್ನು ಉಪಯೋಗಿಸ ಬೇಕು. ಇದೇ ನನ್ನ ಯಾವಾಗಿನ ಆಸೆ. ದೇವರು ಬಯಸಿದಾಗ ಈ ದೇಹವನ್ನು ಆತನಿಗೇ ಹಿಂದಿರುಗಿಸಬೇಕು. ದೇಹದ ವಿಷಯವೇ ಹೀಗಿರುವಾಗ, ನಾವು ಉಪಯೋಗಿಸುವ ಇತರ ವಸ್ತ್ರ ಮುಂತಾದ ವಸ್ತುಗಳ ವಿಚಾರ ಹೇಳಬೇಕಾದುದೇ ಇಲ್ಲ.

“ ಈ ಅಪರಿಗ್ರಹ ನಿಯಮವನ್ನು ಪೂರ್ಣವಾಗಿ ಅನುಸರಿಸಿ ದವರು (ಪೂರ್ಣವಾಗಿ ಅನುಸರಿಸಲು ಯಾರಿಂದಲೂ ಸಾಧ್ಯವಿಲ್ಲ. ಮನುಷ್ಯನಿಂದ ಎಷ್ಟು ಸಾಧ್ಯವೋ ಅಷ್ಟು ಪೂರ್ಣವಾಗಿ ಅನುಸರಿಸಿರು ವವರು) ಹೀಗೆ ಹೇಳುತ್ತಾರೆ. “ ನೀವು ಎಲ್ಲವನ್ನೂ ತ್ಯಾಗಮಾಡಿದರೆ ಜಗತ್ತಿನ ಐಶ್ವರ್ಯವೆಲ್ಲಾ ನಿಮ್ಮದೇ ಆಗುವುದು. ಬೇರೆ ಮಾತಿನಲ್ಲಿ ಹೇಳುವುದಾದರೆ ನಿಮಗೆ ಬೇಕಾದುದೆಲ್ಲಾ ನಿಮಗೆ ಸಿಕ್ಕುವುದು. ನಿಮಗೆ ಅನ್ನ ಬೇಕಾದರೆ ಅನ್ನವು ನಿಮಗೆ ಬರುವುದು.

" ನಿಮ್ಮಲ್ಲಿ ಅನೇಕರು ಪ್ರಾರ್ಥನೆ ಮಾಡುತ್ತೀರಿ. ಪ್ರಾರ್ಥನೆ ಮಾಡುವುದರಿಂದ ನಿಮಗೆ ಆಹಾರ ದೊರೆಯುವುದೆಂದು ನೀವು (ಕ್ರಿಸ್ತರು) ಹೇಳುತ್ತೀರಿ. ಬೇಕಾದುದೆಲ್ಲಾ ದೊರೆಯುವುದೆಂದು ಹೇಳುತ್ತೀರಿ. ಅದನ್ನು ನಾನು ನಂಬುತ್ತೇನೆ. ಆದರೆ ನನ್ನೊಂದಿಗೆ ಇನ್ನೂ ಒಂದು ಹೆಜ್ಜೆ ಮುಂದೆ ಬನ್ನಿ. ಲೋಕದಲ್ಲಿ ಸರ್ವಸ್ವವನ್ನೂ ಸ್ವಂತ ಇಚ್ಛೆಯಿಂದ ತ್ಯಾಗಮಾಡುವವರಿಗೆ ಜಗತ್ತಿನಲ್ಲಿ ಬೇಕಾದುದೆಲ್ಲಾ ದೊರೆಯುತ್ತದೆ. ದೇಹವನ್ನು ಬಿಡಲೂ ಸಿದ್ಧರಾಗಿರಬೇಕು. (ತಮ್ಮನ್ನು ತಾವು ಪರೀಕ್ಷಿಸಿಕೊಳ್ಳಬೇಕು. ತಮ್ಮ ವಿಷಯದಲ್ಲಿ ಯಾವಾಗಲೂ ಕ್ರೂರರಾಗಿರಬೇಕು)

" ದೇವರು ನಿಮಗೆ ಬೇಕಾದುದನ್ನು ಕೊಡುತ್ತಾನೆ ಎಂಬುದರಲ್ಲಿ ವಿಶಾಲವಾದ ಅರ್ಥ ಇಟ್ಟುಕೊಳ್ಳಬೇಕು. ದೇವರು ನಿಮ್ಮಿಂದ ಪೂರ್ಣವಾದ ಕೆಲಸ ತೆಗೆದುಕೊಳ್ಳುತ್ತಾನೆ. ನಿಮ್ಮನ್ನು ಚೆನ್ನಾಗಿಯೇ ಪರೀಕ್ಷಿಸುತ್ತಾನೆ. ನಿಮ್ಮ ನಂಬಿಕೆ ಪೂರ್ಣವಾಗಿ ನಾಶವಾಗಿ, " ಇನ್ನೇನು ನನಗೆ ಎಲ್ಲಿಯೂ ಆಶ್ರಯವಿಲ್ಲ ನಾನು ಹೋದೆ " ಎಂಬ ನಿರ್ಧಾರದಿಂದ ನಿಮಗೆ ಪೂರ್ಣವಾಗಿ ನಿರುತ್ಸಾಹವುಂಟಾದಾಗ, ಹೇಗೋ ದೇವರು ನಿಮ್ಮನ್ನು ಸಂರಕ್ಷಿಸುತ್ತಾನೆ. ಆದರೆ ದೇವರು ತನ್ನ ನಿಯಮಕ್ಕೆ ಅನುಸಾರವಾಗಿ ರಕ್ಷಿಸುತಾನೆಯೇ ಹೊರತು ನಿಮ್ಮ ನಿಯಮಕ್ಕೆ ಅನುಸಾರವಾಗಿ ಅಲ್ಲ ಇದು ನನ್ನ ಅನುಭವ. ಕಷ್ಟಕಾಲದಲ್ಲಿ ದೇವರು ನನ್ನನ್ನು ಕೈಬಿಟ್ಟಿದು ನನ್ನ ಅನುಭವದಲ್ಲಿ ಇಲ್ಲ."

ಡಾ|| ಮಾಟ್‌ರಿಗೆ ಗಾಂಧಿ ಹೀಗೆ ಹೇಳಿದರು. " ಹಣದ ಸದುಪಯೋಗ ದುರುಪಯೋಗ ಎಂಬುದಿಲ್ಲ. ಹಣವೇ ಬೇಕಿಲ್ಲ. ರಾಷ್ಟ್ರದ ಸಂಸ್ಥೆಗಳು ಹಣದ ಅಭಾವದಿಂದಲೇ ನಡೆಯಬೇಕು. ಹಣ ಹೆಚ್ಚಾದಷ್ಟೂ ಸಂಸ್ಥೆಯ ಉದ್ದೇಶ ಪವಿತ್ರತೆ ಕಡಿಮೆಯಾಗುವ ಸಂಭವವಿದೆ. ಎಲ್ಲಿಯವರೆಗೆ ಜನರಿಗೆ ನಿಮ್ಮ ಸಂಸ್ಥೆ ಆವಶ್ಯಕವೋ ಅಲ್ಲಿಯವರೆಗೆ ಜನ ನಿಮಗೆ ಧನ ಒದಗಿಸಿಯೇ ಒದಗಿಸುತ್ತಾರೆ. ಇದಕ್ಕಾಗಿ ಹಣವನ್ನು ಕೂಡಿಟ್ಟುಕೊಳ್ಳಬೇಕಾದುದಿಲ್ಲ. ಯಾವ ಒಳ್ಳೆಯ ಕೆಲಸವೂ ಹಣವಿಲ್ಲದುದರಿಂದ ನಿಂತಿಲ್ಲ. ಆಫ್ರಿಕದಲ್ಲಿ

ಬರಿಯ ಕೈಯ್ಯಲ್ಲಿ ಸತ್ಯಾಗ್ರಹ ಪ್ರಾರಂಭಿಸಿದೆ. ಆದರೆ ಭಾರತದಿಂದ ಹಣ ಸುರಿಯಲು ಪ್ರಾರಂಭವಾಯಿತು. ಕೊನೆಗೆ ನಾನೇ ಇನ್ನು ಹಣ ಬೇಡ ಎಂದು ನಿಲ್ಲಿಸಿದೆ". ಎಂದರು. ಭಾರತದಂತಹ ದರಿದ್ರ ದೇಶದಲ್ಲಿ ಹಣದಮೇಲೆಯೇ ಅವಲಂಬಿಸಿ ಕುಳಿತರೆ ಯಾವ ಕೆಲಸವೂ ನಡೆಯುವುದಿಲ್ಲ. ಯಾರು ಯಾರು ಭಾರತದ ದಾರಿದ್ರ್ಯಕ್ಕೆ ಕಾರಣರೋ ಅವರೆಲ್ಲಾ ಅಪರಾಧಿಗಳೇ.

ಗಾಂಧಿಯವರು ಇಂಗ್ಲೆಂಡಿನಲ್ಲಿದ್ದಾಗ (೧೯೩೧ರ ರೌಂಡ್ ಟೇಬಲ್ ಸಮ್ಮೇಳನ "ಇಂಗ್ಲಿಷರು ಇಂದೇ ಭಾರತವನ್ನು ಬಿಡಲಿ. ಆಗ ನಮ್ಮಲ್ಲಿ ಒಗ್ಗಟ್ಟು ತಾನಾಗಿಯೇ ಉಂಟಾಗುವುದು" ಎಂದರು ಎದುರಿಗೆ ಕುಳಿತಿದ್ದ ಆಂಗ್ಲೇಯ ಗೃಹಸ್ಥರು "ಹಾಗೆ ಮಾಡಿದರೆ ಸರ್ಕಾರ ತನ್ನ ಕರ್ತವ್ಯ ಪರಾಙ್ಮುಖವಾದಂತೆ ಆಗುವುದಿಲ್ಲವೇ" ಎಂದರು. ಗಾಂಧಿಯವರು "ಪರಕೀಯರ ಆಡಳಿತ, ಅನ್ನದಲ್ಲಿ ನೊಣವಿದ್ದಂತೆ. ದೇಹದಲ್ಲಿ ವಿಷ ಸೇರಿದಂತೆ. ವಿಷವನ್ನು ತೆಗೆದುಹಾಕಿದಾಗ ದೇಹ ಸ್ವಾಭಾವಿಕವಾಗಿ ಬೆಳೆಯಲು ಪ್ರಾರಂಭಿಸುವುದು. ಸರ್ಕಾರ ಭಾರತದಲ್ಲಿ ಇಂದು ಮಾಡುತ್ತಿರುವ ಕರ್ತವ್ಯ ಬರಿಯ ಲೂಟಿ. ಆ ಲೂಟಿಯನ್ನು ಬ್ರಿಟನ್ ಬಿಟ್ಟರೆ ಭಾರತದ ಆರ್ಥಿಕ ಸ್ಥಿತಿ ತಾನಾಗಿಯೇ ಉತ್ತಮಗೊಳ್ಳುವುದು" ಎಂದರು. ಇನ್ನೊಬ್ಬ ಸದಸ್ಯರು "ಇಂಗ್ಲೆಂಡಿನ ಲೂಟಿ ಕುರಿತು ನೀವು ಹೇಳಿದಿರಿ. ಆದರೆ ಭಾರತದ ದಾರಿದ್ರ್ಯಕ್ಕೆ ಮುಖ್ಯ ಕಾರಣ ನಿಮ್ಮ ಲೇವಾದೇವಿಗಾರರ (ಬನಿಯ) ಮನೆಹಾಳ ಬಡ್ಡಿಯೇ ಅಲ್ಲವೆ? ಮದುವೆ ಮುಂಜಿ ತಿಥಿಗಳಲ್ಲಿ ಮಾಡುವ ಅಸಾಧ್ಯವಾದ ಖರ್ಚು ಕಾರಣವಲ್ಲವೆ? ಕೊನೆಯಲ್ಲಿ ನೀವು ಬ್ರಿಟಿಷ್ ಸರ್ಕಾರ ದುಂದುವೆಚ್ಚದ ಸರ್ಕಾರ ಎನ್ನುತ್ತೀರಿ. ಆದರೆ ಭಾರತದ ರಾಜರು ಮಾಡುವ ಖರ್ಚಿಗೆ ಏನು ಹೇಳುತ್ತೀರಿ" ಎಂದು ಕೇಳಿದರು. ಗಾಂಧಿಯವರು "ಭಾರತದ ಬನಿಯ, ಇಂಗ್ಲಿಷ್ ಬನಿಯನಿಗೆ ಕಡಿಮೆ ಇಲ್ಲ. ನಾವು ಹಿಂಸಾಮಾರ್ಗವನ್ನು ಅನುಸರಿಸಿದ್ದರೆ ಭಾರತದ ಬನಿಯನನ್ನು ಕೊಲ್ಲುತ್ತಿದ್ದೆವು. ಭಾರತದ ಬನಿಯ ಮರಣದಂಡನೆಗೆ ಅರ್ಹನಾದರೆ ಇಂಗ್ಲಿಷ್ ಬನಿಯ ನೂರು ಸಲ ಸಾವಿರ ಸಲ ಮರಣದಂಡನೆಗೆ ಅರ್ಹ.

ಬ್ರಿಟಿಷ್ ಬನಿಯು ನೋಟುಗಳ ಮಾಟದಿಂದ ಹೊಡೆದುಕೊಂಡು ಹೋಗುವ ಲೂಟಿಗೆ ಹೋಲಿಸಿದರೆ, ಭಾರತದ ಬನಿಯು ಕಿಗೆದುಕೊಳ್ಳುವ ಬಡ್ಡಿ ಅಲ್ಪವೇ. ಬ್ರಿಟಿಷ್ ಬನಿಯು ಭೂಕಂದಾಯ ವಸೂಲ್ಮಾಡುವ ಕ್ರೌರ್ಯಕ್ಕೆ ಹೋಲಿಸಿದರೆ ಭಾರತದ ಬನಿಯನ ಕ್ರೌರ್ಯವು ದಯೆಯೇ. ಭಾರತೀಯರಂತಹ ಸಾಧುಗಳನ್ನು, ಇಷ್ಟು ವ್ಯವಸ್ಥೆಯಿಂದ ಹೀಗೆ ಲೂಟಿಮಾಡಿದ ಉದಾಹರಣೆ ಇತಿಹಾಸದಲ್ಲಿಯೇ ಬೇರೆ ಇಲ್ಲ. ಇನ್ನು ಭಾರತದ ರಾಜರ ದುಂದುವೆಚ್ಚ ? ರಾಜರ ಜಂಭದ ಅರಮನೆಗಳನ್ನು ಕಿತ್ತುಕೊಳ್ಳುವುದರಲ್ಲಿ ನನಗೆ ಸ್ವಲ್ಪವೂ ಅಸಮಾಧಾನವಿಲ್ಲ. ಬ್ರಿಟಿಷ್ ಸರ್ಕಾರದ ಡಿಲ್ಲಿಯ ಅರಮನೆಗಳನ್ನು ಕಿತ್ತುಕೊಳ್ಳುವುದರಲ್ಲಿಯೂ ನನಗೆ ಅಸಮಾಧಾನವಿಲ್ಲ. ಭಾರತೀಯರು ಹೊಟ್ಟೆಗಿಲ್ಲದೆ ಸಾಯುತ್ತಿದ್ದಾಗ ವೈಸರಾಯರ ಚಾಪಲ್ಯ ತೃಪ್ತಿಗಾಗಿ ಕೋಟ್ಯಾಂತರ ರುಪಾಯಿಗಳನ್ನು ಡಿಲ್ಲಿಯ ಅರಮನೆಗೆ ಹೃದಯ ಹೀನವಾಗಿ ವೆಚ್ಚಮಾಡಿದುದರ ಎದುರಿನಲ್ಲಿ ಭಾರತದ ರಾಜರ ದುಂದುಗಾರಿಕೆ ಖರ್ಚೇ ಅಲ್ಲ " ಎಂದರು.

---

# ೯. ಹರಿಜನ ಬಂಧು

“ಎರಡು ಸಂಗತಿಗಳು ನನ್ನನ್ನು ಆಶ್ಚರ್ಯ ಮತ್ತು ವಿಸ್ಮಯದಲ್ಲಿ ಮುಳುಗಿಸುತ್ತಿವೆ. ಒಂದು ನಕ್ಷತ್ರನಿಬಿಡವಾದ ಅಂತರಿಕ್ಷ; ಎರಡನೆಯದು ಧರ್ಮದ ನಿಯಮ. ಆದರೆ ಇವೆರಡನ್ನೂ ಮೀರಿದ ಭಯಂಕರವಾದ ಮತ್ತೊಂದು ಸಂಗತಿ ನನಗೆ ಗೊತ್ತಿದೆ. ಅದೇ ಬಹುಕಾಲದಿಂದ ದಬ್ಬಾಳಿಕೆಗೆ ಒಳಗಾದ, ಬಡವರ ದೀರ್ಘ ಸಹನೆ ”.

ಕ್ಯಾಂಟ್ ಹೇಳಿದ ಮೇಲಿನ ವಾಕ್ಯಗಳು ಭಾರತದ ಹರಿಜನರಿಗೆ ಪೂರ್ಣವಾಗಿ ಅನ್ವಯಿಸುತ್ತವೆ. ದಳಿತರೂ ದೀನರೂ ದರಿದ್ರರೂ ಜಗತ್ತಿನಲ್ಲಿ ಅನೇಕರು ಇರಬಹುದು. ಆದರೆ ಭಾರತದ ಹರಿಜನರಂತಹ ನಿರುತ್ಸಾಹಿಗಳೂ ತುಳಿಯಲ್ಪಟ್ಟವರೂ, ಆ ದಬ್ಬಾಳಿಕೆಯನ್ನು ಒಂದೇ ಸಮನಾದ ಸಹನೆಯಿಂದ ಸಹಿಸಿಕೊಂಡಿರುವವರೂ ಬೇರೆ ಎಲ್ಲಿಯೂ ಇಲ್ಲ. ಭಾರತದ ಏಳಿಗೆಗಾಗಿ ದುಡಿಯಲು ಪ್ರಯತ್ನ ಪಡುವವರಿಗೆಲ್ಲಾ ನಮ್ಮ ದೇಶದಲ್ಲಿ ಅಸ್ಪೃಶ್ಯ ಎಂಬುವವನಿರುವುದು ನಮ್ಮ ದೇಶದ ಏಳಿಗೆಗೆ ದೊಡ್ಡ ತಡೆ ಎಂದು ಕೂಡಲೆ ಗೊತ್ತಾಗುತ್ತದೆ. ಅದರ ನಿವಾರಣೆಗಾಗಿ ಅವರು ಸತತ ಪ್ರಯತ್ನ ಪಡುತ್ತಾರೆ.

ಈ ಮೂಳೆಚರ್ಮದ ಅರಜೀವದ ಬೊಂಬೆಗಳನ್ನು ನೋಡಿದರೆ ಯಾರಿಗೆ ತಾನೇ ಕನಿಕರವುಂಟಾಗುವುದಿಲ್ಲ ! ನಮ್ಮ ದೇಶದವರನ್ನು ಈ ಸ್ಥಿತಿಯಲ್ಲಿಟ್ಟಿದ್ದೇವೆಯೆಲ್ಲ ಎಂದು ನಮ್ಮಲ್ಲಿಯೇ ನಮಗೆ ತಿರಸ್ಕಾರವುಂಟಾಗುವುದು ಸ್ವಾಭಾವಿಕ. ನಮ್ಮ ಅಣ್ಣತಮ್ಮಂದಿರು ಆರನೆಯ ಒಂದು ಪಾಲು ಜನರನ್ನು ಹೀಗೆ ಇಟ್ಟುಕೊಂಡು ಸ್ವರಾಜ್ಯ ಸಾಧಿಸುವುದು ಸೊಂಟಕ್ಕೆ ಕಬ್ಬಿಣದ ಗುಂಡು ಕಟ್ಟಿಕೊಂಡು ಈಜಿದಂತೆಯೇ. ಭಾರತ ದೇಶದ ಅತ್ಯಂತ ಪ್ರಬಲವಾದ ಸಮಸ್ಯೆ ಬಡವರಮೇಲೆ ದಬ್ಬಾಳಿಕೆ. ಇದು ರಾಜಕೀಯ ಪ್ರಶ್ನೆಗಿಂತ ಹೆಚ್ಚು ತೀವ್ರವಾದುದು; ಎಂದು ಸಿ ಎಫ್ ಆಂಡ್ರೂಸ್‌ರವರು ಹೇಳಿದರು. ಭಾರತದ ಎಲ್ಲಾ ರೋಗಗಳನ್ನೂ ಪ್ರತಿಭಟಿಸಿದಂತೆ ಗಾಂಧಿಯವರು ಅಸ್ಪೃಶ್ಯತೆಯನ್ನೂ ಪ್ರತಿಭಟಿಸಿದರು.

## ಮೊದಲು ಆಚರಣೆ

ಯಾವ ಕೆಲಸವನ್ನೂ ಮೊದಲು ಆಚರಿಸಿ ಅನಂತರ ಬೋಧಿಸುವ ತಮ್ಮ ಪದ್ಧತಿಯಂತೆ ಗಾಂಧಿಯವರು ಸರಾಗವಾಗಿ ಹರಿಜನರೊಂದಿಗೆ ಸೇರತೊಡಗಿದರು. ದಕ್ಷಿಣ ಆಫ್ರಿಕದಲ್ಲಿಯೇ ಅವರು ಹರಿಜನರ ಸೇವೆ ಮಾಡತೊಡಗಿದ್ದರು ಈ ಬಗೆಯ ಹೊಸ ಕೆಲಸಗಳನ್ನು ಮಾಡು ವವರು ಹೆಜ್ಜೆಹೆಜ್ಜೆಗೂ ಎಡರುಗಳನ್ನು ಎದುರಿಸಬೇಕಾಗುತ್ತದೆ. ನಮ್ಮ ಸಂಸಾರದವರೇ, ಹೆಂಡತಿ ಮಕ್ಕಳೇ ನಮಗೆ ಎದುರಾಗಿ ಎದ್ದು ನಿಲ್ಲು ತ್ತಾರೆ. "ನಾನು ನನ್ನ ಹೆಂಡತಿಯನ್ನು ಮದುವೆಯಾಗುವುದಕ್ಕೆ ಮುಂಚೆಯೇ ಅಸ್ಪೃಶ್ಯತಾ ನಿವಾರಣೆಯನ್ನು ಮದುವೆಯಾದೆ. ನನ್ನ ಬಾಳಿನಲ್ಲಿ ಎರಡು ಕಠಿಣ ಪರಿಸ್ಥಿತಿ ಬಂದಿತ್ತು. ಇಲ್ಲ ಹರಿಜನರಿಗಾಗಿ ಕೆಲಸ ಮಾಡಬೇಕು, ಇಲ್ಲ ಹೆಂಡತಿಯನ್ನು ಬಿಡಬೇಕು. ನಾನೇನೋ ಮೊದಲನೆಯದನ್ನೇ ಆರಿಸಿಕೊಳ್ಳುತ್ತಿದ್ದೆ. ಆದರೆ ನನ್ನ ಹೆಂಡತಿಯ ಸೌಜನ್ಯದಿಂದ ಅದು ತಪ್ಪಿತು' ಎಂದಿದ್ದಾರೆ.

"ನನಗೆ ಈಗ ಮೋಕ್ಷ ಬರದಿದ್ದರೆ ಮುಂದಲ ಜನ್ಮದಲ್ಲಿ ನಾನು ಭಂಗಿಯಾಗಿ ಹುಟ್ಟುವಂತೆ ಅನುಗ್ರಹಿಸಬೇಕೆಂದು ದೇವರನ್ನು ಪ್ರಾರ್ಥಿ ಸುತ್ತೇನೆ. ವರ್ಣಾಶ್ರಮ ಧರ್ಮವು, ಕರ್ಮ ಮತ್ತು ಜನ್ಮಗಳಿಗೆ ಅನು ಸಾರವಾದುದೆಂದು ನನ್ನ ನಂಬಿಕೆ. ಭಂಗಿಯು ನೀಚ ಎಂದು ನಾನು ಪರಿಗಣಿಸುವುದಿಲ್ಲ. ಗೌರವಕ್ಕೆ ಅರ್ಹರಾದ ಅನೇಕ ಭಂಗಿಗಳು ಇದ್ದಾರೆ. ಆದರೆ ಗೌರವಕ್ಕೆ ಅರ್ಹರಲ್ಲದ ಅನೇಕ ಸವರ್ಣಿಗಳೂ ಇದ್ದಾರೆ. ಆದುದರಿಂದ ಮುಂದೆ ನಾನು ಹುಟ್ಟಿದರೆ ಪರಯನಾಗಿ ಹುಟ್ಟಬೇಕು ಆಗ ಅವರ ಜತೆಯಲ್ಲಿದ್ದು ಇನ್ನೂ ಚೆನ್ನಾಗಿ ಅವರ ಸೇವೆ ಮಾಡಬಹುದು. ಅವರ ಪರವಾಗಿ ಅವರವನಾಗಿ ಇತರರಿಗೆ ಸಮಜಾಯಿಷಿ ಕೊಡಬಹುದು.

"ಅಸ್ಪೃಶ್ಯರು ಸ್ಪೃಶ್ಯರನ್ನು ತಿರಸ್ಕರಿಸಕೂಡದು. ಸ್ಪೃಶ್ಯರು ಅಸ್ಪೃಶ್ಯರನ್ನು ದ್ವೇಷಿಸಕೂಡದು ಅಸ್ಪೃಶ್ಯರು ಪಶ್ಚಿಮ ದೇಶಗಳಲ್ಲಿ ಮಾಡಿರುವಂತೆ ಹಿಂಸೆಯಿಂದ ಬಲಾತ್ಕಾರವಾಗಿ ತಮ್ಮ ಹಕ್ಕುಗಳನ್ನು ಕಿತ್ತುಕೊಳ್ಳಕೂಡದು. ಹಿಂಸೆಯನ್ನು ಅವರು ಅವಲಂಬಿಸಿದರೆ ಅವರ ಗುರಿ ಅವರ ಕರಗತವಾಗುವುದಿಲ್ಲ.

## ಅಸ್ಪೃಶ್ಯತೆಗೆ ಧರ್ಮದ ಒಪ್ಪಿಗೆಯಿಲ್ಲ

"ಹಿಂದುಮತವನ್ನು ಉದ್ಧಾರಮಾಡುವುದು ನನ್ನ ಗುರಿ. ಅಸ್ಪೃಶ್ಯರು ಹಿಂದುಮತದ ಒಂದುಭಾಗ. ಒಬ್ಬ ಭಂಗಿಯನ್ನು ಹಿಂದು ಮತದಿಂದ ಹೊರಕ್ಕೆ ಓಡಿಸಿದರೂ ನನಗೆ ದುಃಖವಾಗುತ್ತದೆ. ಜಾತಿಗಳ ವ್ಯತ್ಯಾಸವನ್ನು ಪೂರ್ಣವಾಗಿ ಹೋಗಲಾಡಿಸುವುದು ಸಾಧ್ಯವಿಲ್ಲವೆಂದು ನನಗೆ ಗೊತ್ತು. ಕೃಷ್ಣ ಗೀತೆಯಲ್ಲಿ ಹೇಳಿರುವ ಸಮಾನತೆ ಇರಬೇಕು. ನಾಲ್ಕು ಜಾತಿಗಳೂ ಸಮಾನ ಎಂದು ಗೀತೆಯಲ್ಲಿ ಹೇಳಿದೆ. ಬ್ರಾಹ್ಮಣನಿಗೆ ಹೇಳಿರುವ ಧರ್ಮವನ್ನೇ ಭಂಗಿಗೂ ಹೇಳಿಲ್ಲ. ಆದರೆ ವಿದ್ಯಾವಂತನಾದ ಬ್ರಾಹ್ಮಣನಿಗೆ ಕೊಡುವ ಗೌರವವನ್ನೇ ಭಂಗಿಗೂ ಕೊಡಬೇಕೆಂದು ಹೇಳಿದೆ. ತಾವು ಯಾರಿಗೂ ಬೇಡವಾದವರು ಎಂಬ ಭಾವ ಅಸ್ಪೃಶ್ಯರಿಗೆ ಬರಬಾರದು. ಅವರಿಗೆ ನಮ್ಮ ಎಂಜಲನ್ನು ಕೊಡುವುದು ಬೇಡ.

"ನನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತೇನೆ. ಈಗ ಇರುವ ಅಸ್ಪೃಶ್ಯತೆಗೆ ಹಿಂದು ಮತದಲ್ಲಿ ಸ್ಥಳವಿಲ್ಲ. ಆದರೆ ಹಿಂದು ಮತದಲ್ಲಿ ಒಂದು ವಿಧವಾದ ಅಸ್ಪೃಶ್ಯತೆ ಇದೆ. ಉದಾಹರಣೆಗೆ ತಾಯಿ ಕೊಳಕಾದ ಮಗುವನ್ನು ಎತ್ತಿದಾಗಲೆಲ್ಲಾ ಅಸ್ಪೃಶ್ಯಳಾಗುತ್ತಾಳೆ. ಆಗ ಅವಳು ಸ್ನಾನಮಾಡಿ ಶುದ್ಧಳಾಗಬೇಕು. ಜನ್ಮದಿಂದ ಯಾರೂ ಅಸ್ಪೃಶ್ಯರೆಂದು ನಾನು ಒಪ್ಪುವುದಿಲ್ಲ. ಅಂತಹ ಅಸ್ಪೃತ್ಯತೆ ಕ್ಷಣಿಕವಾದುದು; ಕಾರ್ಯಕ್ಕೆ ಸೇರಿದುದು. ನಾವು ಮಕ್ಕಳಾಗಿರುವಾಗ ನಮ್ಮ ತಾಯಿ ನಮ್ಮ ಸೇವೆ ಮಾಡಿರುವುದಕ್ಕಾಗಿ ನಾವು ಆಕೆಯನ್ನು ಗೌರವಿಸುವುದಿಲ್ಲವೇ? ಹಾಗೆಯೇ ನಮ್ಮ ಆರೋಗ್ಯ ನೈರ್ಮಲ್ಯಕ್ಕಾಗಿ ನಮ್ಮ ಸೇವೆಮಾಡುವ ಭಂಗಿಯನ್ನೂ ನಾವು ಗೌರವಿಸಬೇಕು".

"ಅಸ್ಪೃಶ್ಯತೆಯ ನಿವಾರಣೆಗೆ ಅಂತರ ಜಾತೀಯ ಭೋಜನವೂ ಅಂತರ ಜಾತೀಯ ವಿವಾಹವೂ ಆವಶ್ಯಕವೆಂದು ನಾನು ಭಾವಿಸುವುದಿಲ್ಲ. ನನಗೆ ವರ್ಣಾಶ್ರಮ ದರ್ಮದಲ್ಲಿ ನಂಬಿಕೆ ಇದೆ. ಆದರೆ ನಾನು ಭಂಗಿಯೊಂದಿಗೆ ಊಟಮಾಡುತ್ತೇನೆ. ನಾನು ಸನ್ಯಾಸಿಯೆಂದು ಹೇಳಲಾರೆ. ಕಲಿಯುಗದಲ್ಲಿ ಸನ್ಯಾಸಿಯ ನಿಯಮದಲ್ಲಿರುವುದು ಕಷ್ಟ.

ಆದರೆ ನಾನು ಉದ್ದೇಶಪೂರ್ವಕವಾಗಿಯೇ ಸನ್ಯಾಸದ ಮಾರ್ಗದಲ್ಲಿ ನಡೆಯುತ್ತಿದ್ದೇನೆ. ಆದುದರಿಂದ ನಿಯಮಗಳನ್ನು ಅನುಸರಿಸುವುದು ನನಗೆ ಅವಶ್ಯಕವಿಲ್ಲ. ಆದರಿಂದ ನನಗೆ ತೊಂದರೆಯೇ ಆಗಬಹುದು. ಅಂತರಜಾತಿ ಭೋಜನದ ಪ್ರಶ್ನೆ ನನ್ನ ವಿಚಾರದಲ್ಲಿ ಏಳುವುದೇ ಇಲ್ಲ. ನನ್ನ ಏರ್ಪಾಡಿನಲ್ಲಿ ಅಂತರ ಜಾತೀಯ ವಿವಾಹ ಅನಿವಾರ್ಯವಲ್ಲವೆಂದು ಹೇಳಿದರೆ ಸಾಕು. (೧೯೨೧ ರಲ್ಲಿ) ನನ್ನ ಸ್ವಂತ ಪಂಗಡದಲ್ಲಿಯೇ ಎಲ್ಲರೂ ಒಬ್ಬರೊಂದಿಗೆ ಒಬ್ಬರು ಊಟಮಾಡುವುದಿಲ್ಲ. ವೈಷ್ಣವರ ಮನೆಗಳಲ್ಲಿ ಕೆಲವರು ಇತರರ ಮನೆಯ ಪಾತ್ರೆಗಳಲ್ಲಿ ಅಡಿಗೆ ಮಾಡುವುದಿಲ್ಲ. ಇತರರ ಮನೆಯಿಂದ ತಂದ ಅಗ್ನಿಯಲ್ಲಿ ಅಡಿಗೆ ಮಾಡಿ ಕೊಳ್ಳುವುದಿಲ್ಲ. ಇದು ಮೂಢನಂಬಿಕೆ ಎನ್ನಬಹುದು ನೀವು. ನಾನು ಅದನ್ನು ಹಾಗೆ ತಿಳಿಯುವುದಿಲ್ಲ. ಇದರಿಂದ ಹಿಂದು ಮತಕ್ಕೆ ಅಪಾಯವಿಲ್ಲ. ನಮ್ಮ ಆಶ್ರಮದಲ್ಲಿ ಹರಿಜನರು ಇತರರ ಜೊತೆಯಲ್ಲಿ ಕುಳಿತು ಊಟಮಾಡುತ್ತಾರೆ. ಪಂಡಿತ ಮಾಳವ್ಯರವರಲ್ಲಿ ನನಗೆ ಎಷ್ಟು ಗೌರವ ನಿಮಗೆ ಗೊತ್ತು. ಅವರ ಕಾಲನ್ನು ನಾನು ತೊಳೆಯುತ್ತೇನೆ. ಆದರೆ ನಾನು ಮುಟ್ಟಿದ ಆಹಾರವನ್ನು ಅವರು ಸ್ವೀಕರಿಸುವುದಿಲ್ಲ. ಇದು ನನ್ನ ವಿಷಯದಲ್ಲಿ ಪಂಡಿತರ ತಿರಸ್ಕಾರವೆಂದು ನಾನು ಅಸಹ್ಯ ಪಟ್ಟುಕೊಳ್ಳಲೇ? ಖಂಡಿತವಾಗಿಯೂ ಇಲ್ಲ. ಇಲ್ಲಿ ತಿರಸ್ಕಾರವಿಲ್ಲ".

## ಮರ್ಯಾದೆಯ ಧರ್ಮ

" ನಮ್ಮದು ಹಿಂದು ಧರ್ಮ. ನಾವು ಒಬ್ಬರೊಂದಿಗೆ ಒಬ್ಬರು ಮರ್ಯಾದೆ ಧರ್ಮವನ್ನು ಅನುಸರಿಸಬೇಕೆಂದು ಈ ಮತ ಹೇಳುತ್ತದೆ. ನಮ್ಮ ಹಿಂದಿನ ಋಷಿಗಳು ಬಹುಕಾಲ ಧ್ಯಾನ ತಪಸ್ಸುಮಾಡಿ ಕೆಲವು ಅಮೌಲ್ಯಗಳಾದ ಸತ್ಯಗಳನ್ನು ಕಂಡುಹಿಡಿದರು. ಆ ಸತ್ಯಗಳಿಗೆ ಸಮನಾದ ಸತ್ಯಗಳು ಜಗತ್ತಿನಲ್ಲಿಯೇ ಇಲ್ಲ. ಇಂತಹ ಸತ್ಯಗಳಲ್ಲಿ ಒಂದು. ಮನುಷ್ಯನ ಆತ್ಮದ ಬೆಳವಣಿಗೆಗೆ ಕೆಲವು ಆಹಾರಗಳು ವಿರೋಧವಾದುವೆಂಬುದು. ಈ ಕಾರಣದಿಂದ ಆ ವಸ್ತುಗಳ ಉಪಯೋಗ ವನ್ನು ಅವರು ನಿಷೇಧಿಸಿದರು. ಒಬ್ಬ ಮನುಷ್ಯ ಬೇರೆ ಸ್ವಭಾವದ ಬೇರೆ ಆಹಾರ ತಿನ್ನುವ ಜನರುಳ್ಳ ದೇಶಕ್ಕೆ ಹೋಗಬೇಕಾಗುವುದೆಂದು

ಭಾವಿಸೋಣ. ಅಂತಹ ಸಂದರ್ಭಕ್ಕೆ ಬೇಕೆಂದು ನಮ್ಮ ಪೂರ್ವಿಕರು ಮರ್ಯಾದೆ ಧರ್ಮವನ್ನು ಆಚರಣೆಗೆ ತಂದರು. ಆದರೆ ಮರ್ಯಾದೆ ಧರ್ಮ ಹಿಂದು ಧರ್ಮದ ಆವಶ್ಯಕವಾದ ಭಾಗವೆಂದು ನಾನು ಭಾವಿಸುವುದಿಲ್ಲ. ಇಂತಹ ನಿಯಮಗಳೆಲ್ಲಾ ಕಾಲಾನು ಕಾಲಕ್ಕೆ ಮರೆಯಾಗಬಹುದು. ಆದರೆ ಅಸ್ಪೃಶ್ಯತಾನಿವಾರಣೆಯು ನನ್ನ ಚಳುವಳಿ ಅಂತಹ ಜಾತೀಯ ವಿವಾಹ ಭೋಜನಗಳಿಗೆ ಪೂರಕವಲ್ಲ. ಈ ನಿಯಮಗಳು ಪೂರ್ತಿಯಾಗಿ ನಾಶವಾಗಬೇಕೆಂದು ನಾನು ಹೇಳಲಾರೆ. ನಾನು ಆಷಾಢಭೂತಿ, ಸ್ಥಿಮಿತವಾದ ಅಭಿಪ್ರಾಯವಿಲ್ಲದವನು ಎಂದು ಜನ ಹೇಳಿದರೂ ಚಿಂತೆಯಿಲ್ಲ. ನನ್ನ ಮಗ ಬೇಕಾದರೆ ಮುಸಲ್ಮಾನರ ಮನೆಯಲ್ಲಿ ಊಟಮಾಡಬಹುದು. ಯಾವುದನ್ನು ಊಟಮಾಡ ಬೇಕು. ಯಾವುದನ್ನು ಬಿಡಬೇಕು. ಅವನಿಗೆ ಗೊತ್ತು. ಮುಸಲ್ಮಾನರ ಮನೆಯಲ್ಲಿ ಊಟಮಾಡಲು ನನಗೆ ಸಂಕೋಚವಿಲ್ಲ. ಯಾಕೆಂದರೆ ಊಟದ ವಿಷಯದಲ್ಲಿ ನನ್ನ ಸ್ವಂತ ನಿಯಮ ನನಗೆ ಇದ್ದೇ ಇದೆ. ಅಲಿಘರ್‌ನಲ್ಲಿ ನಡೆದ ಒಂದು ಸಂಗತಿ ಕೇಳಿ. ನಾನೂ ಸ್ವಾಮಿ ಸತ್ಯದೇವರೂ ಖ್ವಾಜಾ ಸಾಹೇಬರ ಅತಿಥಿಗಳಾಗಿದ್ದೆವು. ಸ್ವಾಮಿ ಸತ್ಯದೇವರು ನನ್ನ ಅಭಿಪ್ರಾಯ ಒಪ್ಪಲಿಲ್ಲ. ಇದರಮೇಲೆ ಚರ್ಚೆಮಾಡಿ ದೆವು. ನಾನು ಮುಸಲ್ಮಾನರು ಕೊಟ್ಟ ಆಹಾರ ನಿರಾಕರಿಸಲಾರೆ. ಹಾಗೆಯೇ ಮರ್ಯಾದೆ ಮೀರುವುದು ಮುಸಲ್ಮಾನನಿಗೂ ಧರ್ಮವಲ್ಲ ಎಂದು ನಾನು ಹೇಳಿದೆ. ಆದುದರಿಂದ ಸ್ವಾಮಿ ಸತ್ಯದೇವರಿಗೆ ಬೇರೆ ಅಡಿಗೆಯ ಏರ್ಪಾಡಾಯಿತು. ಹಾಗೆಯೇ ನಾವು ಬಾರಿ ಸಾಹೇಬರ ಅತಿಥಿಗಳಾಗಿದ್ದಾಗ ಅವರು ನಮಗೆ ಬ್ರಾಹ್ಮಣ ಅಡಿಗೆಯವನನ್ನು ಕೊಟ್ಟರು. ಸಾಮಾನುಗಳನ್ನೆಲ್ಲಾ ಹೊಸದಾಗಿ ಅಂಗಡಿಯಿಂದಲೇ ತರಬೇಕೆಂದು ಅಪ್ಪಣೆ ಮಾಡಿದರು. ಹೀಗೆ ನೀವು ಯಾಕೆಮಾಡಿದಿರಿ ಎಂದು ಕೇಳಿದುದಕ್ಕೆ "ನಿಮ್ಮನ್ನು ನಮ್ಮ ಮತಕ್ಕೆ ಒಲಿಸಿಕೊಳ್ಳುವ ಆಸೆ ನನಗೆ ಖಂಡಿತ ಇಲ್ಲವೆಂಬುದನ್ನು ತೋರಿಸುವುದಕ್ಕೆ" ಎಂದು ಅವರು ಹೇಳಿದರು. ಈ ಒಂದೇ ಸಂಗತಿಯಿಂದ ನನ್ನದೃಷ್ಟಿಯಲ್ಲಿ ಅವರ ಯೋಗ್ಯತೆ ಬೆಳೆಯಿತು".

" ಈ ವಿಷಯ ಇಷ್ಟು ವಿಸ್ತಾರವಾಗಿ ನಾನು ಪ್ರಸ್ತಾಪಿಸಿರುವುದರ ಕಾರಣ ನಿಮ್ಮೊಂದಿಗೆ (ಅಸ್ಪೃಶ್ಯರೊಂದಿಗೆ) ಸ್ಪಷ್ಟವಾಗಿ ಮಾತನಾಡ ಬೇಕೆಂದು. ನಿಮ್ಮೊಂದಿಗೂ, ಯಾರೊಂದಿಗೇ ಆಗಲಿ ತಂತ್ರವನ್ನೂ ಉಪಾಯವನ್ನೂ ಉಪಯೋಗಿಸುವುದು ನನ್ನ ಅಭಿಪ್ರಾಯವಲ್ಲ, ನಿಮಗೆ ಸುಳ್ಳುಆಸೆ ತೋರಿಸಿ ನಿಮ್ಮ ಬೆಂಬಲಗಳಿಸುವ ಬಯಕೆ ನನಗೆ ಇಲ್ಲ. ನನಗೆ ಸ್ವರಾಜ್ಯಬೇಕು, ಸ್ವರಾಜ್ಯದೊರೆಯಬೇಕಾದರೆ ಅಸ್ಪೃಶ್ಯತೆ ಹೋಗಬೇಕು. ಆದರೆ ನನ್ನ ರಾಜಕೀಯ ಗುರಿಗಾಗಿ ನಿಮ್ಮನ್ನು ನಾನು ಉಪಯೋಗಿಸಿಕೊಳ್ಳುವುದಿಲ್ಲ. ಈ ಸಮಸ್ಯೆ ಸ್ವರಾಜ್ಯಕ್ಕಿಂತ ದೊಡ್ಡದು. ಅಸ್ಪೃಶ್ಯತೆಯು ದಬ್ಬಾಳಿಕೆ. ಇದರ ನಾಶ ತಪಸ್ಸು, ಪಶ್ಚಾತ್ತಾಪ. ನಾನು ಮಾಡುವುದು ಅಸ್ಪೃಶ್ಯರ ಶುದ್ಧಿಯಲ್ಲ. ಹಾಗೆ ಹೇಳುವುದು ಅಸಂಬಂಧ್ಧ. ಅಧಿಕ ಪ್ರಸಂಗಿತನ. ನಾನು ಮಾಡುವುದು ನನ್ನ ಮತ್ತು ಹಿಂದು ಧರ್ಮದ ಶುದ್ಧಿ. ಅಸ್ಪೃಶ್ಯತೆಯನ್ನು ಒಪ್ಪಿ ಹಿಂದು ಧರ್ಮ ದೊಡ್ಡ ಪಾಪಮಾಡಿದೆ. ಆ ಪಾಪವನ್ನು ನನ್ನ ಪಶ್ಚಾತ್ತಾಪದ ಮೂಲಕ ಶುದ್ಧಿಮಾಡಬೇಕೆಂದು ನನ್ನ ಆಸೆ '.

## ಸತ್ಯ ಅಹಿಂಸೆ ದಾರಿ

" ಆದುದರಿಂದ ನನಗೆ ತೆರೆದಿರುವ ದಾರಿಗಳು ಸತ್ಯ ಅಹಿಂಸೆಯ ದಾರಿಗಳೇ. ಒಂದು ಹರಿಜನರ ಮಗುವನ್ನು ನಾನು ಸಾಕುತ್ತಿದ್ದೇನೆ, ನನ್ನ ಹೆಂಡತಿಯನ್ನು ಪೂರ್ತಿ ನನ್ನದಾರಿಗೆ ಇನ್ನೂ ನಾನು ತಿದ್ದಿಲ್ಲ ವೆಂದು ಹೇಳಿಕೊಳ್ಳುತ್ತೇನೆ. ಆ ಹರಿಜನರ ಹುಡುಗಿಯನ್ನು ನನ್ನಂತೆ ಅವಳು ಪ್ರೀತಿಸಲು ಇನ್ನೂ ಸಾಧ್ಯವಾಗಿಲ್ಲ. ಆದರೆ ಅದಕ್ಕಾಗಿ ಕೋಪಿಸಿಕೊಂಡರೆ ನನ್ನ ಹೆಂಡತಿಯನ್ನು ನಾನು ತಿದ್ದಲು ಸಾಧ್ಯ ವಾಗುವುದಿಲ್ಲ. ಪ್ರೇಮದಿಂದ ಮಾತ್ರ ಮಾಡಬಲ್ಲೆ. ನಮ್ಮವರು ನಿಮಗೆ (ಹರಿಜನರಿಗೆ) ಅನ್ಯಾಯಮಾಡಿದರೆ ನಾನು ನಿಮ್ಮ ಕ್ಷಮೆ ಯಾಚಿಸುತ್ತೇನೆ. ಪೂನಾದಲ್ಲಿ ಕೆಲವು, ಹರಿಜನರು, " ನಮಗೆ ನ್ಯಾಯ ದೊರೆಯದಿದ್ದರೆ ಬಲಾತ್ಕಾರವಾಗಿ ಕಿತ್ತುಕೊಳ್ಳುತ್ತೇವೆ '' ಎಂದರು. ಅಸ್ಪೃಶ್ಯತೆಯನ್ನು ಹಿಂಸೆಯಿಂದ ಹೋಗಲಾಡಿಸುವುದು ಸಾಧ್ಯವಿಲ್ಲ ಈ ಮಾರ್ಗದಿಂದ ಬಿಡುಗಡೆ ದೊರೆಯುವುದಿಲ್ಲ. ಹಿಂದುಗಳ ವೊಂದು

ತನ ಹೋಗಲಾಡಿಸಬೇಕಾದರೆ ಅವರೊಂದಿಗೆ ವಾದಮಾಡಿ ಅವರಿಗೆ ಸಮಜಾಯಿಶಿ ಕೊಡಬೇಕು. ನಮ್ಮ ನಡವಳಿಕೆ ಶುದ್ಧವಾಗಿರಬೇಕು. ಹೀಗೆ ಅವರನ್ನು ತಿದ್ದುವವರೆಗೆ ನಿಮ್ಮ ಪಾಲಿಗೆ ಬಂದುದನ್ನು ಶಾಂತವಾಗಿ ಸಹಿಸಿಕೊಂಡಿರಬೇಕು. ನಾನು ನಿಮ್ಮ ಜೊತೆಯಲ್ಲಿ ಹೆಗಲುಕೊಟ್ಟು ನಿಮ್ಮ ದುಃಖದಲ್ಲಿ ಭಾಗಿಯಾಗಲು ಸಿದ್ಧನಾಗಿದ್ದೇನೆ. ಇತರ ಜಾತಿಯವರಿಗೆ ಯಾವ ಯಾವ ದೇವಾಲಯಗಳಲ್ಲಿ ಪ್ರವೇಶ ವಿದೆಯೋ ಅಲ್ಲೆಲ್ಲಾ ನಿಮಗೂ ಇರಬೇಕು. ಇತರ ಜಾತಿಯ ಹುಡುಗರ ಜೊತೆಯಲ್ಲಿ ನಿಮ್ಮ ಮಕ್ಕಳು ಎಲ್ಲಾ ಪಾಠಶಾಲೆಗಳಿಗೂ ಹೋಗಬೇಕು. ಭಾರತಾಧ್ಯಕ್ಷರ ಹುದ್ದೆ ಮೊದಲುಗೊಂಡು ಎಲ್ಲಾ ಹುದ್ದೆಗಳಿಗೂ ಹರಿಜನರಿಗೆ ಅವಕಾಶವಿರಬೇಕು. ನನ್ನ ಅಭಿಪ್ರಾಯ ದಲ್ಲಿ ಇದೇ ಅಸ್ಪೃಶ್ಯತಾನಿವಾರಣೆ.

“ ಆದರೆ ನನ್ನ ಧರ್ಮದ ಮಾರ್ಗವನ್ನು ಅನುಸರಿಸುವುದರಿಂದ ಮಾತ್ರ ನಾನು ನಿಮಗೆ ಸಹಾಯಮಾಡಬಲ್ಲೆ. ಪಾಶ್ಚಾತ್ಯ ಪದ್ಧತಿ ಗಳನ್ನು ಅನುಸರಿಸುವುದರಿಂದ ಅಲ್ಲ. ಯಾಕೆಂದರೆ ಆ ಬೇರೆ ಮಾರ್ಗದಲ್ಲಿ ಹಿಂದು ಮತವನ್ನು ರಕ್ಷಿಸಲು ಸಾಧ್ಯವಿಲ್ಲ. ನಿಮ್ಮದು ಪವಿತ್ರವಾದ ಚಳುವಳಿ, ಪವಿತ್ರವಾದ ಚಳುವಳಿಯಲ್ಲಿ ಪಿಶಾಚಿಯ ಮಾರ್ಗವನ್ನು ಅವಲಂಬಿಸಬಹುದೆ ? ಆದುದರಿಂದ ಪಶುಶಕ್ತಿಯಿಂದ ನಿಮ್ಮ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳುವ ಯೋಚನೆ ಬಿಡಿ. ದೇವರನ್ನು ಶ್ರದ್ಧೆಯಿಂದ ಧ್ಯಾನಿಸುವುದರಿಂದ ಮೋಕ್ಷ ಉಂಟಾಗುವು ದೆಂದು ಗೀತೆಯಲ್ಲಿ ಹೇಳಿದೆ. ಈ ಧ್ಯಾನವೆಂಬುದೇ ದೇವರ ಸಾನ್ನಿಧ್ಯದಲ್ಲಿ ಕಾಯುತ್ತಿರುವುದು. ಧ್ಯಾನದಿಂದ ಮೋಕ್ಷ ದೊರೆಯುವುದಾದಮೇಲೆ ಅಸ್ಪೃಶ್ಯತೆಯ ನಿವಾರಣೆ ಇನ್ನೂ ಬೇಗನೇ ದೊರೆಯುತ್ತದೆ. ದೇವರ ದಯವನ್ನು ಕಾಯುವುದರಿಂದ ನಮ್ಮ ಪವಿತ್ರತೆ ಹೆಚ್ಚುವುದು. ಪ್ರಾರ್ಥನೆಯಿಂದ ನಾವು ಶುದ್ಧರಾಗೋಣ. ಅಸ್ಪೃಶ್ಯತೆ ಕಣ್ಮರೆ ಯಾಗುವುದಲ್ಲದೆ ಸ್ವರಾಜ್ಯವೂ ಬೇಗ ನಮ್ಮ ಕರಗತವಾಗುವುದು ”

“ ಅಸ್ಪೃಶ್ಯತೆಗೆ ಧರ್ಮದ ಆಧಾರವಿಲ್ಲ, ಇದು ಪಿಶಾಚಿಯ ಉಪಾಯ. ಪಿಶಾಚಿ ಯಾವಾಗಲೂ ವೇದವನ್ನೇ ಆಧಾರವಾಗಿ

ಹೇಳುತ್ತದೆ, ಆದರೆ ವೇದವು ವಿವೇಕ ಸತ್ಯಕ್ಕಿಂತ ದೊಡ್ಡದಾದುದಲ್ಲ. ವೇದ ವಿವೇಕವನ್ನು ಶುದ್ಧಿಗೊಳಿಸಬೇಕು, ಸತ್ಯವನ್ನು ಬೆಳಗಬೇಕು. ವೇದಗಳು ಹೇಳಿವೆ ಎಂದು ನಾನು ಕುದುರೆಯಜ್ಞ ಮಾಡುವುದಿಲ್ಲ. ನನ್ನ ಮಟ್ಟಿಗೆ ವೇದಗಳು ಅಪೌರುಷೇಯ. ಬರಿಯ ಅಕ್ಷರದಂತೆ ನಡೆದರೆ ಸಾವು, ಅಕ್ಷರದ ಹಿಂದೆ ಆತ್ಮ ಬೆಳಗುತ್ತದೆ. ವೇದದ ಆತ್ಮವು ಪಾರಿಶುದ್ಧ್ಯತೆ ಸತ್ಯ ಪಾತಿವ್ರತ್ಯ ಸರಳತೆ ಕ್ಷಮೆ, ದೇವತ್ವ ಇವು. ಸ್ತ್ರೀಪುರುಷರನ್ನು ಧೀರರನ್ನೂ ಮಹನೀಯರನ್ನೂ ಮಾಡುವ ಗುಣಗಳೆಲ್ಲ ವೇದದ ಆತ್ಮ. ಸ್ವಲ್ಪವೂ ಗೊಣಗಾಡದೆ ತಮ್ಮ ಕೆಲಸ ತಾವು ಮಾಡುತ್ತಿರುವ ಮಹನೀಯರಾದ ಜಾಡಮಾಲಿಗಳನ್ನು ತಿರಸ್ಕರಿಸಿ ಅವರನ್ನು ಉಗಿದು ನಾಯಿಗಳಂತೆ ನಡೆಸಿಕೊಳ್ಳುವುದರಲ್ಲಿ ಧೈರ್ಯವೂ ಇಲ್ಲ, ಗಂಭೀರ್ಯವೂ ಇಲ್ಲ. ಈ ಹೀನ ಜಾತಿಯವರು ಜಾಡ ಮಾಲಿಗಳಾಗಿರುವಂತೆ, ರಾಷ್ಟ್ರದ ಜಾಡಮಾಲಿಗಳಾಗುವ ಬುದ್ಧಿ ನಮಗೆ ಬಂದರೆ ಎಷ್ಟು ಒಳ್ಳೆಯದಾದೀತು ! ನಾವು ಎಷ್ಟು ಶುದ್ಧಿಮಾಡಿದರೂ ಮುಗಿಯದಷ್ಟು ಕೊಳೆ ಇದೆ "

## ಬಾಲ್ಯದಿಂದ ಅಸ್ಪೃಶ್ಯತಾವಿರೋಧಿ

"ಅಸ್ಪೃಶ್ಯತೆಯು ಹಿಂದು ಧರ್ಮದ ಅತಿ ದೊಡ್ಡ ಕಳಂಕ. ನನ್ನ ದಕ್ಷಿಣ ಆಫ್ರಿಕದ ಭಯಂಕರವಾದ ಅನುಭವಗಳಲ್ಲಿ ಇದು ನನ್ನ ಮನಸ್ಸಿಗೆ ಚೆನ್ನಾಗಿ ಹೊಳೆಯಿತು, ನಾನು ಕ್ರಿಸ್ತ ಧರ್ಮದಿಂದ ಈ ಭಾವ ತೆಗೆದುಕೊಂಡಿದ್ದೇನೆಂದು ಊಹಿಸುವುದು ತಪ್ಪು. ಬೈಬಲ್‌ನ್ನು ನಾನು ಓದುವುದಕ್ಕೆ, ಮುಂಚಿನಿಂದ, ಬೈಬಲ್ ಅನುಯಾಯಿಗಳು ನನಗೆ ಆಗುವುದಕ್ಕಿಂತ ಮುಂಚಿನಿಂದಲೇ ನನಗೆ ಈ ಭಾವಗಳಿವೆ "

" ನನಗೆ ಇನ್ನೂ ಹನ್ನೆರಡು ವರುಷವಾಗಿದ್ದಾಗಲೇ ಅಸ್ಪೃಶ್ಯತೆ ತಪ್ಪು ಎಂಬ ಭಾವ ನನಗೆ ಬಂದಿತು. ಯುಕ ಎಂಬ ಜಾಡಮಾಲಿ ನಮ್ಮ ಮನೆಯ ಪಾಯಖಾನೆಗಳನ್ನು ಶುದ್ಧಿಮಾಡುತ್ತಿದ್ದ. ಅವನನ್ನು ಯಾಕೆ ಮುಟ್ಟಕೂಡದು, ಮುಟ್ಟಿದರೆ ತಪ್ಪು ಏನು ? ಎಂದು ನಾನು ನಮ್ಮ ತಾಯಿಯನ್ನು ಪದೇ ಪದೇ ಕೇಳುತ್ತಿದ್ದೆ. ನಾನು ಆಕಸ್ಮಿಕ ವಾಗಿ ಅವನನ್ನು ಮುಟ್ಟಿದರೆ ನಮ್ಮ ತಾಯಿ ಸ್ನಾನಮಾಡಿಕೊಳ್ಳು

ವಂತೆ ನನಗೆ ಹೇಳುತ್ತಿದ್ದಳು. ನಾನು ಸ್ನಾನವನ್ನೇನೊ ಮಾಡುತ್ತಿದ್ದೆ. ಆದರೆ ಯಾಕೆ ಮಾಡಬೇಕು, ಇದು ಶಾಸ್ತ್ರದಲ್ಲಿ ಇರಲಾರದು ? ಎಂದು ನಗುತ್ತಾ ವಾದಿಸುತ್ತಿದ್ದೆ, ಹಿರಿಯರ ಮಾತಿನಂತೆ ನಡೆಯುತ್ತಿದ್ದೆನಾದರೂ ಅವರೊಂದಿಗೆ ಈ ವಿಚಾರದಲ್ಲಿ ಆಗಾಗ ಚರ್ಚೆಯಾಗುತ್ತಲೇ ಇರುತ್ತಿದ್ದಿತು. ಯುವಕನನ್ನು ಮುಟ್ಟುವುದರಿಂದ ಪಾಪವೆಂದು ಹೇಳುವುದು ತಪ್ಪು ಎಂದು ನಮ್ಮ ತಾಯಿಗೇ ಹೇಳಿದೆ ”

“ ನಾನು ಪಾಠಶಾಲೆಯಲ್ಲಿ ಆಗಾಗ ಅಸ್ಪೃಶ್ಯರನ್ನು ಮುಟ್ಟುತ್ತಿದ್ದೆ. ಆದರೆ ಈ ವಿಚಾರ ಗುಟ್ಟಾಗಿಟ್ಟಿರಲಿಲ್ಲ. ನಮ್ಮ ತಾಯಿಗೆ ಹೇಳುತ್ತಿದ್ದೆ. ಆಕೆ ಒಬ್ಬ ಮುಸಲ್ಮಾನನನ್ನು ಮುಟ್ಟಿದರೆ ಆ ದೋಷ ಹೋಯಿತು ಎಂದು ಹೇಳಿದ್ದಳು. ನಮ್ಮ ತಾಯಿಯ ಮಾತಿನಂತೆ ನಾನೇನೋ ಬೀದಿಯಲ್ಲಿ ಹೋಗುತ್ತಿದ್ದ ಮುಸಲ್ಮಾನನನ್ನು ಮುಟ್ಟುತ್ತಿದ್ದೆ. ಹೀಗೆ ಮಾಡುತ್ತಿದ್ದುದು ನಮ್ಮ ತಾಯಿಯ ಮಾತಿಗೋಸ್ಕರವೇ ಹೊರತು ಅದು ಶಾಸ್ತ್ರದಲ್ಲಿ ಹೇಳಿರುವ ಮಾತೆಂದು ಅಲ್ಲ. ಶಾಸ್ತ್ರ ಹಾಗೆ ಹೇಳಿದೆ ಎಂದು ನಾನು ಎಂದಿಗೂ ನಂಬಲೇ ಇಲ್ಲ. ಕೆಲವು ಕಾಲದ ನಂತರ ಪೋರ್ ಬಂದರ್‌ಗೆ ಹೋದೆವು. ಅಲ್ಲಿ ನನಗೆ ಸಂಸ್ಕೃತ ಅಭ್ಯಾಸವಾಯಿತು. ನನ್ನನ್ನು ಇನ್ನೂ ಇಂಗ್ಲಿಷ್ ಸ್ಕೂಲಿಗೆ ಸೇರಿಸಿರಲಿಲ್ಲ. ಒಬ್ಬ ಬ್ರಾಹ್ಮಣರು ನನಗೂ ನನ್ನ ಅಣ್ಣನಿಗೂ ರಾಮರಕ್ಷ ಮತ್ತು ವಿಷ್ಣುಪೂಜ ಹೇಳಿಕೊಡುತ್ತಿದ್ದರು. ಜಲೆ ವಿಷ್ಣುಃ, ಸ್ಥಲೇ ವಿಷ್ಣುಃ ದೇವರು ಭೂಮಿಯಲ್ಲಿಯೂ ಇದ್ದಾನೆ, ನೀರಿನಲ್ಲಿಯೂ ಇದ್ದಾನೆ, ಎಂಬ ಮಾತುಗಳು ಅಂದಿನಿಂದ ಮನಸ್ಸಿನಿಂದ ಹೋಗಿಯೇ ಇಲ್ಲ. ನಮ್ಮ ಮನೆಯ ಸಮೀಪದಲ್ಲಿ ಒಬ್ಬ ವೃದ್ಧಳಾದ ತಾಯಿ ಇರುತ್ತಿದ್ದಳು. ನಾನು ಆಗ ಬಹಳ ಹೇಡಿಯಾಗಿದ್ದೆನಂತೆ. ಕತ್ತಲೆಯಾದ ಕೂಡಲೆ, ಅಥವ ದೀಪವನ್ನು ಆಳಿಸಿದಕೂಡಲೇ ದೆಯ್ಯ ಪಿಶಾಚಿ ಎಂದು ಹೆದರುತ್ತಿದ್ದೆನಂತೆ. ಆ ವೃದ್ಧತಾಯಿಯು “ ಭಯವಾದಾಗಲೆಲ್ಲಾ ರಾಮರಕ್ಷೆ ಉಚ್ಚರಿಸು. ಭಯ ಹೋಗುವುದು ” ಎಂದು ಹೇಳಿದಳು. ನಾನು ಹಾಗೆಯೇ ಮಾಡಿದೆ ಫಲ ಬಹಳ ಒಳ್ಳೆಯದಾಯಿತು. ರಾಮರಕ್ಷೆಯಲ್ಲಿ, ಅಸ್ಪೃಶ್ಯರನ್ನು ಮುಟ್ಟುವುದು ಪಾಪ ಎಂದು ಆಗ ಇದ್ದಿತೆಂದು

ನನಗೆ ತೋರುವುದಿಲ್ಲ. ಅದರ ಅರ್ಥ ಆಗ ನನಗೆ ಚೆನ್ನಾಗಿ ತಿಳಿಯು ಲಿಲ್ಲ. ಆದರೆ ಎಲ್ಲಾ ದೆಯ್ಯ ಪಿಶಾಚಿಗಳನ್ನೂ ಓಡಿಸುತ್ತಿದ್ದ ರಾಮರಕ್ಷೆ, ಅಸ್ಪೃಶ್ಯರ ಸ್ಪರ್ಶಕ್ಕೆ ಹೆದರುವುದಿಲ್ಲವೆಂದು ನನಗೆ ಚೆನ್ನಾಗಿ ನಂಬಿಕೆ ಯಾಗಿದ್ದಿತು ''

" ನಮ್ಮ ಸಂಸಾರದಲ್ಲಿ ರಾಮಾಯಣವನ್ನು ತಪ್ಪದೆ ಓದಿಸು ತ್ತಿದ್ದರು. ಲಾಧಮಹಾರಾಜ್ ಎಂಬ ಬ್ರಾಹ್ಮಣರು ಅದನು ಓದು ತ್ತಿದ್ದರು. ಅವರಿಗೆ ತೊನ್ನು ಬಂದಿತ್ತು. ತಪ್ಪದೆ ರಾಮಾಯಣ ಓದಿದರೆ ತೊನ್ನು ವಾಸಿಯಾಗುವುದೆಂದು ಅವರಿಗೆ ನಂಬಿಕೆಯುಂಟಾಗಿದ್ದಿತು. ಹಾಗೆ ವಾಸಿಯೂ ಆಯಿತು. ಅಸ್ಪೃಶ್ಯನಾದ ಗುಹ ರಾಮನನ್ನು ಗಂಗಾನದಿ ದಾಟಿಸಲಿಲ್ಲವೆ? ಅಂತಹ ರಾಮಾಯಣದಲ್ಲಿ ಅಸ್ಪೃಶ್ಯ ರೆಂದು ಯಾರನ್ನಾದರೂ ಪರಿಗಣಿಸಲು ಅವಕಾಶವುಂಟೆ? ಎಂದು ನಾನು ಯೋಚಿಸಿದೆ. ದೇವರನ್ನು " ಅಶುದ್ಧರನ್ನೆಲ್ಲಾ ಶುದ್ಧ ಮಾಡುವವನು '' ಎಂದು ನಾವು ಹೇಳುವುದರಿಂದಲೇ ಹಿಂದು ಧರ್ಮದಲ್ಲಿ ಜನಿಸಿದ ಯಾರನ್ನೂ ಅಶುದ್ಧರು ಅಸ್ಪೃಶ್ಯರು ಎಂದು ಹೇಳುವುದು ತಪ್ಪು, ಎಂದು ಗೊತ್ತಾಗುತ್ತದೆ. ಆದುದರಿಂದ ಅಸ್ಪೃಶ್ಯತೆ ದೊಡ್ಡ ಪಾಪ ಎಂದು ನಾನು ಯಾವಾಗಲೂ ಹೇಳುತ್ತಲೇ ಇದ್ದೇನೆ. ನನ್ನ ಹನ್ನೆರಡನೇ ವಯಸ್ಸಿನಲ್ಲಿ ಈ ಭಾವ ನನ್ನ ಮನಸ್ಸಿನಲ್ಲಿ ಸ್ಪಷ್ಟವಾಗಿ ಖಚಿತವಾಗಿದ್ದಿತೆಂದು ನಾನು ಹೇಳುವುದಿಲ್ಲ. ಆದರೆ ಅಸ್ಪೃಶ್ಯತೆಪಾಪ ಎಂದು ಆಗಲೇ ನನಗೆ ನಂಬಿಕೆಯಾಗಿದ್ದಿತು. ವೈಷ್ಣವ ಮತ್ತು ವೈದಿಕ ಹಿಂದುಗಳ ತಿಳುವಳಿಕೆಗಾಗಿ ಈ ಕತೆ ಹೇಳುತ್ತಿದ್ದೇನೆ "

## ಸನಾತನಿ ಹಿಂದು

" ನಾನು ಯಾವಾಗಲೂ ಸನಾತನಿ ಹಿಂದುವೆಂದು ಹೇಳಿಕೊಳ್ಳು ತ್ತೇನೆ. ನನಗೆ ವೇದಗಳ ವಿಚಾರ ಸ್ವಲ್ಪವೂ ತಿಳಿಯದೆಂದಲ್ಲ. ಆದರೆ ನಾನು ಸಂಸ್ಕೃತ ವಿದ್ವಾಂಸನಲ್ಲ. ವೇದಗಳನ್ನೂ ಉಪನಿಷತ್‌ಗಳನ್ನೂ ಅನುವಾದಗಳಲ್ಲಿ ಮಾತ್ರ ಓದಿದ್ದೇನೆ. ಆದುದರಿಂದ ನಾನು ಅವುಗಳನ್ನು ಸ್ವಾಭಾವಿಕವಾಗಿ ವ್ಯಾಸಂಗಮಾಡಿದ್ದೇನೆ. ಅವುಗಳನ್ನು ನಾನು ಪೂರ್ಣ

ವಾಗಿ ವ್ಯಾಸಂಗಮಾಡಿಲ್ಲದಿದ್ದರೂ, ಹಿಂದುವಾದವನು ಎಷ್ಟುಮಾಡ ಬೇಕೋ ಅಷ್ಟುಮಾಡಿದ್ದೇನೆ. ಅವುಗಳ ತಿರುಳನ್ನೂ ಗ್ರಹಿಸಿದ್ದೇನೆ. ನನಗೆ ೨೧ ವಯಸ್ಸಾಗುವ ವೇಳೆಗೆ ನಾನು ಇತರ ಮತಗ್ರಂಥಗಳನ್ನೂ ಅಧ್ಯಯನ ಮಾಡಿದ್ದೆ.

"ನನಗೆ ಹಿಂದುಮತವೋ, ಕ್ರಿಸ್ತಮತವೋ ಎಂದು ಒಂದು ಕಾಲದಲ್ಲಿ ನಾನು ಆಚೆ ಈಚೆ ವಾಲಿದುದು ಉಂಟು. ಆದರೆ ಮತ್ತೆ ಸಮತೆಯುಂಟಾದ ಕೂಡಲೇ ಹಿಂದುಮತದಿಂದ ಮಾತ್ರವೇ ನನಗೆ ಮೋಕ್ಷವೆಂದು ನನಗೆ ನಂಬಿಕೆಯುಂಟಾಯಿತು. ಹಿಂದೂಧರ್ಮದಲ್ಲಿ ನನ್ನ ನಂಬಿಕೆಯೂ ಶ್ರದ್ಧೆಯೂ ಆಳವಾಯಿತು.

"ಆದರೆ ಆಗಲೂ ಸಹ" ಅಸ್ಪೃಶ್ಯತೆ ಹಿಂದುಧರ್ಮದ ಭಾಗವಲ್ಲ. ಹಾಗೆ ಆಗುವುದಾದರೆ ಹಿಂದುಧರ್ಮ ನನಗಲ್ಲ ಎಂಬ ನಂಬಿಕೆ ನನಗೆ ದೃಢವಾಗಿದ್ದಿತು.

"ಹಿಂದುಧರ್ಮದಲ್ಲಿ ಅಸ್ಪೃಶ್ಯನು, ಪಾಪಿಯೆಂದು ಎಲ್ಲೂ ಹೇಳಿಲ್ಲ. ಶಾಸ್ತ್ರದ ಅರ್ಥವೇನು ಎಂದು ಚರ್ಚಿಸಲು ನನಗೆ ಬೇಕಿಲ್ಲ. ಭಾಗವತ ದಿಂದಲೂ ಮನುಸ್ಮೃತಿಯಿಂದಲೂ ಆಧಾರಗಳನ್ನು ಎತ್ತಿತೋರಿಸಿ ನನ್ನ ಮತವನ್ನು ಸ್ಥಾಪಿಸುವುದು ನನಗೆ ಕಷ್ಟವಾಗಬಹುದು. ಆದರೆ ಹಿಂದುಧರ್ಮದ ಆತ್ಮ ನನಗೆ ಗೊತ್ತು ಎಂದು ನಾನು ಹೇಳಿಕೊಳ್ಳು ತ್ತೇನೆ. ಅಸ್ಪೃಶ್ಯತೆಯನ್ನು ಒಪ್ಪಿ ಹಿಂದುಧರ್ಮ ಪಾಪಮಾಡಿದೆ. ಅದು ನಮ್ಮನ್ನು ನೀಚರನ್ನಾಗಿ ಮಾಡಿದೆ. ಬ್ರಿಟಿಷ್ ರಾಜ್ಯದ ಪರಿಯ ರನ್ನಾಗಿ (ಹೊಲೆಯ) ಮಾಡಿದೆ. ಮುಸಲ್ಮಾನರು ಸಹ ಈ ಪಾಪಿ ಸಾಂಕ್ರಾಮಿಕವನ್ನು ನಮ್ಮಿಂದ ಅನುಸರಿಸಿದರು. ದಕ್ಷಿಣ ಆಫ್ರಿಕ ದಲ್ಲಿ, ಉತ್ತರ ಆಫ್ರಿಕದಲ್ಲಿ ಕಾನಡಾದಲ್ಲಿ ಹಿಂದುಗಳಂತೆಯೇ ಮುಸಲ್ಮಾನರನ್ನೂ ಪರಿಯರೆಂದು ಕಾಣುತ್ತಾರೆ. ಈ ಕೇಡುಗಳೆಲ್ಲಾ ಅಸ್ಪೃಶ್ಯತೆಯ ಫಲಗಳೇ.

"ನನ್ನ ಸೂಚನೆ ಇದು. ಎಲ್ಲಿಯವರಿಗೆ ಅಸ್ಪೃಶ್ಯತೆ ಹಿಂದು ಧರ್ಮದ ಭಾಗವೆಂದು ಹಿಂದುಗಳು ಪರಿಗಣಿಸುತ್ತಾರೆಯೋ, ಎಲ್ಲಿಯ ವರೆಗೆ ತಮ್ಮವರಲ್ಲಿ ಕೆಲವರನ್ನು ಮುಟ್ಟಿದರೆ ಪಾಪವೆಂದು ಹಿಂದುಗಳು

ಎಣಿಸುತ್ತಾರೆಯೋ ಅಲ್ಲಿಯವರೆಗೆ ಸ್ವರಾಜ್ಯಸಾಧನೆ ಸಾಧ್ಯವಿಲ್ಲ. ಯುಧಿಷ್ಠಿರನು ತನ್ನ ನಾಯಿಯನ್ನು ಬಿಟ್ಟು ಸ್ವರ್ಗಕ್ಕೆ ಹೋಗಲಿಲ್ಲ. ಅಂದಮೇಲೆ, ಯುಧಿಷ್ಠಿರನ ವಂಶದವರು ಅಸ್ಪೃಶ್ಯರನ್ನು ಬಿಟ್ಟು ಸ್ವರಾಜ್ಯವನ್ನು ಸಂಪಾದಿಸುವುದು ಹೇಗೆ ಸಾಧ್ಯ? ನಾವು ಯಾವ ಪಾಪಕ್ಕಾಗಿ ಸರ್ಕಾರ ಪೈಶಾಚಿಕ ಎಂದು ಹೇಳುತ್ತೇವೆಯೋ, ಆ ಪಾಪಗಳಲ್ಲಿ ಯಾವುದನ್ನು ಅಸ್ಪೃಶ್ಯರ ವಿಷಯದಲ್ಲಿ ನಾವು ಆಚರಿಸಿಲ್ಲ?

"ನಮ್ಮ ತಮ್ಮಂದಿರನ್ನು ನಾವು ತುಳಿದಿದ್ದೇವೆ. ನಾವು ಅವರನ್ನು ಧೂಳಿನಲ್ಲಿ ಹೊರಳಿಸುತ್ತಿದ್ದೇವೆ. ಅವರು ನೆಲದಮೇಲೆ ಮೂಗು ಉಜ್ಜುವಂತೆ ಮಾಡಿದ್ದೇವೆ. ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಅವರನ್ನು ರೈಲ್ವೆಗಾಡಿಯಿಂದ ಹೊರಕ್ಕೆ ದೂಡುತ್ತೇವೆ. ಬ್ರಿಟಿಷ್ ಆಡಳಿತ ಇದಕ್ಕಿಂತ ಹೆಚ್ಚಿಗೆ ಮಾಡಿರುವುದೇನು? ಈ ಪಾಪವನ್ನು ನಾವು ಕಳೆದುಕೊಳ್ಳಬೇಕು. ಎಲ್ಲಿಯವರೆಗೆ ನಾವು ದೀನರನ್ನೂ ದಳಿತರನ್ನೂ ರಕ್ಷಿಸುವುದಿಲ್ಲವೋ ಅಲ್ಲಿಯವರೆಗೆ ಸ್ವರಾಜ್ಯದ ಮಾತು ಬರಿಯಮಾತು. ನಾವು ಯಾರನ್ನು ಅವಿದ್ಯಾವಂತರು ಅನಕ್ಷರಸ್ಥರು ಎಂದು ಕರೆಯುತ್ತೇವೆಯೋ ಅವರೇ ನಿಜವಾದ ವಿದ್ಯಾವಂತರು. ಅವರ ಸಂಸ್ಕೃತಿ ನಮ್ಮ ಸಂಸ್ಕೃತಿಗಿಂತ ಹೆಚ್ಚಾದುದು. ಅವರ ಬಾಳು ನಮ್ಮ ಬಾಳಿಗಿಂತ ಪರಿಶುದ್ಧವಾದುದು."

"ನಮ್ಮ ಆಶ್ರಮದಲ್ಲಿ ಹದಿನೆಂಟು ವರುಷದ ಒಬ್ಬ ಬ್ರಾಹ್ಮಣರ ಹುಡುಗ ಝಾಡಮಾಲಿ ಕೆಲಸಮಾಡುತ್ತಿದ್ದಾನೆ. ಆಶ್ರಮವಾಸಿಗಳಿಗೆ ನೈರ್ಮಲ್ಯವನ್ನು ಸರಿಯಾಗಿ ಕಲಿಸಲು ಆತ ಈ ಕೆಲಸ ಮಾಡುತ್ತಿದ್ದಾನೆ. ಆ ಹುಡುಗ ಸುಧಾರಕನಲ್ಲ. ವೈದೀಕ. ಭಗವದ್ಗೀತೆಯನ್ನು ನಿತ್ಯ ಓದುತ್ತಾನೆ. ಸಂಧ್ಯಾವಂದನೆ ದಿನಾ ಮಾಡುತ್ತಾನೆ. ಸಂಸ್ಕೃತ ಶ್ಲೋಕಗಳನ್ನು ಬಹಳ ಸ್ಪಷ್ಟವಾಗಿ ಉಚ್ಚರಿಸುತ್ತಾನೆ. ಆತ ಪ್ರಾರ್ಥನೆ ಮಾಡುವಾಗ ಆತನ ಮೃದುವಾದ ಸರಳವಾದ ಗಾನ, ಪ್ರೇಮವನ್ನು ಹರಡುತ್ತದೆ. ಆದರೆ ತನ್ನ ಯೋಗ್ಯತೆ ಪೂರ್ಣವಾಗಬೇಕಾದರೆ, ತಾನು ಸರಿಯಾದ ಜಾಡಮಾಲಿಯಾಗಬೇಕೆಂದು ಅವನಿಗೆ ತೋರಿತು. ಆಶ್ರಮದ ಜಾಡಮಾಲಿ ತನ್ನ ಕೆಲಸ ಸರಯಾಗಿ ಮಾಡಬೇಕಾದರೆ ತಾನು ಅವನಿಗೆ ಮೇಲುಪಂಕ್ತಿಯಾಗಬೇಕೆಂದು ಅವನಿಗೆ ತೋರಿತು.

## ಹರಿಜನರು ಶುದ್ಧರಾಗಬೇಕು

“ಹಿಂದು ಸಮಾಜವನ್ನು ನೀವು (ಹರಿಜನರು) ಶುದ್ಧಿಮಾಡುತ್ತಿದ್ದೀರೆಂದು ನಿಮಗೆ ತಿಳಿಯಬೇಕು. ಆದುದರಿಂದ ನಿಮ್ಮ ಜೀವನವನ್ನು ಶುದ್ಧಗೊಳಿಸಿಕೊಳ್ಳಬೇಕು. ಇತರರು ನಿಮ್ಮ ಕಡೆ ಬೆರಳುಮಾಡಿ ತೋರಿಸದಂತೆ ನೀವು ಯಾವಾಗಲೂ ಶುದ್ಧರಾಗಿರಬೇಕು. ಸಾಬೂನು ಸಿಕ್ಕದಿದ್ದರೆ ಬೂದಿ ಅಥವ ಮಣ್ಣನ್ನು ಉಪಯೋಗಿಸಿ. ನಿಮ್ಮಲ್ಲಿ ಕೆಲವರಿಗೆ ಕುಡಿತ ಜೂಜು ಉಂಟು. ಬ್ರಾಹ್ಮಣರೂ ಕುಡಿಯುತ್ತಾರೆ. ಎಂದು ನೀವು ಹೇಳಬಹುದು. ಆದರೆ ಅವರಲ್ಲಿ ಅದು ತಪ್ಪಲ್ಲ. ನಿಮ್ಮಲ್ಲಿ ತಪ್ಪು. ನಿಮ್ಮನ್ನು ಉದ್ಧಾರಮಾಡಬೇಕೆಂದು ಹಿಂದುಗಳನ್ನು ಕೇಳಿಕೊಳ್ಳಬೇಡಿ. ಮಾಡಬೇಕಾದರೆ ಅವರು ಮಾಡಿಯೇ ತೀರುತ್ತಾರೆ. ನಿಮ್ಮ ಪಾರಿಶುದ್ಧ್ಯತೆಯಿಂದ ಅವರಿಗೆ ನಾಚಿಕೆಯಾಗುವಂತೆ ಮಾಡಿ.”

“ನೀವು ಹಿಂದುಗಳು. ನೀವು ಭಗವದ್ಗೀತೆ ಓದುತ್ತೀರಿ. ಆದುದರಿಂದ ಹಿಂದುಗಳು ನಿಮ್ಮನ್ನು ಎದುರಿಸಿದರೆ ತಪ್ಪು ಹಿಂದುಮತದ್ದಲ್ಲ. ಅದರ ಅನುಯಾಯಿಗಳದು. ನಿಮ್ಮ ಮುಕ್ತಿಯಾಗಬೇಕಾದರೆ ನೀವು ಶುದ್ಧರಾಗಬೇಕು. ಕುಡಿತವೇ ಮುಂತಾದ ಕೆಟ್ಟ ಅಭ್ಯಾಸಗಳನ್ನು ಬಿಡಬೇಕು. ನಿಮ್ಮ ಸ್ಥಿತಿ ಉತ್ತಮವಾಗಬೇಕಾದರೆ, ನಿಮಗೆ ಸ್ವರಾಜ್ಯ ದೊರಕಬೇಕಾದರೆ ನೀವು ಆತ್ಮಾವಲಂಬಿಗಳಾಗಬೇಕು. ಬೊಂಬಾಯಿನಲ್ಲಿ, ನಿಮಗೆ ಸ್ವರಾಜ್ಯ ಚಳುವಳಿಯಲ್ಲಿ ನಂಬಿಕೆಯಿಲ್ಲವೆಂದೂ, ಬ್ರಿಟಿಷ್ ಸರ್ಕಾರದ ಸಹಾಯದಿಂದ ಮುಕ್ತಿಹೊಂದುವುದು ನಿಮ್ಮ ಆಸೆಯೆಂದೂ ಕೆಲವರು ಹೇಳಿದರು. ನಾನು ನಿಮಗೆ ಖಂಡಿತ ಹೇಳುತ್ತೇನೆ. ಹಿಂದುಮತವನ್ನು ತಿರಸ್ಕರಿಸಿ ಮೂರನೆಯ ಪಕ್ಷದ ಸಹಾಯವನ್ನು ಪಡೆಯುವುದರಿಂದ ನಿಮಗೆ ಎಂದಿಗೂ ಒಳ್ಳೆಯದಾಗುವುದಿಲ್ಲ. ನಿಮ್ಮ ಮೋಕ್ಷವಿರುವುದು ನಿಮ್ಮ ಕೈಯ್ಯಲ್ಲಿ. ಭಂಗಿಗಳನ್ನು ಕಂಡರೆ ಜನರಿಗೆ ಯಾಕೆ ತಿರಸ್ಕಾರ? ಆ ಕಸಬು ಲಾಯರುಗಳ ಅಥವ ಸರ್ಕಾರಿ ನೌಕರರ ಕಸಬಿನಷ್ಟೇ ಗೌರವವಾದುದು.”

“ಸನಾತನಿ ಹಿಂದುಗಳು ಸ್ವಭಾವದಿಂದ ಪಾಪಿಗಳಲ್ಲ. ಆದರೆ ಅವರೂ ಅಜ್ಞಾನದಲ್ಲಿ ಮುಳುಗಿದ್ದಾರೆ. ಅಸ್ಪೃಶ್ಯರ ಉದ್ಧಾರ ಗೋವಿನ

ಉದ್ಧಾರ ಇವರಡೇ ನನ್ನನ್ನು ಜೀವದೊಂದಿಗೆ ಉಳಿಸಿವೆ. ಇವು ಸಾಧಿತವಾದರೆ ಸ್ವರಾಜ್ಯ, ನನ್ನ ಮೋಕ್ಷ, ದೊರೆತಂತೆಯೇ."

## ಹರಿಜನರಿಗಾಗಿ ಉಪವಾಸ

ಗಾಂಧಿಯವರು ಅಸ್ಪೃಶ್ಯರು ತಮ್ಮ ಬಾಳನ್ನು ಶುದ್ಧವಾದ ರೀತಿಯಲ್ಲಿ ನಡೆಸಬೇಕೆಂಬುದನ್ನು ಪದೇ ಪದೇ ಹೇಳುತ್ತಿದ್ದಾರೆ. ಆದರೆ ಮುಖ್ಯವಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದವರು ಉತ್ತಮ ಹಿಂದುಗಳು. ನಮ್ಮ ಮೇಲೆ ಕೋಪಮಾಡಿಕೊಳ್ಳಲು ಹರಿಜನರಿಗೆ ನಿಜವಾಗಿಯೂ ಹಕ್ಕು ಇದೆ. ಎಂದಿದ್ದಾರೆ. ಒಂದುಸಲ ಅವರು " ಅಂಬೇಡ್ಕರರ ಸಹನೆ ಬಲುಹೆಚ್ಚು. ಸನಾತನಿಗಳು ಅವರಿಗೆ ಮಾಡಿರುವ ಅನ್ಯಾಯಕ್ಕೆ ಅವರು ನಮ್ಮ ತಲೆ ಒಡೆಯದೆ ಇರುವುದು. ಹೆಚ್ಚು" ಎಂದರು. ಎಲ್ಲರಿಗೂ ಯಾವುದು ಇಲ್ಲವೋ ಅದು ತನಗೂ ಬೇಡ ಎಂಬ ತತ್ವದಂತೆ ಹರಿಜನ ಪ್ರವೇಶವಿಲ್ಲದ ದೇವಾಲಯಗಳಿಗೆ ಗಾಂಧಿಯವರು ಪ್ರವೇಶಿಸುವುದಿಲ್ಲ ಅವರ ಅನುಯಾಯಿಗಳು ಪ್ರವೇಶಿಸಿದರೂ ಒಪ್ಪುವುದಿಲ್ಲ. ಒಂದುಸಲ ಜಗನ್ನಾಥ ದೇವಸ್ಥಾನಕ್ಕೆ ಮಹದೇವ ದೇಸಾಯಿಯವರ ಹೆಂಡತಿ, ಸತೀ ಕಸ್ತೂರಿಬಾ ಮುಂತಾದ ಕೆಲವು ಮಹಿಳೆಯರು ಒಬ್ಬಬ್ಬರು ಹರಿಜನರೊಂದಿಗೆ ಪ್ರವೇಶಿಸಿಬಿಟ್ಟರು. ದೇವಸ್ಥಾನದ ಅರ್ಚಕರಿಗೆ ಇವರು ಇಂತಹವರು ಎಂಬುದು ಗೊತ್ತಾಗಿದ್ದಿತು. ಇವರ ಜೊತೆಯಲ್ಲಿದ್ದವರು ಹರಿಜನ ಎಂದೂ ಗೊತ್ತಾಗಿದ್ದಿತು. ಇವರು ದೇವಾಲಯಕ್ಕೆ ಹೋಗುವುದು ಗಾಂಧಿಯವರಿಗೆ ಮೊದಲು ತಿಳಿದಿರಲಿಲ್ಲ. ಹಿಂದಿರುಗಿದಮೇಲೆ ಗೊತ್ತಾಯಿತು. ಗಾಂಧಿ ಮೊದಲು ಮಹದೇವನನ್ನು ತರಾಟೆಗೆ ತೆಗೆದುಕೊಂಡರು. "ಎಷ್ಟರಮಟ್ಟಿಗೆ ಈ ಚಳುವಳಿ ನನಗೆ ಪ್ರಾಣ ಎಂಬುದನ್ನು ನೀನು ಅವರಿಗೆ ವಿವರಿಸಿಲ್ಲ. ಅವರೊಂದಿಗೆ ವಾದಿಸಬೇಕಾಗಿದ್ದಿತು. ಕೊನೆಗೆ ಅವರ ಕಾಲು ಕಟ್ಟಿಕೊಳ್ಳಬೇಕಾಗಿದ್ದಿತು. ಕೊನೆಗೂ ಅವರು ಒಪ್ಪದಿದ್ದರೆ ಇಷ್ಟರಮೇಲೆ ಅವರ ಇಷ್ಟ. ನಾನೇನೋ ಅವರ ಸಂಬಂಧ ಬಿಡುವವರೆಗೆ ಹೋಗುವವನೆ ನಮ್ಮ ಹೆಂಡತಿ ಮಕ್ಕಳನ್ನೇ ನಮ್ಮ ದಾರಿಯಲ್ಲಿ ಕರೆದುಕೊಂಡು ಹೋಗದಿದ್ದರೆ, ಅವರನ್ನೇ ನಾವು ಒಪ್ಪಿಸದಿದ್ದರೆ. ಹರಿಜನರಿಗೆ ನಮ್ಮ ಶ್ರದ್ಧೆಯಲ್ಲಿ ಹೇಗೆ

ನಂಬಿಕೆಬರುತ್ತದೆ?" ಎಂದರು. ತಮಗೆ ಪ್ರಾಣವಾದ ಚಳುವಳಿ, ತಮ್ಮ ಆಪ್ತರಿಗೆ ಅರ್ಥವಾಗಲಿಲ್ಲವೆಲ್ಲಾ ಎಂದು ಅತ್ತರು. ಇದರಿಂದ ಮೊದಲೇ ದೇಹಾರೋಗ್ಯ ಕಡಿಮೆಯಾಗಿದ್ದ ಅವರ ಪ್ರಕೃತಿ ದೌರ್ಬಲ್ಯ, ರಕ್ತದ ಒತ್ತಡ ಮತ್ತಷ್ಟು ಹೆಚ್ಚಾಯಿತು. ಹರಿಜನರಿಗೆ ಪ್ರತ್ಯೇಕ ಚುನಾವಣೆ ಎಂದು ಬ್ರಿಟಿಷ್ ಸರ್ಕಾರ ಪ್ರಕಟಿಸಿದಾಗ ಗಾಂಧಿಯವರು "ಪ್ರತ್ಯೇಕ ಚುನಾವಣೆಯಿಂದ ಹರಿಜನ ಹರಿಜನರಾಗಿಯೇ ಉಳಿಯುತ್ತಾರೆ. ಮುಸಲ್ಮಾನರು ಮುಸಲ್ಮಾನರಾಗಿಯೇ ಉಳಿಯುವಂತೆ. ಆದರೆ ಹರಿ ಜನರು ಹಿಂದುಗಳಲ್ಲಿ ಸೇರಿಹೋದ ಹೊರತು ಅವರಿಗೆ ಮೋಕ್ಷವಿಲ್ಲ. ಆದುದರಿಂದ ಪ್ರತ್ಯೇಕ ಚುನಾವಣೆಯನ್ನು ನನ್ನ ಜೀವವನ್ನು ತೆತ್ತು. ಪ್ರತಿಭಟಿಸುತ್ತೇನೆ" ಎಂದು ಯರವಾಡದಲ್ಲಿ ಉಪವಾಸ ಹೂಡಿದರು ಅಗ ಹರಿಜನರ ಪ್ರತ್ಯೇಕ ಚುನಾವಣೆ ರದ್ದು ಆಗಿ ಯರವಾಡ ಒಪ್ಪಂದ ವೆಂಬ ಸಮಾಧಾನವಾಯಿತು. ಆ ಒಪ್ಪಂದಕ್ಕೆ ಅನುಸಾರವಾಗಿ ಹರಿ ಜನರಿಗೆ ಪ್ರಾಂತ್ಯದ ನ್ಯಾಯವಿಧಾಯಕ ಸಭೆಗಳಲ್ಲಿ ಪ್ರತ್ಯೇಕ ಚುನಾ ವಣೆಗಳು ಇಲ್ಲವಾದರೂ ಇಷ್ಟು ಸ್ಥಳಗಳು ಎಂದು ಕಾದಿಡಲಾಯಿತು.

## ಸವರ್ಣ ಹಿಂದುಗಳಿಗೆ ಅನ್ಯಾಯ ಬೇಡ

ಹರಿಜನರು ತಮ್ಮ ಕರ್ತವ್ಯ ತಾವು ಮಾಡಬೇಕು. ತಮ್ಮ ಏಳಿಗೆಯ ದಾರಿ ತಾವು ನೋಡಿಕೊಳ್ಳಬೇಕು. ಸವರ್ಣಹಿಂದುಗಳು ತಮ್ಮನ್ನು ತುಳಿದರು ಎಂಬ ಕಾರಣದಿಂದ ಈಗ ಹರಿಜನರು ಅವರ ಮೇಲೆ ಕಾಲುನ್ನಿಡಲು ಪ್ರಯತ್ನಿಸಬಾರದು. ಮುಖ್ಯ ಆತ್ಮಾವಲಂಬನೆ ಇರಬೇಕು. ಹಿಂದೆ ಕಷ್ಟ ಅನುಭವಿಸಿದೆವು. ಆದುದರಿಂದ ಇಂದು ಬರಿಯ ಸುಖವನ್ನೇ ಅನುಭವಿಸುತ್ತೇವೆ. ಎಂದರೆ ಸಾಧ್ಯವಿಲ್ಲ. ತ್ಯಾಗ ಅಥವ ಕಷ್ಟಕ್ಕಾಗಿ ಇಂದು ಪ್ರತಿಫಲ ಕೇಳಿದರೆ ಎಲ್ಲಿ ದೊರೆಯುತ್ತದೆ? ಎಲ್ಲವನ್ನೂ ಪರಿಶುದ್ಧಜೀವನ ನಡೆಸುವುದರ ಮೂಲಕ ಗಿಟ್ಟಿಸಿಕೊಳ್ಳ ಬೇಕು. ಆಗ ಹರಿಜನರಿಗೆ ಅನ್ಯಾಯ ನಡೆಯಿತೆಂದು ಈಗ ಸವರ್ಣ ಹಿಂದುಗಳಿಗೆ ಅನ್ಯಾಯ ನಡೆಯಬಾರದು. ಹರಿಜನ ಎಂಬ ಒಂದು ಕಾರಣದಿಂದಲೇ ಯಾವ ಹೆಚ್ಚಿಗೆ ರಿಯಾಯ್ತಿಯನ್ನೂ ಕೇಳಿಬಿಡ ಬಾರದು"

ಗುಜರಾತಿನ ಒಂದು ಹಳ್ಳಿಗೆ ಗಾಂಧಿಯವರು ಹೋಗಿದ್ದಾಗ ಅಲ್ಲಿನ ಹರಿಜನ ನಮಗೆ ಒಂದು ದೇವಸ್ಥಾನ ಕಟ್ಟಿಸಿಕೊಡಿ ಎಂದರು. ಗಾಂಧಿಯವರು "ಇದರಲ್ಲಿ ನಿಮ್ಮನ್ನು ಪ್ರೋತ್ಸಾಹಿಸಲು ನನಗೆ ಸಾಧ್ಯವಿಲ್ಲ ಹಣಬೇಕು. ಎಂದರೆ ನನಗೆ ಸಿಕ್ಕುತ್ತೆ. ಆದರೆ ನೀವೇ ಸಾಹಸಮಾಡಿ ಹಣ ಕೂಡಿಸಬೇಕು. ದೇವಸ್ಥಾನ ಆತ್ಮದ ಹಸಿವಿಗೆ ಆಹಾರ. ಈ ಹಸಿವು ನಿಮಗೆ ಚೆನ್ನಾಗಿ ಆಗಿದೆಯೆಂದು ತಿಳಿಯ ಬೇಕಾದರೆ ನೀವೇಹಣ ಕೂಡಿಸಬೇಕು. ನಿಮ್ಮ ಹಣದ ಸಹಾಯವಿಲ್ಲದೆ ನಾನೇ ದೇವಸ್ಥಾನವನ್ನು ಕಟ್ಟಿದರೆ ಅದು ಪ್ರಯೋಜನಕ್ಕೆ ಬಾರದ ಕಟ್ಟಡವಾಗುವುದು. ಅದನ್ನು ನೀವು ಜೂಜಿನ ಕೋಣೆಯಾಗಿಯೋ ಛತ್ರವಾಗಿಯೋ ಖಂಡಿತ ಉಪಯೋಗಿಸುವಿರಿ. ಆದರೆ ನಿಮ್ಮ ಕಷ್ಟದಿಂದ ದುಡಿದ ಹಣಹಾಕಿ; ನಾನು ಅದಕ್ಕೆ ಸಮವಾದಷ್ಟನ್ನು ಕೂಡಿಸಿಕೊಡುತ್ತೇನೆ" ಎಂದರು.

"ಹರಿಜನರು ಮಾಡುತ್ತಿರುವ ಕೆಲಸ ಸಮಾಜಕ್ಕೆ ಆವಶ್ಯಕ ವಾದುದು. ಅದನ್ನು ಬಿಡಕೂಡದು. ಆ ಕೆಲಸವನ್ನು ಗಾಂಭೀರ್ಯ ದಿಂದಲೂ ಶ್ರದ್ಧೆಯಿಂದಲೂ ಮಾಡಬೇಕು. ಪ್ರತಿಯೊಬ್ಬರೂ ತಮ್ಮ ಕಸಬು ತಮ್ಮ ದೇವರು ಎಂಬ ನಂಬಿಕೆಯಿಂದ ಮಾಡಬೇಕು. ಒಂದು ಹಳ್ಳಿಯ ಹರಿಜನರು ಗಾಂಧಿಯವರನ್ನು ಹೀಗೆ ಕೇಳಿದರು "ನಾವು ಸತ್ತ ದನಗಳನ್ನು ವ್ಯವಸ್ಥೆಮಾಡಬೇಕಾದರೆ ಮಾಂಸವನ್ನು ತಿನ್ನದೆ ವಿಧಿಯಿಲ್ಲ" ಎಂದು ಅದಕ್ಕೆ ಗಾಂಧಿಯವರು ಹೀಗೆ ಉತ್ತರ ಕೊಟ್ಟರು. ಪಟ್ಟಣಗಳಲ್ಲಿ ಉತ್ತಮರಾದ ಬ್ರಾಹ್ಮಣರೆಲ್ಲಾ ಚರ್ಮದ ಅಂಗಡಿ ಇಟ್ಟುಕೊಂಡಿದ್ದಾರೆ. ನಾನೂ ಒಂದುದಿನ ಚರ್ಮದ ಅಂಗಡಿ ನಡೆಸಬಹುದು. ಆದರೆ ಮಾಂಸ ತಿನ್ನುವುದಿಲ್ಲ.

### ಅಸ್ಪೃಶ್ಯತೆಯ ವಿರೋಧಿಗಳಿಂದ ಬಿನ್ನವತ್ತಳೆ ಬೇಡ

ಹರಿಜನರನ್ನು ತಿರಸ್ಕರಿಸಿದಾಗ, ಗಾಂಧಿ ಸನಾತನಿಗಳಿಗೆ ನಿಮ್ಮದು ತಪ್ಪು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಕಾಧಿಯವಾಡದಲ್ಲಿ ಒಂದುಕಡೆ ಒಂದುಸಭೆ ಏರ್ಪಡಿಸಿದ್ದರು. ೯ ಘಂಟೆಗೆ ಪ್ರಾರಂಭವಾದ ಸಭೆಯಲ್ಲಿ ೧೦—೩ ಯವರೆಗೆ, ಪಾಠಶಾಲೆಯ ಹುಡುಗರ ಕೈಯಿಂದ

ಗಾಂಧಿಯವರಮೇಲೆ ಪದ್ಯ ಹೇಳಿಸಿದರು. ಕೊನೆಗೆ ಹರಿಜನರ ಕೈಯಿಂದ ಪದ್ಯ ಹೇಳಿಸದಿದ್ದರೆ ಸಾಲದೆಂದು ಪ್ರಾರಂಭಿಸಿದರು. ಗಾಂಧಿಯವರು "ಇದೆಲ್ಲಾ ಸರಿ. ಈ ಅರ್ಧರಾತ್ರಿಯಲ್ಲಿ ನನ್ನ ಸಹನೆಗೂ ಮಿತಿಯುಂಟು" ಎಂದರು. ಮಧ್ಯದಲ್ಲಿ ಒಂದು ಹಗ್ಗಕಟ್ಟಿ ಹರಿಜನರನ್ನು ಅದರ ಆಚೆ ಕೂರಿಸಿದ್ದರು. ಹರಿಜನರ ಹಾಡು ಅಲ್ಲಿಂದಲೇ ಪ್ರಾರಂಭವಾಯಿತು. ಗಾಂಧಿಯವರ ದೃಷ್ಟಿಯೆಲ್ಲಾ ಆ ಹರಿಜನರ ಕಡೆಯೇ ಹೋಯಿತು. ಅವರು "ತಡೆಯಿರಿ. ನಾನು ಆ ಹರಿಜನರ ಕಡೆ ನೋಡುತ್ತಿದ್ದುದು ನಿಮ್ಮ ಕಣ್ಣಿಗೂ ಬಿದ್ದಿರಬೇಕು. ಹರಿಜನರ ಸ್ವಾಗತ ಹಾಡುಗಳನ್ನು ನಾನು ದೂರದಿಂದಲೇ ಕೇಳಲು ಒಪ್ಪಿದರೆ, ಕಾಂಗ್ರೆಸ್ ಕಮಿಟಿಯ ಪರವಾಗಿ ನೀವು ಕೊಟ್ಟ ಸ್ವಾಗತ ಬೆಲೆಯಿಲ್ಲದುದಾಗುವುದು. ಮತ್ತು ಜಾಡಮಾಲಿ ಹರಿಜನಬಂಧು ಎಂದು ನಾನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿರುವ ಮಾತು ಅರ್ಥವಿಲ್ಲದುದಾಗುವುದು. ನನ್ನ ಕಡೆಗೆ ಗೀತೆಯ ಶ್ಲೋಕಗಳನ್ನು ಎಸೆಯುವುದರ ಅರ್ಥವೇನು ? ಅದರ ಒಂದು ಮಾತಿನಲ್ಲಿಯೂ ನಿಮಗೆ ನಂಬಿಕೆ ಇಲ್ಲದಿರುವಾಗ ? ನೀವು ನನ್ನನ್ನು ಹೊಗಳಿರುವುದೆಲ್ಲಾ ನಿಜವಾದರೆ, ಆ ಹರಿಜನರನ್ನು ನಿಮ್ಮ ನಡುವೆ ಕೂರಿಸುತ್ತೇನೆ. ಇದು ಸಾಧ್ಯವಿಲ್ಲವೆಂದು ನೀವು ಹೇಳುವುದಾದರೆ ಈಗ ನೀವು ನನಗೆ ತೋರಿಸಿದ ಸತ್ಕಾರಗಳೆಲ್ಲಾ ಬರಿಯ ಸಂಪ್ರದಾಯ ಮರ್ಯಾದೆಯಾಯಿತು. ನಿಮಗೆ ಹರಿಜನರು ಬೇಡವಾದರೆ ಧೈರ್ಯದಿಂದ ಹೇಳಿ. ನಾನೇ ಅವರ ಜತೆ ಹೋಗಿ ಕುಳಿತುಕೊಂಡು ಅಲ್ಲಿಂದಲೇ ನಿಮಗೆ ಉಪನ್ಯಾಸಮಾಡುತ್ತೇನೆ. ಅದೇ ನನ್ನ ಸ್ಥಾನ. ಹರಿಜನರೊಂದಿಗೆ ನನ್ನನ್ನು ಕೂರಿಸುವುದರಿಂದ ನಾನುನಿಮಗೆ ಅವಮಾನಮಾಡಿದಂತಾಗುವುದೆಂದು ಯೋಚಿಸಬೇಡಿ" ಎಂದರು. ಕೊನೆಗೆ ವ್ಯವಸ್ಥಾಪಕರು ಹರಿಜನರನ್ನೂ ಸವರ್ಣಗಳ ಜತೆ ಕೂರಿಸಿದರು.

ಗುಜರಾತಿನ ಒಂದು ಊರಿನಲ್ಲಿ ಗಾಂಧಿಯವರಿಗೆ ಕೊಟ್ಟ ಬಿನ್ನವತ್ತಲೆಯಲ್ಲಿ ಹರಿಜನರ ಸುದ್ಧಿಯನ್ನೇ ಮರೆತಿದ್ದರು. ಗಾಂಧಿಯವರು, ಬಿನ್ನವತ್ತಲೆಗೆ ಉತ್ತರಕೊಡುತ್ತಾ "ನೀವು ಹರಿಜನರ ವಿಚಾರ ಬಿನ್ನವತ್ತಲೆಯಲ್ಲಿ ಬಿಟ್ಟರಿ. ಹರಿಜನರ ವಿಚಾರ ಬಿಡುವ ಮುನಿಸಿಪಾಲಿಟಿ

ಮುನಿಸಿಪಾಲಿಟಿ ಎಂಬ ಹೆಸರೇ ಅರ್ಹವಾದುದಲ್ಲ. ನನ್ನನ್ನು ಗೌರವಿಸುವುದರಿಂದ ನಿಮ್ಮನ್ನೇ ಹೊಗಳಿಕೊಂಡಂತಾಯಿತೆಂದು ನನ್ನ ಕೆಲಸದ ಕೆಲವು ಭಾಗಗಳ ವಿಚಾರ ಮಾತ್ರ ಹೇಳಿದ್ದೀರಿ. ಅಸ್ಪೃಶ್ಯತೆಯ ನಾಶ ನನ್ನ ಜೀವನದ ಚಟುವಟಿಕೆಯ ಮುಖ್ಯಭಾಗ. ಅದನ್ನು ನನ್ನ ಉಳಿದ ಕೆಲಸಗಳಿಂದ ಬೇರೆಮಾಡಲು ಸಾಧ್ಯವಿಲ್ಲ. ಈ ಕಳಂಕವನ್ನು ಹಿಂದು ಧರ್ಮದಿಂದ ತಪ್ಪಿಸುವುದಕ್ಕಾಗಿಯೆ ಜೀವವನ್ನು ತೆಯ್ಯದಿದ್ದರೆ ನಾನು ನಿಜವಾದ ಹಿಂದು ಆಗುವುದಿಲ್ಲ. ಆದುದರಿಂದ ಅಸ್ಪೃಶ್ಯತೆ ಹಿಂದು ಧರ್ಮದಭಾಗ ಎಂದು ತಿಳಿದವರೂ, ಅದರ ನಿವಾರಣೆಯಲ್ಲಿ ಉದಾಸೀನರಾಗಿರುವರೂ, ನನಗೆ ಬಿನ್ನವತ್ತಲೆ ಕೊಡಲಾರರು. ನಾನು ಸರ್ಕಾರದ ಅಧಿಕಾರಿಯಲ್ಲ, ಸರದಾರನಲ್ಲ, ನನಗೆ ಸಂಪ್ರದಾಯಾನುಸಾರವಾದ ಬಿನ್ನವತ್ತಲೆ ಬೇಕಿಲ್ಲ. ನಾನು ಜಾಡಮಾಲಿ, ಕೂಲಿ, ನೆಯ್ಗೆಯುವ ಭಂಗಿ, ನನಗೆ ಗೌರವ ಕೊಡುವುದಾದರೆ ಅದಕ್ಕಾಗಿ ಕೊಡಬೇಕು. ಹಿಂದು ಮುಸಲ್ಮಾನರ ಐಕ್ಯವಿಲ್ಲದೆ ಸ್ವರಾಜ್ಯ ದೊರೆಯುವುದಿಲ್ಲ. ಆದರೆ ಆ ಐಕ್ಯವಿಲ್ಲದುದರಿಂದ ಹಿಂದುಮತ ನಾಶವಾಗುವುದಿಲ್ಲ. ಆದರೆ ಅಸ್ಪೃಶ್ಯತೆಯಿಂದ ಹಿಂದುಧರ್ಮ ನಾಶವಾಗುತ್ತದೆ. ಈ ರೋಗವನ್ನು ನಾವು ಅಪ್ಪಿಕೊಂಡರೆ ಜಗತ್ತು ನಗುತ್ತದೆ. ಇದನ್ನು ಒಪ್ಪುವ ಮತ ಜಗತ್ತಿನ ತಿರಸ್ಕಾರಕ್ಕೆ ಅರ್ಹವಾಗುತ್ತದೆ ಆದುದರಿಂದ ಈ ಬಿನ್ನವತ್ತಲೆಯನ್ನು ನೀವು ನನಗೆ ಕೊಡಬಾರದಾಗಿದ್ದಿತು. ಹರಿಜನರಿಗಾಗಿ ನಾನು ಮಾಡಿರುವ ಕೆಲಸವನ್ನು ಒಪ್ಪದ ಯಾವ ಸಂಘವೂ ನನಗೆ ಬಿನ್ನವತ್ತಲೆ ಕೊಡಬಾರದೆಂದು ಹೇಳುತ್ತೇನೆ. ”

## ಕೆಲವು ಪ್ರಶ್ನೋತ್ತರ

ಈ ಪ್ರಶ್ನೆಯನ್ನು ಕೂಲಂಕಶವಾಗಿ ಚರ್ಚಿಸಿ ಇದಕ್ಕೆ ಕೊಡಬೇಕಾದ ಸಮಜಾಯಿಷಿಯನ್ನೆಲ್ಲಾ ಕೊಡಲು ಗಾಂಧಿಯವರು ಯಾವಾಗಲೂ ಹಿಂದೆಗೆಯಲಿಲ್ಲ. ಗುಜರಾತಿನಲ್ಲಿ ಪ್ರವಾಸಮಾಡುತ್ತಿರುವಾಗ ಇಂಗ್ಲೆಂಡಿಗೆ ಹೋಗಿ ಬಂದಿದ್ದ ಗೃಹಸ್ಥ ಒಬ್ಬ, ಗಾಂಧಿಯವರೊಂದಿಗೆ ಹೀಗೆ ಸಂಭಾಷಣೆ ಪ್ರಾರಂಭಿಸಿದ.

ಆತ—ಅಸ್ಪೃಶ್ಯತೆಯನ್ನು ಹೋಗಲಾಡಿಸಲು ನೀವು ಅನುಸರಿಸುತ್ತಿರುವುದಕ್ಕಿಂತ ಬೇರೆ ಮಾರ್ಗವಿಲ್ಲವೆ ?

ಗಾಂಧಿ—ನಿಮ್ಮ ಮಾರ್ಗವೇನು ?

ಆತ—ಈಗಿನ ಪಾಯಖಾನೆ ಶುದ್ಧಿಮಾಡುವ ಕ್ರಮ ಹೋಗಲಾಡಿಸುವುದೆ ?

ಗಾಂಧಿ—ಹಾಗಾದರೆ ಈಗ ಭಂಗಿಯು, ಜಾಡಮಾಲಿ ಕೆಲಸ ಮಾಡಕೂಡದೆಂಬುದು ತಾನೆ ನಿಮ್ಮ ಅಭಿಪ್ರಾಯ. ?

ಆತ—ಹೌದು.

ಗಾಂಧಿ—ಅವರವರ ಕೆಲಸ ಅವರೇ ಮಾಡಿಕೊಳ್ಳಬೇಕು. ಒಪ್ಪಿದೆ. ಜಾಡಮಾಲಿಯ ಕೆಲಸ ತಪ್ಪಿಸಿ ನಮ್ಮಮೇಲೆ ಆ ಭಾರ ತೆಗೆದುಕೊಳ್ಳೋಣ.

ಆತ--ಇಲ್ಲ ಇಲ್ಲ ಅಸ್ಪ್ರುದೂರ ಬೇಕಿಲ್ಲ. ನನ್ನ ಅಭಿಪ್ರಾಯದಲ್ಲಿ ಈಗಿನ ಜಾಡಮಾಲಿ ಕಸಬಿನ ರೀತಿ ಬದಲಾಯಿಸಬೇಕು. ಫ್ಲಷ್ ಪದ್ಧತಿ ಇಡೋಣ. ಯೂರೋಪಿನಲ್ಲಿ ಫ್ಲಷ್ ಸಿಸ್ಟಮ್ ಇದೆ. ಆದುದರಿಂದ ಅಲ್ಲಿ ಅಸ್ಪೃಶ್ಯತೆ ಇಲ್ಲ. (ಪ್ರೇಕ್ಷಕರಲ್ಲಿ ಅನೇಕರು ಆಗಲೇ ನಗಲು ಪ್ರಾರಂಭಿಸಿದ್ದರು)

ಗಾಂಧಿ—ಆದರೆ ಈ ಪದ್ಧತಿ ಪ್ರಚಾರಕ್ಕೆ ಬರುವುದಕ್ಕೆ ಮುಂಚೆ ಸಹ ಯೂರೋಪಿನಲ್ಲಿ ಅಸ್ಪೃಶ್ಯತೆ ಇರಲಿಲ್ಲ.

ಆತ—ಇರಬಹುದು ಆದರೆ ನನಗೆ ಇದೇ ಸರಿಯಾದ ಮಾರ್ಗವಾಗಿ ತೋರುತ್ತದೆ. ಎಲ್ಲೆಲ್ಲೂ ಫ್ಲಷ್ ಸಿಸ್ಟಂ. ನಗರಗಳಲ್ಲಿ, ದೊಡ್ಡ ಊರುಗಳಲ್ಲಿ, ಹಳ್ಳಿಗಳಲ್ಲಿ.

ಗಾಂಧಿ—ಆದರೆ ಹಳ್ಳಿಗಳಲ್ಲಿ ಪಾಯಖಾನೆ ಗೃಹಗಳಿಲ್ಲ. ಪಾಯಖಾನೆ ಶುದ್ಧಿಮಾಡುವ ಭಂಗಿ ಸಹ ಇಲ್ಲ. ಆದರೂ ಅಲ್ಲಿ ಅಸ್ಪೃಶ್ಯತೆ ಇದೆ. ಅಲ್ಲಿಯೇ ಹೆಚ್ಚಾಗಿದೆ.

ಆತ—ಅಸ್ಪೃಶ್ಯತೆಯನ್ನು ಹೋಗಲಾಡಿಸಿದ ಕೂಡಲೇ, ಹರಿಜನರು ಸಹ ಪಂಕ್ತಿಭೋಜನ, ನಮ್ಮೊಂದಿಗೆ ವಿವಾಹ ಸಂಬಂಧ ಇವುಗಳನ್ನು ಬಯಸುವರೆಂದು ನೀವು ನಂಬುವುದಿಲ್ಲವೆ ?

ಗಾಂಧಿ— ಇಲ್ಲ.

ಆತ—ನಾನು ನಂಬುತ್ತೇನೆ. ನಾನು ಇಂಗ್ಲೆಂಡಿಗೆ ಹೋಗಿ

ಖರ್ಚಿನ ಅಭ್ಯಾಸಗಳನ್ನು ಪ್ರಾರಂಭಿಸಿ ಸುಖಾಭಿಲಾಷಿಯಾದೆ. ಈಗ ಮನೆಗೆ ಬಂದೆ. ಹಿಂದೆ ನನ್ನ ಅವಶ್ಯಕತೆಗಳು ಕಡಿಮೆಯಾಗಿದ್ದ ಕಾಲ ಹೋಯಿತು. ನನಗೆ ಈಗ ಸುಖ ಹೆಚ್ಚು ಹೆಚ್ಚಾಗಿ ಬೇಕು. ಅಸ್ಪೃಶ್ಯ ರಿಗೂ ಹಾಗೆಯೇ. ಅಸ್ಪೃಶ್ಯತೆ ತೆಗೆದುಹಾಕಿದರೆ ಅವರು ಇನ್ನೂ ಹೆಚ್ಚು ಹೆಚ್ಚು ರಿಯಾಯ್ತಿ ಕೇಳುತ್ತಾರೆ.

ಗಾಂಧಿ—ಕೇಳಲಿ (ಎಲ್ಲರಲ್ಲಿಯೂ ನಗು)

ಆತ—ಆಗ ಅನಾಯಕತ್ವವುಂಟಾಗುತ್ತದೆ.

ಗಾಂಧಿ—ಏನೂ ಇಲ್ಲ. ಕೇಳಿದ ಮಾತ್ರಕ್ಕೆ ನೀವು ಕೊಡುವಿರಾ ? ಈಗ ಸರ್ಕಾರ ನಮಗೆ ಕೆಲವು ಅಧಿಕಾರ ಕೊಟ್ಟಿದ್ದಾರೆ. ಹೆಚ್ಚಿಗೆ ಕೇಳಿದರೂ ಅವರಿಗೆ ಇಷ್ಟವಿಲ್ಲದುದರಿಂದ ಕೊಟ್ಟಿಲ್ಲ.

ಆತ—ಅವರು ಸಹ ಪಂಕ್ತಿಭೋಜನ, ನಮ್ಮೊಂದಿಗೆ ವಿವಾಹ ಇವುಗಳನ್ನು ಕೇಳುವುದು ಖಂಡಿತ.

ಗಾಂಧಿ—ಆಗಲಿ ನಿಮ್ಮ ಸರದಿ (innings) ಆಯಿತು. ಇನ್ನು ಅವರದು ಆಗಲಿ.

ಒಂದುಸಲ ಕೆಲವು ಹರಿಜನರು "ಈಗ ದೇಶಬಂಧು ದಾಸ್‌ನೋಡಿ ಅವರು ನಮಗಾಗಿ ಏನನ್ನೂ ಮಾಡುತ್ತಲೇ ಇಲ್ಲ" ಎಂದರು.

ಗಾಂಧಿ—ಆದರೆ ಅವರಿಗೆ ನಿಮ್ಮಲ್ಲಿ ಉದಾಸೀನವಿಲ್ಲ. ಅವರು ನಿಮಗಾಗಿ ನನ್ನಷ್ಟೇ ದುಡಿಯಲು ಸಿದ್ಧರಾಗಿದ್ದಾರೆ. ಆದರೆ ಅವರಿಗೆ ನಿಮ್ಮ ಕೆಲಸಮಾಡಲು ಯಾಕೆ ಸಾಧ್ಯವಾಗಿಲ್ಲ ಗೊತ್ತೇ.

ಆತ—ಗೊತ್ತು ಸಾರ್. ಅವರಿಗೆ ಕೆಲಸ ಹೆಚ್ಚು.

ಗಾಂಧಿ—ಹೌದು ಅಲ್ಲದೆ ಮತ್ತೊಂದು ಕಾರಣ ಸಹ ಇದೆ. ರಾಜಕೀಯ ಮೋಕ್ಷದ ಹೊರತು ಯಾವ ಕೆಲಸವೂ ಸಾಧ್ಯವಿಲ್ಲವೆಂದು ಅವರ ನಂಬಿಕೆ.

ಹರಿಜನರು " ಹೊ. ನಮಗೆ ಎಲ್ಲೆಲ್ಲು ಕಷ್ಟ " ಎಂದರು. ಗಾಂಧಿಯವರು ಅದೆಲ್ಲಾ ಸರಿಹೋಗುತ್ತೆ. ಕೆಲಸಗಾರರು ಬಹಳ ವಾಗಿದ್ದಾರೆ. ಅನೇಕ ಸನಾತನಿಗಳು ಈ ಚಳುವಳಿಯಲ್ಲಿ ಕೆಲಸಮಾಡು ತ್ತಿದ್ದಾರೆ. ಮನುಷ್ಯಸ್ವಭಾವದಲ್ಲಿರುವ ಒಳ್ಳೆಯದನ್ನು ನಾವು ನಂಬಬೇಕು.

ನಿಮ್ಮನ್ನು ನೀವು ತಿದ್ದಿಕೊಂಡರೆ ನಿಮ್ಮ ವಿರೋಧಿಗಳು ನಿಮ್ಮ ವಿಷಯದಲ್ಲಿ ತಮ್ಮ ಕರ್ತವ್ಯಮಾಡುತ್ತಾರೆ. ನಾನು ದಕ್ಷಿಣ ಆಫ್ರಿಕದಲ್ಲಿ ಈ ಕಿರುಕುಳಗಳಿಗೆಲ್ಲ ಸಿಕ್ಕಿದ್ದೆ. ನಾನು ಮಾಡಿದಂತೆ ನೀವೂ ಮಾಡಬೇಕೆಂದು ನಾನು ಬಯಸುತ್ತೇನೆ. ನಾನು ಮಾಡಿದುದು ನಿಮಗೆ ತಿಳಿದಿರಬೇಕು. ಯೂರೋಪಿಯನ್‌ರ ಹಜಾಮರು ನನಗೆ ಕ್ಷೌರ ಮಾಡಲು ಒಪ್ಪಲಿಲ್ಲ. ನಾನೇ ಕತ್ತಿ ಹಿಡಿದುಕೊಂಡು ಕನ್ನಡಿಯ ಮುಂದೆ ನಿಂತುಕೊಂಡು ಕ್ಷೌರ ಪ್ರಾರಂಭಿಸಿದೆ. ನಾನು ಮಾಡಿಕೊಳ್ಳುತ್ತಿರುವಾಗ ಒಬ್ಬ ಆಂಗ್ಲೇಯ ಸ್ನೇಹಿತರು ಒಳಗೆ ಇಣಕಿನೋಡಿದರು. ಇದೇನು ನೀವು ಮಾಡುತ್ತಿರುವುದು ಎಂದು ಕೇಳಿದರು. ಯೂರೋಪಿಯನ್ ಹಜಾಮ ನನಗೆ ಕ್ಷೌರಮಾಡುವುದಿಲ್ಲವಾದರೆ ನಾನೇ ಮಾಡಿಕೊಳ್ಳುತ್ತೇನೆ. ಎಂದೆ ಅವರು ತಾವು ನನಗೆ ಕ್ಷೌರಮಾಡಲು ಪ್ರಾರಂಭಿಸಿದರು. ತಲೆಯಲ್ಲಿ ಅಲ್ಲಿ ಇಲ್ಲಿ ಕೂಳೆ; ಅಂತೂ ಹೇಗೋ ಕ್ಷೌರವಾಯಿತು. ನನ್ನ ಮಕ್ಕಳನ್ನು ಪಾಠಶಾಲೆಗೆ ಕಳುಹಿಸುವುದಕ್ಕೂ ಇದೇ ತೊಂದರೆಯಾಯಿತು. ಅಧಿಕಾರಿಗಳು ಅವರನ್ನು ಮಾತ್ರ ಇಂಗ್ಲಿಷ್ ಸ್ಕೂಲಿಗೇ ಸೇರಿಸುವುದಾಗಿ ಹೇಳಿದರು. ನಾನು ಒಪ್ಪಲಿಲ್ಲ. ಎಲ್ಲ ಹುಡುಗರನ್ನೂ ಸೇರಿಸದಿದ್ದರೆ ನನ್ನ ಮಕ್ಕಳನ್ನು ಮಾತ್ರ ಸೇರಿಸುವುದಿಲ್ಲವೆಂದೆ. ನನ್ನ ಮಕ್ಕಳ ವಿದ್ಯೆ ನಾನು ಲಕ್ಷಿಸಲಿಲ್ಲವೆಂಬ ಅಪವಾದ ಬಂದರೂ ಗಮನಿಸದೆ ನನ್ನ ಮಕ್ಕಳನ್ನು ಮನೆಯಲ್ಲಿಯೇ ಇಟ್ಟುಕೊಂಡೆ. ಪ್ರತೀಕಾರದಿಂದ ಅಲ್ಲ. ಕಷ್ಟ ಸಹಿಷ್ಣುತೆಯಿಂದ ನಮ್ಮ ಧ್ಯೇಯವನ್ನು ಗೆಲ್ಲಬೇಕು.

“ಅಸ್ಪೃಶ್ಯತೆ ಹಿಂದು ದರ್ಮದ ಭಾಗವಾಗಿದ್ದರೆ ನಾನು ಹಿಂದು ಧರ್ಮದಲ್ಲಿರಲು ಹಿಂದೆ ಗೆಯುತ್ತಿದ್ದೆ. ನನ್ನ ಆದರ್ಶವನ್ನು ಮುಟ್ಟಲು ಬೇರೆ ಧರ್ಮವನ್ನು ಹಿಡಿಯುತ್ತಿದ್ದೆ. ಆದರೆ ನನ್ನ ಅದೃಷ್ಟದಿಂದ ಅಸ್ಪೃಶ್ಯತೆ ಹಿಂದು ಧರ್ಮದ ಬಾಗವಲ್ಲವೆಂದು ನನ್ನ ನಂಬಿಕೆ. ಆದರೆ ಅದು ಹಿಂದೂ ಧರ್ಮದ ಕಳಂಕ. ಹಿಂದೂ ಮತ ಪ್ರೇಮಿಗಳೆಲ್ಲ ಆ ಕಳಂಕ ತೊಡೆಯಲು ಪ್ರಯತ್ನಿಸ ಬೇಕು. ಆದರೆ ಅಸ್ಪೃಶ್ಯತೆ ಹಿಂದು ಮತದ ಭಾಗ ಎಂದು ನನಗೆ ನಂಬಿಕೆಯಾದರೆ ನಾನು ಕಾಡಿನಲ್ಲಿ

ಅಳಿಯಬೇಕಾಗುತ್ತದೆ. ಯಾಕೆಂದರೆ ಮತ್ತಾವ ಮತವೂ ನನ್ನ ಆತ್ಮನ ಹಸಿವನ್ನು ಅಡಗಿಸಲಾರದು.

## ಹರಿಜನರಲ್ಲಿ ನಂದನಾರ್ ಮತ್ತೆ ಜನಿಸಬೇಕು

ಆದರೆ ಗಾಂಧಿ, ಹರಿಜನವೆಂಬ ಕಾರಣದಿಂದಲೇ ಹರಿಜನ ಎಲ್ಲಾ ತಪ್ಪುಗಳನ್ನೂ ಕ್ಷಮಿಸುವವರಾಗಿರಲಿಲ್ಲ. ಹರಿಜನರು ತಮ್ಮ ದುರಾಚಾರಗಳನ್ನೆಲ್ಲ ಬಿಟ್ಟು ತಮ್ಮ ಅರ್ಹತೆಯನ್ನು ಹೆಚ್ಚಿಸಿಕೊಳ್ಳಬೇಕೆಂದು ಅವರು ಒತ್ತಿ ಒತ್ತಿ ಹೇಳಿದ್ದಾರೆ. ಸಾಬರ್‌ಮತಿಯ ಆಶ್ರಮಕ್ಕೆ ಮೊದಲು ಒಂದು ಹರಿಜನ ಸಂಸಾರವನ್ನು ಸೇರಿಸಿಕೊಳ್ಳಬೇಕೆಂದು ಗಾಂಧಿ ಬಯಸಿದಾಗ " ಯೋಗ್ಯರಾದ ಮತ್ತು ಸದ್ಗುಣಸಂಪನ್ನರಾದ " ಒಂದು ಹರಿಜನ ಸಂಸಾರವನ್ನು ಆಹ್ವಾನಿಸಿದರು. ಬರಿಯ ಹರಿಜನ ಎಂಬ ಮಾತ್ರದಿಂದಲೇ ಯಾವ ರಿಯಾಯ್ತಿಯನ್ನೂ ಗಾಂಧಿ ಅವರಿಗೆ ಕೊಡಬೇಕೆಂದು ಹೇಳುತ್ತಿರಲಿಲ್ಲ. ಹರಿಜನರು ಮಿತಿ ಮೀರಿದಾಗ ಗಾಂಧಿ ಅವರನ್ನು ಎಚ್ಚರಿಸಿದುದುಂಟು ಗಾಂಧಿ. ಸ್ವರ್ಗಸ್ಥರಾಗುವುದಕ್ಕೆ ಸ್ವಲ್ಪ ದಿವಸಗಳ ಮುಂಚೆ ಅಹಮ್ಮದಾಬಾದಿನ ಕೆಲವು ದೇವಾಲಯಗಳ ಮುಂದೆ ಹರಿಜನರು ದೇವಾಲಯ ಪ್ರವೇಶಕ್ಕಾಗಿ ಮೊಂಡು ಕುಳಿತರು. ಆ ಸುದ್ದಿ ಗಾಂಧಿಯವರಿಗೆ ತಿಳಿದಾಗ ಗಾಂಧಿ ಹೀಗೆ ಹೇಳಿದರು " ದೇವಾಲಯದೆದುರು ಸತ್ಯಾಗ್ರಹ ಕುಳಿತವರು ನಿಜವಾದ ಭಕ್ತರಲ್ಲ. ಹರಿಜನರ ಆ ದೃಢತೆಯನ್ನು ನಾನು ಅಭಿನಂದಿಸಲಾರೆ. ಅವರಿಗೆ ದೇವರ ದುರುಶನದ ಆತುರವಿಲ್ಲ. ಅವರಿಗೆ ಬೇಕಾಗಿರುವುದು ತಮ್ಮ ಹಕ್ಕಿನ ಸ್ಥಾಪನೆ. ಅಷ್ಟರಮಟ್ಟಿಗೆ ಅವರು ನಿಜವಾದ ಧರ್ಮಮಾರ್ಗದಿಂದ ಚ್ಯುತರಾಗಿದ್ದಾರೆ ನಿಜವಾದ ಭಕ್ತನು ನಂದನಾರರಂತೆ ಪರಮಾತ್ಮನನ್ನಲ್ಲದೆ ಬೇರೊಬ್ಬನ ಸಹಾಯವನ್ನು ಒಲ್ಲನು. ಇಂದು ಉಚ್ಚಕುಲದವರೆಂದು ಹೇಳಿಕೊಳ್ಳುವ ಬ್ರಾಹ್ಮಣರು ಸಹ ನಂದನಾರರನ್ನು ಗೌರವಿಸುತ್ತಾರೆ. ಅಂತಹ ನಂದನಾರ್ ಸ್ವೇಚ್ಛೆಯಿಂದ ಹರಿಜನರಾದವರಲ್ಲಿ ಉದಯಿಸಲೆಂದು ನನ್ನ ಆಕಾಂಕ್ಷೆ. ಜನ್ಮತಃ ಹರಿಜನರಾದವರೂ ಇದೇ ಆಶಯವನ್ನಿಟ್ಟುಕೊಂಡಿದ್ದಾರೆಂದು ನನಗೆ ಗೊತ್ತು. ಹರಿಜನೇತರರಿಗೆ ಹರಿಜನರು ಬೇಕಾದರೆ, ಅವರು ಹರಿಜನರನ್ನು

ಗೌರವದಿಂದ ದೇವಸ್ಥಾನಗಳಿಗೆ ಕರೆದೊಯ್ಯಲಿ. ಇಲ್ಲದಿದ್ದರೆ ಆ ಮುಹೂರ್ತ ಬರುವವರೆಗೆ ಹರಿಜನರು ತಮ್ಮ ಗುಡಿಸಲುಗಳಲ್ಲಿಯೇ ಕುಳಿತು ತಮ್ಮ ಭಕ್ತಿ ಗಂಗೆಯಿಂದಲೇ ಅವನ್ನು ಪಾವನಗೊಳಿಸಲಿ. ಯಾವ ದೇವಾಲಯದ ಮುಂದೆಯೂ ಅವರು ಸತ್ಯಾಗ್ರಹ ಹೂಡುಬೇಕಾಗಿಲ್ಲ. ನನ್ನ ಅಭಿಪ್ರಾಯದಲ್ಲಿ ಈ ಸತ್ಯಾಗ್ರಹದಲ್ಲಿ ಯಾವ ಪುರುಷಾರ್ಥವೂ ಇಲ್ಲ. ಹರಿಜನರಿಗೆ ಸತ್ಯಾಗ್ರಹ ಬೇಡ ಅದು ಧರ್ಮ ವಿರುದ್ಧ, ಪಾಪಕರ, ಖಂಡನಾರ್ಹ”

ಹರಿಜನರು ತಮ್ಮ ಹಕ್ಕುಬಾಧ್ಯತೆಗಳನ್ನು ಉತ್ತಮರ ಮನ ಒಲಿಸಿ ತೆಗೆದುಕೊಳ್ಳಬೇಕೆಂಬುದು ಮಹಾತ್ಮರ ಅಭಿಪ್ರಾಯವಾಗಿತ್ತು. ಯಾವ ಕಾರ್ಯದಿಂದಲೂ ಮೊದಲು ಇದ್ದದಕ್ಕಿಂತ ಹೆಚ್ಚು ಬಿಕ್ಕಟ್ಟು ಉಂಟಾಗುವುದನ್ನು ಗಾಂಧಿಯವರು ಒಪ್ಪುತ್ತಿರಲಿಲ್ಲ. ಹರಿಜನರು ಬಲಾತ್ಕಾರವಾಗಿ ದೇವಾಲಯಗಳಿಗೆ ಹೋಗುವುದಾಗಲಿ, ಅಥವ ಅವರು ಬಂದರೆಂದು ಉತ್ತಮರು ಆ ದೇವಾಲಯಗಳನ್ನು ತ್ಯಜಿಸುವುದಾಗಲಿ ಗಾಂಧಿಯವರ ಮಾರ್ಗಕ್ಕೆ ಅನುಸಾರವಾದುದಲ್ಲ. ಒಂದುಕಡೆ ಗಾಂಧಿಯವರು “ಹರಿಜನರಂತೆ ಇತರರೂ ಹಿಂದು ಸಮಾಜಕ್ಕೆ ಆವಶ್ಯಕ” ಎಂದು ಹೇಳಿದ್ದಾರೆ. ಹರಿಜನರು, ಹಕ್ಕಿಗೆ ಹೋರಾಡುವುದಕ್ಕಿಂತ ಕರ್ತವ್ಯ ಮಾಡುವುದರಲ್ಲಿ ಹೆಚ್ಚು ಶ್ರದ್ಧೆ ತೋರಿಸಬೇಕೆಂದು ಒತ್ತಿ ಹೇಳಿದ್ದಾರೆ. ಒಂದುಸಲ ಒಬ್ಬ ವಿದ್ಯಾವಂತಹರಿಜನ, ಹಕ್ಕಿನ ವಿಚಾರ ಪ್ರಾಸ್ತಾಪಿಸಿದಾಗ ಗಾಂಧಿ “ನೀವು ನಿಜವಾಗಿ ಹರಿಜನ ಸೇವಕರಾಗಿದ್ದರೆ ಹೀಗೆ ಇಂಗ್ಲೀಷ್ ಕಲಿತು ಪಟ್ಟಣದಲ್ಲಿ ಕುಳಿತು ಹರಿಜನರ ಹೆಸರಿನಲ್ಲಿ ಹೆಚ್ಚು ಹಕ್ಕಿಗೆ ಹೋರಾಡುತ್ತಿರಲಿಲ್ಲ. ನೀವು ಹಳ್ಳಿಯಲ್ಲಿ ಹೋಗಿ ಅವರ ಸೇವಕರಾಗಿರುತ್ತಿದ್ದಿರಿ” ಎಂದು ಎಚ್ಚರಿಸಿದ್ದರು.

## ಗಾಂಧಿಯವರೂ ವರ್ಣಾಶ್ರಮ ಧರ್ಮವೂ

ಮಹಾತ್ಮ ಗಾಂಧಿಯವರು ತಮ್ಮ ದೀರ್ಘಕಾಲದ ರಾಜಕೀಯ ಸಾಮಾಜಿಕ ಚಟುವಟಿಕೆಗಳಲ್ಲಿ ಭಾರತದೇಶದ ಎಲ್ಲ ಪ್ರಶ್ನೆಗಳನ್ನೂ ಕುರಿತು ತಮ್ಮ ಅಭಿಪ್ರಾಯಗಳನ್ನೂ ಬೋಧನೆಗಳನ್ನೂ ವ್ಯಕ್ತಪಡಿಸಿದ್ದಾರೆ. ಭಾರತದ ವರ್ಣಾಶ್ರಮ ಧರ್ಮವ್ಯವಸ್ಥೆಯನ್ನು ಕುರಿತು

ಗಾಂಧಿಯವರು ಅನೇಕ ಸಿದ್ಧಾಂತಗಳನ್ನು ನುಡಿದಿದ್ದಾರೆ. ಕಾಲ ಕಾಲಕ್ಕೆ ಆ ಸಿದ್ಧಾಂತಗಳನ್ನು ಹೇಳುವಾಗ ಗಾಂಧಿಯವರ ಮನಸ್ಸೂ. ಅನುಭವವೂ ಪರಿಸ್ಥಿತಿಗೆ ಅನುಸಾರವಾಗಿ ಬೆಳೆಯುತ್ತಾ ಪರಿಪಕ್ವ ವಾಗುತ್ತಾ ಬಂದಿದೆ. ೧೯೨೦ ರಲ್ಲಿ ಹೇಳಿದ ಅಭಿಪ್ರಾಯಗಳಿಂದ ೧೯೪೬ ಕ್ಕೆ ಬಹಳ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಅವರ ಅಭಿಪ್ರಾಯಗಳ ಸೂಕ್ಷ್ಮಸಾರಾಂಶವನ್ನು ಈ ಲೇಖನದಲ್ಲಿ ಕೊಡ ಲಾಗಿದೆ.

## ವರ್ಣಗಳೆಂದರೇನು ?

" ನಾಲ್ಕು ವರ್ಣಗಳು ಮಾತ್ರವೇ ಮುಖ್ಯವಾದುದೂ ಆವಶ್ಯಕ ವಾದುದೂ ಸ್ವಾಭಾವಿಕವಾದುದೂ ಎಂದು ನಾನು ಭಾವಿಸುತ್ತೇನೆ. ಹುಟ್ಟುವಾಗಲೇ ಪ್ರತಿಯೊಬ್ಬ ಮನುಷ್ಯನೂ ತನ್ನ ತನ್ನ ವರ್ಣದಲ್ಲಿ ಹುಟ್ಟುತ್ತಾನೆಂದೂ ನಾನು ನಂಬುತ್ತೇನೆ. ಈಗ ಯಾವುದು ಪ್ರಚಾರದಲ್ಲಿ ದೆಯೋ ಅದಕ್ಕೂ ಮೂಲ ವರ್ಣಾಶ್ರಮಗಳಿಗೂ ಸಂಬಂಧವೇ ಇಲ್ಲ. ಇಂದಿನ ಜಾತಿ ಅಂದಿನ ವರ್ಣಾಶ್ರಮದ ಕೆಟ್ಟರೂಪ. ನಾಲ್ಕು ವರ್ಣಗಳೂ ಒಂದೇ ಸಮನಾದ ಯೋಗ್ಯತೆಯವು. ಇದರಲ್ಲಿ ಶ್ರೇಷ್ಠ ಕನಿಷ್ಠ ಇಲ್ಲ. ವರ್ಣಗಳ ಮುಖ್ಯ ತಿರುಳು ಕರ್ತವ್ಯ. ಜನ್ಮದಿಂದ ವರ್ಣ ಎಂದೂ ನಾನು ಹೇಳಿದ್ದೇನೆ ಶೂದ್ರನು ವೈಶ್ಯನಾಗುವುದೂ ಸಾಧ್ಯ ವೆಂದೂ ಹೇಳಿದ್ದೇನೆ. ಆದರೆ ವೈಶ್ಯನ ಕಸಬನ್ನು ಅನುಸರಿಸಲು ಅವನು ವೈಶ್ಯನೇ ಆಗಬೇಕಾದುದಿಲ್ಲ. ಬ್ರಾಹ್ಮಣನ ಕಸಬನ್ನು ಅನುಸರಿಸುವ ವನು ಮುಂದಲ ಜನ್ಮದಲ್ಲಿ ಬ್ರಾಹ್ಮಣನೇ ಆಗುತ್ತಾನೆ.

' ವರ್ಣಾಶ್ರಮ ಸರಳವಾದುದು, ಸುಲಭವಾದುದು. ಈ ಮಾತಿಗೆ ನಮ್ಮ ಪೂರ್ವಿಕರ ಕಸಬನ್ನು ನಾವು ಅನುಸರಿಸುವುದೆಂದು ಅರ್ಥ. ಆ ಕಸಬಿನಲ್ಲಿ ನಮ್ಮ ಆತ್ಮ ಗೌರವಕ್ಕೆ, ನೀತಿಗೆ ಚ್ಯುತಿ ಇಲ್ಲದಿದ್ದರೆ ತೀರಿತು. ಆ ಕಸಬನ್ನು ನಮ್ಮ ಜೀವನಕ್ಕಾಗಿ ಮಾತ್ರವೇ ನಾವು ಅನು ಸರಿಸಬೇಕೇ ಹೊರತು ಧನಿಕರಾಗುವುದಕ್ಕಲ್ಲ. ನಾವೆಲ್ಲರೂ ನಮ್ಮ ವರ್ಣಗಳ ಕಸಬನ್ನು ಅನುಸರಿಸಿದರೆ ನಮ್ಮ ದುರಾಸೆ ಕಡಿಮೆಯಾಗು ವುದು. ದುರಾಸೆಯಿಂದ ನಮ್ಮ ಮನಸ್ಸನ್ನು ಹಿಂದಿರುಗಿಸಿ ಭಗವಂತನ ಕಡೆ ತಿರುಗಿಸಬಹುದು.

## ವರ್ಣಾಶ್ರಮದ ಲಾಭ

'ವರ್ಣಾಶ್ರಮ ಧರ್ಮ ಮನುಷ್ಯನಿಗೆ ಕರ್ತವ್ಯವನ್ನು ನಿಯಮಿಸುತ್ತದೆ ಮನುಷ್ಯನು ಜನ್ಮವೆತ್ತಿರುವುದು ಧನಸಂಪಾದನೆಗಾಗಿ ಮಾತ್ರವೇ ಅಲ್ಲ. ಒಂದು ಕಾಲದಲ್ಲಿ ಈ ಧರ್ಮದಿಂದ ಬಹಳ ಪ್ರಯೋಜನವಿತ್ತು. ಕುಶಲ ವಿದ್ಯೆ ವಂಶಪಾರಂಪರ್ಯವಾಗಿ ಬರುತ್ತಿದ್ದಿತು. ಪೈಪೋಟಿ ಕಡಿಮೆಯಾಗಿದ್ದಿತು. ವರ್ಣಾಶ್ರಮದ ಕಾಲದಲ್ಲಿ ಯಾರೊಬ್ಬರೂ ದಿವಾಳಿಯಾಗುವಂತಿರಲಿಲ್ಲ. ಟ್ರೇಡ್‌ಗಿಲ್ಡ್‌ನಿಂದ ಯಾವ ಸಹಾಯವಾಗುತ್ತಿದ್ದಿತೋ ವರ್ಣಾಶ್ರಮ ಧರ್ಮವೂ ಆ ಕಾರ್ಯವನ್ನು ಮಾಡುತ್ತಿದ್ದಿತು.

'ಭಾರತದ ಸಾಮಾಜಿಕ ಜೀವನದಲ್ಲಿ ವರ್ಣಾಶ್ರಮಧರ್ಮ ದೊಡ್ಡ ಪ್ರಯೋಗ. ಅದನ್ನು ನಾವು ದೋಷರಹಿತವಾಗಿ ಮಾಡಿದರೆ ಈ ಪೈಪೋಟಿಯ ಜಗತ್ತಿಗೇ ಅದನ್ನು ಸರ್ವೌಷಧಿಯಾಗಿ ಕೊಡಬಹುದು.

"ಭಾರತದ ಅಂದಿನ ವರ್ಣಾಶ್ರಮ ಧರ್ಮದಿಂದ ಧಾರ್ಮಿಕ ಮಾತ್ರವೇ ಅಲ್ಲ ರಾಜಕೀಯ ಸಮಸ್ಯೆಗಳೂ ಪರಿಹಾರವಾಗುತ್ತಿದ್ದವು. ಗ್ರಾಮಸ್ಥರು ಚಾತುರ್ವರ್ಣ ವ್ಯವಸ್ಥೆಯ ಮೂಲಕ ಹೊರಗಿನ ಶತ್ರುಗಳೊಂದಿಗೂ ತಮ್ಮ ರಾಜರೊಂದಿಗೂ ವ್ಯವಹರಿಸುತ್ತಿದ್ದರು. ಇಂತಹ ಅದ್ಭುತವಾದ ವ್ಯವಸ್ಥೆಯನ್ನು ಸ್ಥಾಪಿಸಿದ ದೇಶಕ್ಕೆ, ಸಂವಿಧಾನ ತಂತ್ರ ಪೂರ್ಣವಾಗಿ ಗೊತ್ತಿದ್ದಿತು,

"ಪ್ರತಿಯೊಬ್ಬ ಮನುಷ್ಯನೂ ಕೆಲವು ದೈವದತ್ತವಾದ ಶಕ್ತಿಗಳೊಂದಿಗೆ ಜನಿಸುತ್ತಾನೆಂಬುದು ನನ್ನ ನಂಬಿಕೆ. ಹಾಗೆಯೇ ಕೆಲವು ದೈವದತ್ತವಾದ ಅಸಕ್ತಿಗಳೂ ಅವನಿಗೆ ಅನುವಂಶಿಕ. ಅವುಗಳನ್ನು ಜಯಿಸುವುದು ಸಾಧ್ಯವಿಲ್ಲ. ಆ ಅಶಕ್ತಿಗಳನ್ನು ಎಚ್ಚರಿಕೆಯಿಂದ ಅಭ್ಯಾಸ ಮಾಡಿ ವರ್ಣಾಶ್ರಮಗಳನ್ನು ಹಿಂದಲವರು ಸ್ಥಾಪಿಸಿದರು. ಇದರಿಂದ ಕೆಲವು ಸ್ವಭಾವಗಳಿಗೆ ಕೆಲವು ಕಸಬುಗಳಾದುವು. ಅನವಶ್ಯಕವಾದ ಸ್ಪರ್ಧೆ ಮಾಯವಾಯಿತು. ಹೀಗೆ ಕೆಲವರಿಗೆ ಕೆಲವು ಕಸಬುಗಳು ಅಸಾಧ್ಯವೆಂದು ವರ್ಣಾಶ್ರಮ ಧರ್ಮ ಒಪ್ಪಿದರೂ, ಒಂದು ವರ್ಣ ಶ್ರೇಷ್ಠ ಒಂದು ವರ್ಣ ಕನಿಷ್ಠ ಎಂಬುದನ್ನು ಒಪ್ಪಲಿಲ್ಲ. ಪ್ರತಿ ಒಬ್ಬ

ನಿಗೂ ತನ್ನ ಕಾರ್ಯದ ಫಲ; ಇತರರ ಕಸಬಿಗೆ ಪೈಪೋಟಿಯಿಲ್ಲ. ಈ ದೊಡ್ಡ ಧರ್ಮ ಇಂದು ತನ್ನ ಯೋಗ್ಯತೆಯನ್ನು ಕಳೆದುಕೊಂಡಿದೆ. ವರ್ಣಾಶ್ರಮ ಧರ್ಮದ ನಿಜವಾದ ಅರ್ಥವನ್ನು ತಿಳಿದು ಆಚರಿಸಿದಾಗ ಮಾತ್ರ ನಮ್ಮ ಸಮಾಜ ಆದರ್ಶವಾಗುವುದೆಂದು ನನ್ನ ನಂಬಿಕೆ. ಯಾವುದೋ ಒಂದು ಕಾಲದಲ್ಲಿ ಒಂದು ವರ್ಣ ಹೆಚ್ಚು, ಒಂದು ವರ್ಣ ಕಡಿಮೆ ಎಂದಿದ್ದಿರಬಹುದು. ನಮ್ಮ ಸಾಧನೆಯಿಂದ, ಪೂರ್ವಿಕರಿಂದ ಬಂದ ಈ ಆಸ್ತಿಯಲ್ಲಿಯ ದೋಷಗಳನ್ನು ಸರಿಪಡಿಸಬೇಕು.

## ಜಾತಿಗಳೂ ವರ್ಣಗಳೂ

" ನಾಲ್ಕು ವರ್ಣಗಳ ಹೊರತು ಉಳಿದ ಅಸಂಖ್ಯಾತ ಜಾತಿಗಳು ಸಮಾಜದ ದೋಷ. ಎಷ್ಟು ಬೇಗ ಇವು ಒಂದಾದರೆ ಅಷ್ಟು ಒಳ್ಳೆಯದು. ಈ ಸಾವಿರಾರು ಜಾತಿಗಳಿಂದಲೂ ಪದ್ಧತಿ ಆಚಾರಗಳಿಂದಲೂ ನಿಜ ವಾದ ಧರ್ಮ ಬೆಳೆಯುವುದಿಲ್ಲ. ಹಿಂದೂ ಸಮಾಜವೂ ಬೆಳೆಯುವುದಿಲ್ಲ. ಈ ಅಸಂಖ್ಯಾತ ಜಾತಿಗಳು ನಮ್ಮ ನೆರೆಹೊರೆಯವರಿಗೂ ಒಳ್ಳೆಯ ದಲ್ಲ. ಇಂದಿನ ಜಾತಿಗಳು ಹಿಂದು ವರ್ಣಾಶ್ರಮ ಪದ್ಧತಿಗೆ ತೀರ ವಿರೋಧವಾಗಿವೆ. ಜಾತಿಗೂ ಧರ್ಮಕ್ಕೂ ಸಂಬಂಧವಿಲ್ಲ. ಜಾತಿಯಿಂದ ರಾಷ್ಟ್ರೀಯ ಮತ್ತು ಧಾರ್ಮಿಕ ಭಾವನೆ ಕುಂಠಿತವಾಗುತ್ತದೆ. ಇಂದು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬುದೆಲ್ಲ ಬರಿಯ ಒಂದು ಚಿಹ್ನೆ. ವರ್ಣಗಳ ಗೊಂದಲವೆದ್ದಿದೆ. ಆದುದರಿಂದ ಎಲ್ಲಾ ಹಿಂದೂಗಳೂ ಶೂದ್ರರೆಂದುಕೊಳ್ಳಲಿ. ಹೀಗೆ ಮಾಡುವುದರಿಂದ ಮಾತ್ರ ಬ್ರಾಹ್ಮಣ ಧರ್ಮದ ಸತ್ಯ ಪ್ರಕಟವಾಗಿ ವರ್ಣಾಶ್ರಮ ಧರ್ಮದ ಪುನರುಜ್ಜೀವನ ವಾಗುವುದು. ತನ್ನ ಆಹಾರಕ್ಕಾಗಿ ತಾನು ದುಡಿಯುವುದು ಪ್ರತಿ ಯೊಂದು ವರ್ಣಕ್ಕು ಸಮಾನ ಧರ್ಮ.

## ವರ್ಣವ್ಯವಸ್ಥೆಯೂ ಸಾಮಾಜಿಕ ವ್ಯವಹಾರವೂ

" ಈ ಚಾತುರ್ವರ್ಣ್ಯಗಳನ್ನು ಕರ್ತವ್ಯ ಪಾಲನೆಗಾಗಿ ಮಾಡಿರುವು ದರಿಂದ ಇದು ಎಲ್ಲರನ್ನೂ ಸಮಾಜದಲ್ಲಿ ಸಮಾನರನ್ನಾಗಿ ಮಾಡಿವೆ. ನಾಲ್ಕು ವರ್ಣದವರೂ ಜನ ಸೇವೆಗೆಯೇ ಜನ್ಮಿಸಿರುವುದು. ಬ್ರಾಹ್ಮಣ ಬುದ್ಧಿಯಿಂದ. ಕ್ಷತ್ರಿಯ ಯುದ್ಧದಿಂದ, ವೈಶ್ಯ ವ್ಯಾಪಾರದಿಂದ, ಶೂದ್ರ

ದೇಹಶ್ರಮದಿಂದ. ಅಂದಮಾತ್ರಕ್ಕೆ ಬ್ರಾಹ್ಮಣನು ದೇಹಶ್ರಮ ಪಡದಿರ ಬೇಕೆಂದಾಗಲಿ ಅಪಾಯದಲ್ಲಿರುವವರನ್ನು ರಕ್ಷಿಸದಿರಬೇಕೆಂಬುದಾಗಲಿ ಅಲ್ಲ. ಜನ್ಮದಿಂದ ಬ್ರಾಹ್ಮಣನು ಜ್ಞಾನದ ಪೂಜಾರಿ ಎಂದು ಮಾತ್ರ ಅರ್ಥ. ಜ್ಞಾನ ಪ್ರಚಾರಕ್ಕೆ ವಂಶಪಾರಂಪರ್ಯವಾಗಿ ಅವನಿಗೆ ಅರ್ಹತೆ ಬಂದಿದೆ ಎಂದು. ಹಾಗೆಯೇ ಎಲ್ಲಾ ಜ್ಞಾನವನ್ನೂ ಶೂದ್ರನೂ ಸಂಪಾದಿ ಸಲು ಯಾರ ಅಡ್ಡಿಯೂ ಇಲ್ಲ. ಆದರೆ ಅವನು ಸಮಾಜವನ್ನು ದೇಹ ಶ್ರಮದಿಂದ ಚೆನ್ನಾಗಿ ಸೇವಿಸಬಲ್ಲನಾದುದರಿಂದ, ಇತರರ ಶಕ್ತಿಗಳನ್ನು ಕಂಡು ಅವನು ಅಸೂಯೆ ಪಡಬೇಕಾದುದಿಲ್ಲ ವರ್ಣಾಶ್ರಮವೆಂದರೆ ಸಂಯಮ ಮತ್ತು ಶಕ್ತಿಯ ಶೇಖರಣೆ."

ಹೀಗೆ ಚಾತುರ್ವರ್ಣ್ಯಗಳನ್ನು ಮಾತ್ರ ಒಪ್ಪಿದುದರಿಂದ ಮಹಾತ್ಮ ಗಾಂಧಿಯವರು ಐದನೆ ವರ್ಣಕ್ಕೆ ಅವಕಾಶ ಕೊಡಲಿಲ್ಲ. "ಹಿಂದೂ ಧರ್ಮ ಇದನ್ನು ಹೇಳಿಲ್ಲ. ಹೇಳಿದ್ದರೂ ಇದು ಒಂದು ರೋಗ. ಈ ರೋಗವನ್ನು ನಾಶಮಾಡಬೇಕು" ಎಂದರು.

"ಅಸ್ಪೃಶ್ಯತಾನಿವಾರಣೆಗೂ ಅಂತರ್ಜಾತೀಯ ವಿವಾಹ ಭೋಜನ ಗಳಿಗೂ ಸಂಬಂಧವಿಲ್ಲ. ಅಜ್ಞರು ಮಹಾತ್ಮ ಗಾಂಧಿಯವರ ಅಸ್ಪೃಶ್ಯತಾ ನಿವಾವರಣಾ ಚಳುವಳಿಗೆ ಅಂತರ್ಜಾತಿ ವಿವಾಹ ಭೋಜನ ಆವಶ್ಯಕ ವೆಂದು ಭಾವಿಸುತ್ತಾರೆ. ಇದು ತಪ್ಪು. ಒಂದುಸಲ ಗಾಂಧಿ ಹೀಗೆ ಹೇಳಿದರು. "ಅಂತರ್ಜಾತಿ ವಿವಾಹ ಭೋಜನ ಸಮಸ್ಯೆಗಳು ಅಸ್ಪೃ ಶ್ಯರಿಗೆ ಮಾತ್ರವೇ ಅಲ್ಲ. ಎಲ್ಲಾ ಹಿಂದುಗಳಿಗೂ ಅನ್ವಯಿಸುತ್ತವೆ. ಅಸ್ಪೃಶ್ಯತಾ ನಿವಾರಣೆಯ ಕೆಲಸಗಾರರು, ಅಂತರ್ಜಾತಿ ವಿವಾಹ ಭೋಜನಗಳನ್ನು ಅಶ್ಪೃಶ್ಯತಾ ನಿವಾರಣೆಯ ಅಂಗವಾಗಿ ಮಾಡ ಬೇಕೆಂಬುದು ನನ್ನ ಅಭಿಪ್ರಾಯವಲ್ಲ. ಹೇಗಿದ್ದರೂ ಈ ಸುಧಾರಣೆ ಬರುತ್ತಲೇ ಇದೆ. ಹಿಂದು ಧರ್ಮವು ಅಂತಜಾಂತೀಯ ವಿವಾಹಕ್ಕೂ ಭೋಜನಕ್ಕೂ ಅಡ್ಡಿ ಪಡಿಸಿಲ್ಲ. ಪ್ರಾಯಶಃ ಹಿಂದು ಧರ್ಮ ಅವನತಿ ಯಲ್ಲಿದ್ದ ಕಾಲದಲ್ಲಿ ಹಿಂದು ಧರ್ಮದ ಬಿಗಿ ಸಡಿಲವಾಗದಿರಲೆಂದು ಈ ನಿಯಮವನ್ನು ಇಟ್ಟುಕೊಂಡಿದ್ದರೆಂದು ಕಾಣುತ್ತದೆ. ಆದುದರಿಂದ ಅವರು ಆಗ ಇದನ್ನು ವಿರೋಧಿಸಿದರು. ಹಿಂದು ಧರ್ಮದಲ್ಲಿ ನಿವೃತ್ತಿ

ಮಾರ್ಗಕ್ಕೆ ಪ್ರಶಸ್ತಿ ಹೆಚ್ಚು. ಆದುದರಿಂದ ಅವರು ದೇಹ ಸುಖವನ್ನು ಖಂಡಿಸಿದರು. ತನ್ನ ಮಗನೊಂದಿಗೆ ಸಹ ಊಟ ಮಾಡಬೇಕೆಂಬುದು ಹಿಂದುವಿಗೆ ಧರ್ಮವಲ್ಲ. ಬೇಕಾದರೆ ಮಾಡಬಹುದು. ಬೇಡವಾದರೆ ಬಿಡಬಹುದು. ಯಾವ ಕ್ಷೇತ್ರದಿಂದ ಹೆಣ್ಣನ್ನು ಆರಿಸಿಕೊಳ್ಳಬಹುದೋ ಆ ಕ್ಷೇತ್ರವನ್ನು ಸಂಕುಚಿತಮಾಡುವುದರಿಂದ ಸಂಯಮ ಹೆಚ್ಚಾಗುತ್ತದೆ. ಇದರಿಂದ ಆತ್ಮದ ಬೆಳವಣಿಗೆಗೆ ಸಹಾಯವಾಗುತ್ತದೆ. ಆದರೆ ಈ ಸಂಯಮ ವರ್ಣಾಶ್ರಮ ಧರ್ಮದ ನಿಕಷವಲ್ಲ. • ಶೂದ್ರನೊಂದಿಗೆ ಊಟಮಾಡಿದರೂ ಬ್ರಾಹ್ಮಣನು ಬ್ರಾಹ್ಮಣನಾಗಿಯೇ ಉಳಿಯುತ್ತಾನೆ. ಆದರೆ ಅವನು ತನ್ನ ಬ್ರಾಹ್ಮಣ ಕರ್ತವ್ಯದ ಜ್ಞಾನ ಪ್ರಚಾರವನ್ನು ಬಿಡಕೂಡದು. ಆದುದರಿಂದ ಅಂತರಜಾತಿ ವಿವಾಹ ಮತ್ತು ಭೋಜನವನ್ನು ಹಿಂದುಗಳು ಪ್ರತಿಭಟಿಸಿದುದು ತಾವು ಶ್ರೇಷ್ಠರೆಂಬ ದೃಷ್ಟಿಯಿಂದ ಅಲ್ಲ. ಹಿಂದೆ ಹಿಂದೂ ಧರ್ಮದಲ್ಲಿ ಸಂಯಮ ದೃಷ್ಟಿಯಿಂದ ಅಂತರ್ಜಾತಿ ವಿವಾಹ ಮತ್ತು ಭೋಜನವನ್ನು ಪ್ರತಿಬಂಧಿಸಿದರೂ ಇಂದು ಆ ಪ್ರತಿಬಂಧದಿಂದ ಹಿಂದು ಸಮಾಜಕ್ಕೆ ಹಾನಿಯಾಗುತ್ತಿದೆ. ಜನರು ಅವುಗಳ ಮೇಲೆ ದೃಷ್ಟಿಯಿಟ್ಟು ಇತರ ಮುಖ್ಯ ವಿಷಯವನ್ನೇ ಮರೆಯುತ್ತಿದ್ದಾರೆ. ಆದುದರಿಂದ ಅಂತರ್ಜಾತಿ ಭೋಜನಕೂಟ ಎಲ್ಲೆಲ್ಲಿ ಸ್ವಂತ ಇಚ್ಛೆಯಿಂದ ನಡೆಯುತ್ತದೆಯೋ ಅದು ಬಹಳ ಒಳ್ಳೆಯದು. ಅದು ಆರೋಗ್ಯ ಸೂಚನೆ. ಆದರೆ ಈಗ ಅದನ್ನು ಅಖಿಲ ಭಾರತ ಹರಿಜನರ ಪ್ರಶ್ನೆಯಲ್ಲಿ ಒಂದು ಅಂಗ ಮಾಡಲು ನಾನು ಒಪ್ಪುವುದಿಲ್ಲ. ಅಸ್ಪೃಶ್ಯತೆ ಇಂದು ಹಿಂದು ಧರ್ಮವನ್ನು ತಿನ್ನುತ್ತಿದೆ. ಭೋಜನ ಮತ್ತು ವಿವಾಹ ಪ್ರತಿ ಬಂಧಕದಿಂದ ಹಿಂದು ಸಮಾಜ ಕುಂಟಿತವಾಗುತ್ತಿದೆ. ಎರಡೂ ಒಂದೇ ಸಮವಾದ ಅಪಾಯಗಳಲ್ಲ. ಅಸ್ಪೃಶ್ಯತಾ ನಿವಾರಣೆಯ ಜತೆಗೆ ಅಂತರ್ಜಾತಿಯ ವಿವಾಹ ಭೋಜನ ಸಮಸ್ಯೆಗಳನ್ನು ಸೇರಿಸುವುದು ವಿವೇಕವಲ್ಲ. ಇದ್ದಕ್ಕಿದ್ದಂತೆ ಅಸ್ಪೃಶ್ಯತಾ ನಿವಾರಣೆಯಲ್ಲಿ ಈ ಸಮಸ್ಯೆಯನ್ನು ಹೊಸದಾಗಿ ಸೇರಿಸುವುದರಿಂದ ಜನರಿಗೆ ಮೋಸಮಾಡಿದಂತೆ ಆಗುತ್ತದೆ. ಎಲ್ಲಿ ಜನ ಅದಕ್ಕೆ ಸಿದ್ಧರಾಗಿದ್ದಾರೆಯೋ ಅಲ್ಲಿ ಅಂತರ್ಜಾತೀಯ ಭೋಜನಕೂಟ ನಡೆಯಲಿ ಆದರೆ

ಇದನ್ನು ಅಖಿಲ ಭಾರತ ಚಳುವಳಿ ಮಾಡಬಾರದು. ಊಟ ತಿಂಡಿಯ ಪ್ರಶ್ನೆಗೆ ಸಾಮಾಜಿಕ ಪ್ರಾಮುಖ್ಯತೆ ಇಲ್ಲ."

## ಅಭಿಪ್ರಾಯದಲ್ಲಿ ಪರಸ್ಪರ ವಿರೋಧವಿಲ್ಲ

ಮಿತ್ರರು ಒಂದು ಸಲ ಗಾಂಧಿಯವರಿಗೆ "ನೀವು ಒಂದೆಡೆ ವರ್ಣಾಶ್ರಮದಲ್ಲಿ ಅಂತರ್ಜಾತಿ ವಿವಾಹ ಭೋಜನಗಳಿಗ ಪ್ರತಿ ಬಂಧಕ ವಿಲ್ಲವೆಂದಿದ್ದೀರಿ. ಮತ್ತೊಂದೆಡೆಗೆ ವರ್ಣಾಶ್ರಮ ಧರ್ಮವನ್ನು ಅನು ಸರಿಸಿದರೆ, ವಿವಾಹವನ್ನು ತಮ್ಮ ಪಂಗಡದಲ್ಲಿಯೇ ಮಾಡಿಕೊಳ್ಳಬೇಕೆ ನ್ನುತ್ತೀರಿ. ಇವು ಒಂದಕ್ಕೊಂದಕ್ಕೆ ವಿರುದ್ಧವಾದ ಅಭಿಪ್ರಾಯಗಳಲ್ಲವೇ" ಎಂದು ಕೇಳಿದರು ಗಾಂಧಿಯವರು "ಇಲ್ಲ. ಪರಸ್ಪರ ವಿರೋಧಗಳಿಲ್ಲ. ವಿವಾಹ ಮತ್ತು ಭೋಜನ ವಿಷಯದಲ್ಲಿ ತಾವಾಗಿಯೇ ಸಂಯಮ ವನ್ನಿಟ್ಟುಕೊಳ್ಳುವುದು ನಮ್ಮ ದೇಹದಂಡನೆಗೆ ಆವಶ್ಯಕ. ತಾನೇ ಇಟ್ಟುಕೊಳ್ಳುವ ಸಂಯಮದಿಂದ ಆತ್ಮದ ಉನ್ನತಿಯಾಗುತ್ತದೆ" ಎಂದರು.

ಅಂತರ್ಜಾತೀಯ ವಿವಾಹ, ಭೋಜನದ ಪ್ರಶ್ನೆಯಲ್ಲಿ ಗಾಂಧಿಯ ವರ ಮನಸ್ಸು ಸಹ ದಿನ ದಿನಕ್ಕೂ ಬೆಳೆಯತೊಡಗಿತ್ತು. "ಪ್ರಾಂತ್ಯ ಮತ್ತು ಜಾತಿಗಳ ಸಂಕುಚಿತ ಭಾವನೆಯನ್ನು ಬಿಡಬೇಕು. ಭಾರತ ಒಂದಾಗಬೇಕಾದರೆ ಈ ದೇಶದಲ್ಲಿ ಒಬ್ಬರೊಂದಿಗೊಬ್ಬರು ಊಟ ಮಾಡದ, ಭೋಜನ ಮಾಡದ ಅನೇಕ ಗುಂಪುಗಳಿದ್ದರೆ ಸಾಧ್ಯವಿಲ್ಲ. ಈ ದುಷ್ಟ ಪದ್ಧತಿಯಲ್ಲಿ ಧರ್ಮವಿಲ್ಲ. ವ್ಯಕ್ತಿಗಳು ಈ ಸುಧಾರಣೆಯನ್ನು ಪ್ರಾರಂಭಿಸಬೇಕು. ವ್ಯಕ್ತಿಗಳು ತಮ್ಮ ಪ್ರಭಾವದಿಂದ ಸ್ಥಾಪಿಸಿದ ಹೊರತು ಸುಧಾರಣೆಗಳು ನಡೆಯುವುದಿಲ್ಲ." ಗಾಂಧಿಯವರು ಬಾಲ್ಯ ವಿವಾಹವನ್ನು ವಿರೋಧಿಸುತ್ತಾ "ಪ್ರೌಢವಿವಾಹಕ್ಕೆ ಬ್ರಾಹ್ಮಣರ ಹೆಣ್ಣಿನ ತಂದೆತಾಯಿಗಳು ಒಪ್ಪದಿದ್ದರೆ, ಗಂಡು ಬೇರೆ ಜಾತಿಯಿಂದ ಲಾದರೂ ವಯಸ್ಸಾದ ಹೆಣ್ಣನ್ನು ಮದುವೆಯಾಗಬೇಕೆಂದು" ಹೇಳಿದ್ದಾರೆ.

"ಅಸ್ಪೃಶ್ಯತಾ ನಿವಾರಣೆಯ ಪ್ರಶ್ನೆಯಲ್ಲಿ ಅಂತರ್ಜಾತಿ ವಿವಾಹ ಭೋಜನಗಳು ಆವಶ್ಯಕವಿಲ್ಲವೆಂದು ನೀವು ಹೇಳಿದಿರೆಲ್ಲಾ" ಎಂಬು

ದಾಗಿ ಗಾಂಧಿಯವರನ್ನು ಕೇಳಿದಾಗ ಅವರು "ನಾನು ಹೇಳಿದುದು ಒಟ್ಟಾಗಿ ಸಮಾಜಕ್ಕೆ. ಆದರೆ ಕಾಂಗ್ರೆಸ್ ಕೆಲಸಗಾರರು ಅಸ್ಪೃಶ್ಯತೆ ಯನ್ನು ಎಲ್ಲ ದೃಷ್ಟಿಯಿಂದಲೂ ನಿರ್ಮೂಲ ಮಾಡಬೇಕು" ಎಂದರು. ಹಿಂದೆ ಹೇಗಾದರೂ ಹೇಳಿರಲಿ. ೧೯೪೨ ರಿಂದ ಈಚೆಗೆ ಗಾಂಧಿಯವರು ಭಾರತದಲ್ಲಿ ಜಾತಿರಹಿತ ಸಮಾಜವಿರಬೇಕೆಂದು ಘಂಟಾಘೋಷವಾಗಿ ಹೇಳತೊಡಗಿದರು. ಈ ದೃಷ್ಟಿಯಿಂದ ಅಂತರ್ಜಾತೀಯ ವಿವಾಹಗಳು ಸಹಾಯಕವಾಗುವುದರಿಂದ ಗಾಂಧಿಯವರು ಅಂತರ್ಜಾತಿ ವಿವಾಹ ಗಳನ್ನು ಪ್ರೋತ್ಸಾಹಿಸತೊಡಗಿದರು. "ಸೇವಾಗ್ರಾಮದಲ್ಲಿ ವಿವಾಹ ನಡೆಯಬೇಕಾದರೆ ಹೆಣ್ಣಾಗಲಿ ಅಥವ ಗಂಡಾಗಲಿ ಹರಿಜನರಾಗಿರ ಬೇಕು" ಎಂದೇ ನಿಯಮ ಮಾಡಿದರು.

ಮಹಾತ್ಮ ಗಾಂಧಿಯವರ ಇಚ್ಛೆಯಂತೆ ಸೇವಾಗ್ರಾಮದಲ್ಲಿ ಆಗಿಂ ದಾಗ್ಗೆ ಅಂತರ್ಜಾತೀಯ ವಿವಾಹಗಳು ನಡೆಯತೊಡಗಿದ್ದವು. ಅಂತಹ ವಿವಾಹಗಳನ್ನು ಮಹಾತ್ಮ ಗಾಂಧಿಯವರೇ ಆಶೀರ್ವದಿಸುತ್ತಿದ್ದರು. ಹೀಗೆ ಕೆಲವಾರು ವಿವಾಹಗಳು ನಡೆದನಂತರ ಮಿತ್ರರೊಬ್ಬರು ಗಾಂಧಿ ಯವರಿಗೆ ಹೀಗೆ ಬರೆದರು "ಹರಿಜನ ಸ್ತ್ರೀಯರನ್ನು ಸವರ್ಣಿಗಳು ಮದುವೆಯಾಗುವುದು ಈಗ ಪದ್ಧತಿಯಾಗಿದೆ. ಇದರಿಂದ ಹರಿಜನರ ವಿಷಯದಲ್ಲಿ ಜನರಿಗಿರುವ ತಿರಸ್ಕಾರ ಕಡಮೆಯಾಗಿದೆಯೆಂಬುದು ವ್ಯಕ್ತ ವಾದರೂ, ಅಂತಹ ವಿವಾಹದಿಂದ ಹರಿಜನರ ಸೇವೆ ಆಗುವುದಿಲ್ಲ. ಆ ಒಂದು ಹೆಣ್ಣು ಉದ್ಧಾರವಾಗಬಹುದು. ಅದರ ಬದಲು ವಿದ್ಯಾವತಿಯ ರಾದ ಸನಾತನಿ ಕನ್ಯೆಯರು ಹರಿಜನ ಯುವಕರನ್ನು ವಿವಾಹವಾಗ ಬೇಕು. ಹೀಗೆ ಆ ಕನ್ಯೆ ಹರಿಜನರ ನಡುವೆ ಬಂದು ವಾಸಿಸಿದರೆ ಹರಿಜನರು ಆಕೆಯಿಂದ ಅನೇಕ ವಿಷಯಗಳನ್ನು ತಿಳಿದು ಬುದ್ಧಿವಂತ ರಾಗುತ್ತಾರೆ." ಈ ಸೂಚನೆಗೆ ಗಾಂಧಿ ಹೀಗೆ ಪ್ರತ್ಯುತ್ತರವಿತ್ತರು.

"ಹರಿಜನ ವಿದ್ಯಾವತಿ ಹುಡುಗಿ ಸನಾತನಿ ಹಿಂದುವನ್ನು ಮದುವೆ ಯಾದರೆ ಅವರಿಬ್ಬರೂ ಸಮಾಜದ ಸೇವೆಯಲ್ಲಿಯೇ ತೊಡಗಬೇಕು. ದೇಹ ಸುಖ ಅಂತಹ ವಿವಾಹದ ಗುರಿ ಅಲ್ಲವೇ ಅಲ್ಲ. ದೇಹ ಸುಖ ತಪ್ಪು. ನಾನು ಅದನ್ನು ಪ್ರೋತ್ಸಾಹಿಸುವುದಿಲ್ಲ. ವಿದ್ಯಾವತಿಯಾದ

ಹರಿಜನ ಕನ್ಯೆ ಒಬ್ಬಳಾದರೂ ಉಚ್ಚಧ್ಯೇಯವನ್ನಿಟ್ಟುಕೊಂಡು ಸನಾತನಿ ಹಿಂದುವನ್ನು ಮದುವೆಯಾದರೆ, ಅದರಿಂದ ಹಿಂದು ಸನಾತನಗಳಿಗೂ ಹರಿಜನಗಳಿಗೂ ಇಬ್ಬರಿಗೂ ಒಳ್ಳೆಯದು. ಅದು ಆದರ್ಶವಾದ ಮೇಲು ಸಂಗ್ತಿಯಾಗುವುದು. ಆ ಹರಿಜನ ಕನ್ಯೆ ಯೋಗ್ಯಳಾದರೆ, ಹೂವಿನ ಸುಗಂಧದಂತೆ ಅವಳ ನಡತೆ ಎಲ್ಲೆಲ್ಲೂ ಹರಡುವುದು. ಇತರರೂ ಆಕೆಯ ಮಾರ್ಗವನ್ನು ಅನುಸರಿಸುವರು. ಅಂತಹ ವಿವಾಹಗಳಿಂದ ಸಮಾಜ ದಲ್ಲಿ ಗಾಬರಿಯಾಗುವುದು ತಪ್ಪುವುದು. ಈ ಬಗೆಯ ವಿವಾಹದಿಂದ ಏನೂ ತಪ್ಪಿಲ್ಲವೆಂಬುದು ಸಮಾಜಕ್ಕೆ ತಿಳಿಯುವುದು. ಅಂತಹ ವಿವಾಹ ದಿಂದ ಜನಿಸುವ ಮಕ್ಕಳಿಂದಲೂ ಅಸ್ಪೃಶ್ಯತಾನಿವಾರಣೆಗೆ ಸಹಾಯ ವಾಗುವುದು. ಯಾವ ಸುಧಾರಣೆಯೂ ಬಹಳ ನಿಧಾನ. ಆ ನಿಧಾನ ಕ್ಕಾಗಿ ಅತೃಪ್ತಿಪಡುವುದು, ಸುಧಾರಣೆ ಹೇಗೆ ನಡೆಯುತ್ತದೆ ಎಂಬುದರ ಅಜ್ಞಾನ.

“ಸನಾತನ ಹಿಂದು ಕನ್ನೆಯರು, ಉತ್ತಮರಾದ ಹರಿಜನ ಯುವಕರನ್ನು ಮದುವೆಯಾಗುವುದು ಇಷ್ಟವಾದುದು. ಅದೇ ಉತ್ತಮ ವೆಂದು ಹೇಳಲು ನಾನು ಹಿಂದೆಗೆಯುತ್ತೇನೆ. ಹಾಗೆ ಹೇಳಿದರೆ ಪುರುಷರಿಗಿಂತ ಸ್ತ್ರೀ ಕೀಳು ಎಂದಂತಾಗುತ್ತದೆ. ಆದುದರಿಂದ ಈಗ, ಹರಿಜನ ಕನ್ಯೆಯೊಂದಿಗೆ ಸನಾತನಿ ಹಿಂದುವಿನ ವಿವಾಹಕ್ಕಿಂತ, ಸನಾತನಿ ಕನ್ಯೆಯೊಂದಿಗೆ ಹರಿಜನ ಯುವಕನ ವಿವಾಹ ಹೆಚ್ಚು ಉತ್ತಮವೆಂದು ನಾವು ಒಪ್ಪುತ್ತೇನೆ. ನನ್ನ ಮಾತು ನಡೆಯುವುದಿದ್ದರೆ ನನ್ನ ಪ್ರಭಾವಕ್ಕೆ ಒಳಗಾಗಿರುವ ಎಲ್ಲಾ ಸನಾತನಿ ಕನ್ಯೆಯರಿಗೂ “ಹರಿಜನ ವರನನ್ನೇ ಆರಿಸಿಕೊಳ್ಳಿ” ಎಂದು ಹೇಳುತ್ತಿದ್ದೆ. ಇದು ಸಾಧ್ಯವಿಲ್ಲ ವೆಂಬುದು ನನಗೆ ಅನುಭವದಿಂದ ಗೊತ್ತು. ಹಳೆಯ ಅಭಿಮಾನಗಳು ಬೇಗ ಸಾಯುವುದಿಲ್ಲ. ಅಂತಹ ದುರಭಿಮಾನವನ್ನು ತಿರಸ್ಕರಿಸಿ ನಗುವುದೂ ಸಾಧ್ಯವಿಲ್ಲ. ಅವನ್ನು ಶಾಂತಿಸಹನೆಯಿಂದ ಜಯಿಸಬೇಕು. ಒಬ್ಬ ಸನಾತನಿಕನ್ಯೆ ಹರಿಜನನನ್ನು ಮದುವೆಯಾಗುವುದರಿಂದಲೇ ತನ್ನ ಕರ್ತವ್ಯ ಮುಗಿಯಿತೆಂದು ಭಾವಿಸಿ ಇಂದ್ರಿಯ ಚಾಪಲ್ಯ, ಸುಖಕ್ಕೆ ಒಳಗಾದರೆ ಮೊದಲಿನ ಸ್ಥಿತಿಗಿಂತ ಇದು ಇನ್ನೂ ಕೇಡು. ಇಬ್ಬ

ರಲ್ಲಿಯೂ ಎಷ್ಟರಮಟ್ಟಿಗೆ ಸೇವಾಬುದ್ಧಿ ಬೆಳೆಯುತ್ತದೆ, ಎಂಬುದೇ ಮದುವೆಯ ಒರೆಗಲ್ಲು. ಇಂತಹ ವಿವಾಹಗಳ ವಿಷಯದಲ್ಲಿರುವ ವಿರೋಧ, ಒಂದೊಂದು ಅಂತರ್ಜಾತೀಯ ವಿವಾಹದಿಂದಲೂ ಕಡಿಮೆ ಯಾಗುವುದು. ಕೊನೆಯಲ್ಲಿ ಉಳಿಯುವುದು ಒಂದೇ ಜಾತಿ. ಭಂಗಿ ; ಅಂದರೆ ಎಲ್ಲಾ ಕೊಳಕನ್ನೂ ಶುದ್ಧಿಮಾಡುವ ಸುಧಾರಕ. ಆ ದಿನ ಬೇಗ ಬರಲೆಂದು ನಾವು ಪ್ರಾರ್ಥಿಸೋಣ."

"ಬರಿಯ ಆಸೆಯಿಂದ ಏನೂ ಆಗುವುದಿಲ್ಲ. ಇಲ್ಲಿಯವರೆಗೆ ನಾನು ಒಬ್ಬ ಹರಿಜನ ಕನ್ಯೆಯನ್ನೂ ಸನಾತನಿ ಯುವಕನಿಗೆ ಕೊಟ್ಟು ಮದುವೆಮಾಡಿಸಿಲ್ಲ. ಈಗ ಒಂದು ಸನಾತನಿಕನ್ಯೆ, ತನ್ನ ತಂದೆಯು ಆರಿಸಿದ ಒಬ್ಬ ಹರಿಜನ ಯುವಕನನ್ನು ವಿವಾಹವಾಗಲು ಮುಂದೆ ಬಂದಿದ್ದಾಳೆ. ಯುವಕ ಸೇವಾಗ್ರಾಮದಲ್ಲಿ ಶಿಕ್ಷಣ ಪಡೆಯುತ್ತಿದ್ದಾನೆ. ದೇವರ ಇಚ್ಛೆಯಿದ್ದರೆ ಈ ವಿವಾಹ ಬೇಗ ಆಗುವುದು."

೧೯೪೬ ನೇ ಜನವರಿಯಲ್ಲಿ ಮಹಾತ್ಮಾಗಾಂಧಿಯವರು ಮದ ರಾಸಿಗೆ ದಕ್ಷಿಣಭಾರತ ಹಿಂದುಸ್ಥಾನಿ ರಜತೋತ್ಸವಕ್ಕೆ ಬಂದಿದ್ದಾಗ ಮನೋರಮ ಎಂಬ ಆಂಧ್ರಸ್ಮಾರ್ತ ಕನ್ಯೆ ರಾಮಚಂದ್ರ ಎಂಬ ಹರಿಜನ ಯುವಕನನ್ನು ಮದುವೆಯಾಗುವುದಾಗಿ ಬಂದು ಹೇಳಿದಳು. ಗಾಂಧಿ "ಇನ್ನೂ ಸ್ವಲ್ಪಕಾಲ ತಡೆಯಿರಿ, ಒಬ್ಬರಲ್ಲೊಬ್ಬರಿಗೆ ಆದರ ಗೌರವ ಹೀಗೆಯೇ ಇದ್ದರೆ ಅನಂತರ ಮದುವೆಮಾಡಿಕೊಳ್ಳುವಿರಂತೆ" ಎಂದರು. ಆ ವಿವಾಹ ಮಹಾತ್ಮರ ಜೀವಿತ ಕಾಲದಲ್ಲಿಯೇ ಸೇವಾ ಗ್ರಾಮದಲ್ಲಿ ನಡೆಯಬೇಕಾಗಿದ್ದಿತು. ಆದರೆ ಗಾಂಧಿಯವರಿಗೆ ಯಾವಾ ಗಲೂ ಕೈತುಂಬ ಕಾರ್ಯವಿದ್ದುದರಿಂದ ಅದು ಸಾಧ್ಯವಾಗಿರಲಿಲ್ಲ. ೧೯೪೮ ನೇ ಜನವರಿ ೩೦ ರಲ್ಲಿ ಗಾಂಧಿಯವರ ಕೊಲೆಯಾಯಿತು. ಮಾರ್ಚಿಯಲ್ಲಿ ಸೇವಾಗ್ರಾಮದಲ್ಲಿ ನಡೆದ ರಚನಾತ್ಮಕ ಕಾರ್ಯಕರ್ತರ ಸಮ್ಮೇಳನದ ಕಾಲದಲ್ಲಿ ಆ ವಿವಾಹ ನಡೆಯಿತು.

# ೯. ಗಾಂಧೀಜಿಯ ಬ್ರಹ್ಮಚರ್ಯ

ಮಹಾತ್ಮಗಾಂಧಿಯವರನ್ನು ಸಾಧಾರಣವಾಗಿ ಶ್ರೀರಾಮಚಂದ್ರನಿಗೂ ಬುದ್ಧದೇವನಿಗೂ ಹೋಲಿಸುವುದು ವಾಡಿಕೆ. ಗಾಂಧಿಯವರು ನಡೆಸಿದ ಸಂಸಾರಜೀವನ, ಗೃಹಸ್ಥಜೀವನ, ಬ್ರಹ್ಮಚರ್ಯಜೀವನ, ಅವರನ್ನು ಜ್ಞಾಪಿಸಿಕೊಂಡಾಗಲೆಲ್ಲ ಬುದ್ಧನ ಜ್ಞಾಪಕ ತರುವುದು ಅನಿವಾರ್ಯ. ಇತರ ದೃಷ್ಟಿಗಳಿಂದಲೂ ಗಾಂಧಿಯವರನ್ನು ಶ್ರೀರಾಮಚಂದ್ರನಿಗೆ ಹೋಲಿಸುತ್ತೇವೆ. ಅವ್ಯವಸ್ಥಿತವಾದ ಕಪಿಕರಡಿ ಶಿಂಗಳೀಕಗಳು ಕಲ್ಲು ಮರಗಳ ಆಯುಧಗಳ ಸಮೂಹ, ನಿಶ್ಶಸ್ತ್ರರಾಥ ನಿರಾಯುಧರಾದ ಅಶಿಕ್ಷಿತ ಭಾರತೀಯರ ಗುಂಪನ್ನು, ರಾವಣ ಕುಂಬಕರ್ಣ ಇಂದ್ರಜಿತುಗಳ ನಾನಾ ಬಗೆಯ ದಿವ್ಯಾಸ್ತ್ರ, ಮಾಯಾಸ್ತ್ರ, ಆಕಾಶವಿಮಾನ (ಪುಷ್ಪಕ)ಗಳಿಗೆ ಎದುರಾಗಿ ಒಡ್ಡಿದ ಸಾಹಸದಲ್ಲಿ, ಗಾಂಧಿಯವರು ಶ್ರೀರಾಮಚಂದ್ರನಿಗೆ ಸಮಾನರು. ಎಲ್ಲಕ್ಕಿಂತ ಹೆಚ್ಚಾಗಿ ಗಾಂಧಿಯವರು ಅನುಸರಿಸಿದ ಬ್ರಹ್ಮಚರ್ಯ, ಶ್ರೀರಾಮಚಂದ್ರನ ಗೃಹಸ್ಥಾಶ್ರಮ ಬ್ರಹ್ಮಚರ್ಯ.

ಬ್ರಹ್ಮಚರ್ಯದ ಅನುಷ್ಠಾನದಲ್ಲಿಯೂ ಗಾಂಧಿಯವರು ಸನಾತನ ಧರ್ಮದ ಪರಂಪರೆಯಾದ ಮಾರ್ಗವನ್ನೇ ಅನುಸರಿಸಿದ್ದಾರೆ. ಇದಕ್ಕೆ ಮುಖ್ಯಕಾರಣ ಗಾಂಧಿಯವರು ತಮ್ಮ ತತ್ವಗಳನ್ನೆಲ್ಲಾ ಹಿಂದೂ ಧರ್ಮದ ಆದರ್ಶದಮೇಲೆ ಕಟ್ಟಿದುದೇ. ಎಲ್ಲಾ ಧರ್ಮದ ಮುಖ್ಯ ತತ್ವಗಳೂ ಜಗತ್ತಿನ ಕಲ್ಯಾಣಕ್ಕಾಗಿಯೇ ಎಂದು ಗಾಂಧಿ ನಂಬಿದ್ದರು. ಯಾವ ಧರ್ಮದಲ್ಲಿಯೂ ಅಸತ್ಯ ಹಿಂಸೆ ಡಂಬಾಚಾರಕ್ಕೆ ಪ್ರೋತಾಹವಿಲ್ಲವೆಂದು ಗಾಂಧಿ ಅನೇಕಸಲ ಹೇಳಿದ್ದಾರೆ. ಆದುದರಿಂದ ಹಿಂದೂ ಧರ್ಮದ ತ್ರಿಕಾಲಬಾಧಿತಗಳಾದ ಸತ್ಯಗಳು, ಇತರ ಧರ್ಮಗಳಿಗೂ ಅನ್ವಯಿಸುವುದೆಂದು ಅವರು ಸ್ಪಷ್ಟವಾಗಿ ಹೇಳಿದ್ದಾರೆ.

ಹಿಂದೂ ಧರ್ಮ ಮತ್ತು ಇತಿಹಾಸ ಪುರಾಣಗಳಲ್ಲಿ ಬ್ರಹ್ಮಚರ್ಯಾನುಷ್ಠಾನದ ಉದಾರಣೆಗಳು ಅನೇಕವಾಗಿರುವಂತೆ ಅನೇಕ

ಬಗೆಯವೂ ಆಗಿವೆ. ಎದುರಿಗೆ ಹೆಣ್ಣನ್ನು ಕಂಡರೂ ಅದು ಹೆಣ್ಣೆಂಬು ದನ್ನು ಅರಿಯಲಾರದೆ, ಹೆಣ್ಣು ಗಂಡಿಗೆ ವ್ಯತ್ಯಾಸವನ್ನೇ ಅರಿಯದ-ಸತ್ಯ ಶುದ್ಧ ಶುಕಮುನಿಯಿಂದ ಹಿಡಿದು, ಹದಿನಾರುಸಾವಿರ ಹೆಂಡಿರಿದ್ದ ಶ್ರೀಕೃಷ್ಣನವರೆಗೆ ಬ್ರಹ್ಮಚರ್ಯದ ಆದರ್ಶವನ್ನು ಪುರಾಣಗಳು ನಮ್ಮ ಮುಂದೆ ಇಡುತ್ತವೆ. ನಿತ್ಯ ಒಂದು ಊಟವನ್ನು ಮಾಡುತ್ತಿದ್ದರೂ ಎಂದೆಂದಿಗೂ ಆ ನಿಯಮವನ್ನು ಮೀರದಿದ್ದುದರಿಂದ ವಸಿಷ್ಠಮುನಿ ನಿತ್ಯೋಪವಾಸಿಯ ಮಹಿಮೆಯನ್ನು ಸಂಪಾದಿಸಿದ್ದನಂತೆ. ಹಾಗೆಯೇ ಶ್ರೀಕೃಷ್ಣ ಹದಿನಾರುಸಾವಿರ ಸ್ತ್ರೀಯರೊಂದಿಗಿದ್ದರೂ ಬ್ರಹ್ಮಚಾರಿಗಳ, ಕರ್ಮಯೋಗಿಗಳ ಮೊದಲನೆಯ ಪಂಕ್ತಿಯಲ್ಲಿ ಆತನಿಗೆ ಸ್ಥಾನ. ಶ್ರೀರಾಮಚಂದ್ರನದು ಏಕಪತ್ನೀವ್ರತದ ಕರ್ಮಯೋಗಿಯ ಬ್ರಹ್ಮಚರ್ಯ.

ಮಹಾತ್ಮಗಾಂಧಿಯವರಿಗೆ ಅವರ ಬಾಲ್ಯದಲ್ಲಿಯೇ, ಇನ್ನೂ ಏಕೆ ಏನು ಎಂದು ತಿಳಿಯುವುದಕ್ಕಿಂತ ಮುಂಚೆಯೇ ಮದುವೆಯಾಗಿ ಬಿಟ್ಟಿತು. ತಮಗೆ ಇಂದ್ರಿಯನಿಗ್ರಹ ಆ ಬಾಲ್ಯದಲ್ಲಿ ಇರಲಿಲ್ಲವೆಂದು ಮಹಾತ್ಮರು ಈಚೆಗೆ ಪಶ್ಚಾತ್ತಾಪದಿಂದ ಹೇಳಿದ್ದಾರೆ. ಆದರೆ ಅವರಿಗೆ ಮುವ್ವತ್ತು ವಯಸ್ಸಾದಾಗಲೇ ಬ್ರಹ್ಮಚರ್ಯದ ಆಸೆ ಆವಶ್ಯಕತೆಗಳು ಹೊಳೆದವು. ಅವರು ಸಮಸ್ತ ಆಸೆಗಳನ್ನೂ ತೊರೆದು "ಇನ್ನು ನನ್ನ ಬಾಳು ಸೇವೆಗಾಗಿ. ನನಗಾಗಿ ಆಗಬೇಕಾದುದು ಇನ್ನೇನೂ ಇಲ್ಲ." ಎಂದು ತೀರ್ಮಾನಿಸಿದುದೂ ಆಗಲೇ. ಆದರೆ ಅವರು ಸೇವಾದೀಕ್ಷೆಯನ್ನು ತೊಟ್ಟು ಬಡತನವನ್ನು ಸ್ವೀಕರಿಸಿದ್ದರೂ ಬ್ರಹ್ಮಚರ್ಯವನ್ನು ಪೂರ್ಣ ವಾಗಿ ಅನುಸರಿಸಿ ಆಚರಣೆಗೆ ತರಲು ಮುಂದೆ ಇನ್ನೂ ೮ ವರ್ಷಗಳು ಬೇಕಾದುವು. ಆ ವೇಳೆಗೆ ಅವರು ಅನೇಕಬಾರಿ ಬ್ರಹ್ಮಚರ್ಯದ ಆವಶ್ಯ ಕತೆಯನ್ನು ಕುರಿತು ತಮ್ಮ ಹೆಂಡತಿಗೆ ಬೋಧಿಸಿದ್ದರು. ಗಾಂಧಿ ಯವರು ಮೊದಲು ಬ್ರಹ್ಮಚರ್ಯವನ್ನು ಅನುಸರಿಸಿದುದು ಸೇವೆಗಾಗಿ. ಅವರು ಆ ಕಾಲದಲ್ಲಿ ಹೀಗೆ ಹೇಳಿದ್ದಾರೆ. "ದೇಶದ ಸೇವೆಗೆ ತೊಡ ಗಿದ ನಾನು ವರುಷ ವರುಷವೂ ಮಕ್ಕಳನ್ನು ಸೃಷ್ಟಿಸುತ್ತಾ ನನ್ನ ಸಂಸಾರವನ್ನು ದೊಡ್ಡದು ಮಾಡಿಕೊಳ್ಳುತ್ತಾ ಹೋದರೆ ಆ ಸಂಸಾರದ ರಕ್ಷಣೆ, ಮುಂದಲ ಅದರ ಯೋಗಕ್ಷೇಮ ಇದಕ್ಕೆ ನನ್ನ ಕಾಲವೇ

ವ್ಯರ್ಥವಾದೀತು. ಆಗ ನನ್ನಿಂದ ಏನೂ ಸೇವೆ ನಡೆಯುವುದಿಲ್ಲ. ಈ ಕಾರಣದಿಂದ ನಾನು ಇನ್ನು ಸಂಸಾರವನ್ನು ಬೆಳೆಸಬಾರದು" ಈ ಸಾಮಾನ್ಯವಾದ ಸಂಸಾರಿಯ, ಸೇವೆಯ ಆಕಾಂಕ್ಷೆ ಬ್ರಹ್ಮಚರ್ಯಕ್ಕೆ ಗಾಂಧಿಯವರನ್ನು ಮೊದಲು ಪ್ರೇರಿಸಿತು. ಆದರೆ ಬ್ರಹ್ಮಚರ್ಯದ ಮಹತ್ವ ಅದರ ನೀತಿ, ಆತ್ಮದ ಗುರಿಗೆ ಅದರ ಸಾಧನೆ ಇವೆಲ್ಲಾ ನಿಧಾನವಾಗಿ ಗಾಂಧಿಯವರಿಗೆ ಹೆಜ್ಜೆ ಹೆಜ್ಜೆಗೂ ಹೊಳೆದು 'ಪೂರ್ಣ ಬ್ರಹ್ಮಚರ್ಯವೇ ಪೂರ್ಣ ಮುಕ್ತಿಗೆ ಮಾರ್ಗ' ಎಂದು ಅವರು ಈಚೆಗೆ ಒತ್ತಿ ಒತ್ತಿ ಹೇಳತೊಡಗಿದರು.

ಇನ್ನು ಹೀಗೆ ಪೂರ್ಣ ಬ್ರಹ್ಮಚರ್ಯವನ್ನು ಅನುಸರಿಸಿದರೆ ಜಗತ್ತೇ ನಿಂತುಹೋಗುವುದಲ್ಲ! ಪ್ರಜೋತ್ಪತ್ತಿಯಿಂದಲೇ ಮನುಷ್ಯ ಪೂರ್ಣನಾಗುತ್ತಾನೆಂದು ಹೇಳಿಲ್ಲವೆ? ಪ್ರಜೋತ್ಪತ್ತಿಯನ್ನು ತಡೆಯಬೇಡಿ" ಎಂದು ಶಹ ಹೇಳಿಲ್ಲವೇ? ಎಂದು ಗಾಂಧಿಯವರನ್ನು ಕೇಳಿದಾಗ ಅವರು ಹೀಗೆ ಹೇಳಿದರು "ಜಗತ್ತಿನ ಯೋಚನೆ ನಿನಗೆ ಬೇಡ. ಜಗತ್ತಿನ ರಕ್ಷಕ ಬೇರೆ ಇದ್ದಾನೆ. ನೀನು ಬ್ರಹ್ಮಚರ್ಯವನ್ನು ಅನುಸರಿಸುವುದರಿಂದ ಜಗತ್ತು ನಿಂತುಹೋಗುವುದೆಂಬ ಭಯ ನಿನಗೆ ಬೇಡ. ಇಷ್ಟರ ಮೇಲೆ ಇದನ್ನು ಎಲ್ಲರೂ ಅನುಸರಿಸುವುದೂ ಇಲ್ಲ" ಎಂದಿದ್ದಾರೆ.

ಆದರೆ, ಮಹಾತ್ಮಗಾಂಧಿಯವರು ಬ್ರಹ್ಮಚರ್ಯದಲ್ಲಿ ಶ್ರೀರಾಮಚಂದ್ರನಂತೆ ಎಂದು ಹೇಳಿದೆವು. ಶ್ರೀರಾಮಚಂದ್ರನಿಗೆ ಹೆಂಡತಿ ಸೀತಾದೇವಿ ಇದ್ದಳು. ಎರಡು ಮಕ್ಕಳಿದ್ದರು. ಆತನ ಆದರ್ಶ ಗಾರ್ಹಸ್ಥ್ಯಧರ್ಮವೇ. ಶುಕಮುನಿಯ ಬ್ರಹ್ಮಚರ್ಯಕ್ಕಿಂತ ಸ್ವಲ್ಪ ಕಡಿಮೆಯಾದ ಮೆಟ್ಟಲು. ಶುಕಮುನಿಯ ಆದರ್ಶ ಯೋಗಿಗಳಿಗೆ ಮಾತ್ರ. ಆದರೆ ರಾಮಚಂದ್ರನ ಆದರ್ಶ' ಮಹಾತ್ಮಗಾಂಧಿಯವರ ಆದರ್ಶ ಸಾಮಾನ್ಯ ಬಡಪಾಯಿಗಳಿಗೆ ಮಾರ್ಗದರ್ಶನ. ಮಹಾತ್ಮಗಾಂಧಿಯವರ ಆದರ್ಶವಾದ ಪೂರ್ಣಬ್ರಹ್ಮಚರ್ಯವನ್ನು ನಾವು ಅನುಸರಿಸಲು ಸಾಧ್ಯವಾಗದಿದ್ದರೂ, ಮಹಾತ್ಮಗಾಂಧಿಯವರು ಪ್ರತಿಯೊಂದು ವಿಷಯದಲ್ಲಿಯೂ ತಮ್ಮ ಬಾಳಿನಲ್ಲಿಯೇ ದಾರಿತೋರಿಸಿದಂತೆ ಆದರ್ಶ ಸಂಸಾರ ಜೀವನದಲ್ಲಿಯೂ ದಾರಿತೋರಿಸಿದ್ದಾರೆ. ಅದೆಯೇ ಏಕಪತ್ನೀವ್ರತ ಎಂಬುದು.

ಭಾರತದ ಪುರಾಣ ಇತಿಹಾಸದಲ್ಲಿ ಎಲ್ಲೆಲ್ಲಿ ನೋಡಿದರೂ, ಪಾತಿವ್ರತ್ಯದ ಮಹಿಮೆ, ಸ್ತ್ರೀ ಹೇಗಿರಬೇಕು? ಇದರ ಆಖ್ಯಾನಗಳು, ಬೇಕಾದಂತೆ ದೊರೆಯುತ್ತವೆ. ಇದಕ್ಕೆ ಮುಖ್ಯಕಾರಣ ಈ ಪುರಾಣಗಳನ್ನೂ ಕತೆಗಳನ್ನೂ ಹೆಚ್ಚಾಗಿ ಗಂಡಸರೇ ಹೇಳಿದುದು. ಪುರಾಣಗಳ ಜತೆಗೆ ಧರ್ಮಶಾಸ್ತ್ರಗಳೂ ಪಿತೂರಿ ಹೂಡಿವೆ. ಗಂಡು ಎಷ್ಟು ಹೆಣ್ಣನ್ನು ಬೇಕಾದರೂ ಮದುವೆಯಾಗಬಹುದು. ಹೆಣ್ಣಿಗೆ ಮಾತ್ರ ಒಂದೇ ಗಂಡು. ಆ ಗಂಡು ಸತ್ತರೆ ಹೆಣ್ಣು ವಿಧವೆಯಾಗಿ ನರಳಬೇಕು. ಗಂಡನಿಗಾಗಿ ಕೊರಗುವುದು, ಪ್ರಾಣವನ್ನು ಬಿಡುವುದು ಸಹ ಹೆಣ್ಣಿಗೆ ಮುಕ್ತಿ ಆಕೆ ಗಂಡನ ಜತೆಯಲ್ಲಿ ಸಹಗಮನ ಮಾಡಿದರೆ ಇನ್ನೂ ಪುಣ್ಯ. ಮಾದ್ರಿ, ಗಂಡನ ಜತೆಯಲ್ಲಿ ಸಹಗಮನ ಮಾಡಿದಳು. ಸಾವಿತ್ರಿ ಯಮನೊಂದಿಗೆ ಹೋರಾಡಿ ಗಂಡನ ಪ್ರಾಣವನ್ನು ಹಿಂದಕ್ಕೆ ತಂದಳು. ಆದರೆ ಹೆಂಡತಿಯ ಜತೆಯಲ್ಲಿ ಸಹಗಮನವಮಾಡಿದ ಗಂಡ ಇನ್ನೂ ಸಿಕ್ಕಿಲ್ಲ. ಶ್ರೀರಾಮಚಂದ್ರ ಸೀತಾದೇವಿಯನ್ನೂ ಎರಡುಬಾರಿ ಪರೀಕ್ಷಿಸಿದ. ಬೆಂಕಿಗೆ ತಳ್ಳಿದ, ಭೂಮಿಗೆ ಹುಗಿದ. ಆದರೆ ಹೆಂಡತಿಯ ಪರೀಕ್ಷೆಗೆ ಒಪ್ಪಿಕೊಂಡ ಗಂಡು ಇನ್ನೂ ನಮಗೆ ದೊರೆತಿಲ್ಲ.

ಹೀಗಿದ್ದರೂ,ಶ್ರೀರಾಮಚಂದ್ರನು ತಾನು ರಾಜನಾದರೂ, ಒಬ್ಬಳಿಗಿಂತ ಹೆಚ್ಚು ರಾಣಿಯರನ್ನು ಮದುವೆಯಾಗಲಿಲ್ಲ. ಸೀತೆಯು ಹೊರಟು ಹೋದಮೇಲೆ ಆತ ಚಿನ್ನದ ಪ್ರತಿಮೆಯನ್ನು ಮಾಡಿಕೊಂಡು ಯಜ್ಞಮಾಡಿದ.ಶ್ರೀರಾಮಚಂದ್ರನಿಗೆ ಏಕಪತ್ನೀವ್ರತಸ್ಥನೆಂಬ ಬಿರುದು. ಮಹಾತ್ಮಗಾಂಧಿಯವರೂ ನಮ್ಮಂತೆ ಸಂಸಾರ ಜೀವನದಲ್ಲಿ ತೊಡಗಿದರು. ಏಕಪತ್ನೀವ್ರತಸ್ಥರಾಗಿ ಮಕ್ಕಳನ್ನು ಪಡೆದು ೪೦ ವರುಷಕ್ಕೆ ಪೂರ್ಣ ಬ್ರಹ್ಮಚರ್ಯವನ್ನು ಅನುಸರಿಸತೊಡಗಿದರು. ಏಕಪತ್ನೀವ್ರತಸ್ಥನಾಗಿ ತನ್ನ ಹೆಂಡತಿಯನ್ನು ಹೊರತು ಇತರರನ್ನು ಕಣ್ಣೆತ್ತಿ ಸಹ ನೋಡದಿರುವುದು ಬ್ರಹ್ಮಚರ್ಯವೆಂದರೆ ಯಾರಿಗಾದರೂ ಆಶ್ಚರ್ಯವಾಗುತ್ತದೆ. ಆ ದೃಷ್ಟಿಯಿಂದ ಮಹಾತ್ಮಗಾಂಧಿಯವರದು ಬ್ರಹ್ಮಚರ್ಯ. ಗಾಂಧಿ ಹೀಗೆ ಹೇಳಿದ್ದಾರೆ " ಸ್ತ್ರೀಯನ್ನು ತಾಯಿ ತಂಗಿ ಮಗಳಾಗಿ ಹೊರತು ಬೇರೆ ದೃಷ್ಟಿಯಿಂದ ನೋಡುವುದು ನನಗೆ ಸಾಧ್ಯವಿಲ್ಲ.

ಜಗತ್ತಿನಲ್ಲಿರುವ ಎಲ್ಲಾ ಸ್ತ್ರೀಯರೂ ನನ್ನ ತಾಯಿಯರೆ. ಈ ಭಾವನೆ ನನಗೆ ಇಲ್ಲದಿದ್ದರೆ ಒಂದು ಗಳಿಗೆಯೂ ನಾನು ಸಾರ್ವಜನಿಕ ಕಾರ್ಯ ಮಾಡಲಾರೆ."

ಪರಸ್ತ್ರೀಯನ್ನು ತಾಯಿ ತಂಗಿ ಮಗಳಾಗಿ ನೋಡವುದಕ್ಕಿಂತ ದೊಡ್ಡ ನೀತಿ ಯಾವುದೂ ಇಲ್ಲ. ಪರಸ್ತ್ರೀಯನ್ನು ಪಾದ ಮುಟ್ಟಿ ಸಹ ನಮಸ್ಕರಿಸ ಬಾರದೆಂದು ಹೇಳಿದೆ. ಸೀತಾದೇವಿಯ ಒಡವೆಗಳನ್ನು ಲಕ್ಷ್ಮಣನಿಗೆ ತೋರಿಸಿದಾಗ ಆತ ಹೇಳಿದ ಮಾತು ಜ್ಞಾಪಕವಿರಲಿ.

ನಾಹಂ ಜಾನಾಮಿ ಕೇಯೂರೇ, ನಾಹಂ ಜಾನಾಮಿ ಕುಂಡಲೇ ನೂಪು ರೇತ್ಯಭಿ ಜಾನಾಮಿ ನಿತ್ಯಂ ಪಾದಾಭಿ ವಂದನಾತ್.

ಕೇಯೂರ ಕುಂಡಲಗಳು ನನಗೆ ತಿಳಿಯವು. ಪ್ರತಿನಿತ್ಯವೂ ಪಾದಕ್ಕೆ ನಮಸ್ಕರಿಸುತ್ತಿದ್ದುದರಿಂದ ನೂಪುರವನ್ನು ಮಾತ್ರ ಬಲ್ಲೆ.

ಪರಸ್ತ್ರೀಯರ ವಿಷಯದಲ್ಲಿ ನಮ್ಮ ನಡತೆ ಹೇಗಿರಬೇಕೆಂಬುದನ್ನು ಈ ಆಚರಣೆ ಸೂಚಿಸುತ್ತದೆ. " ಪರಸ್ತ್ರೀ ಹತ್ತಿರಕ್ಕೆ ಬಂದರೆ ಅಲ್ಲಿ ನಿಲ್ಲಬೇಡ. ಆಕೆ ಮಾತನಾಡಿಸಿದರೆ ಮಾತನಾಡಬೇಡ. ಯಾವ ಹೆಣ್ಣನ್ನೂ ಚಾಪಲ್ಯದ ದೃಷ್ಟಿಯಿಂದ ನೋಡಬೇಡ. ಇಂದ್ರಿಯಗಳನ್ನು ಜಯಿಸುವುದೇ ಮನುಷ್ಯನು ಸಾಧಿಸಬಹುದಾದ ಅತ್ಯುತ್ತಮ ಆದರ್ಶ. ಇಂದ್ರಿಯಗಳ ಜಯವಿಲ್ಲದೆ ರಾಮರಾಜ್ಯವಿಲ್ಲ ಜಗತ್ತನ್ನೆಲ್ಲ ಜಯಿಸಿದರೂ ಇಂದ್ರಿಯಗಳನ್ನು ಜಯಿಸದಿದ್ದರೆ ಅದು ಬಣ್ಣದ ಮಾವಿನ ಕಾಯಿನಂತೆ ಅಪ್ರಯೋಜಕ. ಇಂದ್ರಿಯಗಳನ್ನು ಜಯಿಸದವರಿಂದ ಯಾವ ದೇಶಸೇವೆಯೂ ಸಾಧ್ಯವಿಲ್ಲ. ದೇಶಸೇವೆ, ಬರಿಯ ಬುದ್ಧಿಯ ಕಾರ್ಯ ಮಾತ್ರವಲ್ಲ. ದೇಶಸೇವಕರಿಗೆ ಆತ್ಮಶಕ್ತಿ ಇರಬೇಕು. ಆತ್ಮಶಕ್ತಿ ಭಗವಂತನ ಕೃಪೆಯಿಂದ ಮಾತ್ರ ದೊರೆಯುತ್ತದೆ. ಇಂದ್ರಿಯ ಲಂಪಟರಿಗೆ ಭಗವಂತನ ಕೃಪೆ ದೊರೆಯುವುದಿಲ್ಲ."

ಬುದ್ಧನೂ ಬಸವಣ್ಣನವರೂ ಇದೇ ಬೋಧನೆ ಮಾಡಿದ್ದಾರೆ. " ಪರಸ್ತ್ರೀಯನ್ನು ನೋಡೆನೆಂಬ ಛಲ ಬೇಕಯ್ಯ '' ಎಂದು ಬಸವಣ್ಣ ಹೇಳಿದ್ದಾರೆ. ಭಗವಂತನ ಕರುಣೆ ಬೇಕೆಂದು ಮಹಾತ್ಮಗಾಂಧಿಯವರು ಹೇಳಿರುವುದು ಪೂರ್ಣ ಬ್ರಹ್ಮಚರ್ಯಕ್ಕೆ. ಆದರೆ ಗೃಹಸ್ಥಾಶ್ರಮಬ್ರಹ್ಮ

ಚರ್ಯ ಎಲ್ಲರಿಗೂ ಪ್ರಯತ್ನದಿಂದ ಸಾಧ್ಯವೆಂದು ಒತ್ತಿ ಒತ್ತಿ ಹೇಳಿದ್ದಾರೆ. "ನಾನು ಸನ್ಯಾಸಿ ಎಂದು ಹೇಳುವುದು ತಪ್ಪು. ನನ್ನ ಜೀವನ ನಿಯಮಗಳನ್ನು ಮನುಷ್ಯ ಪ್ರಪಂಚ ಅನುಸರಿಸಲೆಂದು ಅದರ ಮುಂದೆ ಇಟ್ಟಿದ್ದೇನೆ. ಹೆಜ್ಜೆ ಹೆಜ್ಜೆಯನ್ನೂ ಚೆನ್ನಾಗಿ ಪರೀಕ್ಷಿಸಿ ಇಟ್ಟಿದ್ದೇನೆ. ನನ್ನಷ್ಟೇ ಪ್ರಯತ್ನಪಡುವವರಿಗೆಲ್ಲಾ, ನಂಬಿಕೆ ಇರುವವರಿಗೆಲ್ಲಾ ಈ ಫಲವೇ ದೊರೆಯುತ್ತದೆ."

ಈ ಕಾರಣದಿಂದಲೇ ನಾವು ಮಹಾತ್ಮಗಾಂಧಿಯವರದು ನಮ್ಮಂತಹ ಬಡ ಸಂಸಾರಿಗಳ ಬ್ರಹ್ಮಚರ್ಯವೆಂದು ಹೇಳುತ್ತೇವೆ. ಹಾಗಲ್ಲದೆ ಅದು ಶುಕಮುನಿಯ ಬ್ರಹ್ಮಚರ್ಯವಾಗಿದ್ದರೆ ನಮಗೆ ಅದನ್ನು ಅನುಸರಿಸುವುದಕ್ಕೆ ಕಷ್ಟವಾಗುತ್ತಿತ್ತು. ಕರುಣಾಸಾಗರರಾದ ಗಾಂಧಿ, ನಮ್ಮಮೇಲಿನ ದಯದಿಂದಲೇ ನಮ್ಮ ಆದರ್ಶಕ್ಕಾಗಿ ಹೀಗೆ ಬಾಳಿದರು. ಅದೇ ನಮ್ಮ ಸನಾತನ ಅನಾದಿಕಾಲದಿಂದ ಬಂದಿರುವ "ಪರಸ್ತ್ರೀಯನ್ನು ತಾಯಿಯಂತೆ ಕಾಣು" ಎಂಬ ನೀತಿ.

---

# ೧೦. ಅನಾಸಕ್ತ

## ಅನಾಸಕ್ತನಾದರೂ ಪ್ರೇಮಪೂರ್ಣ

ಗಾಂಧಿಯವರು ಒಂದು ಜೀವನದಲ್ಲಿ, ಹತ್ತು ಜೀವಮಾನದ ಕೆಲಸ ಸಾಧಿಸಿರುವುದಕ್ಕೆ ಅವರ ಅನಾಸಕ್ತಿಯೇ ಮುಖ್ಯ ಕಾರಣ. ಅವರು ಜಗತ್ತಿನ ಬಾಳ್ವೆಯನ್ನು ತಾವರೆ ಮೇಲಿನ ನೀರಿನಂತೆ ಜಗತ್ತಿಗೆ ಸೇರಿದಂತೆಯೂ ಸೇರದಂತೆಯೂ ನಡೆಸುತ್ತಾರೆ. ಕರ್ತವ್ಯವನ್ನು ಮಾಡಬೇಕೆಂದು ತೋರಿದಾಗ ಯಾವ ತ್ಯಾಗವೂ ದೊಡ್ಡದಲ್ಲ. ಗಾಂಧಿಯವರು ಅಷ್ಟು ಸಾಹಸದಿಂದ ಕಟ್ಟಿದ್ದ ಸತ್ಯಾಗ್ರಹ ಆಶ್ರಮವನ್ನು ಸುಲಭವಾಗಿ ತೊರೆದು ಹೊರಟೇಬಿಟ್ಟರು. ಇವರ ಬಾಳ್ವೆ ಮೊದಲಿನಿಂದ ಕೊನೆಯವರೆಗೆ ಅನಾಸಕ್ತಿಗೆ ದೊಡ್ಡ ಉದಾಹರಣೆ.

ಹೀಗೆ ಅನಾಸಕ್ತರಾದರೂ ಗಾಂಧಿಯವರ ಹೃದಯ ಪ್ರೇಮಪೂರ್ಣವಾದುದರಿಂದ ಅವರು ತಮ್ಮ ಎಲ್ಲ ವ್ಯವಹಾರಗಳಲ್ಲಿಯೂ ಪ್ರೇಮವನ್ನೇ ಮುಂದುಮಾಡುತ್ತಾರೆ. ಅವರ ಪರಿಚಯ ಒಂದು ಸಲ ಆದವರಿಗೆ ಸಹ, ಅವರ ಈ ಅವ್ಯಾಜ ಪ್ರೇಮ ಚೆನ್ನಾಗಿ ಗೊತ್ತಾಗುತ್ತದೆ. ತಮ್ಮವರ ಎಲ್ಲ ಚಟುವಟಿಕೆಗಳೂ ಅವರಿಗೆ ಬೇಕಾದುವೇ. ತಮ್ಮ ಗುರುತಿನವರನ್ನು, ಪ್ರತಿಯೊಬ್ಬರಿಗೂ ಅವರ ಸಂಸಾರಕ್ಕೆ ಅವರ ಸ್ವಂತಬಾಳಿಗೆ ಸಂಬಂಧಪಟ್ಟ ಒಂದೊಂದೂ ಯೋಗಕ್ಷೇಮವನ್ನು ಅವರು ವಿಚಾರಿಸುತ್ತಾರೆ. ಅವರೊಂದಿಗೆ ಮಾತನಾಡುತ್ತಿರುವಾಗ ಗಾಂಧಿಯವರು ತಮ್ಮ ಕಾಲವನ್ನೆಲ್ಲಾ ನಮಗೆ ಕೊಡುತ್ತಿದ್ದಾರೋ ಎಂಬ ನಂಬಿಕೆ ಬಂದವರಿಗೆ, ಉಂಟಾಗುತ್ತದೆ.

ಗುಜರಾತಿನ ಹಳ್ಳಿಗಳ ಪ್ರವಾಸ ಹೊರಟಾಗ ಗಾಂಧಿಯವರು ಮೊದಲು ಹೋದ ಊರು ಬೋಟಾಡ್ ಎಂಬುದು. ಗಾಂಧಿಯವರ ಸತ್ಯಾಗ್ರಹ ಆಶ್ರಮಕ್ಕೆ ಮೊದಲು ಹರಿಜನ್ ಬಂದು ಸೇರಿದ.ದು ಆ ಗ್ರಾಮದಿಂದ. ಆತನ ಹೆಸರು ದುದಾಭಾಯ್. ಆತ ಅಲ್ಲಿ ಹರಿಜನರ ಒಂದು ಪಾಠಶಾಲೆ ನಡೆಸುತ್ತಿದ್ದ. ಗಾಂಧಿ ಸಾಕುತ್ತಿರುವ ಲಕ್ಷ್ಮಿ ಎಂಬ ಹುಡುಗಿಯ ತಂದೆ ಈತ. ಆಶ್ರಮಕ್ಕೆ ಬರಲು ಸಾಹಸಮಾಡಿದ ಮೊದಲನೆಯ ಹರಿಜನ ಈತ ಎಂಬುದನ್ನು ಗಾಂಧಿ ಮರೆಯಲಿಲ್ಲ. ಗಾಂಧಿಯವರ ವ್ಯವಹಾರಗಳಲ್ಲಿ ಎಲ್ಲ ಮಿತ್ರರು ಹೀಗೆ ಪ್ರೇಮವನ್ನು ಕಾಣುವ ಸಣ್ಣ ಸಣ್ಣ ಸಂಗತಿಗಳು ನಡೆದೇ ನಡೆಯುತ್ತವೆ. ಆ ಸಂಗತಿಗಳು ಸಣ್ಣವೇ ಆದರೂ ಅವುಗಳನ್ನು ಗಾಂಧಿ ಮರೆಯುವುದಿಲ್ಲ. ಪರಿಚಿತರಾದವರ ಹತ್ತಿರ ಯಾವುದಾದರೂ ಅವರ ಸ್ವಂತ ಜೀವನಕ್ಕೆ, ಸಂಸಾ

ರಕ್ಕೆ ಸಂಬಂಧಪಟ್ಟ ಮಾತನ್ನು ಹೇಳಿ ತಾವೂ ಅವರವರೇ ಎಂಬು ದನ್ನು ತೋರಿಸುತ್ತಾರೆ.

ಗಾಂಧಿಯವರು ಇಂಗ್ಲೆಂಡಿನಲ್ಲಿರುವಾಗ, ಜವಹರ್‌ಲಾಲ್ ವಿದ್ಯೆ ಕಲಿತ ಸ್ಥಳವೆಂದು ಕೇಂಬ್ರಿಡ್ಜ್‌ಗೆ ಹೋದರು. ಆ ಪ್ರಯಾಣವನ್ನು ಕುರಿತು ಮಹದೇವದೇಸಾಯಿ ಹೀಗೆ ಹೇಳಿದ್ದಾರೆ. "ಈಟನ್‌ಗೆ ಹೋಗುತ್ತಿರುವಾಗ ಗಾಂಧಿಯವರು ಜವಹರ್‌ಲಾಲ್ ಕಲಿತುದು ಇಲ್ಲಿಯೇ ?" ಎಂದು ಕೇಳಿದರು. "ಅಲ್ಲ ಹ್ಯಾರೋವಿನಲ್ಲಿ ಎಂದೆ ನಾನು; ಈ ವಿಷಯ ತಿಳಿದ ಮೇಲೆ ಈಟನ್‌ನಲ್ಲಿ ಗಾಂಧಿಯವರ ಕುತೂಹಲ ಸ್ವಲ್ಪ ಕಡಿಮೆಯಾಗಿ ಹೋಯಿತು. ಕೇಂಬ್ರಿಡ್ಜ್‌ಗೆ ಹೋಗಲು ಗಾಂಧಿ ಯವರು ಯಾಕೆ ಅಷ್ಟು ಉತ್ಸಾಹಿಗಳಾಗಿದ್ದರೆಂಬುದು ಈಗ ನಿಮಗೆ ತಿಳಿಯುತ್ತದೆ. ಕೇಂಬ್ರಿಡ್ಜ್ ಜವಹರ್‌ಲಾಲ್ ಮತ್ತು ಚಾರ್ಲಿ ಆಂಡ್ರೂ ಸ್‌ರ ಕಾಲೇಜು. ಆಂಡ್ರೂಸರು ಗಾಂಧಿಯವರನ್ನು ಬೆಳಗಿನ ತಿರುಗಾ ಟಕ್ಕೆ ಕರೆದುಕೊಂಡು ಹೋದಾಗ, ಗಾಂಧಿಯವರು ಟ್ರಿನಿಟಿ ಕಾಲೇಜಿನ ಅಂಗಳದಲ್ಲಿ ತಿರುಗಬೇಕೆಂದು ಹೇಳಿದರು. ಇದು ಭಾವನೆ ಎಂದು ಬೇಕಾದರೂ ಕರೆಯಿರಿ. ಇತರರಂತೆ ಗಾಂಧಿಯವರೂ ಇದಕ್ಕೆ ಆಳು. ಟ್ರಿನಿಟಿ ಕಾಲೇಜು ಜವಹರ್‌ಲಾಲರ ಕಾಲೇಜು ಆಗಿರುವಂತೆ, ಟೆನಿಸನ್ ಬೇಕನ್ ನ್ಯೂಟನ್‌ರ ಕಾಲೇಜೂ ಹೌದು. ಆದರೆ ಅದು ಜವಹರ್ ಲಾಲರ ಕಾಲೇಜು ಆಗದಿದ್ದರೆ ಗಾಂಧಿ ಟ್ರಿನಿಟಿಯನ್ನು ನೋಡುತ್ತಿರ ಲಿಲ್ಲ. ಕ್ರೈಸ್ಟ್‌ಚರ್ಚ್, ವರ್ಡ್ಸ್‌ವರ್ತ್‌ರ ಕಾಲೇಜ್ ಆದರೂ ನಾವು ನೋಡಲಿಲ್ಲ. ೧೨೬೧ ರಲ್ಲಿ ಆಕ್ಸ್‌ಫರ್ಡ್‌ನಲ್ಲಿ ಕಾಲೇಜು ಆದ ಮೇಲೆ ಕೇಂಬ್ರಿಡ್ಜ್‌ಗೂ ಕಾಲೇಜಿನ ಆಸೆ ಬೆಳೆಯಿತು. ಅಲ್ಲಿಯೂ ಕಾಲೇಜು ಗಳು ಆದವು. ಎರಡೂ ಒಂದನ್ನೊಂದು ಮೀರಿಸಬೇಕೆಂದು ಹಟ ತೊಟ್ಟವು. ಎರಡು ಕಾಲೇಜುಗಳಿಂದಲೂ ಪ್ರಸಿದ್ಧರು ತಯಾರಾಗ ತೊಡಗಿದರು. ಆಕ್ಸ್‌ಫರ್ಡ್‌ನಲ್ಲಿ ಕಾಲೇಜುಗಳು ಹೆಚ್ಚು. ಕೇಂಬ್ರಿಡ್ಜ್ ನಲ್ಲಿ ವಿದ್ಯಾರ್ಥಿಗಳು ಹೆಚ್ಚು. ಆಕ್ಸ್‌ಫರ್ಡ್‌ನಲ್ಲಿ ಥೇಮ್ಸ್ ನದಿಯೂ ಅದರ ಮನೋಹರವಾದ ತೀರಗಳೂ ಇವೆ. ಕೇಂಬ್ರಿಡ್ಜ್‌ನಲ್ಲಿ ಕಾಲೇಜು ಕಟ್ಟಡ ಅತ್ಯಂತ ಸುಂದರ. ಪ್ರಾರಂಭದಲ್ಲಿ ಇವೆಲ್ಲಾ ಧರ್ಮದ ಹಿನ್ನೆಲೆಯಲ್ಲಿ ಬೆಳೆದವು. ಈಗಲೂ ಅಲ್ಲಿ ಸನ್ನಿಧಿಗಳಿವೆ. ಕೇಂಬ್ರಿಡ್ಜ್‌ನ ಕಿಂಗ್ಸ್ ಕಾಲೇಜಿನ ಸನ್ನಿಧಿ ಕಟ್ಟಿಸಿದವರು ಆರನೆ ಹೆನ್ರಿ. ಅದು ಅತ್ಯಂತ

ಸುಂದರವಾದ ಕಟ್ಟಡ. ಇಂಗ್ಲೆಂಡಿಗೆ ಹೋದವರು ಅದನ್ನು ನೋಡದೆ ಹಿಂದಿರುಗುವುದಿಲ್ಲ. ನಲಂದ ತಕ್ಷಶಿಲ ಪಾಟಲಿಪುತ್ರ ಮತ್ತು ಕಾಶಿಗಳನ್ನು ಜ್ಞಾಪಿಸಿಕೊಂಡು ನಮ್ಮ ಹೃದಯಗಳು ದುಃಖದಿಂದ ತುಂಬಿದವು. ಭಾರತದ ಶಿಕ್ಷಣದ ಭವಿಷ್ಯವನ್ನು ಕುರಿತು ಗಾಂಧಿಯವರನ್ನು ಕೇಳಲು ಅವರು ದುಃಖದಿಂದ ಬೆಂಗಳೂರು ತಾತಾ ಇನಿಸ್ಟಿಟ್ಯೂಟ್ ಬೊಂಬಾಯಿಗಳ ಬಿಳಿ ಆನೆಗಳನ್ನು ಕುರಿತು ಹೇಳಿದರು.

## ಹಳೆಯ ಮಿತ್ರರ ಭೇಟಿ

ಗಾಂಧಿಯವರು ಇಂಗ್ಲೆಂಡಿಗೆ ಬಂದಕೂಡಲೇ ಕರ್ನಲ್ ಮಾಡಕ್‌ರನ್ನು ಕುರಿತು ವಿಚಾರಿಸಿದರು. ಒಂದುದಿನ ಮಾಡಕ್‌ರು ಗಾಂಧಿಯವರನ್ನು ಕಂಡು ರೀಡಿಂಗ್ ಸಮೀಪದಲ್ಲಿರುವ ತಮ್ಮ ಮನೆಗೆ ಬರಬೇಕೆಂದು ಆಹ್ವಾನಿಸಿದರು. "ಸುಂದರವಾದ ಹೂವು ಹಣ್ಣು ತರಕಾರಿಗಳನ್ನು ನನ್ನ ಹೆಂಡತಿ ನಿಮಗಾಗಿ ಇಟ್ಟಿದ್ದಾಳೆ. ನೀವು ನಮ್ಮ ಮನೆಗೆ ಬರಲೇ ಬೇಕು," ಎಂದರು. ದೇವರ ದಯದಿಂದ ಆ ಸ್ಥಳ ಈಟನ್ನಿನಿಂದ ಆಕ್ಸ್‌ಫರ್ಡ್‌ಗೆ ಹೋಗುವ ದಾರಿಯಲ್ಲಿದ್ದಿತು ಏಳು ವರುಷಗಳ ನಂತರ ನೋಡಿದುದು ಗಾಂಧಿಯವರಿಗೂ ಮಾಡ್‌ಕ್ ದಂಪತಿಗಳಿಗೂ ಆನಂದದಾಯಕವಾಯಿತು. ಗಾಂಧಿಯವರು ಸತೀ ಮ್ಯಾಡಕ್‌ರಿಗೆ "ನಿಮ್ಮ ಪತಿ ಜಾಣತನದಿಂದ ಶಸ್ತ್ರಚಿಕಿತ್ಸೆಮಾಡದಿದ್ದರೆ ನಾನು ನಿಮ್ಮೊಂದಿಗೆ ಸಂಭಾಷಿಸಲು ಇಲ್ಲಿ ಇರುತ್ತಿರಲಿಲ್ಲ." ಎಂದರು. ಕರ್ನಲ್ ಮ್ಯಾಡಕ್ ತಮ್ಮ ಜೀವನದ ಈ ಕೊನೆಯ ಕಾಲದಲ್ಲಿಯೂ ಇಪ್ಪತ್ತು ವರುಷದ ಯುವಕರಂತೆ ಹೊಸ ಹೊಸ ಪ್ರಯೋಗಗಳಲ್ಲಿ ತೊಡಗಿದ್ದಾರೆ ಆತ ಒಳ್ಳೆಯ ತೋಟಗಾರ. ಬೇಕಾದ ಹೂವು ಹಣ್ಣುಗಳ ಗಿಡಗಳನ್ನೂ ಮರಗಳನ್ನೂ ಬೆಳೆಯುತ್ತಾರೆ. ಅವುಗಳ ಮೇಲೆಲ್ಲಾ ಪ್ರಯೋಗಗಳನ್ನು ನಡೆಸುತ್ತಾರೆ. ಹಾಲು ಕರೆಯುವ ದನಗಳನ್ನಿಟ್ಟು ದನಗಳ ಕ್ಷಯರೋಗದ ಕಾರಣದಮೇಲೆ ಅನೇಕ ಪ್ರಯೋಗಗಳನ್ನು ನಡೆಸಿದ್ದಾರೆ. ಹಸುಗಳು ತಿನ್ನುವ ಹುಲ್ಲಿನ ಮೇಲೆಯೂ ಬೆಣ್ಣೆಯಮೇಲೆಯೂ ಇವರು ಅನೇಕ ಪ್ರಯೋಗಗಳನ್ನು

ನಡೆಸಿದ್ದಾರೆ. ಪೆಟ್ರೋಲಿನಿಂದ ತಮಗೆ ಬೇಕಾದ ಗ್ಯಾಸನ್ನು ತಾವೇ ತಯಾರುಮಾಡುತ್ತಾರೆ. ಇವರಿಗೆ ಕೈತುಂಬ ಕೆಲಸ. ಸತಿಮಾಡರ್ಕ್‌ರು "ಗಾಂಧಿ, ಪೂನಾದಲ್ಲಿ ನಾನು ನಿಮ್ಮನ್ನು ನೋಡಿದಾಗ ನೀವು ಕಂಡಷ್ಟೇ ವಯಸ್ಸಿನವರಾಗಿ ಈಗಲೂ ಕಾಣುತ್ತೀರಿ" ಎಂದರು ಕರ್ನಲ್ ಮ್ಯಾಡಕರೂ ಪೂನಾದಲ್ಲಿ ಕಂಡಷ್ಟೇ ವಯಸ್ಸಿನವರಾಗಿ ತೋರಿದರು. ಅಧಿಕಾರದ ತಾಪತ್ರಯ ಇಲ್ಲದುದರಿಂದಲೂ, ತನಗೆ ಹಿತವಾದ ಕೆಲಸಗಳನ್ನೇ ಆತ ಮಾಡುತ್ತಿದ್ದುದರಿಂದಲೂ ಆತ ಇನ್ನೂ ಚಿಕ್ಕವನಾಗಿಯೇ ತೋರಿದನೆಂದು ಹೇಳಬಹುದು. ನಿವೃತ್ತರಾದಮೇಲೆ ಎಲ್ಲರೂ ಕರ್ನಲ್‌ಮಾಡಕ್‌ರಂತೆ ತಮ್ಮ ಕಾಲವನ್ನು ವಿನಿಯೋಗಿಸಿದರೆ ಎಷ್ಟು ಚೆನ್ನಾಗಿರುತ್ತದೆ!

## ಅಪಪ್ರಚಾರಕರಿಗೂ ಸ್ವಾಗತ

ಗಾಂಧಿಯವರಿಗೆ ಈ ವಿಧವಾದ ಅನಾಸಕ್ತಿ ಇರುವುದರಿಂದಲೇ ಅವರು ತಮ್ಮಮೇಲೆ ನಡೆಯುವ ಅನ್ಯಾಯಗಳನ್ನೆಲ್ಲಾ ಶಾಂತಿಯಿಂದಲೇ ಸಹಿಸುತ್ತಾರೆ. ಗಾಂಧಿಯವರನ್ನು ಕುರಿತು ದುರಭಿಪ್ರಾಯ ಯಾವಾಗಲೂ ಎಲ್ಲೆಲ್ಲಿಯೂ ಪ್ರಚಾರವಾಗಿದೆ. ಜವಾಬ್ದಾರರಾದ ಪತ್ರಿಕಾ ಪ್ರತಿನಿಧಿಗಳು ಸಹ ಸುಳ್ಳುಪ್ರಚಾರಮಾಡುತ್ತಾರೆ. ಭಾರತ ಸರ್ಕಾರದ ವಿಷಯವಂತೂ ಬಿಡಿ. ಭಾರತದಲ್ಲಿಯ ಆಂಗ್ಲೋ ಇಂಡಿಯನ್‌ರು ಹೊರತು ಸೀಮೆಯ ಬಿಳಿಯವರು ಅಪಪ್ರಚಾರ ಮಾಡುವುದಿಲ್ಲವೆಂದು ಬಿಳಿಯವರು ಕೆಲವುಕಾಲ ನಂಬಿಸಿದ್ದರು. ಇಲ್ಲ. ಇಂಗ್ಲೆಂಡಿನ ಡೈಹಾರ್ಡ್‌ಪ್ರೆಸ್‌ಗಳು ಅಪಪ್ರಚಾರದಲ್ಲಿ ಜಗತ್ತಿನ ಯಾವ ಪ್ರೆಸ್ಸನ್ನು ಬೇಕಾದರೂ ಹಿಂದೆ ಕೆಡವಬಲ್ಲವು. ನಮ್ಮ ದೇಶದ ಡೈಹಾರ್ಡ್ ಪ್ರೆಸ್‌ಗಳು ಆ ಪ್ರೆಸ್‌ಗಳ ನಿಶ್ಶಕ್ತನಕಲುಗಳು. ಇದರ ಒಂದು ಉದಾಹರಣೆ ಡೈಲಿಮೇಲಿನ (Daily mail) ಸುಪ್ರಸಿದ್ಧ ಪ್ರತಿನಿಧಿ. ಆತ ಗಾಂಧಿಯವರನ್ನು ರಾಜಪುಟಾಣ ಹಡಗಿನಲ್ಲಿ ನೋಡಿದ. ವಿದ್ಯಾರ್ಥಿಗಳು ಗಾಂಧಿಯವರಿಗೆ ಕೊಟ್ಟ ಸ್ವಾಗತಕೂಟದಲ್ಲಿ ಆತ ಇದ್ದ. ಆದರೆ ಗಾಂಧಿಯವರ ಭಾಷಣ ಎಂದು ಹೇಳಿ ಬರೆಯು

ಸುಳ್ಳಿನ ಕಂತೆಯ ಒಂದು ವರದಿಯನ್ನು ತನ್ನ ಪತ್ರಿಕೆಗೆ ಕಳುಹಿಸಿದ. ಮಾರ್ಸೈಲ್ಸ್‌ನಿಂದ ಬೊಲೊಗ್ನೊವಿಗೆ ಗಾಂಧಿ ಸ್ಪೆಷಲ್ ರೈಲಿನಲ್ಲಿ ಹೋಗುತ್ತಿದ್ದಾಗ ಈ ಮಿತ್ರನನ್ನು ತರಾಟೆಗೆ ತೆಗೆದುಕೊಂಡರು. ವಿದ್ಯಾರ್ಥಿಗಳ ಸ್ವಾಗತವು "ಅತೃಪ್ತರಾದ ಭಾರತೀಯ ವಿದ್ಯಾರ್ಥಿಗಳಿಂದ ಮಾತ್ರ" ಎಂದು ಈ ಮಿತ್ರರು ವರದಿಮಾಡಿದ್ದರು ಆದರೆ ಆ ಸ್ವಾಗತ ಮಾರ್ಸೈಲ್ಸ್ ಎಲ್ಲಾ ವಿದ್ಯಾರ್ಥಿಗಳು ವ್ಯವಸ್ಥೆಯಿಂದ ಏರ್ಪಡಿಸಿದ್ದ ಉತ್ಸವವಾಗಿದ್ದಿತು. ಗಾಂಧಿಯುವರ ಭಾಷಣದ ನಿಜವಾದ ಆವಶ್ಯಕವಾದ ಯಾವ ಭಾಗವನ್ನೂ ಆತ ವರದಿಮಾಡದೆ ಗಾಂಧಿಯವರು ಬ್ರಿಟಿಷ್ ಸರ್ಕಾರದ ದ್ವೇಷಪ್ರಚಾರಮಾಡುತ್ತಿದ್ದಾರೆ ಎಂದು ಮಾತ್ರ ವರದಿಮಾಡಿದ್ದ ಆ ವರದಿಯನ್ನು ಪುಷ್ಟೀಕರಿಸುವ ಒಂದಾದರೂ ವಾಕ್ಯ ಅಥವ ಮಾತನ್ನು ತಮ್ಮ ಭಾಷಣದಲ್ಲಿ ತೋರಿಸಬೇಕೆಂದು ಗಾಂಧಿ ಕೇಳಿದರು. ಪತ್ರಿಕೆಯ ಪ್ರತಿನಿಧಿ ಮತ್ತೇನೂ ತೋರದೆ "ನೀವು ರಾಜಕೀಯ ಮಾತನಾಡಿದುದೇ ನನಗೆ ಆಶ್ಚರ್ಯವಾಯಿತು." ಎಂದನು. ಗಾಂಧಿಯುವರು ಹೀಗೆ ಹೇಳಿದರು. "ರಾಜಕೀಯುವನ್ನು ನನ್ನ ಬಾಳಿನ ಅತ್ಯಂತ ಪ್ರಾಮುಖ್ಯವಾದ ಸಂಗತಿಗಳಿಂದ ಬೇರೆಮಾಡಲು ಸಾಧ್ಯವಿಲ್ಲ. ಯಾಕೆಂದರೆ ನನ್ನ ರಾಜಕೀಯ ಹೊಲಸಲ್ಲ. ಅದು ಸತ್ಯ ಅಹಿಂಸೆಯೊಂದಿಗೆ ಪೂರ್ಣವಾಗಿ ಮಿಳಿತವಾಗಿದೆ. ನಾನು ಅನೇಕಸಾರಿ ಹೇಳಿರುವಂತೆ 'ಭಾರತ ನಾಶವಾದರೂ ಚಿಂತೆಯಿಲ್ಲ. ಸತ್ಯವನ್ನು ಬಲಿಕೊಟ್ಟು ಹೊಂದುವ ಸ್ವಾತಂತ್ರ್ಯ ಬೇಕಿಲ್ಲ.' ಪತ್ರಿಕಾ ಪ್ರತಿನಿಧಿ ವರದಿಯುಲ್ಲಿ ಗಾಂಧಿಯುವರಮೇಲೆ ಇನ್ನೂ ಎನೇನೋ ಆಕ್ಷೇಪಣೆ ಹೇಳಿದ್ದ. ಆದರೆ ಯಾವುದಕ್ಕೂ ಈಗ ಆಧಾರ ಕೊಡಲಾರದೆ ಹೋದ. ಪಾಪ, ಬಡಪಾಯಿ, ಹೀಗೆ ಗಾಂಧಿ ತನ್ನನ್ನು ತರಾಟೆಗೆ ತೆಗೆದುಕೊಳ್ಳಬಹುದೆಂದು ಆತ ಭಾವಿಸಿರಲಿಲ್ಲ "ಅಯ್ಯಾ ನೀನು ಸತ್ಯದ ಸುತ್ತ ತಿರುಗುತ್ತಿ. ಸತ್ಯವು ಇನ್ನೂ ಹೆಚ್ಚು ಸುಂದರವಾಗಿ ಕಾಣಲೆಂದು ಪತ್ರಿಕಾಕರ್ತರು ಅದನ್ನು ಅಲಂಕರಿಸುತ್ತಾರೆ". ಎಂದರು ಗಾಂಧಿ.

ಮಾರ್ಸೈಲ್ಸ್‌ನಲ್ಲಿ ನಮ್ಮ ಸ್ವಾಗತಕ್ಕೆ ಬೀದಿಯ ತುಂಬ ಜನ ನೆರೆದಿದ್ದರು. ಆ ಗುಂಪನ್ನು ನೋಡಿ ಗಾಂಧಿಯುವರಿಗೇ ಆಶ್ಚರ್ಯ

ವಾಯಿತು. ಆದರೆ ಡೇಲಿಮೇಲ್ ಸುದ್ದಿಗಾರ 'ಆ ಅಲ್ಪವಾದ ಸ್ವಾಗತ ನೋಡಿ ಗಾಂಧಿಯವರಿಗೆ ಬೇಸರಿಕೆಯಾಯಿತೆಂದು' ಬರೆದಿದ್ದ. ಗಾಂಧಿಯವರು ಹೀಗೆ ಕೇಳಿದರು "ನನಗೆ ಬೇಸರಿಕೆಯಾದುದು ನಿನಗೆ ಹೇಗೆ ಗೊತ್ತು........ಬ್ರಿಟಿಷ್ ಕರ್ನಲ್ ನನಗೆ ಒಂದು ರವಿಕೆ ಕಳುಹಿಸಿದುದರಿಂದ ನನಗೆ ಕೋಪ ಬಂದಿತೆಂದು ನಿನಗೆ ಹೇಗೆ ಗೊತ್ತಾಯಿತು. ನನಗೆ ವಿನೋದವಾಯಿತೆಂದು ನಾನು ಹೇಳಿದೆನಲ್ಲ" ಎಂದರು. ಆತ 'ವಿನೋದ ಎಂದರೆ ಕೋಪವೆಂದು ತಿಳಿದೆ' ಎಂದ. ಗಾಂಧಿ ಹೀಗೆ ಹೇಳಿದರು. "ಇಲ್ಲಿ ಕೇಳು. ನನಗೆ ಹಾಸ್ಯದ ಮನೋಭಾವ ಇದೆ. ಈ ಸಂಗತಿಗಳಿಂದ ನಾನು ಕೋಪಗೊಳದಂತೆ ನನ್ನನ್ನು ಉಳಿಸಿರುವುದು ಈ ವಿನೋದ ಪ್ರವೃತಿಯೇ. ಹಾಸ್ಯ ಮನೋಭಾವ ನನ್ನಲ್ಲಿ ಇಲ್ಲದಿದ್ದರೆ ಈ ವೇಳೆಗೆ ನಾನು ಹುಚ್ಚನಾಗಿರುತ್ತಿದ್ದೆ. ಉದಾಹರಣೆಗೆ ನಿನ್ನ ಈ ಲೇಖನ ನನ್ನನ್ನು ಹುಚ್ಚನನ್ನು ಮಾಡುತ್ತಿದ್ದಿತು. ನೀನು ಈ ಲೇಖನದಲ್ಲಿ ಬರಿಯ ಸುಳ್ಳುಗಳನ್ನೇ ಹೇಳಿದ್ದೀಯ! ಆದುದರಿಂದ ನಿನಗೂ ನನಗೂ ಇನ್ನು ಸಂಬಂಧವಿಲ್ಲ ಎಂದು ನಾನು ಹೇಳಬಹುದು. ಆದರೆ ನಾನು ಹಾಗೆ ಹೇಳುವುದಿಲ್ಲ. ನೀನು ಬಂದಾಗಲೆಲ್ಲಾ ನಿನಗೆ ಸಂದರ್ಶನ ಕೊಡುತ್ತೇನೆ" ಆತನನ್ನು ಈ ಮಾತುಗಳು ಚುಚ್ಚಿದವು. ಆದರೆ ಅವನಿಗೆ ಪಶ್ಚಾತ್ತಾಪವಾಗಲಿಲ್ಲ.

## ಸತ್ಯಕ್ಕೆ ಸಂಚಕಾರ

"ಆದರೆ ಪತ್ರಿಕಾ ಪ್ರಪಂಚದಲ್ಲಿ ಸತ್ಯವೆಂಬುದಕ್ಕೆ ಸ್ವಾಗತವಿಲ್ಲ. ಹೆಸರುವಾಸಿಯಾದ ಪತ್ರಿಕೆಗಳವರೂ ಸಹ ಸತ್ಯವನ್ನು "ಅಲಂಕರಿಸುತ್ತಾರೆ." ಗಾಂಧಿಯುವರು ದುಂಡುಮೇಜಿನ ಪರಿಷತ್ತಿಗೆ ಪ್ರಯಾಣ ಮಾಡಿದ ಹಡಗಿನಲ್ಲಿ ಅಮೆರಿಕ ಪತ್ರಿಕೆಯ ಬಾತ್ಮೀದಾರರಾಗಿ ಅವರೊಂದಿಗೆ ಪ್ರಯಾಣಮಾಡಿದ ಮಿಲ್ಸ್ ಎಂಬುವರು ಗಾಂಧಿಯವರ ವಿಚಾರ ಚೆನ್ನಾಗಿ ತಿಳಿದವರಾದರೂ ಸ್ವಲ್ಪ ಅಪಪ್ರಚಾರ ಮಾಡಿದರು. ಅವರು ಪ್ರಾರ್ಥನೆಯ ದೃಶ್ಯವನ್ನೂ, ಚರಕದ ಸೊಬಗನ್ನೂ ಇನ್ನೂ ಅನೇಕ ಇತರ ದೃಶ್ಯಗಳನ್ನೂ ವರ್ಣಿಸಿದರು. ಆದರೆ ಗಾಂಧಿಯುವರ

ಹಾಲಿಗೆ ಭಾಗಿಯಾಗುವ ಒಂದು ಬೆಕ್ಕೂ ಅಲ್ಲಿ ಇಲ್ಲದಿದ್ದರೆ ದೃಶ್ಯ ಪೂರ್ಣ ವಾಗುವುದಿಲ್ಲವೆಂದು ಅವರಿಗೆ ತೋರಿರಬೇಕು. ಆದುದರಿಂದ ಅದನ್ನೂ ಸೇರಿಸಿದರು. ಯರವಾಡದಲ್ಲಿ ಗಾಂಧಿಯವರೊಂದಿಗೆ ನಡೆಸಿದ ರೋಮಾಂಚವಾದ ಸಂಭಾಷಣೆಯನ್ನು ಪ್ರಕಟಿಸಿ ಪ್ರಸಿದ್ಧರಾದ ಮಿ|| ಸ್ಲೋಕೋಂ, ಗಾಂಧಿಯವರ ಔದಾರ್ಯವನ್ನು ವಿವರಿಸುವುದರಲ್ಲಿ ಒಂದು ಸ್ಪಷ್ಟವಾದ ಉದಾಹರಣೆ ಕೊಡುವುದು ಆವಶ್ಯಕವೆಂದು ಊಹಿಸಿದರು. ಅವರ ಊಹನೆ ಗಾಂಧಿಯುವರು ಪ್ರಿನ್ಸ್ ಆಫ್ ವೇಲ್ಸ್‌ರ ಕಾಲಿಗೆ ಬೀಳುತ್ತಿರುವ ಚಿತ್ರವನ್ನು ಕಂಡಿತು ಗಾಂಧಿಯುವರು ಹೀಗೆ ಹೇಳಿದರು. ಮಿ|| ಸ್ಲೋಕೋಂ, ನೀವು ಇನ್ನೂ ಹೆಚ್ಚಿಗೆ ಅರಿತವರು ಎಂದು ಭಾವಿಸಿದ್ದೆ."ಸರಿ. ಇದು ನಿಮ್ಮ ಊಹನಾಶಕ್ತಿಗೆ ಸಹ ಅವಮಾನ. ಭಾರತದ ಅತ್ಯಂತ ದೀನರಾದ ಅಸ್ಪೃಶ್ಯರನ್ನೂ ದರಿದ್ರರಾದ ಜಾಡಮಾಲಿಗಳನ್ನೂ ನಾವು ಇಷ್ಟುಕಾಲ ತುಳಿದುದಕ್ಕೆ, ಅವರಿಗೆ ನಮಸ್ಕಾರ ಮಾಡುತ್ತೇನೆ. ಅವರ ಪಾದದ ಧೂಳನ್ನು ಬೇಕಾದರೂ ಗ್ರಹಿಸುತ್ತೇನೆ. ಆದರೆ ನಾನು ಚಕ್ರವರ್ತಿಗೂ ಅಡ್ಡಬೀಳುವುದಿಲ್ಲ. ಪ್ರಿನ್ಸ್ಆಫ಼ವೇಲ್ಸ್‌ಗಂತೂ ಇಲ್ಲವೇ ಇಲ್ಲ. ಯಾಕೆಂದರೆ ಇವರು ಉದ್ಧತವಾದ ಪಶುಬಲದ ಪ್ರತಿನಿಧಿಗಳು. ಒಂದು ಆನೆ ನನ್ನನ್ನು ಬೇಕಾದರೆ ತುಳಿಯುಬಹುದು. ನಾನು ಅದಕ್ಕೆ ನಮಸ್ಕಾರ ಮಾಡುವುದಿಲ್ಲ. ಆದರೆ ಅಜ್ಞಾನದಿಂದ ಒಂದು ಇರುವೆಯನ್ನು ನಾನು ತುಳಿದರೂ ಅದಕ್ಕೆ ನಮಸ್ಕಾರ ಮಾಡುತ್ತೇನೆ."

ಗಾಂಧಿಯವರು ಯಾವಾಗಲೂ ಕೋಪಿಸಿಕೊಳ್ಳುವುದೇ ಇಲ್ಲ. ಮೂರ್ಖರನ್ನು ಸಹಿಸುವುದೇ ಅವರ ಶಕ್ತಿ. ವಾಗ್ವಾದದಿಂದ ಅವರಿಗೆ ಸಾಮಾನ್ಯವಾಗಿ ಬೇಸರಿಕೆಯುಂಟಾಗುವುದಿಲ್ಲ. ಬಂಗಾಳದಲ್ಲಿ ಒಂದು ಗ್ರಾಮದಲ್ಲಿ ವಿದ್ಯಾರ್ಥಿಗಳ ಸಭೆಯನ್ನು ಕುರಿತು ಗಾಂಧಿ ಹೀಗೆ ಕೇಳಿದರು "ಈಗ ಹೇಳಿ ನಿಮ್ಮಲ್ಲಿ ಎಷ್ಟುಜನ ಆಗಾಗ್ಗೆ ಸುಳ್ಳು ಹೇಳುತ್ತೀರಿ?" ಮೊದಲು ಇಬ್ಬರು ಕೈಎತ್ತಿದರು. ಅನಂತರ 3-4 ಜನ ಎತ್ತಿದರು. ಕೊನೆಗೆ ಎಲ್ಲರೂ ಕೈಎತ್ತಿದರು. ಅನಂತರ ಗಾಂಧಿಯವರು ಹೀಗೆ ಹೇಳಿದರು " ಎಲ್ಲಿಯುವರೆಗೆ ನೀವು ಸುಳ್ಳುಹೇಳುವಿರೆಂದು ತಿಳಿದಿರುವಿರೋ ಅಲ್ಲಿಯುವರೆಗೆ ನಿಮಗೆ ಏಳಿಗೆಯುಂಟು. ತಾವು ಎಂದಿಗೂ

ಸುಳ್ಳು ಹೇಳುವುದಿಲ್ಲವೆಂದುಕೊಂಡವರಿಗೆ ದಾರಿ ಬಹುಕಷ್ಟ. ನಾನು ಇಬ್ಬರಿಗೂ ಜಯವನ್ನು ಬಯಸುತ್ತೇನೆ"

## ಅನಾಸಕ್ತಿ ವಿನೋದದ ಮೂಲ

ಒಂದು ಸಭೆಯಲ್ಲಿ ಗಾಂಧಿಯವರನ್ನು ಒಬ್ಬರು "ಕುಡಿಯುವವರಲ್ಲಿ ನಿಮಗೆ ಯಾಕೆ ಅಷ್ಟು ಅನೌದಾರ್ಯ"? ಎಂದು ಕೇಳಿದರು. ಗಾಂಧಿ "ಅವರ ಕುಡಿದ ಫಲವನ್ನು ಅನುಭವಿಸುವ ಅವರ ಸಂಸಾರದವರಲ್ಲಿ ನಾನು ಉದಾರಿಯಾಗಿರುವುದರಿಂದ" ಎಂದು ಉತ್ತರವಿತ್ತರು. ಶ್ರೀಮತಿ ವೈಲ್ಸ್ ಎಂಬುವಳು "ನಿಮಗೆ ಯಾವಾಗಲಾದರೂ ಕೋಪಬರುತ್ತದೆಯೇ" ಎಂದು ಕೇಳಿದಳು. ಗಾಂಧಿ ಕೂಡಲೇ ಬಾಣದಂತೆ "ಕಸ್ತೂರಿಬಾರನ್ನು ಕೇಳಿ. ಜಗತ್ತಿನಲ್ಲಿ ನಾನು ಎಲ್ಲರೊಂದಿಗೂ ಸರಿಯಾಗಿರುವೆನಾದರೂ ಅವಳೊಂದಿಗೆ ಇರುವುದಿಲ್ಲವೆಂದು ಅವಳು ಹೇಳುವಳು" ಎಂದರು. ಶ್ರೀಮತಿ ವೈಲ್ಸ್‌ರು "ನನ್ನ ಗಂಡ ಯಾವಾಗಲೂ ನನ್ನೊಂದಿಗೆ ಉತ್ತಮವಾಗಿ ನಡೆದುಕೊಳ್ಳುತ್ತಾನೆ" ಎಂದಳು.

"ಹಾಗಾದಮೇಲೆ [ಅಂದರೆ ನೀನು ಹೀಗೆ ಹೇಳಬೇಕಾದರೆ] ಆತ ನಿನಗೆ ತುಂಬ ಲಂಚ ಕೊಟ್ಟಿರಬೇಕು! ಎಂದರು ಗಾಂಧಿಯವರು.

ಹೀಗೆ ಆತ್ಮ ನ್ಯೇವಾತ್ಮನಾ ತುಷ್ಟಃ ಆಗಿರುವುದಕ್ಕೂ ಅವರ ಅನಾಸಕ್ತಿಯ ಮನೋಭಾವವೇ ಮುಖ್ಯಕಾರಣ ಅವರ ವಿನೋದ ಸ್ವಭಾವವೂ ಅದರ ಫಲವೇಯೆ.

" ಇಂಗ್ಲೆಂಡಿನಲ್ಲಿ .ಬೆನ್‌ವೇಟನ್ ಎಂಬಾತ ಒಂದುಸಲ ಗಾಂಧಿಯವರಲ್ಲಿಗೆ ಹಸ್ತಾಕ್ಷರಕ್ಕಾಗಿ ಬಂದ. ಆತನ ಕೈಯಲ್ಲಿ ಒಂದು ಪುಸ್ತಕ ಇದ್ದಿತು. '' ಇದನ್ನು ನಾನು ಒಂದು ಶಿಲ್ಲಿಂಗ್‌ಗೆ ಕೊಂಡುಕೊಂಡೆ. ಆಗ ಡೇಲಿಮಿರರ್‌ನಲ್ಲಿ ಕೆಲಸಮಾಡುತ್ತಿದ್ದೆ. ಪುಸ್ತಕ ಅಲ್ಲಿಗೆ ವಿಮರ್ಶೆಗಾಗಿ ಬಂದಿತ್ತು. ಇದು ವಿಮರ್ಶೆಗೆ ಅರ್ಹವಲ್ಲ ಎಂದು ಒಂದುಕಡೆ ಎಸೆದಿದ್ದರು. ನಾನು ಅದನ್ನು ಒಂದು ಶಿಲ್ಲಿಂಗ್‌ಗೆ ಕೊಂಡೆ. ಮನೆಗೆ ತೆಗೆದುಕೊಂಡು ಹೋಗಿ ಮೊದಲಿನಿಂದ ಕೊನೆಯವರೆಗೆ ಓದಿದೆ. ಕೂಡಲೇ ಅದರ ಉಪಯೋಗಮಾಡಿಕೊಂಡೆ. ನಿಮ್ಮಮೇಲೆ ಒಂದು ಉಪನ್ಯಾಸಮಾಲೆ ಕೊಟ್ಟೆ. ಅಲ್ಲಿಂದಲೇ ನಮ್ಮ ಪರಿಚಯ ಪ್ರಾರಂಭ

ವಾಯಿತು. ಪುಸ್ತಕದಲ್ಲಿ ನಾನು ಬಾಯಲ್ಲಿ ಹೇಳದಿದ್ದರೂ ಬಹುದಿನಗಳಿಂದ ಯೋಚಿಸಿಕೊಂಡುದೆಲ್ಲ ಇದ್ದಿತು.

ಗಾಂಧಿಯವರಿಗೆ ಆಶ್ಚರ್ಯವಾಯಿತು. ಅವರು ನಗುತ್ತಾ" ಹಾಗಾದರೆ ನಿಮ್ಮ ಯೋಚನೆಗಳನ್ನು ನಾನು ತೆಗೆದುಕೊಂಡೆ. ಅಥವ ನನ್ನ ಯೋಚನೆಗಳನ್ನು ನೀವು ತೆಗೆದುಕೊಂಡಿರಿ. ಹೇಗಾದರೂ ಆಗಲಿ. ನಿಮ್ಮ ಹಣಕ್ಕೆ ತಕ್ಕ ಪ್ರತಿಫಲ ದೊರಯಿತಲ್ಲವೆ ?

ಆತ "ನಿಜವಾಗಿಯೂ. ನಾನು ಆ ಪುಸ್ತಕ ಉಪಯೋಗಿಸಿರುವ ಕ್ರಮದಿಂದ, ನನಗೆ ಹಸ್ತಾಕ್ಷರಕ್ಕೆ ಅರ್ಹತೆ ಇದೆ ಎಂದು ನೀವು ಒಪ್ಪುವುದಿಲ್ಲವೆ ?

ಶಿಲಿಂಗ್‌ನ ಬೆಲೆಯ ಪುಸ್ತಕ ಯಾವುದೆಂದು ವಾಚಕರು ಊಹಿಸುವರೆ ?" ಇಂಗ್ಲೇಡಿನಲ್ಲಿ ಗಾಂಧಿಯವರ ಹಸ್ತಾಕ್ಷರಕ್ಕಾಗಿ ಬಂದ ಮತ್ತೊಬ್ಬ ಮನುಷ್ಯ, ಮೀರಾಬೆನ್‌ರ ತಂದೆಯವರನ್ನು ಬಲ್ಲವನಾಗಿದ್ದ. ಹಸ್ತಾಕ್ಷರಕ್ಕೆ ಅವನ ಅರ್ಹತೆಗಳು ಯಾವುವೆಂಬುದನ್ನು ಆತ ಮೀರಾಬೆನ್‌ರಿಗೆ ಹೀಗೆ ಹೇಳಿದ "ನಾನು ನೌಕೆಯಲ್ಲಿ 21 ವರುಷ, ಸೇವೆ ಮಾಡಿದ್ದೇನೆ. ನಿಮ್ಮ ತಂದೆಯ ಕೈಕೆಳಗೆ ಕೆಲಸಮಾಡಿದ್ದೇನೆ. ನನ್ನ ಅಳಿಯ ಗಾಂಧಿಯವರಿಗೆ ಆಡಿನ ಹಾಲನ್ನು ಕೊಡುತ್ತಿದ್ದಾನೆ. ಗಾಂಧಿ ದಯವಿಟ್ಟು ನನಗೆ ಹಸ್ತಾಕ್ಷರ ಕೊಡಲಾರರೆ ?"

ಅವನ ಪ್ರಾರ್ಥನೆ ವ್ಯರ್ಥವಾಗಲಿಲ್ಲ. ಗಾಂಧಿಯವರು"ಆತ ಒಳಕ್ಕೆ ಬರಲಿ" ಎಂದರು. ಆತ ಒಳಕ್ಕೆ ಬಂದು ಹೀಗೆ ಹೇಳಿದ.

'ಸ್ವಾಮಿ ನಿಮಗೂ ನಿಮ್ಮ ಕೆಲಸಕ್ಕೂ ಜಯ ಕೋರುತ್ತೇನೆ. ನನಗೆ ಈ ಜಗತ್ತು ಸಾಕಾಗಿದೆ. ನಾನು ಯುದ್ಧದಲ್ಲಿ ಸೇರಿದ್ದೆ. ಸ್ಥಳದಿಂದ ಸ್ಥಳಕ್ಕೆ ತಿರುಗಿದೆ. ಸಾಲೊನಿಕದಿಂದ ಗ್ಯಾಲಿಪೊಲಿಗೆ ಬರಿಯ ಕಾಲಿನಲ್ಲಿ ನಡೆದುಕೊಂಡು ಹೋಗಬೇಕಾಯಿತು. ಹೇಳಲಸಾಧ್ಯವಾದ ಕಷ್ಟ ಅನುಭವಿಸಿದೆವು. ಮುಂದಲ ಯುದ್ಧದಲ್ಲಿ ನಾನು ಕಾದುವುದಿಲ್ಲ. ಸೆರೆಮನೆಗೆ ಬೇಕಾದರೂ ಹೋಗುತ್ತೇನೆ. ಯುದ್ಧ ಭಯಂಕರ. ಆದರೆ ನಿಮ್ಮ ಧ್ಯೇಯಕ್ಕಾಗಿ ಬೇಕಾದರೆ ಹೋರಾಡುತ್ತೇನೆ. ನಿಮ್ಮ ಕೆಲಸದಲ್ಲಿ ನಿಮಗೆ ಜಯವಾಗಲಿ'

ತನ್ನ ಮಗಳು ಮತ್ತು ಅಳಿಯನ ಭಾವಚಿತ್ರ ಆತನಲ್ಲಿತ್ತು.

ಆತ ಹೊರಟಾಗ ಗಾಂಧಿಯವರು "ನಿನಗೆ ಮಕ್ಕಳೆಷ್ಟು?" ಎಂದು ಕೇಳಿದರು.

ಆತ "ಎಂಟು. ನಾಲ್ಕು ಹೆಣ್ಣು ನಾಲ್ಕು ಗಂಡು".

ಗಾಂಧಿಯವರು "ನನಗೆ ನಾಲ್ಕು ಗಂಡು. ನಾನು ನಿಮ್ಮೊಂದಿಗೆ ಅರ್ಧದಾರಿ ಓಡಬಲ್ಲೆ" ಎಂದರು. ನೆರದಿದ್ದವರೆಲ್ಲಾ ಘಟ್ಟಿಯಾಗಿ ನಕ್ಕರು.

## ಚಾರ್ಲಿ ಚಾಪ್ಲಿನ್

ಗಾಂಧಿಯವರ ಬಾಳು ಕಾರ್ಯದಿಂದ ಪೂರ್ಣವಾಗಿದೆ. ಅಲ್ಲಿ ಒಂದು ನಿಮಿಷವೂ ಬಿಡುವಿಲ್ಲ. ಕೆಲವು ವಿಷಯದಲ್ಲಿ ಅವರ ಏಕಾಗ್ರತೆ ಅತ್ಯಂತ ಆಶ್ಚರ್ಯವಾಗಿದೆ. ಜಗತ್ತೇ ಚೆನ್ನಾಗಿ ಬಲ್ಲ ಚಾರ್ಲಿ ಚಾಪ್ಲಿನ್ ಯಾರೆಂಬುದೇ ಗಾಂಧಿಯವರಿಗೆ ತಿಳಿದಿರಲಿಲ್ಲ. ಚಾರ್ಲಿ ಚಾಪ್ಲಿನ್ ಗಾಂಧಿಯವರನ್ನು ನೋಡಲು ಬಂದಾಗ ಗಾಂಧಿ "ಆತ ಯಾರು? ಎಂದು ಸ್ವಾಭಾವಿಕವಾಗಿ ಕೇಳಿದರು. ಗಾಂಧಿಗೆ ಚಾಪ್ಲಿನ್‌ರ ಹೆಸರು ಗೊತ್ತಿಲ್ಲದಿದ್ದರೂ ಚಾಪ್ಲಿನ್‌ಗೆ ಗಾಂಧಿಯವರ ಮತ್ತು ಅವರ ಚರಕದ ಹೆಸರು ಗೊತ್ತಿದ್ದಿತು. ಆತ ಗಾಂಧಿಯವರನ್ನು ನೋಡಿದ ಕ್ಷಣವೇ "ನೀವು ಯಾಕೆ ಯಂತ್ರಗಳಿಗೆ ವಿರೋಧವಾಗಿದ್ದೀರಿ?" ಎಂದು ಕೇಳಿದ. ಗಾಂಧಿಯವರು ಚರಕವನ್ನು ತೋರಿಸಿ ಇದು "ರೈತನಿಗೆ ಆರುತಿಂಗಳ ಕಸಬನ್ನು ಒದಗಿಸುವುದಾಗಿದೆ" ಎಂದರು.

ಚಾಪ್ಲಿನ್ "ಹಾಗಾದರೆ ಇದು ಬಟ್ಟೆಗೆ ಮಾತ್ರ ಅನ್ವಯಿಸುತ್ತದೆ" ಎಂದರು.

ಗಾಂಧಿ "ಹೌದು. ಆಹಾರದಲ್ಲಿಯೂ ವಸ್ತ್ರದಲ್ಲಿಯೂ ಪ್ರತಿ ರಾಷ್ಟ್ರವೂ ಸ್ವತಂತ್ರವಾಗಿರಬೇಕು. ಹಿಂದೆ ನಮ್ಮ ಪದಾರ್ಥ ನಾವು ತಯಾರಿಸಿಕೊಳ್ಳುತ್ತಿದ್ದೆವು. ಮತ್ತೆ ಹಾಗೆಯೇ ಇರಬೇಕೆಂದು ಬಯಸ್ತು ತ್ತೇವೆ. ಇಂಗ್ಲೆಂಡು ಯಂತ್ರಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಸಾಮಾನು ತಯಾರುಮಾಡುವುದರಿಂದ ಬೇರೆಕಡೆ ಗಿರಾಕಿಗಳನ್ನು ಹುಡುಕಬೇಕು. ಇದನ್ನು ನಾವು ಲೂಟಿ ಎಂದು ಕರೆಯುತ್ತೇವೆ ಹೀಗೆ ಲೂಟಿಮಾಡುವ

ಇಗ್ಲೆಂಡು, ಜಗತ್ತಿಗೇ ಅಪಾಯ. ಹೀಗಿರುವಾಗ ಭಾರತವೂ ಯಂತ್ರ ಗಳಿಂದ ಹೆಚ್ಚಾಗಿ ತಯಾರುಮಾಡಿ ಲೂಟಿ ಮಾಡುಲು ಪ್ರಾರಂಭಿಸಿದರೆ ಜಗತ್ತಿಗೆ ಇನ್ನೆಷ್ಟು ಅಪಾಯವಾಗಬಹುದು ? ''

ಚಾಪ್ಲಿನ್ ವಿಷಯ ತತ್‌ಕ್ಷಣ ಗ್ರಹಿಸಿದರು. " ಈ ಪ್ರಶ್ನೆ ಭಾರ ತಕ್ಕೆ ಮಾತ್ರ ಸಂಬಂಧಿಸಿದುದು. ನಿಮಗೂ ರಷ್ಯದಂತೆ ಸ್ವಾತಂತ್ರ್ಯ ದೊರೆತರೆ, ನಿಮ್ಮ ನಿರುದ್ಯೋಗಿಗಳಿಗೆ ಬೇರೆ ಉದ್ಯೋಗ ದೊರೆತರೆ, ಆಗ ಎಲ್ಲರೂ ಸಮವಾಗಿ ಐಶ್ವರ್ಯವಂತರಾಗಿರಬಹುದಲ್ಲಾ ? ಆಗಲೂ ಯಂತ್ರಗಳನ್ನು ನೀವು ತಿರಸ್ಕರಿಸುತ್ತೀರಾ ? ಆಗ ಕೆಲಸಗಾರನಿಗೆ ಕೆಲಸ ಕಡಿಮೆ ; ವಿರಾಮ ಹೆಚ್ಚಾಗುತ್ತದೆ.

ಗಾಂಧಿ "ನಿಜ. ನಾನೂ ಒಪ್ಪುತ್ತೇನೆ."

ಇಷ್ಟು ಸುಲಭವಾಗಿ ಪರಕೀಯರು ಈ ಪ್ರಶ್ನೆ ಅರ್ಥಮಾಡಿಕೊಳ್ಳು ವುದು ಕಷ್ಟ. ಚಾಪ್ಲಿನ್‌ರು ತೆರೆದ ಮನಸ್ಸುಳ್ಳವರಾಗಿ ಸಹಾನುಭೂತಿ ಯುಳ್ಳವರಾಗಿದ್ದುದೇ ಅವರಿಗೆ ತಿಳಿಯಲು ಮುಖ್ಯ ಕಾರಣ.

ಈ ಸಹಾನುಭೂತಿ ಮತ್ತೊಂದು ಸಂದರ್ಭದಲ್ಲಿ ಹೊರಕ್ಕೆ ಪ್ರಕಟವಾಯಿತು. ಚಾಪ್ಲಿನ್ ಒಂದು ಇಂಗ್ಲಿಷ್ ಸೆರೆಮನೆಯನ್ನು ನೋಡಿದಾಗ ಆ ನೋಟದಿಂದ ಬಹಳ ವಿಚಲಿತನಾದನು. "ಒಂದು ದೊಡ್ಡ ಗುಂಪನ್ನು ಬೇಕಾದರೂ ಎದುರಿಸಬಲ್ಲೆ. ಆದರೆ ಈ ಸೆರೆಯಾಳು ಗಳನ್ನು ಎದುರಿಸಲಾರೆ. ದೇವರ ದಯ ಇಲ್ಲದಿದ್ದರೆ ನೀನೂ (ನಾನೂ) ಅವರ ಜತೆ. ಇರುತ್ತಿದ್ದೆ" ಎಂದುಕೊಳ್ಳುತ್ತೇನೆ. ಏನನ್ನೂ ಮಾಡಲು ಸಾಧ್ಯವಾಗದುದರಿಂದ ನಾವು ನಿರ್ಬಲರಾಗಿ ತೋರುತ್ತೇವೆ ಅವರಿಗೂ ನಮಗೂ ವ್ಯತ್ಯಾಸವೇನು ? ತಪ್ಪು ಮಾಡುವುದು ಒಂದು ರೋಗ. ಅದಕ್ಕೆ ಮನೆಯಲ್ಲಿ ಚಿಕಿತ್ಸೆಮಾಡಬೇಕೇ ಹೊರತು ಸೆರೆಮನೆಯಲ್ಲಲ್ಲ." ಎಂದರು.

ಲಂಡನ್ ವಿಶ್ವವಿದ್ಯಾಲಯದ ಸಂಸ್ಕೃತ ಪ್ರೊಫೆಸರು ಗಾಂಧಿ ಯನ್ನು ನೋಡಲು ಬಂದರು. ಅವರಿಗೆ ಸಂಕೋಚವೂ ಹೆಚ್ಚು. "ನಾನು ಭಾರತದ ಪ್ರೇಮಿ. ನಿಮ್ಮಲ್ಲಿ ನನಗೆ ಬಹು ಮೆಚ್ಚಿಕೆ. ನನ್ನ ಸದಾಶಯಗಳು ನಿಮ್ಮೊಂದಿಗೆ ಇರಲಿ " ಎಂದರು. ಗಾಂಧಿಯವರು

ನೀವು ಒಳ್ಳೆಯ ಪಂಡಿತರೇ? ಎಂದು ಕೇಳಿದರು. ಪ್ರೊಫೆಸರರು ನಕ್ಕರು. ಗಾಂಧಿಯವರು "ಸಂಕೋಚವಿಲ್ಲದೆ ಹೇಳಿ. ನೀವು ಮ್ಯಾಕ್ಸ್‌ಮುಲ್ಲರ್‌ರಷ್ಟು ದೊಡ್ಡ ಪಂಡಿತರೇ" ಎಂದರು. ಪ್ರೊಫೆಸರರು "ಹೂ. ನನ್ನ ಶಕ್ತಿಯಲ್ಲಿ ನನಗೆ ನಂಬಿಕೆ ಇದೆ. ಇಲ್ಲದಿದ್ದಿದ್ದರೆ ಈ ಸಂಸ್ಕೃತ ಪ್ರೊಫೆಸರ್ ಸ್ಥಳವನ್ನು ಆಕ್ರಮಿಸಲು ನನಗೆ ಧೈರ್ಯವಿರುತ್ತಿರಲಿಲ್ಲ. ಗೀತೆ ನನಗೆ ಬಾಯಲ್ಲಿ ಬರುತ್ತದೆ. ಉಪನಿಷತ್‌ಗಳನ್ನೂ ತಕ್ಕಮಟ್ಟಿಗೆ ಚೆನ್ನಾಗಿ ವ್ಯಾಸಂಗ ಮಾಡಿದ್ದೇನೆ."

ನಾಯಮಾತ್ಮಾ ಪ್ರವಚನೇನಲಭ್ಯೋ ನಮೇಧಯಾ ನ ಬಹುನಾಶ್ರುತೇನ ।
ಯಮೇವೈಷವೃಣುತೇ ತೇನಲಭ್ಯಸ್ತಸ್ಯೈಷ ಆತ್ಮಾವಿವೃಣುತೇ ತನೂಂಸ್ವಾಮ್ ॥
ನಾಯಾಮಾತ್ಮಾಬಲಹೀನೇನ ಲಭ್ಯೋ ನಚಪ್ರಮಾದಾತ್ತಪಸೋ ವಾಪ್ಯಲಿಂಗಾತ್ ।
ಏಕೈರೂಪಾಯೈರ್ಯತತೇ ಯಸ್ತು ವಿದ್ವಾಂಸ್ತಸ್ಯೈಷ ಆತ್ಮಾವಿಶತೇ ಬ್ರಹ್ಮಧಾಮ ॥

ಇದು ನನ್ನ ನೀತಿ ಎಂದರು. ಗಾಂಧಿಯವರು ನಗುತ್ತಾ "ಉಚ್ಚಾರಣೆಯಲ್ಲಿ ನಿಮಗೆ ಬಹಳ ಹೇಳಿಕೊಡಬೇಕಾಗಿದೆ" ಎಂದರು.

## ಅಜಾತಶತ್ರು

ಹೀಗೆ ಗಾಂಧಿಯವರು ಅನಾಸಕ್ತರಾದುದರಿಂದಲೇ ಅವರು ಅಜಾತ ಶತ್ರುವೂ ಹೌದು. ಸ್ವಾರ್ಥಿಗಳೂ ಸತ್ಯದ್ವೇಷಿಗಳೂ ಹಿಂಸಾವಾದಿಗಳೂ ಗಾಂಧಿಯವರಲ್ಲಿ ಅಮಿತ್ರನನ್ನು ಕಾಣಬಹುದು. ಆದರೆ ಗಾಂಧಿಯವರಿಗೆ ಮಾತ್ರ ಯಾರೂ ಶತ್ರುಗಳೇ ಇಲ್ಲ. ಅವರ ಪ್ರೇಮ ಎಲ್ಲರಲ್ಲಿಯೂ ಸಮಾನ ಅವರಿಗೆ ಎಲ್ಲ ದೇಶದ ಎಲ್ಲ ಬಣ್ಣದ ಎಲ್ಲ ಮತಗಳ ಜನರೂ ಒಂದೇಯೆ. ಸಾಮ್ರಾಜ್ಯವಾದಿಗಳು ಹೊರತು ಉಳಿದವರೆಲ್ಲಾ ಗಾಂಧಿ, ಅಜಾತ ಶತ್ರು ಎಂದು ಒಪ್ಪಿದ್ದಾರೆ. ಡೀನ್ ಆಫ್ ಕ್ಯಾಂಟರ್ ಬರಿಯವರನ್ನು "ನೀವು ಗಾಂಧಿಯನ್ನು ಕ್ರಿಸ್ತಧರ್ಮಕ್ಕೆ ಪರಿವರ್ತನೆಮಾಡಲು ಪ್ರಯತ್ನಿಸುತ್ತಿದ್ದೀರಾ'' ಎಂದು ಕೇಳಿದಾಗ ಅವರು ಕೋಪದಿಂದ "ಅವರನ್ನೇ ಪರಿವರ್ತನೆಮಾಡುವುದು! ನಾನು ನೋಡಿದವರ ಪೈಕಿ ಅವರಂತೆ ಕ್ರಿಸ್ತಧರ್ಮಾನುಸಾರವಾದ ಬಾಳನ್ನು ಬಾಳುವವರು ಬೇರೆಯಾರೂ ಇಲ್ಲ." ಎಂದರು.

ಭಾರತದ ಸಂಕೋಲೆಗೆ ಮುಖ್ಯ ಕಾರಣವಾದ ಇಂಗ್ಲೆಂಡಿನವರಲ್ಲಿಯೇ ಗಾಂಧಿಯವರ ಪ್ರೀತಿ ಅತಿಶಯ. ಈ ದೇಶದಲ್ಲಿದ್ದುಕೊಂಡು ಭಾರತದ ವೆಚ್ಚದಲ್ಲಿ ಜೀವಿಸುವವರಲ್ಲದ, ಸ್ವಾತಂತ್ರ್ಯ ಪ್ರಿಯರಾದ ಎಲ್ಲ ಆಂಗ್ಲೇಯರಿಗೂ ಇದು ಗೊತ್ತು. ಗಾಂಧಿಯವರ ಚಳುವಳಿ ಶುದ್ಧೀಕರಣ ಎಂಬುದು ಇಂಗ್ಲೆಂಡಿನ ಕೂಲಿಗಾರರಿಗೆ ಸಹ ಗೊತ್ತು. ರೌಂಡ್ ಟೇಬಲ್ ಸಮ್ಮೇಳನಕ್ಕೆ ಗಾಂಧಿಯವರು ಹೋಗಿದ್ದಾಗ ಒಬ್ಬ ಲ್ಯಾಂಕಶೈರ್ ಕೂಲಿ ಹೀಗೆ ಕಾಗದ ಬರೆದನು "ನಾನು ಲ್ಯಾಂಕಶೈರ್ ಹತ್ತಿ ಗಿರಣಿಗಳಲ್ಲಿ ಕೆಲಸಮಾಡುವವನು ನಿಮ್ಮ ಮತ್ತು ಭಾರತಕಾಂಗ್ರೆಸ್ ಮುಖಂಡರ ಕಾರ್ಯದಿಂದ ನನಗೆ ಕಷ್ಟವುಂಟಾಗಿದೆ. ಆದರೆ ನಮಗೆ ಗಾಂಧಿಯವರಲ್ಲಿ ಒಳ್ಳೆಯ ಮೆಚ್ಚುಕೆ ಇದೆ. ನಮ್ಮ ಇತರ ಕೆಲವು ಲಾಂಕಶೈರಿನ ಮಿತ್ರರೂ ಗಾಂಧಿಯವರನ್ನು ಬಹಳ ಮೆಚ್ಚುತ್ತಾರೆ. ಲಾಂಕಶೈರಿನ ಮತ್ತೊಬ್ಬ ಕೂಲಿ ಹೀಗೆ ಬರೆದ "ಕುಡಿತದ ಶಾಪಕ್ಕೆ ಒಳಗಾದ ಭಾರತಕ್ಕೆ ಮಾತ್ರವೇ ಅಲ್ಲ. ಕುಡಿತದ ಪಿಶಾಚಿ ಬಡಿಯುವ ಜಗತ್ತಿಗೆಲ್ಲಾ ನೀವೇ ಗುರು. ನೀವು ನಮ್ಮ ಮುಖಂಡರು ಮತ್ತು ಜಗತ್ತಿನಲ್ಲೆಲ್ಲಾ ಶ್ರೇಷ್ಠರಾದ ಕ್ರಿಸ್ತರು. ನಾನು ತೀವ್ರವಾಗಿ ಪಾನ ವಿರೋಧಿ. ನೀವು ರಾಚ್‌ಡೇಲ್‌ಗೆ ಬಂದರೆ ನಿಮಗೆ ಗೊತ್ತಾಗುವುದು. ಯಾವ ಬಗೆಯ ಸಭೆ ಆದಮೇಲೂ ನಾನು ಆ ಸಭೆಯಲ್ಲಿ ಕೆಲವು ನಿಮಿಷ ಮಾತನಾಡುತ್ತೇನೆ. ಕುಡಿತದ ಅನಾಹುತ ತೋರಿಸುತ್ತೇನೆ. ಧೈರ್ಯದಿಂದ ತನ್ನ ತತ್ವವನ್ನು ಪ್ರತಿಪಾದಿಸುವವನು ಗಾಂಧಿ ಒಬ್ಬನೇ ಎಂದು ಹೇಳುತ್ತೇನೆ. ಈಚೆಗೆ ನನ್ನನ್ನು ನೋಡಿದಕೂಡಲೇ ಜನರು "ಗಾಂಧಿಮಿತ್ರ ಬರುತ್ತಿದ್ದಾನೆ" ಎನ್ನುತ್ತಾರೆ. ನಾನು ನಿಮ್ಮ ಕಾಲಿನ ಬೂಟ್ಸು ಬಿಚ್ಚುವುದಕ್ಕೂ ಅರ್ಹನಲ್ಲ. ಕೂಲಿಗಳ ದುಡ್ಡೆಲ್ಲಾ ಈ ಹೆಂಡದ ಪಡಕಾನೆಗಳಿಗೇ ಹೋಗುತ್ತಿದೆ. ಭಾರತದ ರೈತರು ಈ ನಮ್ಮ ಮಿಲ್ ಸಾಮಾನುಗಳನ್ನು ಕೊಳ್ಳಬೇಕೆಂದು ಬಲಾತ್ಕರಿಸುತ್ತೇವೆ. ನಾವು ಆ ಹಣದಿಂದ ಕುಡಿಯುತ್ತೇವೆ. ಮತ್ತೂ ಕುಡಿಯುತ್ತೇವೆ. ಕುಡಿತದಲ್ಲಿ ಮುಳುಗಿರುವ ಈ ಇಂಗ್ಲೆಂಡ್ ದೇಶಕ್ಕೆ ಬೆಳಕನ್ನು ತೋರಿಸಲು ನೀವು ಭಗವಂತನ ದೂತರಾಗಬೇಕೆಂದು ಪ್ರಾರ್ಥಿಸು

ತ್ತೇನೆ. ದೇವರು ನಿಮ್ಮೊಂದಿಗೂ ನಿಮ್ಮ ಮಗನೊಂದಿಗೂ ನಿಮ್ಮ ಆಪ್ತಮಿತ್ರರೊಂದಿಗೂ ಇರಲಿ. ಈ ದುರಾಚಾರವನ್ನು ಇಲ್ಲಿ ತಪ್ಪಿಸಲು ನೀವು ಪ್ರಯತ್ನಿಸುವುದಕ್ಕಾಗಿ ಇಂಗ್ಲೆಂಡುದೇಶ ಭಗವಂತನನ್ನು ವಂದಿಸಲಿ. ನಿಮ್ಮ ದೇಶದಲ್ಲಿಯೂ ಈ ಭೂತ ನಾಶವಾಗಲಿ."

## ಅಹಿಂಸೆಯ ಗುರುವಿನ ಶಿಷ್ಯ, ಸೈನ್ಯದ ದಂಡನಾಯಕ

ಬ್ರಿಗೇಡಿಯರ್ ಜನರಲ್ ಕ್ರೋಸಿಯರ್ ಎಂಬುವರು ತಾವು ಬರೆದಿದ್ದ ಗಾಂಧಿಗೆ ಒಂದುಮಾತು (A word to Gandhi) ಎಂಬ ಪುಸ್ತಕ ಒಂದನ್ನು ಗಾಂಧಿಗೆ ಕಳುಹಿಸಿದರು. "ಒಬ್ಬ ಸೈನ್ಯಾಧಿಕಾರಿ ಗಾಂಧಿಯವರ ಶಿಷ್ಯನಾಗಿರುವುದು ಗಾಂಧಿಯವರಿಗೆ ಆಶ್ಚರ್ಯವಾಗಬಹುದು" ಎಂದು ಒಂದು ಚೀಟಿ ಬರೆದುಕಳುಹಿಸಿದ್ದರು. ಆ ಪುಸ್ತಕದಲ್ಲಿ ಅವರು ವಿವರಿಸಿರುವ, ಬ್ರಿಟಿಷ್ ಸರ್ಕಾರ ಮಾಡಿರುವ ಅನ್ಯಾಯಗಳು, ನಾಗರಿಕರ ರಕ್ತವನ್ನು ಕುಡಿಸುತ್ತವೆ. ಬ್ರಿಟಿಷ್‌ಸರ್ಕಾರ ನಿರಪರಾಧಿಗಳಾದ ಐರ್ಲೆಂಡ್ ಸ್ತ್ರೀಯರಿಗೆ ಮಾಡಿದ ಅವಮಾನವನ್ನು ಪುಷ್ಟೀಕರಿಸಲು ಒಪ್ಪದೆ, ಇವರು ತಮ್ಮ ಹುದ್ದೆಗೆ ರಾಜಿನಾಮೆ ಕೊಟ್ಟರು. ಬ್ರಿಟಿಷ್ ಸರ್ಕಾರಕ್ಕೆ ಧ್ಯೇಯಗಳೇ ಇಲ್ಲ ಎಂದು ಅವರು ಆ ಸರ್ಕಾರವನ್ನು ತಿರಸ್ಕರಿಸಿದ್ದಾರೆ. "ಬ್ರಿಟಿಷ್ ಪತ್ರಿಕೆಗಳು ಈ ಸಾಧುವಾದ ಹಿಂದುವನ್ನು ಕುರಿತು ಇವನು ಬೆತ್ತಲೆ ಫಕೀರನೆಂದು ಯಾಕೆ ಅಪಪ್ರಚಾರ ಮಾಡುತ್ತಿವೆ? ಭಾರತದಿಂದ ಕ್ರಿಸ್ತಪಾದ್ರಿಗಳನ್ನು ಹೊರಕ್ಕೆ ಅಟ್ಟಲು ಆತ ಪ್ರಯತ್ನಿಸುತ್ತಿರುವುದು ತಪ್ಪೆ? ಈ ಬ್ರಿಟಿಷ್ ಪತ್ರಿಕೆಗಳು ೧೯೨೦-೨೧ ರಲ್ಲಿ ಐರ್ಲೆಂಡನ್ನು ಕುರಿತು ಅಪಪ್ರಚಾರ ಮಾಡಿದವು! ಐರ್ಲೆಂಡಿನವರು ಒಬ್ಬರನ್ನೊಬ್ಬರು ಕೊಲ್ಲುತ್ತಿದ್ದಾರೆಂದು ಹೇಳಿದವು. ಇದೆಲ್ಲ ಬರಿಯಬುರುಡೆ! ಪತ್ರಿಕೆಗಳಿಗೆ ಯಾವ ಧ್ಯೇಯವೂ ಇಲ್ಲ. ದೇಶಪ್ರೇಮವೂ ಇಲ್ಲ. ಇದು ದೇಶಪ್ರೇಮವೂ ಅಲ್ಲ. ಭಾರತ ಸ್ವತಂತ್ರವಾಗಬಹುದು. ಜರ್ಮನಿ, ಫ್ರಾನ್ಸ್ ಎಲ್ಲ ಸ್ವತಂತ್ರವಾಗಬಹುದು. ಆದರೆ ಈ "ದೇಶಪ್ರೇಮ" ಎಂಬುದು ನಾಶವಾಗಿ ಅದರ ಸ್ಥಳದಲ್ಲಿ "ಮನುಷ್ಯತ್ವಬರಬೇಕು." ಇದೇ ಆತನ ಪುಸ್ತಕದ ಸಾರಾಂಶ.

ಭಾರತದಲ್ಲಿ ಜನರಲ್ ಡೈಯರ್‌ನಂತಹ ಫ್ರಾಂಕಿನ್‌ಸ್ಟೈನ್ ನಡೆಸಿದ ವಿಕಟನರ್ತನವನ್ನು ಬ್ರಿಟಿಷ್‌ಸರ್ಕಾರದ ಮೆಚ್ಚಿತ್ತು. ಭಾರತದ ಉಪ್ಪಿನಿಂದ ಹೊಟ್ಟೆತುಂಬಿಕೊಳ್ಳುತ್ತಿರುವ ಇಲ್ಲಿಯ ಆಂಗ್ಲೋಇಂಡಿಯನ್ ಸ್ತ್ರೀಯರು ಡೈಯರ್‌ನಿಗೆ ಇಪ್ಪತ್ತುಸಾವಿರ ಪೌಂಡಿನ ನಿಧಿಯನ್ನೂ ಕೊಟ್ಟರು. ಅದನ್ನು ನೋಡಿ ಡಾ|| ರವೀಂದ್ರನಾಥ ಟಾಗೂರರು "ಬ್ರಿಟಿಷರಿಂದ ಭಾರತೀಯರಿಗೆ ಎಂದಿಗೂ ನ್ಯಾಯ ದೊರೆಯುವುದಿಲ್ಲ" ಎಂದರು. ಆದರೆ ಭಾರತಕ್ಕೆ ಆಳುವುದಕ್ಕೆ ಬರುವವರು ಇಂಗ್ಲೆಂಡಿನ ಸಮಾಜದಲ್ಲಿ ಕೊನೆಯ ದರ್ಜೆಯಲ್ಲಿರುವವರು. ಅಲ್ಲಿ ಅವರು ಬೇಕಾಗದುದರಿಂದಲೇ ಅವರನ್ನು ಇಲ್ಲಿಗೆ ಕಳುಹಿಸುವರು. ಯಾವ ದೇಶವೂ ಧೀರರನ್ನೂ ಶೂರರನ್ನೂ ಮಹನೀಯರಾದವರನ್ನೂ ವಿವೇಕಿಗಳನ್ನೂ ತನ್ನ ದೇಶದಿಂದ ಹೊರಕ್ಕೆ ಕಳುಹಿಸುವುದಿಲ್ಲ. ಅಂತಹವರು ಎಷ್ಟು ಜನರಿದ್ದರೂ ಆ ದೇಶದ ಏಳಿಗೆಗಾಗಿ ದುಡಿಯುವುದಕ್ಕೇ ಸಾಲದು. ಆದರೆ ದಬ್ಬಾಳಿಕೆಯಲ್ಲಿ ಮತ್ತೊಂದು ದೇಶವನ್ನು ಆಳಲು, ಅಲ್ಲಿಯ ಜನರ ನ್ಯಾಯವಾದ ಸ್ವಾತಂತ್ರ್ಯಾಭಿಲಾಷೆಯನ್ನು ಅಡಗಿಸಲು ಕ್ರೂರಿಗಳೂ ದುರಾಚಾರಿಗಳೂ ಪಿತೂರಿಗಾರರೂ ಯಾವುದಕ್ಕೂ ಹೇಸದವರೂ ಬೇಕು. ಕ್ಲೈವ್, ವಾರನ್ ಹೇಸ್ಟಿಂಗ್ಸ್‌ರ ಕಾಲದಿಂದಲೂ ಭಾರತಕ್ಕೆ ಬಂದವರೆಲ್ಲಾ ಇಂಗ್ಲೆಂಡಿನ ಸಮಾಜದ "ಪರಿಯರೇ." (ಹೊಲೆಯರೇ) ಭಾರತದಲ್ಲಿರುವಾಗ ಅವರ ಜರ್ಬೇಜಬರ್. ತಮ್ಮ ದೇಶಕ್ಕೆ ಹಿಂತಿರುಗಿದಮೇಲೆ ಅವರು ಮತ್ತೆ ಅಲ್ಲಿಯ ಸಮಾಜದ ಪರಿಯರೇ. ಅವರು ಇಲ್ಲಿ ಮಾಡಿರುವ ಒಂದೊಂದು ಹೀನಕೃತ್ಯವನ್ನೂ ನೆನೆಸಿಕೊಂಡರೆ ಅಲ್ಲಿನ ಸಭ್ಯರಿಗೆ ಜಿಗುಪ್ಸೆಯುಂಟಾಗುವುದು. ಭಾರತದಿಂದ ಹಿಂದಿರುಗಿದ ಯಾವ ಅಧಿಕಾರಿಯೂ ಅನಂತರ ಸೀಮೆಯಲ್ಲಿ ಯಾವ ಪ್ರಸಿದ್ಧವಾದ ಕೆಲಸವನ್ನೂ ಮಾಡಿಲ್ಲ. ತಾನು ನಡೆಸಿದ ದಬ್ಬಾಳಿಕೆಯನ್ನು ನೆನೆಸಿಕೊಂಡು ಅನಾಮಧೇಯನಾಗಿ ತನ್ನ ಕೊನೆ ಕಂಡಿದ್ದಾನೆ.

ಆದರೆ ಇಂಗ್ಲೆಂಡು ನಿಜವಾಗಿ, ಮಹನೀಯರ ಸ್ವಾತಂತ್ರ್ಯ ಪ್ರೇಮಿಗಳ ದೇಶ. ದೇಹಕ್ಕೆ ತೊನ್ನಿನಂತೆ ಈ ಬಗೆಯ ಸಾಮ್ರಾಜ್ಯ ದಾಹದ

ವರು ಅಲ್ಲಿದ್ದರೂ, ಆ ನಿಜವಾದ ಸ್ವಾತಂತ್ರ್ಯಪ್ರೇಮಿಗಳು ತಮ್ಮ ಔದಾರ್ಯವನ್ನು ಪ್ರಕಟಿಸಿಯೇ ಪ್ರಕಟಿಸುತ್ತಾರೆ. ತಮ್ಮ ದೇಶದಲ್ಲಿ ಸಮಾಜದ ಕಳಂಕವಾಗಿರುವವರು ಪರದೇಶಗಳಲ್ಲಿ ಹೋಗಿ ತಮ್ಮ ಹೆಸರಿನಲ್ಲಿ ನಡೆಸುವ ಪೈಶಾಚಿಕ ಕೃತ್ಯಗಳನ್ನು ನೋಡಿ ಇಂಗ್ಲೀಷರು ತಲೆ ತಗ್ಗಿಸುತ್ತಾರೆ; ಪಶ್ಚಾತ್ತಾಪ ಪಡುತ್ತಾರೆ. ಪಂಜಾಬಿನಲ್ಲಿ ಡೈಯರ್ ನಡೆಸಿದ ಅತ್ಯಾಚಾರವನ್ನೂ ಹೊಟ್ಟೆಯ ಮೇಲೆ ಜನ ತೆವಳಿಕೊಂಡು ಹೋಗುವಂತೆ ಮಾಡಿದುದನ್ನೂ ಗಾಂಧಿಯವರು ಇಂಗ್ಲೆಂಡಿನ ಒಂದು ಸಭೆಯಲ್ಲಿ ವರ್ಣಿಸಿದಾಗ, ಅದನ್ನು ಕೇಳಿದ ಸಭ್ಯರು ಬೆಚ್ಚಿದರು. ಆ ಕ್ರೌರ್ಯವನ್ನು ನೆನೆದು ನಡುಗಿದರು. ಸಭೆಯ ಕೊನೆಯಲ್ಲಿ ಸತೀ ಲಿಂಡ್‌ಸೆ ಎಂಬುವರು ಗಾಂಧಿಯವರಲ್ಲಿಗೆ ಬಂದು " ಗಾಂಧಿ ನಮ್ಮ ಹೊಟ್ಟೆಯ ಮೇಲೆ ನಾವು ಐವತ್ತು ಸಲ ಬೇಕಾದರೂ ತೆವಳುತ್ತೇವೆ. ಅದು ತಕ್ಕ ಪ್ರಾಯಶ್ಚಿತ್ತವಾಗುವುದಾದರೆ" ಎಂದಳು. ಗಾಂಧಿಯವರು "ಬೇಡ, ಹಾಗೆ ಯಾರು ಮಾಡುವುದೂ ಬೇಡ. ನಾನೂ ನೀವೂ ಐವತ್ತು ಸಲ ಬೇಕಾದರೂ ಸ್ವಂತ ಇಚ್ಛೆಯಿಂದಲೇ ಹಾಗೆ ಮಾಡಬಹುದು. ಆದರೆ ಒಬ್ಬ ಇಂಗ್ಲಿಷ್ ಹುಡುಗಿಯನ್ನು ಹೊಟ್ಟೆಯ ಮೇಲೆ ತೆವಳಲು ನಾನು ಬಲಾತ್ಕರಿಸುತ್ತೇನೆನ್ನೋಣ. ಅವಳು ನನಗೆ ಒಂದು ಒದೆತ ಕೊಡುವಳು. ಅದು ನ್ಯಾಯವೇ. ನಿಮಗೆ ಆ ಕ್ರೌರ್ಯದ ಒಂದು ಉದಾಹರಣೆ ಮಾತ್ರ ಕೊಟ್ಟೆ. ಇಂಗ್ಲಿಷರು ಭಾರತದಲ್ಲಿ ಯಜಮಾನರಾಗಿ ಅಲ್ಲ. ಸೇವಕರಾಗಿ ನಿಲ್ಲಬೇಕು ಅದೇ ಬೇಕಾದ ಪಶ್ಚಾತ್ತಾಪ" ಎಂದರು.

ಲಾಂಕಶೈರಿನಲ್ಲಿ ನಿರುದ್ಯೋಗಿಗಳ ಅನೇಕ ಪಂಗಡಗಳು ಗಾಂಧಿಯವರೊಂದಿಗೆ ವಿಚಾರ ವಿನಿಮಯ ಮಾಡಿದರು. ಗಾಂಧಿಯವರು ಯಾರೊಡನೆಯೂ ಮಾತನಾಡಲು ಯಾರನ್ನೂ ನೋಡಲು ಹಿಂದೆಗೆಯಲಿಲ್ಲ. ಗಾಂಧಿಯವರು ಲಾಂಕಶೈರ್ ಕೂಲಿಗಳೊಂದಿಗೆ ತೋರಿಸಿದ ಸಹಾನುಭೂತಿಯಿಂದ, ಭಾರತದಿಂದ ಲಾಂಕಶೈರ್‌ಗೆ ನಿರುದ್ಯೋಗ ಉಂಟಾಗಿದ್ದರೂ, ಗಾಂಧಿ ತಮ್ಮ ಮಿತ್ರನೇ ಎಂದು ಲಾಂಕಶೈರ್ ಕೂಲಿಗಳು ನಂಬಿದರು. ಗಾಂಧಿಯವರು ಯಾವಾಗಲೂ ಕೂಲಿಗಳ ಹಿತೈಷಿ.

ಕೂಲಿಗಳು ಬಣ್ಣದವರಾದರೂ ಸರಿ. ಬಿಳಿಯವರಾದರೂ ಸರಿ. ಅವರ ಹೃದಯ ಸ್ವಾಭಾವಿಕವಾಗಿ ಕೂಲಿಯವರ ಕಡೆ ಹರಿಯುವುದು. ಗಾಂಧಿಯವರು ಲಾಂಕಶೈರ್ ಕೂಲಿಗಳೆದುರಿಗೆ ತಮ್ಮ ಹೃದಯವನ್ನೇ ಬಿಚ್ಚಿದರು. "ನನ್ನ ರಾಷ್ಟ್ರೀಯತೆ ಸಂಕುಚಿತವಾದುದಲ್ಲ. ನಿಮ್ಮ ದುಃಖ ನನಗೆ ತಿಳಿಯದೇ ಇಲ್ಲ. ನಿಮ್ಮ ದುಃಖದಿಂದ ನನಗೆ ಸುಖವಿಲ್ಲ. ನನ್ನ ದೇಶ, ಇತರ ಯಾವ ದೇಶದ ಖರ್ಚಿನಲ್ಲಿಯೂ ಸುಖಯಾಗಬೇಕೆಂದು ನಾನು ಬಯಸುವುದಿಲ್ಲ. ನಿಮಗೆ ಬಹಳ ಕಷ್ಟವುಂಟಾಗಿದೆ. ಆದರೆ ನಿಮ್ಮ ಎಲ್ಲ ಕಷ್ಟಕ್ಕೂ ಭಾರತವೇ ಮುಖ್ಯ ಕಾರಣವಲ್ಲ. ಕೆಲವು ಕಾಲದಿಂದ ಸ್ಥಿತಿ ಕಠಿಣವಾಗಿದೆ. ಬಟ್ಟೆ ಬಹಿಷ್ಕಾರ ಕೊನೆಯಪೆಟ್ಟು. ಎಲ್ಲ ಪರದೇಶಿ ಬಟ್ಟೆಗಳನ್ನೂ ಬಹಿಷ್ಕರಿಸುವುದು ನಮ್ಮ ರಾಷ್ಟ್ರ ಧರ್ಮ. ಆದರೆ ಭಾರತಕ್ಕೂ ಇಂಗ್ಲೆಂಡಿಗೂ ಶಾಶ್ವತವಾದ ಶಾಂತಿ, ಮಿತ್ರತ್ವ ಏರ್ಪಟ್ಟರೆ ನಮಗೆ ಬಟ್ಟೆ ಬೇಕಾದರೆ, ನಾವು ಅದನ್ನು ಲಾಂಕಶೈರಿನಿಂದಲೇ ತರಿಸಿಕೊಳ್ಳುತ್ತೇವೆ. ಆದರೆ ಅದರಿಂದ ನಿಮಗೆ ಎಷ್ಟು ಸಹಾಯವಾಗಬಹುದೋ ಹೇಳಲಾರೆ. ಜಗತ್ತಿನ ಅಂಗಡಿಗಳೆಲ್ಲಾ ಈಗ ನಿಮಗೆ ತೆರೆದಿಲ್ಲ. ನೀವು ಮಾಡಿದುದನ್ನು ಇಂದು ಇತರ ರಾಷ್ಟ್ರಗಳೂ ಸಹ ಮಾಡುತ್ತಿವೆ. ಭಾರತದ ಗಿರಣಿಗಳು ದಿನ ದಿನಕ್ಕೆ ಹೆಚ್ಚು ಬಟ್ಟೆ ತಯಾರಿಸುತ್ತಿವೆ. ಲಾಂಕಶೈರ್‌ಗಾಗಿ ಭಾರತೀಯರ ಸಾಹಸವನ್ನು ತಡೆಯಬೇಕೆಂದು ನೀವು ನನಗೆ ಖಂಡಿತವಾಗಿ ಹೇಳುವುದಿಲ್ಲವೆಂದು ಭಾವಿಸುತ್ತೇನೆ.

"ನಿಮ್ಮ ನಿರುದ್ಯೋಗ ನೋಡಿ ನನಗೆ ಬಹಳ ನೋವಾಗಿದೆ. ಆದರೆ ಇಲ್ಲಿ ಹಸಿವು ಅರೆಹಸಿವು ಎರಡೂ ಇಲ್ಲ. ಭಾರತದಲ್ಲಿ ಎರಡೂ ಇವೆ. ಭಾರತದ ಹಳ್ಳಿಗಳಿಗೆ ನೀವು ಹೋಗಿ ನೋಡಿದರೆ ಅರ್ಧ ಹೊಟ್ಟೆಯ ಮೂಳೆ ಚಕ್ಕಳದ ಹೆಣಗಳು ನಿಮ್ಮ ಕಣ್ಣಿಗೆ ಬೀಳುತ್ತವೆ. ಅವರಿಗೆ ಕೆಲಸ ಒದಗಿಸಿ ಆಹಾರ ಒದಗಿಸುವುದು ಸಾಧ್ಯವಾದರೆ ಭಾರತ ಜಗತ್ತಿಗೆ ಸಹಾಯಮಾಡಿದಂತಾಗುವುದು. ಇವತ್ತು ಭಾರತ ಜಗತ್ತಿಗೆ ಒಂದು ರೋಗ. ಔಷಧಿಯಾಗಿ ನಾನು ಚರಕವನ್ನು ಕಂಡುಹಿಡಿದೆ."

ಆದರೆ ಕೆಲವು ಕೂಲಿಗಾರರು ಹೀಗೆ ಹೇಳಿದರು. "ಜೇನು

ಗೂಡಿನಂತೆ ಕೆಲಸಮಾಡುತ್ತಿದ್ದ ಈ ಗಿರಣಿಗಳನ್ನು ನೋಡಿ. ಬ್ಲಾಕ್ ಬರ್ನ್, ಡಾರ್ವೆನ್, ಗ್ರೇಟ್ ಹಾರ್‌ವುಡ್, ಆಕ್ರಿಂಗ್ಟನ್ ಈ ಭಾಗಗಳಲ್ಲಿ ನೂರಾರು ಗಿರಣಿಗಳು ಮುಚ್ಚಿಹೋಗಿವೆ ಗ್ರೇಟ್‌ಹಾರ್‌ವುಡ್ ಭಾಗ ದಲ್ಲಿಯೇ ೧೭೪೩೬ ಮಗ್ಗಗಳು ಕೆಲಸಮಾಡದೆ ಇವೆ.

ಭಾರತೀಯರಿಗೆ ಬೇಕಾದ ಬಟ್ಟೆಗಳನ್ನು ನೆಯ್ಯುವುದರಲ್ಲಿ ನಾವು ತಯಾರಿ ತೆಗೆದುಕೊಂಡಿದ್ದೇವೆ. ನಾವು ಭಾರತೀಯರಿಗಾಗಿಯೇ ಧೋತಿ ಗಳನ್ನು ನೆಯ್ಯುತ್ತಿದ್ದೇವೆ. ಈಗಲೂ ನಾವು ಯಾಕೆ ಅವುಗಳನ್ನು ನೆಯ್ಯಬಾರದು? ಇಂಗ್ಲೆಂಡಿಗೂ ಭಾರತಕ್ಕೂ ಯಾಕೆ ಮಧುರವಾದ ಬಾಂಧವ್ಯ ಏರ್ಪಡಬಾರದು ?

" ೧೮೯೭-೯೯ ರ ಕ್ಷಾಮದಲ್ಲಿ ನಾವು ಭಾರತಕ್ಕೆ ಸಹಾಯ ಮಾಡಿದೆವು. ನಾವು ಬಡವರಿಗಾಗಿ ಹಣವನ್ನು ಶೇಖರಿಸಿ ಭಾರತಕ್ಕೆ ಕಳುಹಿಸಿದೆವು. ನಮ್ಮದು ಧಾರಾಳವಾದ ನೀತಿ 'ಬಹಿಷ್ಕಾರ ಯಾಕೆ ನಮಗೆ ಎದುರಾಗಿ ಆಗಬೇಕು? '

ಒಬ್ಬ ನೇಯ್ಗೆಯವ ಹೀಗೆ ಹೇಳಿದ "ನಾನು ಗಿರಣಿಯಲ್ಲಿ ಕೆಲಸ ಗಾರ. ೪೦ ವರ್ಷಗಳಿಂದ ಅಲ್ಲಿ ಕೆಲಸ ಮಾಡುತ್ತಿದ್ದೇನೆ. ಈಗ ನಾನು ನಿರುದ್ಯೋಗಿ. ನನಗೆ ಬೇಜಾರಾಗಿರುವುದು ಕೆಲಸವಿಲ್ಲದುದರಿಂದ ಅಲ್ಲ. ನನ್ನಲ್ಲಿಯೇ ನನ್ನ ನಂಬಿಕೆ ಹೋಯಿತು. ನಿರುದ್ಯೋಗ ಭತ್ಯ ಸ್ವೀಕರಿ ಸುತ್ತಿರುವುದರಿಂದ ನನ್ನ ಯೋಗ್ಯತೆಯಲ್ಲಿಯೇ ನನಗೆ ನಂಬಿಕೆ ಹೋಯಿತು. ನನ್ನ ಬಾಳಿನಲ್ಲಿ ಇನ್ನು ಆತ್ಮಗೌರವ ಉಳಿಯುವಂತೆ ಕಾಣುವುದಿಲ್ಲ.

ಗಾಂಧಿಯವರು ಲಾಂಕಶೈರ್ ಕೂಲಿಗಳಿಗೆ ಹೀಗೆ ಹೇಳಿದರು "ನಾನು ನಿಮ್ಮೊಂದಿಗೆ ಸತ್ಯವಾಗಿರುತ್ತೇನೆ. ನಿಮ್ಮೊಂದಿಗೆ ಸ್ಪಷ್ಟವಾಗಿ ಇರದಿದ್ದರೆ, ನಿಮ್ಮ ನಿಜವಾದ ಮಿತ್ರನಾದಂತೆ ಆಗುವುದಿಲ್ಲ. ನನ್ನ ಬಾಳಿನಲ್ಲಿ ಅರ್ಥಶಾಸ್ತ್ರವೂ ನೀತಿಯೂ, ರಾಜಕೀಯವೂ ಒಂದಾಗಿ ಹೆಣೆದುಕೊಂಡಿವೆ. ನಾನು ಎಲ್ಲಕ್ಕಿಂತ ಮೇಲೆ ಸತ್ಯದ ಬಾವುಟ ಎತ್ತಿ ದ್ದೇನೆ. ಫಲಗಳ ಮೇಲೆ ಅವಲಂಬಿಸುವುದು ನನ್ನ ಸ್ವಭಾವವಲ್ಲ. ಚರಕ ನನ್ನ ದೇಶದ ಈಗಿನ ಕಾಮಧೇನು. ಜಗತ್ತಿನ ಇಂದಿನ ಪರಿ

ಸ್ಥಿತಿಯೇ ನಿಮ್ಮ ಸ್ಥಿತಿಗೂ ಕಾರಣ. ನಾನು ಹಿಂದಲ ಮಾರ್ಚಿಯಲ್ಲಿ ಲಾರ್ಡ್ ಇರ್ವಿನ್‌ರನ್ನು ಮದ್ಯವನ್ನೂ ಪರದೇಶಿ ಬಟ್ಟೆಗಳನ್ನೂ ಬಹಿಷ್ಕರಿಸಲು ಅವಕಾಶ ಕೊಡಿರೆಂದು ಕೇಳಿದೆ. ಅವರು ಸ್ನೇಹದ ಗುರುತಾಗಿ "ಬಹಿಷ್ಕಾರವನ್ನು ಮೂರು ತಿಂಗಳು ನಿಲ್ಲಿಸಿ ಅನಂತರ ಬೇಕಾದರೆ ಮತ್ತೆ ಪ್ರಾರಂಭಿಸಿ" ಎಂದರು. ನಾನು "ಮೂರು ನಿಮಿಷವೂ ಬಿಡಲಾರೆ" ಎಂದೆ. ನಿಮ್ಮಲ್ಲಿ ಮುವ್ವತ್ತು ಲಕ್ಷ ಜನ ನಿರುದ್ಯೋಗಿಗಳಿದ್ದಾರೆ ನಮಲ್ಲಿ ಸುಮಾರು ೩೦ ಕೋಟಿ ನಿರುದ್ಯೋಗಿಗಳಿದ್ದಾರೆ. ಅವರಿಗೆ ವರ್ಷಕ್ಕೆ ಆರು ತಿಂಗಳು ಕೆಲಸವಿಲ್ಲ. ನಿಮಗೆ ಸಿಕ್ಕುವ ನಿರುದ್ಯೋಗ ಭತ್ಯ ೭೦ ಶಿಲ್ಲಿಂಗ್. ನಮ್ಮ ತಿಂಗಳಿನ ಸರಾಸರಿ ಉತ್ಪತ್ತಿ ೭॥ ಶಿಲ್ಲಿಂಗು. ಉದ್ಯೋಗ ವಿಲ್ಲದವರಿಗೆ ಆತ್ಮಗೌರವ ಹೋಗುತ್ತದೆ ಎಂದು ಆತ ಹೇಳಿದ್ದು ನಿಜ. ನಿರುದ್ಯೋಗಿಯಾಗಿ ಕುಳಿತು ಭತ್ಯ ತೆಗೆದುಕೊಳ್ಳುವುದು ಅವಮಾನವೆಂದು ನನ್ನ ನಂಬಿಕೆ. ಮುಷ್ಕರಗಳನ್ನು ನಡೆಸುವಾಗ ಕೂಲಿಗಾರರು ಸೋಮಾರಿಗಳಾಗಲು ನಾನು ಅವರಿಗೆ ಅವಕಾಶ ಕೊಡುತ್ತಿರಲಿಲ್ಲ. ಕೆಲಸಕ್ಕೆ ಹಚ್ಚುತ್ತಿದ್ದೆ. ಆದುದರಿಂದ ೩೦ ಕೋಟಿ ನಿರುದ್ಯೋಗಿಗಳು ಎಷ್ಟರಮಟ್ಟಿಗೆ ಆತ್ಮಗೌರವ ಹೀನರಾಗುತ್ತಾರೆಂಬುದನ್ನು ಯೋಚಿಸಿ. ಅವರಿಗೆ ಆತ್ಮಗೌರವವೂ ಇರುವುದಿಲ್ಲ. ದೇವರಲ್ಲಿ ನಂಬಿಕೆಯೂ ಇರುವುದಿಲ್ಲ. ಅಂತವರಿಗೆ ಭಗವಂತನ ಸಂದೇಶವನ್ನೂ ಹೇಳಲು ನನಗೆ ಧೈರ್ಯವಿಲ್ಲ. ಅವರ ಕಣ್ಣಿನಲ್ಲಿ ಹೊಳಪಿಲ್ಲ. ಆ ಹಸಿದವರ ಮುಂದೆ ದೇವರ ಸಂದೇಶವನ್ನಿಡುವುದು ಆ ನಾಯಿಯ ಮುಂದೆ ಇಟ್ಟಂತೆಯೇ. ಅವರ ದೇವರು ಅನ್ನ. ಉದ್ಯೋಗದ ಸಂದೇಶವನ್ನು ಅವರಿಗೆ ತೆಗೆದುಕೊಂಡು ಹೋದರೆ ಮಾತ್ರ ಭಗವಂತನ ಸಂದೇಶವನ್ನು ತೆಗೆದುಕೊಂಡು ಹೋಗಬಹುದು. ಸುಖವಾಗಿ ಬೆಳಗಿನ ಫಲಹಾರ ತಿಂದು, ಅದಕ್ಕಿಂತ ಸುಖವಾದ ಮಧ್ಯಾಹ್ನದ ಫಲಾಹಾರವನ್ನು ನಿರೀಕ್ಷಿಸುತ್ತಾ ಇಲ್ಲಿ ಕುಳಿತು ದೇವರ ವಿಷಯ ಮಾತನಾಡುವುದು ಚೆನ್ನಾಗಿದೆ. ಆದರೆ ದಿನಕ್ಕೆ ಎರಡು ಊಟಕ್ಕೆ ಸಹ ಗತಿ ಇಲ್ಲದವರೊಂದಿಗೆ ದೇವರ ವಿಚಾರ ಹೇಗೆ ಮಾತನಾಡಲಿ? ಅವರಿಗೆ ದೇವರು ಅನ್ನದ ರೂಪದಲ್ಲಿ ಮಾತ್ರ ಕಾಣುತ್ತಾನೆ. ಭಾರತದ

ರೈತರಿಗೆ ಭೂಮಿಯಿಂದ ಅನ್ನದ ಜತೆಗೆ ಸ್ವಲ್ಪ ಜಿಡ್ಡು ದೊರೆಯಲೆಂದು ನಾನು ಅವರಿಗೆ ಚರಕ ಕೊಟ್ಟೆ. ನಾನು ಇಂದು ನಿಮ್ಮೆದುರಿಗೆ ಮೊಣ ಕಾಲುಮೇಲಿನ ಬಟ್ಟೆ ಉಟ್ಟುಬಂದಿರುವುದರ ಕಾರಣ, ಆ ಅರ್ಧ ಹಸಿದ ಅರೆ ಬೆತ್ತಲೆಯ ಮೂಕರ ಏಕಮಾತ್ರ ಪ್ರತಿನಿಧಿ ಎಂದು.

## ಅನ್ನ ಬಟ್ಟೆಗೆ ಇತರರ ಮೇಲೆ ಅವಲಂಬಿಸೆವು

"ಭಗವಂತನ ಕೃಪೆಯ ಸಾನ್ನಿಧ್ಯದಲ್ಲಿ ನಾವು ಸುಖವಾಗಿರ ಬೇಕೆಂದು ನಾವು ಪ್ರಾರ್ಥಿಸಿವೆವು. ಕೋಟ್ಯಾಂತರ ಜನ ನಿಮ್ಮ ಬಾಗಿಲನ್ನೂ ತಟ್ಟುತ್ತಿರುವಾಗ ಹಾಗೆ ಸುಖವಾಗಿರುವುದು ಸಾಧ್ಯವಿಲ್ಲ. ನೀವು ಕಷ್ಟದಲ್ಲಿದ್ದರೂ ತಕ್ಕಮಟ್ಟಿಗೆ ಸುಖವಾಗಿದ್ದೀರಿ. ನಿಮ್ಮಸುಖ ನೋಡಿ ನನಗೆ ಹೊಟ್ಟೆಯುರಿ ಇಲ್ಲ. ನಿಮಗೆ ಒಳ್ಳೆಯದಾಗಲಿ. ಆದರೆ ಭಾರತದ ದುಃಖದ ಗೋರಿಯಮೇಲೆ ನಿಮ್ಮ ಸುಖವನ್ನು ಕಟ್ಟಲು ಬಯಸಬೇಡಿ. ಭಾರತ ಒಂಟಿಯಾಗಿರಬೇಕೆಂಬುದು ನನ್ನ ಆಸೆಯಲ್ಲ. ಆದರೆ ನಮ್ಮ ಅನ್ನ ಬಟ್ಟೆಗೆ ಇತರರಮೇಲೆ ಅವಲಂಬಿ ಸಲು ನಮಗೆ ಇಷ್ಟವಿಲ್ಲ. ಸದ್ಯದ ಕಷ್ಟವನ್ನು ಹೇಗೋ ಪರಿಹರಿಸಿ ಕೊಳ್ಳಬಹುದು. ಆದರೆ ಭಾರತದೊಂದಿಗೆ ಹಿಂದಲ ಲಾಂಕಶೈರ್ ವ್ಯಾಪಾರವನ್ನು ಮತ್ತೆ ಬೆಳೆಸುವ ಆಸೆಯನ್ನು ಬಿಡಿ. ಅದು ಸಾಧ್ಯ ವಿಲ್ಲ. ಆ ಕಾರ್ಯದಲ್ಲಿ ನಾನು ಸಹಾಯಮಾಡಲಾರೆ. ನಿಮ್ಮ ಕಷ್ಟಕ್ಕೆ ಭಾರತ ಕಾರಣ ಎನ್ನಬೇಡಿ. ನಿಮಗೆ ವಿರೋಧವಾಗಿ ಕೆಲಸಮಾಡು ತ್ತಿರುವ ಪ್ರಪಂಚದ ಶಕ್ತಿಗಳನ್ನು ಕುರಿತು ಯೋಚಿಸಿ. ವಿಷಯ ಗಳನ್ನು ಶುದ್ಧ ವಿವೇಕದ ಬೆಳಕಿನಲ್ಲಿ ನೋಡಿ.

" ಜಗತ್ತಿನ ಐದನೆಯ ಒಂದುಭಾಗದ ಜನ ನಿರುದ್ಯೋಗಿಗಳಾಗಿ ಎಲ್ಲ ಆತ್ಮಗೌರವವನ್ನು ಬಿಟ್ಟಿದ್ದಾರೆ. ಇವರನ್ನು ಏನುಮಾಡಲಿ ಹೇಳಿ? ಈ ಪ್ರಶ್ನೆ ನಿರುದ್ಯೋಗಿಯಾದ ಲ್ಯಾಂಕಶೈರ್ ಸಹ ತೆಗೆದು ಕೊಳ್ಳಲು ಅರ್ಹವಾದುದು. ನೀವು ೧೮೯೯-೧೯೦೦ ರ ಕ್ಷಾಮದಲ್ಲಿ ನಮಗೆ ಕೊಟ್ಟ ಸಹಾಯ ಹೇಳದಿರಿ. ನಿಮ್ಮೊಂದಿಗೆ ಧರ್ಮದ ವ್ಯಾಪಾರ ಮಾಡಲು ಬಂದಿದ್ದೇನೆ. ಅದು ಸಾಧ್ಯವಾಗದಿದ್ದರೆ ತಪ್ಪು ನನ್ನದಲ್ಲ.

ನನ್ನಲ್ಲಿ ಬೇಸರಿಕೆ ದ್ವೇಷ ಇಲ್ಲ. ತಿರ್ಯಕ್ ಜಂತುಗಳೂ ನನ್ನ ಮಿತ್ರರು. ಹೀಗಿರುವಾಗ ಒಂದುವರೆ ಶತಮಾನದಿಂದ ನಮ್ಮೊಂದಿಗೆ ಸಂಬಂಧ ವುಳ್ಳ ಬ್ರಿಟಿಷರು ಮಿತ್ರರಲ್ಲವೆ ? ನಿಮ್ಮಲ್ಲಿ ಕೆಲವರು ನನ್ನ ಅತ್ಯಂತ ಆಪ್ತಸ್ನೇಹಿತರು ಇದ್ದಾರೆ. ನಾನು ಸುಲಭವಾಗಿ ಸರಳವಾದ ಮನುಷ್ಯ. ಆದರೆ ನನ್ನ ಆದರವನ್ನು ನೀವು ತಿರಸ್ಕರಿಸಿದರೆ ನಾನು ಹಿಂದಕ್ಕೆ ಹೋಗುತ್ತೇನೆ. ಕೋಪದಿಂದಲ್ಲ. ನಿಮ್ಮ ಹೃದಯದಲ್ಲಿ ಸ್ಥಾನವನ್ನು ಹೊಂದಲು ನಾನು ಶುದ್ಧನಾಗಿರಲಿಲ್ಲ ಎಂಬ ಭಾವದಿಂದ "

ಗಾಂಧಿಯವರ ಚಳುವಳಿಯಿಂದಲೇ ನಿರುದ್ಯೋಗಿಗಳಾದ ಲಾಂಕ ಶೈರ್‌ನವರೂ ಸಹ ಈ ವಾದವನ್ನು ತಿರಸ್ಕರಿಸಲು ಶಕ್ತರಾಗಲಿಲ್ಲ. " ನಮ್ಮ ದೇಶದ ಹಸಿದವರಿಗೆ ಬೇರೆ ಉದ್ಯೋಗವಿಲ್ಲ. ನೀವೇ ಕಷ್ಟ ಪಟ್ಟು ಚರಕದ ಬದಲು ಮತ್ತೇನನ್ನಾದರೂ ಕಂಡುಹಿಡಿಯಿರಿ. ನಾನು ಚರಕವನ್ನು ಬಿಡುತ್ತೇನೆ. ಆದರೆ ಸದ್ಯಕ್ಕೆ ಇಷ್ಟು ಮಾತ್ರ ಹೇಳಬಲ್ಲೆ. ಭಾರತವು ಸ್ವತಂತ್ರವಾಗಿ ಇಂಗ್ಲೆಂಡಿನೊಂದಿಗೆ ಸಮಾನವಾದರೆ ಆಗ ಭಾರತ ಲಾಂಕಶೈರ್ ಬಟ್ಟೆಗೆ ಪ್ರೋತ್ಸಾಹವನ್ನು ಕೊಡುತ್ತದೆ. ಇದ ಕ್ಕಿಂತ ಹೆಚ್ಚಾಗಿ ನಾನು ಮತ್ತೇನನ್ನೂ ಮಾಡಲಾರೆ."

ಈ ಆಶ್ವಾಸನದಿಂದ ಲಾಂಕಶೈರ್ ನೇಯ್ಗೆಯವರಿಗೆ ಏನೂ ಸಮಾಧಾನವಾಗಲಿಲ್ಲ. ಅದಕ್ಕಿಂತ ಹೆಚ್ಚಾದ ಯಾವ ಆಸೆಯನ್ನೂ ಗಾಂಧಿಯವರು ಅವರಿಗೆ ತೋರಿಸುವಂತೆ ಇರಲಿಲ್ಲ. ಆದರೆ ಗಾಂಧಿ ಯವರ ಸದುದ್ದೇಶದಲ್ಲಿ ಅವರಾರಿಗೂ ಅಪನಂಬಿಕೆ ಇರಲಿಲ್ಲ. ನೆಯ್ಗೆಯವರ ಪೈಕಿ ಒಬ್ಬನು " ಇದರಿಂದ ಏನಾದರೂ ಒಳ್ಳೆಯದೇ ಆಗಬಹುದು. ಒಳ್ಳೆಯದು ಆಗದಿದ್ದರೂ ಕೆಟ್ಟದಂತೂ ಆಗುವುದಿಲ್ಲ. ಇದರ ಸದ್ಯದ ಫಲ ಒಬ್ಬರಲ್ಲಿ ಒಬ್ಬರಿಗೆ ಸಹಾನುಭೂತಿ. ಈಗ ನಾವು ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿದೆವು. ಗಾಂಧಿಯವರನ್ನು ನೋಡಿ ದುದೇ ದೊಡ್ಡ ಭಾಗ್ಯ. ಎಚ್ಚೆತ್ತ ಪೂರ್ವದೇಶಗಳ ಶಕ್ತಿ ಇವರು.'' ಎಂದನು. ಮತ್ತೊಬ್ಬನು " ನಾನೊಬ್ಬ ನಿರುದ್ಯೋಗಿ. ಆದರೆ ನಾನು ಭಾರತದಲ್ಲಿ ಇದ್ದಿದ್ದರೆ ಗಾಂಧಿಯವರು ಹೇಳುತ್ತಿರುವ ಮಾತನ್ನೇ ನಾನೂ ಹೇಳುತ್ತಿದ್ದೆ" ಎಂದನು.

# ೧೧ ಗಾಂಧಿಜಿಯವರೂ ಮತ್ತು ರಾಜಕಾರಣವೂ

ಮಹಾತ್ಮ ಗಾಂಧಿಯವರ ನಿಧನದ ನಂತರ ಜಗತ್ತು ಅವರಿಗೆ ಅರ್ಪಿಸಿದ ದುಃಖ ಬಾಷ್ಪಾಂಜಲಿಗಳ ಪೈಕಿ ಸಂಯುಕ್ತರಾಷ್ಟ್ರದ ಭದ್ರತಾ ಸಮಿತಿಯವರು (ಯು. ಎನ್. ಒ. ಸೆಕ್ಯೂರಿಟಿ ಕೌನ್ಸಿಲ್) ಹೇಳಿದ ಮಾತುಗಳು, ಮಾನವ ಜಗತ್ತಿನ ದೃಷ್ಟಿಯಿಂದ ಗಾಂಧಿಯವರ ಸೇವೆ ಸಾಧನೆಗಳನ್ನು ತಿಳಿಸುತ್ತವೆ. ಭದ್ರತಾ ಸಮಿತಿಯವರು "ಮಹಾತ್ಮ ಗಾಂಧಿಯವರ ಮಾತು ಜಗತ್ತಿನ ಶಾಂತಿಸ್ಥಾಪನೆಯ ನಮ್ಮ ಚರ್ಚೆಯಲ್ಲಿ ಅನೇಕ ಸಲ ಬಂದಿದೆ" ಎಂದು ಗಾಂಧಿಯವರಿಗೆ ಕೃತಜ್ಞತೆ ಅರ್ಪಿಸಿದ್ದಾರೆ. ಅದೇ ಭದ್ರತಾ ಮಂಡಲದ ಕಾಶ್ಮೀರ ನಿಯೋಗ ಸದಸ್ಯರು ರಾಜಗಟ್ಟದಲ್ಲಿ ಮಹಾತ್ಮ ಗಾಂಧಿಯವರ ಚಿತೆಯ ಸ್ಥಾನಕ್ಕೆ ಗೌರವ ಸಲ್ಲಿಸುತ್ತಾ "ಇವರೂ ಸಹ ನಮ್ಮ ಧ್ಯೇಯಕ್ಕಾಗಿಯೇ ದುಡಿದರು" ಎಂದಿದ್ದಾರೆ. ಒಬ್ಬ ವ್ಯಕ್ತಿಯು ಪ್ರಪಂಚದ ಅತ್ಯಂತ ಪ್ರಭಾವಶಾಲಿಯಾದ ಯು. ಎನ್ ಒ ದ ಮಾರ್ಗದರ್ಶಿಯಾದುದು ಮಾನವನ ಇತಿಹಾಸದಲ್ಲಿಯೇ ಇಲ್ಲ. ಈ ಗೌರವ ಸಂದುದು ಭಾರತ ಪುತ್ರನೊಬ್ಬನಿಗೆ.

## ಜಗತ್ತಿನ ಪ್ರಜೆ

ಮಹಾತ್ಮ ಗಾಂಧಿಯವರು ಇಡೀ ಜಗತ್ತಿನ ಪ್ರಜೆ. ಉದಾರ ಚರಿತ್ರರಿಗೆ ವಸುಧೆಯೇ ಕುಟುಂಬ ಎಂಬುದು ಇವರಿಗೆ ಚೆನ್ನಾಗಿ ಅನ್ವಯಿಸುತ್ತದೆ. ಪ್ರಪಂಚದ ದೀನರು ದರಿದ್ರರು, ದಳಿತರು, ತುಳಿಯಲ್ಪಟ್ಟವರು, ಎಲ್ಲಿದ್ದರೂ ಅವರೆಲ್ಲ ಗಾಂಧಿಯವರ ಆತ್ಮೀಯರೇ. ಅವರ ಹೃದಯದ ಕರುಣೆ ಆಲಿಂಗಿಸಿಕೊಳ್ಳಲಾರದ ಮನುಷ್ಯನೂ ಪಾಪಿಯೂ ಜಗತ್ತಿನಲ್ಲಿ ಯಾರೂ ಇಲ್ಲ. ಆ ಕಾರಣದಿಂದಲೇ ಗಾಂಧಿಯವರು ಜಗತ್ತಿನ ದಳಿತರೆಲ್ಲರ ಪ್ರತಿನಿಧಿಯಾದರು. ಅಮೆರಿಕದ ನಿಗ್ರೋ, ಆಫ್ರಿಕದ ಮೂಲನಿವಾಸಿ, ಬೆಟ್ಟಗುಡ್ಡಗಳ ಕಾಡುಜನರು, ಬಣ್ಣದ ಜನಾಂಗಗಳು, ಸ್ತ್ರೀಯರು, ಹರಿಜನರು, ನಿಶ್ಶಕ್ತರು, ನಿರಾಯುಧರು

---

* ಮೈಸೂರು ಎ. ಐ. ಆರ್‌ನಲ್ಲಿ ಗಾಂಧಿ ಜಯಂತಿಯಲ್ಲಿ ಮಾಡಿದ ಭಾಷಣ.

ಎಲ್ಲರೂ ಗಾಂಧಿಯಲ್ಲಿಯೇ ತಮ್ಮ ಬಿಡುಗಡೆಯನ್ನು ಕಂಡುಕೊಂಡರು. ಗಾಂಧಿಯುವರು ಭಾರತದಲ್ಲಿ ಜನಿಸಿದುದು ಒಂದು ಆಕಸ್ಮಿಕ. ಅವರು ಎಲ್ಲಿ ಜನಿಸಿದ್ದರೂ ಭಾರತದ ಹಿತವೂ ಅವರ ಕಾರ್ಯಕ್ಷೇತ್ರದಲ್ಲಿ ಬಂದೇ ಬರುತ್ತಿದ್ದಿತು.

ಜಗತ್ತೆಲ್ಲವೂ ಒಂದು. ಜಗತ್ತಿಗೆಲ್ಲ ಒಂದೇ ಬಗೆಯ ಸಂಯುಕ್ತ ಆಡಳಿತ ವ್ಯವಸ್ಥೆ ಬರಬೇಕು ಎಂಬ ಆದರ್ಶವಾದರೂ ಮೂಡಿರುವ ಈ ಯುಗದಲ್ಲಿ, ರಾಜಕೀಯ, ಮನುಷ್ಯನ ಅತ್ಯಂತ ಪ್ರಾಮುಖ್ಯವಾದ ಕಾರ್ಯಕ್ಷೇತ್ರ. ಮನುಷ್ಯನ ಆಹಾರ ಬಟ್ಟೆ, ಸಮಾಜ ವ್ಯವಸ್ಥೆ ಎಲ್ಲದರಲ್ಲೂ ಸರ್ಕಾರದ ಕೈವಾಡ ಅನಿವಾರ್ಯವಾಗಿ ಬರುತ್ತಿದೆ. ಮಹಾತ್ಮ ಗಾಂಧಿಯವರು ರಾಜಕೀಯಕ್ಕೆ ಪ್ರವೇಶಿಸಿದುದೂ ರಾಜಕೀಯ ಮನುಷ್ಯನ ಅತಿ ಮುಖ್ಯ ಚಟುವಟಿಕೆಯಾದುದರಿಂದಲೇ. "ನನ್ನ ಗುರಿ ಶುದ್ಧವಾಗಿ ಧಾರ್ಮಿಕ, ಮಾನವ ಜಗತ್ತಿನೊಂದಿಗೆ ಒಂದಾದ ಹೊರತು ಈ ಗುರಿಯನ್ನು ನಾನು ಮುಟ್ಟಲಾರೆ. ರಾಜಕೀಯದಲ್ಲಿ ಭಾಗ ವಹಿಸದೆ ಮಾನವಜಗತ್ತಿನೊಂದಿಗೆ ಒಂದಾಗುವುದು ನನಗೆ ಸಾಧ್ಯವಿಲ್ಲ. ಮನುಷ್ಯನ ಕಾರ್ಯಕ್ಷೇತ್ರಗಳೆಲ್ಲಾ ಒಂದಕ್ಕೊಂದಕ್ಕೆ ಸಂಬಂಧಿಸಿವೆ. ಸಾಮಾಜಿಕ, ರಾಜಕೀಯ, ಧಾರ್ಮಿಕ ಇವು ಬೇರೆ ಬೇರೆ ಒಂದಕ್ಕೊಂದಕ್ಕೆ ಸಂಬಂಧಿಸದ ಚಟುವಟಿಕೆಗಳಲ್ಲ. ಮಾನವಧರ್ಮದ ಹೊರತು ಮತ್ತಾವ ಧರ್ಮವೂ ನನಗೆ ತಿಳಿಯದು" ಎಂದು ಗಾಂಧಿ ಹೇಳಿದ್ದಾರೆ.

## ರಾಜಕಾರಣ ಧರ್ಮಯುದ್ಧ

ಜಗತ್ತಿನ ಐದನೆ ಒಂದು ಭಾಗವಾದ ಭಾರತದ ಪಾರತಂತ್ರ್ಯದಿಂದ, ಜಗತ್ತಿನ ಪ್ರಗತಿಗೇ ಅಡ್ಡಿಯಾಗಿದ್ದಿತು. ಈ ಕಾರಣದಿಂದ ಗಾಂಧಿ ಭಾರತರಾಜಕೀಯದಲ್ಲಿ ಪ್ರವೇಶಿಸಿದರು. ಆ ಪ್ರವೇಶ ಪ್ರಪಂಚದ ಇತಿಹಾಸದಲ್ಲಿಯೇ ಒಂದು ದೊಡ್ಡ ಅಧ್ಯಾಯವನ್ನು ತೆರೆಯಿತು. ಇತರ ವಿಷಯಗಳಲ್ಲಿ ಬುದ್ಧನೂ ಏಸುವೂ ಗಾಂಧಿಯವ

ರೊಂದಿಗೆ ಹೋಲಿಕೆಗೆ ಬಂದರೂ ಸತ್ಯ, ಧರ್ಮ, ಪರಿಶುದ್ಧ ಆಚರಣೆ, ತೆರೆದ ಮನಸ್ಸು ಇವನ್ನು ಕುಟಿಲತಂತ್ರದ ರಾಜಕೀಯದಲ್ಲಿ ಅಸ್ತ್ರಗಳನ್ನಾಗಿ ಮಾಡಿದವರು ಗಾಂಧಿಯವರೊಬ್ಬರೇ. ತಮ್ಮ ಜೀವಮಾನದಲ್ಲೆಲ್ಲಾ ಒಂದು ಸತ್ಯವನ್ನೂ ಹೇಳದ ರಾಜತಂತ್ರಜ್ಞರು ಅನೇಕರು ಆಗಿಹೋಗಿದ್ದಾರೆ. ಗಾಂಧಿಯವರು ತಾವು ಸಾತ್ವಿಕಮೂರ್ತಿಯಾದುದರಿಂದ ರಾಜಕಾರಣವನ್ನು ಪರಿಶುದ್ಧವಾದ ಧರ್ಮಯುದ್ಧವನ್ನಾಗಿ ಮಾಡಿದರು. "ರಾಜಕಾರಣ ಸಾರ್ವಜನಿಕಕ್ಷೇತ್ರ. ಈ ಕ್ಷೇತ್ರದಲ್ಲಿ ಸೇವೆಮಾಡುವವರು ಉದಾತ್ತ ನೀತಿಯುಳ್ಳವರಾಗಿರಬೇಕು. ತಮ್ಮ ಚಾರಿತ್ರ್ಯವನ್ನು ಶುದ್ಧವಾಗಿಟ್ಟುಕೊಂಡಿರಬೇಕು. ಚರಿತ್ರೆ ಹೀನರನ್ನೂ, ಸ್ವಾರ್ಥಿಗಳನ್ನೂ ಬೂಟಾಟಿಕೆಯವರನ್ನೂ ಮುಳ್ಳನ್ನು ಕಿತ್ತು ಒಗೆಯುವಂತೆ ಒಗೆಯಬೇಕು. ರಾಜಕೀಯ ಬೆಳ್ಳಂಬೆಳಕಾಗಿರಬೇಕು ಅದರಲ್ಲಿ ಮುಚ್ಚುಮರೆ ಕುಟಿಲತಂತ್ರ ಇರಬಾರದು. ನಾಯಕರ ನಡತೆ ಸಂಶಯವನ್ನು ಮೀರಿದುದಾಗಿರಬೇಕು. (ಸೀಸರನ ಹೆಂಡತಿ ಸಂಶಯಾತೀತಳಾಗಿರಬೇಕು) ಪರಿಶುದ್ಧಜೀವನದ ಅಂಗ ರಾಜಕೀಯ. ಹೀಗೆ ರಾಜಕೀಯವನ್ನು ಪರಿಶುದ್ಧವಾದ ಧಾರ್ಮಿಕ ನಿಲುವಿನಲ್ಲಿಡಲು ಸಾಧ್ಯವಾಗದವರು ರಾಜಕೀಯಕ್ಕೆ ಪ್ರವೇಶಿಸಬಾರದು" ಎಂದು ಗಾಂಧಿ ಹೇಳಿದ್ದಾರೆ. ಈ ಮಾತುಗಳನ್ನೆಲ್ಲಾ ಗಾಂಧಿಯವರು ಆಳ್ವಿಕೆ ಮಾಡುವ ಅಧಿಕಾರಿ ಕಾಂಗ್ರೆಸ್ಸಿಗರಿಗೆ ಮಾತ್ರವೇ ಅಲ್ಲ, ಕಾಂಗ್ರೆಸ್ ಸಂಸ್ಥೆಯಲ್ಲಿಯ ಅಧಿಕಾರ ಲಾಲಸರಿಗೂ ಹೇಳಿದ್ದಾರೆ. ಬೂಟಾಟಿಕೆಯವರನ್ನೂ ಸ್ವಾರ್ಥಿಗಳನ್ನೂ ಅವರು ಮೂಲೆಗೆ ಕೂರಿಸಿದ ಉದಾಹರಣೆಗಳು ಬೇಕಾದಷ್ಟಿವೆ.

## ನೀತಿಯ ವಿಜಯ

ಗಾಂಧಿಯವರು ಭಾರತದ ರಾಜಕೀಯವನ್ನು ಪ್ರವೇಶಿಸಿದ ಕೂಡಲೇ "ಇನ್ನು ನೀತಿಯ ವಿಜಯ" ಎಂದು ಸ್ಪಷ್ಟಪಡಿಸಿದರು. ೧೯೧೮ ನೇ ಇಸವಿಯಲ್ಲಿ ಸರ್ಕಾರದ ಅಪ್ಪಣೆಪಡೆದು ಹಜರತ್ ಮೊಹಾನಿಯವರು ಒಂದು ಹಸ್ತಪತ್ರಿಕೆ ಹೊರಡಿಸಬೇಕಾಗಿತ್ತು.

ಸರ್ಕಾರದವರು ಒಂದು ನಿಯಮಿತವಾದ ಸಂಖ್ಯೆಯನ್ನು ಮಾತ್ರ ಪ್ರಕಟಿಸಲು ಅವಕಾಶ ಕೊಟ್ಟಿದ್ದರು. ಆದರೆ ಉತ್ಸಾಹಿಯಾದ ಹಜರತ್‌ರು ಅದಕ್ಕಿಂತ ಹೆಚ್ಚು ಪ್ರತಿಗಳನ್ನು ಅಚ್ಚುಹಾಕಿಸಿದ್ದರು. ವಿಷಯ ಗಾಂಧಿಯವರಿಗೆ ತಿಳಿದಕೂಡಲೇ ಅವರು ಹಜರತ್‌ರನ್ನು ಕರೆದು "ಪೋಲೀಸ್ ಕಮಿಷನರಲ್ಲಿ ಹೋಗಿ ನಿಮ್ಮ ತಪ್ಪನ್ನು ಒಪ್ಪಿಕೊಂಡು ಹೆಚ್ಚಿಗೆ ಅಚ್ಚುಹಾಕಿರುವ ಪ್ರತಿಗಳನ್ನು ಹಿಂದಕ್ಕೆ ಕೊಟ್ಟು ಬನ್ನಿ" ಎಂದರು. ಉತ್ಸಾಹಿ, ಬೆಂಕಿ ಕಿಡಿಯಾಗಿದ್ದರೂ ಹಜರತ್ ಮೊಹಾನಿಯವರಿಗೆ ತಮ್ಮ ತಪ್ಪು ತಿಳಿಯಿತು. ಅವರು ವಿಧಿಯಿಲ್ಲದೆ ಪೋಲೀಸ್ ಕಮಿಷನರಲ್ಲಿ ಹೋದರು. ಸರ್ಕಾರವನ್ನು ಪ್ರತಿಭಟಿಸುವುದು ಪದ್ಧತಿಯಾಗಿದ್ದ ಆ ಕಾಲದಲ್ಲಿ ಆ ಅಗ್ನಿಭಕ್ಷಕ ಮೊಹಾನಿಯವರು ನಾಚಿಕೆಯಿಂದ ಬಂದು ತಪ್ಪನ್ನು ಒಪ್ಪಿಕೊಂಡುದನ್ನು ಕಂಡು ಪೋಲೀಸ್ ಕಮಿಷನರಿಗೆ ವಿನೋದವಾಯಿತು. ಹೀಗೆ ಒಂದುಸಲ ಆಲಿ ಸಹೋದರರೂ ತಪ್ಪು ಒಪ್ಪಿಕೊಳ್ಳುವಂತೆ ಗಾಂಧಿಯವರು ಮಾಡಿದರು.

ಅನೀತಿ ಎಲ್ಲದ್ದರೂ ಹಣ್ಣಿನಲ್ಲಿಯ ಹುಳುವಿನಂತೆ ಅದು ಸಮಾಜವನ್ನು ಕೆಡಿಸುತ್ತದೆ. ಒಂದುಸಲ ಗಾಂಧಿ ಹೀಗೆ ಹೇಳಿದರು. " ನಮ್ಮ ಶತ್ರುವಿನೊಂದಿಗೆ ಸಹ ನಾವು ಧರ್ಮದ ಮಟ್ಟದಲ್ಲಿಯೇ ಕಾದಾಡಬೇಕು. ನಮ್ಮ ದೇಶದ ಆಳ್ವಿಕೆ ಮಾಡುವವರು ತಾವು ಆಡಳಿತಗಾರರೆಂದು ಭಾವಿಸದಿರಲಿ. ಪಂಡಿತ ಜವಹರ್‌ಲಾಲ್ ನೆಹ್ರುರವರನ್ನು 'ನೀವು ದೇಶದ ಮೊದಲನೆಯ ಪ್ರಜೆ' ಎಂದಾಗ ಅವರು "ಇಲ್ಲ. "ನಾನು ದೇಶದ ಮೊದಲನೆಯ ಸೇವಕ' ಎಂದು ಹೇಳಿದರು. ಕಾಂಗ್ರೆಸ್ ಅಧಿಕಾರವರ್ಗವೆಲ್ಲ ಹೀಗೆ ತಾನು ದೇಶದ ಸೇವಕನೆಂದು ಭಾವಿಸಿ ದುಡಿದರೆ ಎಷ್ಟು ಚೆನ್ನಾಗಿದ್ದೀತು!" ಎಂದು ಕಾಂಗ್ರೆಸ್ಸಿನವರು ಅಧಿಕಾರಕ್ಕೆ ಬಂದಮೇಲೆ ಸಹ ಗಾಂಧಿ ಹೇಳಿದ್ದಾರೆ.

## ಜೀವನದಲ್ಲಿ ಧಾರ್ಮಿಕ ಭಾವನೆ

ಜಗತ್ತಿನಲ್ಲಿ ನೀತಿಗೆ ಜಯವಿದೆ ಎಂಬುದನ್ನು ಪ್ರತಿಪಾದಿಸುವುದಕ್ಕೂ, ಭಾರತ ರಾಜಕೀಯ ·ಸಾಧನೆಗಾಗಿಯೂ ಗಾಂಧಿಯವರ

ಹಾಕಿಕೊಟ್ಟ ಆದರ್ಶಗಳು ಅದ್ಭುತವಾದರೂ, ನಮ್ಮ ಜನಜೀವನದಲ್ಲಿ ಗಾಂಧಿಯವರು ತಂದ ಧಾರ್ಮಿಕ ಭಾವನೆ ಅದಕ್ಕಿಂತ ಹೆಚ್ಚು ಅದ್ಭುತ. ಪಾಶ್ಚಾತ್ಯರ ಆಳ್ವಿಕೆಯ ಅವಶೇಷವಾಗಿ ಭಾರತದ ರಾಜಕೀಯದಲ್ಲಿ ಬಹಳ ಕುತಂತ್ರ ಅಡಗಿದೆ. ಕಾಂಗ್ರೆಸ್ಸಿನವರು ಪಟ್ಟಕ್ಕೆ ಬಂದಮೇಲೆ, ವೇಷಧಾರಿಗಳ ಸ್ವಾರ್ಥಪರರ ಸಂಖೆ ಹೆಚ್ಚಾಯಿತು. ದಿನದಿನವೂ ಗಾಂಧಿಯವರಿಗೆ ದೂರು ಹೋಗತೊಡಗಿತು. ಆಂಧ್ರಮುಖಂಡರಾದ ಶ್ರೀ ಕೊಂಡ ವೆಂಕಪ್ಪಯ್ಯನವರು ಗಾಂಧಿಯವರಿಗೆ ಹೀಗೆ ಬರೆದರು. "ಕಾಂಗ್ರೆಸ್ಸಿಗರು ನೀತಿಯ ಅಧಃಪತನಕ್ಕೆ ಬಿದ್ದಿದ್ದಾರೆ. ಅಧಿಕಾರ ಅವರ ತಲೆ ತಿರುಗಿಸಿದೆ. ಕಾಂಗ್ರೆಸ್ಸಿನ ಶತ್ರುಗಳೆಲ್ಲಾ ಈಗ ಸ್ವಾರ್ಥಕ್ಕಾಗಿ ಕಾಂಗ್ರೆಸ್ಸಿನವರಾಗುತ್ತಿದ್ದಾರೆ. ಕಾಂಗ್ರೆಸ್ಸಿಗೂ ಕಾಂಗ್ರೆಸ್ ಸರ್ಕಾರಕ್ಕೂ ಕೆಟ್ಟ ಹೆಸರು ಬಂದಿದೆ. ಎಂ.ಎಲ್.ಎ.ಗಳ ಮತ್ತು ಎಂ. ಎಲ್ ಸಿ ಗಳ ಹಣಗಳಿಸುವ ಆಸೆ, ಮಂತ್ರಿಗಳ ನಿಶ್ಶಕ್ತಿ ಇವುಗಳಿಂದ ಜನ ದಂಗೆ ಏಳುತ್ತಿದ್ದಾರೆ. ಬ್ರಿಟಿಷ್ ಸರ್ಕಾರ ಇನ್ನೂ ಉತ್ತಮವಾಗಿದ್ದಿತೆನ್ನುತ್ತಿದ್ದಾರೆ." ಗಾಂಧಿಯವರು ದಿಲ್ಲಿಯಲ್ಲಿ ಜನವರಿ ೧೩ ರಂದು ಪ್ರಾರಂಭಿಸಿದ ಉಪವಾಸದಲ್ಲಿ ದುಃಖದ ಹೃದಯದಿಂದ ಮೇಲಿನ ಸಂಗತಿಗಳನ್ನು ಪ್ರಸ್ತಾಪಿಸಿ "ಜೋಕೆ, ಅನೀತಿ ಎಲ್ಲೆಲ್ಲಿಯೂ ಇದೆ" ಎಂದು ಕೊರಗಿದರು. ಹಿಂದೆ ಒಂದುಸಲ ಕಾಳಸಂತೆಯವರಿಗೆ ವಿರೋಧವಾಗಿ ಉಪವಾಸ ಮಾಡುವುದಾಗಿ ಸಹ ಗಾಂಧಿ ಎಚ್ಚರಿಸಿದ್ದರು.

## ನೀತಿಯೇ ಆಳ್ವಿಕೆಯ ತಳಹದಿ

ಗಾಂಧಿಯವರು ರಾಜಕೀಯವನ್ನು ಪರಿಶುದ್ಧಿಮಾಡಿದರು. ಅಸತ್ಯ, ಅನ್ಯಾಯ, ಪಕ್ಷಪಾತ, ಸ್ವಾರ್ಥತ್ಯಾಗವಿಲ್ಲದ ಆಳ್ವಿಕೆ-ಅದು ನಮ್ಮವರದೇ ಆಗಿರಲಿ ಇತರರದೆ ಆಗಿರಲಿ ಸಹಿಸಲರ್ಹವಾದುದಲ್ಲವೆಂದು ಬೋಧಿಸಿದರು. ದೇಶವು ರಾಮರಾಜ್ಯವಾಗಬೇಕಾದರೆ ಪ್ರಜೆಗಳಲ್ಲಿಯೂ ಆಡಳಿತಗಾರರಲ್ಲಿಯೂ ಧರ್ಮ ಆವಶ್ಯವೆಂದು ಒತ್ತಿ ಒತ್ತಿ ಹೇಳಿದರು. ಇದನ್ನು ಅರಿತು ನಡೆದಂತೆಲ್ಲಾ ನಾವು ಹೆಚ್ಚು ಸುಖಿಗಳಾಗುವುದರಲ್ಲಿ ಸಂದೇಹವಿಲ್ಲ.

## ೧೨. ಗಾಂಧಿಯವರೂ ಗ್ರಾಮೋದ್ಧಾರವೂ

[ಮೈಸೂರು ಎ. ಐ. ಆರ್‌ನಲ್ಲಿ ಗಾಂಧಿ ಜಯಂತಿಯಲ್ಲಿ ಮಾಡಿದ ಭಾಷಣ.]

ಇಂದಿನ ನನ್ನ ಭಾಷಣದ ವಿಷಯ ಭಾರತದಷ್ಟೇ ಹಳೆಯದು. ಆದರೆ ನಮ್ಮ ದೇಶದಲ್ಲಿ ಈ ಪ್ರಶ್ನೆಯನ್ನು ಇಷ್ಟು ಪ್ರಾಮುಖ್ಯವಾದುದನ್ನಾಗಿಮಾಡಿದವರು ಗಾಂಧಿಜಿ.

೧೨೧ ನೇ ಇಸವಿಯ ಅಸಹಕಾರದಲ್ಲಿ ಅಂದಿನ ಬ್ರಿಟಿಷ್ ಸರಕಾರ ಗಾಂಧಿಯವರನ್ನು ಸೆರೆಹಿಡಿದು ವಿಚಾರಣೆಗೆ ಒಳಪಡಿಸಿದಾಗ, ಕೋರ್ಟಿನಲ್ಲಿ ನ್ಯಾಯಾಧಿಪತಿಯು ಪದ್ಧತಿಯಂತೆ ಗಾಂಧಿಯವರನ್ನು "ನಿಮ್ಮ ಕಸಬು ಏನು ?" ಎಂದು ಕೇಳಿದರು. ಗಾಂಧಿಯವರು— ಗಂಭೀರವಾಗಿ "ಕೃಷಿಕ ಮತ್ತು ನೆಯ್ಗೆಯವ" ಎಂದು ಉತ್ತರು ಕೊಟ್ಟರು. ಜಗತ್ತಿನ ಅತ್ಯಂತ ಪ್ರಬಲ ರಾಷ್ಟ್ರ ಒಂದನ್ನು ಒಂದು ಹೊಸ ಬಗೆಯ ಆತ್ಮಶಕ್ತಿಯ ಅಸ್ತ್ರದಿಂದ ಪೂರ್ಣವಾಗಿಯೇ ಸೋಲಿಸಿ, ನಲವತ್ತು ಕೋಟಿ ತೇಜೋಹೀನರಿಗೆ ಚೈತನ್ಯವನ್ನು ತುಂಬಿ, ನಿರಾಯುಧರನ್ನು ಗಂಡುಗಲಿಗಳನ್ನಾಗಿ ಮಾಡಿ, ಲಾಯಿಡ್ ಜಾರ್ಜ್ ಮುಂತಾದವರಿಂದಲೂ ಸಹ ಉತ್ತಮ ರಾಜತಂತ್ರಜ್ಞನೆಂದು ಪ್ರಶಸ್ತಿಯನ್ನು ಸಂಪಾದಿಸಿದ ಗಾಂಧಿಯವರು, ತಮ್ಮ ಕಸಬು "ಕೃಷಿ ಮತ್ತು ನೆಯ್ಗೆ" ಎಂದು ಹೇಳಿದಾಗ ನ್ಯಾಯಾಧಿಪತಿಗೆ ಮಾತ್ರವೇ ಅಲ್ಲ, ಜಗತ್ತಿಗೇ ಆಶ್ಚರ್ಯವಾಯಿತು. ಗಾಂಧಿಯವರು ತಾನು ರಾಜಕೀಯ ಯೋಧ, ಚಳುವಳಿಗಾರ, ದೇಶಭಕ್ತ, ಪತ್ರಿಕಾಕರ್ತ, ಕಾಂಗ್ರೆಸ್ಸಿನವ ಎಂದು ಏನು ಬೇಕಾದರೂ ಹೇಳಿಕೊಳ್ಳಬಹುದಾಗಿದ್ದಿತು. ಆದರೆ ಅವರು ಅದೊಂದನ್ನೂ ಹೇಳಲಿಲ್ಲ. ಅವರ ಅಭಿಪ್ರಾಯದಲ್ಲಿ ಕೃಷಿಕ ನೇಯ್ಗೆಯವ ಎಂಬ ಮಾತುಗಳು ಭಾರತದ ಗುರಿಯನ್ನೆಲ್ಲ ಸ್ಪಷ್ಟಪಸುವುವಾಗಿದ್ದವು. ಮತ್ತೊಂದುದಸಂದರ್ಭದಲ್ಲಿ ಗಾಂಧಿಯವರಡಿ ನೇಯ್ಗೆಯೂ ವ್ಯವಸಾಯವೂ ಹಿಂೂ ದೇಶದ ಎರಡು ಶ್ವಾಸಕೋಶಗಳು ಎಂದು ಹೇಳಿದ್ದಾರೆ.

## ಗ್ರಾಮ ಸ್ವರಾಜ್ಯ

ಭಾರತದ ನಾಗರೀಕತೆ ಗ್ರಾಮ ಪ್ರಧಾನವಾದುದು. ಈ ಇಪ್ಪತ್ತನೆಯ ಶತಮಾನದ ಅಣುಬಾಂಬಿನ ಪ್ರಾಬಲ್ಯದಿಂದ ಸಹ ಆ ಮಾತಿಗೆ ಅಪವಾದವಿಲ್ಲ. ಗಾಂಧಿ ಹೀಗೆ ಹೇಳಿದ್ದಾರೆ: "ನಮ್ಮ ದೇಶದಲ್ಲಿ ನೇಕಡ ೯೦ ಜನ ಹಳ್ಳಿಗಳಲ್ಲಿದ್ದಾರೆ. ಆ ಹಳ್ಳಿಗಳ ಉದ್ಧಾರದ ಕಾರ್ಯಕ್ರಮವನ್ನು ಹಾಕಿದರೆ ಪಟ್ಟಣಗಳು ತಾವಾಗಿಯೇ ಉದ್ಧಾರವಾಗುತ್ತವೆ. ಹಳ್ಳಿಗಳು ನಾಶವಾದರೆ ಭಾರತ ನಾಶವಾಗುತ್ತದೆ. ಭಾರತ ಆಗ ಭಾರತವಾಗುವುದಿಲ್ಲ. ಜಗತ್ತಿಗೆ ಭಾರತದ ಸಂದೇಶ ನಾಶವಾಗುವುದು. ಹಳ್ಳಿಗಳ ಲೂಟಿ ನಿಂತಾಗಲೇ ಹಳ್ಳಿಗಳ ಏಳಿಗೆ ಸಾಧ್ಯ. ಆದುದರಿಂದ ಹಳ್ಳಿಗಳು ಸ್ವಯಂಪರಿಪೂರ್ಣವಾಗಿರುವಂತೆ ನಾವು ಪ್ರಯತ್ನಿಸಬೇಕು. ಆ ದೃಷ್ಟಿಯಿಂದ ಯಂತ್ರೋಪಕರಣಗಳನ್ನು ಒದಗಿಸಲು ನನ್ನ ಅಡ್ಡಿ ಇಲ್ಲ. ಭಾರತದಲ್ಲೆಲ್ಲಾ ಗ್ರಾಮ ಸ್ವರಾಜ್ಯಗಳಿರಬೇಕು. ಅವು ತಮ್ಮ ನಿತ್ಯದ ಆವಶ್ಯಕತೆಗಳಿಗೆ ಇತರರ ಮೇಲೆ ಅವಲಂಬಿಸಬಾರದು. ಎಲ್ಲಿ ಅವಲಂಬನೆ ಆವಶ್ಯಕವೋ ಅಲ್ಲಿರಲಿ. ಈ ದೃಷ್ಟಿಯಿಂದ ಪ್ರತಿ ಹಳ್ಳಿಯೂ ಆಹಾರ ಧಾನ್ಯಗಳನ್ನೂ ಹತ್ತಿಯನ್ನೂ ಬೆಳೆದುಕೊಳ್ಳಬೇಕು. ದನಗಳ ತಳಿಯನ್ನು ವೃದ್ಧಿಪಡಿಸಿಕೊಳ್ಳಬೇಕು. ದನಗಳಿಗಾಗಿ ಪ್ರತಿ ಹಳ್ಳಿಯಲ್ಲಿಯೂ ಗೋಮಾಳವಿರಬೇಕು. ಹುಡುಗರಿಗೆ ಆಟದ ಮೈದಾನ, ಹಿರಿಯರಿಗೆ ನಾಟಕಶಾಲೆ, ಗ್ರಾಮಪಂಚಾಯ್ತಿ ಭವನ, ಶುದ್ಧವಾದ ನೀರು ಇರಬೇಕು. ಮಕ್ಕಳಿಗೆ ಬಲಾತ್ಕಾರವಾಗಿ ಮೂಲ ಶಿಕ್ಷಣವನ್ನು ಕೊಡಬೇಕು. ಎಲ್ಲಾ ಕಾರ್ಯಗಳನ್ನೂ ಸಾಧ್ಯವಾದ ಮಟ್ಟಿಗೆ ಸಹಕಾರತತ್ತ್ವಕ್ಕನುಸಾರವಾಗಿಯೇ ನಡೆಸಬೇಕು. ಇಂತಹ ಗ್ರಾಮ ಸ್ವರಾಜ್ಯದಲ್ಲಿ ಜಾತಿಗಳಿರುವುದಿಲ್ಲ. ಅಸ್ಪೃಶ್ಯತೆ ಇರುವುದಿಲ್ಲ. ಗ್ರಾಮದ ರಕ್ಷಣೆಯನ್ನು ಗ್ರಾಮಸ್ಥರೇ ಸರದಿವಾರಾಗಿ ನೋಡಿಕೊಳ್ಳುತ್ತಾರೆ. ಪಂಚಾಯ್ತಿ ಗ್ರಾಮದ ಸರ್ವಾಧಿಕಾರಿಯಾಗಿರಬೇಕು. ಪ್ರತಿ ಒಂದು ಗ್ರಾಮವೂ ಇಂದು ಇಂತಹ ಗ್ರಾಮ ಸ್ವರಾಜ್ಯವಾಗಬಲ್ಲದು. ಇಲ್ಲಿ ವ್ಯಕ್ತಿಗೆ ಸ್ವಾತಂತ್ರ್ಯ, ಪೂರ್ಣ ಸ್ವರಾಜ್ಯ. ವ್ಯಕ್ತಿಯೇ ತನ್ನ

ಸ್ವಾತಂತ್ರ್ಯದ ಶಿಲ್ಪಿ. ಇಂತಹ ಹಳ್ಳಿಗಳು ಪ್ರಪಂಚವನ್ನೇ ಬೇಕಾದರೂ ಎದುರಿಸಬಲ್ಲವು. ಯಾಕೆಂದರೆ ಪ್ರತಿಯೊಬ್ಬ ಹಳ್ಳಿಯವನೂ ತನ್ನ ಹಳ್ಳಿಯ ಗೌರವವನ್ನು ಉಳಿಸಿಕೊಳ್ಳಲು, ಪ್ರಾಣ ತೆರಲೂ ಸಿದ್ಧನಾಗಿರುತ್ತಾನೆ. ನನ್ನ ಕನಸಿನ ಸ್ವರಾಜ್ಯ ದೀನರ ಮತ್ತು ಬಡವರ ಸ್ವರಾಜ್ಯ. ಹಳ್ಳಿಯವರಿಗೆ ಜೀವನದ ಎಲ್ಲಾ ಆವಶ್ಯಕತೆಗಳೂ ದೊರಕಬೇಕು. ಪಟ್ಟಣಿಗರಿಗಿರುವ ಸೌಕರ್ಯಗಳೆಲ್ಲ ಅವರಿಗೂ ದೊರಕಬೇಕು. ಅಲ್ಲಿಯವರಿಗೆ, ನಮ್ಮ ಸ್ವಾತಂತ್ರ್ಯ ಪೂರ್ಣ ಸ್ವರಾಜ್ಯವಲ್ಲ. ನನ್ನ ಸ್ವರಾಜ್ಯ ಬರಿಯ ಧನಿಕರ ಸ್ವರಾಜ್ಯವಲ್ಲ, ಅದು ಬಡವರ ಸ್ವರಾಜ್ಯ" ಎಂದಿದ್ದಾರೆ.

ಮಹಾತ್ಮ ಗಾಂಧಿಯವರ ದೃಷ್ಟಿಯಲ್ಲಿ ಸ್ವರಾಜ್ಯವೆಂದರೆ ಈ ಗ್ರಾಮ ಸ್ವರಾಜ್ಯವೇ. "ಸ್ವರಾಜ್ಯವೆಂಬುದು ಸರ್ವರ ಹಿತ. ಸ್ವತಂತ್ರವಾದ ಯೂರೋಪಿನ ರಾಷ್ಟ್ರಗಳಲ್ಲಿಯೂ ಈ ಸ್ವರಾಜ್ಯವಿಲ್ಲ. ಯೂರೋಪಿನವರು ತಮ್ಮ ಹಿತಕ್ಕಾಗಿ ಏಷಿಯ ಆಫ್ರಿಕ ಜನಾಂಗಗಳನ್ನು ಲೂಟಿ ಹೊಡೆಯುತ್ತಿದ್ದಾರೆ. ಪ್ರಜಾತಂತ್ರದ ಹೆಸರಿನಲ್ಲಿ ತಮ್ಮ ದೇಶದ ಬಡವರನ್ನೇ ಸುಲಿಯುತ್ತಿದ್ದಾರೆ. ಈ ಸುಲಿಗೆಯ ಹಿಂದೆ ಬಂದೂಕ ಹಿಂಸೆ ಅವಿತಿವೆ. ಭಾರತದ ಮಟ್ಟಿಗೆ ಸ್ವರಾಜ್ಯವೆಂದರೆ ಬ್ರಿಟಿಷ್ ಹೌಸ್ ಆಫ್ ಕಾಮನ್ಸ್ಸರ ಅನುಕರಣೆಯಾಗಲಿ, ಸೋವಿಯಟ್, ಇಟಲಿ, ಜರ್ಮನಿಗಳ ಅನುಕರಣವಾಗಲಿ ಅಲ್ಲ. ಆ ಕ್ರಮಗಳು ಅವರ ಬೆಳವಣಿಗೆಗೆ ಅನುಸಾರವಾಗಿವೆ. ನಮ್ಮ ಸಂಸ್ಕೃತಿಗೆ ಅನುಗುಣವಾದುದನ್ನು ನಾವು ಸೃಷ್ಟಿಸಿಕೊಳ್ಳಬೇಕು. ನಾನು ಅದನ್ನೇ ರಾಮರಾಜ್ಯವೆಂದು ಕರೆದಿದ್ದೇನೆ. ಅದೇ ನೀತಿಯ ಬಲದಿಂದ ಆಳ್ವಿಕೆ ಮಾಡುವ ಪ್ರಜಾಪ್ರಭುತ್ವ."

## ಯಂತ್ರ ವಿರೋಧಿಯಲ್ಲ

ಮಹಾತ್ಮ ಗಾಂಧಿಯವರು ಹಳ್ಳಿಯವರ ಉದ್ಯೋಗವನ್ನು ಕಿತ್ತುಕೊಳ್ಳದ ಯಾವ ಯಂತ್ರವನ್ನೂ ವಿರೋಧಿಸುವುದೇ ಇಲ್ಲ. ಪದಾರ್ಥಗಳನ್ನು ಹೆಚ್ಚಾಗಿ ತಯಾರಿಸಬೇಕೆಂಬ ತತ್ತ್ವವನ್ನು

ಮಹಾತ್ಮ ಗಾಂಧಿಯವರೂ ಒಪ್ಪುತ್ತಾರೆ. ಅವರು ಒಂದೆಡೆ "Mass production ಬೇಡ. Production by masses ಇರಲಿ (ಅಸಂಖ್ಯಾತವಾದ ಪದಾರ್ಥ ತಯಾರಿ ಬೇಡ. ಅಸಂಖ್ಯಾತ ಜನ ರಿಂದ ಪದಾರ್ಥಗಳ ತಯಾರಿ ಆಗಲಿ)" ಎಂದಿದ್ದಾರೆ. ಅವರು ಸಮತಾವಾದಿಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗುತ್ತಾರೆ. ಸಮತಾವಾದಿಗಳು ಪದಾರ್ಥಗಳನ್ನು ಒಂದೆಡೆ ದೊಡ್ಡ ಪ್ರಮಾಣದಲ್ಲಿ ತಯಾರಿಸಿ ಸಮನಾಗಿ ಹಂಚಬೇಕೆಂದರೆ, ಗಾಂಧಿಯವರು distribution at source—ಮೂಲತಯಾರಿಕೆಯ ಸ್ಥಳದಲ್ಲಿಯೇ ಪದಾರ್ಥ ಗಳ ಹಂಚಿಕೆಯಾಗಬೇಕೆನ್ನುತ್ತಾರೆ. ಹೀಗಾಗಬೇಕಾದರೆ ಕೈಗಾರಿಕೆ ಗಳು ವಿಕೇಂದ್ರೀಕೃತವಾಗಬೇಕು. ಅವು ಗ್ರಾಮಗಳಲ್ಲಿ ಹರಡಬೇಕು ನಿರ್ಜೀವವಾದ ಗ್ರಾಮ ಜೀವನಾಡಿಗಳಲ್ಲಿ, ಗ್ರಾಮೋದ್ಯೋಗದ ರಕ್ತ ಸಂಚಾರವಾದರೆ ಪೈರಿನ ನಡುವೆ ನೀರಿನ ಕಾಲುವೆಗಳು ಹರಿದಂತೆ ಹಳ್ಳಿಗಳು ಫಲವತ್ತಾಗುತ್ತವೆ. ಹಳ್ಳಿಗಳಲ್ಲಿ ಹೊಸಜೀವ, ಹೊಸ ತೇಜಸ್ಸು, ಹೊಸಬೆಳಕು ಹರಿಯುತ್ತದೆ.

ಜನರ ದೃಷ್ಟಿಯನ್ನು ಹಳ್ಳಿಗಳ ಕಡೆ ತಿರುಗಿಸಲು ಮಹಾತ್ಮ ಗಾಂಧಿಯವರಷ್ಟು ದುಡಿದವರು ಮತ್ತಾರೂ ಇಲ್ಲ. ಹಳ್ಳಿಯವರನ್ನು ಕಂಡರೆ ಅವರ ಹೃದಯ ದುಃಖದಿಂದ ಆರ್ದ್ರವಾಗುತ್ತಿದ್ದಿತು. ಹಳ್ಳಿಯವರೊಂದಿಗೆ ಅವರಷ್ಟು ಪೂರ್ಣವಾಗಿ ಒಂದಾದವರು ಭಾರತದ ರಾಜಕೀಯದಲ್ಲಿ ಹಿಂದೆಂದೂ ಇರಲಿಲ್ಲ. ಮುಂದೆಯೂ ಆಗುವು ದಿಲ್ಲ. ಇಂತಹ ಹಳ್ಳಿಯ ಪ್ರೇಮಿಗಳು ಯಾವ ದೇಶದ ಮುಖಂಡ ರಲ್ಲಿಯೂ ವಿರಳ. ಗಾಂಧಿಯವರ ಪ್ರತಿಯೊಂದು ಕಾರ್ಯದ ಗುರಿಯೂ ಹಳ್ಳಿಯವರ ಹಿತವೇ ಆಗಿದ್ದಿತು. ಭಾರತದ ಹಳ್ಳಿಗಳ ನ್ನೆಲ್ಲಾ ಅವರು ಕಾಲುನಡಿಗೆಯಿಂದ ೩-೪ ಸಲ ಸಂಚರಿಸಿದ್ದರು. ಅನೇಕವೇಳೆ ಬಿಸಿಲಿನಲ್ಲಿ ೧೫-೨೦ ಮೈಲಿ ಪಾದಚಾರಿಯಾಗಿ ಸಂಚರಿಸಿ ಹಳ್ಳಿಯವರ ಕಷ್ಟವನ್ನು ಅನುಭವಮಾಡಿಕೊಂಡಿದ್ದರು. ರಾಟೆಯನ್ನು ಅವರು ಕಂಡುಹಿಡಿದುದು ನಿರುದ್ಯೋಗಿಗಳಾದ ಹಳ್ಳಿಯವರಿಗೆ ಒಂದು ಉದ್ಯೋಗವನ್ನು ಕಲ್ಪಿಸಲೆಂದೇ. ಹಳ್ಳಿಯವರ ಕಷ್ಟವನ್ನು ನೆನೆದು

ನೆನೆದು ಅವರು ಕೊರಗುತ್ತಿದ್ದರು. ೧೯೨೭ನೆ ಸಂವತ್ಸರದಲ್ಲಿ ಬೆಂಗಳೂರಿನ ನಾಶನಲ್ ಹೈಸ್ಕೂಲಿನ ಎದುರಿಗೆ ದಕ್ಷಿಣಭಾರತ ಖಾದಿ ಪ್ರದರ್ಶನ ನಡೆದಾಗ ಮಹಾತ್ಮ ಗಾಂಧಿಯವರು ಪ್ರದರ್ಶನದಲ್ಲಿ ಮಾತನಾಡುತ್ತಾ ಭಾರತದ ಹಳ್ಳಿಗಳ ದಾರಿದ್ರ್ಯವನ್ನು ಚಿತ್ರಿಸಿದರು. ಶಂಕರಲಾಲ್ ಬ್ಯಾಂಕರ್ ಒಂದು ಹಳ್ಳಿಯ ಮುದುಕಿಗೆ "ನೀನು ಪ್ರತಿದಿವಸ ಬಟ್ಟೆ ಒಗೆದುಕೊಂಡು ಪರಿಶುದ್ಧವಾಗಿರಬೇಕು" ಎಂದು ಹೇಳಿದಾಗ ಆಕೆ "ಅಪ್ಪಾ, ನನಗೆ ಇರುವುದು ನಾನು ಉಟ್ಟ ಸೀರೆಯೊಂದೆ" ಎಂದಳಂತೆ. ಆ ಮಾತನ್ನು ಜ್ಞಾಪಿಸಿಕೊಂಡು, ಭಾರತಮಾತೆಯರ ದಾರಿದ್ರ್ಯದ ಬಾಳನ್ನು ನೆನೆಯುತ್ತಾ ಗಾಂಧಿಯವರು ಗದ್ಗದ ಕಂಠರಾಗಿ ಮುಂದೆ ಮಾತನಾಡಲಾರದೆ ಕಣ್ಣೀರು ಸುರಿಸುತ್ತಾ ೫ ನಿಮಿಷ ಕುಳಿತುಬಿಟ್ಟರು. ಅನಂತರ ನಿಧಾನವಾಗಿ ಚೇತರಿಸಿಕೊಂಡು ಭಾಷಣವನ್ನು ಮುಗಿಸಿದರು. ಹಿಂದೂದೇಶದ ಬಡವ ಅನುಭವಿಸದ ಯಾವ ಸುಖವನ್ನೂ ತಾವು ಅನುಭವಿಸುವುದಿಲ್ಲವೆಂದರು. ಆಹಾರ ವಸ್ತ್ರ ಇವನ್ನು ಹಳ್ಳಿಯವರ ಮಟ್ಟಕ್ಕೆ ತಂದುಕೊಂಡರು. ವೈಸರಾಯ್ ಚಕ್ರವರ್ತಿ ಎಲ್ಲರನ್ನೂ ಭಾರತದ ಬಡವರ ಉಡುಪಿನಲ್ಲಿಯೇ ನೋಡಿದರು. ಕಾಂಗ್ರೆಸ್ ಅಧಿವೇಶನ ಹಳ್ಳಿಗಳಲ್ಲಿ ನಡೆಯಬೇಕೆಂದರು. ಸರ್ಕಾರದ ವೆಚ್ಚ ಹಳ್ಳಿಗರ ಉತ್ಪತ್ತಿಗೆ ಅನುಸಾರವಾಗಿರಬೇಕೆಂದು ಬೋಧಿಸಿದರು ಗ್ರಾಮೋದ್ಯೋಗ ಸಂಘ, ಮೂಲಶಿಕ್ಷಣ, ಗೋಸೇವೆ, ಹರಿಜನಸೇವೆ, ಗೊಬ್ಬರ ಶೇಖರಣೆ, ಅಧಿಕ ಆಹಾರ ಬೆಳೆ ಎಲ್ಲಾ ಚಟುವಟಿಕೆಗಳನ್ನೂ ಹಳ್ಳಿಗರ ಆವಶ್ಯಕತೆಯ ದೃಷ್ಟಿಯಿಂದಲೇ ಸೃಷ್ಟಿಸಿದರು. ತಾವೂ ಸಹ ಸೇವಾಗ್ರಾಮದಲ್ಲಿ ಕುಳಿತು ಖಾದಿ, ಗೋಸೇವೆ ಹಳ್ಳಿಯವರ ಆಹಾರ, ಇವುಗಳ ಪ್ರಯೋಗವನ್ನು ಹದಿನೈದು ವರುಷಗಳಿಗಿಂತಲೂ ಹೆಚ್ಚಾಗಿ ನಡೆಸಿದರು. ಮಗ್ನುಲಲ್ಲಿ ಮಗನ್‌ವಾಡಿಯಲ್ಲಿ ಗ್ರಾಮೋದ್ಯೋಗ ಸಂಘದ ಚಲುವಟಿಕೆಗಳು ನಡೆಯುತ್ತಿದ್ದವು.

ಅಖಿಲ ಜಗತ್ತಿಗೆ ಆತ್ಮದ ಮಾರ್ಗದಲ್ಲಿ ಮಾರ್ಗದರ್ಶಕರಾಗಿ ಭಾರತ ಸ್ವಾತಂತ್ರ್ಯ ಸಂಗ್ರಾಮದ ನಾಯಕರಾಗಿದ್ದರೂ ಗಾಂಧಿಯವರ ಪ್ರತಿಯೊಂದು ಕಾರ್ಯದಲ್ಲಿ ಹಳ್ಳಿಯವರ ಹಿತವೇ ಅಡಕವಾಗಿದ್ದಿತು.

ಪಂಡಿತ ಜವಹರ್‌ಲಾಲರು ಹೇಳಿರುವಂತೆ "ಭಾರತದ ಜನತೆಯ ನಾಡಿ ಹೇಗೆ ಮಿಡಿಯುತ್ತಿದೆ'' ಎಂಬುದು ಗಾಂಧಿಯವರಿಗೆ ಸ್ವಾಭಾವಿಕವಾಗಿ ಗೊತ್ತು. ಅವರು ಸತ್ಯಾಗ್ರಹಕ್ಕೆ ಉಪ್ಪಿನ ಕಾನೂನುಭಂಗವನ್ನು ಆರಿಸಿಕೊಂಡುದೂ ಹಳ್ಳಿಯವರ ಹಿತ ಅವರಿಗೆ ಗೊತ್ತಿದ್ದುದರಿಂದಲೇ. ಗಾಂಧಿಯವರು ಪ್ರಕೃತಿ ಚಿಕಿತ್ಸೆ ಮಣ್ಣಿನ ಚಿಕಿತ್ಸೆ, ನೀರಿನ ಚಿಕಿತ್ಸೆ ಇವನ್ನೆಲ್ಲಾ ಅನುಸರಿಸುತ್ತಿದ್ದುದೂ, ತಲೆನೋವಿಗೆ ಕೆಮಣ್ಣಿನ ಕೆಸರು ಅದ್ದಿದ ಅರಿವೆಯನ್ನು ಸುತ್ತುತ್ತಿದ್ದುದೂ, ರಾಮನಾಮವೇ ಸರ್ವೌಷಧವೆಂದು ಹೇಳಿದುದೂ ಹಳ್ಳಿಯವರು ಯಾವ ರೀತಿ ಬಾಳುತ್ತಿರುವರೆಂಬುದನ್ನು ತಿಳಿಸುವುದಕ್ಕಾಗಿಯೇ. ಸೊಳ್ಳೆಗಳ ಕಾಟದಿಂದ ತಪ್ಪಿಸಿಕೊಳ್ಳಲು ಗಾಂಧಿ ಒಂದು ಸಲ ಮುಖಕ್ಕೆಲ್ಲ ಸೀಮೆ ಎಣ್ಣೆ ಬಳಿದುಕೊಂಡು ಮಲಗಿದರು- "ಹಳ್ಳಿಯವರೆಲ್ಲಾ ಸೊಳ್ಳೆ ಪರದೆ ಎಲ್ಲಿಂದ ತಂದಾರು? ನಾನೂ ಅವರಂತೆ ಇರಬೇಕು" ಎಂದರು. ಗಾಂಧಿಯವರು ಹಲ್ಲಿನ ಬ್ರಷ್ ಅಂಟುಗಳನ್ನು ಬಿಟ್ಟು ಬೇವಿನ ಕಡ್ಡಿಯಲ್ಲಿ ಹಲ್ಲುಜ್ಜುತ್ತಿದ್ದುದೂ, ಸಾಬೂನನ್ನು ಬಿಟ್ಟು ಹಳ್ಳಿಯ ಕತ್ತಿಯಲ್ಲಿಯೇ ಕ್ಷೌರಮಾಡಿಕೊಳ್ಳುತ್ತಿದ್ದುದೂ, ಅವರು ಹಳ್ಳಿಗರೊಂದಿಗೆ ಒಂದಾಗಿದ್ದುದರ ಕಾರಣದಿಂದಲೇ. ಒಂದು ಸಲ ಆಶ್ರಮದಲ್ಲಿ ಅವರು ಕುಳಿತು ಪ್ರಾರ್ಥನೆ ಮಾಡುತ್ತಿದ್ದ ಸ್ಥಳಕ್ಕೆ ಸಂಧ್ಯಾಕಾಲದ ಬಿಸಿಲು ಬಂದು ಅವರ ಮುಖದ ಮೇಲೆ ಸರಿಯಾಗಿ ಬೀಳುತ್ತಿದ್ದಿತು. "ಅದನ್ನು ಸ್ವಲ್ಪ ಮರೆಮಾಡು" ಎಂದು ಗಾಂಧಿ ಅನುಯಾಯಿಗಳಿಗೆ ಹೇಳಿದರು. ಕೂಡಲೇ ಒಬ್ಬ ಬಡಗಿ ಬಂದ. ಅವನ ಅರ್ಧ ದಿನದ ಕೆಲಸ, ಎರಡು ಮೂರು ರೂಪಾಯಿ ಖರ್ಚಾಯಿತು. "ತನಗಾಗಿ ಇಷ್ಟು ಖರ್ಚಾಯಿತಲ್ಲ! ಈ ಮಾತನ್ನು ನಾನು ಯಾಕೆ ಹೇಳಿದೆ? ಆ ರಂಧ್ರಕ್ಕೆ ಒಂದು ಗೋಣಿ ಹರಕನ್ನು ಮುಚ್ಚಿದ್ದರೆ ಆಗುತ್ತಿದ್ದಿತಲ್ಲ! ಬಡವರ ಪ್ರತಿನಿಧಿ ಎಂದುಕೊಳ್ಳುವ ನಾನು ಹೀಗೆ ಖರ್ಚು ಮಾಡಬಹುದೇ?" ಎಂದು ಗಾಂಧಿ ಕೊರಗಿದರು. ತಾವು ಮಾಡಿದುದು ತಪ್ಪು ಎಂದು ಬಹಿರಂಗ ಸಭೆಯಲ್ಲಿ ಹೇಳಿಕೊಂಡರು. ಬಹಿರಂಗವಾಗಿ ಹೇಳಿಕೊಂಡು ಪಶ್ಚಾತ್ತಾಪ ಪಡದೆ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲವೆಂದು ಗಾಂಧಿ ಒತ್ತಿ ಒತ್ತಿ

ಹೇಳಿದ್ದಾರೆ. ಇಲ್ಲಿಂದ ಇಂಗ್ಲೆಂಡಿಗೆ ದುಂಡುಮೇಜು ಪರಿಷತ್ತಿಗೆ ಹೋಗುವಾಗಲೂ ಅವರು ಮೂರನೇ ತರಗತಿಯಲ್ಲಿಯೇ ಹೋದರು. ಅಲ್ಲಿ ಕೂಲಿಗಳ ನಿವಾಸದಲ್ಲಿ ಇಳಿದುಕೊಂಡರು. ಬಡವರೊಂದಿಗೆ ಒಂದಾದರು. ಹೋಗುವ ದಾರಿಯಲ್ಲಿ ದೇವಿ ಸರೋಜಿನಿನಾಯ್ಡು, ಮಾಳವ್ಯಜಿ, ಪ್ಯಾರಿಲಾಲ್, ಬಿರ್ಲ ಇವರು ನಾಗರಿಕವಾದ ಪೇಟೆಂಟ್ ಚರ್ಮದ ಕೈಚೀಲಗಳನ್ನೂ, ದೊಡ್ಡ ದೊಡ್ಡ ಸೂಟ್ ಬಾಕ್ಸ್‌ಗಳನ್ನೂ ಇಟ್ಟುಕೊಂಡುದನ್ನು ಕಂಡು "ಇಂತಹ ಧನಿಕರೊಂದಿಗೆ ಹೋಗಿ ನಾನು ಹೇಗೆ ತಾನೇ ಅಲ್ಲಿ ಬಡವರ ಪ್ರತಿನಿಧಿಯಾಗಿ ಬಂದಿದ್ದೇನೆಂದು ವಾದಿಸಲಿ?" ಎಂದು ಹೇಳಿ ಅವರ ಪದಾರ್ಥಗಳನ್ನೆಲ್ಲಾ ಏಡನ್ನಿನಲ್ಲಿ ಪರೀಕ್ಷಿಸಿದರು. ಹೀಗೆ ಬಡವರೊಂದಿಗೆ ಒಂದಾಗುವುದರಲ್ಲಿ ತಮ್ಮ ಮಹಿಮೆ ಅಥವ ಪ್ರಭಾವ ಧನಿಕರಲ್ಲಿ ಕಡಮೆಯಾದೀತೆಂದು ಗಾಂಧಿ ಹೆದರಲಿಲ್ಲ. ಮನಸ್ಸಿಗೆ ಸರಿಯೆಂದು ತೋರಿದುದನ್ನು ನಿರ್ಭಯವಾಗಿ ಮಾಡುವುದು ಆಡುವುದು ಅವರ ಸ್ವಭಾವ. ಒಂದು ಸಲ ಕಾಶೀ ವಿದ್ಯಾಪೀಠದಲ್ಲಿ ರಾಜ ಮಹಾರಾಜರುಗಳು ಮೈತುಂಬ ಗೊಂಬೆಗಳಂತೆ ಒಡವೆಗಳನ್ನು ಧರಿಸಿದುದನ್ನು ನೋಡಿ "ದರಿದ್ರರ ಈ ದೇಶದಲ್ಲಿ ಒಡವೆಗಳ ಈ ವಿಕಟ ನರ್ತನವ್ಯಾಕೆ? ಕಿತ್ತೊಗೆಯಿರಿ" ಎಂದರು. ನೆರೆದಿದ್ದ ರಾಜರಿಗೆಲ್ಲಾ ಅಸಮಾಧಾನವಾಯಿತು. ಶ್ರೀಮತಿ ಆನಿಬೆಸೆಂಟರಿಗೆ ಸಹ ಕೋಪ ಬಂತು.

ಸೇವಾಗ್ರಾಮವನ್ನು ನೋಡಿರುವವರಿಗೆ ಗಾಂಧಿ ಗುಡಿಸಲು ಹೇಗಿದೆ ಎಂಬುದು ಗೊತ್ತು ಅದು ಹಳ್ಳಿಯವರಿಗೆ ಅರ್ಹವಾದ ಮನೆ. ಹಳ್ಳಿಯಲ್ಲಿ ಸಿಕ್ಕದ ಯಾವ ಪದಾರ್ಥವನ್ನೂ ಆ ಮನೆಗೆ ಉಪಯೋಗಿಸಿಲ್ಲ. ಟನ್ ಗಟ್ಲೆ ಸಿಮೆಂಟು ಕಬ್ಬಿಣ ಕಲ್ಲು ಜಲ್ಲಿಗಳಿಲ್ಲದೆ ಮನೆಯನ್ನೇ ಕಟ್ಟುವುದಕ್ಕಾಗುವುದಿಲ್ಲವೆಂಬ ಕಟ್ಟಡ ಭ್ರಾಂತರಿಗೆ ಅದು ದೊಡ್ಡ ಆಶ್ಚರ್ಯ. ಒಂದು ಸಲ ಗಾಂಧಿಯವರ ಗುಡಿಸಲಿನ ಗಳುಗಳ ಬೊಡ್ಡೆಗಳನ್ನು ಗೆದ್ದಲು ತಿಂದು, ಗುಡಿಸಲು ಗಾಂಧಿಯವರ ಮೇಲೆಯೇ ಹೇರಿಕೊಂಡಿತು. ಆಗ "ಅನುಯಾಯಿಗಳು ಬೇರೆ ಮಂಗಳೂರು ಹಂಚಿನ ಕಟ್ಟಡ ಕಟ್ಟೋಣ" ಎಂದರು ಗಾಂಧಿಯವರು.

'ಭಾರತದ ೪೦ ಕೋಟಿಗೆ ಮಂಗಳೂರು ಹೆಂಚು ಎಲ್ಲಿ ಸಿಕ್ಕುತ್ತದೆ?' ಎಂದು ಹೇಳಿ ಮತ್ತೆ ಆ ಗುಡಿಸಲನ್ನೇ ಮೊದಲಿನಂತೆ ಸ್ಥಾಪಿಸಿ ಅಲ್ಲಿಯೇ ವಾಸಿಸತೊಡಗಿದರು.

## ಹಳ್ಳಿಗಳಿಗೆ ಹಿಂದಿರುಗಿ

"ಹಳ್ಳಿಗಳಿಗೆ ಹಿಂದಕ್ಕೆ ಹೋಗಿ" ಎಂಬ ಮಂತ್ರವನ್ನು ಗಾಂಧಿಯವರು ಎಲ್ಲರ ಕಿವಿಗೂ ಬಿತ್ತಿದರು. ರಚನಾತ್ಮಕ ಕಾರ್ಯಕ್ರಮವೂ ಅದರ ಹದಿನೆಂಟು ಅಂಗಗಳೂ ಹಳ್ಳಿಗಳ ಉದ್ಧಾರವನ್ನೇ ಗುರಿಯಾಗಿಟ್ಟುಕೊಂಡಿದ್ದವು. ಗಾಂಧಿಯವರು "ರೈತನೇ ರಾಷ್ಟ್ರದ ಅಧ್ಯಕ್ಷನಾಗಬಹುದು ರೈತ ಪ್ರಧಾನವಾದ ಈ ದೇಶದಲ್ಲಿ ರೈತನು ಮಂತ್ರಿಯಾಗುವುದು ನ್ಯಾಯವಾಗಿದೆ. ಭಾರತ ಯೂನಿಯನ್‌ಗೆ ರೈತ ಅಧ್ಯಕ್ಷನಾದರೆ, ಪಂಡಿತ ಜವಹರ್‌ಲಾಲರು ಅವನ ಕಾರ್ಯದರ್ಶಿಯಾಗಬಹುದೆಂದು ಸಹ ಹೇಳಿದ್ದಾರೆ. ಒಂದೆಡೆ "ಧನಿಕರೆಲ್ಲಾ ಹಣವನ್ನು ತಾವಾಗಿಯೇ ಹಳ್ಳಿಯ ಸೇವೆಗೆ ಕೊಡಿ" ಎಂದಿದ್ದಾರೆ ಭೂವಿಯನ್ನು ಉಳುವವನೇ ಒಡೆಯ ಎಂದಿದ್ದಾರೆ. ವಿದ್ಯಾವಂತರನ್ನು ಕುರಿತು "ಹಳ್ಳಿಯ ಕೆಲಸ ಎಂದರೆ ನಮಗೆ ಭಯ. ಪಟ್ಟಣದವರಿಗೆ ಹಳ್ಳಿಯ ವಾಸ ಕಷ್ಟವಾಗುತ್ತದೆ. ನಮ್ಮ ದೇಹ ಆ ಕಷ್ಟವನ್ನು ಒಪ್ಪುವುದಿಲ್ಲ. ಆದರೆ ನಮ್ಮ ಸ್ವರಾಜ್ಯ ನಿಜವಾದ ಸ್ವರಾಜ್ಯವಾಗಬೇಕಾದರೆ ನಾವು ಈ ಕಷ್ಟವನ್ನು ಎದುರಿಸಲೇ ಬೇಕು. ಇಲ್ಲದಿದ್ದರೆ ನಮ್ಮ ಸ್ವಾತಂತ್ರ ಸ್ವರಾಜ್ಯವಾಗುವುದಿಲ್ಲ. ಒಂದು ಪಂಗಡದವರ ಆಳ್ವಿಕೆ ಹೋಗಿ ಮತ್ತೊಂದು ಪಂಗಡದವರ ಆಳ್ವಿಕೆಯಾಗುತ್ತದೆ ಮಾತ್ರ. ಆ ಆಳ್ವಿಕೆ ಮೊದಲಿನದಕ್ಕಿಂತ ಇನ್ನೂ ಕೆಟ್ಟದ್ದೇ ಆಗಬಹುದು. ಇದುವರೆಗೆ, ಪಟ್ಟಣಿಗರಾದ ನಾವು ಬದುಕಲೆಂದು ಹಳ್ಳಿಯವರು ಸಹಸ್ರಾರು ಸಂಖ್ಯೆಯಲ್ಲಿ ಮಡಿದಿದ್ದಾರೆ. ಈಗ ಅವರು ಬದುಕಲೆಂದು ನಾವು ಮಡಿಯಬೇಕಾಗಿದೆ. ನಮ್ಮ ಈ ತ್ಯಾಗದಿಂದ ರಾಷ್ಟ್ರದ ಘನತೆ ಏರುವುದು. ಇದು ಈಗ ಅವಶ್ಯಕವಾದ ತ್ಯಾಗ, ಆತ್ಮ ಗೌರವವವುಳ್ಳ ರಾಷ್ಟ್ರವಾಗಿ ನಾವು ಬಾಳಬೇಕಾದರೆ ಈ ತ್ಯಾಗದಿಂದ ನಾವು ಹಿಂಜರಿಯುವಂತಿಲ್ಲ" ಎಂದಿದ್ದಾರೆ.

ಇನ್ನು "ಗಾಂಧಿಯವರೂ ಗ್ರಾಮೋದ್ಧಾರವೂ" ಎಂಬುದು ಹಳೆಯ ವಿಷಯ. ಇದರ ಮೇಲೆ ಎಷ್ಟು ಬೇಕಾದರೂ ಹೇಳ ಬಹುದು ಗಾಂಧಿಯವರು ಮುಖ್ಯವಾಗಿ ವ್ಯವಸಾಯ ಮತ್ತು ನೂಲುವುದಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ವ್ಯವಸಾಯವೂ ಒಂದು ಕೈಗಾರಿಕೆಯೇ. ಈ ಕೈಗಾರಿಕೆಯನ್ನು ಸ್ಪಷ್ಟವಾದ ನಿಯಮಿತವಾದ ಯೋಜನೆಯ ಮೇಲೆ ಕಟ್ಟಬೇಕು. ಕಳೆದ ವರುಷ ಇಂಗ್ಲೆಂಡಿನಲ್ಲಿ ಒಂದು ಲಕ್ಷ ಎಕರೆ ಭೂಮಿಯನ್ನು ಹೊಸದಾಗಿ ಗೋಧಿ ಸಾಗುವಳಿಗೆ ತಂದರು. ಈ ವರುಷ ಇನ್ನೊಂದು ಲಕ್ಷ ಎಕರೆಯನ್ನು ಕೃಷಿಮಾಡಿದ್ದಾರೆ. ಸರ್ಕಾರ ದವರು ಇದಕ್ಕಾಗಿಯೇ ಬೇರೆ ಸಿಬ್ಬಂದಿಗಳನ್ನು ನಿಯಮಿಸಿದ್ದಾರೆ. ಹೊರಗಿನ ಆಹಾರಕ್ಕೆ ಇಷ್ಟೊಂದು ಹಣ ತೆರುತ್ತಿರುವ ನಮ್ಮ ಸರ್ಕಾರ ಗಳು ರೈತನಿಗೆ ಇನ್ನೂ ಹೆಚ್ಚಾಗಿ ಸೌಲಭ್ಯಗಳನ್ನು ಕೊಟ್ಟರೆ ವ್ಯವಸಾಯದ ಪ್ರಶ್ನೆ ಬಹಳ ಮಟ್ಟಿಗೆ ಪರಿಹಾರವಾಗುವುದು.

ಗ್ರಾಮೋದ್ಧಾರದ ವಿಚಾರದಲ್ಲಿ ಮಾತನಾಡುತ್ತಾ ಗಾಂಧಿ ಯವರು "ನೂಲುವುದನ್ನು ಹೆಚ್ಚುಹೆಚ್ಚಾಗಿ ಪ್ರಚಾರಮಾಡಿದರೆ ನನ ಗಂತೂ ಬಟ್ಟೆಯ ಕ್ಷಾಮದ ಕಾರಣ ಕಾಣುವುದಿಲ್ಲ" ವೆಂದಿದ್ದಾರೆ "ಈಗ ಭಾರತ ಸರ್ಕಾರ ಬಟ್ಟೆಯ ಹೆಚ್ಚಿಗೆ ತಯಾರಿಗೆ ಅಖಿಲ ಭಾರತ ಚರಖ ಸಂಘದ ಯೋಜನೆಗಳಾವುವು?" ಎಂದು ಚಕರಸಂಘವನ್ನು ಕೇಳಿದ್ದಾರೆ. ಮೈಸೂರಿನಲ್ಲಿ ಖಾದಿಯ ಬೆಳವಣಿಗೆ ಈಚೆಗೆ ಕುಂಠಿತ ವಾಗಿದೆ. ಕೆಲಸಗಾರರು ಅತೃಪ್ತರಾಗಿರುವಂತೆ ಕಾಣುತ್ತಿದೆ. ಈಗ ಸರ್ಕಾರ ಖಾದಿಯ ಉತ್ಪತ್ತಿಯನ್ನು ಹೆಚ್ಚಿಸಬೇಕು. "ಖಾದಿ ತನ್ನ ಪಾಡಿಗೆ ತಾನು ಬೆಳೆಯುತ್ತೆ. ಇದಕ್ಕೆ ಪ್ರೋತ್ಸಾಹ ಬೇಕಿಲ್ಲ" ಎನ್ನುವ ಕೈಗಾರಿಕಾ ಅಧಿಕಾರಿಗಳಿಂದ ಪ್ರಯೋಜನವಿಲ್ಲ.

ಗ್ರಾಮೋದ್ಧಾರದ ಪ್ರಶ್ನೆ ಬಹಳ ಜಟಿಲವಾದುದು. ಇದರ ಪರಿಹಾರ ಮಾರ್ಗಕ್ಕೆ ಸಾರ್ವಜನಿಕರೂ ಪಟ್ಟಣಿಗರೂ ಹಳ್ಳಿಯವರೂ ಒಟ್ಟಾಗಿ ಪ್ರಯತ್ನಿಸಬೇಕು. ಮುಖ್ಯವಾಗಿ ಹಳ್ಳಿಯವರು ಹೆಚ್ಚು ಆತ್ಮಾಭಿಮಾನಿಗಳೂ ಕಷ್ಟಜೀವಿಗಳೂ ವಿದ್ಯಾವಂತರೂ ಆಗಬೇಕು.

ಪಟ್ಟಣಿಗರಿಗೆ ಹಳ್ಳಿಯವರ ಕಷ್ಟ ಗೊತ್ತಾಗುತ್ತಿಲ್ಲ. ಹಳ್ಳಿಗಳಲ್ಲಿ ಜನಗಳೇ ಇಲ್ಲವೆಂಬುದೂ, ಎಲ್ಲರೂ ಪಟ್ಟಣಗಳನ್ನೇ ಸೇರುತ್ತಿರುವರೆಂಬುದೂ ಅವರಿಗೆ ಗೊತ್ತಾಗುತ್ತಿಲ್ಲ. "ಹಳ್ಳಿಯವರು ಯಾಕೆ ಇನ್ನಷ್ಟು ಆಹಾರ ಬೆಳೆಯುವುದಿಲ್ಲ ?'' ಎಂದು ಪಟ್ಟಣಿಗರು ಕೋಪಿಸಿಕೊಳ್ಳುತ್ತಾರೆ. "ಪಟ್ಟಣಗಳಲ್ಲಿ ಕುಳಿತಿರುವವರ ಪೈಕಿ ಕೆಲವರಾದರೂ ಹಳ್ಳಿಗಳಿಗೆ ಬಂದು ಯಾಕೆ ಆಹಾರವಸ್ತುಗಳನ್ನು ಬೆಳೆಯುತ್ತಿಲ್ಲ" ಎಂದು ಹಳ್ಳಿಗರು ರೇಗುತ್ತಾರೆ. ಪ್ರತಿಸಲದ ಜನಗಣತಿಯಲ್ಲಿಯೂ ದೇಶದ ಜನಸಂಖ್ಯೆ ಹೆಚ್ಚುತ್ತಾ ಹೋದರೂ ಹಳ್ಳಿಗಳು ಬರಿದಾಗುತ್ತಿವೆ. ಪಟ್ಟಣದ ಕೈಗಾರಿಕೆಗೆ ದೊರೆಯುತ್ತಿರುವ ಪ್ರೋತ್ಸಾಹ, ಹಳ್ಳಿಯ ವ್ಯವಸಾಯಕ್ಕೆ ದೊತೆಯುತ್ತಿಲ್ಲ. ಮೊನ್ನೆ ಮದರಾಸು ಸರ್ಕಾರದ ಮುಖ್ಯ ಮಂತ್ರಿ ರಾಮಸ್ವಾಮಿ ರೆಡ್ಡಿಯವರು ಮಾತನಾಡುತ್ತಾ "ಯಾವ ಪುನರ್ವ್ಯವಸ್ಥೆಯಿಂದಲೂ ಕೈಗಾರಿಕೆಗೆ ಮಾತ್ರ ಸಹಾಯವಾಗುತ್ತಿದೆ. ಕೃಷಿಗೆ ಸಹಾಯವಾಗುತ್ತಿಲ್ಲ. ಇದನ್ನು ಮಾಡಿದ ಹೊರತು ಸರ್ಕಾರ ತನ್ನ ಕರ್ತವ್ಯ ನಿರ್ವಹಿಸಿದಂತೆ ಆಗುವುದಿಲ್ಲ. ಯಾವ ಮನುಷ್ಯನೂ ಪಟ್ಟಣದಲ್ಲಿ ಹೋಗಿ ಕುಳಿತರೆ ತೀರಿತು. ಅವನಿಗೆ ಆಹಾರ ಬಟ್ಟೆ ಬೆಳಕನ್ನು ಒದಗಿಸುವುದು ಸರ್ಕಾರದ ಕರ್ತವ್ಯವಾಗುತ್ತದೆ. ಈ ತತ್ವವೇ ಮುಂದುವರಿದರೆ ನಮ್ಮ ಪಟ್ಟಣಗಳು ಮಾತ್ರ ಬೆಳೆಯುತ್ತವೆ. ಎಲ್ಲರಿಗೂ ಅಮೆರಿಕ ಆಸ್ಟ್ರೇಲಿಯದಿಂದಲೇ ಆಹಾರವನ್ನು ತರಿಸಿ ಒದಗಿಸಬೇಕಾಗುತ್ತದೆ" ಎಂದಿದ್ದಾರೆ.

ಮಹಾತ್ಮ ಗಾಂಧಿಯವರು ಈ ವಿಷಯದಲ್ಲಿ ಹಳ್ಳಿಗಳಿಗೂ ಪಟ್ಟಣಗಳಿಗೂ ಮಧ್ಯಸ್ತಗಾರರಾಗಿದ್ದರು. ಅವರ ನಿಧನದಿಂದ ಹಳ್ಳಿಗರು ಇನ್ನೂ ಹೆಚ್ಚು ಅನಾಥರಾಗಿದ್ದಾರೆ. ಯಾರಿಗೆ ಮೊರೆ ಇಡಬೇಕೆಂಬುದು ಹಳ್ಳಿಗರಿಗೆ ತಿಳಿಯದಾಗಿದೆ. ಗಾಂಧಿಯವರ ಜನ್ಮದಿನದ ಈ ಪವಿತ್ರ ಸಮಯದಲ್ಲಿ ನಾವು ಮತ್ತೆ ಹಳ್ಳಿಗಳ ಉದ್ಧಾರದ ಪ್ರತಿಜ್ಞೆ ತೆಗೆದುಕೊಳ್ಳೋಣ. ಇದೇ ನಾವು ಅವರಿಗೆ ಸಲ್ಲಿಸುವ ಕಾಣಿಕೆ. ಸ್ವತಂತ್ರ ಭಾರತದಲ್ಲಿ ಪ್ರತಿಯೊಬ್ಬ ಪ್ರಜೆಯೂ ತನ್ನ ದೇಶಕ್ಕೆ ಅರ್ಪಿಸುವ ಉಚ್ಚಸೇವೆ ಇದೇಯೆ.

## ೧೩ ಗಾಂಧಿ ಚಿಕ್ಕಪ್ಪ

ಒಂದು ಸಲ ದೀನ ಬಂಧು ಸಿ ಎಫ್. ಆಂಡ್ರೂಸ್‌ರವರು ಹೀಗೆ ಹೇಳಿದರು " ಮಕ್ಕಳಿಗೆ ಮನುಷ್ಯನ ಗುಣ ಸ್ವಾಭಾವಿಕವಾಗಿ ಗೊತ್ತಾಗುತ್ತದೆ. ಈ ವಿಷಯದಲ್ಲಿ ಅವರ ಅಭಿರುಚಿ ಬಹಳ ಸ್ಪಷ್ಟ. ಮಕ್ಕಳು ತಾವೇ ತಾವಾಗಿ ಗಾಂಧಿಯವರೊಂದಿಗೆ ಹೊಂದಿಕೊಳ್ಳು ತ್ತವೆ. ಗಾಂಧಿಯವರ ಹೃದಯದ ಪ್ರೇಮವನ್ನು ಕಂಡುಕೊಳ್ಳುತ್ತವೆ. ಗಾಂಧಿಯವರ ಸುತ್ತ ಯಾವಾಗಲೂ ಮಕ್ಕಳು ಹಕ್ಕಿಗಳಂತೆ ತುಂಬಿ ಕೊಳ್ಳುತ್ತವೆ."

ಗಾಂಧಿಯವರ ಹೃದಯ ಎಲ್ಲಾ ಯೋಗಿಗಳ ಹೃದಯದಂತೆ ವಜ್ರದಷ್ಟು ಕಠಿಣ ಆದರೆ ಪುಷ್ಪದಷ್ಟು ಕೋಮಲ ಒಂದು ಸಲ ಆರ್ಯ ನಾಯಕಂರವರ ಮಗ ಯಾವುದೋ ವಿಷ ಪದಾರ್ಥವನ್ನು ತಿಂದು ಸತ್ತು ಹೋದ. ಗಾಂಧಿಯವರ ಹೃದಯ ದುಃಖದಿಂದ ತುಂಬಿತು. ಸತ್ತ ಬಾಲಕನ ಹತ್ತಿರ ನಿಂತು ಒಂದು ಗಳಿಗೆ ಕಣ್ಣೀರು ಸುರಿಸಿದರು. ಆದರೆ ಜಗತ್ತಿನ ಸೇವೆಗೆ ಮೀಸಲಾದವನನ್ನು ಯಾರೊಬ್ಬರೂ ಹೆಚ್ಚು ಕಾಲ ಹೊಂದಲು ಸಾಧ್ಯವಿಲ್ಲ. ದುಃಖದಿಂದ ಗಾಂಧಿ ತಮ್ಮನ್ನು ತಾವು ಒಂದು ಗಳಿಗೆ ಮರೆತು ನಿಂತಿದ್ದರು, ಕೂಡಲೇ ತಾವು ಹೋಗ ಬೇಕಾದ ಒಂದು ಸಭೆಯನ್ನು ಜ್ಞಾಪಿಸಿಕೊಂಡು ದುಃಖವನ್ನು ನುಂಗಿ ಕೊಂಡು ಹೊರಟು ಹೋದರು. ಸಭೆಯಲ್ಲಿದ್ದವರಿಗೆ ಅವರು ತಮ್ಮ ಹೃದಯದಲ್ಲಿ ತುಂಬಿದ್ದ ವೇದನೆಯನ್ನು ತೋರಿಸದೆ ಸ್ವಾಭಾವಿಕವಾಗಿ ಕೆಲಸ ನಡೆಸಿದರು.

ಯೋಗಿ, ಅತ್ಯಂತ ಮಹತ್ವವಾದ ವಿಷಯುವನ್ನು ಕುರಿತು ಯೋಚಿಸುವಂತೆಯೇ, ಕೇವಲ ಸರಳನಾಗಿಯೂ ಸುಲಭನಾಗಿಯೂ ಅಕೃತ್ರಿಮನಾಗಿಯೂ ಇರುತ್ತಾನೆ. ಎಂತಹ ಚಂಡಿ ಹಿಡಿಯುವ ಮಗುವೂ ಆತನ ಸ್ಪರ್ಶದಿಂದ ಸುಖಿಯಾಗುತ್ತದೆ. ಆತನ ಧ್ವನಿ ಕೇಳಿ ನಲಿಯುತ್ತದೆ. ತಾನು ಎಷ್ಟು ಸಮಾಧಾನಮಾಡಿದರೂ ಚಂಡಿ ಹಿಡಿಯುತ್ತಿದ್ದ ತನ್ನ ಮಗುವನ್ನು, ಗಾಂಧಿ ಎತ್ತಿಕೊಂಡು ಲಲ್ಲೆ ಮಾತು

ಗಳನ್ನಾಡಿ 3–4 ನಿಮಿಷಗಳಲ್ಲಿ ನಗಿಸಿಬಿಡುತ್ತಿದ್ದರೆಂದು ಶ್ರೀಮತಿ ಪೋಲಕ್ ಹೇಳುತ್ತಾರೆ. ಸೂರ್ಯನ ಬೆಳಕಿನ ಕಡೆಗೆ ಲತೆ, ಗಿಡಗಳು ಆಕರ್ಷಿತವಾಗಿ ಹರುಷಗೊಳ್ಳುವಂತೆ ಗಾಂಧಿ ಮಕ್ಕಳನ್ನು ಆಕರ್ಶಿಸುತ್ತಾರೆ. ಈ ಆಕರ್ಷಣೆ ಅವರು ಪ್ರಯತ್ನಪೂರ್ವಕವಾಗಿ ಸಾಧಿಸಿಕೊಂಡುದಲ್ಲ. ಅದು ಅವರ ಸ್ವಭಾವ ವೈಸರಾಯರು ಭಾರತದ ಭಾಗ್ಯವನ್ನು ಚರ್ಚಿಸಲು ಅವರನ್ನು ಆಹ್ವಾನಿಸುವಂತೆ, ಮಕ್ಕಳು ಮರಳಿನ ಆಟವನ್ನು ಆಡಲೂ ಅವರನ್ನು ನಿರೀಕ್ಷಿಸುತ್ತಾರೆ. ಆ ಬಾಳಿಗೆ ಎರಡೂ ಸಮಾನ; ಸಮರಸ ಯಾವುದೂ ಆ ಬಾಳಿನಿಂದ ಹೊರತಾದುದಲ್ಲ ಸೇವಾಗ್ರಾಮದಲ್ಲಿ ಗಾಂಧಿಯವರ ದರ್ಶನಕ್ಕೆ ಬರುವವರ ಜತೆಯಲ್ಲಿ ಬರುವ ಮಕ್ಕಳು ಗಾಂಧಿಯವರ ಸುತ್ತ ಆಡುತ್ತವೆ. ಒಂದೊಂದು ವೇಳೆ ಮಕ್ಕಳು ಗಾಂಧಿಯವರಿಗೆ ಚೇಷ್ಟೆಯ ಪ್ರಶ್ನೆಯನ್ನು ಹಾಕುತ್ತಾರೆ. ಅವರ ಮಮ್ಮಗ "ಯಾವಾಗಲೂ ವೈಸರಾಯರನ್ನು ನೋಡಲು ನೀನೇ ಹೋಗಬೇಕೆ? ವೈಸರಾಯಿ ಯಾಕೆ ಇಲ್ಲಿಗೆ ಒಂದು ಸಲ ಬರಬಾರದು? ಎಂದು ಕೇಳುತ್ತಾನೆ. ಗಾಂಧಿಯವರು ನಂದಿಗೆ ಬಂದಿದ್ದಾಗ ಪ್ರತಿ ಸಂಧ್ಯಾಕಾಲವೂ ಬೆಟ್ಟದಮೇಲೆ ತಿರುಗುತ್ತಿದ್ದರಷ್ಟೆ. ಆಗ ನಿತ್ಯ ಒಂದು ಚಿಕ್ಕ ಹುಡುಗಿ ಕೈಯಲ್ಲಿ ಒಂದು ಹೂವನ್ನು ಹಿಡಿದುಕೊಂಡು ಅವರಿಗಾಗಿ ಕಾದಿರುತ್ತಿದ್ದಿತು. ಗಾಂಧಿಯವರನ್ನು ದೂರದಿಂದ ಕಂಡಕೂಡಲೇ ಮಗು ಹತ್ತಿರಕ್ಕೆ ಓಡಿಬಂದು ಹೂವನ್ನು ಅವರ ಕೈಗೆ ಕೊಡುತ್ತಿದ್ದಿತು ಗಾಂಧಿಯವರು ಹೂವನ್ನು ತೆಗೆದುಕೊಂಡು ಮಗುವಿನ ಕೆನ್ನೆ ಅಲುಗಿಸಿ ಬೆನ್ನು ತಟ್ಟಿ ನಗುತ್ತಿದ್ದರು. ಮಗುವಿನ ಮುಖದಲ್ಲಿ ಅಕೃತ್ರಿಮವಾದ ನಗೆ ಮಿನುಗುತ್ತಿದ್ದಿತು.

ಹಡಗಿನಲ್ಲಿ ಗಾಂಧಿಯವರು ಪ್ರಯಾಣಮಾಡುವಾಗ ಮಕ್ಕಳು ಯಾವಾಗಲೂ ಅವರನ್ನು ಮುತ್ತುತ್ತವೆ. ಆ ಮಕ್ಕಳು ಇಂತಹ ಜಾತಿಯ ಇಂತಹ ಬಣ್ಣದ ಇಂತಹ ಅಂತಸ್ತು ದರ್ಜೆಯ ಮಕ್ಕಳಾಗಬೇಕೆಂಬ ನಿಯಮವಿಲ್ಲ. ಹಿಂದು, ಪಾರ್ಸಿ, ಕ್ರಿಸ್ತ, ಮುಸ್ಲಿಂ, ಯೂರೋಪಿಯನ್ ಮಕ್ಕಳೆಲ್ಲಾ ಅವರ ಮೈಮೇಲೆ ಏರಲು ನಾನು

ಮುಂದು ತಾನು ಮುಂದು ಎಂದು ಬರುತ್ತವೆ. ಗಾಂಧಿ ಇಂಗ್ಲೆಂಡಿಗೆ ಹೋಗಿದ್ದಾಗ ಯಾವ ಬೀದಿಯಲ್ಲಿ ಹೋಗುತ್ತಿದ್ದರೂ ಜನ ಬಂದು ಆವರನ್ನು ಗುರುತಿಸಿ ನಮಸ್ಕರಿಸಿ ಹೋಗುತ್ತಿದ್ದರು. ಆದರೆ ಮಕ್ಕಳು ಅವರನ್ನು ಬೆನ್ನುಹತ್ತಿ ಅವರ ಜತೆಯಲ್ಲಿ ಕುಣಿದಾಡುತ್ತ ಬರುತ್ತಿದ್ದರು ಹುಡುಗರು ದೇವದಾಸನನ್ನು "ನಿಮ್ಮ ತಂದೆ, ಚಕ್ರವರ್ತಿಯನ್ನು ಯಾವಾಗ ನೋಡುತ್ತಾರೆ ಹೇಳು" ಎಂದು ಕೇಳುತ್ತಿದ್ದರು. ಒಬ್ಬಳು ಹುಡುಗಿ ಮತ್ತೊಬ್ಬಳೊಂದಿಗೆ "ಈ ಜನ ಅವರ ಬಟ್ಟೆಗಳು ನಮಗೆ ವಿಚಿತ್ರವಾಗಿ ಕಾಣುತ್ತವೆ" ಎಂದಳು ಆ ಹುಡುಗಿ "ನಾವು ಅವರಿಗೆ ವಿಚಿತ್ರವಾಗಿ ಕಾಣುವಂತೆ" ಎಂದು ಬುದ್ಧಿವಂತಿಕೆಯಿಂದ ಪ್ರತ್ಯುತ್ತರ ಕೊಟ್ಟಳು. ಒಬ್ಬ ಹುಡುಗ ದೇವದಾಸನನ್ನು "ನಿಮ್ಮ ತಂದೆ ಮೋಟಾರಿನಲ್ಲಿ ಹೋಗುತ್ತಾನೆ. ನಿನಗೆ ಒಂದನ್ನು ಕೊಡುವುದಿಲ್ಲವೇ?" ಎಂದು ಕೂಗಿತು. ಮತ್ತೊಬ್ಬ ಚೇಷ್ಟೆಯ ಹುಡುಗ "ನಿನ್ನ ಷರಾಯಿ ಎಲ್ಲಿ?" ಎಂದು ಗಟ್ಟಿಯಾಗಿ ಕೂಗಿತು. (ದೇವದಾಸ್ ಪಂಚೆ ಉಟ್ಟಿದ್ದರು) ಗಾಂಧಿಯವರಿಗೆ ಇಂಗ್ಲೆಂಡಿನಲ್ಲಿ ದೊರೆತ ಜನ್ಮೋತ್ಸವ ಕಾಣಿಕೆಗಳ ಪೈಕಿ ಮಕ್ಕಳು ತಮ್ಮ "ಸ್ನೇಹಿತ" ಗಾಂಧಿಗೆ ಕಳುಹಿಸಿದ ಹೂವುಗಳು ಅಪಾರವಾಗಿದ್ದುವು. ಗಾಂಧಿ ಚಿಕ್ಕಪ್ಪ ಇನ್ನೂ ಅನೇಕ ಕಾಲ ಬದುಕಲಿ" ಎಂಬುದು ಅವರ ಹರಕೆಯಾಗಿದ್ದಿತು.

ಮೊಗುವಿನ ಹೃದಯವನ್ನು ಅರಿತು ಅದು ಸ್ವಾಭಾವಿಕವಾಗಿ ವಿಕಸಿತವಾಗಲು ದುಡಿಯುವವರನ್ನು ಕಂಡರೆ ಗಾಂಧಿಯವರಿಗೆ ಯಾವಾಗಲೂ ಪ್ರೇಮ. ಗಾಂಧಿಯವರನ್ನು ಗಾಂಧಿಚಿಕ್ಕಪ್ಪ ಎಂದು ಕರೆದ ಮಗು ಮೂರು ವರುಷದ ಹುಡುಗ. ಇಂಗ್ಲೆಂಡಿನ ಹುಡುಗರು ಗಾಂಧಿಯನ್ನು ನೋಡಿದ ಕೂಡಲೇ ಅವರಿಗೆ ನಿದ್ದೆಯಲ್ಲಿಯೂ ಕನಸಿನಲ್ಲಿಯೂ ಗಾಂಧಿಯವರದೇ ಜ್ಞಾನವಾಯಿತು. "ಗಾಂಧಿ ಏನು ತಿನ್ನುತ್ತಾನೆ; ಏನು ಧರಿಸುತ್ತಾನೆ? ಗಾಂಧಿ ಯಾಕೆ ಬೂಟ್ಸುಗಳನ್ನು ಧರಿಸುವುದಿಲ್ಲ? ಎಂಬುದೇ ತಾಯಂದಿರಿಗೆ ಮಕ್ಕಳ ಪ್ರಶ್ನೆಯಾಯಿತು. ಒಂದು ದಿನ ತಾಯಿಯು ಮಗನಿಗೆ "ಇಲ್ಲಿ ನೋಡು. ಇನ್ನು ಮಿಸ್ಟರ್ ಗಾಂಧಿ ಎನ್ನಬೇಡ. ನಿನಗೇ ಗೊತ್ತು. ಗಾಂಧಿ ಬಹಳ ಒಳ್ಳೆಯವರು"

ಎಂದಳು. ಮಗುವು "ನಾನು ಹೇಳಿದ್ದು ತಪ್ಪು. ಇನ್ನು ಮೇಲೆ ಗಾಂಧಿಚಿಕ್ಕಪ್ಪ ಎನ್ನುತ್ತೇನೆ" ಎಂದಿತು. ದೇವರ ಹಣೆ ಬರಹವೂ ಹೀಗೆಯೇ ಆಗಿದೆ. ಆತನಿಗೂ ಚಿಕ್ಕಪ್ಪದೇವರು (Uncle God) ಎಂಬ ಹೆಸರು ಬಂದಿದೆ. ಇರಲಿ. ಹುಡುಗರೆಲ್ಲರೂ ಗಾಂಧಿಯುವರನ್ನು ಗಾಂಧಿಚಿಕ್ಕಪ್ಪ ಎಂದೇ ಕರೆಯತೊಡಗಿದರು. ಗಾಂಧಿಯುವರು ಇಂಗ್ಲೆಂಡಿನಲ್ಲಿ ನಿಂತುದು ಸ್ವಲ್ಪ ಕಾಲವೇ ಆದರೂ ಮಕ್ಕಳು ಅವರ ಜನ್ಮೋತ್ಸವದ ದಿನ ಆಟದ ನಾಯಿಯನ್ನೂ (ಬೊಂಬೆ) ಮಿಠಾಯಿ ಗಳನ್ನೂ ಕಳುಹಿಸಿದರು. "ನಿಮಗೆ ಇನ್ನೂ ಬಗೆಬಗೆಯ ತಿಂಡಿ ಗಳನ್ನು ಕಳುಹಿಸಬೇಕಾಗಿದ್ದಿತು. ನಿಮ್ಮ ಜನ್ಮೋತ್ಸವದಂದು ದಯ ವಿಟ್ಟು ಬನ್ನಿ. ನಾವು ಬಗೆಬಗೆಯ ಆಟಗಳನ್ನು ಆಡೋಣ. ಮೇಣದ ಬತ್ತಿಗಳ ದೀಪಾವಳಿ ಮಾಡೋಣ" ಎಂದು ಬರೆದಿದ್ದರು

ಒಂದು ದಿನ ಒಬ್ಬ ತಂದೆ ಗಾಂಧಿಯವರಲ್ಲಿ ಬಂದು ಹೀಗೆ ಹೇಳಿದ. "ನಿಮ್ಮೊಂದಿಗೆ ನನಗೆ ಒಂದು ವ್ಯಾಜ್ಯವಿದೆ. ನಾಲ್ಕು ವರುಷದ ನನ್ನ ಚಿಕ್ಕ ಹುಡುಗಿ ನಿತ್ಯ ಬೆಳಗಾದ ಕೂಡಲೆ ಬಂದು ನನಗೆ ಒಂದು ಗುದ್ದು ಕೊಡುತ್ತಾಳೆ ನಾನು ಮಾತನಾಡುವುದಕ್ಕೆ ಮುಂಚೆ ತಿರುಗಿಕೊಂಡು "ನನ್ನನ್ನು ಹಿಂದಿರಿಗಿ ಹೊಡೆಯಬೇಡ. ಹೊಡೆದವರನ್ನು ಮತ್ತೆ ಹೊಡೆಯಕೂಡದೆಂದು ಗಾಂಧಿ ಹೇಳಿದ್ದಾರೆ" ಎನ್ನುತ್ತಾಳೆ ಎಂದ ಗಾಂಧಿಯವರು ಇಂಗ್ಲೆಂಡಿನಲ್ಲಿರುವಾಗ ಬೆಳ ಗಿನ ಝಾವದ ಛಳಿಯಲ್ಲಿಯೂ ತಿರುಗಾಡಲು ಹೋಗುತ್ತಿದ್ದರಷ್ಟೆ. ಆ ವೇಳೆಯಲ್ಲಿ ಅವರನ್ನು ಸಂಧಿಸಿ ಅವರಿಗೆ "ಗುಡ್ ಮಾರ್ನಿಂಗ್" ಮಾಡಬೇಕೆಂಬುದು ಬಾಲಕರ ಆಸೆಯಾಗಿದ್ದಿತು. ಹುಡುಗರು ಮನೆ ಯಲ್ಲಿ ತಂದೆಗಳನ್ನು" ನೀವು ಎಷ್ಟು ಹೊತ್ತು ಮಲಗುತ್ತೀರಿ? ನಮ್ಮನ್ನು ಖಂಡಿತ ಬೆಳಿಗ್ಗೆ ಏಳಿಸಬೇಕು ನಾವು ಗಾಂಧಿಯವರಿಗೆ ನಮಸ್ಕಾರ ಮಾಡಬೇಕು" ಎಂದು ಬಲಾತ್ಕರಿಸುತ್ತಿದ್ದರು. ಬೆಳಗಿನ ಜಾವ ಎದ್ದು ಅಭ್ಯಾಸವಿಲ್ಲದಿದ್ದರೂ ಪೋಷಕರು, ಮಕ್ಕಳ ಉತ್ಸಾಹ ಕ್ಕಾಗಿ ಆ ಛಳಿಯಲ್ಲಿಯೂ ಏಳುತ್ತಿದ್ದರು.

ಗಾಂಧಿಯವರು ಇಂಗ್ಲೆಂಡಿಗೆ ಹೋಗಿದ್ದಾಗ, ಅಲ್ಲಿಯ ಮಕ್ಕಳು

ಗಾಂಧಿ ಯಾರು ಎಂಬುದನ್ನು ಚೆನ್ನಾಗಿಯೇ ತಿಳಿದರು. ಗಾಂಧಿಯವರ ಜನ್ಮೋತ್ಸವದ ದಿನ ಒಬ್ಬ ಚಿಕ್ಕ ಹುಡುಗಿ ಗಾಂಧಿಯವರ ಮೇಲೆ ಈ ಪ್ರಬಂಧ ಬರೆದಳು.

" ಸೆಂಟ್ ಫ್ರಾನ್ಸಿಸ್ ಆಫ್ ಅಸಸಿಯನ್ನು ಜನ ಅಸಸಿಯ ಬಡಪಾಯಿ ಎಂದು ಕರೆಯುತ್ತಿದ್ದರು. ಆತ " ಗಾಂಧಿಯ ಹಾಗೆಯೇ ಇದ್ದ.

" ಇಬ್ಬರಿಗೂ ಮಕ್ಕಳು, ಹಕ್ಕಿ, ಹೂವು, ಮುಂತಾದ ಪ್ರಕೃತಿ ಸೌಂದರ್ಯದಲ್ಲಿ ಪ್ರೀತಿ. ಸೆಂಟ್ ಫ್ರಾನ್ಸಿಸ್ ಈ ಲೋಕದಲ್ಲಿರುವಾಗ ಕೌಪೀನ ಧರಿಸಿದ್ದ. ಗಾಂಧಿಯು, ಕೌಪೀನವನ್ನೇ ಧರಿಸುತ್ತಾನೆ.

" ಗಾಂಧಿಯೂ ಸೇಂಟ್ ಫ್ರಾನ್ಸಿಸನೂ ಧನಿಕ ವ್ಯಾಪಾರಿಗಳ ಮಕ್ಕಳು. ಒಂದು ದಿನ ರಾತ್ರಿ ಹಬ್ಬದ ಊಟ ಮಾಡುತ್ತಿರುವಾಗ ಸೇಂಟ್ ಫ್ರಾನ್ಸಿಸನಿಗೆ ಇಟಲಿ ದೇಶದ ಬಡವರ ಜ್ಞಾಪಕ ಬಂದಿತು. ಆತ ಹೊರಕ್ಕೆ ಹೋಗಿ ಬಡವರಿಗೆ ತನ್ನ ವಸ್ತ್ರಗಳನ್ನೂ ಹಣವನ್ನೂ ಕೊಟ್ಟುಬಿಟ್ಟ. ಗಾಂಧಿಯೂ ಹಾಗೆಯೇ.

" ಸೇಂಟ್ ಫ್ರಾನ್ಸಿಸ್ ಆ ಬಡವನ ಕೈಯಿಂದ ಸ್ವಲ್ಪ ಹೂವು ತೆಗೆದುಕೊಂಡ, ಅವರು ಮರಗಳ ಕೆಳಗೇ ವಾಸಮಾಡತೊಡಗಿದರು. ಗಾಂಧಿಯೂ ಹಾಗೆಯೇ. ಭಾರತೀಯರಿಗಾಗಿ ತಮ್ಮ ಸುಖ ವೈಭವಗಳನ್ನೆಲ್ಲಾ ತೊರೆದಿದ್ದಾರೆ.

" ಗಾಂಧಿ ಲಂಡನ್ನಿಗೆ ಬರಲು, ಅವರ ದೇಶದ ಜನ ಅವರಿಗೆ ಕೌಪೀನವನ್ನು ಕೊಟ್ಟರು. ಕಿಂಗ್‌ಸ್ಲೆ ಹಾಲ್‌ಗೆ ಹೋದಾಗ ನನ್ನೊಂದಿಗೆ ಗಾಂಧಿ " ನನಲ್ಲಿ ಇವನ್ನು ಕೊಳ್ಳಲು ಹಣವಿರಲಿಲ್ಲವೆಂದು " ಹೇಳಿದರು.

" ಪ್ರತಿ ಸೋಮವಾರವೂ ಗಾಂಧಿ ಉಪವಾಸ. ಅದು ಅವರ ಧರ್ಮ. ಜನ್ಮೋತ್ಸವದ ದಿನ ಅವರಿಗೆ ಹುಡುಗರಿಂದ ಬೊಂಬೆಗಳು ಮೇಣದ ಬತ್ತಿಗಳು ಮಿಠಾಯಿ ಕಾಣಿಕೆಯಾಗಿ ಬಂದವು. ಅವರ ಆಹಾರ ಆಡಿನ ಹಾಲು, ಹಣ್ಣು ನೆಲಗಡಲೆ. ''

ಮೇಲಿನದು ಹತ್ತು ವರ್ಷಕ್ಕಿಂತ ಚಿಕ್ಕ ಹುಡುಗಿಯ ಪ್ರಬಂಧ.

ಈ ಮುಂದಲದು ಒಬ್ಬ ಹುಡುಗನ ಲೇಖನ. ಅವನ ವಯಸ್ಸು ಸಹ ಹತ್ತು.

"ಗಾಂಧಿಯವರು ಭಾರತೀಯರು. 1890 ರಲ್ಲಿ ಅವರು ಲಂಡನ್ ನಲ್ಲಿ ಬಂದು ಲಾ (ಕಾನೂನ) ಅಭ್ಯಾಸಮಾಡಿದರು. ಆದರೆ ತನ್ನವರ ಸ್ಥಿತಿಯನ್ನು ಉತ್ತಮಗೊಳಿಸಲು ಕಾನೂನ ಅಭ್ಯಾಸ ಬಿಟ್ಟೇ ಬಿಟ್ಟರು.

"ಅವರು ಭಾರತಕ್ಕೆ ವ್ಯಾಪಾರ ಸೌಕರ್ಯ ಹೆಚ್ಚಿಸಿಕೊಳ್ಳಲು ಈ ರೌಂಡ್‌ಟೇಬಲ್ ಸಮ್ಮೇಳನಕ್ಕೆ ಬಂದಿದ್ದಾರೆ ಹರಿಜನರನ್ನು ದೇವಾಲಕ್ಕೆ ಪ್ರವೇಶಿಸಲು ಅವರು ಪ್ರಯತ್ನಿಸುತ್ತಿದ್ದಾರೆ. ಅವರ ಸಂಖ್ಯೆ 60 ಲಕ್ಷ. ಅವರಿಗೆ ಹೊಟ್ಟೆ ತುಂಬ ಊಟವಿಲ್ಲ. ಗಾಂಧಿ ತಮ್ಮಲ್ಲಿರುವುದನ್ನೆಲ್ಲಾ ತ್ಯಾಗಮಾಡಿವ್ದಾರೆ. ಬಡವರೊಂದಿಗೆ ಒಂದಾಗಿದ್ದಾರೆ. ಆದುದರಿಂದ ಇವರು ಕೌಪೀನ ಧರಿಸುವುದು.

"ಆಡಿನ ಹಾಲು ಹಣ್ಣು ತರಕಾರಿ ಇದೇ ಅವರ ಆಹಾರ ಅವರು ಮೀನನ್ನೂ ಮಾಂಸವನ್ನೂ ತಿನ್ನುವುದಿಲ್ಲ. ಪ್ರಾಣಿ ಹಿಂಸೆ ಅವರಿಗೆ ಇಷ್ಟವಿಲ್ಲ, ಅವರು ಭಾರತದ ಕ್ರಿಸ್ತರು.

"ಗಾಂಧಿಯವರು ತಮ್ಮ ನೂಲನ್ನು ತಾವೇ ನೂಲುತ್ತಾರೆ. ಇಲ್ಲಿ ಇಂಗ್ಲೆಂಡಿನಲ್ಲಿಯೂ ನಿತ್ಯಾ ಒಂದು ಗಂಟೆ ನೂಲುತ್ತಾರೆ. ಆಸ್ಪತ್ರೆಯಲ್ಲಿ ರೋಗಿಯಾಗಿದ್ದಾಗಲೂ ನೂಲುತ್ತಿದ್ದರು. ಈಗ ಅವರು ಲಾಂಕಶೈರಿನ ಹತ್ತಿ ಗಿರಣಿಗಳನ್ನು ನೋಡಿಕೊಂಡು ಇಲ್ಲಿ ಬಂದಿದ್ದಾರೆ.

"ಪ್ರತಿ ಭಾನುವಾರ ರಾತ್ರಿಯಿಂದ ಸೋಮವಾರ ರಾತ್ರಿಯ ವರೆಗೆ ಅವರು ಪ್ರಾರ್ಥನೆ ಮಾಡುತ್ತಾರೆ. ಆಗ ಮಾತನಾಡಿಸಿದರೆ ಮಾತನಾಡುವುದಿಲ್ಲ. ಅವರು ನಮ್ಮ ಮನೆಗೆ ಬಂದಾಗ ನಮ್ಮ ತಾಯಿ ಇಸ್ತ್ರಿ ಮಾಡುತ್ತಿದ್ದರು. ಗಾಂಧಿ ತಾಯಿಗೆ "ನಿಮ್ಮ ಕೆಲಸ ನೀವು ಮಾಡಿ, ನಾನೂ ಇಸ್ತ್ರಿ ಮಾಡಿದ್ದೇನೆ" ಎಂದರು. ನಾನು ಗಾಂಧಿಯವರ ಕೈ ಕುಲುಕಿದ್ದೇನೆ (Shake Hand) ಹಲ್ಲೊ, ಗುಡ್‌ನೈಟ್ ಎನ್ನುವುದಕ್ಕೆ ಭಾರತದ ಮಾತು ನಮಸ್ಕಾರ ಎಂದು."

ಹುಡುಗರ ಬಗೆ ಅಕೃತ್ರಿಮ. ಅವರು ಇರುವುದನ್ನು ಇರುವಂತೆ

ನೋಡುತ್ತಾರೆ ಎಂದು ಹೇಳುತ್ತಾ ದೇಸಾಯಿಯವರು " ಈ ಸಂಗತಿ ಗಳು ಎಷ್ಟು ಸತ್ಯ ವಾಸ್ತವಿಕ ಮತ್ತು ಅಮೂಲ್ಯವಾದುವು ! ಪತ್ರಿಕಾ ಕರ್ತರು ಬಿಡುವ ಬುರುಡೆಗಳಿಗಿಂತ ಎಷ್ಟು ನಿಜವಾದುವು ! ಅವರ ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ಸರಿಯಾದ ಜ್ಞಾನಬೋಧನೆ ಯನ್ನೇ ಮಾಡಿದ್ದಾರೆ ಗಾಂಧಿಯವರ ಅನುಭವದಿಂದ ವಿದ್ಯಾರ್ಥಿಗಳು ಸರಿಯಾದ ಪರಿಚಯು ಮಾಡಿಕೊಂಡಿದ್ದಾರೆ.

## ಸತಿ ಮಾಂಟಸೋರಿ ಸಂಸ್ಥೆಗೆ ಭೇಟಿ

ಗಾಂಧಿಯವರು ಸತಿ ಮಾಂಟಸೋರಿಯವರ ಸಂಸ್ಥೆಯನ್ನು ನೋಡಲು ಹೋದುದಕ್ಕೆ ಕಾರಣ ಮಕ್ಕಳಲ್ಲಿ ಅವರಿಗೆ ಇರುವ ಪ್ರೇಮವೇ. ಆಕೆ ಗಾಂಧಿಯವರಿಗೆ " ನಾನು ಮಕ್ಕಳ ಸಂದೇಶವನ್ನು ನಿಮಗೆ ತಂದಿದ್ದೇನೆ.'' ಎಂದರು. ಗಾಂಧಿಯವರು " ನನಗೂ ಮಕ್ಕಳು ಇದ್ದಾರೆ. ಭಾರತದಲ್ಲಿ ಮಿತ್ರರು ನಿಮ್ಮನ್ನು ಅನುಕರಿಸ ಬೇಕೆಂದು ನನಗೆ ಹೇಳುತ್ತಿದ್ದಾರೆ ಆದರೆ ನಾನು " ಬೇಡ. ಯಾರನ್ನೂ ಅನುಕರಿಸಬಾರದು ನಿಮ್ಮ ಮಾರ್ಗವನ್ನೂ ನಿಮ್ಮ ಮಾರ್ಗದಲ್ಲಿಯು ಸತ್ಯವನ್ನೂ ನಮ್ಮ ಜೀವನಕ್ಕೆ ಹೊಂದಿಸಿಕೊಳ್ಳ ಬೇಕೆಂದು '' ಹೇಳುತ್ತಿದ್ದೇನೆ. ಎಂದರು. ಸತೀ ಮಾಂಟಸೋರಿ ಯವರು ಮೃದುವಾದ ಇಟಾಲಿಯನ್ ಭಾಷೆಯಲ್ಲಿ ನಾನು ನನ್ನ ಮಕ್ಕಳಿಗೆ "ಗಾಂಧಿಯವರ ಹೃದಯವನ್ನು ನಿಮ್ಮಲ್ಲಿ ಹೊಂದಿಸಿಕೊಳ್ಳಿ" ಎಂದು ಹೇಳುತ್ತಿದ್ದೇನೆ ಎಂದರು " ನಿಮ್ಮ ದೇಶದವರಿಗೆ, ಇಲ್ಲಿ ಯವರಿಗಿಂತ ನನ್ನಲ್ಲಿ ಪ್ರೇಮ ಹೆಚ್ಚಾಗಿದೆ. ಇದು ನನಗೆ ಗೊತ್ತು ಎಂದರು. "ಗಾಂಧಿಯವರು ಯೂರೋಪನ್ನು ಬಿಟ್ಟರೆ, ಭಾರತದಲ್ಲಿ ನಿಮ್ಮ ಅನುಯಾಯಿಗಳ ಸಂಖೆ ಅತ್ಯಧಿಕ" ಎಂದರು.

ಮಾಂಟಸೋರಿ, ಗಾಂಧಿಯವರನ್ನು ನೋಡಿದುದು ಒಂದು ಆತ್ಮ ಮತ್ತೊಂದು ಆತ್ಮವನ್ನು ನೋಡಿದಂತೆ. ಗಾಂಧಿಯವರ ದರ್ಶನ ದಿಂದ ಮಾಂಟಸೋರಿಯವರ ಮನಸ್ಸಿನಮೇಲೆ ಬಹಳ ಪರಿಣಾಮ ವುಂಟಾಯಿತು. ಆಕೆ ಹೀಗೆ ಹೇಳಿದಳು "ನನಗೆ ಗಾಂಧಿ ಮನುಷ್ಯನಾಗಿ

ಕಾಣುವುದಿಲ್ಲ. ಒಂದು ಆತ್ಮವಾಗಿ ಕಾಣುತ್ತಾನೆ. ಅನೇಕ ವರುಷ ಗಳಿಂದ ನಾನು ಗಾಂಧಿಯವರನ್ನು ಕುರಿತು ಯೋಚಿಸಿದ್ದೇನೆ. ನನ್ನ ಆತ್ಮ ಅವರನ್ನು ಅನುಸರಿಸಿದೆ. ಅವರ ಮೃದುತ್ವ ಕರುಣೆ ಇವುಗಳನ್ನು ನೋಡಿದರೆ ಪ್ರಪಂಚದಲ್ಲಿ ಕಾಠಿಣ್ಯವೇ ಇಲ್ಲವೋ ಎಂಬಂತೆ ತೋರು ತ್ತದೆ. ಅವರು ಯಾವ ತಂಗು ತಡೆಯೂ ಇಲ್ಲದೆ ಪೂರ್ಣವಾಗಿ ನೇರವಾಗಿ ಸೂರ್ಯಕಿರಣದಂತೆ ತಮ್ಮನ್ನು ತ್ಯಾಗಮಾಡಿಕೊಂಡಿದ್ದಾರೆ. ಇವರ ಈ ಪವಿತ್ರಮೂರ್ತಿಯಿಂದ ನಾನು ತಯಾರಿಸುತ್ತಿರುವ ಶಿಕ್ಷಕರಿಗೆ ಬಹಳ ಸಹಾಯವಾಗಬಹುದೆಂದು ನನಗೆ ತೋರಿತು. ಗುರುವು ತೆರೆದ ಮನಸ್ಸುಳ್ಳವನಾಗಿರಬೇಕು. ಉದಾರಿಯಾಗಿರಬೇಕು. ಮನುಷ್ಯ ಜೀವನದ ಸರಳವಾದ ಓಟವನ್ನು ಅಡ್ಡಗಟ್ಟುವ, ಎಡರುಗಳಿಂದ ಕೂಡಿದ ವಯಸ್ಕರ ಕಠಿಣವಾದ ಜಗತ್ತಿನಿಂದ ಹೊರಕ್ಕೆ ಬರಬೇಕು. ತನ್ನ ಆತ್ಮವನ್ನು ಬದಲಾಯಿಸಬೇಕು. ನಮ್ಮ ಶಿಕ್ಷಕರಿಗೆ ಗಾಂಧಿ ಯವರೊಡನೆ ಉಂಟಾಗುವ ಈ ಮಿಳನದಿಂದ, ಮನುಷ್ಯ ಜಗತ್ತಿನಲ್ಲಿ ಮಗುವಿಗೆ ದೊರೆಯಬೇಕಾದ ಸ್ಥಾನ ದೊರಕಲಿ.''

ಮಾಂಟಸೋರಿ ಶಾಲೆಯಲ್ಲಿ ಗಾಂಧಿಯವರಿಗೆ ಕೂರಲು ಗಾದಿ ಗಳನ್ನೂ ದಿಂಬುಗಳನ್ನೂ ಏರ್ಪಡಿಸಿದ್ದರು. ಬಡವರ ಮಕ್ಕಳೇ ಆದರೂ, ಮಕ್ಕಳೆಲ್ಲಾ ಶುದ್ಧರಾಗಿ ಗೆಲುವಾಗಿ ಬಂದು ಕುಳಿತಿದ್ದರು. ಅವರೆಲ್ಲ ಗಾಂಧಿಯವರನ್ನು ಭಾರತೀಯರಂತೆ ನಮಸ್ಕಾರ್ ಎಂದು ಆದರಿಸಿದರು. ಮಕ್ಕಳು ಗಾಂಧಿಯವರ ಮುಂದೆ ತಮ್ಮ ವಿದ್ಯೆಗಳನ್ನು ತೋರಿಸಿದರು. ತಾಳಲಯ ಗತಿಗಳಿಗೆ ಅನುಸಾರವಾದ ಚಲನಗಳು ಏಕಾಗ್ರತೆ ಇಚ್ಛಾಶಕ್ತಿಗಳ ಉದಾಹರಣೆಗಳು, ವಾದ್ಯಗಳಲ್ಲಿ ಸಂಗೀತ. ಕೊನೆಯದಾದರೂ ಕಡಮೆ ಇಲ್ಲದ ಮೌನವ್ಯಾಯಾಮ. ಇವೆಲ್ಲ ನೆರೆದಿದ್ದವರ ಮೇಲೆ ಬಹಳ ಪರಿಣಾಮವುಂಟುಮಾಡಿದುವು. ಮಕ್ಕಳು ದೇವರ ಪ್ರತಿರೂಪು. ದೇವರಂತೆ ಇರುವವರೇ ಮಕ್ಕಳು. ಮಕ್ಕ ಳಿಂದ ಸುತ್ತವರೆದಿದ್ದ ಸತೀ ಮಾಂಟಸೋರಿಯನ್ನು ನೋಡಿದರೆ ಜಗತ್ತು ಮಕ್ಕಳಿಗಾಗಿಯೇ ಬಿಡುವಾಗಿದೆಯೋ ಎಂಬಂತೆ ತೋರು ತ್ತಿದ್ದಿತು. ಶಿಕ್ಷಣದಲ್ಲಿ ಮಾಂಟಸೋರಿಯವರು ಪೂರ್ಣವಾಗಿ ಜಯ

ಶೀಲರಾಗದಿದ್ದರೂ, ಮಗು ಪೂಜಾರ್ಹ ಎಂಬುದನ್ನು ಜಗತ್ತಿಗೂ ಪೋಷಕರಿಗೂ ಮತ್ತು ಶಿಕ್ಷಕರಿಗೂ ತಿಳಿಸಿದುದಕ್ಕಾಗಿಯಾದರೂ ಆಕೆಯ ಹೆಸರು ಶಾಶ್ವತವಾಗಿ ನಿಲ್ಲುತ್ತದೆ ಇಂಪಾದ ಮನೋಹರ ವಾದ ಇಟಾಲಿಯನ್ ಭಾಷೆಯಲ್ಲಿ ಆಕೆ ಗಾಂಧಿಯವರನ್ನು ಕುರಿತು ಒಂದು ಸ್ವಾಗತ ಭಾಷಣ ಮಾಡಿದಳು. ಅವರ ಕಾರ್ಯದರ್ಶಿ ಅದನ್ನು ಅನುವಾದಿಸಿದರು. ಅನುವಾದ ಕೂಡ ಮೊದಲಿನಿಂದ ಕೊನೆಯವರೆಗೆ ರೋಮಾಂಚವನ್ನುಂಟುಮಾಡುತ್ತದೆ.

## ಮಾಂಟಿಸೋರಿಯವರ ಭಾಷಣ

" ನನ್ನ ಶಿಕ್ಷಣಕ್ರಮವನ್ನು ಕಲಿಯುವ ನನ್ನ ವಿದ್ಯಾರ್ಥಿಗಳೇ, ಸ್ನೇಹಿತರೇ; ನಾನು ನಿಮಗೆ ಒಂದು ಮಹತ್ತಾದ ಸಂಗತಿಯನ್ನು ಹೇಳುತ್ತೇನೆ. ಅದೇ ಗಾಂಧಿಯವರ ಆತ್ಮ. ಆ ಮಹತ್ತಾದ ಆತ್ಮ ಗಾಂಧಿಯವರ ದೇಹದಲ್ಲಿ ಅಡಕವಾಗಿ ಇಲ್ಲಿ ನಮ್ಮ ನಡುವೆ ಇದೆ. ನಮ್ಮ ಪುಣ್ಯದಿಂದ ನಮ್ಮ ಕಿವಿಗೆ ಈಗ ಇನ್ನೇನು ಬೀಳುವ ಧ್ವನಿ ಜಗತ್ತಿನಲ್ಲೆಲ್ಲಾ ಕೇಳುತ್ತಿರುವ ಧ್ವನಿ. ಗಾಂಧಿ ಪ್ರೇಮದಿಂದ ಮಾತ ನಾಡುತ್ತಾರೆ. ಅವರ ಮಾತಿನಲ್ಲಿ ಅವರ ಧ್ವನಿ ಮಾತ್ರವೇ ಅಲ್ಲ ಅವರ ಪೂರ್ಣವಾದ ಬಾಳೇ ಪ್ರತಿಬಿಂಬಿತವಾಗಿದೆ. ಇದು ಆಶ್ಚರ್ಯ ಅದ್ಭುತ. ಇಂತಹುದು ನಡೆಯುವಾಗ ಜಗತ್ತೇ ಕಿವಿಗೊಡುತ್ತದೆ.

" ಪೂಜನೀಯ ಗುರುವೇ ನಿಮಗೆ ಸ್ವಾಗತ ಬಯಸುವ ಪುಣ್ಯ ವನ್ನು ಹೊಂದಿದ ಈ ವಾಣಿ ಲಾಟಿನ್ ಜನಾಂಗದ ವಾಣಿ. ಈ ವಾಣಿ ಪಶ್ಚಿಮದೇಶದ ನಾಗರೀಕತೆ ಬುದ್ಧಿ ವೇದಾಂಗಳ ಕೇಂದ್ರವಾದ ರೋಮ್‌ನ ವಾಣಿ. ಪಶ್ಚಿಮದೇಶದ ಬಾಳು ಬುದ್ಧಿಗಳು ಸಜೀವವಾಗಿ ಆಕಾರ ತಾಳಿ ಪೂರ್ವದೇಶವನ್ನು ಗೌರವಿಸಬೇಕೆಂಬುದು ನನ್ನ ಬಯಕೆ. ಇಗೋ ನನ್ನ ಶಿಷ್ಯರು. ಇಲ್ಲಿ ನೆರೆದಿರುವವರು ಬರಿಯ ನನ್ನ ವಿದ್ಯಾರ್ಥಿ ಗಳು ಮಾತ್ರವೇ ಅಲ್ಲ. ಅವರ ಸ್ನೇಹಿತರೂ ಸ್ನೇಹಿತರ ಗೆಳೆಯರೂ ಇಲ್ಲಿದ್ದಾರೆ. ಆದರೆ ನನ್ನ ಶಿಷ್ಯರ ಪೈಕಿ ಅನೇಕ ಜನಾಂಗದವರಿದ್ದಾರೆ. ಉದಾರಿಗಳಾದ ಇಂಗ್ಲಿಷ್ ಗುರುಗಳಿದ್ದಾರೆ. ಭಾರತದ ಅನೇಕ

ವಿದ್ಯಾರ್ಥಿಗಳಿದ್ದಾರೆ. ಇಟಲಿ ಹಾಲೆಂಡ್ ಜರ್ಮನಿ ಡೆನ್ಮಾರ್ಕ್ ಸ್ವೀಡನ್ ಜೆಕೊಸ್ಲೊವೇಕಿಯ ಆಸ್ಟ್ರೇಲಿಯ ಹಂಗೇರಿ ಅಮೆರಿಕ ಆಸ್ಟ್ರಿಯ ನ್ಯೂಜಿಲೆಂಡ್ ದಕ್ಷಿಣ ಆಫ್ರಿಕ ಕನಡ ಐರ್ಲೆಂಡ್, ಇಲ್ಲಿಯವರೆಲ್ಲಾ ನನ್ನ ವಿದ್ಯಾರ್ಥಿಗಳ ಪೈಕಿ ಇದ್ದಾರೆ. ಇವರೆಲ್ಲಾ ಮಗುವಿನಲ್ಲಿ ತಮಗಿರುರ ಪ್ರೇಮದಿಂದ ಇಲ್ಲಿ ಬಂದಿದ್ದಾರೆ.

"ಗುರುವೇ, ಜಗತ್ತಿನ ನಾಗರೀಕತೆ ಮತ್ತು ಮಗುವಿನ ಹಿತ ಇವೆರಡೇ ಈ ಎಲ್ಲರನ್ನೂ ಇಲ್ಲಿ ಬಂಧಿಸಿ ನಿಮ್ಮೆದುರಿಗೆ ತಂದಿದೆ. ನಾವು ಮಗುವಿಗೆ ಧರ್ಮಜೀವನವನ್ನು ನಡೆಸಲು ಕಲಿಸುತ್ತೇವೆ ಜಗತ್ತಿನ ಶಾಂತಿ ಅದರ ಮೇಲೆಯೇ ಅವಲಂಬಿಸಿದೆ ಆದುದರಿಂದಲೇ ಜೀವನ ಕಲೆಯಲ್ಲಿ ನುರಿತ ಗುರುವಿನ ಸಂದೇಶವನ್ನು ಕೇಳಲು ಶಿಷ್ಯರು ಇಲ್ಲಿ ನೆರೆದಿದ್ದಾರೆ. ವಿದ್ಯಾರ್ಥಿಗಳಿಗೂ, ಅವರ ಮಿತ್ರರಿಗೂ ನಮಗೂ ಈದಿನ ಎಂದೆಂದಿಗೂ ಮರೆಯದ ಸುವರ್ಣದಿನ. ನಿಮ್ಮ ಬರುವಿಕೆಗಾಗಿ ಸಿದ್ಧರಾಗಿ ನಿಮ್ಮನ್ನು ಎದುರುಗೊಳ್ಳಲು ಕೆಲಸಮಾಡಿರುವ ಈ ೨೪ ಇಂಗ್ಲಿಷ್ ಮಕ್ಕಳು, ಮುಂದೆ ಮಕ್ಕಳು ಹೇಗಿರಬೇಕೆಂಬುದರ ಗುರುತು. ನಿಮ್ಮ ಸಂದೇಶವನ್ನು ನಾವು ಕಾಯುತ್ತಿದ್ದೇವೆ."

ಈ ಭಾಷಣದಿಂದ ಗಾಂಧಿಯವರ ಹೃದಯದ ತಂತಿಗಳೆಲ್ಲಾ ಮಿಡಿದವು. ಆ ಮಹತ್ತಾದ ಸಂದರ್ಭಕ್ಕೆ ಅನುಸಾರವಾದ ಗಾನ ಆ ಹೃದಯದಿಂದ ಹೊರಟಿತು. ಜಗತ್ತಿನ ಎಲ್ಲ ಮಕ್ಕಳಿಗೂ ಪೋಷಕರಿಗೂ ಅದೇ ಸಂದೇಶ-ಸನ್ನದು-ಆಯಿತು.

## ಪೋಷಕರ ಜವಾಬ್ದಾರಿ

"ಸತೀಮಣಿ. ನಿಮ್ಮ ಮಾತು ನನ್ನನ್ನು ಪೂರ್ಣವಾಗಿ ಭಾವಪರವಶ ಮಾಡಿದೆ. ನೀವು ಹೇಳುವ ಮಾತನ್ನು ಅತ್ಯಂತ ವಿನಯದಿಂದಲಾದರೂ ನಾನು ಒಪ್ಪಲೇ ಬೇಕು. ನನ್ನ ರಕ್ತದ ಪ್ರತಿಯೊಂದು ಕಣದಲ್ಲಿಯೂ ಪ್ರೇಮವನ್ನು ವ್ಯಕ್ತಮಾಡಬೇಕೆಂಬುದೇ ನನ್ನ ಪ್ರಯತ್ನ ಅದು ನಿಜ. ಭಗವಂತನನ್ನು ಎದುರಿಗೆ ಸಂಧಿಸಬೇಕೆಂಬುದು ನನ್ನ ತೀವ್ರವಾದ ಆಸೆ. ನನ್ನ ಮಟ್ಟಿಗೆ ಸತ್ಯವೇ ಭಗವಂತ. ನನ್ನ ಜೀವನದ ಪ್ರಾರಂಭಕಾಲದಲ್ಲಿಯೇ ನನಗೆ ಒಂದು ತತ್ವ ಮುಂದಟ್ಟಾಯಿತು.

ಸತ್ಯವನ್ನು ಅನುಸರಿಸುವವನು ಪ್ರಾಣಹೋದರೂ ಪ್ರೇಮದ ಮಾರ್ಗದಲ್ಲಿ ನಡೆಯಬೇಕು. ದೇವರು ನನಗೆ ಮಕ್ಕಳನ್ನು ಕಳುಹಿಸಿದ. ಪ್ರೇಮದ ಮಾರ್ಗ ಮಕ್ಕಳ ಮೂಲಕ ನಮಗೆ ಸುಲಭವಾಗಿ ತಿಳಿಯುತ್ತದೆ ಎಂಬುದನ್ನು ನಾನು ಅರಿತೆ. ಮಕ್ಕಳ ಪೋಷಕರಾದ ನಾವು ಶುದ್ಧ ದಡ್ಡರು. ಇಲ್ಲದಿದ್ದರೆ ನಮ್ಮ ಮಕ್ಕಳು ಪೂರ್ಣವಾಗಿ ಅಕೃತ್ರಿಮವಾಗಿ ಶುದ್ಧರಾಗಿರುತ್ತಿದ್ದರು. ಕೆಟ್ಟ ಚೇಷ್ಟೆಗಳನ್ನು ಮಾಡುವುದು ಹುಟ್ಟುಗುಣವಲ್ಲ. ಮಗುವು ಬೆಳೆಯುತ್ತಿರುವಾಗ, ಜನಿಸುವುದಕ್ಕೆ ಮುಂಚೆ ಮತ್ತು ಜನಿಸಿದ ಮೇಲೆ, ಪೋಷಕರು ಸರಿಯಾದ ಮಾರ್ಗದಲ್ಲಿ ನಡೆದರೆ ಮಗುವು ಸತ್ಯದ ಧರ್ಮವನ್ನೂ ಪ್ರೇಮದ ಧರ್ಮವನ್ನೂ ಸ್ವಾಭಾವಿಕವಾಗಿ ಅನುಸರಿಸುವುದೆಂಬುದು ಗೊತ್ತಿರುವ ವಿಷಯ. ನನ್ನ ಜೀವನದ ಪ್ರಾರಂಭದೆಸೆಯಲ್ಲಿ ಇದು ನನಗೆ ತಿಳಿದ ಕೂಡಲೇ ನಾನು ನನ್ನ ಬಾಳಿನ ದಾರಿಯನ್ನು ನಿಧಾನವಾಗಿ ಆದರೆ ಸ್ಪಷ್ಟವಾಗಿ ಬದಲಾಯಿಸಿದೆ."

"ಬಿರುಗಾಳಿಯಂತಹ ನನ್ನ ಜೀವನ ಹೇಗೆ ಹೇಗೆ ನಡೆದುಬಂದಿದೆ ಎಂಬುದನ್ನು ಈಗ ಹೇಳುವುದು ನನ್ನ ಉದ್ದೇಶವಲ್ಲ. ಆದರೆ ಸತ್ಯದಿಂದಲೂ ವಿನಯದಿಂದಲೂ ಹೇಳುತ್ತೇನೆ. ನಾನು ಎಷ್ಟರಮಟ್ಟಿಗೆ ಪ್ರೇಮದ ಮಾರ್ಗವನ್ನು ಅನುಸರಿಸಿದೆನೋ ಅಷ್ಟರಮಟ್ಟಿಗೆ ನನಗೆ ಮನೋವಾಕ್ಕಾಯ ಕರ್ಮಗಳಲ್ಲಿ ಶಾಂತಿ ದೊರೆತಿದೆ. ಅನುಭವೈಕ ಮಾತ್ರ ವೇದ್ಯವಾದ ಶಾಂತಿ ದೊರೆತಿದೆ. ನಾನು ಸ್ನೇಹಿತರಿಗೆ ಒಂದು ಸಮಸ್ಯೆಯಾಗಿದ್ದೇನೆ. ನನ್ನ ಶಾಂತಿಯನ್ನು ನೋಡಿ ಅವರಿಗೆ ಹೊಟ್ಟೆ ಕಿಚ್ಚು ಉಂಟಾಗಿದೆ. ನನ್ನ ಈ ಅಮೌಲ್ಯವಾದ ಆಸ್ತಿಯ ಕಾರಣವನ್ನು ಅವರು ಕೇಳಿದ್ದಾರೆ. ಕಾರಣವನ್ನು ಹೇಳಲು ನನಗೆ ತಿಳಿದಿಲ್ಲ. ನಾನು ಇಷ್ಟೇ ಹೇಳಿದೆ. "ನನ್ನ ಶಾಂತಿಗೆ ಕಾರಣ, ನಾನು ನಮ್ಮ ಬಾಳಿನ ಧರ್ಮವಾದ ಪ್ರೇಮದ ಧರ್ಮವನ್ನು ಅನುಸರಿಸಲು ಪ್ರಯತ್ನಿಸುವುದೇ"

"ನಾನು ಆಫ್ರಿಕದಿಂದ 1915ರಲ್ಲಿ ಭಾರತಕ್ಕೆ ಬಂದನಂತರ ನಿಮ್ಮ ಕೆಲಸದ ಪರಿಚಯವಾಯಿತು. ಅಮರೇಲಿ ಎಂಬ ಹಳ್ಳಿಯಲ್ಲಿ ಮಾಂಟಸೋರಿ ಪದ್ಧತಿಯಲ್ಲಿ ಒಂದು ಶಾಲೆಯನ್ನು ನಡೆಸುತ್ತಿದ್ದರು.

ಆದಕ್ಕಿಂತ ಮುಂಚೆಯೇ ನಿಮ್ಮ ಹೆಸರು ಪ್ರಸಿದ್ಧವಾಗಿದ್ದಿತು. ಆ ಶಾಲೆಯಲ್ಲಿ ನಿಮ್ಮ ಶಿಕ್ಷಣದ ಆತ್ಮ ಇರಲಿಲ್ಲವೆಂಬುದು ನನಗೆ ಬೇಗ ಗೊತ್ತಾಯಿತು. ಹೆಸರೇನೋ ಇದ್ದಿತು. ಪ್ರಾಮಾಣಿಕತೆಯಿಂದ ಕೆಲಸವನ್ನೇನೋ ಮಾಡುತ್ತಿದ್ದರು. ಆದರೆ ಹೊರ ನೋಟದ ಆಡಂಬರ ಹೆಚ್ಚಾಗಿದ್ದಿತು.

## ಪ್ರಕೃತಿಯೇ ಉಪಾಧ್ಯಾಯ

"ಇನ್ನು ಹೆಚ್ಚು ಹೆಚ್ಚಾಗಿ ಆ ಬಗೆಯ ಶಾಲೆಗಳ ಪರಿಚಯ ನನಗೆ ಉಂಟಾಯಿತು ತಳಹದಿ ಚೆನ್ನಾಗಿದೆ. ಮಗುವಿಗೆ ಶಿಕ್ಷಣ ಕೊಡಬೇಕಾದರೆ ಪ್ರಕೃತಿಯ ನಿಯಗಳ ಮೂಲಕವೇ, ಮನುಷ್ಯನ ಘನತೆ ಗಾಂಭೀರ್ಯಗಳಿಗೆ ಅನುಸಾರವಾದ ನಿಯಮಗಳಿಂದಲೇ ಹೊರತು ಪಶುಗಳಿಗೆ ಅನ್ವಯಿಸುವ ನಿಯಮಗಳಲ್ಲ–ಶಿಕ್ಷಣ ಕೊಡಬೇಕೆಂದು ನಾನು ಅರಿತೆ. ಮಕ್ಕಳ ಶಿಕ್ಷಣ ಅಲಕ್ಷ್ಯದಿಂದಲೇ ನಡೆದಿದ್ದರೂ, ಈ ಶಿಕ್ಷಣ ಪ್ರೇರಕರ ಮೂಲ ಮಂತ್ರ ಈ ಮನುಷ್ಯತ್ವಕ್ಕೆ, ಪ್ರಕೃತಿನಿಯಮಕ್ಕೆ ಅನುಸಾರವಾಗಿದೆಯೆಂದು ನನಗೆ ತಿಳಿಯಿತು. ಅಲ್ಲಿಂದ ಈಚೆಗೆ ನನ್ನ ನಿಮ್ಮ ಅನೇಕ ಶಿಷ್ಯರ ಪರಿಚಯವಾಯಿತು. ಒಬ್ಬರು ಇಟಲಿಗೆ ಬಂದು ನಿಮ್ಮ ಆಶೀರ್ವಾದವನ್ನು ನೇರವಾಗಿ ಹೊಂದಿ, ಹಿಂದಿರುಗಿದರು. ಈ ಮಕ್ಕಳನ್ನೂ ನಿಮ್ಮನ್ನೂ ಯಾವಾಗ ನೋಡುತ್ತೇನೆಯೋ ಎಂದು ನಿರೀಕ್ಷಿಸುತ್ತಲೇ ಇದ್ದೆ. ಈ ಮಕ್ಕಳನ್ನು ನೋಡುವುದು ನನಗೆ ಆನಂದ.

## ಮೌನ ಸುಗುಣ

ಈ ಮಕ್ಕಳ ವಿಷಯ ನಾನು ತಿಳಿದುಕೊಂಡೆ. ಬರ್ಕಿಂಗ್ ಹ್ಯಾಮನಲ್ಲಿ ಸ್ವಲ್ಪ ಮುಂಚೆಯೇ ಇದೇ ಬಗೆಯ ಒಂದು ಶಾಲೆಯನ್ನು ನೋಡಿದೆ. ಅಲ್ಲಿಯೂ ಮನುಷ್ಯತ್ವ, ಪ್ರಕಟನೆಗಾಗಿ ಹಾತೊರೆಯುತ್ತಿದ್ದಿತು. ಇಲ್ಲಿಯೂ ಅದೇಯೆ. ಒಂದು ವಿಷಯ ನನಗೆ ಬಹು ಸಂತೋಷವನ್ನುಂಟುಮಾಡಿತು. ಮಕ್ಕಳಿಗೆಲ್ಲಾ ಮೌನವನ್ನು ಅಭ್ಯಾಸಮಾಡಿದ್ದಾರೆ. ಮೌನವೆಂಬ ಸುಗುಣದ ಬೆಲೆ ತಿಳಿದಿದ್ದಾರೆ. ಉಪಾಧ್ಯಾಯರ ಸೂಚನೆಯನ್ನು ಅನುಸರಿಸಿ ಹುಡುಗರು ಒಬ್ಬರಾದ

ಮೇಲೆ ಒಬ್ಬರು ಸೂಜಿಬಿದ್ದರೂ ಕೇಳಿಸುವಷ್ಟು ನಿಶ್ಯಬ್ದವಾಗಿ ಮುಂದೆ ಬಂದುದನ್ನು ನೋಡಿದುದೇ ನನಗೆ ಒಂದು ಆನಂದ. ಆ ಮಕ್ಕಳ ತಾಳ ಲಯಬದ್ಧವಾದ ಸುಂದರವಾದ ಚಲನಗಳನ್ನು ನೋಡುವುದರಲ್ಲಿ ನನಗೆ ಬಹು ಆನಂದವಾಯಿತು. ನನ್ನ ಹೃದಯ ಪೂರ್ಣವಾಗಿ ಆ ಹುಡುಗರೆಡೆಗೆ ಹೋಯಿತು. ಅದರ ಜತೆಯಲ್ಲಿಯೇ ಭಾರತದಲ್ಲಿ ಅರ್ಧ ಹೊಟ್ಟೆಗೆ ಊಟಮಾಡುತ್ತಿರುವ ಹಳ್ಳಿಗಳ ಮಕ್ಕಳಿಗೆ ಈ ಶಿಕ್ಷಣ ವನ್ನು ಕೊಡಲು ಸಾಧ್ಯವೇ ಎಂದು ಕೊರಗಿದೆ. ನಾವು ನಡೆಸುತ್ತಿ ರುವ ಪ್ರಯೋಗ ಭಾರತದ ಅತ್ಯಂತ ಬಡ ಹುಡುಗರ ನಡುವೆ. ಈ ಪ್ರಯೋಗ ಎಷ್ಟು ದೂರ ಜಯಶಾಲಿಯಾಗುವುದೋ ಕಾಣೆ. ಭಾರತದ ಕುಗ್ರಾಮದ ಮಕ್ಕಳಿಗೆ ನಿಜವಾದ ಸಚೇತನವಾದ ವಿದ್ಯೆಯನ್ನು ಕಲಿಸಬೇಕಾಗಿದೆ. ಆದರೆ ನಮಗೆ ಹಣದ ಅನುಕೂಲ ಇಲ್ಲ.

## ಮಗು, ಉಪಾಧ್ಯಾಯ

" ನಾವು ಉಪಾಧ್ಯಾಯ ಸ್ವಯಂಸೇವಕರ ಮೇಲೆ ಅವಲಂಬಿಸ ಬೇಕಾಗಿದೆ ಅಂತಹ ಉಪಾಧ್ಯಾಯರುಗಳ ಸಂಖ್ಯೆ ಅತ್ಯಲ್ಪ. ವಿದ್ಯಾರ್ಥಿಗಳ ಸ್ವಭಾವಗಳನ್ನು ಅರಿತು ಅವರಲ್ಲಿರುವ ಅತ್ಯುತ್ತಮ ವಾದುದನ್ನು ಹೊರಕ್ಕೆ ಎಳೆಯುವ, ಪ್ರತಿಯೊಬ್ಬ ವಿದ್ಯಾರ್ಥಿಯ ಸ್ವಭಾವವನ್ನೂ ತಿಳಿಯುವ, ಉಪಾಧ್ಯಾಯರು ಬೇಕು. ಇಷ್ಟು ಮಾಡಿ ವಿದ್ಯಾರ್ಥಿಯನ್ನು ಅವನ ಸತ್ವದ ಮೇಲೆ–ಸತ್ಯದ ಮೇಲೆಯೋ ಎಂಬಂತೆ–ಬಿಡಬೇಕು. ನನ್ನ ಮಾತನ್ನು ನಂಬಿ ನೂರಾರು ಮಕ್ಕಳ ಅನುಭವದಿಂದ–ಸಾವಿರಾರು ಎಂದು ಹೇಳಬೇಕೆಂದಿದ್ದೆ–ಸತ್ಯ ನೀತಿ ಯಲ್ಲಿ ಮಕ್ಕಳಿಗೆ ನಮಗಿಂತ ಹೆಚ್ಚು ಸೂಕ್ಷ್ಮ ಬುದ್ಧಿ. ಜೀವನದಲ್ಲಿ ಅತ್ಯಂತ ಮಹತ್ತಾದ ಪಾಠಗಳನ್ನು–ಏನೂ ಅರಿಯದ ಮಕ್ಕಳಿಂದ ಕಲಿಯುತ್ತೇವೆಯೇ ಹೊರತು—ಹಿರಿಯರಿಂದ ಅಲ್ಲ. ಆದರೆ ನಾವು ಮಕ್ಕಳ ಮಟ್ಟಕ್ಕೆ ಇಳಿಯಬೇಕು. ಏಸುವು ಮಕ್ಕಳ ಬಾಯಿನಿಂದ ಜ್ಞಾನ ಹೊರಬೀಳುವುದೆಂದು ಹೇಳಿದರು. ಇದರಷ್ಟು ಸತ್ಯ ಮತ್ತಾ ವುದೂ ಇಲ್ಲ. ನಾನು ಅದನ್ನು ನಂಬುತ್ತೇನೆ ಕಪಟವಿಲ್ಲದೆ ವಿನಯ ದಿಂದ ವರ್ತಿಸಿದರೆ ಮಕ್ಕಳಿಂದ ನಮಗೆ ಜ್ಞಾನಲಾಭವಾಗುವುದೆಂದು

ನನ್ನ ಅನುಭವ. ಭಾರತದ ಮಕ್ಕಳಲ್ಲಿ ಗುಪ್ತವಾಗಿರುವ ಸತ್ಯವನ್ನು ಹೊರಕ್ಕೆ ಎಳೆಯುವುದು ಹೇಗೆ? ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಮಥನವಾಗುತ್ತಿದೆ. ಆದರೆ ಈ ಒಂದು ಪಾಠ ನಾನು ಕಲಿತಿದ್ದೇನೆ. ಮನುಷ್ಯನಿಗೆ ಯಾವುದು ಅಸಾಧ್ಯವೋ ಅದು ದೇವರಿಗೆ ಮಕ್ಕಳಾಟ. ದೇವರಲ್ಲಿ ನಂಬಿಕೆ ಇದ್ದರೆ, ಆತ ತನ್ನ ಅತ್ಯಂತ ಅಲ್ಪವಾದ ಸೃಷ್ಟಿಯನ್ನೂ ಅಲಕ್ಷ್ಯಮಾಡುವುದಿಲ್ಲವೆಂಬ ನಂಬಿಕೆಯಿದ್ದರೆ, ಎಲ್ಲವೂ ಸಾಧ್ಯ. ಆ ಕೊನೆಯ ನಚ್ಚಿನಲ್ಲಿಯೇ ನಾನು ಬದುಕಿದ್ದೇನೆ. ಈ ನಚ್ಚಿನಲ್ಲಿಯೇ ನನ್ನ ಕಾಲವನ್ನು ಕಳೆಯುತ್ತಿದ್ದೇನೆ. ನೀವು ಹೇಗೆ ನಿಮ್ಮ ಮಾರ್ಗಗಳಿಂದ, ಕ್ರಮಗಳಿಂದ, ಈ ಮಕ್ಕಳಿಗೆ ಶಿಕ್ಷಣ ಕೊಟ್ಟು ಅವರಲ್ಲಿರುವ ಅತ್ಯುತ್ತಮವಾದ ಶಕ್ತಿಯನ್ನು ಹೊರಕ್ಕೆ ಎಳೆಯುತ್ತಿದ್ದೀರೋ, ಹಾಗೆಯೇ ಧನಿಕರಲ್ಲದವರ ಮಕ್ಕಳಿಗೂ ದರಿದ್ರರ ಮಕ್ಕಳಿಗೂ ಈ ಶಿಕ್ಷಣ ಒದಗಬೇಕೆಂದು ನಾನು ಆಸೆಪಡುತ್ತೇನೆ. ನೀವು ಹೇಳಿರುವುದು ನಿಜ. ನಮ್ಮ ಈ ಜಗತ್ತಿನಲ್ಲಿ ಶಾಂತಿ ಇರಬೇಕಾದರೆ, ಯುದ್ಧಕ್ಕೆ ಎದುರಾಗಿ ನಾವು ಹೋರಾಡಬೇಕಾದರೆ, ನಾವು ಮಕ್ಕಳಿಂದ ಪ್ರಾರಂಭಿಸಬೇಕು. ಮಕ್ಕಳು ತಮ್ಮ ಅಕೃತ್ರಿಮವಾದ ಹುಟ್ಟುಗುಣದಲ್ಲಿ ಬೆಳೆಯುವರಾದರೆ ನಾವು ಮುಂದೆ ಹೋರಾಡ ಬೇಕಾದುದಿಲ್ಲ. ಕಾರ್ಯಕಾರಿಯಾಗದ ಠರಾವುಗಳನ್ನು ಮಾಡಬೇಕಾಗುವುದಿಲ್ಲ. ಪ್ರೇಮದಿಂದ ಪ್ರೇಮಕ್ಕೆ ಹೋಗುತ್ತೇವೆ. ಶಾಂತಿಯಿಂದ ಶಾಂತಿಗೆ ಹೋಗುತ್ತೇವೆ. ಜಗತ್ತು ಮನಸಿಟ್ಟೋ ಇಡದೆಯೋ ಬಯಸುತ್ತಿರುವ ಈ ಶಾಂತಿ ದೊರೆಯುವವರೆಗೆ ಪ್ರಯತ್ನಿಸುತ್ತೇವೆ."

ಇತರ ದೇಶದ ಮಕ್ಕಳ ವೈಭವವನ್ನೂ, ನಮ್ಮ ದೇಶದ ದಾರಿದ್ರ್ಯ ಅಜ್ಞಾನ ಚಿಂದಿಯನ್ನೂ ನೋಡಿ ನಮ್ಮ ಮಕ್ಕಳೂ ಇತರ ದೇಶದ ಮಕ್ಕಳಂತೆ ಹೃಷ್ಟಪುಷ್ಟರಾಗಿ ವಿದ್ಯಾವಂತರಾಗುವುದು ಎಂದು ? ಎಂದು ಗಾಂಧಿ ಕೊರಗುತ್ತಿದ್ದರು. ಸರ್ಕಾರವನ್ನೇ ನೆಚ್ಚಿಕೊಂಡು ಕುಳಿತರೆ ಜೀವನದ ಬೆಳಕಾದ ವಿದ್ಯೆಯನ್ನು ಮಕ್ಕಳು ಎಂದಿಗೂ ಕಲಿಯುವುದೇ ಸಾಧ್ಯವಲ್ಲವೆಂದು ಅವರಿಗೆ ಸ್ಪಷ್ಟವಾಯಿತು. ಗಾಂಧಿಯವರು ನಯಿ ತಾಲಿಮ್ ಶಿಕ್ಷಣಪದ್ಧತಿಯನ್ನು ಕಂಡು ಹಿಡಿದುದೂ ಮಕ್ಕಳ ಮೇಲಿನ ಪ್ರೀತಿಯಿಂದಲೇ.

# ೧೪ ಗಾಂಧಿಯವರ ನವಖಲಿಯಾತ್ರೆ

**ಕಾರ್ನೋಡ**

1946 ನೇ ಇಸವಿ ಜುಲೈ 29 ರಲ್ಲಿ ಮುಸ್ಲಿಂಲೀಗ್ ವರ್ಕಿಂಗ್ ಸಮಿತಿ ಪಾಕಿಸ್ತಾನದ ಚಳುವಳಿಯನ್ನು ಬಲಪಡಿಸುವ ಸಲುವಾಗಿ ಪ್ರತ್ಯಕ್ಷ ಕಾರ್ಯಕ್ರಮವನ್ನು ಆಗಸ್ಟ್ 16 ರಂದು ತೆಗೆದುಕೊಳ್ಳ ಬೇಕೆಂದು ತೀರ್ಮಾನಿಸಿತು. ಮುಸ್ಲಿಂಲೀಗ್, ಕಾಂಗ್ರೆಸ್‌ನಂತೆ ಅಹಿಂಸೆಯ ಅನುಯಾಯಿಯಲ್ಲವಾದುದರಿಂದ ಕೋಪಿಷ್ಟರಾದ ಅವಿದ್ಯಾವಂತರಾದ ಅಜ್ಞಾನಿ ಮುಸಲ್ಮಾನರು ಅಂದು ಯಾವ ಕಾರ್ಯಕ್ರಮವನ್ನು ಕೈಕೊಳ್ಳಬಹುದೆಂಬುದು ಯಾರಿಗೂ ತಿಳಿದಿರಲಿಲ್ಲ ಆದರೂ ಕಲ್ಕತ್ತದಲ್ಲಿ ನಡೆದ ಅಮಾನುಷ ಕೃತ್ಯಗಳನ್ನು ಯಾರೂ ನಿರೀಕ್ಷಿಸಿರಲಿಲ್ಲ. ಬಂಗಾಳದ ಅಂದಿನ ಲೀಗ್ ಸರ್ಕಾರವು ಆಗೆಸ್ಟ್ 16 ನ್ನು ರಜದಿನವಾಗಿ ಬೇರೆ ಪ್ರಕಟಿಸಿತು. ಯಾವುದೋ ಒಂದು ಪಂಗಡದ ಸರ್ಕಾರವು ಆ ಪಂಗಡದವರ ಕಾರ್ಯಕ್ರಮಕ್ಕಾಗಿ ದೇಶಕ್ಕೆಲ್ಲ ರಜ ಕೊಟ್ಟರೆ ಆ ಪಂಗಡದವರು ತಮ್ಮ ಎಲ್ಲಾ ಕಾರ್ಯಗಳನ್ನೂ ಸರ್ಕಾರ ಒಪ್ಪುವುದೆಂದು ಅರಿಯುತ್ತಾರೆ. ಇದರ ಜತೆಗೆ ಬಂಗಾಳದ ಮುಖ್ಯ ಮಂತ್ರಿ, "ಪಾಕಿಸ್ತಾನ ದೊರೆಯದಿದ್ದರೆ ಬಂಗಾಳವು ಕೇಂದ್ರದಿಂದ ಬೇರೆಯಾಗಿ ಸ್ವತಂತ್ರವಾಗುವುದೆಂದು" ಘೋಷಿಸಿದರು. ಇವೆಲ್ಲವುಗಳ ಪರಿಣಾಮವಾಗಿ ಲೀಗ್‌ನವರೂ, ಲೀಗ್‌ನ ಅನುಯಾಯಿಗಳೂ ಇತರ ಅಶಿಕ್ಷಿತ ಗುಂಡಾಗಳೂ ಆಗಸ್ಟ್ 16 ರಿಂದ ಕಲ್ಕತ್ತೆಯಲ್ಲಿ ನಿರಾಯುಧರಾದ ಹಿಂದುಗಳ ಮೇಲೆ ದಂಗೆ ಎದ್ದರು. ಬೀದಿ ಬೀದಿಗಳಲ್ಲಿ ರಕ್ತ ಪ್ರವಾಹವೂ ಹೆಣಗಳ ರಾಶಿಯೂ ಬಿದ್ದಿದ್ದುವು. ಮುಸಲ್ಮಾನರು ಏರ್ಪಡಿಸಿಕೊಂಡಿದ್ದ "ಡೈರೆಕ್ಟ್ ಆಕ್ಷನ್" ಇದೇಯೆ- ಅವರು ಮೊದಲೇ ಸಿದ್ಧರಾಗಿ ಸರಿಯಾದ ಆಯುಧಗಳಿಂದ ಸಜ್ಜಿತರಾಗಿದ್ದುದರಿಂದಲೂ ಹಿಂದುಗಳನ್ನು ಏನುಮಾಡಿದರೂ ಲೀಗ್ ಸರ್ಕಾರ ಸುಮ್ಮನಿರುವುದೆಂಬ ನಂಬಿಕೆ ಅವರಿಗೆ ಇದ್ದುದರಿಂದಲೂ ಮುಸಲ್ಮಾನ ಗುಂಡಾಗಳ

ಕ್ರೌರ್ಯವು ಅವಿಶ್ರಾಂತವಾಗಿ ಸಾಗಿತು. ಕಲ್ಕತ್ತೆಯಲ್ಲಿ 5000 ಜನರ ಕೊಲೆಯೂ 15000 ಜನರಿಗೆ ಗಾಯವೂ ಆದುದಲ್ಲದೆ ಕೊನೆಯ ಪಕ್ಷ 10 ಸಾವಿರ ಮನೆಗಳ ಲೂಟಿ ಆಯಿತು.

## ಹತ್ಯಾಂಕಾಂಡದ ಪ್ರಮಾಣ

ದೇಶ ಈ ಕ್ರೌರ್ಯದ ಕಥೆಯಿಂದ ಇನ್ನೂ ತಲ್ಲಣಿಸುತ್ತಿರುವಾಗಲೇ ನವಖಲಿ ಜಿಲ್ಲೆಯ ಆರು ಥಾನಗಳಲ್ಲಿ ಜಾತೀಯ ಗಲಭೆ ಕ್ರೂರವಾದ ರೂಪದಲ್ಲಿ ವಿಕಟನರ್ತನ ಮಾಡುತ್ತಿರುವ ಸುದ್ದಿ ಅಕ್ಟೋಬರ್ ಹದಿನೈದರಲ್ಲಿ ಸರ್ಕಾರದವರಿಂದಲೇ ಪ್ರಕಟವಾಯಿತು. ದೌರ್ಜನ್ಯ ಕೃತ್ಯಗಳು ವಾಸ್ತವವಾಗಿ ಹತ್ತನೆ ತಾರೀಖಿಗೆ ಪ್ರಾರಂಭವಾಗಿದ್ದವು ಆದರೆ ಸಂಚಾರ ಸೌಕರ್ಯಗಳನ್ನೂ ವಾರ್ತಾ ಸೌಕರ್ಯಗಳನ್ನೂ ಹಿಂಸೆ ಕಾರರು ತಪ್ಪಿಸಿದ್ದುದರಿಂದಲೂ, ಸರ್ಕಾರದ ಆಡಳಿತ ಯಂತ್ರ ಸಡಲಿ ಬಿದ್ದುದರಿಂದಲೂ, 4 ದಿನ ಹತ್ಯಾಕಾಂಡದ ಪ್ರದೇಶದಿಂದ ಯಾವ ಸಮಾಚಾರವೂ ಬರಲಿಲ್ಲ. ಸೈನ್ಯ ನವಖಲಿಯ ಸಮೀಪವನ್ನು ಸೇರಲು ಇನ್ನೂ ಹತ್ತುದಿನಗಳು ಬೇಕಾದುವು. ಹಿಂಸಾಕೃತ್ಯಗಳು ನಡೆದ ಸ್ಥಳಕ್ಕೆ ಹೋಗಲು ಇನ್ನೂ ಹತ್ತುದಿನವೂ ಜಿಲ್ಲೆಯಲ್ಲಿ ತಿರುಗಿ ನೆಪಮಾತ್ರದ ಶಾಂತಿಯನ್ನು ಸ್ಥಾಪಿಸಲು ಇನ್ನೂ ಒಂದು ತಿಂಗಳೂ ಬೇಕಾಯಿತು. ಡಾಕ್ಟರ್ ಶಾಮಪ್ರಸಾದ ಮುಖರ್ಜಿ ನವಖಲಿಯ ಅತ್ಯಾಚಾರವನ್ನು ಕುರಿತು ಹೀಗೆ ಹೇಳಿದರು " ಈ ಹಿಂಸಾಕೃತ್ಯಗಳ ಗುರಿ ಜನತೆಯನ್ನು ಲೂಟಿ ಕೊಲೆ ಅವಮಾನ ಅತ್ಯಾಚಾರಗಳ ಮೂಲಕ ಮುಸಲ್ಮಾನ ಮತಕ್ಕೆ ಬದಲಾಯಿಸುವುದೇ ಆಗಿದೆ ಇತಿಹಾಸದಲ್ಲಿ ಮತ್ತೆಲ್ಲಿಯೂ ಇಂತಹ ದೌರ್ಜನ್ಯ ನಡೆದಿಲ್ಲ ಹತ್ಯಾಕಾರರು ಯಾರನ್ನೂ ಉಳಿಸಲಿಲ್ಲ. ಧನಿಕರನ್ನು ಇನ್ನೂ ಹೆಚ್ಚು ಕ್ರೂರವಾಗಿ ನಡೆಸಿಕೊಂಡರು. ಕೊಲೆಯೂ ಈ ಕಾರ್ಯಕ್ರಮದ ಒಂದು ಅಂಗವಾಗಿತ್ತು. ಆದರೆ ತುಂಬ ಪ್ರಭಾವಶಾಲಿಗಳನ್ನು ಅಥವ ಪ್ರತಿಭಟಿಸಿದವರನ್ನು ಮಾತ್ರ ಕೊಲ್ಲುತ್ತಿದ್ದರು. ಸ್ತ್ರೀಯರ ಅಪಹರಣ ಬಲಾತ್ಕಾರವಿವಾಹ, ಮಾನಭಂಗ, ಇವೂ ಕಾರ್ಯಕ್ರಮದ ಅಂಗಗಳೇ ಆದವು. ಆದರೆ ಅವುಗಳ ಸಂಖೆ ಸರಿಯಾಗಿ ತಿಳಿಯದು. ಘೋಷಣೆ

ಗಳು ಪಾಕಿಸ್ತಾನ ಸ್ಥಾಪನೆಯ ಘೋಷಣೆಗಳಾಗಿದ್ದವು. ಪಾಕಿಸ್ತಾನಕ್ಕೆ ಚಂದಾವಸೂಲಿ ಮಾಡುತ್ತಿದ್ದ ಕ್ರಮಗಳಿಂದ ಈ ಅತ್ಯಾಚಾರಿಗಳಿಗೆ ಮುಸ್ಲಿಂ ಲೀಗ್ ಸ್ಫೂರ್ತಿಯಾಗಿದ್ದಿತೆಂದು ಗೊತ್ತಾಗುತ್ತದೆ. ಈ ಕೊಲೆಗಳು ನಡೆಯಬಹುದೆಂದು ಸ್ಥಳದ ಅಧಿಕಾರಿಗಳಿಗೆ ಮೊದಲೇ ಸೂಚನೆ ಗೊತ್ತಾದರೂ ಅವರು ಯಾವ ರಕ್ಷಣೆಯ ಕಾರ್ಯಕ್ರಮವನ್ನೂ ಕೈಗೊಳ್ಳಲಿಲ್ಲ. ಸುಮಾರು 75 ಸಾವಿರ ಜನ ತಮ್ಮ ಮನೆಗಳನ್ನು ಬಿಟ್ಟು ಓಡಿಹೋಗಿದ್ದಾರೆ. ಇನ್ನೂ 50 ಸಾವಿರ ಜನ ಅಲ್ಲೇ ಇದ್ದಾರೆ. ಅವರ ಸರ್ವನಾಶವಾಗಿದೆ. ಸಮಸ್ತವೂ ಲೂಟಿಯಾಗಿದೆ. ಅವರು ಹಿಂದುಮತದ ನಾನಾಪಂಗಡಗಳಿಗೆ ಸೇರಿದವರು. ಹತ್ಯಾಕಾರಿಗಳು ಹರಿಜನರಿಗೂ ಯಾವ ರಿಯಾಯ್ತಿಯನ್ನೂ ತೋರಿಸಿಲ್ಲ. ಅವರಿಗೆ ಆಗಿರುವ ಹಿಂಸೆ ಅವಮಾನ, ಅವರ್ಣನೀಯ. ಅವರ ಹೆಸರನ್ನು ಬದಲಾಯಿಸಿದ್ದಾರೆ. ಸ್ತ್ರೀಯರನ್ನು ಅವಮಾನಪಡಿಸಿದ್ದಾರೆ. ಆಸ್ತಿಗಳನ್ನು ಲೂಟಿಮಾಡಿದ್ದಾರೆ. ಅವರು ಮುಸಲ್ಮಾನರಂತೆ ವಸ್ತ್ರಧರಿಸಿ ಊಟ ತಿಂಡಿ ಅವರಂತೆ ಮಾಡಬೇಕಾಗಿದೆ. ಗಂಡಸರು ಮಸೀದಿಗೆ ಹೋಗಬೇಕಾಗಿದೆ. ಮೌಲ್ವಿಗಳು ಮನೆಗಳಿಗೆ ಹೋಗಿ ಅವರನ್ನು ತಯಾರುಮಾಡುತ್ತಾರೆ. ಅವರ ಆಹಾರ ಅವರ ಪ್ರಾಣ ಎರಡೂ ಪೋಕರಿ ಮುಸಲ್ಮಾನರ ಕೈಲಿ ಸಿಕ್ಕಿಕೊಂಡಿವೆ. ಹಿಂದು ಸಮಾಜಕ್ಕೂ ಅವರಿಗೂ ಸಂಬಂಧವಿಲ್ಲದಂತೆ ಅವರನ್ನು ಸರಸರನೆ ಬದಲಾಯಿಸ ಲಾಗುತ್ತಿದೆ. ಅವರ ಬೆನ್ನಮೂಳೆಯನ್ನು ಮುರಿದಿದ್ದಾರೆ. ಅವರ ಶರಣಾಗತಿ ಪೂರ್ಣವಾಗಿದೆ. ಅವರಿಗೆ ಬಾಯಲ್ಲಿ ಕೂಡ ಪ್ರತಿಭಟಿಸುವ ಶಕ್ತಿ ಇಲ್ಲ. ಹಿಂದುಗಳು ಅವರ ಮನೆಗೆ ಬಂದರೆ ಅವರೊಂದಿಗೆ ಮಾತನಾಡುವುದಕ್ಕೆ ಸಹ ಅವರಿಗೆ ಧೈರ್ಯವಿಲ್ಲ. ಹಿಂದೆ ಹಿಂದುಗಳಾಗಿದ್ದು ಇಂದು ಬಲಾತ್ಕಾರದಿಂದ ಮುಸಲ್ಮಾನರಾಗಿರುವವರ ಪಟ್ಟಿಯಲ್ಲಿ ಅವರ ಎರಡು ಹೆಸರನ್ನೂ ಕೊಟ್ಟು, ಇನ್ನುಮೇಲೆ ಹಿಂದುಗಳು ಹೀಗೆಯೇ ಮುಸಲ್ಮಾನರಂತೆಯೇ ಇರಬೇಕೆಂದು ಹಸ್ತಪತ್ರಿಕೆಗಳನ್ನು ಹಂಚಿದ್ದಾರೆ. ಅವರ ಹೆಸರಿನಲ್ಲಿ, ತಾವಾಗಿಯೇ ಒಪ್ಪಿ ಮತಾಂತರ ಹೊಂದಿರುವರೆಂದು ಸರ್ಕಾರಕ್ಕೆ ಅರ್ಜಿಗಳನ್ನು ಹಾಕಿಸುತ್ತಿದ್ದಾರೆ.

ಅವರು ಮನೆಬಿಟ್ಟು ಹೊರಗೆ ಹೋಗುವಂತೆ ಇಲ್ಲ. ಸ್ಥಳದ ಮುಸಲ್ಮಾನರು, ಇವರು ಮುಸಲ್ಮಾನ ಧರ್ಮಕ್ಕೆ ಹೊಸದಾಗಿ ಸೇರಿದವರು ಎಂದು ಪರವಾನಗಿ ಚೀಟಿಕೊಟ್ಟಿದ್ದರೆ ಹೊರಡಬಹುದು".

ವೀರತ ಕಾಂಗ್ರೆಸ್ ಅಧ್ಯಕ್ಷ ಆಚಾರ್ಯ ಕೃಪಲಾನಿಯವರು ತಮ್ಮ ಪತ್ನಿ ಶ್ರೀಮತಿ ಸುಚೇತಾರವರೊಂದಿಗೆ ನವಖಲಿ ಜಿಲ್ಲೆಯ ಪ್ರವಾಸ ಮಾಡಿದರು. ಅವರು ಕಂಡದ್ದು ಹೃದಯ ಭೇದಕಚಿತ್ರ. ಅವರು ಹೀಗೆ ವರ್ಣಿಸಿದ್ದಾರೆ " ಚಾರ್ಠಿಮ್ ಎಂಬುದು ಅನೇಕ ಸಾವಿರ ನಾಮಶೂದ್ರರ ಹಳ್ಳಿ. ಅದು ಪೂರ್ಣವಾಗಿ ನಾಶವಾಗಿತ್ತು. ಅನೇಕ ಮನೆಗಳು ಸುಟ್ಟಿದ್ದವು. ಬೆಂದು ಉಳಿದ ಪದಾರ್ಥಗಳಿಂದ ಕಟ್ಟಿದ ಗುಡಿಸಲುಗಳಲ್ಲಿ ಜನ ವಾಸಿಸುತ್ತಿದ್ದರು. ಅವರ ಆಸ್ತಿ, ಹಣ ಒಡವೆ ಪಾತ್ರೆ ಬಟ್ಟೆ ದನಗಳು ಎಲ್ಲವನ್ನೂ ಲೂಟಿಕಾರರು ಅಪಹರಿಸಿಕೊಂಡು ಹೋಗಿದ್ದರು. ಸ್ತ್ರೀ ಪುರುಷರಿಗೆ ಉಳಿದಿದ್ದದ್ದು ಅವರ ಮೈಮೇಲಿದ್ದ ಬಟ್ಟೆಗಳೇ. ಅವರಿಗೆ ಆಹಾರವಿರಲಿಲ್ಲ. ಅನೇಕ ಕೊಲೆಗಳು ನಡೆದಿದ್ದವು. ಸ್ತ್ರೀಯರ ಅಪಹರಣವೂ ನಡೆದಿದೆ. ಲೂಟಿ ಆದಮೇಲೂ ಹಳ್ಳಿಯವರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಿಸುತ್ತಿದ್ದರು. ಹಿಂದುಗಳನ್ನು ಬಲಾತ್ಕಾರದಿಂದ ನಮಾಜ್ ಮಾಡಿಸಿ ಅವರ ಬಾಯಿಂದ ಕಲ್ಮ ಉಚ್ಚರಿಸುತ್ತಿದ್ದವು. ಕೆಲವರಿಗೆ ಬಿಳಿಟೋಪಿ ಮತ್ತು ಉದ್ದವಾದ ಲುಂಗಿ ಕೊಡುತ್ತಿದ್ದರು. ವಿಗ್ರಹಗಳನ್ನೂ ದೇವಸ್ಥಾನಗಳನ್ನೂ ಒಡೆದಿದ್ದರು. ಹಿಂದು ಸ್ತ್ರೀಯರ ಬಳೆಗಳನ್ನು ಒಡೆದು ಸಿಂಧೂರವನ್ನು ಅಳಿಸಿದ್ದರು. ನವಖಲಿಯ ಚೌಧುರಿ ಸಂಸಾರದಲ್ಲಿ 8 ಜನ ಗಂಡಸರನ್ನು ಕೊಲೆಮಾಡಿದ್ದರು. ಆ ಸಂಸಾರದಲ್ಲಿ 5 ಮಂದಿ ವಿಧವೆಯರಾದರು. ಇದು ಮೊದಲೆ ಸಿದ್ಧಮಾಡಿಕೊಂಡ ಯುದ್ಧ. ಇದು ಮುಸ್ಲಿಂ ಲೀಗ್ ಚಳುವಳಿಯ ಫಲ. ಅಧಿಕಾರಿಗಳಿಗೆ ಸಂಗತಿಗಳು ಮೊದಲೇ ಗೊತ್ತಿದ್ದರೂ ಅವರು ಏನನ್ನೂ ಮಾಡಲಿಲ್ಲ. ಕೆಲವು ಕಡೆ ಮುಸ್ಲಿಂ ಅಧಿಕಾರಿಗಳ ಸಹಾನುಭೂತಿಯೂ ಇತ್ತು. ಮುಸಲ್ಮಾನರು ಸಾಧಾರಣವಾಗಿ ಆಯುಧ ಸಹಿತವಾಗಿ ಸಾವಿರ ಹತ್ತುಸಾವಿರದ ಸಂಖ್ಯೆಯಲ್ಲಿ ಹಿಂದುಗಳ ಹಳ್ಳಿಗಳಿಗೆ ನುಗ್ಗಿ, ಮೊದಲು ಮುಸ್ಲಿಂ ಲೀಗಿಗಾಗಿಯೂ

ಕಲ್ಕತ್ತದ ಮುಸ್ಲಿಂ ನಿರಾಶ್ರಿತರಿಗಾಗಿಯೂ ಚಂದಾ ಹಣವನ್ನು ಕೇಳು ತ್ತಿದ್ದರು. ಕೆಲವು ವೇಳೆ 10 ಸಾವಿರ ರೂಪಾಯಿವರೆಗೆ ವಸೂಲ್ಮಾಡಿ ದ್ದಾರೆ. ಹೀಗೆ ಹಣವನ್ನು ಕೊಟ್ಟಮೇಲೂ ಅವರನ್ನು ಬಿಡುತ್ತಿರಲಿಲ್ಲ. ಮತ್ತೊಂದುಗುಂಪು ಮತ್ತೆ ಬರುತ್ತಿದ್ದಿತು. ಅನಂತರ ಮನೆಗಳನ್ನು ಲೂಟಿಮಾಡಿ ಸುಡುತ್ತಿದ್ದರು. ಮನೆಗಳನ್ನು ಸುಡುವುದಕ್ಕೆ ಮುಂಚೆ ಬಲಾತ್ಕಾರದಿಂದ ಮತಾಂತರಿಸುತ್ತಿದ್ದರು. ಮತವನ್ನು ಬದಲಾಯಿಸಿ ದರೂ ಸುಡುವುದೂ ಲೂಟಿಯೂ ತಪ್ಪುತ್ತಿರಲಿಲ್ಲ. ಅನೇಕವೇಳೆ ಹಿಂದು ಗಳು ಸ್ವಲ್ಪವೂ ಪ್ರತಿಭಟಿಸದಿದ್ದರೂ ಅವರನ್ನು ಕೊಲ್ಲುತ್ತಿದ್ದರು. ಲೂಟಿ ಕಾರರ ಬಳಿ ಬಂದೂಕಗಳೂ ಇದ್ದವು. ಕೆಲವರನ್ನು ಗುಂಡು ಹೊಡೆದೂ ಕೊಂದಿದ್ದಾರೆ. ಆ ಬಂದೂಕಗಳು ಮುಸ್ಲಿಂ ಜಮೀನ್ ದಾರರ ಬಂದೂಕಗಳು; ಹಿಂದೂಗಳಿಂದ ಕದ್ದ ಬಂದೂಕಗಳೂ ಇದ್ದವು. ಕೆಲವು ಸಂಸಾರದಲ್ಲಿ 50 ಜನರನ್ನೂ, ಕೆಲವರ ಸಂಸಾರದಲ್ಲಿ ಇಪ್ಪತ್ತು ಜನರನ್ನೂ ಕೊಂದಿದ್ದಾರೆ. ಲೂಟಿ ಕಾರ್ಯದಲ್ಲಿ ಹೊರಗಿ ನಿಂದ ಬಂದವರೊಂದಿಗೆ ಸ್ಥಳದ ಮುಸಲ್ಮಾನರೂ ಸೇರುತ್ತಿದ್ದರು. ಆದರೆ ಸ್ಥಳದವರೇ ಹೆಚ್ಚು. ಹಿಂದುಗಳು ಬಲಾತ್ಕಾರವಾಗಿ ನಮಾಜನ್ನು ಮಾಡಬೇಕಾಗಿತ್ತು. ಕಲ್ಮ ಉಚ್ಚರಿಸಿ ಶುಕ್ರವಾರದ ನಮಾಜಿಗೆ ಹೋಗಬೇಕಾಗಿತ್ತು. ಎಲ್ಲ ಹಿಂದು ದೇವರುಗಳನ್ನೂ ದೇವಸ್ಥಾನಗಳನ್ನೂ ಸುಟ್ಟುಹಾಕಿದ್ದಾರೆ. ಬಲಾತ್ಕಾರದ ವಿವಾಹ ಗಳೂ ಆಗಿವೆ ಸ್ತ್ರೀಯರ ಕೊಲೆ ಕ್ರೌರ್ಯ ನಡೆದಿದೆ. ದುರಾಚಾರಿಗಳು ಒಬ್ಬ ಸ್ತ್ರೀಯನ್ನು ನೆಲದಮೇಲೆ ಕೆಡವಿ ಅವಳ ಹಣೆಯ ಕುಂಕಮ ವನ್ನು ತಮ್ಮ ಕಾಲಿನಿಂದ ಅಳಿಸಿದರು. ಹಳ್ಳಿಗಳಿಗೆ ಹೊರಗಿನವರಾರೂ ಹೋಗುವಂತಿಲ್ಲ. ಮುಸ್ಲಿಂ ಲೀಗ್‌ನವರು ಕಾಯುತ್ತಿದ್ದಾರೆ. ಅನೇಕ ಸಂಸಾರಗಳಲ್ಲಿ ತಂದೆ ತಾಯಿ ಮಕ್ಕಳು ಒಬ್ಬರೊಬ್ಬರಿಗೆ ಭೇಟಿಇಲ್ಲ. ಯಾರು ಯಾರು ಎಲ್ಲೆಲ್ಲಿದ್ದಾರೆಯೋ ತಿಳಿಯದು. ನವಖಲಿ ಮತ್ತು ಚಕಿದಪುರದಲ್ಲಿ 19-20ನೇ ತಾರೀಖುಗಳಲ್ಲಿ ಸಹ ಬೆಂಕಿ ಉರಿಯು ತ್ತಿದ್ದಿತು (ಇವು ಪ್ರಾರಂಭವಾದುದು 10ರಲ್ಲಿ) ಹಿಂದುಗಳ ಸಮಸ್ತವೂ ನಾಶವಾಗಿದೆ. ಅವರು ಪೂರ್ಣ ನಿರ್ಗತಿಕರಾಗಿದ್ದಾರೆ. ಇದು ಆರ್ಥಿಕ ಪ್ರಶ್ನೆಯಲ್ಲ. ಇದು ಮತಾಂಧರ ಹುಚ್ಚು ಕುಣಿತ"

## ಆತ್ಮರಕ್ಷಣೆ ಪ್ರಥಮಧರ್ಮ

ಕಾಂಗ್ರೆಸ್ ವರ್ಕಿಂಗ್ ಕಮಿಟಿ ಸಹ ಅತ್ಯಾಚಾರಗಳನ್ನು ಪ್ರತಿಭಟಿಸಿ ಪ್ರಾಂತ್ಯ ಮಂತ್ರಿಗಳ ತಲೆಗೆ ಜವಾಬ್ದಾರಿಯನ್ನು ಕಟ್ಟಿ ಹಿಂದುಗಳಿಗೆ ಧೈರ್ಯವನ್ನು ಬೋಧಿಸಿತು. ಅಧ್ಯಕ್ಷ ಕ್ರಿಪ್ಲಾನಿಯವರು ಹೀಗೆ ಹೇಳಿಕೆ ಕೊಟ್ಟರು. "ಸರ್ಕಾರವು ಏನು ಮಾಡಲಿ ಏನು ಬಿಡಲಿ ಬಂಗಾಳದ ಗ್ರತಿಯೊಬ್ಬ ಹಿಂದುವೂ ತನಗೆ ತಾನೇ ರಕ್ಷಕನಾಗಬೇಕು. ಸ್ತ್ರೀ ಪುರುಷರು ತಮಗೆ ತೋರಿದ ರೀತಿಯಲ್ಲಿ ಆತ್ಮ ರಕ್ಷಣೆ ಮಾಡಿಕೊಳ್ಳಬೇಕು. ಈ ಸಂದರ್ಭದಲ್ಲಿ ಎರಡುದಿನ ಪುಂಡರನ್ನು ಎದುರಿಸಿ ಹೋರಾಟದಲ್ಲಿಯೇ ಸತ್ತ ಶ್ರೀರಾಜೇಂದ್ರಲಾಲ್ ರಾಯ್ ಯವರ ಉದಾಹರಣೆ ಎಲ್ಲ ಬಂಗಾಳಿಗಳ ಮುಂದೆಯೂ ಇರಲಿ. ಅಹಿಂಸೆಯಲ್ಲಿ ಪೂರ್ಣನಂಬಿಕೆ ನನಗೆ ಇದ್ದರೂ ರಾಜೇಂದ್ರಲಾಲ್‌ರ ಪ್ರತಿಭಟನೆ ಅಹಿಂಸೆಯ ಹತ್ತಿರದ್ದೆಂದು ನಾನು ಹೇಳುತ್ತೇನೆ. ಈ ಸಮಾಜದ ನೀಚ ಶತ್ರುಗಳಿಗೆ ಎದುರಾಗಿ ಹೋರಾಡುತ್ತಾ ಬಿದ್ದವರನ್ನೆಲ್ಲ ನಾನು ಗೌರವಿಸುತ್ತೇನೆ.''

ಪೂರ್ವ ಬಂಗಾಳದ ಈ ಕರುಣಾಜನಕ ಕಥೆ ಮಹಾತ್ಮ ಗಾಂಧಿಯವರನ್ನು ಜರ್ಝರಿತ ಮಾಡಿತು. ಭಾರತದಲ್ಲಿ ಇಂತಹ ಕ್ರೌರ್ಯ ಹಿಂದೆಂದೂ ನಡೆದಿರಲಿಲ್ಲ ಈ ಕೃತ್ಯದಿಂದ ಭಾರತ ಸಂಸ್ಕೃತಿ ನಾಶವಾಗುವುದಲ್ಲದೆ ಇಸ್ಲಾಂ ಸಂಸ್ಕೃತಿ ಸಹ ಪೂರ್ಣವಾಗಿ ನಾಶವಾಗುವುದೆಂದು ಗಾಂಧಿ ಭಾವಿಸಿದರು. ಹಿಂದೂ ಮುಸಲ್ಮಾನರ ಈ ಆತ್ಮಘಾತಕ ಹಿಂಸಾಕೃತ್ಯಕ್ಕೆ ಹೋಲಿಸಿಕೊಂಡರೆ ಬ್ರಿಟಿಷರೊಂದಿಗೆ ಹೋರಾಡಿದುದು ಬಹಳ ಸುಲಭವಾಗಿಯೇ ಗಾಂಧಿಯವರಿಗೆ ತೋರಿತು. "ಹಿಂದು ಮುಸಲ್ಮಾನರ ಪ್ರಶ್ನೆಯನ್ನು ಹೇಗೆ ಬಿಡಿಸಬೇಕೆಂಬುದು ಇಂದು ನನಗೆ ಗೊತ್ತಿಲ್ಲ. ಇಂದು ನನ್ನ ಧ್ವನಿ ಅರಣ್ಯರೋದನವಾಗಿದೆ. ಆದರೆ ಈ ಪ್ರಶ್ನೆಯನ್ನು ಬಿಡಿಸುವುದು ನನ್ನ ಮಾರ್ಗದಿಂದ ಮಾತ್ರ ಸಾಧ್ಯ. ಕೆಲವು ಮುಸಲ್ಮಾನರು ದುರಾಚಾರಿಗಳಾದರೆ ಪಿಶಾಚಿಗಳಾದರೆ, ಎಲ್ಲ ಮುಸಲ್ಮಾನರನ್ನೂ ಆ ಪಂಕ್ತಿಗೇ ಸೇರಿಸಬೇಕೆಂಬುದನ್ನು ನಾನು ಒಪ್ಪುವುದಿಲ್ಲ. ಕಾಂಗ್ರೆಸ್ಸಿಗೆ ಸೇರಿದ

ಮುಸಲ್ಮಾನರೆಲ್ಲ ಕ್ವಿಸ್ಲಿಂಗ್ ಎಂದು ಮುಸ್ಲಿಂಲೀಗ್ ಬೇಕಾದರೆ ಕೂಗಬಹುದು. ಆದರೆ ಎಲ್ಲಾ ಮುಸಲ್ಮಾನರನ್ನೂ ನಮ್ಮ ಪ್ರೇಮ ಬಂಧನದಲ್ಲಿ ನಾವು ಸೇರಿಸಿಕೊಂಡು ಕಟ್ಟಿಹಾಕಬೇಕು. ಹಿಂದುಗಳು ಹೃದಯದಲ್ಲಿ ಕೋಪವಿಲ್ಲದೆ ಮುಸಲ್ಮಾನರ ಕತ್ತಿಗಳಿಗೆ ಲಕ್ಷಸಂಖೆ ಗಳಲ್ಲಿ ಬಲಿಯಾದರೆ ಮಾತ್ರ ಇದು ಸಾಧ್ಯ. ಅಹಿಂಸೆಗೆ ಇಂದು ಬಹಿಷ್ಕಾರವಾಗಿದೆ ನಿಜ, ಆದರೆ ಹಿಂದು ಧರ್ಮ ಉಳಿಯಲು ಭಾರತ ಒಟ್ಟಾಗಿ ಉಳಿಯಲು, ಅದೇ ದಾರಿ".

ಅಕ್ಟೋಬರ್ ಎರಡನೆ ತಾರೀಖು ಗಾಂಧಿಯವರು ಮತ್ತೆ ಹೀಗೆ ಹೇಳಿದರು. " ಅಹಿಂಸೆಯಿಂದ ನಡೆಯಲು ಸಾಧ್ಯವಾಗದಿದ್ದರೆ ಹಿಂಸೆ ಯನ್ನೇ ಅವಲಂಬಿಸಿ. ಹೇಡಿಗಳಾಗುವುದು ಮಾತ್ರ ಬೇಡ. ಮುಸ ಲ್ಮಾನನ ಕೈಯಲ್ಲಿ ನಗನಗುತ್ತಾ ದ್ವೇಷ ಬುದ್ಧಿಯನ್ನು ಬಿಟ್ಟು ಸಾಯುವುದು ನಿಜವಾದ ಧೈರ್ಯ. ಹೋರಾಟಕ್ಕಾಗಿ ಕಾಲುಕೆರೆಯ ಬಾರದು. ಅದು ಆತ್ಮರಕ್ಷಣೆಗಾಗಿ ಆಗುವುದಿಲ್ಲ. ಹಾಗೆ ಜಗಳಕ್ಕೆ ಕಾಲುಕೆರೆದರೆ ದೇಶಕ್ಕೂ ಜನತೆಗೂ ಕೆಟ್ಟದ್ದು."

ಮಹಾತ್ಮ ಗಾಂಧಿಯವರು, ಜನರು ತಾವು ಆತ್ಮರಕ್ಷಣೆಮಾಡಿ ಕೊಳ್ಳಬೇಕೆಂದೂ ಇತರರ ಮೇಲೆ ಅವಲಂಬಿಸಕೂಡದೆಂದೂ ಹೇಳಿ ದರು 'ಭಾರತದ 7 ಲಕ್ಷ ಹಳ್ಳಿಗೂ ಪೋಲಿಸರ ರಕ್ಷಣೆಯನ್ನು ಬಯಸುವುದಿಲ್ಲ. ಪೋಲೀಸರು, ಪುಂಡರಿಂದ ಹಳ್ಳಿಯ ಜನವನ್ನೂ ದನವನ್ನೂ ರಕ್ಷಿಸಿದ ಉದಾಹರಣೆಗಳಿಲ್ಲ. ಹಳ್ಳಿಗಳೂ ಸ್ತ್ರೀ ಪುರುಷರು ತಾವು ತಾವೇ ತಮ್ಮ ಪೋಲೀಸರು. ಹಳ್ಳಿಯಲ್ಲಿ ಒಬ್ಬರಿಗೊಬ್ಬರಿಗೆ—ಅವರು ಯಾವ ಮತದವರಾಗಿರಲಿ—ಅಸೂಯೆ ಇಲ್ಲದಿದ್ದರೆ ಮಾತ್ರ ಇದು ಸಾಧ್ಯ. ಇಷ್ಟು ದೂರ ಹೋಗಲು ಸಾಧ್ಯವಿಲ್ಲದವರು ಪೋಲೀಸು ಮತ್ತು ಮಿಲಿಟರಿಯ ಸಹಾಯವನ್ನು ಪಡೆಯದೆ ನಿರ್ಭಯದಿಂದಿರಬೇಕು. ಹಿಂದೆ ಪ್ರತಿಮನೆಯೂ ಒಂದು ಕೋಟೆ ಯಾಗಿತ್ತು. ನಮಗೆ ಬೇಕಾಗಿರುವುದು ಹಿಂಸೆಗೆ ಸಿದ್ಧವಾಗಿರುವ ಅಂತಹ ಕೋಟೆಯಲ್ಲ. ತಾನು ಇತರರನ್ನು ಹಿಂಸಿಸದೆ ಎದುರಾಳಿಗೆ ಕೇಡಾಗಲೆಂದು ಸಹ ಬಯಸದೆ ಸಾಯಲು ಸಿದ್ಧನಾಗಿರುವುದು.

"ಅಹಿಂಸೆಯನ್ನು ಬೆಳೆಸಿಕೊಳ್ಳುವವರು ಮೊದಲು ಹೇಡಿತನವನ್ನು ಬಿಟ್ಟು ಧೈರ್ಯವನ್ನವಲಂಬಿಸಬೇಕು. ಅಹಿಂಸೆಯ ಪೂಜಾರಿ ಎದುರಾಳಿಯ ಶಕ್ತಿಗೆ ಬಗ್ಗಬಾರದು; ಅವನಿಗೆ ಎದುರಾಳಿಯಲ್ಲಿ ಕೋಪವೂ ಬರಬಾರದು. ತನ್ನ ಹುದ್ದೆಯಲ್ಲಿ ತನಗೆ ಎಷ್ಟೇ ಲಾಭವಿದ್ದರೂ ಅದನ್ನು ಬಿಡಲು ಅವನು ಸಿದ್ಧನಾಗಿರಬೇಕು. ಎಲ್ಲವನ್ನೂ ಕಳೆದುಕೊಂಡರೂ ಆತನಿಗೆ ತನ್ನ ಯಜಮಾನನಲ್ಲಿ ಕೋಪವಿರಬಾರದು. ಅದು ನಿಜವಾದ ಧೀರನ ಅಹಿಂಸೆ. ಉದಾಹರಣೆಗೆ ನನ್ನ ಜತೆಯಲ್ಲಿರುವ ಪ್ರಯಾಣಿಕನು ನನ್ನ ಮಗನಿಗೆ ಕಿರುಕುಳ ಕೊಡುತ್ತಾನೆಂದು ಭಾವಿಸೋಣ. ಆಗ ನಾನು ಆ ಹಿಂಸಕನಿಗೆ ಸಮಾಧಾನ ಮಾಡ ಬಯಸಿದರೆ ಆತ ನನ್ನ ಮೇಲೆಯೇ ತಿರುಗಿಕೊಂಡು ನನಗೆ ನಾಲ್ಕು ಬಿಗಿಯಬಹುದು. ಆಗ ಅವನಲ್ಲಿ ಕೋಪಿಸಿಕೊಳ್ಳದೆ ಆ ಏಟನ್ನು ನಗುತ್ತ ಸ್ವೀಕರಿಸಿದರೆ ಅದು ನನ್ನ ನಿಜವಾದ ಅಹಿಂಸೆಯಾಗುವುದು. ಇಂತಹ ಉದಾಹರಣೆಗಳನ್ನು ಬೇಕಾದಷ್ಟು ಹೇಳಬಹುದು ಏಟಿಗೆ ಪ್ರತಿಏಟು ಕೊಡುವ ಶಕ್ತಿ ಇದ್ದರೂ ಕೋಪವನ್ನು ಅಡಗಿಸಿಕೊಂಡು ಕೊಡದೆ ಇದ್ದರೆ ಆಗ ಧೀರತನದ ಅಹಿಂಸೆ ಬೆಳೆಯುವುದು. ನಮ್ಮ ಶತ್ರುಗಳು ಸಹ ಕರಗುವರು"

ಆ ಸಂದರ್ಭದಲ್ಲಿ ಒಬ್ಬರು ಗಾಂಧಿಯವರಿಗೆ "ಕಲ್ಕತ್ತದಲ್ಲಿ ಯೂರೋಪಿಯನ್‌ರಂತೆ ಉಡುಪು ಧರಿಸಿಕೊಂಡು ಹೋದರೆ ಭಯವಿಲ್ಲ, ಆಗ ಮುಸಲ್ಮಾನರು ಹಿಂದುಗಳನ್ನು ಕ್ರಿಸ್ತರೆಂದು ಭಾವಿಸಿ ಸುಮ್ಮನಾಗುವರು. ಕೊಲೆ ತಪ್ಪುವುದು" ಎಂದರು. ಈ ಬಗೆಯ ಯಾವ ಹೇಡಿ ಕಾರ್ಯವನ್ನೂ ಗಾಂಧಿ ಒಪ್ಪುವುದಿಲ್ಲ. ಅವರು ಹೀಗೆ ಹೇಳಿದರು: "ಆತ್ಮಗೌರವವುಳ್ಳ ಯಾವ ಹಿಂದುವೂ ಈ ಸಲಹೆಯನ್ನು ಅಂಗೀಕರಿಸಲಾರ. ಕೊಲೆಯನ್ನು ತಪ್ಪಿಸಿಕೊಳ್ಳಲು ಕ್ರಿಸ್ತನಂತೆ ಕಾಣುವುದು ಅವಮಾನ. ನಾವು ಯೂರೋಪಿನವರ ಉಡುಪಿನ ಮಾದರಿಯನ್ನು ಪ್ರಾರಂಭಿಸಿದುದು "ಸಾಹೇಬ್"ರ ಪ್ರೀತ್ಯರ್ಥವಾಗಿ. ಆ ಬದಲಾವಣೆಯಲ್ಲಿ ನಮಗಾದ ಅವಮಾನವನ್ನು ನಾವು ಮರೆತೆವು. ಈ ಸೂಚನೆ ಹಿಂದೂ ಮತ್ತು ಮುಸಲ್ಮಾನರಿಬ್ಬರಿಗೂ ಅವಮಾನ

ವಾದುದು. ನಾವು ಶಾಂತಿಯಿಂದ ಬಾಳಬೇಕಾದರೆ ಭಾರತದಲ್ಲಿರುವ ಬೇರೆ ಬೇರೆ ಮತಗಳವರ ಉಡುಪು ಆಚಾರಪದ್ಧತಿಗಳ ವಿಷಯದಲ್ಲಿ ಸಹಾನುಭೂತಿಯನ್ನು ಅಭ್ಯಾಸಮಾಡಿಕೊಳ್ಳಬೇಕು.

ಗಾಂಧಿ, ಡಿಲ್ಲಿಯಲ್ಲಿ ಕುಳಿತಿದ್ದರೂ ಅವರ ಹೃದಯ ಮನಸ್ಸು ಬಂಗಾಳದಲ್ಲಿದ್ದಿತು. "ಮನುಷ್ಯ, ಪಶುಗಳಿಗಿಂತ ನೀಚನಾದ, ಈ ಸಂದರ್ಭದಲ್ಲಿ ನಾನು ಮಾಡಬೇಕಾದುದೇನು? ದೇವರು ದಾರಿ ತೋರಿಸುತ್ತಾನೆ. ಅಹಿಂಸೆಯಲ್ಲಿ ಜನಕ್ಕೆ ನಂಬಿಕೆ ಹೋಗಿದ್ದರೂ ಅದರ ಗುಣವನ್ನು ತೋಗಿಸುವುದೇ ನಾನು ನಮ್ಮವರಿಗೆ ಮಾಡುವ ಉಪಕಾರ. ಹಿಂದುಗಳು ಪ್ರತೀಕಾರದ ಭಾವನೆ ತೋರಿಸಬಾರದು. ಅಹಿಂಸೆಯಿಂದಲೇ ನಾವು ಈ ಶಕ್ತಿ ಸಂಪಾದಿಸಿದ್ದೇವೆ. ಈ ಅಹಿಂಸೆ ಬ್ರಿಟಿಷರಿಗೆ ಮಾತ್ರ ಎದುರಾಗುವ ಅಹಿಂಸೆಯಲ್ಲ. ಹಾಗಾದರೆ ಅದು ಹೇಡಿತನವಾದೀತು. ಕೊಲ್ಲದೆ ಸಾಯುವ ವಿದ್ಯೆಯನ್ನು ಕಲಿಯಬೇಕು."

ಗಾಂಧಿ ಹೀಗೆ ಡಿಲ್ಲಿಯಲ್ಲಿ ಕುಳಿತು ಹೇಳುತ್ತಿದ್ದರೂ ಬಂಗಾಳದ ಅನ್ಯಾಯ ಅತ್ಯಾಚಾರಗಳನ್ನು ಕೇಳಿ ಕೇಳಿ ಜನರ ಹೃದಯ ಮತ್ತು ಬುದ್ಧಿ ಹುಚ್ಚಾಗ ತೊಡಗಿತ್ತು. ಪ್ರಾರ್ಥನೆಗೆ ಸೇರುತ್ತಿದ್ದವರು "ಮನೆಗೆ ಬೆಂಕಿ ಹತ್ತಿ ಉರಿಯುತ್ತಿರುವಾಗ ಪ್ರಾರ್ಥನೆ ಸಾಧ್ಯವಿಲ್ಲ" ಎಂದರು. ಅದೇ ಉದಾಹರಣೆಯನ್ನು ತೆಗೆದುಕೊಂಡು ಗಾಂಧಿ ಹೀಗೆ ಹೇಳಿದರು 'ಮನೆ ಉರಿಯುತ್ತಿರುವಾಗ ಬೆಂಕಿಯನ್ನಾರಿಸಬೇಕು. ತಲೆ ಕೆಡಿಸಿಕೊಳ್ಳಬಾರದು. ಬಂಗಾಳದ ಸ್ತ್ರೀಯರಿಗೆ ಆಗಿರುವ ಅನ್ಯಾಯದಿಂದ ನಿಮಗೆ ಬಹಳ ನೋವಾಗಿದೆ. ಆದರೆ ಇಲ್ಲಿ ನೆರೆದಿರುವ ಸ್ತ್ರೀಯರ ವಿಷಯದಲ್ಲಿಯೇ ನಿಮಗೆ ದಯೆ ಇಲ್ಲ ಪ್ರಾರ್ಥನಾ ಮೈದಾನದಿಂದಲೇ ಅವರನ್ನು ಬೆದರಿಸಿ ಓಡಿಸಿಬಿಟ್ಟಿದ್ದೀರಿ ದಿನದಿನವೂ ಸ್ತ್ರೀಯರು ಕುಳಿತಿರುತ್ತಿದ್ದ ಕಡೆ ನೀವು ಕುಳಿತುಬಿಟ್ಟಿದ್ದೀರಿ. ಬಂಗಾಳದಲ್ಲಿ ನೊಂದ ಸ್ತ್ರೀಯರಿಗೆ ಕನಿಕರ ತೋರಿಸುವ ವಿಚಿತ್ರವಾದ ಮಾರ್ಗ ಇದು. ಇದರ ಆಭಾಸ ನಿಮಗೆ ತಿಳಿಯಬೇಕು."

## ಹೇಡಿತನದಂತಹ ಪಾಪ ಬೇರೆ ಇಲ್ಲ

ಆದರೆ ಸ್ತ್ರೀಯರ ಕಷ್ಟವೆಂದರೆ ಗಾಂಧಿಯವರ ಹೃದಯ ಬಹಳ ಬೇಗ ಕರಗಿಬಿಡುತ್ತದೆ. ಭಾರತದ ಸ್ತ್ರೀಯರಲ್ಲಿ ಗಾಂಧಿಯವರಿಗಿರುವ ಹೆಚ್ಚಾದ ಗೌರವವೇ ಇದಕ್ಕೆ ಮುಖ್ಯಕಾರಣ. ಗಾಂಧಿ ಬಂಗಾಳಕ್ಕೆ ಹೋಗುವುದು ಗೊತ್ತಾದಾಗ ಒಬ್ಬರು "ನೀವು ಜಾತೀಯ ಗಲಭೆ ಎದ್ದ ಬೊಂಬಾಯಿ ಕಾನಪುರ ಈ ಕಡೆಗಳಿಗೆಲ್ಲಾ ಹೋಗದೆ ಬಂಗಾಳಕ್ಕೆ ಮಾತ್ರ ಯಾಕೆ ಹೊರಟಿರಿ ? " ಎಂದು ಕೇಳಿದರು. ಗಾಂಧಿ "ಭಾರತ ಸ್ತ್ರೀಯರ ಅವಮಾನವನ್ನು ನಾನು ಸಹಿಸಲಾರೆ. ಅವರ ಕಣ್ಣೀರನ್ನು ಒರಸಿ ಅವರ ಹೃದಯಕ್ಕೆ ಸಾಧ್ಯವಾದರೆ ಬಲವನ್ನು ತುಂಬುವುದು ನನ್ನ ಕರ್ತವ್ಯ. ಆದುದರಿಂದ ಬಂಗಾಳಕ್ಕೆ ಹೊರಡುತ್ತೇನೆ" ಎಂದರು. ಭಾರತದ ಸ್ತ್ರೀಯರಲ್ಲಿ ಗಾಂಧಿಯವರಿಗೆ ಇಷ್ಟು ಗೌರವವಿರುವುದರಿಂದಲೇ ಗಾಂಧಿ ಅವರಿಗೆ ಆತ್ಮಗೌರವವನ್ನು ಕಲಿಸಿದರು. "ನಮ್ಮ ಸ್ತ್ರೀಯರು ಬಹಳ ಸುಲಭವಾಗಿ ಹೆದರಿಬಿಡುತ್ತಾರೆ. ಸ್ವಲ್ಪ ಹೆಚ್ಚು ಕಡಿಮೆ ಜಗತ್ತಿನಲ್ಲೆಲ್ಲ ಹೀಗೆಯೇ ಇದೆ. ನಮ್ಮ ಸ್ತ್ರೀಯರು ಧೈರ್ಯವನ್ನು ಕಲಿಯಬೇಕು. ಅತ್ಯಾಚಾರಕ್ಕೆ ಒಪ್ಪುವುದಕ್ಕೆ ಮುಂಚೆ ಆತ್ಮಹತ್ಯವನ್ನು ಮಾಡಿಕೊಳ್ಳಿ ಎಂದು ನಾನು ಹೇಳಿದೆ. ಅದನ್ನು ಜನ ತಪ್ಪು ತಿಳಿದುಕೊಂಡರು. ಬೇಕಾದರೆ ಸ್ತ್ರೀಯರು ಒಂದು ಕಠಾರಿ ಇಟ್ಟುಕೊಳ್ಳಲಿ. ಆದರೆ ಎದುರಾಳಿಗಳ ಸಂಖೆ ಹೆಚ್ಚಾಗಿರುವಾಗ ಕಠಾರಿಯಿಂದ ಏನು ಪ್ರಯೋಜನ? ಅವಮಾನವಾಗುವ ಪ್ರಸಂಗ ಬಂದಾಗ ವಿಷ ತೆಗೆದುಕೊಂಡು ಅವರು ಸಾಯಲಿ. ಇಂತಹ ಸಿದ್ಧತೆಯಿಂದಲೇ ಅವರಿಗೆ ಧೈರ್ಯ ಬರುವುದು. ಮರಣಕ್ಕೆ ಹೆದರದ ಸ್ತ್ರೀಯನ್ನು ಅವಮಾನಗೊಳಿಸುವುದು ಸಾಧ್ಯವಲ್ಲ. ಅವರಿಗೆ ಆತ್ಮರಕ್ಷಣೆಯ ಎರಡು ಮಾರ್ಗಗಳಿವೆ. ಎದುರಾಳಿಯನ್ನು ಕೊಂದು ಸಾಯಬಹುದು, ಹಾಗೆಯೇ ಸಾಯಬಹುದು. ಕೊಲ್ಲದೆ ಸಾಯುವುದು ಅವರಿಗೆ ಬರಬೇಕು. ಅವರು ಮುಖ್ಯವಾಗಿ ಧೀರರಾಗಬೇಕು. ಹೇಡಿತನದಂತಹ ಪಾಪ ಬೇರೆ ಇಲ್ಲ."

ಪೂರ್ವಬಂಗಾಳದ ಅತ್ಯಾಚಾರದ ಸಂದರ್ಭದಲ್ಲಿ ಮರಣವನ್ನು

ಕುರಿತು ಗಾಂಧಿ ಹೆಚ್ಚು ವಿಚಲಿತರಾಗಲಿಲ್ಲ. ಅವರು ಹೀಗೆ ಹೇಳಿದರು "ಮರಣ ಬರುತ್ತೆ. ಆದರೆ ಅದನ್ನು ನಾವು ಹೇಗೆ ಎದುರುಗೊಳ್ಳುತ್ತೇವೆ ಎಂಬುದು ಮುಖ್ಯವಾದುದು. ಭ್ರಾತೃವಿನ ಕೈಯಿಂದ ಸಾಯುವುದು ಒಳ್ಳೆಯದೇ. ಆದರೆ ಧೈರ್ಯದಿಂದ ಸಾಯಬೇಕು. ಬಲಾತ್ಕಾರವಾಗಿ ಮತಾಂತರ ಹೊಂದಿದ ಸ್ತ್ರೀಯರೋ? ಭಾರತ ಸ್ತ್ರೀಯರು ಅಷ್ಟು ನಿಸ್ಸಹಾಯಕರಾಗಬಾರದು. ಧೈರ್ಯ, ಪುರುಷರ ಸ್ವಂತ ಆಸ್ತಿಯಲ್ಲ. ಅದು ಅವರಿಗೇ ಮೀಸಲಲ್ಲ. ಎಲ್ಲಾ ಸ್ತ್ರೀಯರೂ ಜಾನ್ಸಿರಾಣಿಯಂತೆ ಖಡ್ಗಧಾರಿಗಳಾಗುವುದು ಶಕ್ಯವಲ್ಲವೆಂಬುದು ನಿಜ. ಆದರೆ ಸೀತಾದೇವಿಯ ಉದಾಹರಣೆಯನ್ನು ಎಲ್ಲರೂ ಅನುಸರಿಸಬಹುದು. ಜಾನ್ಸಿರಾಣಿ ಸೋತುಹೋಗಬಹುದು. ಆದರೆ ರಾವಣನು ಸೀತೆಯನ್ನು ಮುಟ್ಟಲು ಶಕ್ತನಾಗಲಿಲ್ಲ.

"ಸೀತೆಯ ಉದಾಹರಣೆ ಬರಿಯ ಕಟ್ಟುಕತೆ ಎನ್ನದಿರಿ. ಇಂತಹ ಉದಾಹರಣೆಗಳು ಆಧುನಿಕ ಕಾಲದಲ್ಲಿಯೂ ಇವೆ. ಆಲಿವ್‌ಓಕ್ ಎಂಬಾತನು ನಿರ್ಭೀತಿಯಿಂದ ನೀಗ್ರೋಗಳ ನಡುವೆ ವಾಸಿಸಿದನು ಆ ಬಗೆಯ ಮಹತ್ತಾದ ಧೈರ್ಯವನ್ನು ಭಾರತ ಸ್ತ್ರೀಯರು ಬೆಳೆಸಿಕೊಳ್ಳಬೇಕು. ಮಿಲಿಟರಿ ಮತ್ತು ಪೋಲೀಸು ಇದ್ದರೂ ಸ್ತ್ರೀಯರ ಅಪಹರಣವಾಗಬಹುದು. ಸ್ತ್ರೀಯರು ತಮ್ಮ ಕೂದಲು ಸಹ ಅಲುಗಾಡುವುದಕ್ಕೆ ಮುಂಚೆ ಸಾಯುವುದನ್ನು ಕಲಿಯಬೇಕು. ಎಲ್ಲ ಸ್ತ್ರೀಯರೂ ಸಮೀಪದಲ್ಲಿ ವಿಷವನ್ನಿಟ್ಟುಕೊಂಡಿರಬೇಕು; ಇದು ಬರಿಯ ಮಾತಲ್ಲ ನನ್ನ ನಿಜವಾದ ಅಭಿಪ್ರಾಯ. ಸಾಯಲು ಸಿದ್ಧರಾಗುವುದರಿಂದಲೇ, ಹೋರಾಟಕ್ಕೆ ಹೆಚ್ಚು ಧೈರ್ಯಬರುವುದು."

ನಮ್ಮ ದೇಶದ ಸ್ತ್ರೀಯರಿಗೆ ಸಂಸಾರದಲ್ಲಿ ಮಾತ್ರ ಅಥವ ಗಂಡನೊಂದಿಗೆ ಚಿತೆಯಮೇಲೆ ಮಾತ್ರ ತಾವು ಅರ್ಹರಾಗಿರಬಹುದೆಂಬ ಬೋಧೆ ಆಗಿದೆ. ಭಾರತಸ್ತ್ರೀಯರು ನಿಸ್ಸಹಾಯಕರಾಗುವುದಕ್ಕಿಂತ ಖಡ್ಗದಾರಿಗಳಾಗುವುದು ಉತ್ತಮವೆಂದು ನನ್ನ ಮತ. ಸ್ತ್ರೀಯರು ಕಠಾರಿಗಳನ್ನೂ ರಿವಾಲ್ವರಗಳನ್ನೂ ಜತೆಯಲ್ಲಿಟ್ಟುಕೊಂಡು ಹೋಗುತ್ತಿರುವುದು ಈಚೆಗೆ ಹೆಚ್ಚಾಗುತ್ತಿದೆ. ಆದರೆ ಎದುರಾಳಿಗಳ

ಗುಂಪು ಹೆಚ್ಚಿದಾಗ ಒಂದು ಕಠಾರಿ ಏನು ಮಾಡಬಲ್ಲದು ? ಆಯುಧಗಳನ್ನಿಟ್ಟುಕೊಳ್ಳುವುದು ಮನುಷ್ಯನ ನಿಶ್ಯಕ್ತಿಯ ಗುರುತು. ಆಯುಧ ಹೋದಮೇಲೆ ಅವನಿಗೆ ಶರಣಾಗತಿಯ ಹೊರತು ಬೇರೆ ದಾರಿ ಇಲ್ಲ."

## ಬಲಾತ್ಕಾರ ಮತಾಂತರದಿಂದ ದೋಷವಿಲ್ಲ

ಅಪಹರಣಕ್ಕೆ ತುತ್ತಾದ ಸ್ತ್ರೀಯರ ವಿಷಯ ಗಾಂಧಿಯವರ ಮನಸ್ಸನ್ನು ಬಹಳ ಕೊರೆಯುತ್ತಿತ್ತು. ಸ್ತ್ರೀಯರದು ಖಂಡಿತ ತಪ್ಪಿಲ್ಲವೆಂದೂ ಅವರನ್ನು ಗೌರವವಾಗಿ ಸಂಸಾರದಲ್ಲಿ ಸೇರಿಸಿಕೊಳ್ಳಬೇಕಂದೂ ಗಾಂಧಿ ಹೇಳಿದರು "ಬಲಾತ್ಕಾರದ ಮತಾಂತರ ಮತಾಂತರವೇ ಅಲ್ಲ ಅಂತಹವರನ್ನು ಹಿಂದಕ್ಕೆ ತೆಗೆದುಕೊಳ್ಳಲು ಪ್ರಾಯಿಶ್ಚಿತ್ತ ಬೇಕಿಲ್ಲ. ಪ್ರಾಯಶ್ಚಿತ್ತ ಬೇಕೆನ್ನುವುದು ತಪ್ಪು. ಮುಸಲ್ಮಾನ ಮತದಲ್ಲಿ ಬಲಾತ್ಕಾರವಿಲ್ಲವೆಂದು ಮುಸಲ್ಮಾನರೇ ನನಗೆ ಹೇಳಿದ್ದಾರೆ. ಬಲಾತ್ಕರಿಸುವವರು ಧರ್ಮ ಕಳಂಕರು. ಕಲ್ಮವನ್ನು ಬಲಾತ್ಕಾರವಾಗಿ ಹೇಳಿಸಲು ಯಾರಾದರೂ ಪ್ರಯತ್ನಸಿದರೆ ತಿರಸ್ಕರಿಸಿ, ಬಂದ ಫಲವನ್ನು ಅನುಭವಿಸಬೇಕು. ಬಲಾತ್ಕಾರವಾಗಿ ಮತಾಂತರ ಹೊಂದಿದ ಅಥವ ಅಪಹೃತರಾದ ಸ್ತ್ರೀಯರನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು. ಅವರ ವಿಷಯದಲ್ಲಿ ಎಲ್ಲರೂ ಕನಿಕರ ತೋರಿಸಬೇಕು. ಅವರು ಅವಿವಾಹಿತರಾಗಿದ್ದರೆ ಅವರಿಗೆ ಸರಿಯಾದ ಗಂಡಿನೊಂದಿಗೆ ವಿವಾಹ ಮಾಡಬೇಕು".

## ಬಂಗಾಳಕ್ಕೆ ಹೋಗಲು ತೀರ್ಮಾನ

ಕೊನೆಗೆ ಮಹಾತ್ಮ ಗಾಂಧಿಯವರು ಅಕ್ಟೋಬರ್ 28ನೇ ತಾರೀಖು ಬಂಗಾಳಕ್ಕೆ ಹೊರಡಲು ನಿಶ್ಚಯಿಸಿದರು ಅವರು ಅಲ್ಲಿ ಹೋಗಬಾರದೆಂದೂ ಅವರ ಪ್ರಾಣಕ್ಕೆ ಸಹ ಅಲ್ಲಿ ಅಪಾಯವುಂಟೆಂದೂ ಮಿತ್ರರು ಹೇಳಿದರೂ ಗಾಂಧಿ ತಮ್ಮ ನಿರ್ಧಾರವನ್ನು ಬದಲಾಯಿಸಲಿಲ್ಲ 'ನಾನು ಅಲ್ಲಿ ಏನು ಮಾಡಲು ಸಾಧ್ಯವೆಂಬುದು ನನಗೆ ತಿಳಿಯದು. ಆದರೆ ಬಂಗಾಳಕ್ಕೆ ಹೋಗದಿದ್ದರೆ ನನಗೆ ಶಾಂತಿ ಇಲ್ಲವೆಂಬುದು ನನಗೆ ಗೊತ್ತು. ಮನುಷ್ಯನಲ್ಲಿ ಎರಡು ಬಗೆಯ ಆಲೋಚನೆಗಳಿವೆ. ಒಂದು ತಾಮಸ ಒಂದು ಸಾತ್ವಿಕ ತಾಮಸ ಆಲೋಚನೆ

ಗಳು ಸಾವಿರಾರು ಇದ್ದರೂ ಅವುಗಳಿಂದ ಪ್ರಯೋಜನವಿಲ್ಲ. ಅವು ಸುಮ್ಮನೆ ತಲೆಯನ್ನು ತುಂಬುತ್ತವೆ. ಆದರೆ ಹೃದಯದ ಅಂತರಾಳ ದಿಂದ ಒಂದೇ ಒಂದು ಪರಿಶುದ್ಧವಾದ ಆಲೋಚನೆ ಹೊರಟರೂ ಸಾಕು. ಅದರಿಂದ ಬೇಕಾದ ಫಲವುಂಟಾಗುತ್ತದೆ. ನವಖಲಿಯ ಜನರಲ್ಲಿ ಹೋಗಬೇಕೆಂಬ ನನ್ನ ಸ್ವಾಭಾವಿಕವಾದ ಪ್ರೇರಣೆಯನ್ನು ನಾನು ಅಡಗಿಸಲಾರೆ. ಕಲ್ಕತ್ತಕ್ಕೆ ಹೋಗಿ ಅಲ್ಲಿಂದ ನವಖಲಿಗೆ ಹೋಗುತ್ತೇನೆ. ಪ್ರಯಾಣ ಪ್ರಯಾಸ. ನನ್ನ ಆರೋಗ್ಯವೂ ಉತ್ತಮ ವಾಗಿಲ್ಲ. ಆದರೆ ದೇವರಲ್ಲಿ ನಂಬಿಕೆ ಇಟ್ಟು ನಮ್ಮ ಕರ್ತವ್ಯವನ್ನು ನಾವು ಮಾಡಿದರೆ ನಾವು ಜಯಶಾಲಿಗಳಾಗುತ್ತೇವೆ. ಕಷ್ಟವನ್ನು ಸಹಿಸುವ ಶಕ್ತಿ ನಮಗೆ ಉಂಟಾಗುತ್ತದೆ. ನಾನು ಯಾರನ್ನೂ ಟೀಕಿ ಸಲು ಬಂಗಾಳಕ್ಕೆ ಹೋಗುತ್ತಿಲ್ಲ. ಹಿಂದು ಮತ್ತು ಮುಸಲ್ಮಾನರಿಬ್ಬ ರಿಗೂ ಸ್ನೇಹಿತನಾಗಿ ಹೋಗುತ್ತಿದ್ದೇನೆ. ಇಂದು ಕೆಲವು ಮುಸಲ್ಮಾ ನರು ನಾನು ತಮ್ಮ ಶತ್ರುವೆಂದು ತಿಳಿದಿದ್ದಾರೆ. ಅವರ ಕೋಪದಿಂದ ನನಗೆ ಖೇದವಿಲ್ಲ. ಹಿಂದುಗಳೇ ನನ್ನ ಮೇಲೆ ಆಗಾಗ ಕೋಪ ಗೊಳ್ಳುವುದಿಲ್ಲವೆ? ನಾವು ದೇವರ ಸೇವಕರಾದ ಮೇಲೆ, ದೇವರ ಎಲ್ಲಾ ಸೃಷ್ಟಿಯ ಸೇವಕರೂ ಆಗಲೇ ಬೇಕು. ಈ ದೃಷ್ಟಿಯಿಂದ ನಾನು ಬಂಗಾಳಕ್ಕೆ ಹೋಗುತ್ತಿದ್ದೇನೆ. ಹಿಂದು ಮುಸಲ್ಮಾನರು ಒಬ್ಬರಿ ಗೊಬ್ಬರು ಶತ್ರುಗಳಲ್ಲ. ಅವರು ಹುಟ್ಟಿದುದು ಭಾರತದಲ್ಲಿ, ಬಾಳು ವುದು ಭಾರತದಲ್ಲಿ, ಸಾಯುವುದು ಭಾರತದಲ್ಲಿ. ಬೇರೆ ಮತದವ ರಾದ ಮಾತ್ರಕ್ಕೆ ಇದಕ್ಕೆ ಚ್ಯುತಿಯಿಲ್ಲ. ಬೇರೆ ಮತದವರಾದರೂ ಒಬ್ಬರಿಗೊಬ್ಬರು ಶತ್ರುಗಳಾಗಬೇಕಾದುದಿಲ್ಲ."

ಡಿಲ್ಲಿಯಿಂದ ಕಲ್ಕತ್ತಕ್ಕೆ ಪ್ರಯಾಣ ಬಹಳ ಕಷ್ಟದಾಯಕ ವಾಯಿತು. ಗಾಂಧಿ ಆ ಮಾರ್ಗದಲ್ಲಿ ಪ್ರಯಾಣ ಬೆಳಸಿ 12 ವರುಷ ಗಳಾಗಿದ್ದವು. ಅವರ ದರ್ಶನಕ್ಕಾಗಿ ಜನರು ಅಸಂಖ್ಯಾತ ಸಂಖೆ ಯಲ್ಲಿ ಆಲಿಘರ್ ತುಂಡ್ಲ ಕಾನ್ಪೂರ್ ಆಸನ್‌ಸಾಲ್ ಮುಂತಾದ ರೈಲ್ವೆ ನಿಲ್ದಾಣದಲ್ಲಿ ಜೇನು ಹುಳುಗಳಂತೆ ತುಂಬಿದ್ದರು. ಆ ಜನ ರೈಲು ಗಾಡಿಗಳ ಮೇಲೆ ಹತ್ತಿ ಕಿಟಕಿಗಳನ್ನು ಒಡೆದು ಗಾಜುಗಳನ್ನು

ಪುಡಿಮಾಡಿ ಒಳಗಿದ್ದವರ ಉಸಿರು ಕಟ್ಟಿಸಿ ಕಿವಿ ಒಡೆಯುವವರೆಗೆ ಕಿರಚುತ್ತಿದ್ದರು. ಅವರು ಗಾಂಧಿ ದರ್ಶನಕ್ಕಾಗಿ ಪದೇ ಪದೇ ಎಚ್ಚರಿಕೆಯ ಸರಪಣಿಯನ್ನು ಎಳೆದು ಬ್ರೇಕುಗಳನ್ನು ನಿಲ್ಲಿಸಿಬಿಡುತ್ತಿದ್ದರು. ಸ್ಟೇಶನ್ ಅಧಿಕಾರಿಗಳು ನೀರಿನ ಕೊಳವೆಯನ್ನು ಅವರ ಮೇಲೆ ತಿರುಗಿಸಿ ಅವರನ್ನು ಓಡಿಸಲು ಪ್ರಯತ್ನಿಸಿದರು. ಜನರು ಅದಕ್ಕೂ ಕದಲಲಿಲ್ಲ ಗಾಡಿ ಮಾತ್ರ ನೀರು ಮಯವಾಯಿತು. ಆಲಿಘರ್‌ನಲ್ಲಿ ಬ್ರೇಕ್‌ನಲ್ಲಿದ್ದ ಚಿಂದಿಯಿಂದ ಹೊಗೆ ಹೊರಟು ಗಾಡಿಯಲ್ಲಿ ತುಂಬಿತು ಆ ವಿಷಯವನ್ನು ರೈಲು ಅಧಿಕಾರಿಗಳಿಗೆ ತಿಳಿಸುವುದಕ್ಕೆ ಹೋಗುವುದಕ್ಕೇ ಜನರ ಗುಂಪು ದಾರಿ ಕೊಡದುದರಿಂದ ಬಹಳ ಕಷ್ಟವಾಯಿತು. ಗಾಡಿಗೇನಾದರೂ ಬೆಂಕಿಬಿದ್ದಿದ್ದರೆ ಸಾಮಾನನ್ನು ಹೊರಕ್ಕೆ ತೆಗೆದುಕೊಳ್ಳಲು ಖಂಡಿತ ಸಾಧ್ಯವಾಗುತ್ತಿರಲಿಲ್ಲ.

## ಪ್ರತೀಕಾರ, ಮಾಡಿದವನ ಮೇಲೆಯೇ

ಅಕ್ಟೋಬರ್ 27ನೇ ತಾರೀಖು ಗಾಂಧಿ ಸೋದೆಪುರಕ್ಕೆ ಬಂದರು. "ಶಾಂತಿ ಬೇಕಾದರೆ ಜನರ ಹೃದಯ ಪರಿವರ್ತನೆಯಿಂದಲೇ ಅದು ಬರಬೇಕು. ನಿಮ್ಮ ಧೀರವಾದ ಹೃದಯ ನಿಮ್ಮನ್ನು ಕಾಯಬಲ್ಲದೇ ಹೊರತು ಪೋಲೀಸು ಮಿಲಿಟರಿಗಳಲ್ಲ ಧೀರರನ್ನು ಯಾರೂ ಅವಮಾನಪಡಿಸಲಾರರು. ಪ್ರತೀಕಾರ ವಿಷಮ ದುಂಡು. ಮಾಡಿದವನ ಮೇಲೆಯೇ ಅದು ಮತ್ತೆ ತಿರುಗುತ್ತದೆ. ಯಾರಾದರೂ ನನ್ನನ್ನು ಕೊಲ್ಲುತ್ತಾರೆಂದು ಭಾವಿಸಿ. ಅವರನ್ನು ನೀವು ಕೊಲ್ಲುವುದರಿಂದ ಏನು ಪ್ರಯೋಜನ? ನಿಧಾನವಾಗಿ ಯೋಚಿಸಿ ನೋಡಿದರೆ ಗಾಂಧಿಯನ್ನು ಗಾಂಧಿ ಹೊರತು ಮತ್ತಾರು ಕೊಲ್ಲಬಲ್ಲರು? ಆತ್ಮವನ್ನು ನಾಶಮಾಡಲು ಸಾಧ್ಯವಿಲ್ಲ ಪ್ರತೀಕಾರದ ಯೋಚನೆಯನ್ನೇ ಬಿಟ್ಟುಬಿಡೋಣ. ಮುಸಲ್ಮಾನರು ತಪ್ಪುಮಾಡಿದರೂ ಅವರು ನನ್ನ ಮಿತ್ರರೇ. ಆದರೆ ಅವರು ಮಾಡುತ್ತಿರುವುದು ತಪ್ಪೆಂದು ಹೇಳುವುದು ನನ್ನ ಕರ್ತವ್ಯ. ಅದೇ ನಿಜವಾದ ಮಿತ್ರಧರ್ಮ. ಕ್ಷಮೆಯೇ ಹಿಂದು ಧರ್ಮ. ಕ್ಷಮೆ ಧೀರರಿಗೆ ಭೂಷಣ. ಕುರಾನಿನ್ನಲ್ಲಿ ಸಹ ಹಾಗೆಯೇ ಹೇಳಿದೆ ಎಂದು ಒಬ್ಬ ಜ್ಞಾನಿ ಮೌಲ್ವಿ ನನಗೆ ಹೇಳಿದರು. ಒಬ್ಬ

ನಿರಪರಾಧಿಯನ್ನು ಕೊಂದರೆ ಮನುಷ್ಯ ಪ್ರಪಂಚವನ್ನೇ ಕೊಂದಂತೆ. ಇಸ್ಲಾಂ ಧರ್ಮ ಕೊಲೆ ಲೂಟಿ ಬಲಾತ್ಕಾರ ಮತಾಂತರ ಸ್ತ್ರೀಯರ ಅಪಹರಣ ಇವನ್ನು ಒಪ್ಪುವುದಿಲ್ಲವೆಂದು ಆ ಮೌಲ್ವಿ ಹೇಳಿದರು. ನಿಮ್ಮ ದವಡೆಗೆ ಏಟು ಹೊಡೆದವನನ್ನು ಕ್ಷಮಿಸಲು ಸಾಧ್ಯವಾಗದಿದ್ದರೆ ಅವನ ದವಡೆಗೆ ಒಂದು ಕೊಡಿ. ನನಗೆ ಅದು ಅರ್ಥವಾಗುತ್ತೆ. ಆದರೆ ಅವನು ಓಡಿ ಹೋಗುತ್ತಾನೆಂದು ಭಾವಿಸಿ. ಆಗ ನೀವು ಅವನ ಜಾತಿಯ ಬೇರೆ ಒಬ್ಬನನ್ನು ಹೊಡೆದರೆ ಅದು ಮನುಷ್ಯತ್ವಕ್ಕಿಂತ ಕಡಿಮೆ ನನ್ನ ಮಗಳನ್ನು ಒಬ್ಬನು ಎತ್ತಿಕೊಂಡು ಹೋದರೆ ನಾನು ಆ ಕ್ರೂರಿಯ ನೆಂಟನ ಮಗಳನ್ನು ಎತ್ತಿಕೊಂಡು ಹೋಗಬಹುದೆ?"

ಗಾಂಧಿ ಕೊಟ್ಟ ಎಚ್ಚರಿಕೆ ಸಕಾಲದ್ದಾಗಿದ್ದಿತು. ಬಿಹಾರಿನಲ್ಲಿ ಹಿಂದುಗಳು ಪ್ರತೀಕಾರ ಪ್ರಾರಂಭಿಸಿದ್ದರು. ಪಂಡಿತ್ ಜವಹರ್ ಲಾಲ್‌ನೆಹ್ರು ಬಿಹಾರಿಗೆ ಹೋಗಿ ಶಾಂತಿ ಸ್ಥಾಪಿಸಿದರು. ಗಾಂಧಿಯವರು "ಬಿಹಾರಿನ ಹಿಂದುಗಳು ಶಾಂತರಾಗದಿದ್ದರೆ ಆ ಮರಣಾಂತ ಉಪವಾಸಮಾಡುವುದಾಗಿ" ಪ್ರಕಟಿಸಿದರು. ಬಿಹಾರಿನ ಸರ್ಕಾರ ಬಂಗಾಳ ಸರ್ಕಾರದಂತೆ ನಿಶ್ಯಕ್ತವಾದುದೂ ಒಂದು ಜಾತಿಯವರದೂ ಆಗಿರಲಿಲ್ಲ. ಅಲ್ಲಿಯ ಗಲಭೆಗಳು ಕೂಡಲೇ ಶಮನವಾದುವು. ಗಾಂಧಿ ಬಕ್ರೀದ್ ಕಾಲದಲ್ಲಿ ಬಂಗಾಳ ಸರ್ಕಾರದ ಪ್ರಾರ್ಥನೆಯಂತೆ ಕಲ್ಕತ್ತೆಯಲ್ಲಿಯೇ ಉಳಿದರು. ನವಂಬರ್ 6ನೇ ತಾರೀಖು ಗಾಂಧಿ ನವಖಲಿಗೆ ಹೊರಟರು. ಹೊರಡುವುದಕ್ಕೆ ಮುಂಚೆ ಅವರು ಕೊಟ್ಟ ಭಾಷಣ ಮಾರ್ಮಿಕವಾಗಿತ್ತು. "ನಾನು ಬಯಸುವ ಶಾಂತಿ ಗೌರಯುತವಾದ ಶಾಂತಿ, ಆತ್ಮಗೌರವವನ್ನು ನಾಶಮಾಡಿಕೊಳ್ಳುವ ಶಾಂತಿ ಅಲ್ಲ. ನನ್ನ ಜೀವನವನ್ನೆಲ್ಲ, ದಬ್ಬಾಳಿಕೆ ದೌರ್ಜನ್ಯಕ್ಕೆ ವಿರೋಧವಾಗಿ ಹೋರಾಡುವುದರಲ್ಲಿ ಕಳೆದಿದ್ದೇನೆ. ಮುಂದೆಯೂ ಜೀವವಿರುವವರೆಗೆ ಹಾಗೆಯೇ ಮಾಡುತ್ತೇನೆ. ನವಖಲಿ ಸ್ತ್ರೀಯರ ಕಣ್ಣೀರನ್ನು ಅಳಿಸಲು ನನಗೆ ಸಾಧ್ಯವಾದರೆ ನನ್ನ ಕಾರ್ಯ ಸಾಧಿಸಿದಂತೆ ಆಯಿತು."

ಪದ್ಮಾನದಿಯಲ್ಲಿ 80 ಮೈಲಿ ದೋಣಿಯಲ್ಲಿ ಹೋಗಿ ಗಾಂಧಿ ರಾತ್ರಿ 2 ಗಂಟೆಗೆ ಚೌಮುಹಾನಿಯನ್ನು ಸೇರಿದರು. ಲಕ್ಷ್ಮಿಪುರ್

ಎಂಬಲ್ಲಿ ಒಂದು ನಿರಾಶ್ರಿತರ ಶಿಬಿರವಿತ್ತು. ನಿರಾಶ್ರಿತರ ಸಂಖೆ ದೊಡ್ಡ ದಾಗಿದ್ದಿತು. ಗಾಂಧಿ ಹೀಗೆ ಹೇಳಿದರು "ನಾನು ಸರ್ರನೆ ಇಲ್ಲಿ ಪ್ರವಾಸಮಾಡಿಕೊಂಡು ಹಿಂದಿರುಗಿ ಹೋಗಲು ಬಂದಿಲ್ಲ. ನನ್ನದು ಪ್ರಚಾರ ಪ್ರವಾಸವಲ್ಲ. ನಿಮ್ಮೊಂದಿಗೆ ನಿಮ್ಮವನಾಗಿ ಉಳಿಯಲು ಬಂದಿದ್ದೇನೆ. ನಾನು ಗುಜರಾತಿನವನೂ ಅಲ್ಲ. ಬಂಗಾಳಿಯೂ ಅಲ್ಲ. ನಾನು ಭಾರತೀಯ, ನಾನು ಇಲ್ಲಿಯೇ ಇದ್ದು ಇಲ್ಲಿಯೇ ಮಡಿಯುವುದಾಗಿ ಪ್ರತಿಜ್ಞೆಮಾಡಿದ್ದೇನೆ. ಮುಸಲ್ಮಾನರ ನಡುವೆ ಏಕಾಂಗಿಯಾದ ಹಿಂದು ಸ್ತ್ರೀ, ನಿರ್ಭಯವಾಗಿ ನಡೆಯುವುದು ಸಾಧ್ಯ ವಾಗುವವರೆಗೆ ನಾನು ಬಂಗಾಳವನ್ನು ಬಿಟ್ಟು ಹೋಗುವುದಿಲ್ಲ.

## ರಾಮನಾಮವೇ ಸ್ಪರ್ಶಮಣಿ

"ನೀವು ನನಗೆ ಕೊಡಬಹುದಾದ ಅತ್ಯಂತ ದೊಡ್ಡ ಸಹಾಯ ನಿಮ್ಮ ಹೃದಯದಿಂದ ಭಯವನ್ನು ತ್ಯಜಿಸುವುದು. ಅದಕ್ಕೆ ಆವಶ್ಯಕ ವಾದ ಸ್ಪರ್ಶಮಣಿ ರಾಮನಾಮ. ರಾಮನಲ್ಲಿ ನಿಮಗೆ ನಂಬಿಕೆ ಇಲ್ಲವೆಂದು ನೀವು ಹೇಳಬಹುದು. ರಾಮನ ಇಚ್ಛೆಯಿಲ್ಲದೆ ನೀವುಉಸಿ ರಾಡುವುದು ಸಹ ಸಾಧ್ಯವಲ್ಲವೆಂಬುದು ನಿಮಗೆ ಗೊತ್ತಿಲ್ಲ. ಆತನನ್ನು ಈಶ್ವರ್, ಅಲ್ಲ, ಗಾಡ್, ಅಹುರಮುಜಡ, ಯಾವ ಹೆಸರಿನಿಂದ ಬೇಕಾ ದರೂ ಕರೆಯಿರಿ. ಜನರು ಹೇಗೆ ಅಸಂಖ್ಯಾತರೋ ರಾಮನ ಹೆಸರೂ ಹಾಗೆ ಅಸಂಖ್ಯಾತ. ಆತ ಅದ್ವಿತೀಯ, ಆತನೆ ಮಹಾತ್ಮ, ಆತನಿಗಿಂತ ದೊಡ್ಡವರು ಯಾರೂ ಇಲ್ಲ. ಆತನು ಕಾಲಾತೀತ ನಿರ್ದೋಷಿ ನಿರ್ಭೀತ ನನ್ನ ರಾಮ ಇಂತವನು. ಅವನೇ ನನ್ನ ಧಣಿ ನನ್ನ ಒಡೆಯ. ನನ್ನ ಬಾಲ್ಯದಲ್ಲಿ ನಾನು ಬಹಳ ಹೇಡಿಯಾಗಿದ್ದೆ. ನೆರಳನ್ನು ಕಂಡರೆ ಸಹ ಹೆದರುತ್ತಿದ್ದೆ. ನನ್ನ ದಾದಿ ರಂಭೆ, ರಾಮನಾಮವು ಭಯನಾಶನ ಎಂದು ಹೇಳಿಕೊಟ್ಟಳು. ಭಯವುಂಟಾದರೆ "ರಾಮ ರಾಮ ಎನ್ನು. ರಾಮ ನಿನ್ನನ್ನು ಕಾಪಾಡುತ್ತಾನೆ" ಎಂದು ಹೇಳಿಕೊಟ್ಟಳು. ಅಂದಿ ನಿಂದ ರಾಮನಾಮವೇ ನನ್ನ ಆಶ್ರಯ. ಅದು ಎಲ್ಲ ಭಯಕ್ಕೂ ಪ್ರತಿ ಅಸ್ತ್ರ. ರಾಮ ಪರಿಶುದ್ಧ ಹೃದಯದಲ್ಲಿ ಯಾವಾಗಲೂ ವಾಸಿಸುತ್ತಾನೆ. ಶ್ರೀರಾಮಕೃಷ್ಣ ಪರಮಹಂಸ ಚೈತನ್ಯರ ಹೆಸರು

ಬಂಗಾಳದಲ್ಲಿ ಹೇಗೆ ಮನೆಮನೆ ಮಾತೋ, ಹಾಗೆ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಮನೆ ಮಾತಾಗಿರುವ ತುಳಸೀದಾಸರು, ಈ ರಾಮನಾಮ ಸಂದೇಶವನ್ನು ನಿಮಗೆ ತಮ್ಮ ರಾಮಾಯಣದಲ್ಲಿ ಬೋಧಿಸಿದ್ದಾರೆ. ಆ ನಾಮಕ್ಕೆ ಮಾತ್ರ ಹೆದರಿ ನಡೆದರೆ ಸಾಕು. ಜಗತ್ತಿನಲ್ಲಿ ಮತ್ತಾರಿಗಾಗಿಯೂ ಹೆದರಬೇಕಾದುದಿಲ್ಲ. ಅಲ್ಲಾಹೊ ಅಕಬರ್ ಎಂಬ ಧ್ವನಿಯನ್ನು ಕೇಳಿ ಯಾಕೆ ಹೆದರಬೇಕು? ಇಸ್ಲಾಂ ಧರ್ಮದ ಅಲ್ಲ, ನಿರಪರಾಧಿಗಳ ರಕ್ಷಕ. ಪೂರ್ವ ಬಂಗಾಳದಲ್ಲಿ ಇಸ್ಲಾಂನ ಹೆಸರಿನಲ್ಲಿ ಮಾಡಿರುವುದನ್ನು ಮಹಮ್ಮದ್ ಎಂದಿಗೂ ಒಪ್ಪುವುದಿಲ್ಲ.

## ಮುಸಲ್ಮಾನರಿಗೆ ಹೆದರಬೇಡಿ

ದೇವರಲ್ಲಿ ನಂಬಿಕೆ ಇದ್ದವರ ಹೆಂಡಿರು ಮಕ್ಕಳನ್ನು ಅವಮಾನ ಗೊಳಿಸಲು ಯಾರಿಗೆ ತಾನೆ ಧೈರ್ಯ? ಆದುದರಿಂದ ಮುಸಲ್ಮಾನರಿಗೆ ಹೆದರಬೇಡಿ. ರಾಮನಾಮದಲ್ಲಿ ನಿಮಗೆ ನಂಬಿಕೆ ಇರುವುದಾದರೆ ಪೂರ್ವ ಬಂಗಾಳವನ್ನು ಬಿಡಬೇಡಿ. ನೀವು ಹುಟ್ಟಿದ ಜಾಗದಲ್ಲಿ ನಿಮ್ಮ ಮನೆ ಮಕ್ಕಳನ್ನು ಧೀರರಾಗಿ ಸಂರಕ್ಷಿಸುವ ಪ್ರಯತ್ನದಲ್ಲಿ ಮಡಿಯಿರಿ. ಅಪಾಯದಿಂದ ಓಡಬಾರದು. ಇದರಿಂದ ದೇವರಲ್ಲಿಯೂ ಮನುಷ್ಯ ನಲ್ಲಿಯೂ ನಿಮ್ಮಲ್ಲಿಯೂ ನಿಮ್ಮ ಅಪನಂಬಿಕೆ ವ್ಯಕ್ತವಾಗುವುದು. ಹೀಗೆ ತನ್ನಲ್ಲಿ ತಾನು ನಂಬಿಕೆಯನ್ನು ಕಳೆದುಕೊಳ್ಳುವುದಕ್ಕಿಂತ ಪ್ರವಾಹದಲ್ಲಿ ಮುಳುಗುವುದು ವಾಸಿ.

"ಪೋಲೀಸು ಮತ್ತು ಮಿಲಿಟರಿಯ ರಕ್ಷಣೆಯಲ್ಲಿ ನಿಮಗೆ ಯಾಕೆ ನಂಬಿಕೆ? ಪೋಲೀಸನ್ನೂ ಮಿಲಿಟರಿಯನ್ನೂ ನಿಮ್ಮ ರಕ್ಷಕರು ಯಾರೆಂದು ಕೇಳಿ. ದೇವರು ನಮ್ಮ ರಕ್ಷಕನೆಂದು ಅವರು ಹೇಳು ತ್ತಾರೆ. ಆದುದರಿಂದ ನೀವೂ ಆತನನ್ನೇ ನಂಬಿ."

ಜೌಮುಹಾನಿ ಎಂಬಲ್ಲಿ ಗಾಂಧಿ ಮುಖ್ಯವಾಗಿ ಮುಸಲ್ಮಾನರನ್ನೇ ಕುರಿತು ಬೋಧಿಸಿದರು. "ನಾನು ಕಿಲಾಫತ್ ಕಾಲದಲ್ಲಿ ಅಲಿ ಸಹೋದರರೊಂದಿಗೆ ಪೂರ್ವ ಬಂಗಾಳದಲ್ಲಿ ಸಂಚರಿಸಿದ್ದೆ. ಆ ಕಾಲದಲ್ಲಿ ನಾನು ಹೇಳಿದುದೆಲ್ಲಾ ಸರಿ ಎಂದು ಮುಸಲ್ಮಾನರು ಭಾವಿಸಿದ್ದರು. ಸ್ತ್ರೀಯರ ಸಭೆಗೆ ಹೋಗುವಾಗ ಅಲಿಸಹೋದರರು

ಕಣ್ಣನ್ನು ಕಟ್ಟಿಸಿಕೊಂಡು ಹೋಗುತ್ತಿದ್ದರು. ಆದರೆ ನನಗೆ ಮಾತ್ರ ಕಣ್ಣುಬಿಟ್ಟುಕೊಂಡೇ ಹೋಗಲು ಅವಕಾಶಕೊಟ್ಟಿದ್ದರು. ಅಕ್ಕ ತಂಗಿಯರನ್ನೂ ತಾಯಂದಿರನ್ನೂ ನೋಡಲು ಹೋಗುವಾಗ ನನ್ನ ಕಣ್ಣನ್ನು ಯಾಕೆ ಕಟ್ಟಿಸಿಕೊಳ್ಳಬೇಕು? ಸ್ತ್ರೀಯರು ನನ್ನನ್ನು ಕಾಣಲು ಸಂತೋಷಗೊಳ್ಳುತ್ತಿದ್ದರು. ನನ್ನ ಬೋಧನೆಯಿಂದ ತಮಗೆ ಒಳ್ಳೆಯದಾಗುವುದೆಂದು ಅವರು ಭಾವಿಸಿದ್ದರು. ನಾನು ದಕ್ಷಿಣ ಆಫ್ರಿಕದಲ್ಲಿ 20 ವರುಷಗಳ ಕಾಲ ಮುಸಲ್ಮಾನ ಮಿತ್ರರೊಡನೆ ವಾಸಿಸಿದೆ. ಅವರು ನನ್ನನ್ನು ತಮ್ಮ ಸಂಸಾರಕ್ಕೆ ಸೇರಿದವನಂತೆ ಕಾಣುತ್ತಿದ್ದರು. ನನ್ನ ಎದುರಿಗೆ ಘರದ ಆವಶ್ಯಕವಿಲ್ಲವೆಂದು ತಮ್ಮ ಮಕ್ಕಳಿಗೂ ಪತ್ನಿಯರಿಗೂ ಬೋಧಿಸಿದ್ದರು. ನಾನು ಇಂಗ್ಲೆಂಡಿನಲ್ಲಿ ಬ್ಯಾರಿಸ್ಟರ್ ಆದೆ. ಆದರೆ ಬರಿಯ ಊಟದಿಂದ ಬ್ಯಾರಿಸ್ಟರ್ ಆದುದರ (Dinner Barrister) ಬೆಲೆ ಏನು? ದಕ್ಷಿಣ ಆಫ್ರಿಕದಲ್ಲಿ ನಾನು ಮಾಡಿದ ಹೋರಾಟದಿಂದ ನಾನೊಬ್ಬ ಮನುಷ್ಯನಾದೆ. ಸತ್ಯಾಗ್ರಹ ವನ್ನೂ ಕಾಯಿದೆ ಭಂಗವನ್ನೂ ನಾನು ಅಲ್ಲಿ ಕಲಿತೆ; ಪ್ರಯೋಗಿಸಿದೆ.

"ನಾನು ದುಃಖದಿಂದ ನಿಮ್ಮಲ್ಲಿ ಬಂದಿದ್ದೇನೆ. ಅಣ್ಣ ತಮ್ಮಂದಿರಾದ ಹಿಂದು ಮುಸಲ್ಮಾನರು ಹೀಗೆ ಹೋರಾಡುವಂತೆ ಭಾರತಮಾತೆ ಮಾಡಿದ ಪಾಪವೇನು? ಪೂರ್ವ ಬಂಗಾಳದ ಕೆಲವು ಭಾಗಗಳಲ್ಲಿ ಇಂದು ಯಾವ ಹಿಂದೂ ಸ್ತ್ರೀಗೂ ಸುರಕ್ಷಿತೆ ಇಲ್ಲವೆಂದು ಕೇಳಿದೆ. ನಾನು ಮುಸಲ್ಮಾನರಿಗೆ ಎದುರಾಗಿ, ಹಿಂದುಗಳನ್ನು ಹುರಿದುಂಬಿಸಲು ಬಂದಿಲ್ಲ ನನಗೆ ಶತ್ರುಗಳು ಇಲ್ಲ. ನಾನು ನಮ್ಮ ಜೀವಮಾನವನ್ನೆಲ್ಲ ಹೋರಾಡಲು ಬ್ರಿಟಿಷರಿಗೆ ಎದುರಾಗಿ ಹೋರಾಡುವುದರಲ್ಲಿ ಕಳೆದೆ. ಆದರೆ ಇಂದು ಅವರು ನನ್ನ ಮಿತ್ರರು. ನಾನು ಅವರಿಗೆ ಎಂದಿಗೂ ಕೇಡನ್ನು ಬಯಸಲಿಲ್ಲ. ಈಗ ನಡೆದಿರುವುದು ಇಸ್ಲಾಂ ಧರ್ಮಕ್ಕೆ ಕಳಂಕ. ಇಸ್ಲಾಂ ಧರ್ಮವು ನವಖಲಿಯಲ್ಲಿಯೂ ತಿಪ್ಪೆರದಲ್ಲಿಯೂ ನಡೆದಂತಹ ಕೃತ್ಯಗಳನ್ನು ಎಂದೂ ಒಪ್ಪುವುದಿಲ್ಲ. ಬಲ ಪ್ರದರ್ಶನದಿಂದ ಯಾವುದನ್ನೂ ಸಾಧಿಸುವುದು ಸಾಧ್ಯವಿಲ್ಲ. ಅಮೆರಿಕ ಅಣುಬಾಂಬನ್ನು ಕಂಡುಹಿಡಿಯಿತು. ಆದರೆ ಜಗತ್ತಿಗೆ ಶಾಂತಿ ದೊರೆತಿದೆಯೆ".

## ಸುಂದರ ಸೃಷ್ಟಿಯಲ್ಲಿ ಮನುಷ್ಯನೊಬ್ಬನೇ ನೀಚ

ಆ ವರುಷ ನವಖಲಿಯಲ್ಲಿ ಬೆಳೆ ಎಂದಿಗಿಂತಲೂ ಚೆನ್ನಾಗಿ ಬಂದಿತ್ತು. ಆದರೆ ಹಿಂದುಗಳೆಲ್ಲ ತಮ್ಮ ಜಮೀನನ್ನು ಬಿಟ್ಟು ಓಡಿ ಬಿಟ್ಟಿದ್ದುದರಿಂದ ಪೈರನ್ನು ಕುಯ್ಯುವವರು ರೇಖೆಮಾಡುವವರು ಯಾರು ಇರಲಿಲ್ಲ. ಗೊಪೈರಾಬಾಗ್ ಎಂಬುದು ಒಂದು ಹಳ್ಳಿ. ಅಡಕೆ ತೆಂಗಿನ ತೋಪಿನ ನಡುವೆ 5 ಗುಡಿಸಲುಗಳು. ಪ್ರಕೃತಿ ಅತ್ಯಂತ ಸುಂದರವಾಗಿ ಆಹ್ಲಾದಕರವಾಗಿದ್ದಿತು. ಗಾಳಿ ತಣ್ಣಗೆ ಹಿತವಾಗಿತ್ತು. ಅಂತಹ ಸುಂದರ ಪ್ರಕೃತಿಯಲ್ಲಿ ನೀಚವಾಗಿದ್ದುದು ಮನುಷ್ಯನ ಕಾರಳಿ ಮಾತ್ರ. ಅಲ್ಲಿ ಮನುಷ್ಯ ನಡೆಸಿದ್ದ ದೌಷ್ಟ್ಯವನ್ನು ನೋಡಿದರೆ ಎದೆ ನಡಗುತ್ತಿತ್ತು. ಎಲ್ಲೆಲ್ಲೂ ಕೊಲೆ ಮತ್ತು ಲೂಟಿ. ಸುಟ್ಟ ದೇಹಗಳ ಅವಶೇಷಗಳು ಇನ್ನೂ ಅಲ್ಲಲ್ಲಿ ಕಾಣುತ್ತಿದ್ದವು. ಮನೆಯ ಬಾಗಿಲುಗಳಲ್ಲಿ ಇನ್ನೂ ರಕ್ತದ ಕಲೆಗಳಿದ್ದವು. ನೆಲದಲ್ಲಿ ಹಣವನ್ನೂ ಒಡವೆಗಳನ್ನೂ ಹೂಳಿದ್ದಿರಬಹುದೆಂದು ಮನೆಗಳ ನೆಲವನ್ನೆಲ್ಲಾ ಅಗೆದಿದ್ದರು, ಮನೆಗಳಲ್ಲಿ ಇನ್ನೂ ಮರಣದ ನಿಶಾನೆ ಇದ್ದಂತೆ ತೋರುತ್ತಿತ್ತು. ಮೂವರು ಕನ್ಯೆಯರನ್ನು ಅಪಹರಿಸಿದ್ದರು.

ಅಲ್ಲಿಂದ ಮುಂದೆ ಗಾಂಧಿ ದತಪರ ಸೋನಾಜಾಕ್ ಕಿಲ್‌ಪರ ಮುಂತಾದ ಸ್ಥಳಗಳಿಗೆ ಭೇಟಿ ಇತ್ತರು. ಕಿಲ್‌ಪರದಲ್ಲಿ 600 ಮನೆಗಳನ್ನು ಸುಟ್ಟಿದ್ದರು. ದೇವಸ್ಥಾನವನ್ನೂ ಕೆಡಿಸಿದ್ದರು ಪಾಠಶಾಲೆಗಳನ್ನೆಲ್ಲ ಸುಟ್ಟಿದ್ದರು. ಕಾಜಿತ್‌ಕಲ್‌ನಲ್ಲಿ ಗಾಂಧಿ ತಮ್ಮ ಹೃದಯವನ್ನು ಬಿಚ್ಚಿದರು. "ಪರಸ್ಪರ ಕೊಲೆ ಲೂಟಿ ನನ್ನ ಅನುಭವದಲ್ಲಿ ಮೊದಲನೆಯದು. ನಾನು 20 ವರುಷ ಅಫ್ರಿಕದಲ್ಲಿ ಹೋರಾಡಿದ್ದೇನೆ. 30 ವರುಷ ಭಾರತದಲ್ಲಿ ಹೋರಾಡಿದ್ದೇನೆ. ಆದರೆ ಈ ಕೊಲೆಗಳಿಂದ ನನಗೆ ಕಣ್ಣು ಕಾಣದಂತಾಗಿದೆ. ಹಿಂದು ಮುಸಲ್ಮಾನರಿಗೆ ಮೈತ್ರಿಯನ್ನುಂಟುಮಾಡುವುದು ನನಗೆ ತಿಳಿಯದಾಗಿದೆ. ಈ ಸಮಸ್ಯೆಗೆ ಉತ್ತರವನ್ನು ಕಂಡು ಹಿಡಿಯಲು ನಾನು ಬಂಗಾಳಕ್ಕೆ ಬಂದಿದ್ದೇನೆ. ಬಂಗಾಳ ದೊಡ್ಡ ಪ್ರಾಂತ. ಇಲ್ಲಿ ಈ ಪ್ರಶ್ನೆ ತೀರ್ಮಾನವಾದರೆ ಉಳಿದ ಕಡೆಯೂ ತೀರ್ಮಾನವಾಗುವುದು. ಇಲ್ಲಿ ನಾನು ಜಯಶಾಲಿ

ಯಾದರೆ ನನ್ನ ಆಯುಸ್ಸು ಇನ್ನಷ್ಟು ಹೆಚ್ಚುವುದು. ನಾನು ಬೇರೆ ಕಡೆ ಹೋಗುತ್ತೇನೆ. ಇಲ್ಲವಾದರೆ ನನ್ನ ಆಯುಸ್ಸನ್ನು ಮುಗಿಸಬೇಕೆಂದು ದೇವರನ್ನು ಪ್ರಾರ್ಥಿಸುತ್ತೇನೆ. ನಾನು ಬರಿಯ ಕೈಯ್ಯಲ್ಲಿ ಬಂಗಾಳ ದಿಂದ ಹೋಗುವುದಿಲ್ಲ ನಿರಾಶೆ ಎಂಬ ಪದ ನನ್ನ ನಿಘಂಟಿಲ್ಲಿಯೇ ಇಲ್ಲ.

"ಮುಸಲ್ಮಾನರು ಬಂಗಾಳದಲ್ಲಿ ಹಿಂದುಗಳನ್ನು ಕೊಂದರು. ಇನ್ನೂ ನೀಚವಾದ ಕೃತ್ಯಗಳನ್ನು ಮಾಡಿದರು. ಹಿಂದುಗಳು ಬಿಹಾರಿನಲ್ಲಿ ಮುಸಲ್ಮಾನರನ್ನು ಕೊಂದರು. ಇಬ್ಬರೂ ದುಷ್ಕೃತ್ಯಗಳನ್ನೇ ಮಾಡಿ ದರು. ಯಾರದು ಹೆಚ್ಚು ಎಂದು ಹೋಲಿಸುವುದಾಗಲಿ ಯಾರು ಮೊದಲು ಪ್ರಾರಂಭಿಸಿದರೆಂದು ತಪ್ಪನ್ನು ಕಟ್ಟುವುದಾಗಲಿ ಪ್ರಯೋ ಜನವಿಲ್ಲ. ಸೇಡನ್ನು ಸಾಧಿಸುವುದು ಹೀಗಲ್ಲ. ನನ್ನ ಸೇಡು ಬೇರೆ ಬಗೆಯದು. "ನಿಮಗೆ ಒಂದು ಲೋಟ ನೀರು ಕೊಟ್ಟವನಿಗೆ ನೀವು ಎರಡು ಲೋಟ ಕೊಟ್ಟರೆ ಅದರಲ್ಲೇನೂ ಒಳ್ಳೆಯದಿಲ್ಲ ನಿಮಗೆ ಕೇಡು ಮಾಡಿದವನಿಗೆ ಒಳ್ಳೆದನ್ನು ಮಾಡುವುದರಲ್ಲಿಯೇ ನಿಮ್ಮ ಗುಣವಿರು ವುದು. ಇದೇ ಸರಿಯಾದ ಗಂಭೀರವಾದ ಸೇಡೆಂದು ನಾನು ಭಾವಿಸು ತ್ತೇನೆ".

## ದೇವರಿಗೆ ಮಾತ್ರ ಭಯಪಡಿ

ರಾಮುಗಂಜ್, ದಸ್‌ಘರಿಯ, ಮಧುಪುರ್ ಮುಂತಾದ ಹಳ್ಳಿ ಗಳಿಗೆಲ್ಲಾ ಗಾಂಧಿ ಹೋದರು. ಅವರ ಬೋಧನೆಯ ಸಾರಾಂಶವೆಲ್ಲ ಮುಖ್ಯವಾಗಿ ಧೈರ್ಯವನ್ನೂ ನಿರ್ಭಯವನ್ನೂ ಕಲಿಸುವುದಾಗಿದ್ದಿತು. ನವಖಲಿ ಜಿಲ್ಲ ಮಾಜಿಸ್ಟ್ರೇಟರು 'ಧೈರ್ಯವು ಎಲ್ಲ ಸುಗುಣಗಳಿಗೂ ಮೂಲ. ಈ ವೇಳೆಯಲ್ಲಿ ಗಾಂಧಿ ನವಖಲಿಗೆ ಬಂದುದು ಬಹಳ ಒಳ್ಳೆಯದಾಯಿತು. ಯಾಕೆಂದರೆ ಧೈರ್ಯವನ್ನು ಅಕ್ಕಿ ಬೇಳೆಯಂತೆ ಹಂಚಿಕೊಡುವುದಕ್ಕಾಗುವುದಿಲ್ಲ. ಹೃದಯದಲ್ಲಿರುವ ಧೈರ್ಯದ ಕಿಡಿ ಯನ್ನು ಬೀಸಿ ಜ್ವಾಲೆ ಏಳಿಸಬೇಕು. ಈ ಕಾರ್ಯ ಗಾಂಧಿಯವರಿಗಿಂತ ಹೆಚ್ಚಾಗಿ ಮತ್ತಾರಿಂದ ತಾನೇ ಸಾಧ್ಯ?' ಎಂದಿದ್ದರು. ಗಾಂಧಿಯವರು ಧೈರ್ಯದ ಆವಶ್ಯಕತೆಯನ್ನು ಕೆಲಸಗಾರರಿಗೆ ಮೊದಲೇ ಬೋಧಿಸಿದ್ದರು. "ಬಲಾತ್ಕಾರ ಮತಾಂತರ, ಸ್ತ್ರೀಯರ ಅಪಹರಣ, ಅವಮಾನ,

ಇವು ನಡೆಯುವುದನ್ನು ಸಹಿಸುವುದು ಸಾಧ್ಯವಿಲ್ಲ. ದಬ್ಬಾಳಿಕೆಗೆ ನಾವು ಎಲ್ಲಿಯವರೆಗೆ ಒಳಗಾಗುತ್ತೇವೆಯೋ ಅಲ್ಲಿಯವರೆಗೆ ಇವು ನಮ್ಮ ಮೇಲೆ ನಡದೇ ನಡೆಯುತ್ತವೆ. ಪೋಲೀಸು ಮಿಲಿಟರಿ ಇಲ್ಲದೆ ಸಾಧ್ಯ ವಿಲ್ಲ ಎಂದು ನಾವು ಹೇಳುವುದಾದರೆ, ಯುದ್ಧ ಪ್ರಾರಂಭವಾಗುವುದಕ್ಕೆ ಮುಂಚೆಯೇ ನಾವು ಸೋಲನ್ನು ಒಪ್ಪಿಕೊಂಡಂತೆ ಆಯಿತು. ಹೇಡಿ ಗಳನ್ನು ಯಾವ ಪೋಲೀಸೂ ಮಿಲಿಟರಿಯೂ ರಕ್ಷಿಸಲಾರದು. ಸಾವಿ ರಾರು ಜನ, ಕೆಲವು ಅಲ್ಪಸಂಖ್ಯಾತರನ್ನು ಹಿಂಸಿಸಿದರೆ ಏನು ಮಾಡೋಣ' ಎಂದು ನೀವು ಕೇಳುತ್ತೀಳಿ. ಆದರೆ ಸಾವಿರಾರು ಹೇಡಿಗಳನ್ನು ಸಹ ನಾಲ್ಕಾರು ಜನ ಹೆದರಿಸಬಹುದು. ನಿಮ್ಮ ಸಂಖ್ಯೆ ಅಲ್ಪವಾಗಿರು ವುದು ನಿಮ್ಮ ಕಷ್ಟಕ್ಕೆ ಕಾರಣವಲ್ಲ. ನೀವು ನಿಸ್ಸಹಾಯಕರೆಂದು ಭಾವಿಸಿ ಇತರರ ಮೇಲೆ ಅವಲಂಬಿಸುತ್ತಿರುವುದೇ ನಿಮ್ಮ ಕಷ್ಟಗಳಿಗೆ ಮುಖ್ಯ ಕಾರಣ. ಅದರ ಔಷಧಿಯೂ ನಿಮ್ಮಲ್ಲಿಯೇ ಇದೆ. ಈ ಪ್ರಾಂತ್ಯ ದಲ್ಲಿ ನಾನು ಹೆಚ್ಚು ಹೆಚ್ಚಾಗಿ ತಿರುಗಾಡಿದಂತೆ, ನಿಮ್ಮ ಮುಖ್ಯ ಶತ್ರು ಭಯವೇ ಎಂಬುದು ನನಗೆ ನಂಬಿಕೆಯಾಗುತ್ತಿದೆ. ಭಯವು ಹೆದರು ವವರನ್ನೂ ಹೆದರಿಸುವವರನ್ನೂ ಇಬ್ಬರನ್ನೂ ತಿನ್ನುತ್ತದೆ. ಹೆದರಿಸುವ ವನಿಗೆ ತನ್ನ ಕ್ರೌರ್ಯಕ್ಕೆ ಒಳಗಾದವನಲ್ಲೂ ಭಯವಿವೆ. ಆ ಭಯವೇ ದುರಾಸೆ. ನೀವು ಸರಿಯಾಗಿ ಪರೀಕ್ಷಿಸಿ ನೋಡಿದರೆ, ದುರಾಸೆಯೂ ಭಯದ ಒಂದು ರೂಪವೆಂಬುದು ನಿಮಗೆ ಗೊತ್ತಾಗುವುದು. ಹೃದಯ ದಿಂದ ಭಯವನ್ನು ತೊರೆದವನನ್ನು ಹೆದರಿಸುವುದು ಎಂದಿಗೂ ಸಾಧ್ಯ ವಿಲ್ಲ. ಗೊತ್ತೆ ? ದೇವರು ಯಾವಾಗಲೂ ನಿರ್ಭೀತರ ಕಡೆ ಇರುತ್ತಾನೆ. ಆದುದರಿಂದ ನಾವು ದೇವರಿಗೆ ಮಾತ್ರ ಹೆದರಬೇಕು. ಅವನ ರಕ್ಷಣೆ ಯನ್ನು ಮಾತ್ರ ಬಯಸಬೇಕು. ಆಗ ಇತರ ಭಯಗಳು ತಾವಾ ಗಿಯೇ ಮಾಯವಾಗುವುವು. ಪೂರ್ಣ ನಿರ್ಭಯವನ್ನು ಅಭ್ಯಾಸ ಮಾಡಿಕೊಳ್ಳುವವರೆಗೆ ಹಿಂದುಗಳಿಗೂ ಮುಸಲ್ಮಾನರಿಗೂ ಶಾಂತಿ ಇರುವುದಿಲ್ಲ.''

೨

ಗಾಂಧಿಜಿ ಧೈರ್ಯದ ಸಂದೇಶವನ್ನು ಕೊಡುತ್ತಿದ್ದ ಈ ಕಾಲದಲ್ಲೆಲ್ಲ

ಅವರ ಮನಸ್ಸು ಇನ್ನೂ ಕಠಿಣವಾದ ಒಂದು ತೀರ್ಮಾನಕ್ಕೆ ಬರುತ್ತಿದ್ದಿತು. ಅಹಿಂಸೆಯ ಒರೆಗಲ್ಲಿಗೆ ತಮ್ಮನ್ನೇ ಆಹುತಿಮಾಡಿಕೊಳ್ಳಬೇಕೆಂದು ಅವರು ನಿಶ್ಚಯಿಸಿದ್ದರು. "ಅಹಿಂಸೆಯ ಪ್ರಯೋಗವನ್ನು ಹೀಗೆ ಗುಂಪಿನಲ್ಲಿ ಮಾಡಿದರೆ ಮಾತ್ರವೇ ಸಾಲದು. ಅಹಿಂಸೆಯಲ್ಲಿ ನಿಜವಾದ ಶಕ್ತಿ ಇದ್ದರೆ ವ್ಯಕ್ತಿ ಒಂಟಿಯಾಗಿ ಸಹ ಅದರ ಪ್ರಯೋಗದಲ್ಲಿ ಜಯಶಾಲಿಯಾಗಬೇಕು.''

ನವಂಬರ್ 15ನೇ ತಾರೀಖು ಗಾಂಧಿಜಿ ಪ್ರಾರ್ಥನಾಸಭೆಯಲ್ಲಿ ತಮ್ಮ ಈ ದೃಢವನ್ನು ಜನತೆಗೆ ತಿಳಿಸಿದರು. "ನನ್ನ ಸಂಗಡಿಗರೆಲ್ಲ ಸ್ತ್ರೀಯರೂ ಸಹ—ಒಂದೊಂದು ಹಳ್ಳಿಯಲ್ಲಿ ಹೋಗಿ ನೆಲೆಸಿ ಅಲ್ಲಿನ ಹಿಂದುಗಳ ರಕ್ಷಣೆಗೆ ಹೊಣೆಯಾಗಬೇಕು ಸಮಯ ಬಂದರೆ ತಮ್ಮ ಪ್ರಾಣವನ್ನು ತೆರಬೇಕು. ಇದು ನನ್ನ ಸಂಗಡಿಗರಿಗೆ ಬಲಾತ್ಕಾರವಲ್ಲ. ಮುಸಲ್ಮಾನರ ಅತ್ಯಾಚಾರದಿಂದ ಅವರ ಮೇಲೂ ಇಸ್ಲಾಂ ಮೇಲೂ ಅಡಗಿಸಲಾಗದ ಕ್ರೋಧವನ್ನೂ ದ್ವೇಷವನ್ನೂ ಹೊಂದಿರುವವರು ಈ ಕಾರ್ಯದಲ್ಲಿ ಪ್ರವರ್ತಿಸಬೇಕಾದುದಿಲ್ಲ. ಅಂತಹವರಿಂದ ನನ್ನ ಧ್ಯೇಯಕ್ಕೆ ಅನುಸಾರವಾದ ಕೆಲಸವಾಗುವುದಿಲ್ಲ. ನನ್ನ ಮಟ್ಟಿಗೆ ನಾನು ಪೂರ್ವಬಂಗಾಳದಲ್ಲಿ ಹಿಂದು ಮುಸಲ್ಮಾನರು ಮೊದಲಿನಂತೆ ಮಿತ್ರರಾಗುವವರೆಗೆ ಇದ್ದೇ ಬಿಡುತ್ತೇನೆ. ನನ್ನ ಸಂಗಡಿಗರ ಸಹಾಯವೂ ನನಗೆ ಬೇಡ. ನಾನು ಹೀಗೆ ಮಾಡದಿದ್ದರೆ ನನ್ನ ಅಹಿಂಸೆ ಅಪೂರ್ಣವಾಗುತ್ತದೆ. ನನ್ನ ಒಬ್ಬ ಸ್ನೇಹಿತರು "ಅಹಿಂಸಾಪರಮೋಧರ್ಮ:" ತಪ್ಪು. ಹಿಂಸಾಪರಮೋಧರ್ಮ: ಸರಿ ಎಂದು ಹೇಳುತ್ತಿದ್ದರು. ಈ ಸಂದಿಗ್ಧಸಮಯದಲ್ಲಿ ನನಗೆ ಅಹಿಂಸೆಯಲ್ಲಿ ನಂಬಿಕೆ ತಪ್ಪಿದರೆ ನಾನು ಆ ಸ್ನೇಹಿತರ ಮಾತೇ ನಿಜವೆಂದು ನಂಬಬೇಕಾಗುತ್ತದೆ. ಬಂಗಾಳದ ಸ್ತ್ರೀಯರನ್ನು ನಾನು ಬಂಗಾಳಿಗಳಿಗಿಂತ ಚೆನ್ನಾಗಿ ಬಲ್ಲೆ. ಇಂದು ಅವರು ನಿಸ್ಸಹಾಯರಾಗಿದ್ದಾರೆ. ನನ್ನ ಮತ್ತು ನನ್ನ ಸಂಗಡಿಗರ ಆತ್ಮಾರ್ಪಣೆಯಿಂದ, ಅವರಿಗೆ ಆತ್ಮಗೌರವದಿಂದ ಸಾಯುವುದಾದರೂ ತಿಳಿಯುತ್ತದೆ. ಇದರಿಂದ ದೌರ್ಜನ್ಯಕಾರರ ಕಣ್ಣು ತೆರೆದು ಅವರ ಹೃದಯ ಕರಗಬಹುದು.

ನನ್ನ ಕಣ್ಣು ಮುಚ್ಚಿದಕೂಡಲೇ ಅವರ ಕಣ್ಣು ತೆರೆಯುವುದೆಂದು ನಾನು ಹೇಳುವುದಿಲ್ಲ. ಆದರೆ ಅದು ಕೊನೆಯ ಫಲವಾಗುತ್ತದೆ. ಅಹಿಂಸೆ ಮಾಯವಾದರೆ ಹಿಂದೂ ಧರ್ಮವೂ ನಾಶವಾಗುವುದೆಂಬುದ ರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ. ನಾನು ಇಲ್ಲಿ ತೊಡಗಿರುವ ಈ ಕಾರ್ಯ ನನ್ನ ಜೀವನದ ಕೊನೆಯ ಕಾರ್ಯವಾಗಬಹುದು. ಇಲ್ಲಿಂದ ನಾನು ಪೂರ್ಣನಾಗಿ ಹಿಂದಿರುಗಿದರೆ ನನಗೆ ಅದೊಂದು ಹೊಸಜನ್ಮ ವಾಗುತ್ತದೆ ನನ್ನ ಅಹಿಂಸೆ ಇಂದಿನಷ್ಟು ಹಿಂದೆ ಯಾವಾಗಲೂ ಪರೀಕ್ಷೆಗೆ ಒಳಗಾಗಿರಲಿಲ್ಲ".

## ಶ್ರೀರಾಮಪುರದಲ್ಲಿ

ಶ್ರೀರಾಮಪುರಕ್ಕೆ ಒಂಟಿಯಾಗಿ ಹೊರಟಾಗ ಗಾಂಧಿ ಹೀಗೆ ಹೇಳಿದರು "ನನ್ನ ಸುತ್ತ ಅತಿಶಯೋಕ್ತಿಗಳೇ ಕಾಣುತ್ತಿವೆ. ಸತ್ಯವನ್ನು ಅರಿಯುವುದೇ ನನಗೆ ಕಷ್ಟವಾಗಿದೆ. ಪರಸ್ಪರ ದ್ವೇಷ ಅಪನಂಬಿಕೆ ಗಳು ಮಿತಿಮೀರಿ ಬೆಳೆದಿವೆ. ಹಳೆಯ ಬಾಂಧವ್ಯಗಳಿಗೆಲ್ಲ ಸಂಚಕಾರ ವಾಗಿದೆ. 60 ವರುಷಗಳಿಂದ ನನ್ನ ರಕ್ಷಕನಾಗಿ ನನಗೆ ಬಲಕೊಟ್ಟ ಸತ್ಯ ಅಹಿಂಸೆಗಳು ತಮ್ಮ ನೆಚ್ಚಿನ ಗುಣಗಳನ್ನು ತೋರಿಸುತ್ತಿಲ್ಲ.

"ಸತ್ಯ ಅಹಿಂಸೆಗಳನ್ನು ಪರೀಕ್ಷಿಸಲು ಅಥವ ನನ್ನನ್ನೇ ಪರೀಕ್ಷಿ ಸಲು ನಾನು ಶ್ರೀರಾಮಪುರವೆಂಬ ಹಳ್ಳಿಗೆ ಹೋಗುತ್ತಿದ್ದೇನೆ. ನನ್ನ ಜತೆಗಾರರಾಗಿದ್ದ ನನ್ನ ಬಾಳನ್ನು ಹಗುರವಾಗಿ ಮಾಡಿದ ಸ್ನೇಹಿತ ರನ್ನೂ ಮಿತ್ರರನ್ನೂ ಬಿಟ್ಟುಹೋಗುತ್ತಿದ್ದೇನೆ. ಪ್ರೊಫೆಸರ್ ನಿರ್ಮಲ ಕುಮಾರ್ ಬೋಸರನ್ನು ನನಗೆ ಬಂಗಾಳಿ ತಿಳಿಯದುದರಿಂದ ಜತೆ ಯಲ್ಲಿ ಕರೆದುಕೊಂಡು ಹೋಗುತ್ತಿದ್ದೇನೆ. ನಿಸ್ವಾರ್ಥಿಯಾದ ಮೌನಿ ಯಾದ ಶೀಘ್ರಲಿಪಿಗಾರ ಪರಶುರಾಮ್ ಸಹ ನನ್ನ ಸಂಗಡ ಇದ್ದಾರೆ.

"ನನ್ನ ಜತೆಯಲ್ಲಿ ನವಖಲಿಗೆ ಬಂದಿರುವ ಇತರ ಕೆಲಸಗಾರರು ಈ ಶಾಂತಿಯ ಕಾರ್ಯಕ್ಕಾಗಿ ಪ್ರತಿಯೊಬ್ಬರೂ ಒಂದು ಹಳ್ಳಿಗೆ ಹೋಗುತ್ತಾರೆ. ಅಭಾಳಿಗೆ ಹೊರತು ಉಳಿದವರಿಗೆ ಬಂಗಾಳಿ ತಿಳಿಯುವು ದಿಲ್ಲ. ಆದುದರಿಂದ ಅವರೆಲ್ಲ ಒಬ್ಬ ದ್ವಿಭಾಷಿಯನ್ನು ಜತೆಯಲ್ಲಿ ಕರೆದುಕೊಂಡು ಹೋಗುತ್ತಾರೆ.

"ಈ ಕಾರ್ಯಕ್ಕಾಗಿ ನಾನೂ ಶ್ರೀ ಪ್ಯಾರಿಲಾಲರೂ ನಮ್ಮ ಎಲ್ಲ ಪತ್ರವ್ಯವಹಾರವನ್ನೂ ನಿಲ್ಲಿಸಿದ್ದೇವೆ. ಹರಿಜನ ಮತ್ತು ಅದಕ್ಕೆ ಸಂಬಂಧಿಸಿದ ವಾರಪತ್ರಿಕೆಗಳ ಸಂಪಾದಕತ್ವವನ್ನೂ ನಿಲ್ಲಿಸಿದ್ದೇವೆ. ಹೀಗೆ ಎಷ್ಟು ದಿವಸ ಎಂದು ನಾನು ಹೇಳಲಾರೆ. ಆದರೆ ಇಷ್ಟನ್ನು ಹೇಳಬಲ್ಲೆ. ಪೂರ್ವ ಬಂಗಾಳದಲ್ಲಿ ಎರಡು ಮತದವರಿಗೂ ಸ್ನೇಹ ಸೌಹಾರ್ದಗಳುಂಟಾಗಿ ಅವರು ಮೊದಲಿನಂತೆ ಸಮರಸವಾಗಿ ಜೀವಿಸಲು ಪ್ರಾರಂಭಿಸುವವರೆಗೆ, ನಾನು ಪೂರ್ವ ಬಂಗಾಳವನ್ನು ಬಿಡುವುದಿಲ್ಲ".

ಗಾಂಧಿಯವರು ಶ್ರೀರಾಮ ಪುರಕ್ಕೆ ಹೊರಡುವುದಕ್ಕೆ ಮುಂಚೆ ಒಬ್ಬ ಪತ್ರಿಕಾಬಾತ್ಮಿದಾರರು ಹೀಗೆ ಕೇಳಿದರು. "ಪುಂಡರುಗಳಿಂದ ತುಂಬಿರುವ ಹಳ್ಳಿಯಲ್ಲಿ ನೀವು ಈಗ ಒಬ್ಬರೇ ಹೋಗಿ ವಾಸಿಸುವುದರಿಂದ ನಿಮ್ಮ ಜೀವವನ್ನು ಅಪಾಯಕ್ಕೆ ಗುರಿಮಾಡುವುದಿಲ್ಲವೆ?" ಗಾಂಧಿ ಹೀಗೆ ಪ್ರತ್ಯುತ್ತರವಿತ್ತರು. "ನಾನು ಯಾರನ್ನೂ ಗೂಂಡ ಎಂದು ಭಾವಿಸುವುದಿಲ್ಲ. ಅಥವ ಎಲ್ಲರೂ ಗೂಂಡಗಳೇ. ಕೆಲವರು ಹೆಚ್ಚು, ಕೆಲವರು ಕಡಿಮೆ. ದೇವರಿಗೆ ನನ್ನ ಈ ದೇಹದ ಸೇವೆಯ ಆವಶ್ಯಕತೆ ಇರುವವರೆಗೆ ಈ ದೇಹಕ್ಕೆ ಅಪಾಯವಿಲ್ಲದಂತೆ ಅವನು ಇದನ್ನು ರಕ್ಷಿಸುವನೆಂದು ನನ್ನ ನಂಬಿಕೆ."

ನವಂಬರ್ 20 ನೆ ತಾರೀಖು ಗಾಂಧಿ ಶ್ರೀರಾಮಪುರದಲ್ಲಿ ಮೊದಲು ಪ್ರಾರ್ಥನಾ ಸಭೆ ನಡೆಸಿದರು. "ಹೇಡಿತನವನ್ನು ನಾನು ಸಹಿಸಲಾರೆ. ಒಬ್ಬ ಮನುಷ್ಯನಿಗೆ ಮತ್ತೊಬ್ಬನನ್ನು ಕಂಡರೆ ಭಯ ಯಾಕೆ? ಜನರು ದೇವರಿಗೆ ಮಾತ್ರ ಹೆದರಬೇಕು. ಆಗ ಇತರ ವಿಧವಾದ ಭಯವೆಲ್ಲ ಅವರಿಂದ ಮಾಯವಾಗುವುದು. ಪೋಲೀಸರ ಮೇಲೆ ಅವಲಂಬಿಸುವುದರಿಂದ ನಮ್ಮ ಅಶಕ್ತಿಯೇ ಹೆಚ್ಚಾಗುವುದು. ಒಂಟಿಯಾಗಿ ಹಳ್ಳಿಗಳಿಗೆ ಹೋಗುವ ನನ್ನಂತಹವರಿಂದ ನಿಮಗೆ ಧೈರ್ಯಬರಲಿ. ಸ್ತ್ರೀಯರೂ ಪುರುಷರಷ್ಟೇ ಧೈರ್ಯಶಾಲಿಗಳಾಗಬೇಕು. ಧೈರ್ಯ ಪುರುಷನಿಗೆ ಮಾತ್ರ ಸ್ವಂತವಾದ ಹಕ್ಕಲ್ಲ. ಆತ್ಮರಕ್ಷಣೆಯ ಕಲೆಗೆ ಇತರರ ಸಹಾಯ ಆವಶ್ಯಕವಿಲ್ಲ. ಜನರು ಪ್ರಾಣವನ್ನು ಉಳಿಸಿಕೊಳ್ಳಲು ಆತ್ಮಗೌರವಕ್ಕೆ

ವಿರೋಧವಾಗಿ ನಡೆಯುವುದು ನನ್ನ ಗಮನಕ್ಕೆ ಬಂದಿದೆ. ಆತ್ಮ ಗೌರವವನ್ನು ಕಾಪಾಡಿಕೊಳ್ಳಲು ಸಮಸ್ತವನ್ನೂ ತ್ಯಾಗಮಾಡಲು ಸಿದ್ಧರಾಗಿಲ್ಲದವರಿಗೆ ಸ್ವರಾಜ್ಯವೂ ಇಲ್ಲ. ಸ್ವದೇಶಿಯೂ ಇಲ್ಲ. ಯಾವ ಧರ್ಮದಲ್ಲಿಯೂ ಗುಂಡಗಳಿಗೆ ಅವಕಾಶವಿಲ್ಲ. ಪೂರ್ವ ಬಂಗಾಳದ ಹಿಂದ್ದು ಇಲ್ಲಿಯವರಿಗೆ ಧೈರ್ಯವನ್ನು ತುಂಬಲು ನಾನೂ ಬಂಗಾಳಿಯಾಗ ಬೇಕೆಂದು ಪ್ರಯತ್ನಿಸುತ್ತಿದ್ದೇನೆ.

"ನಾನು ಇಲ್ಲಿ ಮುಸಲ್ಮಾನರಿಗೆ ಮಾತ್ರ ಬೋಧಿಸಲು ಬಂದಿಲ್ಲ. ಹಿಂದುಗಳಿಗೂ ಬೋಧಿಸಲು ಬಂದಿದ್ದೇನೆ. ಹಿಂದೂಗಳಿಗೆ ಇಷ್ಟು ಹೇಡಿ ತನ ಯಾಕೆ? ಹಿಂದುಗಳು ಜಾತಿ ವ್ಯತ್ಯಾಸಗಳನ್ನು ಬಿಡಬೇಕು. ಈ ಅನ್ಯಾಯದಿಂದ ಅಸ್ಪೃಶ್ಯತೆ ಪೂರ್ಣವಾಗಿ ನಿರ್ನಾಮವಾಗಬೇಕು ....... ಬಲಾತ್ಕಾರವಾಗಿ ಮತಾಂತರ ಹೊಂದಿದವರು ಹಿಂದಕ್ಕೆ ಬರಬೇಕು. ನನಗೆ ಪರಮತ ಸಹಿಷ್ಣುತೆ ಯಾವಾಗಲೂ ಮೆಚ್ಚಿಗೆ. ನಾನು ಪರಮತ ಸಹಿಷ್ಣುತೆಯಿಂದ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದ್ದೇನೆ. ನನ್ನ ದೃಷ್ಟಿಯಲ್ಲಿ ಮತಗಳೆಲ್ಲ ಸಮಾನ. ಎಲ್ಲಾ ಮತಗಳೂ ಒಂದು ದೊಡ್ಡ ವೃಕ್ಷದ ರೆಂಬೆಗಳು. ಆದರೆ ಸಮಯ ಸಾಧಕತನದಿಂದ ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಗೆ ಹಾರಬಾರದು. ಹಾಗೆ ಮಾಡುವುದರಿಂದ ನಾವು ಕುಳಿತ ಕೊಂಬೆಯನ್ನೇ ನಾವು ಕಡಿದಂತಾ ಗುವುದು. ಆದುದರಿಂದ ಒಂದು ಮತದಿಂದ ಮತ್ತೊಂದು ಮತಕ್ಕೆ ಬದಲಾಯಿಸಿದರೆ ನನ್ನ ಮನಸ್ಸು ಬಹಳ ಖಿನ್ನವಾಗುವುದು. ನಿಜ ವಾದ ಧರ್ಮದೃಷ್ಟಿಯಿಂದ ಹೀಗೆ ಮಾಡಿದರೆ ಚಿಂತೆಯಿಲ್ಲ. ಹಾಗೆ ಧರ್ಮ ದೃಷ್ಟಿಯಿಂದ ಮಾಡುವುದು ಗುಂಪು ಗುಂಪಾಗಿಯಾಗಲಿ, ಆಸ್ತಿ ಮತ್ತು ಪ್ರಾಣಗಳನ್ನು ಉಳಿಸಿ ಕೊಳ್ಳುವುದಕ್ಕಾಗಿ ಅಥವ ಮತ್ತಾವ ಲಾಭಕ್ಕಾಗಿಯಾಗಿಲಿ ಆಗುವುದಲ್ಲ...... ಇಲ್ಲಿ ನಡೆದಿರುವುದು ಭಯಂ ಕರವಾಗಿದೆ, ಸಂಖೆ ಮುಖ್ಯವಾದುದಲ್ಲ. ಬಲಾತ್ಕಾರ, ಅಪಹರಣ ಬಲಾತ್ಕಾರ ಮತಾಂತರ ಇವು ಒಂದೊಂದು ನಡೆದಿದ್ದರೂ ಸಾಕು. ಇಂತಹ ಕಾರ್ಯಗಳು ನಡೆದಿವೆ ಎಂಬುದು ವ್ಯಕ್ತವಾದಂತಾಯಿತು. ಮತದ ಹೆಸರಿನಲ್ಲಿ ಇಲ್ಲಿ ನಡೆದಿರುವ ಅನ್ಯಾಯಗಳಿಗೆ ಕೊನೆ ಮೊದ

ಲಿಲ್ಲ. ಇದರಿಂದ ಪೂರ್ಣ ನಿರುತ್ಸಾಹವುಂಟಾಗಲು ಸಾಕು. ನನ್ನ ಬಾಲ್ಯದಿಂದಲೂ ನಾನು ಮನುಷ್ಯ ರೂಪಿನ ಪಿಶಾಚಿಗಳನ್ನು ಎದುರು ಗೊಂಡಿದ್ದೇನೆ. ಆದರೆ ಅವರನ್ನು ಸಹ ತಿದ್ದುವುದು ಸಾಧ್ಯ ಅವರ ಹೃದಯದ ಸರಿಯಾದ ತಂತಿಗಳನ್ನು ನಾವು ಮಿಡಿಯಬೇಕು......... ಪ್ರಜಾಪ್ರಭುತ್ವದಲ್ಲಿ ಮಿಲಿಟರಿ ಮತ್ತು ಪೋಲೀಸಿನ ಮೇಲೆ ಅವ ಲಂಬಿಸಬಾರದು. ಬಿಹಾರಿನಲ್ಲಿಯಾಗಲಿ ಬಂಗಾಳದಲ್ಲಿಯಾಗಲಿ ಜನರು ಧೈರ್ಯದಿಂದಿರುವುದನ್ನು ಕಲಿಯಬೇಕು. ತಮ್ಮ ಕಾಲುಗಳ ಮೇಲೆ ತಾವು ನಿಲ್ಲಬೇಕು. ಅದು ಪ್ರಜಾರಾಜ್ಯ, ಪ್ರತಿಯೊಬ್ಬರೂ ತಾವು ಇರುವಲ್ಲಿ ಧೈರ್ಯದಿಂದ ಮಡಿಯಬೇಕು....ನಾನೂ ಬಂಗಾಳ ದಿಂದ ಸೋತು ಹಿಂದಿರುಗಲು ಇಷ್ಟಪಡುವುದಿಲ್ಲ. ಆವಶ್ಯಕವಾದರೆ ನಾನೂ ಹತ್ಯಾಕಾರಿಯ ಕೈಯಿಂದ ಸಾಯುತ್ತೇನೆ. ಆದರೆ ನಾನು ಅದನ್ನು ಆಹ್ವಾನಿಸುವುದೂ ಇಲ್ಲ. ಅದು ಇಷ್ಟವೂ ಇಲ್ಲ.''

## ಕೆಲಸಗಾರರಿಗೆ ಪ್ರಾಣಾಪಾಯ

ಗಾಂಧಿಯವರ ಸಂಗಡಿಗರು ಒಬ್ಬೊಬ್ಬರಿಗೂ ಅಶಾಂತಿಯ ಆ ವಾತಾವರಣದಲ್ಲಿ ಅಪಾಯವಿದ್ದೇ ಇದ್ದಿತು. ಒಂದು ಸಲ ಪ್ಯಾರಿ ಲಾಲರು ಪ್ರಾಣವೇ ಹೋಗುವಂತಹ ಅಪಾಯಕ್ಕೆ ಸಿಕ್ಕಿಬಿದ್ದರು. ಅದು ತಿಳಿದು ಗಾಂಧಿ "ಇದು ಅತ್ಯಂತ ಅಪಾಯದ ಕಾರ್ಯವೆಂದು ನಾನು ಮೊದಲಿನಿಂದಲೂಹೇಳುತ್ತಲೇ ಬಂದಿದ್ದೇನೆ. ನಮ್ಮ ಜೀವ ಮಾನದಲ್ಲಿ ಇದಕ್ಕಿಂತ ಹೆಚ್ಚು ಅಪಾಯದ ಕಾರ್ಯ ನಮಗೆ ಸಂಭವಿಸು ವುದು ಅಸಂಭವ. ನಾವು ಪೂರ್ಣವಾಗಿ ದೇವರಲ್ಲಿ ಅವಲಂಬಿಸಬೇಕು. ಆತನ ಇಚ್ಛೆ ನಡೆಯಲಿ ...ಆದರೆ ಕಣ್ಣು ಮುಚ್ಚಿಕೊಂಡು ಅಪಾಯಕ್ಕೆ ನುಗ್ಗಬೇಡ. ನಿನ್ನ ಕಾರ್ಯದ ಮಾರ್ಗದಲ್ಲಿ ಯಾವ ಅಪಾಯ ಬಂದರೂ ಧೈರ್ಯವಾಗಿ ಎದುರುಗೊಳ್ಳು. ಹೀಗೆ ನಾವೆಲ್ಲರೂ ನಾಶ ವಾದರೂ ನಾನು ಅದನ್ನು ಹೆಚ್ಚಾಗಿ ಹಚ್ಚಿಕೊಳ್ಳುವುದಿಲ್ಲ. ನಾನಂತೂ ಹೆಚ್ಚು ಹೆಚ್ಚಾಗಿ ದೇವರ ಮೇಲೆಯೇ ಅವಲಂಬಿಸುತ್ತ ಹೋಗು ತ್ತಿದ್ದೇನೆ.

"ಕಾಂಗ್ರೆಸ್ಸು ಹಿಂದೂ ಸಂಸ್ಥೆಯಲ್ಲ. ಇತರ ಪಂಗಡಗಳಿಗೆ

ನಷ್ಟವನ್ನುಂಟುಮಾಡಿ ಹಿಂದುಗಳ ಲಾಭಮಾಡುವುದು ಕಾಂಗ್ರೆಸ್ಸಿನ ಗುರಿಯಲ್ಲ. ನನ್ನ ಕಾರ್ಯ ಈಗ ಎರಡು ಮತಗಳವರಿಗೂ ಸ್ನೇಹ ವನ್ನುಂಟುಮಾಡುವುದೇ ಹೊರತು, ಒಂದು ಮತಕ್ಕೆ ವಿರೋಧವಾಗಿ ಒಂದು ಮತವನ್ನು ವ್ಯವಸ್ಥೆಗೊಳಿಸುವುದಲ್ಲ. ಇಲ್ಲಿಯವರೆಗಿನ ನನ್ನ ಅಹಿಂಸೆ ದುರ್ಬಲರ ಅಹಿಂಸೆಯಾಗಿದ್ದಿತು. ಈಗಿನದು ಶಕ್ತರ ಅಹಿಂಸೆಯ ಪ್ರಯೋಗ. ಈ ಅಹಿಂಸೆ ಫಲಕಾರಿಯಾಗಬೇಕಾದರೆ, ಎರಡು ಪಂಗಡಗಳವರಿಗೂ ಹಿತವಾದ ನೀತಿಯ ವಾತಾವರಣ ಸೃಷ್ಟಿ ಯಾಗಬೇಕು. ಹಿಂದುಗಳೂ ಮುಸಲ್ಮಾನರೂ ಪರಸ್ಪರ ಭಯವನ್ನೂ ಸಂಶಯವನ್ನೂ ನೀಗಿದಾಗ ಮಾತ್ರ ಹೃದಯಗಳ ಒಗ್ಗಟ್ಟುಂಟಾಗು ವುದು. ಅವರ ಹೃದಯಗಳು ಒಗ್ಗಟ್ಟಾದನಂತರ ದ್ವೇಷದ ಕಾರಣ ವಿರುವುದಿಲ್ಲ.

"ಪೂರ್ವ ಬಂಗಾಳ ಸುವರ್ಣನಾಡು. ಆದರೆ ಜನರ ಬಾಳ್ವೆ ಇಲ್ಲಿ, ಹೇಗಿರಬೇಕೋ ಹಾಗೆ ಇಲ್ಲ. ಹಳ್ಳಿಯ ಕೆರೆಯ ನೀರು ಅತಿ ಕೊಳಕಾಗಿದೆ. ಅದರಲ್ಲಿ ಕೈತೊಳೆದುಕೊಳ್ಳುವುದು ಸಹ ಸಾಧ್ಯವಿಲ್ಲ. ಹಳ್ಳಿಗಳು ಬಹಳ ಅಶುದ್ಧವಾಗಿವೆ. ಧನಿಕರು ಹೆಚ್ಚು ಹೆಚ್ಚು ಧನಿಕ ರಾಗುತ್ತಿದ್ದಾರೆ. ಬಡವರು ಹೆಚ್ಚು ಹೆಚ್ಚು ಬಡವರಾಗುತ್ತಿದ್ದಾರೆ. ಇದನ್ನು ಪ್ರಕೃತಿ ನಿಮ್ಮ ಮೇಲೆ ಬಲಾತ್ಕಾರವಾಗಿ ಹೇರಿಲ್ಲ. ಇದು ಸಮಾಜದಲ್ಲಿಯ ಪೈಶಾಚಿಕ ಶಕ್ತಿಗಳ ಪ್ರಭಾವ. ಸಮಾಜದ ಪೈಶಾ ಚಿಕ ಶಕ್ತಿಗಳು ಹೀಗಿದ್ದರೂ ವ್ಯಕ್ತಿಗಳು ಹೀಗೆ ಇಲ್ಲ. ವ್ಯಕ್ತಿಗಳು ಸಮಾಜವನ್ನು ಉನ್ನತಿಗೆ ಏರಿಸಬೇಕು. ಸಮಾನತೆ ಸಮತೆ ಸೌಹಾರ್ದಗಳನ್ನು ವ್ಯಕ್ತಿಗಳು ಸಮಾಜದಲ್ಲಿ ಬೆಳೆಸಬೇಕು. ಹಿಂದು ಗಳೂ ಮುಸಲ್ಮಾನರೂ ಎಲ್ಲರೂ ಹಳ್ಳಿಗಳನ್ನು ಅಭಿವೃದ್ಧಿಮಾಡುವ ಸತ್ಕಾರ್ಯದಲ್ಲಿ ತೊಡಗಬೇಕು. ಹಳ್ಳಿಗಳ ಆರ್ಥಿಕಸ್ಥಿತಿ ಹೆಚ್ಚಬೇಕು. ಗ್ರಾಮ ಕೈಗಾರಿಕೆಗಳ ಮೂಲಕ ಹಿಂದು ಮುಸಲ್ಮಾನರು ಹಳ್ಳಿಗಳನ್ನು ಸಮಾನವಾಗಿ ಸೇವಿಸಬಹುದು. ರಚನಾತ್ಮಕ ಕಾರ್ಯಕ್ರಮದ 18 ಅಂಗಗಳನ್ನೂ ಕಾರ್ಯಕಾರಿ ಮಾಡಬೇಕು. ಇದರಿಂದ ಹಳ್ಳಿ ಗಳಿಗೆಲ್ಲಾ ಪುನರ್ಜೀವನವುಂಟಾಗುತ್ತದೆ."

## ಅಸ್ಪೃಶ್ಯತೆ ತೊಲಗಲಿ

ಚಾಂದಿಪುರದಲ್ಲಿ ಗಾಂಧಿ ಇಳಿದಿದ್ದ ಮನೆಯ ಆವರಣದಲ್ಲಿ ಸ್ತ್ರೀಯರು ಬಂದು ನೆರೆದಿದ್ದರು. ತಮ್ಮ ಸ್ಥಿತಿ ಗತಿಗಳನ್ನು ಹೇಳಿಕೊಂಡು ಅವರು ಎದೆಯೊಡೆಯುವಂತೆ ಕಲ್ಲುಕರಗುವಂತೆ ಅತ್ತರು. ಒಬ್ಬ ವೃದ್ಧ ಸ್ತ್ರೀ ಕಣ್ಣನ್ನೊರಸಿಕೊಳ್ಳುತ್ತಾ "ಮಹಾತ್ಮಜಿ. ನಾವು ಏನುಮಾಡಬೇಕು. ಹೇಳಿ. ನಮ್ಮ ಪ್ರಾಣ, ಮಾನ, ಪದಾರ್ಥಗಳಿಗೆ ರಕ್ಷಣೆಯಿಲ್ಲದಿರುವಾಗ ನಾವು ಹೇಗೆ ಹಳ್ಳಿಯಲ್ಲಿರುವುದು" ಎಂದು ಕೇಳಿದಳು. ಗಾಂಧಿಯವರು ಸಾವಧಾನದಿಂದ ಅವರ ಕಷ್ಟಗಳನ್ನು ಲಾಲಿಸಿದರು. ಧೈರ್ಯವಾಗಿರಿ ಎಂದರು. ಅಂತರೀಕ್ಷದ ಕಡೆ ಕೈತೋರಿಸುತ್ತಾ "ಆತನನ್ನು ನೆನೆದು ಅವನನ್ನೇ ಪ್ರಾರ್ಥಿಸಿ. ಅವನಿಗೆ ಮಾತ್ರ ಭಯಪಡಿ ಜಗತ್ತಿನಲ್ಲಿ ಮತ್ತಾರಿಗೂ ಹೆದರಬೇಡಿ ನಿಮ್ಮ ಶಕ್ತಿಯ ಮೇಲೆ ಮಾತ್ರ ಅವಲಂಬಿಸಿ. ಇತರರಮೇಲೆ ಅವಲಂಬಿಸಬೇಡಿ. ನೀವು ಇನ್ನೂ ಹೆಚ್ಚು ಧೈರ್ಯಶಾಲಿಗಳಾಗಬೇಕು. ನಿಮ್ಮ ಧೈರ್ಯದ ಮೇಲೆ ಹೆಚ್ಚು ನಂಬಿಕೆಯಿಡಿ. ನೀವು ಹೇಡಿಗಳಾದರೆ ದುರಾಚಾರಿಗಳಿಗೆ ಸುಲಭವಾಗಿ ಬಲಿಯಾಗುವಿರಿ. ಭಾರತದ ಸ್ತ್ರೀಯರು ಅಬಲೆಯರಲ್ಲ. ಪ್ರಾಚೀನಕಾಲದ ಅವರ ಸಾಹಸಗಳು ಶಕ್ತಿಯ ಸಾಹಸಗಳಲ್ಲ, ಅವರ ಸಾಹಸಗಳು ಶೀಲಸಾಹಸಗಳು. ಇಂದೂ ಸ್ತ್ರೀಯರು ದೇಶವನ್ನು ಅನೇಕ ರೀತಿಯಲ್ಲಿ ಸೇವಿಸಬಹುದು. ದೇಶ ತನ್ನ ಗುರಿಯನ್ನು ಮುಟ್ಟಲು ಸಾಧಕವಾದ ಯಾವುದಾದರೂ ಉಪಯುಕ್ತಕಾರ್ಯದಲ್ಲಿ ಅವರು ತೊಡಗಬಹುದು. ಅದರಿಂದ ಅವರಿಗೂ ಪ್ರಯೋಜನವಾಗುವುದು. ನವಖಲಿಯಲ್ಲಿ ನಡೆದುದಕ್ಕೆ ಪುರುಷರು ಮಾತ್ರವೇ ಹೊಣೆಗಾರರಲ್ಲ. ಸ್ತ್ರೀಯರೂ ಹೊಣೆಗಾರರು. ಸ್ತ್ರೀಯರು ಅಧೈರ್ಯವನ್ನು ಬಿಡಬೇಕು. ದ್ರೌಪದಿ ಸೀತೆಯರಂತೆ ಧೀರೆಯರಾಗಬೇಕು. ಅಸ್ಪೃಶ್ಯತೆಯನ್ನು ತೊಲಗಿಸಬೇಕು. ಅಸ್ಪೃಶ್ಯತೆಗೆ ಅಂಟಿಕೊಂಡು ಹೋದರೆ ನಿಮ್ಮ ದುಃಖ ಹೆಚ್ಚುತ್ತಲೇ ಹೋಗುವುದು. ಹರಿಜನರನ್ನು ನಿಮ್ಮೊಂದಿಗೆ ಸಹಪಂಕ್ತಿ ಭೋಜನಕ್ಕೆ ಆಹ್ವಾನಿಸಿ ಅದೂ ಸಾಧ್ಯವಿಲ್ಲದಿದ್ದರೆ ನಿಮ್ಮ ಆಹಾರವನ್ನೂ ನೀರನ್ನೂ ಒಂದು

ಸಲ ಸ್ಪರ್ಶಿಸುವಂತೆ ಹರಿಜನರನ್ನು ಆಹ್ವಾನಿಸಿ. ಕೃತಕವಾದ ಜಾತಿ ವ್ಯತ್ಯಾಸಗಳು ಇದರಿಂದ ಬಹಳಮಟ್ಟಿಗೆ ನಿರ್ಮೂಲವಾಗುವುವು. ನಮ್ಮ ಪಾಪಕ್ಕೆ ನಾವು ಹಾಗೆ ಪ್ರಾಯಶ್ಚಿತ್ತಮಾಡಿಕೊಳ್ಳದಿದ್ದರೆ ಮುಂದೆ ನಮಗೆ ಇನ್ನೂ ಹೆಚ್ಚು ಆಪತ್ತು ಉಂಟಾಗುವುದು."

## ವಿದ್ಯೆ, ಆತ್ಮಾವಲಂಬನೆಯನ್ನು ಕಲಿಸಬೇಕು

ಮರುದಿವಸ ಗಾಂಧಿ ಒಂದು ಪಾಠಶಾಲೆಯ ಪ್ರಾರಂಭೋತ್ಸವವನ್ನು ನೆರವೇರಿಸಿದರು. "ಈ ಪಾಠಶಾಲೆಯಲ್ಲಿ ಕಲಿಸುವ ವಿಷಯಗಳಾವುವು? ಯಾವುದಾದರೂ ಕುಶಲ ಕಲೆ ಕೈಗಾರಿಕೆ ಕಲಿಸುತ್ತೀರಾ" ಎಂದು ಗಾಂಧಿ ವಿಚಾರಿಸಿದರು. "ಪಾಠಶಾಲೆಗಳು ಹಿಂದಲಂತೆ ನಡೆದರೆ ಪ್ರಯೋಜನವಿಲ್ಲ. ಕುಶಲ ವಿದ್ಯೆ ಕೈಗಾರಿಕೆಯು ಪ್ರವೇಶವಾಗಬೇಕು. ನಯೀ ತಾಲೀಮ್ ಮಾರ್ಗವನ್ನು ಅನುಸರಿಸಿದರೆ ಕುಶಲ ವಿದ್ಯೆಯಲ್ಲಿ ಶಿಕ್ಷಣ ಕೊಡಬಹುದು. ವಿದ್ಯೆಯ ಗುರಿಯು ವಿದ್ಯಾರ್ಥಿಯನ್ನು ಆತ್ಮಾವಲಂಬಿಯಾಗಿ ಮಾಡುವುದಾಗಿರಬೇಕು. ನಮ್ಮನಿತ್ಯ ಜೀವನದ ಸಣ್ಣ ಸಂಗತಿಗಳಿಗೆ ನಾವು ಸರಿಯಾಗಿ ಗಮನವಿಟ್ಟರೆ ನಮ್ಮದೇಶ ಸ್ವರ್ಗವಾಗುವುದು. ಬಂಗಾಳ ದೇಶ ಜಲಸಮೃದ್ಧವಾದ ಫಲವತ್ತಾದ ಭೂಮಿ. ಆದರೆ ಅಜ್ಞಾನದಿಂದ ಜನರು ಇಲ್ಲಿ ದುಃಖವನ್ನೂ ಕಷ್ಟವನ್ನೂ ಅನುಭವಿಸುತ್ತಿದ್ದಾರೆ. ತೆಂಗಿನ ತೋಟ, ವಿಳೆದೆಲೆ ವ್ಯವಸಾಯದಿಂದ ಏನು ಸಂಪಾದನೆಯಾಗುತ್ತೋ ಅದರಿಂದಲೇ ನೀವು ತೃಪ್ತರಾಗಿರುವಂತೆ ತೋರುತ್ತೀರಿ. ಆದರೆ ಸರಿಯಾದ ಜ್ಞಾನಾರ್ಜನೆಯಿಂದ ಭೂಮಿಯ ಉತ್ಪತ್ತಿಯನ್ನು ಇನ್ನೂ ಅನೇಕ ಪಾಲು ಹೆಚ್ಚಿಸಬಹುದು. ಹಳ್ಳಿಗಳನ್ನು ಹೆಚ್ಚು ಪರಿಶುದ್ಧವೂ ಸುಖಕರವೂ ಆಗಿ ಮಾಡಬಹುದು. ಹಳ್ಳಿಯವರೆಲ್ಲಾ ಒಗ್ಗಟ್ಟಿನಿಂದ ಕಾರ್ಯಮಾಡಿದರೆ ಇದರ ಸ್ವರೂಪವೇ ಬದಲಾಯಿಸುವುದು".

ಮರುದಿವಸ ಗಾಂಧಿ ಹೀಗೆ ಹೇಳಿದರು "ಪ್ರಾರ್ಥನಾ ಸಭೆಗಳಿಗೆ ಬರುವ ಹಿಂದುಗಳ ಮತ್ತು ಮುಸಲ್ಮಾನರ ಸಂಖೆ ಕಡಿಮೆಯಾಗುತ್ತಿದೆ. ಪ್ರಾಯಶಃ ಯಾರೂ ಬಾರದೆ ಹೋಗುವ ಒಂದು ದಿನವೂ ಬರಬಹುದು. ಆದರೂ ನಾನು ನಿರುತ್ಸಾಹದಿಂದ ನನ್ನ ಕಾರ್ಯವನ್ನು

ಬಿಡುವವನಲ್ಲ. ನಾನು ಚರಕವನ್ನು ಹಿಡಿದುಕೊಂಡು ಊರಿಂದ ಊರಿಗೆ ಹೊರಡುತ್ತೇನೆ. ನನ್ನ ಮಟ್ಟಿಗೆ ಇದೇಯೆ ಭಗವಂತನಸೇವೆ ನಿಸ್ವಾರ್ಥತೆಯಿಂದ ಮಾಡುವ ಇಂತಹ ಕಾರ್ಯದಿಂದ ಸುತ್ತ ಇರುವವರ ಮೇಲೆ ಬಹಳ ಪರಿಣಾಮವಾಗುವುದು. ಹಳ್ಳಿಗಳಲ್ಲಿ ಸ್ವಚ್ಛತೆಯನ್ನೂ, ಬಾಳನ್ನು ಪೂರ್ಣಮಾಡುವ ಇತರ ಕಲೆ ಕೈಗಾರಿಕೆಗಳನ್ನು ಕಲಿಸುತ್ತ ತಿರುಗುವವನನ್ನು ಹಳ್ಳಿಯುವರು ಆದರಿಸುವರೇ ಹೊರತು ತಿರಸ್ಕರಿಸುವುದಿಲ್ಲ.

"ಸಮಾಧಾನ ಎಂಬ ಮಾತಿಗೆ ಕೆಟ್ಟವಾಸನೆ ಬಂದಿದೆ. ಮಾನವನ್ನು ಕಳೆದುಕೊಂಡು ಸಮಾಧಾನಪಡಿಸುವುದು ಎಂದೂ ಸಾಧ್ಯವಿಲ್ಲ. ನಿರ್ಭಯವಾಗಿ ಬಂದದ್ದು ಬರಲಿ ಎಂದು ನ್ಯಾಯವಾದ ಕಾರ್ಯವನ್ನು ಮಾಡುವುದೇ ಸಮಾಧಾನದ ಮಾರ್ಗ"

೩

ಹೀಗೆ ಸುಮಾರು ಹದಿನೈದು ದಿನಗಳು ಶ್ರೀರಾಮಪುರ ಮತ್ತು ಅದರ ಸುತ್ತ ಸಂಚರಿಸಿ, ಅನಂತರ ಗಾಂಧಿಯವರು ದಿನವೂ ಒಂದೊಂದು ಹಳ್ಳಿಗೆ ಹೋಗ ತೊಡಗಿದರು. ಆ ಪ್ರಯಾಣ ಕಾಲದಲ್ಲಿ ಅವರು ಹೊರಗಿನ ಪ್ರಪಂಚದೊಂದಿಗೆ ಸಂಬಂಧವನ್ನು ಪೂರ್ಣವಾಗಿ ತೊರದೇ ಬಿಟ್ಟರು. ಪತ್ರವ್ಯವಹಾರ ದರ್ಶನ ಇವುಗಳನ್ನು ಪೂರ್ತಿ ನಿಲ್ಲಿಸಿಬಿಟ್ಟರು. ಪ್ರತಿಹಳ್ಳಿಯಲ್ಲಿಯೂ ಕಷ್ಟಕ್ಕೆ ಒಳಗಾದವರನ್ನು ಮಾತ್ರ ವಿಚಾರಿಸುತ್ತಾ ಹೋಗತೊಡಗಿದರು. ಜತೆಯಲ್ಲಿ ಗಾಂಧಿ ಹಳ್ಳಿಗಳ ಜೀವನಕ್ಕೆ ಸಂಬಂಧಪಟ್ಟ ಅನೇಕ ಹೊಸ ಹೊಸ ವಿಷಯಗಳನ್ನೂ ಅಂಕಿ ಅಂಶಗಳನ್ನೂ ಸಂಗ್ರಹಿಸುತ್ತಿದ್ದರು. ಆ 'ಹಳ್ಳಿಯಿಂದ ಹಳ್ಳಿಗೆ' ಪ್ರಯಾಣದಲ್ಲಿ ಅವರ ಸ್ವಂತ ಪದಾರ್ಥಗಳ ಸಂಖೆ ಇನ್ನೂ ಕಡಿಮೆಯಾಯಿತು. ಒಂದು ಕಂಬಳಿ ಭಗವದ್ಗೀತೆ ಕುರಾನ್ ಬೈಬಲ್ ಇಷ್ಟೇ ಅವರ ಪದಾರ್ಥಗಳಾದವು. ಅವರ ಊರುದೊಣ್ಣೆಯೇ ಅವರ ಮಿತ್ರನಾಯಿತು. ಅವರು ಯಾವ ಕಷ್ಟವನ್ನೂ ಆ ವಯಸ್ಸಿನಲ್ಲಿಯೂ ಸಹಿಸಲು ಸಿದ್ಧರಾಗಿದ್ದರು. ಹಿಂದು ಮುಸಲ್ಮಾನ

ಸೌಹಾರ್ದದ ಜತೆಗೆ ಗಾಂಧಿಜಿ ಗ್ರಾಮಪುನರುಜ್ಜೀವನ ಮಂತ್ರವನ್ನೂ, ನಿರ್ನಾಮವಾಗುತ್ತಿದ್ದ ಹಳ್ಳಿಯವರಿಗೆ ಬೋಧಿಸುತ್ತಾ ಹೋಗುತ್ತಿದ್ದರು. ಹಳ್ಳಿಯವರು ಒದಗಿಸಿದ ಆಹಾರವನ್ನೇ ಗಾಂಧಿ ತೆಗೆದುಕೊಳ್ಳುತ್ತಿದ್ದರು ಹಾಲು ಸಿಕ್ಕದಿದ್ದ ದಿನಗಳೂ ಇದ್ದವು.

ಮಾಸಿಮ್‌ಪುರ್‌ದಲ್ಲಿ ಗಾಂಧಿ, ಗ್ರಾಮಸೇವಾ ಸಂಘದ ಸದಸ್ಯರೊಂದಿಗೆ ಮಾತನಾಡುತ್ತಾ "ಜನರು ಹೃದಯವನ್ನು ಶುದ್ಧಿಪಡಿಸಿಕೊಳ್ಳಬೇಕು. ಬಾಹ್ಯ ಆಡಂಬರವನ್ನು ಬಿಡಬೇಕು" ಎಂದರು. ಯಜ್ಞೋಪವೀತವನ್ನು ಕುರಿತ ಒಂದು ಪ್ರಶ್ನೆಗೆ ಉತ್ತರ ಕೊಡುತ್ತಾ "ಇಷ್ಟವುಳ್ಳವರು ಯಜ್ಞೋಪವೀತ ಧರಿಸಬಹದು. ಆದರೆ ಅದಕ್ಕಾಗಿ ಚಳವಳಿ ಪ್ರಚಾರ ಅಗತ್ಯವಿಲ್ಲ. ಆರ್ಯ ಸಮಾಜದವರು ಹೇಳುವಂತೆ ಹಿಂದುಗಳೆಲ್ಲ ಯಜ್ಞೋಪವೀತವನ್ನು ಧರಿಸಿದರೂ ಹಿಂದೂ ಧರ್ಮದಲ್ಲಿರುವ ಕುಂದುಗಳು ನಾಶನಾಗುವುದಿಲ್ಲ" ಎಂದರು.

ಫೇಟ್‌ಪುರ್ ಎಂಬಲ್ಲಿ ಗಾಂಧಿಯವರನ್ನು ಕೆಲವು ಸಹೋದರಿಯರು ಎದುರುಗೊಂಡರು. ಗಾಂಧಿವರಿಗಾಗಿಯೇ ತಾವು ತಯಾರಿಸಿದ್ದ ಸಿಹಿತಿಂಡಿಗಳನ್ನು ಅವರಿಗೆ ಕೊಡಬಯಸಿದರು. ಗಾಂಧಿಯವರು "ನನ್ನ ಹಸಿವು ನಾಲಗೆಯ ಸಿಹಿತಿಂಡಿಗಳಿಗಾಗಿ ಅಲ್ಲ. ಹೃದಯದ ತಿಂಡಿಗಳಿಗಾಗಿ. ನನ್ನಿಂದ ಯಾರಿಗೂ ಭಾರವಾಗದೆ ಇರಲಿ. ನನಗೆ ತಂಗಲು ನೀವು ಸ್ಥಳಕೊಡುವುದೇ ಸಾಕು. ನನ್ನ ಆಹಾರದ ವೆಚ್ಚವನ್ನು ನಿಮ್ಮಮೇಲೆ ಹಾಕುವುದಿಲ್ಲ. ನನ್ನ ಆಹಾರ ನನ್ನಕೈಯಲ್ಲಿಯೇ ಇದೆ. (ನಮ್ಮ ಆಹಾರ ತಂದಿದ್ದೇವೆ) ಇನ್ನು ಪ್ರಯಾಣದ ವೆಚ್ಚವನ್ನೆಲ್ಲ ಪ್ರಿಯ ಸ್ನೇಹಿತರು ವಹಿಸಿದ್ದಾರೆ" ಎಂದರು.

## ನಾನು ಬುದ್ಧನಲ್ಲ

ನಾರಾಯಣಪುರದಲ್ಲಿ ಗಾಂಧಿಯವರನ್ನು ಹೀಗೆ ಕೇಳಿದರು. "ಅಹಿಂಸಾಗುರು, ಆಧುನಿಕ ಬುದ್ಧರಾದ ನೀವು ಈ ರಕ್ತಪಾತವನ್ನು ಯಾಕೆ ತಪ್ಪಿಸಲಾರಿರಿ?" ಎಂದು ಗಾಂಧಿಯವರು "ನಾನು ಆಧುನಿಕ ಬುದ್ಧನಲ್ಲ. ನಾನು ಒಬ್ಬ ವ್ಯಕ್ತಿ. ನನ್ನ ಅನುಭವಗಳು ವಿಶಾಲವಾಗಿ ಆಳವಾಗಿವೆ. ಆದರೆ ಆ ಕಾರಣದಿಂದ ನಾನು ಇತರರಿಗಿಂತ

ಹೆಚ್ಚಿನವನೆಂದು ಹೇಳಲಾರೆ. ನಾನು ಭಾರತದ ಎಲ್ಲ ಮತಗಳಿಗೂ ಸಮಾನಮಿತ್ರ. ಈ ರಕ್ತಪಾತವನ್ನು ತಪ್ಪಿಸುವ ಶಕ್ತಿ ನನಗೆ ಇದ್ದಿದ್ದರೆ ಒಳ್ಳೆಯದಾಗುತ್ತಿದ್ದಿತು. ಬುದ್ಧನೇ ಮೊದಲಾದ ಇತರ ಗುರುಗಳು ತಮಗೆ ತಿಳಿದ ಮಾರ್ಗದಲ್ಲಿ ಯುದ್ಧಗಳನ್ನು ನಿಲ್ಲಿಸಿದರು. ನನ್ನಿಂದ ಅದು ಸಾಧ್ಯವಾಗದುದೇ ನನಗೆ ಯಾವ ಅದ್ಭುತಶಕ್ತಿಯೂ ಇಲ್ಲವೆಂಬುದಕ್ಕೆ ಗುರುತು. ನಾನು ಅಹಿಂಸೆಯ ಪೂಜಾರಿ ನಿಜ. ಅಹಿಂಸೆಯ ಶಕ್ತಿಯನ್ನು ಕಂಡುಹಿಡಿಯಲು ಇಲ್ಲಿಗೆ ಬಂದಿದ್ದೇನೆ.''

ಮರುದಿನ ಗಾಂಧಿಯವರ ಮೌನದಿನವಾದುದರಿಂದ ಅವರು ತಮ್ಮ ಸಂದೇಶ ವನ್ನು ಬರೆದುಕೊಟ್ಟರು. ಅದು ಹೀಗೆ ಇತ್ತು.

" ನಾನು ಅಷ್ಟುದಿನಗಳಿಂದ ಹೇಳಲು ಪ್ರಯತ್ನಿಸುತ್ತಿರುವುದೆಲ್ಲ ಮಹಮ್ಮದ್ ಪೈಗಂಬರರ ಈ ವಾಕ್ಯಗಳಲ್ಲಿ ಅಡಕವಾಗಿವೆ.''

" ತನಗೆ ಏನು ಆಗಬೇಕೋ ಅದು ಇತರರಿಗೂ ಆಗಬೇಕೆಂದು ಬಯಸದ ವನು ನಿಜವಾದ ಮುಸಲ್ಮಾನನಲ್ಲ.

ಕಾರ್ಯತತ್ಪರನಾಗಿರಬೇಕು—ತನಗಾಗಿಯಾಗಲಿ ಇತರರಿಗಾಗಿಯಾಗಲಿ ಕಾರ್ಯ ಮಾಡದವನಿಗೆ ದೇವರಿಂದ ಸನ್ಮಾನ ದೊರೆಯುವುದಿಲ್ಲ.

" ಸುಳ್ಳು ಹೇಳುವವನೂ, ವಾಗ್ದಾನಕ್ಕೆ ತಪ್ಪುವವನೂ ನಂಬಿಕೆಗೆ ದ್ರೋಹ ಮಾಡುವವನೂ ನನ್ನವನಲ್ಲ. ಅವನು ನನ್ನಮೇಲೆ ದಂಗೆ ಎದ್ದವ."

" ಯಾರು ನಂಬಿಕೆಗೆ ಅರ್ಹರಾಗಿ ನಡೆಯುತ್ತಾರೆಯೋ, ವಾಗ್ದಾನವನ್ನು ಪಾಲಿಸುತ್ತಾರೆಯೋ ಅವರೇ ನಿಜವಾದ ಮುಸಲ್ಮಾನರು."

" ಭಗವಂತನ ಸೃಷ್ಟಿಯಲ್ಲಿ ಯಾರಿಗೆ ಕರುಣೆಯೋ ಅವರಲ್ಲಿ ಭಗವಂತನಿಗೂ ಕರುಣೆ.''

" ಯಾರ ಬಾಯಿಂದಲೂ ಕೈಯಿಂದಲೂ ಮನುಷ್ಯ ಪ್ರಪಂಚಕ್ಕೆ ಅಪಾಯ ವಿಲ್ಲವೋ ಅವನೇ ನಿಜವಾದ ಮುಸಲ್ಮಾನ."

" ವಿದ್ಯಾವಂತನಾದ ದುಷ್ಟನು ಮನುಷ್ಯರಲ್ಲೆಲ್ಲ ಕೆಟ್ಟವನು. ಒಳ್ಳೆಯವನಾದ ವಿದ್ಯಾವಂತನು ಮನುಷ್ಯರಲ್ಲೆಲ್ಲ ಶ್ರೇಷ್ಠನು."

" ಮನುಷ್ಯನು ವ್ಯಭಿಚಾರಮಾಡಿದರೆ ದೇವರು ಅವನನ್ನು ಬಿಟ್ಟು ಹೋಗುತ್ತಾನೆ."

"ವ್ಯಭಿಚಾರಮಾಡುವವನೂ ಕದಿಯುವವನೂ ಕುಡಕನೂ ಲೂಟಿಗಾರನೂ ಮೋಸಗಾರನೂ ಮುಸಲ್ಮಾನನಲ್ಲ. ಎಚ್ಚರಿಕೆ ಎಚ್ಚರಿಕೆ."

"ತನ್ನನ್ನು ತಾನು ಜಯಿಸುವುದೇ ಅತ್ಯುತ್ತಮವಾದ ಜೆಹೆಡ್."

"ತುಳಿಯಲ್ಪಟ್ಟವನು ಮುಸಲ್ಮಾನನಾಗಲಿ ಮುಸಲ್ಮಾನೇತರನಾಗಲಿ ಅವನಿಗೆ ಸಹಾಯಮಾಡು"

"ನನ್ನ ಅನುಯಾಯಿಗಳು ನಪುಂಸಕರಾಗುವುದು ಇಂದ್ರಿಯನಿಗ್ರಹದಿಂದಲೂ ಹಸಿವಿನಿಂದಲೂ."

"ಸ್ತ್ರೀ, ಪುರುಷನ ಅರ್ಧಾಂಗಿ."

"ತಿಳಿದುದನ್ನು ಆಚರಿಸುವವರೇ ಜ್ಞಾನಿಗಳು."

"ಸದ್ಗುಣವಂತಳಾದ ಸ್ತ್ರೀ, ಜಗತ್ತಿನಲ್ಲಿ ಅತ್ಯಮೂಲ್ಯವಸ್ತು."

ನಿನ್ನ ಹೆಂಡತಿಗೆ ಒಳ್ಳೆಯ ಸಲಹೆಕೊಡು. ಅವಳಲ್ಲಿ ಒಳ್ಳೆಯ ಗುಣವಿದ್ದರೆ ಆಕೆ ಆ ಸಲಹೆಯಂತೆ ನಡೆಯುತ್ತಾಳೆ ಅಪ್ರಕೃತವಾದ ಆಲೋಚನೆಗೆ ಒಳಗಾಗ ಬೇಡ. ಮಾನನೀಯಳಾದ ನಿನ್ನ ಹೆಂಡತಿಯನ್ನು, ಗುಲಾಮರನ್ನು ಹೊಡೆಯುವಂತೆ ಹೊಡೆಯಬೇಡ.'

## ಬರಿಯ ವಿದ್ಯೆ ಸಾಲದು

ಮರುದಿವಸ ಗಾಂಧಿಯವರು ಸಭೆಯಲ್ಲಿ ಮಾತನಾಡುತ್ತಾ "ಸ್ತ್ರೀಯರೆಲ್ಲ ಅಕ್ಷರಸ್ಥರಾಗಬೇಕೆಂದು ಜಿನ್ನಾ ಹೇಳಿದ್ದಾರೆ. ಅದು ಸರಿ. ಆದರೆ ಅದಷ್ಟೇ ಸಾಲದು. ಅಕ್ಷರ ಕಲಿತ ಮಾತ್ರಕ್ಕೆ ಗಂಡಸರು ಉತ್ತಮರಾಗಿದ್ದಾರೆಯೆ ? ಅವರು ರಾಜಕೀಯದ ಚದುರಂಗದ ಕಾಯಿ ಗಳಾಗುವುದಿಲ್ಲವೆ? ಬರಿಯ ಅಕ್ಷರಜ್ಞಾನದಿಂದ ಮನುಷ್ಯನಾಗುವುದಿಲ್ಲ. ಬಾಳನ್ನು ನಡೆಸಲು ಅರ್ಹವಾದ ಜ್ಞಾನ ಬೇಕು. ನೀವು ಸರ್ವಜ್ಞ ರಾದರೂ ನಿಮ್ಮ ನೆರೆಹೊರೆಯವರೊಂದಿಗೆ ಹೇಗೆ ಬಾಳಬೇಕೆಂಬುದು ನಿಮಗೆ ತಿಳಿಯದಿದ್ದರೆ ನಿಮ್ಮ ವಿದ್ಯದಿಂದ ಪ್ರಯೋಜನವೇನು ? ಬರಿ ಓದುವುದು ಬರೆಯುವುದು ನಿಮಗೆ ತಿಳಿದರೆ ಸಾಲದು ಗುಲಾಮಗಿರಿ ಯಲ್ಲಿಯೂ ಅಜ್ಞಾನದಲ್ಲಿಯೂ ಮೂಢಭಕ್ತಿಯಲ್ಲಿಯೂ ಇರುವ ನಿಮ್ಮ ಮಹಿಳೆಯರನ್ನು ಉದ್ಧಾರಮಾಡಿ, ಜನರು ಸೌಹಾರ್ದದಿಂದ ಸರ್ವರ ಹಿತಕ್ಕಾಗಿ ಕಾರ್ಯಮಾಡಬೇಕು. ಇದಕ್ಕೆ ರಾಜಕೀಯ ಮುಂದಾಳುಗಳ

ಮೇಲುಪಂಗ್ತಿಗಾಗಿ ಕಾಯುಬಾರದು. ನಿಮ್ಮ ಆತ್ಮಗಳನ್ನೂ ದೇವರನ್ನೂ ದೃಷ್ಟಿಯಲ್ಲಿಟ್ಟುಕೊಳ್ಳಿ. ತಪ್ಪು ಮಾಡಿರುವವರು ಪಶ್ಚಾತ್ತಾಪದಿಂದ ದೇವರಲ್ಲಿ ಕ್ಷಮೆ ಯಾಚಿಸಿ. ದೇವರು ಕ್ಷಮಿಸುವನು ಮನುಷ್ಯರು ಕ್ಷಮಿಸದಿದ್ದರೂ ದೇವರಲ್ಲಿ ನಂಬಿಕೆಯಿಟ್ಟು ಶಿಕ್ಷೆಯನ್ನನುಭವಿಸುವವನ ಬಾಳು ಉನ್ನತಿಗೇರುವುದು. ಮಾಡಿದ ತಪ್ಪನ್ನು ಸರಿಮಾಡದೆ ಎಂದಿಗೂ ಬಿಡಕೂಡದೆಂದು ಮುಹಮ್ಮದ್ ಪೈಗಂಬರ್ ಹೇಳಿದ್ದಾರೆ.

## ನೇತಾಜಿ, ಧೀರರು

ಮರುದಿನದ ಪ್ರಾರ್ಥನಾ ಸಭೆಯಲ್ಲಿ ಗಾಂಧಿಜಿ ನೇತಾಜಿ ಬೋಸರನ್ನು ಕುರಿತು ಪ್ರಶಂಸೆಯ ಮಾತುಗಳನ್ನಾಡಿದರು " ನೇತಾಜಿ ಜಾತಿವ್ಯತ್ಯಾಸಗಳನ್ನು ಪೂರ್ಣವಾಗಿ ನಾಶಮಾಡಿದರು. ಅವರು ಬರಿಯ ಹಿಂದು ಅಥವ ಬಂಗಾಳಿಯುವರಾಗಿರಲಿಲ್ಲ. ತಾವು ಸವರ್ಣ ಹಿಂದುಗಳೆಂಬ ದೃಷ್ಟಿಯಿಂದ ನೇತಾಜಿ ಯೋಚಿಸಲೇ ಇಲ್ಲ. ಅಷ್ಟೇ ಅಲ್ಲ. ತಮ್ಮ ಸಮೀಪಕ್ಕೆ ಬಂದವರಿಗೆಲ್ಲ ಅವರು ಇದೇ ಸ್ಫೂರ್ತಿಯನ್ನು ಮೂಡಿಸಿದರು. ಅವರ ನೇತೃತ್ವದಲ್ಲಿ ಭಾರತೀಯರು ಜಾತಿ ವ್ಯತ್ಯಾಸಗಳನ್ನು ಮರೆತು ತಾವೆಲ್ಲರೂ ಒಬ್ಬರೇ ಎಂಬಂತೆ ಕಾರ್ಯ ಮಾಡುತ್ತಿದ್ದರು. ನೇತಾಜಿ ಬಾಲ್ಯದಿಂದಲೂ ತ್ಯಾಗಿ. ಅವರು ದೇಶಬಂಧು ದಾಸರ ಪಟ್ಟಶಿಷ್ಯರು ಅವರಿಗೆ ಅನೇಕ ಸಲ ಸೆರೆಯವಾಸ ಲಭಿಸಿತು. ಅವರು ಎರಡು ಸಲ ಕಾಂಗ್ರೆಸ್ ಅಧ್ಯಕ್ಷರಾದರು. ಬಂಗಾಳ ಸರ್ಕಾರದ ಬಂಧನದಿಂದ ಧೈರ್ಯದಿಂದಲೂ ತಂತ್ರದಿಂದಲೂ ತಪ್ಪಿಸಿಕೊಂಡು ಕಾಬೂಲನ್ನು ಸೇರಿ ಯೂರೋಪ್ ದೇಶಗಳನ್ನು ಹೊಕ್ಕು ಕೊನೆಯಲ್ಲಿ ಜಪಾನಿಗೆ ಹೋದರು. ಅಲ್ಲಿ ದಿಕ್ಕಾಪಾಲಾಗಿ ಚಲ್ಲಾಪಿಲ್ಲಿಯಾಗಿದ್ದ ಭಾರತ ವೀರರನ್ನೆಲ್ಲ, ಜಾತಿ ವ್ಯಾತ್ಯಾಸಗಳಿಲ್ಲದೆ ಕೂಡಿಸಿ ಒಂದು ಶಕ್ತವಾದ ರಾಷ್ಟ್ರದೊಂದಿಗೆ ಹೋರಾಡಿವರು. ನೇತಾಜಿ ಅಲ್ಲದೆ ಬೇರೆ ಮನುಷ್ಯರಾಗಿದ್ದರೆ, ಆ ಕಷ್ಟಗಳಿಗೆ ಎದೆಯೊಡ್ಡಿ ಜಯಿಸುವ ಶಕ್ತಿಯುಳ್ಳವರಾಗುತ್ತಿರಲಿಲ್ಲ. ನೇತಾಜಿ " ಧೀರರಿಗೆ ಎಲ್ಲವೂ ಸಾಧ್ಯ " ಎಂಬ ತುಲಸಿದಾಸರ ಮಾತಿನ ಸತ್ಯದ ಉದಾಹರಣೆಯಾದರು.

ಹಿಂದುಗಳು ಜಾತಿ ವ್ಯತ್ಯಾಸಗಳನ್ನೆಲ್ಲ ಬಿಟ್ಟು ಒಟ್ಟಿಗೆ ಏಳಿಗೆಗೆ

ಬರಬೇಕು. ಹಿಂದು ಮುಸಲ್ಮಾನರು ಸ್ನೇಹದಿಂದಿರಬೇಕು. ಒಂದೆಡೆ ಮುಹಮ್ಮದ್ ಪೈಗಂಬರ್ ಹೀಗೆ ಹೇಳಿದ್ದಾರೆ. "ನಿಮ್ಮ ಯೋಗ್ಯತೆ ನಿಮ್ಮ ಮಾತಿನಿಂದ ಅಲ್ಲ. ಅಥವ ನಿಮ್ಮ ಅನುಯಾಯಿಗಳು ಯಾರು ಎಂಬುದರಿಂದಲೂ ಅಲ್ಲ. ದೇವರು ನಿಮ್ಮ ಯೋಗ್ಯತೆಯನ್ನು ಅಳೆಯುವುದು ನಿಮಗೆ ತಿಳಿದ ಜ್ಞಾನವನ್ನು ನೀವು ನಿಮ್ಮ ಜೀವನದಲ್ಲಿ ಆಚರಣೆಗೆ ತರುವುದರಿಂದ."

## ಪತ್ರಿಕಾಕರ್ತರು ಸತ್ಯವನ್ನೇ ಪ್ರಕಟಿಸಬೇಕು

"ಇಂದು ವರ್ತಮಾನಪತ್ರಿಕೆಗಳು ಜನರ ಮನಸ್ಸನ್ನು ವಿಷದಿಂದ ತುಂಬುತ್ತಿವೆ. ಆಧುನಿಕರಿಗೆ, ಬೈಬಲ್ ಕುರಾನ್ ಗೀತೆ ಮುಂತಾದ ಮತ ಗ್ರಂಥಗಳ ಸ್ಥಳವನ್ನು ಪತ್ರಿಕೆಗಳು ಆಕ್ರಮಿಸಿವೆ. ಇದು ತಪ್ಪು. ಆದರೆ ನಾವು ಇರುವ ವಿಚಾರ ಪರಿಗಣಿಸಲೇಬೇಕು. ಪತ್ರಿಕೆಗಳ ಯೋಗ್ಯತೆ, ಬೆಲೆ ಹೀಗೆ ಏರಿರುವುದರಿಂದ ಪತ್ರಿಕಾಕರ್ತರು ಸತ್ಯವನ್ನು ಮಾತ್ರವೇ ಪ್ರಕಟಿಸಬೇಕು".

* * * * *

## ಹಿಂದು ಧರ್ಮ ವಿಶಾಲವಾದುದು

"ನನಗೆ ಬಂಗಾಳದ ಹಳ್ಳಿಗಳು ಅರಮನೆಗಿಂತ ಹೆಚ್ಚು ಇಷ್ಟ. ಪ್ರಾಣ ಇರುವ ಗುಡಿಸಲು, ಪ್ರೀತಿಪದ ಅರಮನೆಗಳಿಗಿಂತ ಹೆಚ್ಚು ಹಿತ. ಕೃಷ್ಣನನ್ನೂ ರಾಮಕೃಷ್ಣರನ್ನೂ ರಹಿಮ್ ಕರೀಮ್‌ರನ್ನೂ ಒಟ್ಟಾಗಿ ಉಚ್ಚರಿಸುವುದರಲ್ಲಿ ತಪ್ಪಿಲ್ಲ ಇವರಿಂದ ಕೆಲವುಮುಸಲ್ಮಾನರಿಗೆಅಸಮಾಧಾನವಾಗುವುದೆಂದು ಕೇಳಿ ನನಗೆ ಆಶ್ಚರ್ಯವು ನೋವೂ ಉಂಟಾಗಿದೆ. ಈ ಅಸಮಾಧಾನ ಸಂಕುಚಿತ ಬುದ್ಧಿಯ ಫಲ ನಾನು ಪ್ರಾರ್ಥನೆಯಲ್ಲಿ ಕುರಾನನ್ನು, ಬೀಬಿ ರೈಹಿನ ತಯಾಬ್ಜಿ ಅವಳ ಹಾಡುಗಾರಿಕೆಯಿಂದ ಸೇರಿಸಿದೆ ಆಕೆ ಧಾರ್ಮಿಕ ಬುದ್ಧಿಯುಳ್ಳವಳು. ರಾಜಕೀಯ ಗುರಿ ಇದರಲ್ಲಿ ಇಲ್ಲ. ಜನ ಹೇಳುವಂತೆ ನಾನು ಅವತಾರಪುರುಷನಲ್ಲ. ನಾನೊಬ್ಬ ಸಾಮಾನ್ಯ ಸಾತ್ವಿಕ ವ್ಯಕ್ತಿ. ಅತ್ಯಂತ ನಮ್ರರಾದ ಸ್ತ್ರೀ ಪುರುಷರಿಗಿಂತ ಹೆಚ್ಚು ನಮ್ರ ನನ್ನ ಗುರಿ. ಮುಸಲ್ಮಾನರನ್ನು ಹೆಚ್ಚು ಯೋಗ್ಯರಾದ ಮುಸಲ್ಮಾನರನ್ನಾಗಿ ಮಾಡುವುದೂ,

ಹಿಂದುಗಳನ್ನು ಹೆಚ್ಚು ಯೋಗ್ಯರಾದ ಹಿಂದುಗಳನ್ನಾಗಿ ಮಾಡು ವುದೂ, ಕ್ರಿಸ್ತರನ್ನು ಹೆಚ್ಚು ಯೋಗ್ಯರಾದ ಕ್ರಿಸ್ತರನ್ನು ಮಾಡು ವುದೂ, ಪಾರಸಿಗಳನ್ನು ಹೆಚ್ಚು ಯೋಗ್ಯರಾದ ಪಾರಸಿಗಳನ್ನಾ' ಮಾಡುವುದೂ ಆಗಿದೆ. 'ನಿಮ್ಮ ಮತಗಳನ್ನು ಬದಲಾಯಿಸಿಗಿ ಎಂದು ನಾನು ಯಾರಿಗೂ ಹೇಳುವುದಿಲ್ಲ. ನನ್ನ ಧರ್ಮದಲ್ಲಿ ಜಗತ್ತಿನ ಎಲ್ಲ ಧರ್ಮಗಳ ನೀತಿಗಳನ್ನೂ ಸೇರಿಸಿಕೊಳ್ಳುವಷ್ಟು ವೈಶಾಲ್ಯವಿದೆ.

"ಜೀವನಕ್ಕಾಗಿ ಪಟ್ಟಣಗಳನ್ನು ಸೇರಿರುವ ಯುವಕರೂ ಪಟ್ಟಣ ಗಳಲ್ಲಿ ಸಂಪಾದನೆ ಮಾಡುತ್ತಿರುವವರೂ ತಮ್ಮ ಕಾಲದಲ್ಲಿ ಸ್ವಲ್ಪವನ್ನು ಹಳ್ಳಿಯ ಸೇವೆಗೆ ಮೀಸಲಾಗಿ ಇಡಬೇಕು. ಅವರು ಒಟ್ಟಾಗಿ ಸೇರಿ ಎರಡು ಗುಂಪುಗಳನ್ನು ಮಾಡಿಕೊಂಡು ಆಫೀಸುಗಳಿಂದ ರಜ ಪಡೆದು ಒಂದು ಗುಂಪು ಆದನಂತರ ಮತ್ತೊಂದು ಗುಂಪಿನಂತೆ ಹಳ್ಳಿಗಳಿಗೆ ಬರಬೇಕು. ಅವರಿಗೆ ಮನಸ್ಸಿದ್ದರೆ ಇದಕ್ಕೆ ಮಾರ್ಗವಿದ್ದೇ ಇದೆ. ದೇಹಶ್ರಮಪಡಲು ಸಾಧ್ಯವಿಲ್ಲದವರು ಹಣಸಹಾಯ ಮಾಡಬಹುದು. ಇಂಗ್ಲೆಂಡ್ ರಷ್ಯ ಮುಂತಾದ ಕಡೆ ಪ್ರತಿ ಸಂಸಾರದಿಂದಲೂ ಒಬ್ಬರು ಇಬ್ಬರು ಸ್ತ್ರೀ ಪುರುಷರು ಯುದ್ಧಕ್ಕೆ ಹೋಗಿಯೇ ಹೋಗುತ್ತಾರೆ.

* * * * *

"ಜಗತ್ತಿನಲ್ಲಿರುವುದೆಲ್ಲ ದೇವರಿಗೆ ಸೇರಿದುದು. ತನಗೆ ಅವಶ್ಯಕ ವಾದುದಕ್ಕಿಂತ ಒಬ್ಬನಲ್ಲಿ ಹೆಚ್ಚಾಗಿ ಧನ ಸೇರಿದರೆ ಅವನು ಕೂಡಲೆ ಟ್ರಸ್ಟಿ (ವಿಶ್ವಸ್ತ) ಆಗುತ್ತಾನೆ. ದೇವರು ಏನನ್ನೂ ಕೂಡಹಾಕಿ ಇಟ್ಟುಕೊಳ್ಳುವುದಿಲ್ಲ. ಆತ ದಿನದಿನಕ್ಕೂ ಸೃಷ್ಟಿಸುತ್ತಾನೆ. ಮನು ಷ್ಯರೂ ಈ ತತ್ವವನ್ನು ಒಪ್ಪಬೇಕು. ಆಗ ಟ್ರಸ್ಟಿ ಎಂಬುದಕ್ಕೆ ಕಾನೂನಿನ ಸ್ವರೂಪ ಬರುತ್ತದೆ. ಭಾರತ ಈ ಮಾರ್ಗದಲ್ಲಿ ಜಗತ್ತಿಗೆ ಮಾರ್ಗದರ್ಶಕವಾಗಬೇಕು. ಆಗ ಆಸ್ಟ್ರೇಲಿಯ ಮತ್ತು ಇತರ ದೇಶ ಗಳಲ್ಲಿರುವಂತೆ ಬಿಳಿಯರು ತಮಗಾಗಿಯೇ ಸ್ವಾಸ್ಥ್ಯಗಳನ್ನಿಟ್ಟು ಕೊಂಡು ಯುದ್ಧಕ್ಕೆ ಕಾರಣವಾಗುವ ಪರಿಸ್ಥಿತಿ, ಭಾರತಕ್ಕೆ ಒದಗು ವುದಿಲ್ಲ.

## ಜಾತಿಗಳೆಲ್ಲ ಹೋಗಬೇಕು

" ಹಿಂದು ಧರ್ಮವು ಉಳಿಯಬೇಕಾದರೆ ಭಾರತದಲ್ಲಿರುವ ಜಾತಿಗಳೆಲ್ಲ ಹೋಗಬೇಕು. 'ಇಸ್ಲಾಂ ಮತ್ತು ಕ್ರಿಸ್ತ ಧರ್ಮಗಳು ಮಾತ್ರ ಪ್ರಗತಿಗಾಮಿ. ಹಿಂದು ಧರ್ಮ ಪ್ರತಿಗಾಮಿ' ಎಂಬುದು ನಿಜವಲ್ಲ. ಹಾಗೆ ನೋಡಿದರೆ ಯಾವ ಮತವೂ ಈಗ ಪ್ರಗತಿಗಾಮಿಯಲ್ಲ. ಈಗ ಮತಗಳು ಪ್ರಗತಿಗಾಮಿಯಾಗಿದ್ದರೆ ಜಗತ್ತು ಇಂತಹ ಅಶಾಂತಿಗೊಂದಲದಲ್ಲಿರುತ್ತಿರಲಿಲ್ಲ. ವರ್ಣ ಎಂದರೆ ಕರ್ತವ್ಯವೆಂಬ ದೃಷ್ಟಿಯಿಂದ, ಹಿಂದು ಸಮಾಜದಲ್ಲಿ ವರ್ಣಕ್ಕೆ ಸ್ಥಾನವಿದೆ. ಎಲ್ಲಾ ಮತಗಳ ವಿಷಯದಲ್ಲಿಯೂ ಇದು ನಿಜ. ವರ್ಣವೆಂಬ ಪದವನ್ನು ಉಪಯೋಗಿಸದಿರಬಹುದು. ಮೌಲ್ವಿಯಾಗಲಿ ಕ್ರಿಸ್ತಪಾದ್ರಿಯಾಗಲಿ ಶಿಷ್ಯನಿಗೆ ಧರ್ಮತತ್ವಗಳನ್ನು ಹಣಕ್ಕಾಗಿ ಅಲ್ಲ—ತನಗೆ ಉತ್ತಮವಾದ ಬೋಧನಾಶಕ್ತಿಯಿದೆ ಎಂಬ ಕಾರಣದಿಂದ ಬೋಧಿಸಿದರೆ ಆತ ಬ್ರಾಹ್ಮಣನಲ್ಲದೆ ಮತ್ತೇನು? ಇತರ ಕರ್ತವ್ಯಗಳ ವಿಷಯವೂ ಹೀಗೆಯೇ. ಜಾತಿರಹಿತ ಸಮಾಜವಾಗುವುದು ನನ್ನ ಗುರಿ. ಅಲ್ಲಿಯವರೆಗೆ ಅಂತರ್ಜಾತೀಯ ವಿವಾಹಕ್ಕೆ ನಾನು ಒಪ್ಪುತ್ತೇನೆ. ಬೇರೆ ಬೇರೆ ಧರ್ಮದ ಸ್ತ್ರೀ ಪುರುಷರು ವಿವಾಹದಿಂದ ಬಂಧಿತರಾಗುವುದು ಸರಿಯೆಂದು ನಾನು ಒಪ್ಪುತ್ತೇನೆ. ಆದರೆ ಅಂತಹ ವಿವಾಹ ಬರಿಯ ಇಂದ್ರಿಯ ಚಾಪಲ್ಯಕ್ಕಾಗಿ ಉಂಟಾಗಬಾರದು. ಇಂದ್ರಿಯ ಚಪಲದಿಂದ ಆಗುವುದು ವಿವಾಹವೇ ಅಲ್ಲ. ಅದು ವ್ಯಭಿಚಾರ. ವಿವಾಹ ಪವಿತ್ರಬಂಧನ, ಇಬ್ಬರಿಗೂ ಪರಸ್ಪರರ ಧರ್ಮದಲ್ಲಿ ಗೌರವವಿರಬೇಕು. ಇಲ್ಲಿ ಮತಾಂತರದ ಪ್ರಶ್ನೆ ಇಲ್ಲ, ವಿವಾಹಕ್ಕೆ ಗಂಡು ಹೆಣ್ಣು ಪೈಕಿ ಯಾವ ಜಾತಿಯು ಯಾವ ಪುರೋಹಿತನಾದರೂ ಆಗಬಹುದು. ಬೇರೆಬೇರೆ ಧರ್ಮಗಳವರು ಪರಸ್ಪರ ದ್ವೇಷವನ್ನು ಬಿಟ್ಟು, ಜಗತ್ತಿನಲ್ಲಿರುವ ಎಲ್ಲಾ ಧರ್ಮಗಳಲ್ಲಿಯೂ ಸಮಾನವಾದ ಗೌರವವನ್ನು ಇಟ್ಟಾಗ ಮಾತ್ರ ಇದು ಸಾಧ್ಯ....ದೇಶದಲ್ಲೆಲ್ಲ ಒಂದೇ ಮತಪ್ರಚಾರದಲ್ಲಿದ್ದರೂ ಸರ್ಕಾರ ಮತಪ್ರಚಾರದಲ್ಲಿ ಕೈ ಹಾಕಬಾರದು. ಮತಪ್ರಚಾರದಲ್ಲಿ ಸರ್ಕಾರದ ಕೈವಾಡಕ್ಕೆ

ಯಾವಾಗಲೂ ಸ್ವಾಗತವಿಲ್ಲ. ಮತ ವ್ಯಕ್ತಿಗೆ ಸಂಬಂಧಪಟ್ಟ ವಿಚಾರ. ಎಷ್ಟುವ್ಯಕ್ತಿಗಳೋ ಅಷ್ಟು ಮತಗಳು ಪ್ರತಿ ಮನಸ್ಸೂ ದೇವರನ್ನು ಕುರಿತು ತನ್ನದೇ ಆದ ಅಭಿಪ್ರಾಯವನ್ನು ಹೊಂದಿದೆ. ಸರ್ಕಾರಗಳು ಮತಪ್ರಚಾರಕ್ಕೂ ಮತಸಂಸ್ಥೆಗಳಿಗೂ ಧನಸಹಾಯ ಮಾಡಕೂಡದು. ತನ್ನ ವೆಚ್ಚವನ್ನು ತಾನು ಹುಟ್ಟಿಸದಂತಹ ಮತ ನಿಜವಾದ ಮತ ವಲ್ಲ....ಆದರೆ ಸರ್ಕಾರಿ ಪಾಠಶಾಲೆಗಳು ನೀತಿಬೋಧನೆ ಮಾಡಬಾರ ದೆಂದಲ್ಲ. ಮೂಲಭೂತ ನೀತಿಗಳು ಎಲ್ಲಾ ಮತಗಳಿಗೂ ಒಂದೇ.

(ಮರುದಿನ ಗಾಂಧಿ ಬೆಲೂಚಿ ಸ್ಥಾನದಿಂದ ಒಬ್ಬ ಮುಸಲ್ಮಾನ ಮಿತ್ರರು ಕಳುಹಿಸಿದ್ದ ಮುಹಮ್ಮದ್ ಪೈಗಂಬರನ ಬೋಧನೆಯಿಂದ ಈ ಕೆಳಗಿನ ವಾಕ್ಯಗಳನ್ನು ಓದಿದರು)

## ದೇವತೆಗಳು ಕೇಳುವುದೇನನ್ನು ?

ದೇವರು ಭೂಮಿಯನ್ನು ಸೃಷ್ಟಿಮಾಡಿದನಂತರ ಅದು ಅಚೆ ಈಚೆ ಅಲುಗಾಡಿತು. ಆಗ ದೇವರು ಭೂಮಿಯಮೇಲೆ ಬೆಟ್ಟಗಳನ್ನಿಟ್ಟನು. ದೇವತೆಗಳು "ದೇವರೇ ನಿನ್ನ ಸೃಷ್ಟಿಯಲ್ಲಿ ಬೆಟ್ಟಗಳಿಗಿಂತ ಬಲವಾದದು ಏನಾದರೂ ಇದೆಯೇ" ಎಂದು ಕೇಳಿದರು. ದೇವರು ಹೀಗೆ ಉತ್ತರಕೊಟ್ಟನು "ಕಬ್ಬಿಣ ಬೆಟ್ಟಕ್ಕಿಂತ ಬಲ. ಯಾಕೆಂದರೆ ಕಬ್ಬಿಣ ಬೆಟ್ಟವನ್ನು ಪುಡಿಮಾಡುತ್ತದೆ''. "ಹಾಗಾದರೆ ಕಬ್ಬಿಣಕ್ಕಿಂತ ಬಲವಾದುದು ನಿನ್ನ ಸೃಷ್ಟಿಯಲ್ಲಿ ಏನಾದರೂ ಇದೆಯೆ ?'' "ಹೌದು ಬೆಂಕಿ ಕಬ್ಬಿಣಕ್ಕಿಂತ ಬಲವಾದುದು. ಯಾಕೆಂದರೆ ಬೆಂಕಿ ಕಬ್ಬಿಣವನ್ನು ಕರಗಿಸುತ್ತದೆ.

ಹಾಗಾದರೆ ಬೆಂಕಿಗಿಂತ ಬಲವಾದುದು ಯಾವುದಾದರೂ ಇದೆಯೆ ?

ಹೌದು ನೀರು, ನೀರು ಬೆಂಕಿಯನ್ನು ಆರಿಸುತ್ತದೆ.

ನೀರಿಗಿಂತ ಬಲವಾದುದು ಯಾವುದಾದರೂ ಇದೆಯೆ ?

ಹೌದು ಗಾಳಿ. ಗಾಳಿಯಿಂದ ನೀರು ಚಲಿಸುತ್ತದೆ.

ದೇವರೇ, ಗಾಳಿಗಿಂತ ಬಲವಾದುದು ಯಾವುದಾದರೂ ಇದೆಯೆ ?

ಹೌದು. ದಾನಿಯಾದ ಸತ್ಪುರುಷ. ಆತನ ಬಲಗೈಕೊಡುವುದು ಎಡಗೈಗೆ ತಿಳಿಯಬಾರದು. ಆತನು ಎಲ್ಲವನ್ನೂ ಜಯಿಸುತ್ತಾನೆ. ಪ್ರತಿಯೊಂದು ಸತ್ಕಾರ್ಯವೂ ಒಂದೊಂದು ದಾನ. ನಗು ನಗುತ್ತಾ ಇರುವುದು, ದಾರಿ ತಪ್ಪಿದವರನ್ನು ಸರಿಯಾದ ಮಾರ್ಗಕ್ಕೆ ಬಿಡುವುದು, ಬಾಯಾರಿದವರಿಗೆ ನೀರು ಕೊಡುವುದು, ಎಲ್ಲಾ ದಾನವೇ. ಈ

ಲೋಕದಲ್ಲಿ ಮಾಡಿರುವ ಸತ್ಕಾರ್ಯವೇ ಪರಲೋಕದ ಆಸ್ತಿ. ಒಬ್ಬ ಮನುಷ್ಯನು ಸತ್ತಾಗ ಲೋಕದ ಜನ ಅವನು ಬಿಟ್ಟ ಆಸ್ತಿ ಏನು ಎಂದು ಕೇಳುತ್ತಾರೆ. ಆದರೆ ದೇವತೆಗಳು "ಅವನು ಬರುವುದಕ್ಕೆ ಮುಂಚೆ ಇಲ್ಲಿಗೆ ಕಳುಹಿಸಿರುವ ಸತ್ಕರ್ಮಗಳಾವುವು ಎಂದು ಕೇಳುತ್ತಾರೆ."

ಮರುದಿವಸದ ಸಭೆಯಲ್ಲಿ ಮಾತನಾಡುತ್ತ ಗಾಂಧಿಯವರು ಹೀಗೆ ಹೇಳಿದರು. "ಜಾತಿಯ ಕಾರಣದಿಂದ ಯಾರಿಗೂ ಯಾವ ಅಡ್ಡಿಯೂ ಇರಬಾರದು. ಆಗ ಅಸ್ಪೃಶ್ಯತೆ ಪೂರ್ಣವಾಗಿ ತೊಲಗುವುದು. ದೇವಾಲಯ ಪ್ರವೇಶವು ಇದರಲ್ಲಿ ಮೊದಲನೆಯ ಮೆಟ್ಟಲು ಅನಂತರ ಅಂತರ್ಜಾತೀಯ ಸಾಮೂಜಿಕ ಭೋಜನ ಕೂಟಗಳು ಬರುತ್ತವೆ

"ಎಲ್ಲಾ ಭಾರತೀಯರ ಆರ್ಥಿಕ ಸ್ಥಿತಿಯು ಒಂದೇ ಮಟ್ಟದಲ್ಲಿರುವುದೇ ಸ್ವತಂತ್ರ ಭಾರತದ ಗುರಿ ಹಾಗೆ ಆರ್ಥಿಕ ಸಮತೆಯುಂಟಾದರೆ ಭಾರತವು ಜಗತ್ತಿಗೇ ಮೇಲುಪಂಗ್ತಿಯಾಗುವುದು ದಿನದ ಕಾರ್ಯಕ್ಕೆ ವೈದ್ಯರಿಗೂ ವ್ಯಾಪಾರಿಗಳಿಗೂ ವಕೀಲರಿಗೂ ಉಪಾಧ್ಯಾಯರಿಗೂ ಭಂಗಿಗೂ ಎಲ್ಲರಿಗೂ ದೊರೆಯುವ ಪ್ರತಿಫಲ ಒಂದೇ ಸಮನಾದರೆ, ಆಗ ಭಾರತದಲ್ಲಿ ನಿಜವಾದ ರಾಮರಾಜ್ಯ ಬರುವುದು. ಆ ಗುರಿ ಸಾಧ್ಯವಾಗದೇ ಇರಬಹುದು. ಆದರೂ ಅದರ ಕಡೆಗೆ ಕಾರ್ಯ ಮಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

"ನಮ್ಮ ದೇಶದಲ್ಲಿ ಬಾಲವಿಧವೆಯರು ಇರಕೂಡದು. ಬಾಲ್ಯ ವಿವಾಹ ನನಗೆ ಇಷ್ಟವಿಲ್ಲ. ಇದು ಕೆಟ್ಟ ಪದ್ಧತಿ. ಇದನ್ನು ಇತರರೂ ಸನಾತನಿಗಳಿಂದ ಅನುಸರಿಸುತ್ತಿದ್ದಾರೆ. ಕನ್ಯಾ ದಕ್ಷಿಣೆ ಒಳ್ಳೆಯದಲ್ಲ. ಇದು ಹೆಣ್ಣನ್ನು ಮಾರುವುದು. ಜಾತಿಗಳೊಳಗಿನ ಒಳಜಾತಿಗಳನ್ನೆಲ್ಲ ನಾಶಮಾಡಬೇಕು. ದೇಶದಲ್ಲೆಲ್ಲ ಒಂದೇ ಜಾತಿ. ಹಿಂದುಗಳೆಲ್ಲ ಭಂಗಿಗಳೆಂದುಕೊಳ್ಳಬೇಕು.

"ಬಾಲ್ಯವಿವಾಹವು ಇಲ್ಲಪ ಮೇಲೆ ಬಾಲವಿಧವೆಯರೂ ಇರುವುದಿಲ್ಲ. ನನ್ನ ನಿಯಮ ಒಂದು ಹೆಣ್ಣಿಗೆ ಒಂದು ಗಂಡು, ಒಂದು ಗಂಡಿಗೆ ಒಂದು ಹೆಣ್ಣು. ಉತ್ತಮ ವರ್ಣದವರೆನ್ನಿಸಿಕೊಳ್ಳುವವರಲ್ಲಿ

ಬಾಲವಿಧವೆಯರು ಸಮಾಜದ ಭಾಗವಾಗಿದ್ದಾರೆ. ಆದರೆ ಪುರುಷರಿಗೆ ಯಾವ ನಿಯಮವೂ ಇಲ್ಲ. ಇದು ಅನ್ಯಾಯ. ಸಮಾಜ ಈ ಸ್ಥಿತಿಯಲ್ಲಿರುವವರೆಗೆ ಬಾಲವಿಧವೆಯರ ಪುನರ್ವಿವಾಹವನ್ನು ನಾನು ಒಪ್ಪುತ್ತೇನೆ. ಹೆಣ್ಣು ಗಂಡು ಸಮಾನ. ಆದುದರಿಂದ ಇಬ್ಬರಿಗೂ ಸಮಾನ ಹಕ್ಕುಗಳು.

"ಸಿವಿಲ್ ವ್ಯಾರೇಜ್" ನ್ನು ನಾನು ಪ್ರೋತ್ಸಾಹಿಸುವುದಿಲ್ಲ. ಆದರೆ ಸುಧಾರಣೆಯ ದೃಷ್ಟಿಯಿಂದ ಅದನ್ನು ಸ್ವಾಗತಿಸುತ್ತೇನೆ".

* * * * *

ಹೀಗೆ ಗಾಂಧಿಯವರು ಸುಮಾರು 50 ದಿನಗಳ ಕಾಲ ನವಖಲಿಯಲ್ಲಿ ಪ್ರವಾಸಮಾಡಿ ಕಾಲು ನಡಿಗೆಯಿಂದ ಹಳ್ಳಿಯಿಂದ ಹಳ್ಳಿಗೆ ತಿರುಗಿ, ಅನಂತರ ಬೀಹಾರಿನ ಯಾತ್ರೆಯನ್ನು ಕೈಕೊಂಡರು. ನವಖಲಿಯಲ್ಲಿ ಹೇಗೆ ಜನರ ಹೃದಯಪರಿವರ್ತನೆಗಾಗಿ ಗಾಂಧಿ ಪ್ರಯತ್ನಿಸಿದರೋ ಬೀಹಾರಿನಲ್ಲಿಯೂ ಅವರು ಅನುಸರಿಸಿದ ಮಾರ್ಗ ಅದೇ ಆಗಿತ್ತು. ಬೀಹಾರಿನಲ್ಲಿ ಹಿಂದುಗಳು ತಪ್ಪಿತಸ್ಥರಾಗಿದ್ದರು. "ನೀವು ಮಾಡಿರುವ ತಪ್ಪನ್ನು ನಿಮಗೆ ತಿಳಿಸಿ ನಿಮ್ಮ ಕಣ್ಣುಗಳನ್ನು ತೆರೆಯುವುದರಿಂದಲೇ ನಾನು ನಿಮ್ಮ ಮಿತ್ರ. ಬಿಹಾರಿನಲ್ಲಿ ಮುಸಲ್ಮಾನರನ್ನು ಹಿಂಸಿಸಿದ ಹಿಂದುಗಳು ಹೇಡಿಗಳು. ಮುಸಲ್ಮಾನರಿಂದ ಅಪಹರಿಸಿರುವ ವಸ್ತುಗಳನ್ನೆಲ್ಲ ಹಿಂದುಗಳು ಅವರಿಗೆ ಹಿಂದಿರುಗಿಸಿಬಿಡಬೇಕು"

ಗಾಂಧಿಯವರು ಬೀಹಾರಿನಲ್ಲಿ ಅನೇಕಕಡೆ, ಮುಸಲ್ಮಾನರಿಗಾಗಿ ಹಿಂದುಗಳಿಂದ ಧನ ಶೇಖರಣೆ ಮಾಡಿದರು. ಒಂದೆಡೆ ಹಿಂದುಗಳು, "ನವಖಲಿಯ ಹಿಂದುಗಳಿಗಾಗಿ ಮುಸಲ್ಮಾನರು ಎಲ್ಲಿಯಾದರೂ ಹಣ ಕೊಟ್ಟಿದ್ದಾರೆಯೇ?" ಎಂದು ಕೇಳಿದರು. ಗಾಂಧಿಯವರು "ಇಲ್ಲ. ಅದಕ್ಕೆ ಮುಖ್ಯಕಾರಣ ಭಾರತದ ಮುಸಲ್ಮಾನರಲ್ಲಿ ಅನೇಕರು ನಾನು ಅವರ ಶತ್ರುವೆಂದು ತಿಳಿದಿರುವುದೇ. ಆದರೂ ಮುಸಲ್ಮಾನರೂ ಹಿಂದುಗಳಿಗಾಗಿ ಹಣ ಕೊಟ್ಟ ಸ್ಥಳ ಒಂದು ಉಂಟು. ಕೋವಿಲ್ಲ ಎಂಬಲ್ಲಿ ಮುಸಲ್ಮಾನರು ಹಿಂದುಗಳಿಗಾಗಿ ೮೦೦ ರೂಪಾಯಿಗಳನ್ನು ಕೊಟ್ಟರು. ಹಿಂದು ಸ್ತ್ರೀಯರಿಂದ ಬಲಾತ್ಕಾರವಾಗಿ ಅಪಹರಿಸಿದ್ದ

ಬಳೆ ಅರಸಿನ ಕುಂಕುಮಗಳಿಗಾಗಿ ಬೇರೆ ಬಳೆ ಮತ್ತು ಕುಂಕುಮಗಳ ಸಂಗ್ರಹವನ್ನೂ ಕೊಟ್ಟರು." ಎಂದರು.

ಗಾಂಧಿಯವರು ಮುಸಲ್ಮಾನ ನಿರಾಶ್ರಿತರಿಗಾಗಿ ಹಿಂದುಗಳಿಂದ ಸಾಧ್ಯವಾದೆಡೆಗಳಲ್ಲೆಲ್ಲ ಹಣ ಸಂಗ್ರಹಮಾಡಿದರು. ಒಂದೆಡೆ ಹಿಂದು ಸ್ತ್ರೀಯರು ಆಭರಣಗಳನ್ನು ಕೊಟ್ಟಾಗ ಗಾಂಧಿ ಸಂತೋಷಗೊಂಡು "ಸ್ತ್ರೀಯರಿಗೆ ಪರಿಶುದ್ಧಹೃದಯವೇ ಆಭರಣ. ಆ ಆಭರಣದ ಸ್ಥಾನವನ್ನು ಚಿನ್ನ ಬೆಳ್ಳಿಯ ಒಡವೆಗಳು ಎಂದಿಗೂ ಆಕ್ರಮಿಸಲಾರವು" ಎಂದು ಹೇಳಿದರು.

## ಪಾಂಡವರ ಧೈರ್ಯ ಅನುಸರಿಸಿ

"ಒಬ್ಬನು ನಿಮ್ಮನ್ನು ದೂಷಿಸಿದರೆ ನೀವೂ ಪ್ರತಿಯಾಗಿ ದೂಷಿಸಬೇಡಿ. ಅದರಿಂದ ಫಲವಿಲ್ಲ ಕೇಡಿಗೆ ಕೇಡನ್ನು ಹಿಂದಿರುಗಿಸಿದರೆ ಕೇಡಿನ ಸಂಖೆ ಹೆಚ್ಚುವುದು. ಹಿಂಸೆಯಿಂದ ಹಿಂಸೆಯನ್ನು ಶಮನ ಮಾಡಲು ಸಾಧ್ಯವಿಲ್ಲ. ಇದು ತ್ರಿಕಾಲಾಬಾಧಿತವಾದ ಪ್ರಕೃತಿ ನಿಯಮ. ಹಿಂಸೆಯನ್ನು ಅಹಿಂಸೆಯಿಂದ ಮಾತ್ರ ಜಯಿಸಲು ಸಾಧ್ಯ ಅಹಿಂಸೆ ಎಂದರೆ ನಿಮ್ಮ ಮೇಲೆ ಅನ್ಯಾಯವಾಗಿ ಬಲಪ್ರದರ್ಶನವಾದಾಗ ಸುಮ್ಮನೆ ಸಹಿಸಿಕೊಂಡಿರುವುದಲ್ಲ. ದಬ್ಬಾಳಿಕೆಗೆ ಒಪ್ಪದೆ ಮರಣ ಬಂದರೂ ಪಶು ಶಕ್ತಿಯನ್ನು ಎದುರಿಸುವುದೇ ಅಹಿಂಸೆ. ಇದಕ್ಕೆ ಆಯುಧಗಳ ಯುದ್ಧಕ್ಕಿಂತ ಮೇಲು ಮಟ್ಟದ ಧೈರ್ಯ ಅವಶ್ಯಕ. ಕ್ಷಮೆ ವೀರರ ಲಕ್ಷಣವೇ ಹೊರತು ಹೇಡಿಗಳ ಲಕ್ಷಣವಲ್ಲ. ವಿರಾಟನಗರದಲ್ಲಿ ಪಾಂಡವರು ಇದ್ದಾಗ ಯುಧಿಷ್ಠಿರನ ತಲೆಗೆ ವಿರಾಟರಾಜನಿಂದ ಗಾಯವಾಯಿತು. ಪಾಂಡವರು ರಕ್ತವು ಕೆಳಗೆ ಬೀಳದಂತೆ ತಡೆದು ವಿರಾಟರಾಯರಿಗೆ ಉಂಟಾಗಬಹುದಾಗಿದ್ದ ಅಪಾಯವನ್ನು ತಪ್ಪಿಸಿದರು. ನಮ್ಮ ದೇಶದವರಲ್ಲಿ ಹಿಂದು ಮುಸಲ್ಮಾನ್ ಪಾರಸಿ ಕ್ರಿಸ್ತ ಸಿಖ—ಎಲ್ಲರಲ್ಲಿಯೂ ಬೆಳೆಯಬೇಕಾದುದು ಈ ಬಗೆಯ ಧೈರ್ಯ, ಸಹಿಷ್ಣುತೆ. ಅಹಿಂಸೆ ಎಲ್ಲಾ ಧರ್ಮಗಳ ಒಂದು ಮೂಲತತ್ವ. ಆದರೆ ಭಾರತದಲ್ಲಿ ಇದೇ ಒಂದು ವಿಜ್ಞಾನಶಾಸ್ತ್ರದಂತೆ ಆಚರಣೆಗೆ ಬಂದಿದೆ. "ಅಸಂಖ್ಯಾತ ಯೋಗಿಗಳು ಅಹಿಂಸೆಯ ತ್ಯಾಗ

ದಿಂದ ಪ್ರಾಣಾರ್ಪಣೆಮಾಡಿದ್ದರು. ಅವರ ತ್ಯಾಗದಿಂದ ಹಿಮಾಲಯ ಪರ್ವತ ಒಳ್ಳೆಯ ಸ್ವಚ್ಛವಾದ ಬಿಳಿಯ ಕಾಂತಿಯನ್ನು ಹೊಂದಿತೆಂದು" ಕವಿಗಳು ಹಾಡಿದ್ದಾರೆ. ಆದರೆ ಇಂದು ಆ ಅಹಿಂಸೆ ಮಾಯವಾಗಿದೆ- ಜನಕ ರಾಮಚಂದ್ರರ ಈ ಪುಣ್ಯಭೂಮಿಯಲ್ಲಿ ಅದನ್ನು ಪುನರುಜ್ಜೀವನಗೊಳಿಸಬೇಕು. ಕೋಪಕ್ಕೆ ಬದಲಾಗಿ ಪ್ರೇಮವನ್ನೂ, ಹಿಂಸೆಗೆ ಬದಲಾಗಿ ಅಹಿಂಸೆಯನ್ನೂ ಹಿಂದಿರುಗಿಸಬೇಕು. ಭಾರತದಲ್ಲಿ ಹೊರತು ಮತ್ತೆಲ್ಲಿ ತಾನೆ ಅಹಿಂಸೆಯನ್ನು ಪುನರುಜ್ಜೀವಿಸುವುದು ಸಾಧ್ಯ? ಬ್ರಿಟಿಷರು ಇಲ್ಲಿಂದ ಹೋದ ಮೇಲು ನಾವು ಹೊಡೆದಾಡುತ್ತಾ ಹಿಂದುಸ್ಥಾನ ಪಾಕಿಸ್ತಾನ ಬ್ರಾಹ್ಮಣಸ್ಥಾನ ಅಚೂತ್‌ಸ್ಥಾನ ಎಂಬುದಾಗಿ ಭಾರತವನ್ನು ಯಾಕೆ ಚೂರಾಗಿ ಹರಿದು ಹಾಕಬೇಕೆ?

"ನಾವು ಮನುಷ್ಯತ್ವವನ್ನೇ ಮರೆತು ಏಟಿಗೆ ಏಟನ್ನು ಹಿಂದಿರುಗಿಸುವುದೆ? ದುರ್ಬುದ್ಧಿಯ ಒಬ್ಬ ಮನುಷ್ಯ ದೇವಸ್ಥಾನವನ್ನು ಕೆಡಿಸಿದರೆ ಅಥವ ವಿಗ್ರಹವನ್ನು ಒಡೆದರೆ, ಹಿಂದುವಾದವನು ತಕ್ಷಣ ಮಸೀದಿಯನ್ನು ಕೆಡಿಸಬೇಕೆ? ಇದರಿಂದ ದೇವಾಲಯವನ್ನು ಉಳಿಸಿದಂತೆ ಆಯಿತೆ? ಹಿಂದು ಧರ್ಮದ ಉದ್ಧಾರವಾಯಿತೆ? ನಾನು ವಿಗ್ರಹಾರಾಧಕನೂ ಹೌದು. ವಿಗ್ರಹಭೇದಕನೂ ಹೌದು. ಜನರೆಲ್ಲ ಹಾಗೆಯೇ. ಕೆಲವರು ಒಪ್ಪಿಕೊಳ್ಳುತ್ತಾರೆ. ಕೆಲವರು ಒಪ್ಪುವುದಿಲ್ಲ. ಮನುಷ್ಯರಿಗೆ ಯಾವುದಾದರೂ ಒಂದು ಚಿನ್ಹೆ ಬೇಕು. ಮಸೀದಿಗಳೂ ಚರ್ಚುಗಳೂ ದೇವಸ್ಥಾನದಂತೆಯೆ? ದೇವರು ಎಲ್ಲೆಲ್ಲಿಯೂ ಇದ್ದಾನೆ ಕಲ್ಲಿನಲ್ಲಿಯೂ ಇದ್ದಾನೆ. ಮನುಷ್ಯನ ಪ್ರತಿ ಕೂದಲೆಳೆಯಲ್ಲಿಯೂ ಇದ್ದಾನೆ. ಆದರೆ ಜನರು ಕೆಲವು ಪದಾರ್ಥಗಳೂ ಕೆಲವು ಸ್ಥಳಗಳೂ ಹೆಚ್ಚು ಪವಿತ್ರವೆಂದು ಭಾವಿಸಿದ್ದಾರೆ. ಆ ಭಾವನೆಯಿಂದ ಇತರರ ಸ್ವಾತಂತ್ರ್ಯಕ್ಕೆ ಭಂಗ ಬರದಿದ್ದರೆ ಆ ಭಾವನೆಗಳನ್ನು ಗೌರವಿಸಬೇಕು. ಬಲಾತ್ಕಾರ ಬಂದಕಡೆ, ನಮ್ರರಾಗಿ ಆದರೆ ಧೀರರಾಗಿ ಬಲಾತ್ಕಾರವನ್ನು ಎದುರಿಸಬೇಕು. ನಾನು ಸ್ವತಂತ್ರವಾಗಿ ವಿಗ್ರಹಾರಾಧನೆ ಮಾಡುವುದನ್ನು ಯಾರಾದರೂ ತಡೆಯಲು ಬಂದರೆ, ನಾನು ವಿಗ್ರಹವನ್ನು ಅಪ್ಪಿಕೊಂಡು ನನ್ನ ಪ್ರಾಣವನ್ನಾದರೂ ಕೊಟ್ಟು ಅದನ್ನು ರಕ್ಷಿಸುತ್ತೇನೆ.

"ನಿಮ್ಮ ಹುಚ್ಚು ನಿಮಗೆ ಚೆನ್ನಾಗಿ ಅರ್ಥವಾಗಲಿ ನೀವು ಮಾಡಿರುವ ಅನ್ಯಾಯಗಳಿಂದ ನಿಮಗೆ ಪಶ್ಚಾತ್ತಾಪವಾಗಲಿ. ನಿರ್ನಾಮವಾಗಿರುವ ಮುಸಲ್ಮಾನರ ಮನೆಗಳನ್ನು ನೋಡಿ ನನ್ನ ಕಣ್ಣುಗಳಲ್ಲಿ ನೀರು ಬಂದಿತು ಆದರೆ ನಾನು ಹೃದಯವನ್ನು ಗಟ್ಟಿಮಾಡಿಕೊಂಡು, ಮುಸಲ್ಮಾನರ ವಿಷಯದಲ್ಲಿ ಹಿಂದುಗಳು ಹೇಗಿರಬೇಕೆಂಬುದನ್ನು ಬೋಧಿಸಲು ಬಂದಿದ್ದೇನೆ. ನಿಜವಾದ ಪಶ್ಚಾತ್ತಾಪ ಪಡುವವರಿಗೆ ಧೈರ್ಯವಿರಬೇಕು. ಬುದ್ಧನು ಸಂಚರಿಸಿದ, ಬೋಧಿಸಿದ ಬಿಹಾರ್ ಆದರ್ಶವಾಗಿ ಭಾರತಕ್ಕೆ ಮತ್ತೆ ಬೆಳಕನ್ನು ಬೀರುವುದರಲ್ಲಿ ಸಂದೇಹವಿಲ್ಲ. ಪರಿಶುದ್ಧವಾದ ಅಹಿಂಸೆಯಿಂದ ಮಾತ್ರ ಇದು ಸಾಧ್ಯ.

**ಹಿಂಸೆಯಿಂದ ಯಾವುದೂ ಸಾಧ್ಯವಿಲ್ಲ**

"ನಿಮ್ಮ ದೇಶದಲ್ಲಿ (ಬಿಹಾರ್) ಈಚೆಗೆ ಹಿಂಸೆಯ ಚಿನ್ಹೆಗಳು ಬಹಳ ಕಾಣುತ್ತಿವೆ. ಟಿಕಿಟಿಲ್ಲದೆ ರೈಲಿನಲ್ಲಿ ಪ್ರಯಾಣಮಾಡುತ್ತಿದ್ದಾರೆ. ಜಮೀನದಾರರ ಬೆಳೆಗಳನ್ನೂ ವಸ್ತುಗಳನ್ನೂ ಸುಡುತ್ತಿದ್ದಾರೆ ಇವೆಲ್ಲ ಅರ್ಥವಿಲ್ಲದ ಪ್ರತಿಕ್ರಿಯೆಗಳು. ನಾನು ಜಮಿಾನದಾರಿ ಪದ್ಧತಿಯ ಮಿತ್ರನಲ್ಲ. ನಾನು ಅದಕ್ಕೆ ವಿರೋಧವಾಗಿ ಎಷ್ಟೋ ಸಲ ಹೇಳಿದ್ದೇನೆ. ಆದರೆ ನಾನು ಜಮೀನದಾರರ ಶತ್ರುವಲ್ಲ. ಇದು ನಿಜ ನನಗೆ ಶತ್ರುಗಳೇ ಇಲ್ಲ. ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಬಹಳ ಕುಂದುಗಳಿವೆ. ತ್ಯಾಗದಿಂದಲೂ ಕಷ್ಟದ ಅನುಭವದಿಂದಲೂ ಇವುಗಳಲ್ಲಿ ಸುಧಾರಣೆಯನ್ನು ಮಾಡಬೇಕು. ಹಿಂಸೆಯಿಂದ ಸುಧಾರಣೆಯನ್ನು ಮಾಡಹೋದರೆ, ಸಮಾಜ ಮತ್ತಷ್ಟು ಹೊಲಸಾಗುವುದು, ಸಮಾಜದಲ್ಲಿರುವ ದುಷ್ಟಪ್ರವೃತ್ತಿಗಳು ನಿರ್ಮೂಲವಾಗಬೇಕಾದರೆ ಅದು ಹಿಂಸೆಯಿಂದ ಸಾಧ್ಯವೇ ಇಲ್ಲ."

* * * *

ಹೀಗೆ ಗಾಂಧಿಯವರು ನವಖಲಿ ಮತ್ತು ಬಿಹಾರಿನ ಪ್ರವಾಸಗಳನ್ನು ಮುಗಿಸಿ 30,3,47 ರಂದು ಡಿಲ್ಲಿಗೆ ಹೊರಟರು, ಆದರೆ ಜಾತೀಯತೆಯ ಗಲಭೆ ಶಾಂತವಾಗುವವರೆಗೆ ಅವರಿಗೆ ವಿಶ್ರಾಂತಿ ಎಲ್ಲಿ? ಡಿಲ್ಲಿಯಿಂದ ಮತ್ತೆ ಬಿಹಾರ್, ಮತ್ತೆ ಕಲ್ಕತ್ತ. ಭಾರತ

ಸ್ವತಂತ್ರವಾದ 47ನೇ ಆಗಸ್ಟ್ ಹದಿನೈದರಂದು, ಅವರು ಹೊಸಡಿಲ್ಲಿಯ ಸಂಭ್ರಮದಲ್ಲಿ ಭಾಗಿಯಾಗದೆ ಶಾಂತಿಯ ಪ್ರಯತ್ನಕ್ಕಾಗಿ ಬಂಗಾಳದಲ್ಲಿ ಅಲೆಯುತ್ತಿದ್ದರು. ಸ್ವಾತಂತ್ರ್ಯದಿಂದ ಅವರಿಗೆ ಎಷ್ಟು ಆನಂದವಾಗಬೇಕಿತ್ತೋ ಅಷ್ಟು ಆಗಲಿಲ್ಲ. ಗಾಂಧಿಯವರ ಪ್ರಯತ್ನದಿಂದ ಕಲ್ಕತ್ತದಲ್ಲಿ ಅದ್ಭುತಶಾಂತಿಯುಂಟಾಯಿತು. ಹಿಂದುಗಳು ಮುಸಲ್ಮಾನರನ್ನೂ ಮುಸಲ್ಮಾನರು ಹಿಂದುಗಳನ್ನೂ ಆಲಂಗಿಸಿಕೊಳ್ಳತೊಡಗಿದ್ದರು. ಗಾಂಧಿಜಿಯವರಿಗೆ ಖಿಲಾಫತ್ ದಿನಗಳು ಜ್ಞಾಪಕ ಬಂದವು. ಈದ್ ಹಬ್ಬದ ದಿನ ಹಿಂದುಗಳೂ ಮುಸಲ್ಮಾನರ ಮಸೀದಿಗಳಲ್ಲಿ ಹೋಗಿ ಭಾಗವಹಿಸಬೇಕೆಂದೂ, ದಕ್ಷಿಣ ಆಫ್ರಿಕದಲ್ಲಿ ತಾವು 20 ವರುಷಗಳು ಹಾಗೆ ಮಾಡಿದ್ದುದಾಗಿಯೂ ಗಾಂಧಿ ಹೇಳಿದರು. ಕಲ್ಕತ್ತೆಗಾಗಿ ಮಾಡಿದ ಉಪವಾಸದಿಂದ ಅಲ್ಲಿ ಪೂರ್ಣಶಾಂತಿಯುಂಟಾಯಿತು. ಗಾಂಧಿಯವರು 10-9-47ರಂದು ಡೆಲ್ಲಿಗೆ ಬಂದರು.

ಭಾರತದ ರಾಜಧಾನಿಯಾದ ಡೆಲ್ಲಿಯಲ್ಲಿ ಹಿಂದು ಮುಸಲ್ಮಾನ್ ಸಿಖ್ಖರ ಹೋರಾಟದಿಂದ ರಕ್ತದ ಕೋಡಿ ಹರಿದಿತ್ತು. ಗಾಂಧಿಯವರು ಬಿರ್ಲಾಭವನದ ಆವರಣದಲ್ಲಿ ಪ್ರತಿ ದಿನವೂ ಸಂಜೆ ಪ್ರಾರ್ಥನಾ ಸಭೆಯಲ್ಲಿ ಶಾಂತಿ ಸಂದೇಶವನ್ನು ಸಾರುತ್ತಿದ್ದರು. ಇದರಿಂದ ಗಾಂಧಿಯವರು ನಿರೀಕ್ಷಿಸಿದ ಫಲ ದೊರಕಲಿಲ್ಲ ಡಿಲ್ಲಿಯಲ್ಲಿ ಹಿಂದುಗಳ ಮತ್ತು ಸಿಖ್ಖರ ಅಸಹನೆಯಿಂದ ಮುಸಲ್ಮಾನರು ನಿರ್ನಾಮವಾಗುವ ಸ್ಥಿತಿ ಬಂತು. ಪಾಕೀಸ್ಥಾನದ ಹಿಂದುಗಳ ಗತಿಯೂ ಇದೇ ಆಯಿತು,

## ಹಿಂದು ಮುಸಲ್ಮಾನರ ಐಕ್ಯಕ್ಕಾಗಿ ಉಪವಾಸ

ಮಹಾತ್ಮಗಾಂಧಿಯವರು ಇದಕ್ಕಿದ್ದಂತೆ ಹಿಂದು ಮುಸಲ್ಮಾನರ ಐಕ್ಯಕ್ಕಾಗಿ 1947ನೇ ಜನವರಿ ಹದಿಮೂರನೆ ತಾರೀಖು ಉಪವಾಸವನ್ನು ಪ್ರಾರಂಭಿಸಿದರು. ಗಾಂಧಿಯವರ ಉಪವಾಸದ ಮಾತು ಹಠಾತ್ತನೆ ಪ್ರಕಟವಾಯಿತು. 12ನೆ ತಾರೀಖಿನ ಸಂಜೆ ಪ್ರಾರ್ಥನೆಯಲ್ಲಿ ಗಾಂಧಿಯವರು ತಮ್ಮ ಉಪವಾಸವನ್ನು ಸೂಚಿಸಿ, ಹೀಗೆ ಹೇಳಿದರು.

'ಉಪವಾಸವನ್ನು ಆರೋಗ್ಯಕ್ಕಾಗಿ ಆರೋಗ್ಯನಿಯಮಗಳನ್ನನು ಸರಿಸಿ ಮಾಡಬಹುದು. ಅಥವ ನಡೆದ ಅನ್ಯಾಯ ಮತ್ತು ಅನ್ಯಾಯ ವೆನಿಸಿದುದರ ಪ್ರಾಯಶ್ಚಿತ್ತಕ್ಕಾಗಿ ಮಾಡಬಹುದು. ಅಂತಹ ಉಪ ವಾಸಗಳಲ್ಲಿ ಉಪವಾಸಮಾಡುವವನು ಅಹಿಂಸೆಯ ಭಕ್ತನಾಗಿರ ಬೇಕೆಂಬ ನಿಯಮವಿಲ್ಲ. ಆದರೆ ಸಮಾಜದಿಂದ ನಡೆದ ಅನ್ಯಾಯದ ಕಾರ್ಯಕ್ಕಾಗಿ ಅಹಿಂಸೆಯ ಪೂಜಾರಿ ಕೈಕೊಳ್ಳಬೇಕಾಗುವ ಇನ್ನೊ ಒಂದು ಬಗೆಯ ಉಪವಾಸವುಂಟು. ಆತ ಮತ್ತಾವುದೂ ಬೇರೆ ಉಪಾಯ ತೋರದಾಗ ಹೀಗೆ ಮಾಡಬೇಕಾಗುವುದು. ಈಗ ನನಗೆ ಅಂತಹ ಪ್ರಸಂಗ ಬಂದಿದೆ.

'ಸೆಪ್ಟಂಬರ್ 9ಕ್ಕೆ ಕಲ್ಕತ್ತೆಯಿಂದ ಇಲ್ಲಿಗೆ ಬಂದಕೂಡಲೇ ನಾನು ಪಶ್ಚಿಮ ಪಂಜಾಬಿಗೆ ಹೋಗಬೇಕಾಗಿತ್ತು. ಆದರೆ ಅದು ಸಾಧ್ಯವಾಗಲಿಲ್ಲ. ಗೆಲುವಾಗಿರಬೇಕಾಗಿದ್ದ ಡಿಲ್ಲಿ ಮಸಣದಂತೆ ಕಂಡಿತು. ಪ್ರತಿಯೊಬ್ಬರೂ ನಿಸ್ತೇಜವಾಗಿದ್ದುದು ಗಾಡಿಯಿಂದ ಇಳಿದ ಕೂಡಲೇ, ನನಗೆ ಕಂಡು ಬಂದಿತು. ಸದಾ ವಿನೋದ ಹಾಗೂ ಆನಂದದಲ್ಲಿರುವ ಸರದಾರರೂ ಸಹ ಇದಕ್ಕೆ ಅಪವಾದವಾಗಿರಲಿಲ್ಲ. ಅದರ ಕಾರಣ ನನಗೆ ತಿಳಿಯಲಿಲ್ಲ. ಸರದಾರರು ನನ್ನನ್ನು ಸ್ವಾಗತಿ ಸಲು ಬಂದಿದ್ದರು. ಸಂಯುಕ್ತ ಭಾರತದ ರಾಜಧಾನಿಯಾದ ಡಿಲ್ಲಿ ಯಲ್ಲಿ ನಡೆದ ವಿಷಾದಕರ ಗಲಭೆಗಳನ್ನು ಅವರು ಕೂಡಲೇ ನನಗೆ ತಿಳಿಸಿದರು. ನಾನು ಡಿಲ್ಲಿಯಲ್ಲಿರಬೇಕೆಂದೂ ಅಲ್ಲಿಯೇ "ಮಾಡು ಅಥವ ಮಡಿ"ಯ ಬೇಕೆಂದೂ ಎನ್ನಿಸಿತು. ಪೋಲೀಸ್ ಮತ್ತು ಮಿಲಿಟರಿಯವರ ಎಚ್ಚರಿಕೆಯಿಂದ ಉಂಟಾಗಿರುವ ಶಾಂತಿ ತೋರಿಕೆ ಯದಿರುವುದು. ಆದರೆ ಹೃದಯದಲ್ಲಿ ಬಿರುಗಾಳಿ ಏಳುತ್ತಲೇ ಇರು ವುದು. ಅದು ಯಾವ ಕಾಲಕ್ಕೆ ಬೇಕಾದರೂ ಸ್ಫೋಟನವಾಗ ಬಹುದು. ಹಾಗಾದರೆ ನನ್ನ "ಮಾಡು" ಎಂಬ ಪ್ರತಿಜ್ಞೆ ಪೂರ್ಣ ವಾದಂತಾಗುವುದಿಲ್ಲ. ಹೀಗೆ ಮಾಡು ಎಂಬ ಪ್ರತಿಜ್ಞೆಯನ್ನು ನಡೆಸುವುದೇ ನನ್ನ ಪರಮಮಿತ್ರನಾದ ಮರಣದಿಂದ ನನ್ನನ್ನು ಉಳಿಸಿ ಕೊಳ್ಳುವ ದಾರಿ. ನನಗೆ ಹಿಂದು ಸಿಖ್ ಮುಸಲ್ಮಾನರಲ್ಲಿ ಹೃದಯ

ವನ್ನು ತೆರೆದ ಸ್ನೇಹ ಬೇಕಾಗಿದೆ. ಹಿಂದೆ ಹಾಗೆ ಇತ್ತು. ಇಂದು ಇಲ್ಲ. ಯಾವ ಭಾರತ ಭಕ್ತನೂ ಈ ಸ್ಥಿತಿಯನ್ನು ಶಾಂತಿಯಿಂದ ನೀರೀಕ್ಷಿಸಲಾರ. ನನ್ನ ಅಂತರಾತ್ಮ ಬಹುಕಾಲದಿಂದ ನನ್ನನ್ನು ಎಚ್ಚರಿಸುತ್ತಿದ್ದರೂ ಅದು ಸೈತಾನನ ಅಂದರೆ ನನ್ನ ದೌರ್ಬಲ್ಯದ ಕರೆಯಿರಬಹುದೆಂದು ನಾನು ಅದಕ್ಕೆ ಕಿವಿ ಮುಚ್ಚಿಯೇ ಇದ್ದೆ. ಅಸಹಾಯಕತೆ ನನಗೆ ಎಂದೂ ಸೇರದು. ಸತ್ಯಾಗ್ರಹಿ ಎಂದೂ ಅಸಹಾಯಕನಾಗಲಾರ. ತಾನೇ ಆಗಲಿ ಇತರರೇ ಆಗಲಿ ಖಡ್ಗವನ್ನುಪಯೋಗಿಸುವ ಸಳ್ಳದಲ್ಲಿ ಅವನು ಉಪವಾಸವನ್ನು ಕೊನೆಯ ಅಸ್ತ್ರವಾಗಿ ಉಪಯೋಗಿಸುತ್ತಾನೆ. ತಾವು ಏನು ಮಾಡಬೇಕೆಂದು ನನ್ನನ್ನು ಪ್ರತಿದಿನವೂ ಕೇಳುತ್ತಿರುವ ಮುಸಲ್ಮಾನರಿಗೆ, ನಾನು ಏನೂ ಪ್ರತ್ಯುತ್ತರ ಕೊಡಲಾರದವನಾಗಿದ್ದೇನೆ. ನನ್ನ ಹೇಡಿತನ ಈಚೀಚೆಗೆ ನನ್ನ ಹೃದಯವನ್ನೇ ಆಗೆಯುತ್ತಿದೆ. ಉಪವಾಸವನ್ನು ಪ್ರಾರಂಭಿಸಿದಕೂಡಲೇ ಅದು ಹೋಗಿಬಿಡುವುದು. ಕಳೆದ ಮೂರು ದಿನಗಳಿಂದ ಇದರ ಯೋಚನೆಯಲ್ಲಿಯೇ ಮಗ್ನನಾಗಿದ್ದೆ. ಈ ಕೊನೆಯ ತೀರ್ಮಾನ ಮಿಂಚಿನಂತೆ ಹೊಳೆದು ನನಗೆ ಸಮಾಧಾನವಾಗಿದೆ. ಪರಿಶುದ್ಧ ಹೃದಯದ ಮನುಷ್ಯ ಕೊಡುವ ಪ್ರಾಣಕ್ಕಿಂತ ಹೆಚ್ಚಿನ ಬಲಿದಾನ ಯಾವುದೂ ಇರುವುದಿಲ್ಲ. ಈ ಹೆಜ್ಜೆ ನ್ಯಾಯವಾದುದೆನ್ನಿಸಲು ಅರ್ಹವಾದ ಆ ಶುದ್ಧತೆ ನನ್ನಲ್ಲಿರುವುದೆಂದು ನಾನು ಆಶಿಸುತ್ತೇನೆ.

"ಇಂತಹ ಸಂದರ್ಭದಲ್ಲಿ ಹಿಂದುಗಳ ಮತ್ತು ಸಿಖ್ಖರ ಕರ್ತವ್ಯವೇನು ? ನೀವು ಈಗ ತಾನೇ ಗುರುದೇವರ ಕವಿತೆಯನ್ನು ಕೇಳಿದಿರಿ. " ನಿಮ್ಮೊಂದಿಗೆ ಯಾರೂ ಬರದಿದ್ದರೆ ನೀವು ಒಬ್ಬರೇ ನಡೆಯಿರಿ." ಈ ಕೀರ್ತನೆ ನನಗೆ ಬಹಳ ಮೆಚ್ಚಿಕೆ. ನಾನು ನವಖಲಿಯ ನನ್ನ ಪ್ರವಾಸ ಕಾಲದಲ್ಲಿ ಇದನ್ನು ನಿತ್ಯ ಹಾಡಿಕೊಳ್ಳುತ್ತಿದೆ. ನನ್ನ ಕೊನೆಯವರೆಗೆ ಈ ಹಾಡನ್ನೇ ಹಾಡಿಕೊಳ್ಳುತ್ತೇನೆ. ಪಾಕಿಸ್ತಾನದಲ್ಲಿ ಏನು ಬೇಕಾದರೂ ನಡೆಯಲಿ, ಭಾರತದ ಮುಸಲ್ಮಾನರ ಮೇಲೆ ನಾವು ಕೈ ಎತ್ತುವುದಿಲ್ಲವೆಂದು ಹಿಂದುಗಳೂ ಸಿಖರೂ ಪ್ರತಿಜ್ಞೆಮಾಡಬೇಕು. ಹಿಂದುಗಳೂ ಸಿಖರೂ ಇನ್ನು ಹೇಡಿತನದ ಕಾರ್ಯಗಳಲ್ಲಿ ತೊಡಗಬಾರದು

"ಡೆಲ್ಲಿ ಶಾಂತವಾದರೆ ನಾನು ಉಪವಾಸವನ್ನು ನಿಲ್ಲಿಸುತ್ತೇನೆ. ಡಿಲ್ಲಿ ಭಾರತದ ರಾಜಧಾನಿ. ಡಿಲ್ಲಿಯ ನಾಶ ಭಾರತ ಮತ್ತು ಪಾಕಿಸ್ತಾನ ಎರಡರ ನಾಶ. ಡಿಲ್ಲಿಯಲ್ಲಿ ಮುಸಲ್ಮಾನರಿಗೆ ರಕ್ಷಣೆ ದೊರಕಬೇಕು. ಗೂಂಡ ಎನ್ನಿಸಿಕೊಳ್ಳುವ ಸುಹ್ರವರ್ದಿಸಾಹೇಬರಿಗೂ ರಕ್ಷಣೆ ದೊರಕಬೇಕು. ನಾನು ಉಪವಾಸವನ್ನು ಬೇಗ ನಿಲ್ಲಿಸುವಂತೆ ಯಾರೂ ಪ್ರೇರಿಸಬಾರದು. ಹಾಗೆ ಪ್ರೇರಿಸುವವರಿಗೆ, ಗುರಿ ಭಾರತದ ಗೌರವವನ್ನು ಉಳಿಸುವುದಾಗಿರಬೇಕೇ ಹೊರತು, ಬರಿ ನನ್ನ ಪ್ರಾಣವನ್ನುಳಿಸುವುದಾಗಿರಕೂಡದು. ಭಾರತದಲ್ಲಿ ಈಚೆಗೆ ನಡೆಯುತ್ತಿರುವ ಸಂಗತಿಗಳಿಂದ ಭಾರತದ ಘನತೆ ಕಡಿಮೆಯಾಗುತ್ತಿದೆ ಇಂತಹ ಭಾರತವನ್ನು ನೋಡುತ್ತ ಜೀವಿಸುವುದೇ ನನಗೆ ಇಷ್ಟವಿಲ್ಲ''.

ಹದಿನಾಲ್ಕನೆ ತಾರೀಖಿನ ಪ್ರಾರ್ಥನಾ ಭಾಷಣಕ್ಕೆ ನಡೆದುಕೊಂಡು ಬರಲು ತಮಗೆ ಶಕ್ತಿ ಇರಲಾರದೆಂದು ತಿಳಿದು ಗಾಂಧಿ ತಮ್ಮ ಪ್ರಾರ್ಥನಾ ಭಾಷಣವನ್ನು ಬರೆದು ಕಳುಹಿಸಿದ್ದರು. ಆದರೆ ಅಂದು ಅವರು ಪ್ರಾರ್ಥನೆಗೆ ಬಂದರು. "ಇವತ್ತು ಬರುವ ಶಕ್ತಿ ಇತ್ತು. ಆ ಶಕ್ತಿಯನ್ನು ಉಪಯೋಗಿಸಿದ್ದೇನೆ. ವೈದ್ಯರು ನಾನು ನಡೆದುಕೊಂಡು ಬರಕೂಡದೆಂದು ಹೇಳಿದ್ದರು. ನಾನು ಅವರ ಮಾತನ್ನು ಮೀರಿ ಬಂದಿದ್ದೇನೆ. ನಾನು ದೇವರ ಕೈಯ್ಯಲ್ಲಿದ್ದೇನೆ. ನಾನು ಬದುಕಿರಬೇಕೆಂಬುದು ದೇವರ ಉದ್ದೇಶವಾದರೆ, ನಾನು ಸಾಯುವುದಿಲ್ಲ. ದೇವರಲ್ಲಿ ನನ್ನ ನಂಬಿಕೆ ಅಚಲವಾಗಿದೆ.''ಎಂದರು.

## ನೂರಿಪ್ಪತ್ತೈದು ವರುಷ ಬದುಕುವ ಆಸೆ

ಅಂದಿನ ಪ್ರಾರ್ಥನೆಯಲ್ಲಿ ಗಾಂಧಿ ತಮ್ಮ ಹೃದಯವನ್ನು ಬಿಚ್ಚಿ ಹೇಳಿದರು. "ರಾಜಕೀಯದಲ್ಲಿ ನನಗೆ ಏನೂ ಗೊತ್ತಾಗುವುದಕ್ಕೆ ಮುಂಚೆಯೇ, ನನ್ನ ಬಾಲ್ಯದಲ್ಲಿಯೇ ನನಗೆ ಜಾತೀಯ ಐಕ್ಯತೆಯು ಕನಸಾಗಿತ್ತು ಆ ಬಾಲ್ಯದ ಕನಸು ಇಂದು ಸಾಧ್ಯವಾದರೆ ನಾನು ಈ ಮುಪ್ಪಿನಲ್ಲಿಯೂ ಸಣ್ಣ ಹುಡುಗನಂತೆ ಆನಂದದಿಂದ ಕುಣಿದಾಡುವೆ. ಪ್ರಾಚೀನರು ಹೇಳಿದ ಪೂರ್ಣ ಜೀವನ (೧೨೫ ವರುಷ ಬದುಕುವ) ಆಸೆ ನನಗೆ ಮತ್ತೆ ಆಗ ಉಂಟಾಗುವುದು. ಆಗಲೇ ನಮಗೆ ನಿಜ

ವಾದ ಸ್ವರಾಜ್ಯ ದೊರೆಯುವುದು. ಅಂತಹ ಕನಸು ಕೈಗೂಡುವು ದಾದರೆ ಯಾರು ತಾನೆ ತನ್ನ ಬಾಳನ್ನು ಬಲಿಕೊಡಲಾರ? ಹೀಗಾದರೆ ರಾಜಕೀಯವಾಗಿಯೂ ಭೌಗೋಳಿಕವಾಗಿಯೂ ಹಿಂದುಸ್ಥಾನ ಪಾಕಿಸ್ಥಾನ ಬೇರೆ ಬೇರೆಯಾದರೂ, ನಿತ್ಯಜೀವನದಲ್ಲಿ ನಾವು ಬೇರೆ ಬೇರೆ ರಾಷ್ಟ್ರಗಳೆಂದು ಭಾರತೀಯರಾರೂ ಭಾವಿಸುವುದಿಲ್ಲ. ಈ ದರ್ಶನ ಭವ್ಯದರ್ಶನ. ಭಾರತ ಮತ್ತು ಪಾಕಿಸ್ತಾನಗಳು ಆಗ ನಿಜವಾದ ಸ್ವರ್ಗಗಳಾಗುವುವು. ಅಂತಹ ಸ್ವರ್ಗದಲ್ಲಿ ಭಿಕ್ಷುಕರೂ ನಿರ್ಗತಿಕರೂ ಇರುವುದಿಲ್ಲ. ಧನಿಕರೂ ಬಡವರೂ ಇರುವುದಿಲ್ಲ. ಬಂಡವಾಳಗಾರರೂ ಕೂಲಿಯೂ ಇರುವುದಿಲ್ಲ. ಹಸಿದವರೂ ಕುಡುಕರೂ ಇರುವುದಿಲ್ಲ ಅಲ್ಲಿ ಸ್ತ್ರೀಯರಿಗೆ ಪುರುಷರಿಗಿರುವಷ್ಟೇ ಗೌರವವಿರುವುದು. ಸ್ತ್ರೀಯರ ಮನರಕ್ಷಣೆ ನಡೆಯುವುದು. ಪುರುಷರು ಪರಿಶುದ್ಧರಾಗಿರುತ್ತಾರೆ. ಆ ಸ್ವರ್ಗದಲ್ಲಿ ಎಲ್ಲ ಮತಗಳವರೂ ಹೆಂಡತಿಯ ಹೊರತು ಉಳಿದ ಸ್ತ್ರೀಯರನ್ನೆಲ್ಲ ಅವರ ವಯಸ್ಸಿಗನುಸಾರವಾಗಿ ತಾಯಿ ತಂಗಿ ಅಥವ ಮಗಳಂತೆ ಪರಿಗಣಿಸುತ್ತಾರೆ. ಅಲ್ಲಿ ಅಸ್ಪೃಶ್ಯತೆ ನಾಶವಾಗಿರುತ್ತದೆ. ಎಲ್ಲ ಮತದವರಿಗೂ ಸಮಾನ ಗೌರವವಿರುತ್ತದೆ. ಈ ಉಪವಾಸ ವನ್ನು ಬೇಗ ಮುಗಿಸಿಬಿಡಬೇಕೆಂಬುದು ನನ್ನ ಆಸೆಯಲ್ಲ. ಶಾಂತಿಯು ವಾತಾವರಣಕ್ಕಾಗಿ ಎಷ್ಟು ದಿವಸ ಬೇಕಾದರೂ ನಾನು ಕಾಯಲು ತೃಪ್ತ. ಆದರೆ ಜನ ನನ್ನನ್ನು ಉಳಿಸುವುದಕ್ಕಾಗಿಯೇ ಯಾವ ಕಾರ್ಯ ವನ್ನಾದರೂ ಮಾಡಿದರೆ ನನಗೆ ನೋವಾಗುವುದು. ಇದು ದೇವರು ಪ್ರೇರಿಸಿದ ಉಪವಾಸ. ಆತ ಇಚ್ಛಿಸಿದಾಗ ಮಾತ್ರ ಈ ಉಪವಾಸದ ಮುಕ್ತಾಯವಾಗುವುದು. ದೇವರ ಇಚ್ಛೆಯನ್ನು ಮನುಷ್ಯ ಪ್ರಯತ್ನ ಎಂದೂ ತಡೆದಿಲ್ಲ. ತಡೆಯಲಾರದು.

* * * *

ಮಹಾತ್ಮಗಾಂಧಿಯವರು ಡಿಲ್ಲಿಯಲ್ಲಿ ನಿರೀಕ್ಷಿಸಿದ ಪರಿಣಾಮ ವುಂಟಾದುದರಿಂದ ತಾ|| 18ರಂದು (18-1-48)ರಂದು ಉಪವಾಸ ವನ್ನು ಮುಕ್ತಾಯಮಾಡಿದರು. ಮೊದಲು ಡಿಲ್ಲಿನಗರದ ಪ್ರಮುಖರು ಮತ್ತು ಪ್ರಮುಖಪಕ್ಷದ ಪ್ರತಿನಿಧಿಗಳು, ಅತ್ಯಂತ ಪೀಡಿತವಾದ

ಕರೋಲ್ ಭಾಗ್ ಮತ್ತು ಸಬಜ್ ಮಂಡಿಯಲ್ಲಿ ಡಾಕ್ಟರ್‌ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿ ಸಭೆಸೇರಿ ಗಾಂಧಿಯವರ ಏಳು ಶರತ್ತುಗಳನ್ನೂ ಒಪ್ಪಿ, ಗಾಂಧಿಯವರಿಗೆ ತಮ್ಮ ಒಪ್ಪಿಗೆಯನ್ನು ದೇವನಾಗರಿ ಮತ್ತು ಪರ್ಶಿಯನ್ ಲಿಪಿಯಲ್ಲಿ ಬರೆದುಕೊಟ್ಟರು. ಹಿಂದು ಮುಸಲ್ಮಾನ್ ಸಿಖ್ ಆಜಾದ್‌ಹಿಂದ್ ಪೌಜ್ ಇವುಗಳೆಲ್ಲದರ ಪ್ರತಿನಿಧಿಗಳೂ ನೆರೆದಿದ್ದರು. ಮೌಲಾನಾ ಆಜಾದ್, ಪಂಡಿತ್ ಜವಹರ್‌ಲಾಲ್ ನೆಹ್ರು ಮೊದಲೇ ಮಹಾತ್ಮರ ಕೊಠಡಿಯಲ್ಲಿ ನೆರದಿದ್ದರು ಪಾಕಿಸ್ತಾನದ ಹೈಕಮಿಶನರ ಜಹೀದ್ ಹಸೇನರೂ ಬಂದರು. ಅನಂತರ ಡಾಕ್ಟರ್ ರಾಜೇಂದ್ರಪ್ರಸಾದರು ಮಹಾತ್ಮರಿಗೆ ಹೀಗೆ ಹೇಳಿದರು. " ನೆನ್ನೆಯಿಂದ ಉಪವಾಸವನ್ನು ನಿಲ್ಲಿಸಬೇಕೆಂದು ನಿಮ್ಮನ್ನು ಬೇಡುವ ತೀರ್ಮಾನಮಾಡಿದ್ದೇವೆ. ಕರಾರು ಪತ್ರಕ್ಕೆ ಕೆಲವರು ನೆನ್ನೆರಾತ್ರಿ ಇನ್ನೂ ಸಹಿಮಾಡಿರಲಿಲ್ಲ ಇಂದು ಬೆಳಿಗ್ಗೆ ಎಲ್ಲರೂ ಬಂದು ಸಹಿಮಾಡಿದ್ದಾರೆ. ಅವರೆಲ್ಲ ಸಾಮೂಹಿಕ ಹೊಣೆಯಿಂದ ಕೊಟ್ಟ ವಾಗ್ದಾನಕ್ಕೆ ನಾನು ಕಾಂಗ್ರೆಸ್ ಅಧ್ಯಕ್ಷನಾಗಿ ಸಹಿಮಾಡಿದ್ದೇನೆ. ಡಿಲ್ಲಿಯ ಛೀಫ್‌ಕಮಿಶನರೂ ಡೆಪ್ಯುಟಿ ಕಮಿಷನರೂ ಡಿಲ್ಲಿಯ ಆಡಳಿತದ ಪರವಾಗಿ ಹಾಕಿದ್ದಾರೆ. ಆದುದರಿಂದ ಮಹಾತ್ಮರು ತಮ್ಮ ಉಪವಾಸವನ್ನು ನಿಲ್ಲಿಸಬೇಕೆಂದು ಬೇಡುತ್ತೇನೆ."

ಮಹಾತ್ಮರಿಗೆ ಒಪ್ಪಿಸಿದ ಶಾಂತಿ ಒಡಂಬಡಿಕೆಯ ಪತ್ರದಲ್ಲಿ ಈ ಕರಾರುಗಳಿದ್ದವು (1) ಡಿಲ್ಲಿಯಲ್ಲಿ ಹಿಂದು ಮುಸ್ಲಿಂ ಸಿಖ್‌ರು ನೆಮ್ಮದಿಯಾಗಿ ಬಾಳಬೇಕೆಂಬುದು ನಮ್ಮ ಇಚ್ಛೆಯಾಗಿದೆ ಮುಸ್ಲಿಮರ ಜೀವ ಮತ್ತು ಮಾನ ವಿತ್ತಗಳ ರಕ್ಷಣೆಮಾಡುವ ಹೊಣೆ ಹೊರುತ್ತೇವೆ. ಡಿಲ್ಲಿಯಲ್ಲಿ ಹಿಂದೆ ಸಂಬವಿಸಿದ ಘಟನೆಗಳು ಇನ್ನು ಮುಂದೆ ಸಂಬವಿಸಲಾರವೆಂದು ಪ್ರತಿಜ್ಞೆಮಾಡುತ್ತೇವೆ ಕ್ವಾಜಾಕುತುಬುದ್ದೀನ್ ಉರಸು ಎಂದಿನಂತೆ ಈ ವರುಷವೂ ನಡೆಯುವುದು. ಮುಸಲ್ಮಾನರು ಮೊದಲಿನಂತೆ ನಿರ್ಭೀತಿಯಿಂದ ಡಿಲ್ಲಿಯಲ್ಲಿ ಸಂಚರಿಸಬಹುದು. ಮುಸ್ಲಿಮರು ಬಿಟ್ಟು ಹೋದಕಡೆ ಈಗ ಹಿಂದುಗಳ ವಶದಲ್ಲಿರುವ ಮಸೀದಿಗಳನ್ನು ಅವರಿಗೆ ಮತ್ತೆ ಬಿಟ್ಟುಕೊಡಲಾಗುವುದು. ಅವರಿಗಾಗಿ ಕಾಯ್ದಿಟ್ಟ

ಸ್ಥಳಗಳನ್ನು ಬಲಾತ್ಕಾರವಾಗಿ ಆಕ್ರಮಿಸುವುದಿಲ್ಲ. ಡಿಲ್ಲಿಯಿಂದ ಹೋದ ಮುಸ್ಲಿಮರು ತಿರುಗಿ ಇಲ್ಲಿಗೆ ಬರಲು ನಮ್ಮ ಆಕ್ಷೇಪವಿಲ್ಲ. ಈ ಎಲ್ಲ ವಿಷಯಗಳನ್ನೂ ನಾವು ಪೋಲೀಸರ ಸಹಾಯವಿಲ್ಲದೆ ಸಾಧಿಸುತ್ತೇವೆ."

ಮಹಾತ್ಮರ ರಾಜಕೀಯ ಜೀವನದಲ್ಲಿ ಅದು ಹದಿನೈದನೆಯ ಉಪವಾಸ. ಶರತ್ತಿನಂತೆ ಫಲ ಸಾಧಿಸದಿದ್ದರೆ ಮತ್ತೊಂದು ಉಪವಾಸಕ್ಕೆ ಹಿಂಜರಿಯುವುದಿಲ್ಲವೆಂದೂ ಗಾಂಧಿ ಎಚ್ಚರಿಸಿ, ಜನವರಿ 18ನೇ ತಾರೀಖು (1948) ನೂರಇಪ್ಪತ್ತೆರಡು ಗಂಟೆಗಳ ಉಪವಾಸದ ನಂತರ ಪಾರಣೆಮಾಡಿದರು. ಮಹಾತ್ಮರು ಪಾರಣೆಮಾಡಿದ ಸುದ್ದಿಯಿಂದ ಇಡೀ ದೇಶವೇ ಆನಂದಗೊಂಡಿತು. ಆ ಸಂಜೆ ಮಳೆ ಹೆಚ್ಚಾಗಿದ್ದರೂ ಡಿಲ್ಲಿಯಲ್ಲಿ ಪ್ರಾರ್ಥನಾ ಸಭೆಗೆ ಬಹಳಮಂದಿ ಮಹಾತ್ಮರ ದರ್ಶನಾ ಕಾಂಕ್ಷಿಗಳಾಗಿ ಬಂದಿದ್ದರು. ಅವರಲ್ಲಿ ಅನೇಕರು ತಮ್ಮ ತಮ್ಮ ಧ್ವಜಗಳನ್ನು ಹಿಡಿದುಕೊಂಡು ಮೆರವಣಿಗೆ ಹೊರಡಿಸಿಕೊಂಡು ಬಂದಿದ್ದರು.

ಪ್ರಾರ್ಥನೆಯನಂತರ, ಗಾಂಧಿಯವರು ಮಲಗಿದ್ದ ಮಂಚದ ಬಳಿ ಹಾಯ್ದು ಅವರ ದರುಶನ ಪಡೆಯಲು ಅನೇಕರಿಗೆ ಸಾಧ್ಯವಾಗದಿದ್ದರೂ ಧ್ವನಿವಾಹಕಯಂತ್ರದ ಮೂಲಕ ಅವರ ಭಾಷಣವನ್ನು ಕೇಳುವ ಭಾಗ್ಯ ಎಲ್ಲರಿಗೂ ದೊರೆಯಿತು. ಗಾಂಧಿಯವರು ಬರೆದುಕೊಟ್ಟ ಭಾಷಣವನ್ನು ಓದಲಾಯಿತು. "ಜಾತೀಯ ಐಕ್ಯತೆಗಾಗಿ ಇಂದು ಮಾಡಿದ ಪ್ರತಿಜ್ಞೆ ಫಲಿಸಿದರೆ ಮಾನವ ಜನಾಂಗದ ಸೇವೆಗೈಯ್ಯುತ್ತಾ ನನ್ನ ಸಂಪೂರ್ಣ ಜೀವನವನ್ನು ಜೀವಿಸಬೇಕೆಂಬ ನನ್ನ ಇಚ್ಛೆ ದ್ವಿಗುಣಿತವಾಗುವುದು. ಈ ಜೀವಾವಧಿಯು ೧೨೫ ವರುಷಗಳೆಂದೂ ೧೩೩ ವರುಷಗಳೆಂದೂ ಹೇಳುತ್ತಾರೆ."

## ಸತ್ಯಜೀವನದ ಹೊರತು ದೇವರಿಲ್ಲ

"ದೇವರ ಮತ್ತೊಂದು ನಾಮವಾದ ಸತ್ಯಕ್ಕಾಗಿ ನಾನು ಉಪವಾಸ ಹೂಡಿದೆ. ಸತ್ಯಜೀವನದ ಹೊರತು ದೇವರಿಲ್ಲ. ದೇವರ ಹೆಸರಿನಲ್ಲಿ ನಾವು ಈಗ ಕೊಲೆ ಸುಲಿಗೆ ಮತಾಂತರ, ಸ್ತ್ರೀಯರ

ಅಪಹರಣ ಮುಂತಾದ ಕೃತಿಗಳನ್ನು ಎಡಬಿಡದೆ ಮಾಡುತ್ತಿದ್ದೇವೆ. ಆದರೆ ಸತ್ಯದ ಹೆಸರಿನಲ್ಲಿ ಇವನ್ನು ಯಾರೂ ನಡೆಸಿಲ್ಲ. ಆ ಸತ್ಯದ ಹೆಸರಿನಲ್ಲಿಯೇ ನಾನು ನನ್ನ ಉಪವಾಸ ನಿಲ್ಲಿಸಿದೆ. ಮಾನವ ಜನಾಂಗದ ಸೇವೆಯನ್ನು ಕೊನೆಯವರೆಗೆ ಸಲ್ಲಿಸುವ ಸಾಮರ್ಥ್ಯವನ್ನು ದೇವರು ನನಗೆ ಕೊಡಲಿ. ಈ ನನ್ನ ಕೃತಿಯಲ್ಲಿ ದೇವರ ಕೈವಾಡವಿಲ್ಲದೆ ಇಲ್ಲ ಈ ಶಾಂತಿ ಶರತ್ತುಗಳಿಗಿಂತ ಮುಖ್ಯವಾದುದೆಂದರೆ ಹಿಂದುಸ್ಥಾನ ದಲ್ಲಿಯಂತೆ ಪಾಕಿಸ್ತಾನದಲ್ಲಿಯು ಹಿಂದೂ ಮುಸ್ಲಿಂ ಸಿಖ್‌ರಲ್ಲಿ ನಿಜವಾದ ಸಖ್ಯ ಬೆಳೆದು ಬರುವುದು. ಹಿಂದೂಸ್ಥಾನದಲ್ಲಿ ಈ ಸೌಹಾರ್ದ ತಲೆದೋರಿದರೆ ಪಾಕಿಸ್ತಾನದಲ್ಲಿಯೂ ಈ ಪರಿಸ್ಥಿತಿ ತಾನಾಗಿಯೇ ತಲೆದೋರುವುದು. ಹಿಂದುಸ್ಥಾನದಲ್ಲಿ ಕತ್ತಲೆ ಇದ್ದಾಗ ಪಾಕಿಸ್ತಾನದಲ್ಲಿ ಬೆಳಕನ್ನು ಹೇಗೆ ಅಪೇಕ್ಷಿಸಬೇಕು? ಇಲ್ಲಿ ಬೆಳಕು ಉಂಟಾದರೆ ಅಲ್ಲಿಯೂ ಉಂಟಾಗುವುದು ಎಂಬ ಚಿನ್ಹೆಗಳು ಕಂಡು ಬರುತ್ತಿವೆ. ಸತ್ಯದೇವನು ನಮಗೆ ದಾರಿತೋರಿಸಲಿ."

---

# ಗಾಂಧಿ ಅಮರರಾದರು

೧೯೪೮ನೇ ಸಂವತ್ಸರದ ಜನವರಿ ಮುವ್ವತ್ತನೆಯ ದಿನ ಭಾರತ ದೇಶ ಎಂದೊಂದೂ ಮರೆಯದ ದುರ್ದಿನ. ಭಾರತಮಾತೆಯ ಶ್ರೇಷ್ಠ ಪುತ್ರರೂ, ಅಜಾತ ಶತ್ರುಗಳೂ, ಮನುಷ್ಯ ಪ್ರಪಂಚವನ್ನು ಹಿಂಸಾಪಿಶಾಚಿಯ ಕೈಯಿಂದ ಉದ್ಧರಿಸಲು ಪ್ರಯತ್ನಿಸಿದ ಭಾರತ ಆಧುನಿಕ ಬುದ್ಧ, ಮಹಾತ್ಮಗಾಂಧಿಯವರು, ದೇವರ ಸಾನ್ನಿಧ್ಯಕ್ಕೆ ನಡೆದ ದಿನವದು. ಭಾರತ ಸ್ವಾತಂತ್ರ್ಯಪಿತನ ಈ ಅನೀಕ್ಷಿತವಾದ ನಿಧನದಿಂದ ಭಾರತ ದಿಕ್ಕೆಟ್ಟು ಅನಾಥವಾಯಿತು. ಜಾತೀ ವರ್ಣ ಲಿಂಗ ವ್ಯತ್ಯಾಸವಿಲ್ಲದೆ ಮನುಷ್ಯ ಸಾಮಾನ್ಯರಿಗಾಗಿ ದುಡಿದು ಜಗತ್ತಿನ ಪ್ರಜೆಯಾಗಿದ್ದ ಗಾಂಧಿಯವರು, ಕಣ್ಮರೆಯಾದುದರಿಂದ ಜಗತ್ತು ತನ್ನ ಹಿತೈಷಿಯನ್ನು ಕಳೆದುಕೊಂಡು ರೋದಿಸಿತು. ಸತ್ಯಾನ್ವೇಷಕರೂ ಸಾತ್ವಿಕಮಾರ್ಗಾನುಸಾರಿಗಳೂ ಆಧ್ಯಾತ್ಮ ಪ್ರವರ್ತನೆಯುಳ್ಳವರೂ, ಅಣುಬಾಂಬಿನ ವಿಧ್ವಂಸಕ ನೀತಿಯನ್ನು ಆತ್ಮಬಲದಿಂದ ಜಯಸಬಲ್ಲ ಒಂದೇ ಒಂದು ಶಕ್ತಿ ಜಗತ್ತಿನಿಂದ ಮರೆಯಾದುದರಿಂದ, ನಿರ್ಬಲರಾದರು. ಎಲ್ಲಾ ದೇಶದ ದಳಿತರೂ ದೀನರೂ ತಮ್ಮ ಮುಖ್ಯ ಪೋಷಕನನ್ನು ಕಳೆದುಕೊಂಡರು ಜಗತ್ತಿನ ಬೆಳಕು ಮರೆಯಾಯಿತು. ಭಾರತದಲ್ಲಿ ಅಂಧಕಾರ ಪೂರ್ಣವಾಗಿ ಹರಡಿತು ಭಾರತಾಂಬೆಯ ಮುಕುಟ ಕಳಚಿಬಿತು.

ಅಂದು ಶುಕ್ರವಾರ; ಮಹಾತ್ಮಗಾಂಧಿಯವರು ದೆಹಲಿಯಲ್ಲಿ ಬಿರ್ಲ ಭವನದಲ್ಲಿದ್ದರು. ಈಚೆಗೆ ಕೆಲವುದಿನಗಳಿಂದ ಭಾರತಸರ್ಕಾರಕ್ಕೆ ಸಲಹೆ ಕೊಡುವುದಕ್ಕೂ, ದೆಹಲಿಯಲ್ಲಿ ಹಿಂದು ಮುಸಲ್ಮಾನಸಿಖ್‌ರಲ್ಲಿ ಬಾಂಧವ್ಯವನ್ನುಂಟುಮಾಡುವುದಕ್ಕಾಗಿಯೂ, ಗಾಂಧಿಯವರು ದೆಹಲಿಯಲ್ಲಿ ನಿಂತಿದ್ದರು. ಆದರೆ ಅವರ ಲಕ್ಷ್ಯವೆಲ್ಲವೂ ತಾವು ಹೋಗಿ ಪಾಕಿಸ್ತಾನದಲ್ಲಿ ನಿಲ್ಲುವುದರ ಕಡೆಗೆ ಇದ್ದಿತು. ಭಾರತ ಸರ್ಕಾರಕ್ಕೆ ದೆಹಲಿಯಲ್ಲಿ ಗಾಂಧಿಯವರ ಸಲಹೆ ಗಳಿಗೆಗಳಿಗೆಗೂ ಬೇಕಾಗಿತ್ತು. ಗಾಂಧಿಯವರು ದೆಹಲಿಯ ವಾತಾವರಣವನ್ನು ತಮ್ಮ ಪ್ರಭಾವ ಪ್ರಾರ್ಥನೆಗಳಿಂದ

ಶಾಂತಗೊಳಿಸಿದರು. ಅದೇ ಜನವರಿ ೧೩ನೇ ತಾರೀಖಿನಿಂದ ಗಾಂಧಿಯವರು ಒಂದು ಉಪವಾಸವ್ರತವನ್ನು ಸಹ ಕೈಕೊಂಡು, ದೇಶದಲ್ಲಿ ಕೋಮುವಾರು ಐಕ್ಯತೆಗೆ ತಾವು ಪ್ರಾಣಕೊಡುವುದಕ್ಕೂ ಸಿದ್ಧರಾಗಿರುವುದನ್ನು ತೋರಿಸಿದ್ದರು. ಎಲ್ಲಾ ಕೋಮಿನವರೂ ಶಾಂತವಾಗಿರುವೆವೆಂದು ಗಾಂಧಿಯವರನ್ನು ಒಪ್ಪಿಸಿದನಂತರವೇ ಅವರು ಉಪವಾಸವನ್ನು ನಿಲ್ಲಿಸಿದ್ದು. ಜನವರಿ ಮುವತ್ತನೆ ಶುಕ್ರವಾರದ ವೇಳೆಗೆ ಗಾಂಧಿಯವರು ಆ ಉಪವಾಸವನ್ನು ನಿಲ್ಲಿಸಿ ಇನ್ನೂ ಹನ್ನೆರಡು ದಿನಗಳು ಮಾತ್ರವಾಗಿತ್ತು.

ತಾವು ಎಲ್ಲಿದ್ದರೆ ಅಲ್ಲಿ ಐದುಗಂಟೆಗೆ ಬಂದು ಪ್ರಾರ್ಥನೆ ಮಾಡುವುದು ಗಾಂಧಿಯವರ ಪದ್ಧತಿ. ಅಂದು ಸರದಾರ್ ಪಟೇಲರು ಗಾಂಧಿಯವರೊಂದಿಗೆ ಮಾತನಾಡಲು ಬಂದಿದ್ದರು. ಮಾತಿನಲ್ಲಿ ಐದು ನಿಮಿಷ ಹೆಚ್ಚಾಗಿ ಕಳೆಯಿತು. ಯಾವ ಕೆಲಸವನ್ನೂ ಕಾಲಕ್ಕೆ ಸರಿಯಾಗಿ ಮಾಡುವವರಾದುದರಿಂದ ಗಾಂಧಿಜಿ ತತ್‍ಕ್ಷಣವೇ ಪ್ರಾರ್ಥನಾ ಮೈದಾನದ ಕಡೆ ಹೊರಟರು. ಸರದಾರ್ ಪಟೇಲರು ಕಾರಿನಲ್ಲಿ ಕುಳಿತು ತಮ್ಮ ಕಛೇರಿಗೆ ಹೋದರು. ಗಾಂಧಿಯವರು ತಮ್ಮ ಇಬ್ಬರು ಮೊಮ್ಮಕ್ಕಳ ಹೆಗಲಿನಮೇಲೆ ಕೈ ಇಟ್ಟುಕೊಂಡು ಐದುಗಂಟೆ ಐದು ನಿಮಿಷಕ್ಕೆ ಬಿರ್ಲಾಭವನದ ಹೊರಗಿನ ಪ್ರಾರ್ಥನಾ ಸಭೆಗೆ ಬಂದರು. ಕುಳಿತಿದ್ದ ಜನರು ಗೌರವದಿಂದ ಅವರಿಗೆ ದಾರಿ ಬಿಟ್ಟರು. ಪ್ರಾರ್ಥನಾ ಮೈದಾನದಲ್ಲಿ ಹಾಕಿದ್ದ ಕುರ್ಚಿಯ ಹತ್ತಿರಕ್ಕೆ ಗಾಂಧಿ ಹೊರಟರು. ಆಗ ಅವರ ಮುಂದುಗಡೆಗೆ ಸುಮಾರು ಮುವ್ವತ್ತೈದು ವಯಸ್ಸಿನ ಒಬ್ಬ ಹಿಂದು ಯುವಕನು ಕೈಮುಗಿಯುತ್ತಾ ಬಂದನು! "ಇವತ್ತು ನೀವು ಪ್ರಾರ್ಥನೆಗೆ ಐದು ನಿಮಿಷ ಹೊತ್ತು ಮೀರಿ ಸಾವಕಾಶವಾಗಿ ಬಂದಿರಿ" ಎಂದನು ಗಾಂಧಿಯವರು ತಮ್ಮ ಸಹಜವಾದ ಮುಗುಳು ನಗೆಯಿಂದ "ಹೌದು" ಎಂದರು. ಆ ಕೊಲೆ ಪಾತಕನು ಕೂಡಲೇ ಕೈಯಲ್ಲಿದ್ದ ಪಿಸ್ತೂಲಿನಿಂದ ಗಾಂಧಿಯವರಿಗೆ ಗುಂಡುಗಳನ್ನು ಹಾರಿಸಿದನು. ಒಂದು ಗುಂಡೂ ತಪ್ಪದಷ್ಟು ಹತ್ತಿರದಲ್ಲಿ ಕೊಲೆಗಡಕನು ನಿಂತಿದ್ದನು. ಒಂದು ಗುಂಡು ಗಾಂಧಿಯವರ

ಹೃದಯವನ್ನು ಹೊಕ್ಕಿತು. ಎರಡು ಗುಂಡುಗಳು ಅವರ ಹೊಟ್ಟೆಯನ್ನು ಪ್ರವೇಶಿಸಿದುವು. ಗಾಂಧಿಯವರು ಪ್ರಜ್ಞೆತಪ್ಪಿ, ಮೊಮ್ಮಕ್ಕಳು ಹಿಡಿದುಕೊಂಡರೂ ಸಹ ಕೆಳಗೆ ಬಿದ್ದರು. ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಎಲ್ಲ ನಡೆದು ಹೋಯಿತು. ಸಭೆಯಲ್ಲಿ ಹಾಹಾಕಾರವೆದ್ದಿತು. ಅವ್ವ ಗಾಂಧಿ ಮತ್ತು ಮಣಿಗಾಂಧಿ (ಗಾಂಧಿಯವರ ಮೊಮ್ಮಕ್ಕಳು) ಗಾಂಧಿಯವರನ್ನು ಹಿಡಿದುಕೊಂಡು ಅಳುತ್ತಲೇ ಇದ್ದರು. ಬೀಳುವುದಕ್ಕೆ ಮುಂಚೆ ಗಾಂಧಿಯವರು ನೆರೆದಿದ್ದವರಕಡೆಗೆ ಕೈಮುಗಿದು "ರಾಮ್ ರಾಮ್"ಎಂದರು. ಅವೇ ಅವರ ಬಾಯಿಂದ ಬಂದ ಕೊನೆಯ ಮಾತುಗಳಾದವು. ಗಾಂಧಿಯವರ ಮೊಮ್ಮಕ್ಕಳು ಅವರು ಬೀಳದಂತೆ ಅವರನ್ನು ಕೂರಿಸಿಕೊಂಡಿದ್ದರು. ಗಾಂಧಿಯವರ ದೇಹದಿಂದ ರಕ್ತ ಸೋರಿ ಅವರ ಬಿಳಿಯ ಖಾದಿಶಾಲು ಕೆಂಪಗಾಗುತ್ತಿತ್ತು. ಕೂಡಲೇ ಗಾಂಧಿಯವರನ್ನು ಬಿರ್ಲಾ ಭವನಕ್ಕೆ ಎತ್ತಿಕೊಂಡು ಹೋದರು. ಸುದ್ದಿ ಮಿಂಚಿನ ವೇಗದಿಂದ ಹರಡಿತು. ಮಹಾತ್ಮಗಾಂಧಿಯವರು ಪರಮಾತ್ಮನ ಸಾನ್ನಿಧ್ಯವನ್ನು ಸೇರಿದರು. ಅಖಿಲ ಭಾರತ ರೇಡಿಯೋದ ಎಲ್ಲಾ ಕಾರ್ಯ ಕ್ರಮಗಳನ್ನೂ ಅಂದು ರದ್ದುಪಡಿಸಿದರು. ಮುಂದಲ ನಿಮಿಷದಲ್ಲಿ ಮಹಾತ್ಮ ಗಾಂಧಿಯವರ ಮರಣವಾರ್ತೆ ಜಗತ್ತಿಗೆಲ್ಲಾ ಗೊತ್ತಾಯಿತು. ಮನುಷ್ಯ ಜಗತ್ತಿನ ಉಸಿರೇ ಕಟ್ಟಿದಂತಾಯಿತು. ಭಾರತೀಯರು ಅನಾಥರಾದರು. ಆ ಏಟನಿಂದ ಇನ್ನೂ ಅವರು ಚೇತರಿಸಿಕೊಂಡಿಲ್ಲ.

ಈ ಹೃದಯ ವಿದ್ರಾವಕ ಸುದ್ದಿ ತಿಳಿದ ಕೂಡಲೇ, ದೆಹಲಿಯಲ್ಲಿದ್ದ ಸಮಸ್ತರೂ ಬಿರ್ಲಾಭವನದ ಕಡೆ ಧಾವಿಸಿದರು. ಗಾಂಧಿಯವರೊಂದಿಗೆ ಆಗತಾನೇ ಮಾತನಾಡಿಕೊಂಡು ಹೋಗಿದ್ದ ಪಟೇಲರು ತಮ್ಮ ಸ್ಥಾನ ಮುಟ್ಟಿದ ಕೂಡಲೇ ಸುದ್ದಿ ತಿಳಿಯಿತು. ಲಾರ್ಡ್ ಮೌಂಟ್ ಬೇಟನ್, ಪ್ರಧಾನಿ ಜವಹರಲಾಲ್ ನೆಹ್ರೂ, ಸರ್ದಾರ್ ಪಟೇಲ್ ಮತ್ತು ಉಳಿದ ಮಂತ್ರಿಗಳೆಲ್ಲ ಬಿರ್ಲಾ ಭವನಕ್ಕೆ ಓಡಿ ಬಂದರು. ಮಹಾತ್ಮ ಗಾಂಧಿಯವರ ದೇಹವನ್ನು ಕೆಲವು ದಿನ ಪ್ರೇಕ್ಷಕರ ನೋಟಕ್ಕಾಗಿ, ವಾಸನಾ ಎಣ್ಣೆ ಚಿಕಿತ್ಸೆಯಿಂದ ಉಳಿಸಿರ

ಬೇಕೆಂದು ಒಂದು ಸೂಚನೆ ಬಂದಿತ್ತು. ಆದರೆ ಸರ್ಕಾರದವರು ಗಾಂಧಿಯವರ ಮಗ ದೇವದಾಸರನ್ನೂ ಕಾರ್ಯದರ್ಶಿ ಪ್ಯಾರಿಲಾಲ್‌ರನ್ನೂ ಕೇಳಿದುದಕ್ಕೆ, ಇವರು ಒಪ್ಪಲಿಲ್ಲ, ದೇಹಕ್ಕೆ ತತ್‌ಕ್ಷಣವೇ ಸಂಸ್ಕಾರವಾಗಬೇಕೆಂಬುದು ಗಾಂಧಿಯವರ ಇಷ್ಟವಾಗಿದ್ದಿತೆಂದು ಅವರು ಹೇಳಿ ಹೇಳಿದರು. ಮರುದಿನ ಸಾಯಂಕಾಲ ನಾಲ್ಕು ಗಂಟೆಗೆ ಯಮುನಾ ನದಿಯ ತೀರದಲ್ಲಿ ದೇಹಕ್ಕೆ ಸಂಸ್ಕಾರವಾಗುವುದೆಂದೂ ದೇಹವು ಹನ್ನೊಂದು ಗಂಟೆಗೆ ಬಿರ್ಲಾ ಭವನದಿಂದ ಹೊರಡುವುದೆಂದೂ ಪ್ರಧಾನಿ ನೆಹ್ರು ಹೇಳಿದರು. ಬಹಳ ಹೊತ್ತಾದರೂ ಜನ ಬಿರ್ಲಾ ಭವನದ ಸುತ್ತಾ ಅಳುತ್ತ ನಿಂತೇ ಇದ್ದರು. ಗಾಂಧಿಜಿ ದೇಹವನ್ನು ಎಲ್ಲರಿಗೂ ಕಾಣುವಂತೆ ಮಹಡಿಯ ಮೇಲೆ ಇಟ್ಟು ಅದಕ್ಕೆ ನಾನಾ ಕಡೆಗಳಿಂದ ದೀಪದ ಪ್ರಕಾಶವನ್ನು ಬಿಟ್ಟರು ಮಹಾತ್ಮ ಗಾಂಧಿಕಿ ಜೈ ಎಂಬ ಧ್ವನಿ ಅಂತರಿಕ್ಷವನ್ನು ಮುಟ್ಟಿತು. ಜನರು ಅತ್ತು ಅತ್ತು ಸೊರಗಿ ನಿಶ್ಯಕ್ತರಾಗಿ ನಿರ್ವೀರ್ಯರಾಗಿ ನಿಧಾನವಾಗಿ ತಮ್ಮ ಮನೆಗಳಿಗೆ ಹೋದರು. ಅನಂತರ ಗಾಂಧಿಯವರ ದೇಹವನ್ನು ಅವರು ಮಲಗುತ್ತಿದ್ದ ಕೊಠಡಿಗೆ ಸಾಗಿಸಿದರು.

ಆ ದೇಹದ ಸುತ್ತ ರಾತ್ರಿಯೆಲ್ಲ ಭಕ್ತರು ಭಜನೆ ನಡೆಸಿದರು. ಸರದಾರ್ ಪಟೇಲ್ ಪ್ರಧಾನಿ ನೆಹರ್ರು ಮುಂತಾದವರು ರಾತ್ರಿ ಅಲ್ಲಿಯೇ ಉಳಿದರು. ಗಾಂಧಿಯವರಿಗೆ ಪ್ರಿಯವಾದ ಹಾಡುಗಳ ಮತ್ತು ಭಗದ್ಗೀತೆಯ ಗಾಯನ ರಾತ್ರಿಯೆಲ್ಲಾ ನಡೆದಿತ್ತು. ಕೆಲವು ದಿನಗಳ ಕೆಳಗೆ ಗಾಂಧಿಯುವರು, "ಮರಣವು ನನ್ನ ನೆಚ್ಚಿನ ಗೆಳೆಯ" ಎಂದು ಹೇಳಿದ್ದರು. ಆ ನೆಚ್ಚಿನ ಗೆಳೆಯ ಅವರನ್ನು ಅಂದು ಬಂದು ಆಲಿಂಗಿಸಿದ್ದ. ಗಾಂಧಿಯವರ ಸುತ್ತ ನೆರೆದಿದ್ದವರು ಗಾಂಧಿಯವರ ಅವತಾರದ ನಾನಾ ಮುಖಗಳ ದಿವ್ಯ ಸಂದೇಶಗಳನ್ನು ಜ್ಞಾಪಿಸಿಕೊಳ್ಳುತ್ತಿದ್ದರು. ಗಾಂಧಿಯುವರು ಪ್ರಾರ್ಥನೆಗಾಗಿ ಧರಿಸಿದ್ದ ಶಾಲನ್ನೂ ಪಂಚೆಯನ್ನೂ ಬಿಚ್ಚಿ, ಧಾರ್ಮಿಕ ವಿಧಿಗನುಸಾರವಾಗಿ ಸ್ನಾನಮಾಡಿಸುತ್ತಿರುವಾಗ ಎಲ್ಲರಿಗೂ ಸಹಿಸಲಾರ ದುಃಖ ಬಂತು. ಗಾಂಧಿಯುವರು ಅತ್ಯಂತ ಕಡಿಮೆ ಬಟ್ಟೆ ಧರಿಸುತ್ತಿದ್ದರೂ, ಅದರಲ್ಲಿ ಅಚ್ಚುಕಟ್ಟು

ಓರಣ ಹೆಚ್ಚು. ಅಂದು ಗಾಂಧಿಯವರು ನಿತ್ಯಕ್ಕಿಂತ ಹೆಚ್ಚು ಓರಣ ವಾಗಿದ್ದರು. ಅವರು ಕೆಳಗೆ ಬೀಳುವಾಗ ಆ ಹುಲ್ಲಿನ ಗರಿಕೆಗಳು ಶಾಲಿಗೆ ಅಂಟಿಕೊಂಡಿದ್ದವು. ಶಾಲುವಿನಲ್ಲಿಯೇ ಒಂದು ಗುಂಡು ದೊರೆಯಿತು. ಎಡದ ತೋಳಿನ ಮೇಲೆ ಹೊದೆಯುವ ಪಂಚೆ ರಕ್ತ ದಿಂದ ತೊಯ್ದು ಹೋಗಿತ್ತು. ಅವರ ಸೊಂಟದ ಚಿರಪರಿಚಿತವಾದ ಚೌಕವೊಂದನ್ನು ಬಿಟ್ಟು ಉಳಿದವನ್ನೆಲ್ಲಾ ತೆಗೆಯಲಾಯಿತು. ಅದೇ ಮೊಣಕಾಲುಗಳು, ಮೊಣಕೈಗಳು ಅದೇ ಹಸ್ತ ಸ್ವಾಭಾವಿಕವಾಗಿ ತೋರುವ ಕೈಬೆರಳು ಅವೇ ಪಾದಗಳು, ಎಲ್ಲವೂ ಎಂದಿನಂತೆಯೇ ಇದ್ದವು. ಗಾಂಧಿಯವರ ಎದೆ ಎದ್ದು ಕಾಣುತ್ತಿತ್ತು. ಜಗತ್ತಿನ ಯಾವ ದೇಶದ ಯೋಧನ ಎದೆಯೂ ಗಾಂಧಿಯವರ ಎದೆಯಷ್ಟು ಧೈರ್ಯಶಾಲಿಯಾದುದಲ್ಲ.

ಗಾಂಧಿಯವರ ಮರಣದಿಂದ ದೇಹಲಿಯಲ್ಲಿ ಎಲ್ಲ ಸಾಮಾನ್ಯ ಚಟುವಟಿಕೆಗಳೂ ನಿಂತು ಹೋದುವು. ೩೧ ನೆ ತಾರೀಖು ಬೆಳಿಗ್ಗೆ ಆರು ಗಟಿಗೆ ಗಾಂಧಿಯವರ ದೇಹದರ್ಶನಕ್ಕೆ, ಬಿರ್ಲಾ ಭವನದ ಬಾಗಿ ಲನ್ನು ತೆರೆದರು. ಜನರ ಮಹಾಸಾಗರವು ಹೂವಿನ " ಹಾರ ತುರಾಯಿ ಗಳನ್ನು ಹಿಡಿದುಕೊಂಡು ಗಾಂಧಿಯವರಿಗೆ ಅರ್ಪಿಸಲು ನಾನು ಮುಂದು ತಾನು ಮುಂದು ಎಂದು ನುಗ್ಗುತ್ತಿದ್ದಿತು ಗಾಂಧಿಯವರನ್ನು ಸೊಂಟದ ವರೆಗೆ ಬಿಳಿಯ ಖಾದಿಯಲ್ಲಿ ಮುಚ್ಚಿದ್ದರು. ಕತ್ತಿಗೆ ಒಂದು ಖಾದಿಯ ಹಾರವನ್ನು ಹಾಕಿದ್ದರು. ಗಾಂಧಿಯವರ ಮುಖವು ಪ್ರಾರ್ಥನೆಯಲ್ಲಿರುವ ಶಾಂತತೆಯನ್ನು ತಳೆದಿತ್ತು. ಮಹಾತ್ಮ ಗಾಂಧಿ ಯವರ ದೇಹವನ್ನು ಒಂದು ಯುದ್ಧದ ರಥದಲ್ಲಿ ಇರಿಸಲಾಯಿತು. ಹೂವಿನಿಂದ ಅಲಂಕೃತವಾದ ದೇಹವನ್ನೂ ಗಾಂಧಿಯವರ ಮೊಮ್ಮ ಕ್ಕಳೂ ಪ್ಯಾರಿಲಾಲರೂ ಇತರರೂ ಎತ್ತಿಕೊಂಡು ಬಂದು ರಥದ ಮೇಲೆ ಇಟ್ಟರು. ಕರಿಯ ಪಟ್ಟಿಯನ್ನು ಧರಿಸಿ ಮೌಂಟ್ ಬೇಟನ್‌ರು ಸಿದ್ಧರಾಗಿದ್ದರು. ರಥದ ಬಲಗಡೆ ಕೆಳಗಿನ ಮೆಟ್ಟಲಿನ ಮೇಲೆ ಸರ್ದಾರ್ ಬಲದೇವಸಿಂಗ್‌ರೂ ಬಲಗಡೆ ಪ್ರಧಾನಿ ನೆಹರ್ರುರ ವರೂ ನಿಂತರು. ನೆಹರ್ರು ಹಿಂದೆ ಸರದಾರ್ ಪಟೇಲರು ನಿಂತರು.

ಮುಂದುಗಡೆ ದೇವದಾಸ್ ಗಾಂಧಿ ಕುಳಿತರು. ರಥವು ನಿಧಾನವಾಗಿ ಗಾಂಧಿಜಿಕಿ ಜೈ ಎಂಬ ಘೋಷದೊಡನೆ ಹೊರಟಿತು. ದಾರಿ ಯುದ್ದಕ್ಕೂ ಅಸಂಖ್ಯಾತ ಮೋಟಾರುವಾಹನಗಳು; ಅವುಗಳ ಮೇಲು ಛಾವಣಿಯಲೆಲ್ಲಾ ಜನ ಗುಂಪು ನೆರೆದಿದ್ದಿತು. ಬೈಸಿಕಲ್‌ಗಳು ರಾಸಿ ರಾಸಿಯಾಗಿ ಬಿದ್ದಿದ್ದವು ಗಳಿಗೆ ಗಳಿಗೆಗೆ ಜನರ ಗುಂಪು ಹೆಚ್ಚುತ್ತಲೇ ಹೋಯಿತು. " ದೆಹಲಿ ಗೇಟ್ '' ನ ಹತ್ತಿರಕ್ಕೆ ಬಂದಾಗ ಮೇಲು ಗಡೆ ರಾಯಲ್ ಇಂಡಿಯನ್ ಏರ್‌ಫೋರ್ಸ್ ದಳದ ಮೂರು ಆಕಾಶ ವಿಮಾನಗಳು ರಥದ ಮೇಲೆ ಪುಷ್ಪವೃಷ್ಟಿ ಮಾಡಿದವು. ರಥದ ಜತೆ ಯಲ್ಲಿ ಸಾವಿರಾರು ಭಜನೆಕೂಟಗಳು ಭಗವದ್ಗೀತೆಯನ್ನೂ ಗಾಂಧಿಯ ವರಿಗೆ ಪ್ರಿಯವಾದ ಹಾಡುಗಳನ್ನೂ ಹಾಡುತ್ತಾ ಹೋಗುತ್ತಿದ್ದರು.

ನಾಲ್ಕುವರೆ ಗಂಟೆಗೆ ಮೆರವಣಿಗೆ ರಾಜಘಟ್ಟವನ್ನು ಸೇರಿತು. ಗಂಧದ ಮರದಿಂದ ಚಿತೆಯನ್ನು ಮಾಡಿದ್ದರು ಪಡಿತ ರಾಮಚಂದ್ರ ಶಾಸ್ತ್ರಿಗಳು ಮಂತ್ರಗಳನ್ನು ಪಠಿಸುತ್ತಿದ್ದರು ಯಮುನಾನದಿಯ ಪವಿತ್ರವಾದ ನೀರನ್ನು ದೇಹದ ಮೇಲೆ, ದೇವದಾಸ್ ಗಾಂಧಿ ಪ್ರೋಕ್ಷಿ ಸಿದರು ಪ್ರಧಾನಿ ಜವಹರ್‌ಲಾಲ್ ನೆಹ್ರು ಚಿತೆಯ ಸುತ್ತ ಸುತ್ತು ತ್ತಿದ್ದರು ೫ ಗಂಟೆ ಹೊತ್ತಿಗೆ ದೇವದಾಸ್ ಗಾಂಧಿ ಚಿತೆಯನ್ನು ಹೊತ್ತಿಸಿದರು- ಎಲ್ಲಾ ದೇಶದ ರಾಯಭಾರಿಗಳೂ ಗಾಂಧಿಯವರಿಗೆ ತಮ್ಮ ರಾಷ್ಟ್ರಗಳ ಪರವಾಗಿ ಗೌರವವನ್ನು ಅರ್ಪಿಸಿದರು

ಮಹತ್ಮ ಗಾಂಧಿ ಭಾರತಕ್ಕೆ ಮಾತ್ರ ಸೇರಿದವಲ್ಲ. ಅವರು ಮನುಷ್ಯ ಪ್ರಪಂಚಕ್ಕೇ ಸೇರಿದವರು. ರಾಜ್ಯದಲ್ಲಿ ಅಧಿಕಾರಸ್ಥಾನದಲ್ಲಿ ಲ್ಲದಿದ್ದರೂ, ಜಗತ್ತಿನ ಎಲ್ಲಾ ರಾಷ್ಟ್ರಗಳ ಬಾವುಟಗಳನ್ನೂ ಒಬ್ಬ ಖಾಸಗೀ ವ್ಯಕ್ತಿಗಾಗಿ ತಗ್ಗಿಸಿದ ಉದಾಹರಣೆ ಮತ್ತೆಲ್ಲಿಯೂ ಇಲ್ಲ. ಜಗತ್ತಿನ ಎಲ್ಲಾ ರಾಷ್ಟ್ರಗಳೂ ತಮ್ಮ ರಾಜ್ಯಾಂಗ ಸಭೆಗಳಲ್ಲಿ ನಿಂತು ಗಾಂಧಿಯವರ ನಿಧನಕ್ಕಾಗಿ ಶೋಕಪ್ರದರ್ಶನ ಮಾಡಿದವು. ಪರ ಮಾತ್ಮನ ವಿಷಯದಲ್ಲಿ ಹೇಗೆ, ನಾಲ್ಕು ವೇದಗಳೂ ನೂರೆಂಟು ಉಪನಿಷತ್ತುಗಳೂ ಹೊಗಳಿದರೂ ಮುಗಿಯುವುದಿಲ್ಲವೆಂದು ಹೇಳುತ್ತಾ ರೆಯೋ, ಪರಮಾತ್ಮನ ಭಕ್ತರಾದ ಗಾಂಧಿಯವರ ವಿಷಯವೂ ಹಾಗೆಯೇ.

## ಎಂದೆಂದಿಗೂ ಹೊಳೆಯುವ ಜ್ಯೋತಿ

ಗಾಂಧಿಯವರ ಕೊಲೆ ಸಂಭವಿಸಿದ ಕೂಡಲೇ, ಪ್ರಧಾನಿ ಜವಹರ್ ಲಾಲ್ ನೆಹ್ರು ಆಕಾಶವಾಣಿಯಲ್ಲಿ ಮಾತನಾಡಿದರು. ಅವರ ಧ್ವನಿ ದುಃಖದಿಂದ ಭಾರವಾಗಿತ್ತು. ಮಧ್ಯೆ ಮಧ್ಯೆ ಭಾವಾವೇಶದಿಂದ ಗಂಟಲು ಹಿಡಿಯುತ್ತಿತ್ತು. ನೆಹ್ರು ಹೀಗೆ ಹೇಳಿದರು "ಈ ದೇಶದ ಬೆಳಕು ನಂದಿಹೋಯಿತು. ನಮ್ಮ ಬಾಳಿನಿಂದಲೂ ಬೆಳಕು ಹೋಯಿತು. ಎಲ್ಲೆಡೆಯೂ ಕತ್ತಲು ತುಂಬಿದೆ. ನಿಮಗೆ ಏನು ಹೇಳಲಿ? ಹೇಗೆ ಹೇಳಲಿ? ನಮ್ಮ ಪ್ರಿಯ ಗುರು, ಬಾಪು, ದೇಶದ ತಂದೆ, ಕಣ್ಮರೆಯಾದರು. ಕಣ್ಮರೆಯಾದರೆಂದು ಹೇಳುವುದು ಬಹುಶಃ ಸರಿಯಲ್ಲ. ಆದರೂ ಇದುವರೆಗೆ ಅವರನ್ನು ಕಂಡಂತೆ ಇನ್ನು ನಾವು ಈ ಕಣ್ಣುಗಳಿಂದ ಕಾಣಲಾರೆವು. ಇನ್ನು ನಾವು ಪದೇ ಪದೇ ಇದುವರೆಗೆ ಮಾಡಿದಂತೆ ಸಲಹೆ ಶಾಂತಿ ಸಮಾಧಾನಗಳಿಗಾಗಿ ಅವರ ಬಳಿಗೆ ಓಡುವಂತೆ ಇಲ್ಲ. ಇದು ನನಗೆ ಮಾತ್ರವೇ ದೊಡ್ಡ ನಷ್ಟವಲ್ಲ. ಈ ದೇಶದ ಜನರಿಗೆಲ್ಲಾ ದೊಡ್ಡ ನಷ್ಟ. ದೇಶಕ್ಕೆ ಬಿದ್ದ ಈ ಏಟು ನನ್ನ ಮಾತಿನಿಂದ ಮಾಯುವುದಿಲ್ಲ. ಯಾರ ಮಾತಿನಿಂದಲೂ ನಿಮಗೆ ಸಮಾಧಾನವಾಗುವುದಿಲ್ಲ.

"ನಮ್ಮ ಬಾಳಿನ ಬೆಳಕು ನಂದಿಹೋಗಿದೆ ಎಂದು ನಾನು ಹೇಳಿದೆ. ಆದರೆ ನಾನು ಹೇಳಿದುದು ತಪ್ಪು. ಈ ದೇಶದಲ್ಲಿ ಹೊಳೆದ ಆ ಬೆಳಕು ಸಾಮಾನ್ಯ ಬೆಳಕಲ್ಲ. ಇದೇ ಬೆಳಕು ಇಲ್ಲಿ ಸಾವಿರ ವರುಷಗಳನಂತರವೂ ಹೊಳೆಯುತ್ತಲೇ ಇರುವುದು. ಹೊಳೆದು ಈ ಜನರಿಗೂ, ಇದನ್ನು ನೋಡುವ ಇತರರಿಗೂ, ಜಗತ್ತಿಗೂ, ಶಾಂತಿಯನ್ನು ಕೊಡುವುದು. ಯಾಕೆಂದರೆ ಆ ಬೆಳಕು ಕ್ಷಣಿಕವಾದುದಲ್ಲ. ಇಂದಿಗೆ ಮಾತ್ರ ಸೇರಿದುದಲ್ಲ. ಆ ಬೆಳಕು ಸಜೀವ ಸತ್ಯ ಶಾಶ್ವತ ಸತ್ಯವನ್ನು ಬೋಧಿಸಿತು. ನಮ್ಮನ್ನು ತಪ್ಪುದಾರಿಯಿಂದ ಹಿಂದಿರುಗಿಸಿ, ಸತ್ಯದ ದಾರಿಯನ್ನು ತೋರಿಸಿ ಈ ದೇಶಕ್ಕೆ ಸ್ವಾತಂತ್ರ್ಯವನ್ನು ತಂದು ಕೊಟ್ಟಿತು."

"ಗಾಂಧಿಯವರು ಮಾಡಬೇಕಾದ ಕೆಲಸ ಇನ್ನೂ ಬಹಳ

ವಾಗಿರುವಾಗಲೇ ಇದು ನಡೆದುಹೋಯಿತು. "ಅವರು ಮಾಡುವ ಕೆಲಸ ಮುಗಿಯಿತು. ಇನ್ನು ನಮಗೆ ಅವರ ಸಲಹೆ ಬೇಡ" ಎಂಬಂತೆ ನಮಗೆ ಎಂದಿಗೂ ಇರಲಿಲ್ಲ. ನಮ್ಮ ದೇಶದ ಇಂದಿನ ಈ ಕಠಿಣ ಪರಿಸ್ಥಿತಿಯಲ್ಲಿ ಯಂತೂ ಇದು ನಾವು ಸಹಿಸಲಸಾಧ್ಯವಾದ ಏಟು "

"ಕೋಪದಿಂದ ಯಾರೂ ಅಚಾತುರ್ಯವಾಗಿ ನಡೆಯಬಾರದು. ಧೀರರಾಗಿ ಶಾಂತರಾಗಿ ಬಂದ ಕಷ್ಟವನ್ನೆಲ್ಲಾ ಎದುರಿಸಬೇಕು. ನಮ್ಮ ಈ ಮಹಾಗುರು ಕೊಟ್ಟಿರುವ ಬೋಧನೆಗಳನ್ನು ಚಾಚೂ ತಪ್ಪದೆ ಅನುಸರಿಸಬೇಕು. ಧೀರರಾಗಿ ಶಕ್ತರಾಗಿ ವರ್ತಿಸಬೇಕು. ಆತನ ಆತ್ಮ ನಮ್ಮನ್ನು ನೋಡುತ್ತಿದೆ. ನಾವು ಹಿಂಸೆ ಮತ್ತು ಗಂಭೀರರಹಿತ ವಾದ ವರ್ತನೆಯಲ್ಲಿ ತೊಡಗಿದರೆ ಅದು ನೋಡುತ್ತದೆ. ಆದುದರಿಂದ ನಾವು ಹಾಗೆ ಮಾಡಕೂಡದು. ಅಂದಮಾತ್ರಕ್ಕೆ ನಾವು ದುರ್ಬಲ ರಾಗಬೇಕೆಂದಲ್ಲ. ನಮ್ಮ ನಮ್ಮಲ್ಲಿಯ ಅಲ್ಪತೆಗಳನ್ನೆಲ್ಲಾ ಬದಿಗೊತ್ತಿ ಈ ದೊಡ್ಡ ಶೋಕದಲ್ಲಿ ಒಗ್ಗಟ್ಟಾಗಬೇಕು. ಜೀವನದ ಅಲ್ಪತೆ ಕ್ಷುದ್ರ ವಿಷಯಗಳನ್ನು ತೊರೆದು, ಮಹತ್ತಾದುವನ್ನು ಸಾಧಿಸಬೇಕೆಂಬುದರ ಗುರುತಾಗಿ ಈ ಅಪಘಾತ ಸಂಭವಿಸದೆ. ಸಣ್ಣ ವಿಷಯಗಳನ್ನೇ ಕುರಿತು ನಾವು ಬಹಳ ಯೋಚಿಸುತ್ತಿದ್ದೆವು. ಗಾಂಧಿಯವರು ಜೀವನ ದಲ್ಲಿ ಹೇಗೆಯೋ ಹಾಗೆ ಸಾವಿನಲ್ಲಿಯೂ ಸತ್ಯದ ಕಡೆಗೆ ನಮ್ಮ ಗಮನವನ್ನು ಎಳೆದಿದ್ದಾರೆ. ಇದನ್ನು ನಾವು ಯಾವಾಗಲೂ ಜ್ಞಾಪಕ ದಲ್ಲಿಟ್ಟುಕೊಳ್ಳುವುದು ನಮಗೂ ಭಾರತಕ್ಕೂ ಒಳ್ಳೆಯದು."

ಸರದಾರ್ ಪಟೇಲರು ಹೀಗೆ ಹೇಳಿದರು. "ಇದು ಕೋಪಕ್ಕೆ ಕಾಲವಲ್ಲ. ಶೋಕಕಾಲ. ಗಾಂಧಿಯವರು ಬದುಕಿದ್ದಾಗ ಅವರ ಸಲಹೆಯಂತೆ ನಡೆಯಲಿಲ್ಲ. ಈಗಲಾದರೂ ನಡೆಯಬೇಕು. ಇಲ್ಲ ದಿದ್ದರೆ ಭಾರತಕ್ಕೆ ಶಾಶ್ವತವಾದ ಅಪಕೀರ್ತಿ ಬರುವುದು."

* * * *

ಎರಡನೆ ತಾರೀಖು ಬೆಳಿಗ್ಗೆ ರಾಮದಾಸ್ ಗಾಂಧಿ, ದೇವದಾಸ್ ಗಾಂಧಿ ಮತ್ತು ಮೊಮ್ಮಕ್ಕಳಾದ ಅಪ್ಪಗಾಂಧಿ ಮತ್ತು ಮನುಗಾಂಧಿ ಯವರು ಗಾಂಧಿಯವರ ಅಸ್ಥಿಸಂಚಯನ ಮಾಡಿದರು. ಭಸ್ಮ ಅಸ್ಥಿಯ

ಭಾಗಗಳು ಯಮುನಾನದಿಯಲ್ಲಿ ಬಿಡಲ್ಪಟ್ಟವು. ಪ್ರಧಾನಿ ನೆಹ್ರು ಮತ್ತು ಇತರ ಮಂತ್ರಿಗಳೂ ಸರೋಜಿನಿದೇವಿ ಸರ್‌ಅಕ್ಬರ್ ಹೈದರಿ ಆಚಾರ್ಯ ಕೃಪಾಲಿನಿ ಪ್ಯಾರಿಲಾಲ್ ಸುಶೀಲನಯ್ಯರ್ ದುಃಖಾಶ್ರುಪೂರಿತ ರಾಗಿ ಭಜನೆ ನಡೆಸುತ್ತಿದ್ದ ಅನೇಕ ಲಕ್ಷಜನರೊಂದಿಗೆ ನೆರದಿದ್ದರು ಅಸ್ಥಿಗಳನ್ನು ಸಂಗ್ರಹಿಸಿದ ತಾಮ್ರದ ಪಾತ್ರೆಯಮೇಲೆ ರಾಮ್ ರಾಮ್ ಎಂದು ಬರೆದು ಪೂಜಿಸಿದರು.

ಮಹಾತ್ಮಗಾಂಧಿಯವರ ಅಸ್ಥಿಯನ್ನು ಪ್ರಯಾಗದಲ್ಲಿ ತ್ರಿವೇಣೀ ಸಂಗಮದಲ್ಲಿ ೧೨ನೇ ತಾರೀಖು ಬಿಡಲಾಯಿತು. ದೆಹಲಿಯಿಂದ ಸ್ಪೆಷಲ್ ರೈಲಿನಲ್ಲಿ ಆ ಬೆಳಿಗ್ಗೆ ೯ ಗಂಟೆಗೆ ಅಲಹಾಬಾದಿಗೆ ಅಸ್ಥಿಯನ್ನು ತಂದರು. ದಾರಿಯುದ್ದಕ್ಕೂ ಅನೇಕ ಲಕ್ಷಜನರು ಅಸ್ಥಿಗೆ ತಮ್ಮ ಭಕ್ತಿಯನ್ನು ಅರ್ಪಿಸಿದರು. ಅದೇ ಕಾಲದಲ್ಲಿ ಭಾರತದ ನಾನಾ ಭಾಗಗಳಲ್ಲಿಯು ಸಮುದ್ರಗಳಲ್ಲಿಯೂ ಪವಿತ್ರ ತೀರ್ಥಗಳಲ್ಲಿಯೂ ಅಸ್ಥಿಯನ್ನು ವಿಸರ್ಜಿಸಲಾಯಿತು. ಪ್ರಯಾಗದಲ್ಲಿ ಮುವ್ವತ್ತು ಲಕ್ಷ ಜನರು ಆ ಗಂಭೀರ ದೃಷ್ಯವನ್ನು ದೃಷ್ಟಿಸಿದರು. ಕನ್ಯಾಕುಮಾರಿಯಲ್ಲಿ ಮೂರು ಸಮುದ್ರಗಳೂ ಸೇರುವ ಎಡೆಗೆ ದೋಣಿಯಲ್ಲಿ ಅಸ್ಥಿಯನ್ನು ತೆಗೆದುಕೊಂಡು ಹೋಗಿ ವಿಸರ್ಜಿಸಲಾಯಿತು. ಆ ಸ್ಥಳದವರೆಗೆ ಜನರು ದೋಣಿಗಳ ಮಗ್ಗಲಲ್ಲಿ ಈಜಿಕೊಂಡು ಹೋದರು. ಮದರಾಸು ಧನುಷ್ಕೋಟಿ ದಂಡಿ ಕಾಶಿ ರಾಮೇಶ್ವರ ಗೋದಾವರಿ ಕಾವೇರಿ, ಗೊರೂರಿನ ಬಳಿ ಹೇಮಾವತಿಯಗಚಿಸಂಗಮ ಮೊದಲಾದ ಕಡೆಗಳಲ್ಲೆಲ್ಲ ಅಸ್ಥಿಯನ್ನು ವಿಸರ್ಜಿಸಲಾಯಿತು. ಮಹಾತ್ಮಗಾಂಧಿಯವರ ಧರ್ಮಪತ್ನಿ ಕಸ್ತೂರಿಬಾಯಿರವರ ಅಸ್ಥಿಗಳನ್ನೂ ಪ್ರಯಾಗದಲ್ಲಿಯೇ ಹಿಂದೆ ಬಿಟ್ಟಿದ್ದರು.

ಗೌತಮಬುದ್ಧ, ಏಸುಕ್ರಿಸ್ತನ, ಕಾಲದಿಂದೀಚೆಗೆ ಗಾಂಧಿಯವರಂತಹ ಮಹಿಮರು ಜನಿಸಲಿಲ್ಲ ಮಹಾತ್ಮಗಾಂಧಿಯವರು ಮನುಷ್ಯ ಸಮಾಜಕ್ಕೆ ಸೇವಕರಾಗಿದ್ದರು. ಅವರ ಹೃದಯ ವೈಶಾಲ್ಯ ಅಖಿಲ ಜಗತ್ತನ್ನೂ ತನ್ನಲ್ಲಿ ಆಲಿಂಗಿಸಿಕೊಳ್ಳುವುದಾಗಿದ್ದಿತು. ಜಗತ್ತಿನ ಈ ಸೇವೆಗಾಗಿ, ಜಗತ್ತಿಗೆ ಮಾರ್ಗದರ್ಶನಮಾಡುವುದಕ್ಕಾಗಿ ಅವರು

ನಮ್ಮ ದೇಶವನ್ನು ಬಿಟ್ಟು ಬೇರೆ ಎಲ್ಲಿಗೂ ಹೋಗಲಿಲ್ಲ. ಯಾವ ಪ್ರಚಾರಕಾರ್ಯವನ್ನು ಕೈಕೊಳಲಿಲ್ಲ ಪುಷ್ಪಗಂಧ ತಾನು ಇರುವ ಎಡೆಯಿಂದಲೇ ಎಲ್ಲೆಡೆಗೂ ಪಸರಿಸುವಂತೆ, ಗಾಂಧಿಯವರು ಭಾರತ ದಲ್ಲಿ ಕುಳಿತೇ ಜಗತ್ತನ್ನು ಬೆಳಗಿದರು. ಅವರ ನಿಧನದಿಂದ ರಾಜಾಧಿ ರಾಜರಿಂದ ಹಿಡಿದು ದರಿದ್ರರವರೆಗೆ, ಅದರಲ್ಲಿಯೂ ಮುಖ್ಯವಾಗಿ ದರಿದ್ರರಿಗೆ ತಮ್ಮ ಹಿತೈಷಿಯನ್ನು ಕಳೆದುಕೊಂಡಂತೆ ಆಯಿತು ಪ್ರಪಂಚವೆಲ್ಲವೂ ಏಕಕಂಠದಿಂದ ಅವರನ್ನು ಹೊಗಳಿತು ರಾಜ್ಯದ ಅಧಿಕಾರಿಗಳಲ್ಲದವರಿಗಾಗಿ ದೇಶದ ಬಾವುಟ ಅರ್ಧವಾದುದು ಇದೇ ಮೊದಲು ಸಂಯುಕ್ತ ರಾಷ್ಟ್ರಗಳಿಗೆ ಸೇರಿದ ಎಲ್ಲಾ ರಾಷ್ಟ್ರಗಳೂ ತಮ್ಮ ಬಾವುಟಗಳನ್ನು ಇಳಿಸಿದವು. ಹೊರದೇಶಗಳು ಭಾರತದ ಪ್ರಜೆಗೆ - ಯಾಕೆ ಯಾವುದೇ ದೇಶದ ಪ್ರಜೆಗೇ ಆಗಲಿ—ಇಂತಹ ಗೌರವವನ್ನು ತೋರಿಸಿದುದು ಇದೇ ಮೊದಲು. ಇಂಗ್ಲೆಂಡಿನ ಪಾರ್ಲಿಮೆಂಟಿ ನಲ್ಲಿಯೂ ಅಮೇರಿಕದಲ್ಲಿಯೂ ಆಸ್ಟ್ರೇಲಿಯ ಆಫ್ರಿಕ ರಾಜ್ಯಾಂಗ ಸಭೆಗಳಲ್ಲಿಯೂ ಇಟಲಿ, ಫಿನ್‌ಲ್ಯಾಂಡ್ ನಾರ್ವೆ ಬ್ರೆಸಿಲ್ ಚೀನ ಜಪಾನ್ ಇಂಡೋನೇಷ್ಯ ರಷ್ಯ ಫ್ರಾನ್ಸ್ ಜರ್ಮನಿ ಕನಡ ಪರ್ಶಿಯ ಆಫಘಾನಿಸ್ಥಾನ್ ಅರೇಬಿಯ ಫಿಲಿಪ್ಪೈನ್ ಪೋರ್ಚುಗಲ್ ಮುಂತಾದ ಎಲ್ಲಾ ರಾಷ್ಟ್ರಗಳಲ್ಲಿಯೂ ಮಹಾತ್ಮರ ನಿಧಾನಕ್ಕಾಗಿ ಶೋಕಿಸಿ ಭಾರತ ವನ್ನು ಸಂತೈಸಿದರು. ಆ ದುಃಖಗಾನ ಮಾಲೆಯಿಂದ ಕೆಲವನ್ನು ಆರಿಸಿ ಕೊಡಲಾಗಿದೆ.

## ಬಾಪು

"ಸಾವಿರದ ಒಂಭೈನೂರ ಹದಿನಾರು. ಮುವ್ವತ್ತೆರಡು ವರಷಗಳು ಕಳೆದುಹೋಗಿವೆ. ನಾನು ಬಾಪುವನ್ನು ಆಗ ಮೊದಲಸಲ ನೋಡಿದೆ. ಅಲ್ಲಿಂದ ಇಲ್ಲಿಯವರೆಗೆ ಎಷ್ಟೊಂದು ಕಾಲ ಕಳೆದುಹೋಗಿದೆ ! ನಮ್ಮ ದೃಷ್ಟಿ ಸ್ವಾಭಾವಿಕವಾಗಿ ಹಿಂದಕ್ಕೆ ಹೋಗುತ್ತದೆ. ನೆನಪುಗಳು ಒಂದಾದಮೇಲೆ ಒಂದರಂತೆ ಕವಿದುಕೊಂಡು ಬರುತ್ತವೆ. ಭಾರತದ ಇತಿಹಾಸದಲ್ಲಿ ಇದು ಎಂತಹ ವಿಚಿತ್ರವಾದ ಕಾಲ ಈ ಕತೆ, ಇದರ ಉನ್ನತಿ ಅವನತಿ ಜಯ ಸೋಲು ಇವೆಲ್ಲಾ ಒಂದು ಕಾದಂಬರಿಯಂತೆ

ರೋಮಾಂಚಕಾರಕವಾಗಿವೆ. ನಮ್ಮ ಅಲ್ಪ ಜೀವನಗಳನ್ನು ಸಹ ಈ ರೋಮಾಂಚಕಾರಿತ್ವ ಬೆಳಗದಿರಲಿಲ್ಲ. ಏಕೆಂದರೆ ಆ ಕಾಲದಲ್ಲಿ ಭಾರತದಲ್ಲಿ ನಾವು ಬದುಕಿದ್ದು ಇದರ ಮಹತ್ತಾದ ಐತಿಹಾಸ ರಚನೆಯ ನಾಟಕದಲ್ಲಿ ಮಹತ್ತೋ ಅಲ್ಪವೋ ಆದ ಪಾತ್ರಗಳನ್ನು ವಹಿಸಿದೆವು.

ಜಗತ್ತಿನ ಇತಿಹಾಸದಲ್ಲಿ ಈ ಕಾಲ ಯುದ್ಧಗಳ ಮತ್ತು ಬದಲಾವಣೆಯ ಕಾಲ. ಆದರೆ ಭಾರತದಲ್ಲಿ ನಡೆದ ಘಟನೆಗಳು ತಮ್ಮವೇ ಆದ ಸ್ವರೂಪದಿಂದ ಎದ್ದು ನಿಂತು ಕಾಣುತ್ತವೆ. ಯಾಕೆಂದರೆ ಅವುಗಳ ಮಟ್ಟವೇ ಬೇರೆ ಬಾಪುವಿನ ವಿಷಯ ಗೊತ್ತಿಲ್ಲದೆ, ಬರಿಯ ಭಾರತದ ಈ ಕಾಲದ ಘಟನೆಗಳನ್ನು ಮಾತ್ರ ನೋಡುವವರಿಗೆ, ಇವೆಲ್ಲಾ ಭಾರತದಲ್ಲಿ ಯಾಕೆ ನಡೆದವು ಎಂದು ಆಶ್ಚರ್ಯವಾಗುವುದು. ಇದನ್ನು ವಿವರಿಸುವುದು ಕಷ್ಟ. ನಾವು ಯಾಕೆ ಹಾಗೆ ನಡೆದೆವು ಎಂದು ಸಕಾರಣವಾಗಿ ಪ್ರತಿಪಾದಿಸುವುದೂ ಸಾಧ್ಯವಿಲ್ಲ. ಅನೇಕ ವೇಳೆಗಳಲ್ಲಿ ಭಾವಾವೇಶದಿಂದ ವ್ಯಕ್ತಿಗಳೂ ರಾಷ್ಟ್ರಗಳೂ ಒಂದೊಂದು ಕೆಲಸಕ್ಕೆ ಧುಮುಕುತ್ತಾರೆ. ಕೆಲವು ಸಲ ಈ ಕೆಲಸ ಮಹತ್ತಾಗಿರಬಹುದು ; ಕೆಲವು ವೇಳೆ ನೀಚವಾಗಿರಬಹುದು. ಆದರೆ ಆ ಭಾವವೂ ಬೇಗ ಮರೆಯಾಗುತ್ತದೆ. ವ್ಯಕ್ತಿಯಾಗಲಿ ರಾಷ್ಟ್ರವಾಗಲಿ ಅನಂತರ ತನ್ನ ಮೊದಲಿನ ಸ್ಥಿತಿಗೆ ಇಳಿಯುತ್ತದೆ. ಭಾರತದ ವಿಷಯದಲ್ಲಿ ನಡೆದಿರುವ ಆಶ್ಚರ್ಯ ಇದು. ಈ ಮುವ್ವತ್ತೆರಡು ವರುಷಗಳ ಕಾಲವೂ ಭಾರತ ಗಂಭೀರವಾಗಿ ಉಚ್ಚವಾದ ಆದರ್ಶ ಸಾಧನೆಗಾಗಿ ಒಗ್ಗಟ್ಟಿನಿಂದ ಒಂದೇ ಸಮನಾಗಿ ದುಡಿದಿದೆ ಈ ಕಾಲವೂ ಸ್ವಲ್ಪವಲ್ಲ. ಇದು ಭಾರತದ ಅದ್ಭುತ ಸಾಧನೆಯೇ ಹೌದು ಈ ಕಾಲವನ್ನು ತನ್ನ ತತ್ತ್ವಗಳಿಂದ ತಿದ್ದಿದ ಅದ್ಭುತ ವ್ಯಕ್ತಿಯನ್ನು ಅರಿಯದವರಿಗೆ ಇದು ಅರ್ಥವಾಗುವುದು ಕಷ್ಟ. ಈ ಮಹದ್ವ್ಯಕ್ತಿ, ಅದ್ಭುತವ್ಯಕ್ತಿ—ದೇಹದಿಂದಲ್ಲ ಆತ್ಮದಿಂದ—ಭಾರತವನ್ನು ಅರ್ಧ ಶತಮಾನ ಬೆಳಗಿದೆ.

ನಾವು ಬಾಪುವಿಗಾಗಿ ದುಃಖಿಸುತ್ತೇವೆ. ಅನಾಥರಾಗಿದ್ದೇವೆ. ಆದರೆ ಆತನ ಅದ್ಭುತ ಜೀವನವನ್ನು ನೋಡಿದರೆ ಅಳುವುದಕ್ಕೆ ತಾನೇ

ಕಾರಣವೇನು ? ಜಗತ್ತಿನ ಇತಿಹಾಸದಲ್ಲಿಯೇ, ತನ್ನ ಜೀವನ ಕಾಲದಲ್ಲಿ ತನ್ನ ಆದರ್ಶನವನ್ನು ಇಷ್ಟರಮಟ್ಟಿಗೆ ಸಾಧಿಸುವುದು ಬಹಳ ಸ್ವಲ್ಪ ಜನರಿಗೆ ಮಾತ್ರ ಸಾಧ್ಯ. ನಮ್ಮ ದೌರ್ಬಲ್ಯಕ್ಕಾಗಿ ಬಾಪು ದುಃಖಿಸುತ್ತಿದ್ದರು. ಭಾರತದ ಘನತೆ ಇನ್ನೂ ಹೆಚ್ಚು ಹೆಚ್ಚು ಏರಲಿಲ್ಲವಲ್ಲ ಎಂದು ಖಿನ್ನರಾಗಿದ್ದರು. ಆ ದುಃಖವನ್ನು ಅರ್ಥಮಾಡಿಕೊಳ್ಳುವುದು ಸುಲಭ ಆದರೆ ಬಾಪುವಿನ ಬಾಳು ಅಪಜಯವೆಂದು ಯಾರು ತಾನೇ ಹೇಳಬಲ್ಲರು? ಅವರು ಮುಟ್ಟಿದುದೆಲ್ಲಾ ಚಿನ್ನವಾಗುತ್ತಿದ್ದಿತು. ಬೆಲೆಯಾಗುತ್ತಿದ್ದಿತು. ಅವರು ಮಾಡಿದ ಕೆಲಸಗಳೆಲ್ಲಾ ಅವರು ನಿರೀಕ್ಷಿಸಿದಷ್ಟಲ್ಲದಿದ್ದರೂ ಫಲಕಾರಿಯಾದವು. ಅವರು ಹಿಡಿದ ಯಾವ ಕಾರ್ಯದಲ್ಲಿಯೂ ಅವರಿಗೆ ಅಪಜಯವಿಲ್ಲವೆಂಬುದು ಅವರನ್ನು ನೋಡಿದವರಿಗೆ ಗೊತ್ತಾಗುತ್ತಿದ್ದಿತು ಗೀತೆಯ ಬೋಧನೆಗೆ ಅನುಸಾರವಾಗಿ ಅವರು ಅನಾಸಕ್ತರಾಗಿ ಶಾಂತಿಯಿಂದ ದುಡಿಯುತ್ತಿದ್ದರು. ತಮಗೆ ತಾವಾಗಿಯೇ ಫಲಗಳು ಬರುತ್ತಿದ್ದವು.

ಅವರ ದೀರ್ಘಕಾಲದ ತುಂಬು ಜೀವನ, ನಾನಾ ವಿಧಗಳಾದ ಕಾರ್ಯಗಳಿಂದಲೂ ಅಸಾಮಾನ್ಯವಾದ ಹೊಸ ಹೊಸ ಸಾಹಸಗಳಿಂದಲೂ ನಿಬಿಡವಾಗಿದ್ದರೂ, ಆ ಜೀವನದಲ್ಲಿ ಒಂದಾದರೂ ಅಪಸ್ವರ ಒಡಕು ಧ್ವನಿ ಇಲ್ಲ. ಅವರ ಅಸಂಖ್ಯಾತಗಳಾದ ಚಟುವಟಿಕೆಗಳೆಲ್ಲಾ ಒಂದು ಸಮರಸವೇ ಆಗಿದ್ದಿತು. ಅವರ ಮಾತು ಸನ್ನೆ ನಡೆನುಡಿಗಳೆಲ್ಲಾ ಆ ಸಮರಸಕ್ಕೇ ಸಹಾಯಕವಾಗುತ್ತಿದ್ದುವು ಜಗತ್ತಿನ ಇತರ ಜನರ ಮಾರ್ಗಗಳಿಂದ ಅವರಮಾರ್ಗ ಬೇರೆಯಾಗಿದ್ದರೂ ಅವರು ಜೀವನ ಕಲೆಯನ್ನು ಕಲಿತ, ಪೂರ್ಣಕಲಾವಿದರಾಗಿದ್ದರು. ಸತ್ಯ ಮತ್ತು ಸರ್ವೋದಯದ ಅನ್ವೇಷಣೆಯಿಂದ ಇತರ ಶುಭಗಳ ಜತೆಗೆ ಈ ಕಲಾವಿದತ್ವವೂ ಸಿದ್ಧಿಸುವುದುದೆಂಬುದು ಸ್ಪಷ್ಟವಾಯಿತು.

ಅವರಿಗೆ ವಯಸ್ಸಾದಂತೆ, ಆ ದೇಹದಲ್ಲಿ ಕೆಲಸಮಾಡುತ್ತಿದ್ದ ಮಹತ್ತಾದ ಆತ್ಮಕ್ಕೆ ಆ ದೇಹ ಒಂದು ಸಾಧನವಾಗಿ ಮಾತ್ರ ತೋರತೊಡಗಿತು. ಅವರ ಮಾತನ್ನು ಕೇಳುತ್ತಾ ಅವರ ಮುಖವನ್ನು ನೋಡುತ್ತಿದ್ದಂತೆ ಇದು ಒಂದು ವ್ಯಕ್ತಿ ದೇಹ ಎಂಬ ಭಾವ ಮರೆ

ಯಾಗುತ್ತಿತ್ತು. ಅವರು ಕುಳಿತ ಸ್ಥಳ ದೇವಾಲಯವಾಗುತ್ತಿತ್ತು. ಅವರು ನಡೆದ ನೆಲ ಪವಿತ್ರವಾಗುತ್ತಿದ್ದಿತು.

ಅವರ ಮರಣದಲ್ಲಿಯೂ ಒಂದು ವೈಭವವೂ ಕಲೆಯೂ ಇತ್ತು. ಎಲ್ಲ ದೃಷ್ಟಿಯಿಂದಲೂ ಆ ವ್ಯಕ್ತಿಗೂ ಆ ವ್ಯಕ್ತಿಯ ಜೀವನಕ್ರಮಕ್ಕೂ ಅದು ಅನುಗುಣವಾದ ಕೊನೆಯಾಗಿದ್ದಿತು ಅವರ ಬಾಳಿನ ಬೋಧನೆ ಅದರಿಂದ ಇನ್ನೂ ಹೆಚ್ಚು ಪ್ರಕಾಶವಾಯಿತು. ಅವರು ದೃಢಕಾಯರಾಗಿ, ತಮ್ಮ ಬಯಕೆಯಂತೆ ಪ್ರಾರ್ಥನೆಯ ಸಮಯದಲ್ಲಿಯೇ ಮಡಿದರು ಭಾರತದ ಒಗ್ಗಟ್ಟಿಗಾಗಿ ಅವರು ಯಾವಾಗಿನಿಂದಲೂ ಕೆಲಸಮಾಡುತ್ತಿದ್ದರು; ಈಗ ಒಂದೆರಡು ವರುಷಗಳಿಂದಲಂತೂ ಅವರ ಬಾಳು ಅದಕ್ಕೆ ಮೀಸಲಾಗಿತ್ತು. ತಮ್ಮ ಆ ಧ್ಯೇಯ ಸಾಧನೆಗೆ ಅವರು ಬಲಿಯಾದರು. ಎಲ್ಲರೂ ಬಯಸುವಂತೆ ಅವರ ಮರಣ ಅನಾಯಾಸ ಆಕಸ್ಮಿಕ ಮರಣವಾಯಿತು. ರೋಗದಿಂದ ಆ ದೇಹ ನರಳಲಿಲ್ಲ. ಮುಪ್ಪಿನಲ್ಲಿ ಉಂಟಾಗುವ ಯಾವ ದೌರ್ಬಲ್ಯವೂ ಆ ದೇಹಕ್ಕೆ ಸಂಭವಿಸಲಿಲ್ಲ. ಅವರಿಗಾಗಿ ನಾವು ಯಾಕೆ ದುಃಖಿಸಬೇಕು? ನಾವು ಜ್ಞಾಪಕದಲ್ಲಿಟ್ಟುಕೊಳ್ಳುವುದು ಆ ಮಹಾ ಗುರುವನ್ನು, ಕೊನೆಯವರೆಗೆ ಗಾಳಿಯಂತೆ ಹಗುರವಾದ ಹೆಜ್ಜೆ, ಆಕರ್ಷಿಸುವ ನಗು, ನಗು ತುಂಬಿದ ಕಣ್ಣುಗಳು—ಆ ಗುರುವನ್ನು. ದೇಹ ಮತ್ತು ಮನಸ್ಸಿನ ಯಾವ ದೌರ್ಬಲ್ಯವನ್ನೂ ನಾವು ಅವರೊಂದಿಗೆ ಜ್ಞಾಪಿಸಿಕೊಳ್ಳುವಂತಿಲ್ಲ. ಅವರು ಪೂರ್ಣಶಕ್ತರಾಗಿ ತೇಜಸ್ವಿಗಳಾಗಿ ದೃಢಕಾಯರಾಗಿ ಸತ್ತರು. ನಾವಾಗಲಿ ಈ ಜನಾಂಗದ, ಜಗತ್ತಿನ, ಪ್ರಜೆಗಳಾಗಲಿ ಅವರನ್ನು ಮರೆಯುವಂತಿಲ್ಲ.

ಈ ಚಿತ್ರ ಮಾಸುವುದಿಲ್ಲ. ಅವರು ಮಾಡಿದುದು ಅಷ್ಟೆ ಅಲ್ಲ. ಅವರು ನಮ್ಮ ಹೃದಯದ ಹೃದಯವನ್ನು, ಆತ್ಮದ ಆತ್ಮವನ್ನು ಪ್ರವೇಶಿಸಿ ಅವನ್ನು ಬದಲಾಯಿಸಿ ತಿದ್ದಿದರು. ಗಾಂಧಿಯುಗದ ಜನರು ಮರೆಯಾಗುತ್ತಾರೆ, ಆದರೆ ಆ ಆತ್ಮಶಕ್ತಿ ಉಳಿಯುತ್ತದೆ. ಮುಂದೆ ಬರುವ ತಲೆಮಾರುಗಳನ್ನೆಲ್ಲಾ ತಿದ್ದುತ್ತದೆ. ಯಾಕೆಂದರೆ ಗಾಂಧಿ ಭಾರತದ ಆತ್ಮದ ಭಾಗವಾಗಿದ್ದಾರೆ. ನಾವು

ಆತ್ಮಶಕ್ತಿಯಲ್ಲಿ ದರಿದ್ರರಾಗುತ್ತಿರುವಾಗ ಬಾಪು ಬಾರತದಲ್ಲಿ ಬಂದರು; ನಮ್ಮನ್ನು ಶಕ್ತರನ್ನಾಗಿ ಧನಿಕರನ್ನಾಗಿ ಮಾಡಿದರು ಅವರು ನಮಗೆ ಕೊಟ್ಟ ಶಕ್ತಿ ಒಂದುದಿನ ಅಥವ ಒಂದು ವರುಷಕ್ಕೆ ಸಾಕಾಗುವುದಲ್ಲ. ನಮ್ಮ ರಾಷ್ಟ್ರಕ್ಕೆ ಸೇರಿದ ಮತ್ತೊಂದು ಶಾಶ್ವತವಾದ ಆಸ್ತಿ ಅದು. ಬಾಪು ಭಾರತಕ್ಕೂ ಜಗತ್ತಿಗೂ ನಮ್ಮ ಬಡಜೀವಗಳಿಗಾಗಿಯೂ ಒಂದು ಭೀಮನಷ್ಟು, ಬೇಕಾದಷ್ಟು ಕೆಲಸಮಾಡಿದ್ದಾರೆ. ಈ ಕಾರ್ಯ ವನ್ನು ಅವರು ಅತ್ಯಂತ ಚೆನ್ನಾಗಿ ಅಚ್ಚುಕಟ್ಟಾಗಿ ಆಶ್ಚರ್ಯಕರವಾದ ರೀತಿಯಲ್ಲಿ ಮಾಡಿದ್ದಾರೆ. ಇನ್ನು ಅವರಿಗೂ ಅವರ ಜ್ಞಾಪಕಕ್ಕೂ ಅರ್ಹರಾಗುವಂತೆ ನಡೆಯುವುದು ನಮ್ಮ ಹೊಣೆ. ಆ ಹೊರೆಯನ್ನು ನಮ್ಮ ಹೆಗಲಿನಮೇಲೆ ಹೊತ್ತು, ಪದೇ ಪದೇ ತೆಗೆದುಕೊಂಡಿರುವ ಪ್ರತಿಜ್ಞೆಯಂತೆ ನಡೆಯಲು ನಮ್ಮ ಕೈಲಾದಷ್ಟು ಪ್ರಯತ್ನಿಸುವುದು ನಮ್ಮ ಕರ್ತವ್ಯ. (ಜವಹರ್‌ಲಾಲ್ ನೆಹ್ರು).

"ನಾನು ಮಹಾತ್ಮರನ್ನು ನೋಡಲು ಸಾಯಂಕಾಲ ೪ ಗಂಟೆಗೆ ಹೋಗಿ ಅವರೊಂದಿಗೆ ಒಂದು ಗಂಟೆ ಇದ್ದೆ ಐದು ಗಂಟೆಗೆ ಅವರು ತಮ್ಮ ಗಡಿಯಾರವನ್ನು ನೋಡಿ, ಪ್ರಾರ್ಥನೆಗೆ ಹೊತ್ತಾಯಿತೆಂದು ಹೇಳಿ ಪ್ರಾರ್ಥನಾ ಕಡೆ ನಡೆದರು. ನಾನು ಬಿರ್ಲಾಭವನವನ್ನು ಬಿಟ್ಟು ನನ್ನ ವಸತಿಯ ಕಡೆ ಹೊರಟೆ. ನಾನು ನನ್ನ ಮನೆ ಸೇರಿದ ಕೂಡಲೆ ನನಗೆ ಆ ಭಯಂಕರವಾದ ಸುದ್ದಿ ತಿಳಿಯಿತು.

"ನಾನು ತತ್‌ಕ್ಷಣ ಬಿರ್ಲಾ ಭವನಕ್ಕೆ ಹೋದೆ. ಗಾಂಧಿಯವರ ಮುಖದಲ್ಲಿ ಅದೇ ಶಾಂತಿ ಕರುಣೆ ಕ್ಷಮೆ ರೂಪುವೆತ್ತು ತೋರುತ್ತಿತ್ತು. ದೇಶದ ಪರಿಸ್ಥಿತಿಯಿಂದ ಗಾಂಧಿಜಿಯವರಿಗೆ ಅಸಮಾಧಾನವಾಗಿತ್ತು. ಆ ಕಾರಣದಿಂದಲೇ ಅವರು ಉಪವಾಸ ಹೂಡಿದರು. ಆ ಉಪವಾಸ ದಲ್ಲಿಯೇ ಅವರು ಪ್ರಾಣಬಿಟ್ಟದ್ದರೆ ಎಷ್ಟು ಚೆನ್ನಾಗಿರುತ್ತಿದ್ದಿತು! ಆದರೆ ಅವರು ಮಾಡಬೇಕಾದ ಕೆಲಸವಿದ್ದುದರಿಂದ ಅವರು ಬದುಕಿ ದರು. ಅನಂತರ ಒಬ್ಬ ಹುಚ್ಚ ಅವರಿಗೆ ಒಂದು ಬಾಂಬು ಹಾಕಿದ. ಗಾಂಧಿಯವರು ಅದರಿಂದಲೂ ತಪ್ಪಿಸಿಕೊಂಡರು. ಆದರೆ ಇಂದು ಅವರ ಜೀವ ನಮಗಾಗಿ ಉಳಿಯುವುದಾಗಲಿಲ್ಲ.

" ಇದು ಕೋಪಕ್ಕೆ ಕಾಲವಲ್ಲ ಕೋಪಬಂದರೆ, ಗಾಂಧಿಜಿಯವರು ತಮ್ಮ ಜೀವಮಾನವವೆಲ್ಲ ಬೋಧಿಸಿದ ಭೋದನೆ ಮರೆಯಾಗುವುದು. ಅವರು ಬದುಕಿದ್ದಾಗಲಂತೂ ನಾವು ಅವರ ಬೋಧಗಳನ್ನು ಆಚರಿಸಲಿಲ್ಲ. ನಾವು ಗಾಂಧಿಜಿಯ ಮರಣದ ನಂತರವೂ ಅವರ ಬೋಧನೆಯಂತೆ ನಡೆಯಲಿಲ್ಲವೆಂದು ಜಗತ್ತು ಹೇಳದಂತಾಗಲಿ. ಇಲ್ಲದಿದ್ದರೆ ನಮಗೆ ಜಗತ್ತಿನಲ್ಲಿ ಅಪಕೀರ್ತಿಯುಂಟಾಗುವುದು.

"ಇದು ನಮ್ಮ ಪರೀಕ್ಷೆಯ ಕಾಲ. ಈಗ ನಾವು ಒಗ್ಗಟ್ಟಿನಿಂದ ನಿಲ್ಲಬೇಕು. ಭಾರತದ ಹೆಗಲಿನ ಮೇಲಿರುವ ಹೊರೆ ಅಸಾಧ್ಯವಾದುದು. ಮಹಾತ್ಮರ ಬಲವಿಲ್ಲದಿದ್ದರೆ ನಮ್ಮ ಹೆಗಲು ಈ ವೇಳೆಗೆ ಮುರಿಯುತ್ತಿದ್ದಿತು. ಈಗ ಆ ಬಲ ಮಾಯವಾಗಿದೆ. ಆದರೆ ಗಾಂಧಿಜಿ ಯಾವಾಗಲೂ ನಮ್ಮೊಂದಿಗೆ ಇದ್ದೇ ಇರುತ್ತಾರೆ. ಯಾಕೆಂದರೆ ಅವರ ಬೋಧನೆಗಳೂ ಆದರ್ಶಗಳೂ ನಮ್ಮ ಮುಂದೆ ಇವೆ. ಅವರ ದೇಹ ಬೂದಿಯಾದರೂ ಅವರ ಆತ್ಮ ಎಂದೆಂದಿಗೂ ನಮ್ಮೊಂದಿಗೆ ಇರುತ್ತದೆ. ಆತ್ಮ ಅವಿನಾಶಿ

"ಗಾಂಧಿಯವರು ಬದುಕಿದ್ದಾಗ ಸಾಧಿಸಲ್ಪಡದೆ ಉಳಿದದ್ದು ಈಗ ಸಾಧ್ಯವಾಗಲಿ. ಈ ಅತ್ಯಾಚಾರದಿಂದ ಭಾರತದ ಯುವಕರು ತಮ್ಮ ಅಂತರಂಗ ಶುದ್ಧಿ ಮಾಡಿಕೊಳ್ಳಲಿ ಒಗ್ಗಟ್ಟಾಗಿ ನಿಂತು ಮಹಾತ್ಮ ಗಾಧಿಯವರು ಪ್ರಾರಂಭಿಸಿದ ಕಾರ್ಯವನ್ನು ಪೂರೈಸಿ "

[ಸರದಾರ್ ಪಟೇಲ್.]

## ಬೂದಿಯಿಂದ

ನಮಗೆ ಮಾರ್ಗದರ್ಶಕರಾಗಿ ನಮ್ಮನ್ನು ಸಮಾಧಾನಮಾಡಿ ನಮಗೆ ಧೈರ್ಯ ಹೇಳಿ ದಾರಿ ನಡೆಸಲು ಈಗ ಗಾಂಧಿಯವರು ಇಲ್ಲ. ನಮ್ಮ ಕಣ್ಣೆದುರಿಗೆ ಅವರ ದೇಹವು ಕಾಣುತ್ತಿಲ್ಲ. ಆದರೆ ದೇಹವು ಅನಿತ್ಯವೆಂದೂ ಆತ್ಮವು ಮಾತ್ರವೇ ಶಾಶ್ವತವೂ ನಾಶರಹಿತವೂ ಎಂದೂ ಅವರು ನಮಗೆ ಅನೇಕ ಬಾರಿ ಹೇಳಲಿಲ್ಲವೆ? ನಮ್ಮ ದೇಹದಿಂದ ತನಗೆ ಎಷ್ಟು ದಿನ ಉಪಯೋಗವೋ ಅಷ್ಟು ದಿನ ಮಾತ್ರ ದೇವರು ಅದನ್ನು ಇಟ್ಟಿರುವುದೆಂದೂ ಆತ ಹೇಳಲಿಲ್ಲವೇ. ಅವರ ಆತ್ಮ ದೇಹಬಂಧನ

ದಿಂದ ಬಿಡುಗಡೆ ಹೊಂದಿ ಸಾಧಿಸಬೇಕಾದ ಕಾರ್ಯವನ್ನು ಇನ್ನೂ ಹೆಚ್ಚು ಸುಲಭವಾಗಿ ಸಾಧಿಸಬಹುದು. ಯಮುನಾ ನದಿಯ ದಡದ ಈ ಬೂದಿಯಿಂದ ಶಕ್ತಿಗಳು ಹುಟ್ಟಿ ಅಸೂಯೆ ಅಸಹನೆ ತಪ್ಪುಭಾವನೆಗಳ ಕಾರ್ಮೋಡಗಳನ್ನೆಲ್ಲಾ ತೂರಿ, ಗಾಂಧಿಯವರ ಆದರ್ಶಗಳಾದ ಮತ್ತು ಅವರನ್ನು ಬಲಿಕೊಂಡ ಧ್ಯೇಯಗಳನ್ನು ಸಾಧಿಸಬಹುದು.

ಹಿಂದೂ ಧರ್ಮದಲ್ಲಿ ಮಾತ್ರವೇ ಅಲ್ಲ-ಮನುಷ್ಯತ್ವದ ಸಾರವೇ ಆತ ಆಗಿರಲಿಲ್ಲವೆ? ಆದರೆ ಜಾತಿ ರಾಷ್ಟ್ರ ಬಣ್ಣಗಳ ಭೇದಭಾವವನ್ನರಿಯದ ಆತನ ಉದಾರ ಹೃದಯದಲ್ಲಿ ಬಂದೂಕದ ಗುಂಡನ್ನು ನೆಟ್ಟುದು ಹಿಂದುವಿನ ಹಸ್ತವೇ ಅಲ್ಲವೆ? ಈ ದುಷ್ಕೃತ್ಯದ ಗುರಿಯಾದರೂ ಏನಿದ್ದಿರಬಹುದು? ಹಿಂದೂ ಧರ್ಮವನ್ನು ಉಳಿಸುವುದಕ್ಕೇಯೆ? ಹಿಂದೂ ಸಮಾಜವನ್ನು ಸೇವಿಸುವುದಕ್ಕೇಯೆ? ಹಿಂದೂ ಧರ್ಮ ಈ ಮಾರ್ಗದಿಂದ ಉಳಿಯುತ್ತದೆಯೆ? ಈ ಮಾರ್ಗದಿಂದ ಒಂದು ಸಮಾಜದ ಸೇವೆ ಆಗುತ್ತದೆಯೆ? ಹಿಂದೂ ಧರ್ಮದ ಬಹುಮುಖವಾದ ಇತಿಹಾಸವನ್ನು ಪರೀಕ್ಷಿಸಿ ನೋಡಿ. ಇಂತಹ ದುಷ್ಕೃತ್ಯದ ಉದಾಹರಣೆ ಬೇರೊಂದಿಲ್ಲ. ಆ ಇತಿಹಾಸದ ಮೇಲೆ ಎಂದೆಂದಿಗೂ ಅಳಿಸಲಾಗದ ಅಕೃತ್ಯದ ಕುರುಹು ಇದು.

ನಾವು ದುಃಖಿತರಾಗಿದ್ದೇವೆ. ನಾವು ಸಂಭ್ರಾಂತರಾಗಿದ್ದೇವೆ. ನಾವು ನಿರುತ್ಸಾಹಿಗಳೂ ಆಗಬೇಕೆ? ಗಾಂಧಿಯವರ ದೇಹವು ಕಣ್ಣಿಗೆ ಕಾಣುವುದಿಲ್ಲ. ಆದರೆ ಅವರು ನಮಗೆ ಅಮೌಲ್ಯವಾದ ಆಸ್ತಿಯನ್ನು ಬಿಟ್ಟು ಹೋಗಿಲ್ಲವೆ? ನಮ್ಮ ಜೀವನಯಾತ್ರೆಯಲ್ಲಿ ಬೆಳಕಾಗಿ ಮಾರ್ಗದರ್ಶಕವಾಗಿರಲು ಆದರ್ಶವನ್ನೂ ಸ್ಫೂರ್ತಿಯನ್ನೂ ಬಿಟ್ಟಿಲ್ಲವೆ? ಈ ಭಯಂಕರವಾದ ದುಃಖ ಸನ್ನಿವೇಶದಲ್ಲಿ ಅವರ ಶಂಖನಾದ ನಮ್ಮನ್ನು ಮತ್ತೆ ನಮ್ಮ ಕರ್ತವ್ಯದಲ್ಲಿ ತೊಡಗುವಂತೆ ಮಾಡಲಿ. ಆತ, ಧೂಳಿನಿಂದ ಧೀರರನ್ನು ಮಾಡಿದ. ತನ್ನ ಜೀವಮಾನದಲ್ಲೆಲ್ಲಾ ಗುಲಾಮಗಿರಿ ದಬ್ಬಾಳಿಕೆ ಅನ್ಯಾಯಗಳಿಗೆ ಎದುರಾಗಿ ಅವನು ಹೂಡಿದ ಹೋರಾಟದಲ್ಲೆಲ್ಲಾ ನಮ್ಮಂತಹ ಅಶಕ್ತರನ್ನೇ ಪೂರ್ಣವಾಗಿ ಉಪಯೋಗಿಸಿಕೊಂಡ. ಭಾರತಕ್ಕೆ ಬೇಕಾಗಿರುವುದು ಅಂತಹ ಧೀರತೆ;

ಅಪಾಯಗಳನ್ನು ತೃಣವಾಗಿ ಎಣಿಸುವ ಧೈರ್ಯ. ನ್ಯಾಯಸ್ಥಾಪನೆಗಾಗಿ ಸರ್ವಸ್ವವನ್ನೂ ಬಲಿಗೊಡುವ ಕುರುಡು ಧೈರ್ಯ. ಗಾಂಧಿಯವರು ಇದಕ್ಕಾಗಿ ತನ್ನ ಪ್ರಾಣವನ್ನೇ ಬಲಿಕೊಟ್ಟಿದ್ದಾರೆ. ಅವರು ಬದುಕಿದ್ದಾಗ ಅವರನ್ನು ಅನುಸರಿಸಿದಂತೆ ಈಗ ಸತ್ತನಂತರವೂ ಅವರನ್ನು ಅನುಸರಿಸಬೇಡವೆ?

ಕೋಪಕ್ಕೂ ರೇಗಿಗೂ ಇದು ಕಾಲವಲ್ಲ. ಗಾಂಧಿಬೋಧನೆಯಲ್ಲಿ ಅವಾವುದಕ್ಕೂ ಅವಕಾಶವಿಲ್ಲ. ಗಾಂಧಿಯವರ ಮರಣಕ್ಕೆ ಕಾರಣವಾದ ಸಂಕುಚಿತವಾದ ಆತ್ಮನಾಶಕವಾದ ಜಾತ್ಯಾಂಧತೆಯನ್ನು ನಿರ್ಮೂಲ ಮಾಡಬೇಕು. ಗಾಂಧಿಯವರ ಸಾಮಾಜಿಕ ರಾಜಕೀಯ ಆರ್ಥಿಕ ಸಾಧನೆಗಳಲ್ಲಿ ನಾಶ ವಿರುವಂತೆ ಸೃಷ್ಟಿಯೂ ಇದೆ. ಸತ್ವದ ಸೃಷ್ಟಿಗಾಗಿ ಅಸತ್ವವನ್ನು ನಾಶಮಾಡಬೇಕು. ಜಾತೀಯ ಭಿನ್ನತೆ ದ್ವೇಷಗಳು ನಾಶವಾಗಿ ಆ ಸ್ಥಳದಲ್ಲಿ ಸಮರಸವೂ ಸ್ನೇಹವೂ ಸ್ಥಾಪಿತವಾಗಬೇಕು. ಇದೇ ಅವರ ಕೊನೆಯ ಆಸೆಯಾಗಿದ್ದಿತು. ಅದನ್ನು ನಾವು ನೆರವೇರಿಸಬೇಕು." [ರಾಜೇಂದ್ರಬಾಬು]

## ನಂದಾದೀಪ

ನಂದಾ ದೀಪ ನಂದಿ ಹೋಯಿತು. ಜೇನಿನಂತೆ ಇನಿದಾಗಿದ್ದ ದನಿ ಮೆತ್ತಗಾಯಿತು- ದೇವರ ಇಚ್ಛೆ ನಡೆಯಲೇ ಬೇಕು. ಪರಸ್ಪರ ಹೋರಾಟ ನಿಲ್ಲಲಿ. ಕ್ಷಣಿಕವಾದ ವಸ್ತುಗಳಿಗಾಗಿ ಕಾದಾಡಬೇಡಿ ಅಸೂಯೆಯನ್ನು ಬಿಡಿ. ಕಷ್ಟವನ್ನು ಎಲ್ಲರೂ ಸಮಾನವಾಗಿ ಹಂಚಿಕೊಳ್ಳಿ. ಪ್ರೇಮದಿಂದಲೂ ಸತ್ಯ ಮಾರ್ಗದಿಂದಲೂ ಏನನ್ನು ಬೇಕಾದರೂ ಸಾಧಿಸಬಹುದು.

ಪ್ರತಿದಿನವೂ ಮಹಾತ್ಮರು ಬಿದ್ದ ವೇಳೆಯಲ್ಲಿ ನಮ್ಮ ಮನಸ್ಸು ಅವರೆಡೆಗೆ ತಿರುಗಲಿ. ಅವರು ನಮ್ಮ ಪ್ರೇಮ ಗುರುವಾಗಿ ಅಜಾತ ಶತ್ರುವಾಗಿ ಸತ್ಯ ಧರ್ಮ ಪರಾಕ್ರಮಿಗಳಾಗಿದ್ದರು. ನಮ್ಮ ದೇಶದ ಕೋಟ್ಯಾಂತರ ಜನರ ಸಂಕಟವನ್ನು ತಮ್ಮ ಪ್ರೇಮದಿಂದ ಗುಣಪಡಿಸುವ ವೈದ್ಯರಾಗಿದ್ದರು. ಭಾರತದ ಸ್ತ್ರೀ ಪುರುಷರು ಪ್ರತಿ

ದಿನವೂ ಸಂಧ್ಯಾಕಾಲ ಐದು ಗಂಟೆಗೆ, ಗಾಂಧಿಯುವರು ಬಿದ್ದ ದಿನದ ಸಭೆಯನ್ನು ಜ್ಞಾಪಿಸಿಕೊಳ್ಳಲಿ. ಆ ಪ್ರೇಮದ ಧ್ವನಿಯನ್ನು ಜ್ಞಾಪಿಸಿ ಕೊಳ್ಳಲಿ. ಅವರ ಧ್ಯೇಯವನ್ನು ಜ್ಞಾಪಿಸಿಕೊಳ್ಳಲಿ ಹೀಗೆ ಪ್ರತಿ ದಿನವೂ ಆ ಹೊತ್ತಿನಲ್ಲಿ ಭಾರತದಲ್ಲಿ ಸಹಾನುಭೂತಿ ಔದಾರ್ಯ ದಯೆ ಗಳುಂಟಾಗಲೆಂದು ಎರಡು ನಿಮಿಷ ಪ್ರಾರ್ಥಿಸೋಣ

ಈಗಲೂ ನಮಗೆ ಕೋಪ ಹಿಂಸಾ ಪ್ರವೃತ್ತಿಗಳಿಂದಲೇ ಸಮಾ ಧಾನವಾಗುವಂತಿದೆ. ಈ ರಾಕ್ಷಸ ಪ್ರವೃತ್ತಿಯನ್ನು ಅಮುಕಲು ನಾವು ಯಾವಾಗಲೂ ಎಚ್ಚರಿಕೆಯಿಂದಿರಬೇಕು. ಆದರೆ ಒಂದು ವಿಷಯವನ್ನು ನಾವು ತಿಳಿದುಕೊಳ್ಳಬೇಕು. ನಾವು ಒಳ್ಳೆಯವರಾಗಿಲ್ಲ ದಿದ್ದರೆ ಇತರರೂ ನಮ್ಮಲ್ಲಿ ಒಳ್ಳೆಯವರಾಗುವುದಿಲ್ಲ. ಗಾಂಧಿಯುವರು ಹೇಳಿದ ಮಾರ್ಗದಿಂದ ಹೊರತು ಬೇರೆ ಹೇಗೂ ಕೆಡಕನ್ನು ಜಯಿಸು ವುದು ಸಾಧ್ಯವಿಲ್ಲ ಪ್ರೇಮವನ್ನು ನಿಮ್ಮ ಹಕ್ಕು ಎಂದು ಕೇಳಬೇಡಿ. ಹಾಗೆ ಪ್ರೇಮ ಎಂದಿಗೂ ದೊರೆಯುವುದಿಲ್ಲ. ನೀವು ಪ್ರೀತಿಸಿ. ಆಗ ನಿಮಗೆ ಪ್ರೇಮ ಬರುವುದು. ಇನ್ನೂ ಹೆಚ್ಚಾಗಿ ಪ್ರೀತಿಸಿ, ಇನ್ನೂ ಹೆಚ್ಚು ಪ್ರೇಮ ದೊರೆಯುವುದು. ಇದು ಧರ್ಮ. ಬರಿಯ ಕಾನೂನಿ ನಿಂದಲೂ ವಾದದಿಂದಲೂ ಈ ಧರ್ಮ ಬದಲಾವಣೆಯಾಗುವುದಿಲ್ಲ.

[ಸಿ. ರಾಜಗೋಪಾಲಾಚಾರಿ]

## ನಾವು ಆತ ಹೊತ್ತಿಸಿದ ದೀಪಿಗೆಗಳು

"ಜಗತ್ತು ನಾನಾ ಭಾಷೆಗಳಲ್ಲಿ ಗಾಂಧಿಯುವರ ಮಹಿಮೆಯನ್ನು ಹೊಗಳಿ ಸಾರಿದೆ. ಅವರ ಉಪವಾಸವೂ ಹಿಂದೂ ಮುಸಲ್ಮಾನರ ಸಹೃದಯತೆಗಾಗಿಯೇ ಆಯಿತು. ಆದರೆ ಆ ಉಪವಾಸದಲ್ಲಿ ರಾಷ್ಟ್ರ ವೆಲ್ಲಾ ಅವರ ಹಿಂದೆ ಇರಲಿಲ್ಲ. ದೇಶದಲ್ಲಿ ಭಿನ್ನತೆ ಹೆಚ್ಚಾಗಿತ್ತು; ದ್ವೇಷ ಸಂಶಯ ಕ್ರೋಧ ಮಸೆಯುತ್ತಿತ್ತು. ಈ ದೇಶದವರ ನಡತೆ, ಈ ದೇಶದ ಎಲ್ಲಾ ಮತಗಳ ಬೋಧನೆಗಳಿಗೂ ವಿರೋಧವಾಗಿತ್ತು. ವಿವೇಕಿಗಳಿಗೆ ಮಾತ್ರ ಗಾಂಧಿಯುವರ ಆ ಉಪವಾಸ ಅರ್ಥವಾಯಿತು. ಹಿಂದು ಧರ್ಮದಲ್ಲಿ ಜನಿಸಿದವರಲ್ಲಿ ಅತ್ಯಂತ ಶ್ರೇಷ್ಠರಾದ, ಹಿಂದೂ ಧರ್ಮವನ್ನೂ ವೇದಾಂತವನ್ನೂ ಧ್ಯೇಯಗಳನ್ನೂ ಎಲ್ಲರಿಗಿಂತ

ಹೆಚ್ಚಾಗಿ ತಿಳಿದವರಾದ ಮಹಾತ್ಮಾ ಗಾಂಧಿಯವರನ್ನು ಒಬ್ಬ ಹಿಂದುವೇ ಕೊಂದನೆಂಬುದು ಎಷ್ಟು ಅನ್ಯಾಯ.

"ನಮ್ಮಲ್ಲಿ ಅನೇಕರು ಗಾಂಧಿಯವರೊಂದಿಗೆ ಪೂರ್ಣವಾಗಿ (ಹಾಸುಹೊಕ್ಕಾಗಿ) ಬೆರೆತು ಹೋಗಿದ್ದೆವು. ನಮ್ಮ ಬಾಳ್ವೆಯೂ ಅವರ ಬಾಳ್ವೆಯೂ ಒಂದರೊಡನೆ ಒಂದು ಸೇರಿಕೊಂಡು ಬಿಟ್ಟಿದ್ದಿತು. ನಮ್ಮಲ್ಲಿ ಕೆಲವರು ಅವರೊಂದಿಗೆ ಸತ್ತಂತೆಯೇ ಆಯಿತು. ಅವರ ಮರಣದಿಂದ ನಮ್ಮಲ್ಲಿ ಇನ್ನೂ ಅನೇಕರಿಗೆ ಶಸ್ತ್ರ ಚಿಕಿತ್ಸೆಯಾದಂತಾಗಿದೆ; ಕೈಕಾಲು ಅಂಗಗಳು ಮುರಿದಂತೆ ಆಗಿವೆ. ಯಾಕೆಂದರೆ ನಮ್ಮ ಹೃದಯಗಳೂ ರಕ್ತ ಮಾಂಸಖಂಡಗಳೂ ನರಗಳೂ ಅವರ ಜೀವದೊಂದಿಗೆ ಸೇರಿದ್ದವು. ಆದರೆ ನಾವು ನಿರುತ್ಸಾಹಿಗಳಾಗಿ, ಗಾಂಧಿಯವರು ಕಣ್ಣಿಗೆ ಕಾಣದುದರಿಂದ ಅವರು ಸತ್ತರೆಂದು ಭಾವಿಸಿ, ಸರ್ವನಾಶವಾಯಿತೆಂದು ಹೆದರಿದರೆ ನಾವು ಹೇಡಿಗಳಾಗುವೆವು. ದೇಹವು ಕಾಣದ ಮಾತ್ರಕ್ಕೆ ಗಾಂಧಿ ಇಲ್ಲವೇ ಇಲ್ಲವೆಂದು ನಾವು ನಂಬುವುದಾದರೆ, ನಮ್ಮ ಗಾಂಧಿ ಭಕ್ತಿಗೂ ಶ್ರದ್ಧೆ ನಂಬಿಕೆಗೂ ಬೆಲೆ ಏನು ಬಂತು? ಅವರ ಮಕ್ಕಳಾಗಿ ಅವರ ಆತ್ಮಶಕ್ತಿಯ ಅನುಯಾಯಿಗಳಾಗಿ ಅವರ ಧ್ಯೇಯಗಳ ಹಿಂಬಾಲಕರಾಗಿ ಅವರ ಮಹತ್ಕಾರ್ಯವನ್ನು ಅನುಸರಿಸಲು ನಾವು ಇಲ್ಲವೆ? ನಮ್ಮ ಸ್ವಂತ ದುಃಖಕ್ಕೆ ಇದು ಕಾಲವಲ್ಲ. ಎದೆ ಬಡಿದುಕೊಂಡು ತಲೆಯ ಕೂದಲನ್ನು ಕಿತ್ತು ಹಾಕಿಕೊಳ್ಳುವ ಕಾಲ ಮುಗಿಯಿತು. ಗಾಂಧಿಯವರ ಶತ್ರುಗಳ ಈ ಸವಾಲನ್ನು ನಾವು ಅಂಗೀಕರಿಸುತ್ತೇವೆ" ಎಂದು ಎದ್ದು ನಿಲ್ಲುವ ಕಾಲ ಬಂದಿದೆ.

"ಗಾಂಧಿಯವರ ಸಜೀವ ಗುರುತುಗಳು ನಾವು. ಅವರ ಯೋಧರು. ಯುದ್ಧ ನಿಮಗ್ನವಾದ ಜಗತ್ತಿನಲ್ಲಿ ನಾವು ಗಾಂಧಿಯವರ ಬಾವುಟಧಾರಿಗಳು. ನಮ್ಮ ಮುಂಚೂಣಿಯ ಧ್ವಜ ಸತ್ಯ. ನಮ್ಮ ಎದೆಗಾವಲು ಗುರಾಣಿ ಅಹಿಂಸೆ. ರಕ್ತಪಾತವಿಲ್ಲದೆ ಜಯಿಸುವ ಆತ್ಮಶಕ್ತಿಯೇ ನಮ್ಮ ಪ್ರಜ್ವಲಿಸುವ ಕತ್ತಿ. ನಮ್ಮ ಗುರುವಿನ ಹೆಜ್ಜೆಯನ್ನು ನಾವು ಅನುಸರಿಸಬೇಡವೆ? ನಮ್ಮ ಪಿತೃವಿನ ಅಪ್ಪಣೆಯನ್ನು ನಾವು ಪಾಲಿಸಬೇಡವೆ? ನಾವು ಅವರ ಅಹಿಂಸಾಯುದ್ಧದ ಯೋಧರಾಗ

ಬೇಡವೆ? ಜಗತ್ತಿಗೆ ನಾವು ಗಾಂಧಿಯವರ ಸಂದೇಶವನ್ನು ಸಾರ ಬೇಡವೆ? ಗಾಂಧಿಯವರ ಧ್ವನಿ ಇನ್ನು ಕೇಳವುದಿಲ್ಲ. ಆದರೆ ಆ ಧ್ವನಿಯನ್ನು ಜಗತ್ತಿಗೆ ತೆಗೆದುಕೊಂಡು ಹೋಗಿ ಮುಟ್ಟಿಸುವ ಕೋಟ್ಯಾಂತರ ಧ್ವನಿಗಳು ನಮ್ಮಲ್ಲಿವೆ. ಆ ಧ್ವನಿ ನಮ್ಮ ಕಾಲದ ಜಗತ್ತನ್ನ ಮಾತ್ರವೇ ಅಲ್ಲ. ಮುಂದೆ ಅನೇಕ ಶತಮಾನಗಳ ಜಗತ್ತನ್ನೂ ಮುಟ್ಟುವುದು.

ನಾವು ಗಾಂಧಿ ಸೇವೆಗೆ ಸಿದ್ಧರಾಗೋಣ. ಮರಣ ಏನು ಮಹಾ? ನನ್ನ ಜನಕ ತಂದೆ ಸತ್ತರು. ಇದು ಮರಣವಲ್ಲ. ಆತ್ಮವು ಸತ್ಯವನ್ನು ಅರಸುತ್ತಾ ಮೇಲು ಮೇಲಕ್ಕೆ ಹೋಗುತ್ತದೆ.

"ಗಾಂಧಿಯವರ ನಶ್ವರ ದೇಹ ಅಗ್ನಿಗೆ ಆಹುತಿಯಾಯಿತು. ಕ್ರಿಸ್ತನಂತೆ ಮೂರನೆ ದಿನ ಗಾಂಧಿ ಎದ್ದು ಜಗತ್ತಿಗೆ ತನ್ನ ಪ್ರೇಮವನ್ನೂ ಸೇವೆಯನ್ನೂ ಮಾರ್ಗದರ್ಶಿತ್ವವನ್ನೂ ಕೊಡುತ್ತಿದ್ದಾರೆ.

"ಅನೇಕ ರಾಜರ ಸಮಾಧಿ ಇರುವ ದೆಹಲಿಯಲ್ಲಿ ಗಾಂಧಿಜಿಯವರ ಸಂಸ್ಕಾರ ನಡೆದುದು ಅರ್ಹವಾಗಿದೆ. ಗಾಂಧಿಯವರು ರಾಜರ ರಾಜರು. ಆ ಶಾಂತಿ ಸ್ಥಾಪಕರನ್ನು ಯುದ್ಧ ಸೇನಾಪತಿಯ ರಥದಲ್ಲಿ ರುದ್ರಭೂಮಿಗೆ ಸಾಗಿಸಿದುದೂ ಉಚಿತವಾಗಿದೆ. ಯಾಕೆಂದರೆ ಈ ಸಣ್ಣ ಆಕೃತಿಯ ಮನುಷ್ಯ ಯುದ್ಧದ ಎಲ್ಲಾ ಧೀರರಿಗಿಂತ ಹೆಚ್ಚು ಧೀರ, ದೇಶದ ಸರ್ವಜನ ಮಿತ್ರ. ಈ ದೇಶವನ್ನು ಪಾರತಂತ್ರ್ಯದ ಗುಲಾಮಗಿರಿಯಿಂದ ಬಿಡಿಸಿ ಇದಕ್ಕೆ ಸ್ವಾತಂತ್ರ್ಯವನ್ನು ಕೊಟ್ಟ ಈ ಕ್ರಾಂತಿಕಾರನಿಂದ ದೆಹಲಿ ಪವಿತ್ರವಾಗಿದೆ.

ನಮ್ಮ ಈ ಗುರುವಿನ, ಈ ನಾಯಕನ, ಈ ತಂದೆಯ ಆತ್ಮ ಶಾಂತವಾಗಿ ಮಲಗದಿರಲಿ, ಶಾಂತವಾಗಿ ಮಲಗದಿರಲಿ. ತಂದೆಯೇ ವಿಶ್ರಾಂತಿ ಹೊಂದಬೇಡ, ನಮ್ಮ ಪ್ರತಿಜ್ಞೆಯನ್ನು ನಮಗೆ ಎಚ್ಚರಿಸುತ್ತಿರು; ನಿನ್ನ ಅನುಯಾಯಿಗಳಾದ ನಮಗೆ, ನಿನ್ನ ಮಕ್ಕಳಿಗೆ ಶಿಷ್ಯರಿಗೆ ನಿನ್ನ ಧ್ಯೇಯದ ಹಕ್ಕುದಾರರಿಗೆ ಭಾರತಭಾಗ್ಯ ವಿಧಾತರಿಗೆ, ತಮ್ಮ ವಾಗ್ದಾನದಂತೆ ನಡೆಯುವ ಶಕ್ತಿಯನ್ನು ಕೊಡು.

[ಸರೋಜಿನಿ ನಾಯಿಡು]

ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ನಮ್ಮ ದೇಶದ ಅತ್ಯಂತ

ಮಹತ್ವದ ವ್ಯಕ್ತಿಯೂ ನಮ್ಮ ನಾಯಕನೂ ಹಿತೈಷಿಯೂ ಗುರುವೂ ಜ್ಞಾನಿಯೂ ಆದ ಆದ್ಭುತ ವ್ಯಕ್ತಿ ಮರೆಯಾದರು ನಾಯಕರಿಗಿಂತ ಹೆಚ್ಚಾಗಿ ಅವರು ನಮ್ಮೆಲ್ಲರ ತಂದೆಯಾಗಿದ್ದರು. ಅವರನ್ನು ನಾವು ಬಾಪು ಎಂದು ಕರೆದುದು ಉಪಚಾರಕ್ಕಲ್ಲ. ಇಂದು ನಾವೆಲ್ಲ ತಬ್ಬಲಿಗಳು.

ನಮ್ಮ ದೇಶದ ಇತಿಹಾಸದ ಈ ಕಷ್ಟಕಾಲದಲ್ಲಿ ಅವರ ನಿಧನ ದಿಂದ ಆದ ನಷ್ಟ ಇಷ್ಟೆಂದು ಊಹಿಸುವುದು ಸಾಧ್ಯವಿಲ್ಲ. ದಿನಗಳು ಕಳೆದಷ್ಟೂ ಅವರ ನಷ್ಟ ನಮಗೆ ಹೆಚ್ಚಾಗುವುದು ಅವರು ನಮ್ಮನ್ನು ಅನಿಂದ್ಯವಾದ ತಪ್ಪಿಲ್ಲದ ದಾರಿಯಿಂದ ರಾಜಕೀಯ ಸ್ವಾತಂತ್ರ್ಯಕ್ಕೆ ಒಯ್ದಿದ್ದಾರೆ. ಆಗಸ್ಟ್ ೧೫ರ ನಂತರ ಜಾತೀಯ ಕಲಹದಿಂದ ಅವರು ಬಹಳ ನೊಂದರು. ಹಿಂಸಾ ಪ್ರವೃತ್ತಿಯ ಭಾರತವನ್ನು ಅವರು ಸಹಿಸದಾದರು ನಮ್ಮ ನೀತಿಪತನವನ್ನು ನೋಡಿ, ಪ್ರೀತಿಯ ತಂದೆ ಯಂತೆ ಅವರು ನಮಗೆ ಸರಿಯಾದ ಮಾರ್ಗವನ್ನು ತೋರಿಸಿದರು ಅನೇಕ ಹೃದಯದಲ್ಲಿ ಕೊರೆಯುತ್ತಿದ್ದ ಆಗ್ರಹವನ್ನು ತಮ್ಮ ಅದ್ಭುತ ಪ್ರೇಮದಿಂದ ಅವರು ಶಾಂತಗೊಳಿಸಲು ಪ್ರಯತ್ನಿಸುತ್ತಿದ್ದರು. ನಮಗೂ ಸರ್ವನಾಶಕ್ಕೂ ಮಧ್ಯೆ ಅವರು ನಿಂತರು. ಈ ಹಿಂಸೆ ದ್ವೇಷ ದೊಂಬಿ ಅಶಿಸ್ತು ಇವುಗಳಿಂದ ಸರ್ವನಾಶವಲ್ಲದೆ ಮತ್ತೇನು?

ಒಬ್ಬ ಹುಚ್ಚನ ಕ್ರೋಧ, ಗಾಂಧಿಯವರ ಬಡದೇಹವನ್ನು ನಮ್ಮಿಂದ ಅಪಹರಿಸಿತು. ಆದರೆ ಅವರ ಆತ್ಮವನ್ನು ಯಾರು ತಾನೆ ಕೊಲ್ಲಬಲ್ಲರು? ಅವರು ಎಂದಿಗೂ ಸಾಯರು. ಅವರ ಸನ್ನಿಧಿಯಲ್ಲಿಯೇ ನಾವಿರುವಂತೆ ನಮಗೆ ಭಾಸವಾಗುತ್ತಿದೆ ಅವರು ದೇಹದೊಂದಿಗೆ ಇದ್ದಾಗಿನದಕ್ಕಿಂತ ಈಗ ನಾವು ಹೆಚ್ಚಾಗಿ ಅವರ ಅನುಯಾಯಿಗಳಾ ಗಿದ್ದೇವೆ.

ಅವರು ವೀರಸ್ವರ್ಗವನ್ನು ಪಡೆದರು. ಅವರ ಆತ್ಮ ಶಾಂತವಾಗಿದೆ ಆದರೆ ಅವರು ನಮಗಾಗಿ ಅತ್ಯಮೌಲ್ಯ ತ್ಯಾಗಮಾಡಿದರು. ನಮ್ಮ ತಪ್ಪನ್ನು ನಾವು ಎಲ್ಲಾದರೂ ಮರೆತೇವು? ಗಾಂಧಿಯವರಂತಹ ಜಗತ್ತಿನ ಮಿತ್ರರನ್ನು ಕೊಲ್ಲುವ ನೀಚಪ್ರಾಣಿ ನಮ್ಮಲ್ಲಿ ಜನಿಸಿದುದ

ಕ್ಕಾಗಿ ಪ್ರತಿ ಭಾರತೀಯನೂ ನಾಚಿಕೆಯಿಂದ ತಲೆತಗ್ಗಿಸಬೇಕಾಗಿದೆ ದೇವರು ಕೊಲೆಪಾತಕನನ್ನು ಮನ್ನಿಸಲಿ, ನಾವೂ ಮನ್ನಿಸೋಣ ಬಾಪು ಅವನು ಗುಂಡುಹಾರಿಸುತ್ತಿದ್ದಾಗಲೂ ಅವನನ್ನು ಪ್ರೀತಿಸಿ ಕ್ಷಮಿಸಿರುವುದರಲ್ಲಿ ನನಗೆ ಸಂದೇಹವಿಲ್ಲ.

ದುಃಖದಿಂದಲೂ ನಿರಾಶೆಯಿಂದಲೂ ನಮ್ಮ ತಲೆ ಭಾರವಾಗಿ ಬಾಗಿದೆ ಅವುಗಳಿಗೆ ನಾವು ಒಳಗಾಗುವುದಿಲ್ಲವೆಂದು ಪ್ರತಿಜ್ಞೆ ಮಾಡೋಣ. ಗಾಂಧಿಯವರ ಇಷ್ಟದಂತೆ ಸತ್ಯ ಪ್ರೇಮದ ಮಾರ್ಗ ವನ್ನು ಅನುಸರಿಸೋಣ ಈ ರಾಷ್ಟ್ರದ ಶುಭ್ರ ಕೀರ್ತಿಗೆ ಉಂಟಾಗಿರುವ ಕಳಂಕವನ್ನು ತೊಡೆಯೋಣ. ದೇವರು ನಮ್ಮಲ್ಲಿ ದಯಾಶಾಲಿ ಯಾಗಲಿ ಬಾಪುವಿಗೆ ನಾವು ಅರ್ಹರಾಗಿ ಅವರ ಕನಸಿನ ಭಾರತವನ್ನು ಕಟ್ಟುವ ಶಕ್ತಿ ನಮಗೆ ಉಂಟಾಗಲಿ

ಬಾಪು, ನಿಮ್ಮ ಪಾದಧೂಳಿಯನ್ನು ಸಹ ಮುಟ್ಟಲು ಅನರ್ಹ ಳಾದ ನಾನು, ನಿಮಗೆ ನಿಮ್ಮ ಈ ದೊಡ್ಡ ವಿಜಯದ ಸಂದರ್ಭದಲ್ಲಿ ಯಾವ ಕಾಣಿಕೆಯನ್ನು ತಾನೇ ಸಮರ್ಪಿಸ ಬಲ್ಲೆ? ನಿಮ್ಮ ಮುಟ್ಟಿಗೆ ನೀವು ತೆರೆಯ ಆಚೆಗೆ ಹೋದಿರಿ. ಮರಣವು ಮಿತ್ರನೇ ಎಂದೂ ಅದಕ್ಕಾಗಿ ಹೆದರಬಾರದೆಂದು ನೀವು ನಮಗೆ ಹೇಳಿದಿರಿ. ಈ ದೇಶದ ಜನರಿಗೆ ನೀವು ಅನೇಕ ನೀತಿಗಳನ್ನು ಬೋಧಿಸಿದಿರಿ. ನಿಮಗಿಂತ ಹಿಂದಲ ಋಷಿಗಳು ಮಾಡಿದಂತೆ ಇಕ್ಕಟ್ಟಾದ ನೇರವಾದ ಮುಳ್ಳು ಹಾದಿಯಲ್ಲಿ ನಡೆದು ನೀವು ನಮಗೆ ದಾರಿ ತೋರಿಸಿದಿರಿ. ದ್ವೇಷಕ್ಕೆ ಪ್ರತಿಯಾಗಿ ಪ್ರೀತಿಸುವುದನ್ನು ನೀವು ನಮಗೆ ಕಲಿಸಿದಿರಿ. ಸತ್ಯವೇ ದೇವರೆಂಬುದನ್ನು ನೀವು ನಮಗೆ ಕಲಿಸಿದಿರಿ ದೇವರ ಸೇವೆಯಲ್ಲಿಯೇ ಪೂರ್ಣ ಸ್ವಾತಂತ್ರ್ಯವಡಗಿರುವುದನ್ನು ನೀವು ತೋರಿಸಿದಿರಿ.

ನೀವು ನಮ್ಮೊಂದಿಗೆ ಇದ್ದಾಗ ನಿಮ್ಮ ಜತೆಯಲ್ಲಿ ಹೆಜ್ಜೆಹಾಕುತ್ತಾ ಬರುವುದು ಸುಲಭವಾಗಿತ್ತು. ನಿಮ್ಮ ನಂಬಿಕೆ ಪ್ರೇಮ ಧೈರ್ಯ ಆತ್ಮ ಶಕ್ತಿ ಇವು ನಮ್ಮನ್ನು ಪೋಷಿಸುತ್ತಿದ್ದವು. ನಾವು ನಮ್ಮ ಭಾರವನ್ನೆಲ್ಲಾ ನಿಮ್ಮ ಹೆಗಲಿಗೆ ಏರಿಸಿದೆವು. ನೀವು ಅವನ್ನು ಇಷ್ಟದಿಂದಲೇ ಸಹಿಸಿದಿರಿ. ನಮ್ಮಲ್ಲಿ ನಿಮಗೆ ತುಂಬ ಪ್ರೀತಿ ಇದ್ದುದರಿಂದ ನಮ್ಮ ತಪ್ಪನ್ನೆಲ್ಲಾ ನೀವು ಮನ್ನಿಸಿದಿರಿ.

ಈಗ ದೇವರು ನಿಮ್ಮನ್ನು ತನ್ನಲ್ಲಿಗೆ ಬರಮಾಡಿಕೊಂಡಿದ್ದಾನೆ. ನಿರ್ಬಲರಾದ ನಾವು ಭಯದಿಂದ ಅನಾಥರಾಗಿದ್ದೇವೆ. ನೀವಿಲ್ಲದುದರಿಂದ ನಮ್ಮ ಹೃದಯಗಳು ನೋಯುತ್ತಿವೆ. ಅತ್ತು ಕಣ್ಣು ಕುರುಡಾಗಿದೆ. ಮನಸ್ಸಿನಲ್ಲಿ ಭಯ ತುಂಬಿದೆ ಹೃದಯವು ದುರ್ಬಲವಾಗಿದೆ. ನಿಮ್ಮ ಆವಶ್ಯಕತೆ ಈಗ ನಮಗೆ ಬಹಳ ಇತ್ತು ನೀವು ಈಗ ನಮ್ಮಿಂದ ದೂರವಾದಿರಿ. ನಿಮ್ಮ ಅತ್ಯದ್ಭುತ ಜಯದ ಸಮಯವೇ ನಮ್ಮ ಅತ್ಯವಮಾನದ ಸಮಯ. ಯಾಕೆಂದರೆ ತಪ್ಪುದಾರಿ ಹಿಡಿದು ನಮ್ಮ ದೇಶಕ್ಕೆ ಲಜ್ಜೆಯನ್ನುಂಟು ಮಾಡಿದವನು ನಮ್ಮ ಒಬ್ಬ ಸೋದರನೆ, ನಿಮ್ಮ ಒಬ್ಬ ಮಗನೇ. ಆದರೆ ದುರ್ಬಲ ಮತ್ತು ಭಯಗಳೆಂಬುವು ನಿಮ್ಮ ಶಬ್ದ ಕೋಶದಲ್ಲಿಯೇ ಇರಲಿಲ್ಲ. ಅವು ನಿಮಗೆ ತಿಳಿದಿರಲಿಲ್ಲ. ಇಂದು ದ್ವೇಷವೂ ಹಿಂಸೆಯೂ ನಮ್ಮ ರಾಜ್ಯದಲ್ಲಿ ತಾಂಡವವಾಡುತ್ತಿದೆ. ನಾವು ನಮ್ಮ ಆತ್ಮವನ್ನು ಕಳೆದುಕೊಳ್ಳುವುದರಲ್ಲಿದ್ದೇವೆ. ನೀವು ನಮಗಾಗಿ ಸಂಪಾದಿಸಿದ ರಾಜಕೀಯ ಸ್ವಾತಂತ್ರ್ಯ ನಿಮ್ಮ ಗುರಿಯ ರಾಮರಾಜ್ಯ ಸ್ಥಾಪನೆಗೆ ಮೊದಲನೆಯ ಮೆಟ್ಟಲು ಮಾತ್ರ.

ಆದುದರಿಂದ ನಾವೂ ಇಂದು ಪ್ರೀತಿ ಸತ್ಯಗಳೆಂಬ ಅದ್ವಿತೀಯ ಆಯುಧಗಳಿಂದಲೇ ಹೋರಾಡಬೇಕು. ನಮ್ಮನ್ನು ಆವರಿಸಿರುವ ಅಂಧಕಾರಕ್ಕೆ ಹೆದರಬಾರದು. ಹಾಗೆ ನಾವು ಮಾಡಿದರೆ ಮಾತ್ರ ನಿಮ್ಮ ಸಂತಾನವಾಗಲು ಅರ್ಹರಾಗುತ್ತೇವೆ. ನಾವು ಹೀಗೆ ಮಾಡಬೇಕೆಂಬುದೇ ನಿಮ್ಮ ಇಷ್ಟ. ನಾವು ಹಾಗೆ ಮಾಡಿದರೆ ಮಾತ್ರ ನಿಮ್ಮ ಪ್ರೇಮದಿಂದ ನಮಗೆ ಚೈತನ್ಯ ಒದಗುವುದು.

ಆ ಮೌನದಿಂದ ನಿಮ್ಮ ಇನಿದಾದ ಧ್ವನಿಯು ನಮಗೆ ಕೇಳಲಿ. ನೀವು ನಮ್ಮ ನಡುವೆ ಇದ್ದಾಗಿನ ನಿಮ್ಮ ಮಾತು ಮನಸ್ಸು ಕಾರ್ಯಗಳ ಸುವಾಸನೆ ನಮ್ಮನ್ನು ಈಗಲೂ ಸ್ಫೂರ್ತಿಗೊಳಿಸಲಿ. ನಿಮ್ಮ ಪ್ರೇಮ ಯಾವಾಗಲೂ ನಮಗೆ ರಕ್ಷೆಯಾಗಲಿ ನಿಮ್ಮ ಆತ್ಮಜ್ಯೋತಿಯು ನಮ್ಮ ಮಾರ್ಗವನ್ನು ಬೆಳಗಲಿ. ನೀವು ಅದೃಶ್ಯರಾಗಿ ನಮ್ಮೊಂದಿಗೆ ಇದ್ದು ಕಠಿಣವಾದ ಮಾರ್ಗದಲ್ಲಿ ಕೈಹಿಡಿದು ನಮ್ಮನ್ನು ನಡೆಯಿಸಿ. ಇದೇ ನನ್ನ ಪ್ರಾರ್ಥನೆ.

ನಿಮ್ಮ ಧ್ಯೇಯಕ್ಕೆ ಅನುಸಾರವಾಗಿ ಬಾಳಲು ನಮ್ಮ ಜೀವನವನ್ನು ಮೀಸಲಾಗಿಡುವುದೇ, ನಿಮ್ಮ ಅನುಯಾಯಿಗಳಾದ ನಾವು ನಿಮಗೆ ಅರ್ಪಿಸಲು ಧೈರ್ಯಗೊಳ್ಳಬಹುದಾದ ಕಾಣಿಕೆ.

[ರಾಜಕುಮಾರಿ ಅಮೃತಕೌರ್]

ಈ ದುಃಖ ಸಮಾಚಾರದಿಂದ ನನಗೆ ಸಿಡಿಲು ಬಡಿದಂತಾಗಿದೆ. ಮನುಷ್ಯರಲ್ಲೆಲ್ಲಾ ಅತ್ಯಂತ ಶ್ರೇಷ್ಠನೂ, ಉಜ್ವಲ ದೇಶಭಕ್ತನೂ ಆದ ರಾಷ್ಟ್ರಪಿತನ ಭಾರತದ ಒಗ್ಗಟ್ಟಿಗಾಗಿ ತನ್ನ ಜೀವವನ್ನು ಬಲಿಕೊಟ್ಟಿದ್ದಾನೆ. ಉಳಿದ ಕಾಂಗ್ರೆಸ್ಸಿಗರು ಅವರಿಗೆ ಅರ್ಹರಾಗಬೇಕು. ದೇಶ ದುಃಖದಲ್ಲಿ ಮುಳುಗಿ ಹೋಗಿದೆ. ಆದರೆ ಗಾಂಧಿಯವರ ಆದರ್ಶಕ್ಕೆ ಅನುಸಾರವಾಗಿ ಈಗಲಾದರೂ ನಡೆಯೋಣ.

[ಸಪ್ರು]

## ಧರ್ಮಬಲಿ

ಗಾಂಧಿಯವರು ಈಗ ನಮ್ಮ ಎದುರಿಗೆ ಇಲ್ಲ. ಆದರೆ ಅವರ ಜ್ಯೋತಿಯು ಬೆಳಗಿದ ದಾರಿಯನ್ನು ನಾವು ಅನುಸರಿಸಿದರೆ ಅವರ ದೇಹವಲ್ಲದಿದ್ದರೂ ಆತ್ಮವು ನಮ್ಮ ಜತೆಯಲ್ಲಿರುವುದು

ಗಾಂಧಿಯವರ ಮರಣದಿಂದ, ಜಗತ್ತು ಇನ್ನೂ ಸತ್ಯ ಅಹಿಂಸೆಯಿಂದ ಬಾಳಲು ಸಿದ್ಧವಾಗಿಲ್ಲವೆಂದು ಗೊತ್ತಾಗುತ್ತಿದೆ. ಸತ್ಯ ಅಹಿಂಸೆಯನ್ನು ಅನುಸರಿಸುವವನು ಇನ್ನು ಹುತಾತ್ಮನಾಗುತ್ತಾನೆ. ಇತಿಹಾಸದಲ್ಲಿ ಉದ್ದಕ್ಕೂ ಹೀಗೆಯೇ ಆಗಿದೆ.

ಈಚೆಗೆ ನಡೆದ ಸಂಗತಿಗಳಿಂದ ಧರ್ಮಕ್ಕೆ ಜಯವುಂಟೆ ? ಎಂಬ ವಿಷಯದಲ್ಲಿ ಗಾಂಧಿಯವರ ಮನಸ್ಸಿಗೆ ಬಹಳ ಏಟು ಬಿತ್ತು ಆದರೂ ಆ ಪರೀಕ್ಷೆಯಲ್ಲಿ ಅವರು ಉತ್ತೀರ್ಣರಾದರು. ಅವರ ಬಾಳಿನ ಅತ್ಯಂತ ಅಂಧಕಾರದ ಸಂದರ್ಭದಲ್ಲಿಯೂ ಅವರ ಧ್ಯೇಯದಲ್ಲಿ ಅವರ ನಂಬಿಕೆ ಕಡಿಮೆಯಾಗಲಿಲ್ಲ. ತನ್ನವರು ಎನ್ನಿಸಿಕೊಳ್ಳುವವರಿಗೆ ಎಷ್ಟು ಕಷ್ಟವಾದರೂ ಪ್ರತಿ ಹಿಂಸೆ ಮಾಡಕೂಡದು. ಸೇಡು ತೀರಿಸಿಕೊಳ್ಳಕೂಡದು. ಮನಸ್ಸಿನಲ್ಲಿಯೂ ಹಿಂಸೆಯನ್ನು ನೆನೆಯಕೂಡದು. ಹಿಂದುಗಳಿಗೂ ಸಿಖ್ಖರಿಗೂ ಏನುಬೇಕಾದರೂ ಆಗಲಿ; ಭಯದಿಂದ ಓಡ

ಹೋದ ಮುಸಲ್ಮಾನರ ಮನೆಗಳನ್ನು ಹಿಂದುಗಳು ಆಕ್ರಮಿಸಕೂಡದು. ಮುಸಲ್ಮಾನರು ಓಡಿಹೋಗಿರುವ ಹಳ್ಳಿಗಳನ್ನೂ ಹಿಂದುಗಳು ಆಕ್ರಮಿಸಿಕೊಳ್ಳಕೂಡದು. ಮುಸಲ್ಮಾನರ ಹೆಣ್ಣುಗಳು ಹಿಂದುಗಳ ವಶದಲ್ಲಿದ್ದರೆ ಅವರನ್ನು ಗೌರವದಿಂಡ ಹಿಂದಕ್ಕೆ ಒಪ್ಪಿಸಬೇಕು. ಸಿಖ್ ಮತ್ತು ಹಿಂದು ಸ್ತ್ರೀಯರ ವಿಚಾರದಲ್ಲಿ ಪಾಕಿಸ್ತಾನ ಹಾಗೆ ಮಾಡದಿದ್ದರೂ ನಾವು ದಾರಿತಪ್ಪಕೂಡದು. ನಮ್ಮ ಮತ್ತು ನಮ್ಮ ಮತದವರ ತಪ್ಪು ಒಂದೇ ಆಗಿದ್ದರೆ ಹತ್ತೆಂದು ಭಾವಿಸಬೇಕು ಇತರ ಮತದವರ ತಪ್ಪು ಹತ್ತು ಆದರೆ ಒಂದೆಂದು ಭಾವಿಸಬೇಕು. ನಾವು ಸರಿಯಾದ ನೀತಿಯಲ್ಲಿರಲು ಅದೇ ದಾರಿ. ಹೀಗೆ ಮಾಡಿದರೆ ಮಾತ್ರ ಧರ್ಮದ ಮಾರ್ಗದಲ್ಲಿ ನಡೆದಂತೆ ಆಯಿತು. ಅದರ ಫಲ ಒಳ್ಳೆಯದೇ ಆಗುತ್ತದೆ ಈ ನೀತಿಗನುಸಾರವಾಗಿ ನಡೆಯುವ ಮನುಷ್ಯನಿಗೂ ರಾಷ್ಟ್ರಕ್ಕೂ ಕೇಡಿಲ್ಲ. ದುಃಖವಿಲ್ಲ. ಧರ್ಮವು ಯಾರಲ್ಲಿದೆಯೋ ಅವರಿಗೇ ಅಂತ್ಯ ಜಯ.

"ತನ್ನ ಜನರನ್ನು ಪ್ರೀತಿಸುವುದೂ ಮನುಷ್ಯ ಪ್ರಪಂಚವನ್ನೇ ಪ್ರೀತಿಸುವುದೂ ಪರಸ್ಪರ ವಿರುದ್ಧವಲ್ಲವೆಂದು ಗಾಂಧಿ ಜಗತ್ತಿಗೆ ತೋರಿಸಿದರು. ಹಿಂದು ಮುಸಲ್ಮಾನ ಸಿಖ್ ಅಥವ ಬೇರೆ ಜಾತಿಯವರೆಂಬ ಭೇದ ಭಾವನೆ ಅವರಿಗೆ ಇರಲಿಲ್ಲ. ಭಾರತೀಯ, ಭಾರತೀಯನಲ್ಲ ಎಂಬ ಭೇದ ಭಾವನೆಯೂ ಇರಲಿಲ್ಲ. ಅವರ ದೃಷ್ಟಿಯಲ್ಲಿ ಮನುಷ್ಯ ಪ್ರಪಂಚವೆಲ್ಲಾ ಒಂದೇ, ಧರ್ಮ ಒಂದೇ ಅದೇ ಜಗತ್ತನ್ನು ನಡೆಸುವ ಮತ್ತು ಒಂದುಗೂಡಿಸುವ ಧರ್ಮ.

ಅವನತಿಯಲ್ಲಿಯೂ ಗುಲಾಮಗಿರಿಯಲ್ಲಿಯೂ ಇದ್ದ ಈ ದೇಶದಲ್ಲಿ ಮಹಾತ್ಮಾಗಾಂಧಿ ಜನಿಸಿದುದು ನಮ್ಮ ಪುಣ್ಯ ಅವರಿಗೆ ಯಾರೂ ಶತ್ರುಗಳು ಇರಲಿಲ್ಲ. ಪರದೇಶದ ಭಿನ್ನಾಭಿಪ್ರಾಯವುಳ್ಳವರಿಂದಲೂ ಕೊಲ್ಲಲ್ಪಡದ ಗಾಂಧಿಯವರು ನಮ್ಮವರಿಂದಲೇ ಕೊಲ್ಲಲ್ಪಟ್ಟದು ನಮ್ಮ ಅವಮಾನ. ಆ ಕೊಲೆಪಾತಕನಿಗೆ ತಾನು ಮಾಡುತ್ತಿದ್ದುದೇನೆಂಬುದರ ಅರಿವಿರಲಿಲ್ಲ. ಅವನು ಕೊಂದುದು ಗಾಂಧಿಯವರನ್ನಲ್ಲ. ಅವನು ಕೊಂದುದು ರಾಷ್ಟ್ರದ ಪಿತನನ್ನು, ರಾಷ್ಟ್ರದ ಆತ್ಮವನ್ನು. ಗಾಂಧಿ

ಯುವರ ಮರಣದಿಂದ ನಮ್ಮ ಇತಿಹಾಸದ ಅತ್ಯಂತ ಸಂಧಿಗ್ಧ ಸಂದರ್ಭ ದಲ್ಲಿ ದೇಶ ಅನಾಥವಾಯಿತು ನಾವು ಗುಲಾಮರಾಗಿದ್ದರೂ ಜಗತ್ತೆಲ್ಲ ನಮ್ಮನ್ನು ಗೌರವಿಸುವಂತೆ ಗಾಂಧಿಜಿ ಮಾಡಿದರು. ಅವರು ನಮ್ಮ ನಮ್ಮಲ್ಲಿಯ ಕಲಹಗಳನ್ನೆಲ್ಲಾ ಪರಿಹರಿಸುತ್ತಿದ್ದರು ನಮ್ಮ ಸ್ವಂತ ಕಷ್ಟಗಳಲ್ಲಿಯೂ ದೇಶದ ಕಷ್ಟದಲ್ಲಿಯೂ ಅವರ ಕಡೆಗೆ ನಾವು ತಿರುಗು ತ್ತಿದ್ದೆವು. ಅವರಿಗೆ ಜೀವನ ಮರಣಗಳೆರಡೂ ಒಂದೇ ಆಗಿದ್ದವು. ತಾವು ದೇವರ ಕೈಯಲ್ಲಿರುವುದಾಗಿ ಅವರು ಹೇಳುತ್ತಿದ್ದರು. ಅವರು ದೇಹವನ್ನು ಅಲ್ಪವಾಗಿ ಎಣಿಸಿದ್ದರು. ಆತ್ಮವೇ ಎಲ್ಲವೂ ಎಂದು ತಿಳಿ ದಿದ್ದರು. ದೇಹ ಬಂಧನದಿಂದ ಮುಕ್ತವಾದ ಅವರ ಆತ್ಮ ಇಂದು ಬ್ರಂಹ್ಮಾಂಡವನ್ನು ಆವರಿಸಿದೆ.

ಅವರನ್ನು ನಮ್ಮ ಗುರು ಎಂದು ಹೇಳಿಕೊಂಡು, ಅವರಿಂದ ಸ್ವಲ್ಪ ಯೋಗ್ಯತೆಯನ್ನು ಪಡೆದುಕೊಂಡು ಅವರ ಅನುಯಾಯಿಗಳಾದ ನಾವು, ನಮ್ಮಲ್ಲಿರುವ ವ್ಯತ್ಯಾಸಗಳನ್ನೆಲ್ಲಾ ಮರೆತು, ಗಾಂಧಿಯವರ ಕನಸಿನ ಸ್ವರಾಜ್ಯಕ್ಕಾಗಿ ದುಡಿಯಬೇಕು. ಆ ಸ್ವರಾಜ್ಯದ ತಳಹದಿ ಮಾತ್ರ ಹಾಕಲು ಗಾಂಧಿಯವರಿಗೆ ಅವಕಾಶವಾಯಿತು. ಅವರ ಆಶೀರ್ವಾದ ನಮ್ಮ ಮೇಲೆ ಇರಲಿ. ಜಾತಿ ಮತ ವರ್ಣ ದೇಶಗಳ ಮೇರೆಯನ್ನು ಮೀರಿ ಅಖಿಲ ಮನುಷ್ಯ ಪ್ರಪಂಚಕ್ಕೆ ಅನ್ವಯಿಸುವ ಗಾಂಧಿಯವರ ಧ್ಯೇಯವನ್ನು ಅನುಸರಿಸುವ ಶಕ್ತಿ ಶ್ರದ್ಧೆ ನಮಗೆ ಉಂಟಾಗಲಿ [ಆಚಾರ್ಯ ಕೃಪ್ಲಾನಿ.]

ನನ್ನ ಬಾಳಿನಲ್ಲಿ ನಾನು ಅನೇಕ ಹೊರೆಗಳನ್ನು ಹೊತ್ತಿದ್ದೇನೆ. ಆದರೆ ಗಾಂಧಿಯವರ ನಿಧನದಿಂದುಂಟಾಗಿರುವ ಹೊರೆ, ಹೊರಲಸಾಧ್ಯವಾಗಿದೆ. ಗಾಂಧಿಯವರ ಮರಣದಿಂದ ನನ್ನ ಮೆದುಳು ಚಲಿಸದಂತಾಗಿದೆ. ಗಾಂಧಿಯವರು ತಮ್ಮ ಪ್ರಯಾಣವನ್ನು ಮುಗಿಸಿದರು. ನಮ್ಮ ಹೊಸ ಪ್ರಮಾಣ ನಾವು ಪ್ರಾರಂಭಿಸಬೇಕಾಗಿದೆ. ನಾವು ಆ ಪ್ರಯಾಣವನ್ನು ಜಯಕಾರಿಯಾಗಿ ಮುಗಿಸುತ್ತೇವೆಂದು ಊಹಿಸೋಣ.

ಭಾರತೀಯರು ಮೂರು ವಿಷಯಗಳನ್ನು ನೆನಪಿನಲ್ಲಿಡಬೇಕು. ಗಾಂಧಿಯ ಕೊಲೆ ಒಬ್ಬ ಹುಚ್ಚನ ಕೆಲಸ ಮಾತ್ರವಲ್ಲ. ನಾವು ಈ

ವಾತಾವರಣವನ್ನೇ ಬದಲಾಯಿಸಬೇಕು. ಸರ್ಕಾರದವರು ಜಾತೀಯತೆಯನ್ನು ನಿರ್ಮೂಲಮಾಡಲು ದೃಢಸಂಕಲ್ಪಮಾಡಿ ಕೊನೆಯದಾಗಿದ್ದಾರೆ. ನೆಯದು ಸರ್ಕಾರ ತನ್ನ ಕೆಲಸ ಮಾಡಲು ಶಾಂತಿಸ್ಥಾಪಿಸಲು ಬಿಡಬೇಕು. ಜನರು ತಾವೇ ಸರ್ಕಾರದಂತೆ ವರ್ತಿಸಬಾರದು

[ಮೌಲಾನಾ ಅಬ್ದುಲ್ ಕಲಾಂ ಆಜಾದ್]

## ಕೊನೆಯ ದಿದ

ಇಪ್ಪತ್ತೊಂಭತ್ತನೆಯ ತಾರೀಖು ಬಾಪುವಿಗೆ ಕೈತುಂಬ ಕೆಲಸವಿತ್ತು. ಸಂಜೆಯವೇಳೆಗೆ ಅವರು ಕೆಲಸದಿಂದ ನಿತ್ರಾಣರಾಗಿದ್ದರು. "ನನ್ನ ತಲೆ ಸುತ್ತುತ್ತಿದೆ. ಆದರೂ ಇದನ್ನು ನಾನು ಪೂರೈಸಲೇಬೇಕು" ಎಂದು ಅವರು ಕಾಂಗ್ರೆಸ್ಸಿನ ಹೊಸ ಘಟನೆಯನ್ನು ಕುರಿತು ಅಭಾಗಾಂಧಿಗೆ ಹೇಳಿದರು. ಆ ಹೊಸ ಘಟನೆಯನ್ನು ಸಿದ್ಧಪಡಿಸಲು ಅವರು ಒಪ್ಪಿದ್ದರು. " ರಾತ್ರಿ ತುಂಬ ಹೊತ್ತು ಎಚ್ಚರವಾಗಿರಬೇಕೆಂದು ತೋರುತ್ತೆ " ಎಂದರು.

ಕೊನೆಯಲ್ಲಿ ರಾತ್ರಿ ೯-೧೫ಕ್ಕೆ ಮಲಗಲು ಅವರು ಹೊರಟಾಗ ಒಬ್ಬ ಹುಡುಗಿ " ನಿಮ್ಮ ನಿತ್ಯದ ವ್ಯಾಯಾಮವನ್ನು ನೀವು ತೆಗೆದುಕೊಂಡಿಲ್ಲ "ಎಂದು ಜ್ಞಾಪಿಸಿದಳು. ಗಾಂಧಿಯವರು "ಆಗಲಿ ನೀನು ಹೇಳುವುದರಿಂದ ಮಾಡುತ್ತೇನೆ" ಎಂದು ತಮ್ಮ ವ್ಯಾಯಾಮವನ್ನು ಮಾಡಿದರು. ಇಬ್ಬರು ಹುಡುಗಿಯರ ಹೆಗಲ ಮೇಲೆ ಕೈಯೂರಿ ದೇಹವನ್ನು ಮೇಲಕ್ಕೆ ಎತ್ತುವುದೇ ಆ ವ್ಯಾಯಾಮವಾಗಿದ್ದಿತು. ಹೀಗೆ ಗಾಂಧಿ ಮೂರು ಸಲ ಮಾಡಿದರು.

ಹಾಸಿಗೆಯಲ್ಲಿ ಮಲಗಿದ ನಂತರ ಅವರ ಅನುಯಾಯಿಗಳು ಅವರ ಹೆಜ್ಜೆಯನ್ನೂ ಅವಯುವಗಳನ್ನೂ ಅಮುಕಿ "ಮಾಲೀಸ್" ಮಾಡುವುದು ಪದ್ಧತಿ. ಅದು ಗಾಂಧಿಗಿಂತ ಹೆಚ್ಚಾಗಿ ಅವರ ಅನುಯಾಯಿಗಳಿಗೇ ಬೇಕಾಗಿದ್ದಿತು. ಅವರ ಮನಸ್ಸು ಆ ವಿಷಯದಲ್ಲಿ ಬಹಳ ಹಿಂದೆಯೇ ಉದಾಸೀನ ಭಾವನೆಯನ್ನು ತಾಳಿತ್ತು. ಆದರೆ ಅವರ ಪ್ರಕೃತಿಗೆ ಈ ಸಣ್ಣ ಸಣ್ಣ ಉಪಚಾರಗಳು ಆವಶ್ಯಕವೆಂದು ನನಗೆ ತಿಳಿದಿತ್ತು. ದಿನದ ಕಷ್ಟದನಂತರ ಸ್ವಲ್ಪ ಹಾಸ್ಯಕ್ಕೂ ವಿನೋದವಾದ

ಮಾತುಗಳಿಗೂ ಇದರಿಂದ ಅವಕಾಶವುಂಟಾಗುತ್ತಿತ್ತು. ಹಾಸ್ಯದ ಜತೆ ಯಲ್ಲಿಯೂ ಅವರು ಬೋಧನೆಯನ್ನು ಸೇರಿಸುತ್ತಿದ್ದರು. ಆ ಗುರು ವಾರ ರಾತ್ರಿ ಆಶ್ರಮವನ್ನು ನೋಡಲು ಬಂದಿದ್ದ ಒಬ್ಬ ಮಹಿಳೆಗೆ "ರಾಮನಾಮವನ್ನು ನಿನ್ನ ಹೃದಯ ಸಿಂಹಾಸನದಲ್ಲಿ ಸ್ಥಾಪಿಸಿಕೊಂಡಿದ್ದರೆ ನಿನಗೆ ರೋಗವೇ ಬರುತ್ತಿರಲಿಲ್ಲ. ಆದರೆ ಅದಕ್ಕೆ ಭಕ್ತಿಬೇಕು" ಎಂದು ಹೇಳಿದ್ದರು.

ಅದೇ ಸಾಯಂಕಾಲ ಪ್ರಾರ್ಥನೆಯಾದ ನಂತರ ಪ್ರಾರ್ಥನೆಯ ಗುಂಪಿನಲ್ಲಿದ್ದ ಒಬ್ಬ ಬಂದು "ನೀವು ಎರಡನೆಯ ತಾರೀಖು ವಾರ್ಧಾಕ್ಕೆ ಹೋಗುವಿರಂತೆ. ಆದುದರಿಂದ ನನಗೆ ನಿಮ್ಮ ಹಸ್ತಾಕ್ಷರ ಕೊಡಿ" ಎಂದನು. ಗಾಂಧಿಯವರು "ಹಾಗೆ ಹೇಳುವವರು ಯಾರು ?" ಎಂದರು. ಹಸ್ತಾಕ್ಷರ ಬೇಟೆಗಾರನು "ಪತ್ರಿಕೆಗಳಲ್ಲಿ ಹಾಗಿದೆ" ಎಂದನು. ಗಾಂಧಿಯವರು ನಗುತ್ತಾ "ನಾನೂ ಗಾಂಧಿಯ ವಿಷಯದಲ್ಲಿ ಅದನ್ನು ನೋಡಿದೆ. ಆದರೆ ಆ ಗಾಂಧಿ ಯಾರೋ ನನಗೆ ತಿಳಿಯದು" ಎಂದರು ಮತ್ತೊಬ್ಬ ಆಶ್ರಮವಾಸಿಯೊಂದಿಗೆ ಮಾತನಾಡುತ್ತಾ ಅವರು ಪ್ರಾರ್ಥನಾ ನಂತರದ ಭಾಷಣದಲ್ಲಿ ಹೇಳಿದ್ದ ಮಾತನ್ನೇ ಹೇಳಿದರು. "ಈ ಗದ್ದಲದಲ್ಲಿಯೇ ನನಗೆ ಶಾಂತಿ ದೊರೆಯಬೇಕು. ಕತ್ತಲೆಯಲ್ಲಿಯೇ ಬೆಳಕು ಕಾಣಬೇಕು. ನಿರಾಶೆಯಲ್ಲಿಯೇ ಆಶೆಯನ್ನು ಕಾಣಬೇಕು", ಎಂದರು. ಹುಡುಗಿಯರು ತಮ್ಮ ಊರು ಗೋಲು ಎಂಬ ಮಾತಿಗೆ ಅನ್ವಯಿಸಿಕೊಂಡು "ಹುಡಿಗಿಯರು ನನ್ನ ಊರುಗೋಲು ಆಗಲು ನಾನು ಅವಕಾಶ ಕೊಟ್ಟಿದ್ದೇನೆ ಆದರೆ ನಿಜವಾಗಿ ನನಗೆ ಆ ಅವಶ್ಯಕತೆಯಿಲ್ಲ. ಯಾರ ಮೇಲೆಯೂ ಯಾತಕ್ಕಾಗಿಯೂ ಅವಲಂಬಿಸದಿರುವುದನ್ನು ನಾನು ಬಹುದಿನಗಳಿಂದ ಅಭ್ಯಾಸ ಮಾಡಿಕೊಂಡಿದ್ದೇನೆ. ಹುಡುಗಿಯರು ತಂದೆಯ ಬಳಿಗೆ ಬರುವಂತೆ ನನ್ನಲ್ಲಿ ಬಂದು ನನ್ನ ಸುತ್ತಾ ಸೇರುತ್ತಾರೆ. ಅದು ನನಗೂ ಇಷ್ಟ, ಆದರೆ ನಿಜವಾಗಿ ನಾನು ಈ ವಿಷಯಗಳಲ್ಲೆಲ್ಲಾ ಪೂರ್ಣವಾಗಿ ಉದಾಸೀನನಾಗಿದ್ದೇನೆ" ಎಂದರು ಹೀಗೆ ನಿದ್ರೆ ಮಾಡುವವರೆಗೆ ಸಾಮಾನ್ಯವಾಗಿ ಮಾತನಾಡುತ್ತಾ ನಿದ್ರಾಲೀನರಾದರು.

ಆ ಚರಿತ್ರಾರ್ಹವಾದ ೩೦ನೆ ತಾರೀಖಿನ ಬೆಳಿಗ್ಗೆ ಅವರು "ಪ್ರಾತಸ್ಮರಾಮಿ" ಪ್ರಾರ್ಥನೆಗಾಗಿ ಬ್ರಾಹ್ಮೀ ಮುಹೂರ್ತದಲ್ಲಿ ೩|| ಗಂಟೆಗೆ ಎದ್ದರು ಪ್ರಾರ್ಥನೆಯ ನಂತರ ಸ್ವಲ್ಪ ಹೊತ್ತು ಕುಳಿತು ಕೆಲಸಮಾಡಿ ಎರಡನೆ ಸಾರಿ ಮತ್ತೆ ಸ್ವಲ್ಪ ನಿದ್ರೆಮಾಡಲು ಮಲಗಿದರು.

ಬೆಳಗಿನ ಎಂಟು ಗಂಟೆಗೆ ಅವರು ಮೈ ತಿಕ್ಕಿಸಿಕೊಳ್ಳುವ ಸಮಯ; ನನ್ನ ಕೊಠಡಿಯ ಮೂಲಕ ಹೋಗುತ್ತಾ ಕಾಂಗ್ರೆಸ್ಸಿನ ಹೊಸ ಘಟನೆಯ ಕರಡನ್ನು—ಅದೇ ದೇಶಕ್ಕೆ ಅವರ ಅಂತ್ಯ ಸಂದೇಶ—ನನಗೆ ಕೊಟ್ಟರು. "ಇದನ್ನು ಸರಿಯಾಗಿ ತಿದ್ದು, ಬಿಟ್ಟಿರುವುದನ್ನು ಸೇರಿಸು. ನಾನು ಬಹಳ ಬಳಲಿದ್ದಾಗ ಅದನ್ನು ಬರೆದೆ" ಎಂದರು. ಮೈ ತಿಕ್ಕಿಸಿಕೊಂಡು ಹಿಂದಿರುಗುತ್ತ "ಕರಡನ್ನು ತಿದ್ದಿದೆಯಾ?" ಎಂದು ಕೇಳಿದರು. "ಮದರಾಸಿನಲ್ಲಿ ಆಹಾರ ಕ್ಷಾಮ. ನಿನ್ನ ನವಖಲಿಯ ಅನುಭವದಿಂದ ಆ ಕ್ಷಾಮವನ್ನು ಎದುರಿಸಲು ಒಂದು ಟಿಪ್ಪಣಿಯನ್ನು ತಯಾರಿಸು. ಮದ್ರಾಸ್ ಆಹಾರ ಮಂತ್ರಿವರ್ಗ ಬಹಳ ಹೆದರಿದೆ. ಆದರೆ ತೆಂಗಿನ ಕಾಯಿ, ತಾಳೆ, ಬಾಳೆಹಣ್ಣು ನೆಲಗಡಲೆ ಗೆಡ್ಡೆಗೆಣಸು ಇವು ಸಮೃದ್ಧವಾಗಿರುವ ಮದರಾಸಿನಂತಹ ಪ್ರಾಂತ್ಯಕ್ಕೆ ಆಹಾರ ಕ್ಷಾಮವೆಲ್ಲಿದೆ? ಆದರೆ ಇವುಗಳ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳಲು ಜನರಿಗೆ ತಿಳಿಯಬೇಕು" ಎಂದರು. ನಾನು ಆ ಟಿಪ್ಪಣಿಯನ್ನು ಸಿದ್ಧಪಡಿಸುವುದಾಗಿ ಹೇಳಿದೆ. ಅನಂತರ ಗಾಂಧಿಯವರು ಸ್ನಾನಕ್ಕೆ ಹೋದರು. ಸ್ನಾನದಿಂದ ಬಂದಾಗ ಅವರು ಹೆಚ್ಚು ಗೆಲುವಾಗಿ ಕಂಡರು. ಮೊದಲ ರಾತ್ರಿಯ ಸುಸ್ತು ಮಾಯವಾಗಿದ್ದಿತು. ಅವರು ತಮ್ಮ ಸ್ವಭಾವದಂತೆ ನಗುಮುಖವಾಗಿದ್ದರು. "ನೀವು ನಿರ್ಬಲರು" ಎಂದು ಅವರು ಆಶ್ರಮದ ಹುಡುಗಿಯರನ್ನು ಹಾಸ್ಯಮಾಡಿದರು. ಒಬ್ಬರು "........ಗೆ ವಾಹನ ಸಿಕ್ಕದುದರಿಂದ ಅವರಿಗೆ ರೈಲು ತಪ್ಪಿಹೋಯಿತು" ಎಂದು ಹೇಳಿದಾಗ ಅವರು ತತ್ಕ್ಷಣ "ಅವಳು ನಡೆದುಕೊಂಡು ಹೋಗಬೇಕಿತ್ತು" ಎಂದರು. ಆ ಮಾತು ಬರಿಯ ಹಾಸ್ಯವೇ ಅಲ್ಲ. ಒಂದು ಸಲ ಆಂಧ್ರದೇಶದ ನಮ್ಮ ಪ್ರವಾಸದಲ್ಲಿ ಮೋಟಾರಿನಲ್ಲಿ ಪೆಟ್ರೋಲು ಇಲ್ಲದಿದ್ದಾಗ ನಮ್ಮ ಅಲ್ಪ ಸಾಮಾನು ಮತ್ತು ಕಾಗದ

ಪತ್ರಗಳೊಂದಿಗೆ ರೈಲು ಸ್ಟೇಷನ್ನಿಗೆ ಹದಿಮೂರು ಮೈಲಿ ನಡೆಯಲು ಸಿದ್ಧರಾಗಬೇಕೆಂದು ಬಾಪು ನನಗೆ ಹೇಳಿದ್ದರು

ಒಂಭತ್ತುವರೆ ಗಂಟೆ ವೇಳೆಗೆ ಗಾಂಧಿ ತಮ್ಮ ಬೆಳಗಿನ ಊಟವನ್ನು ಮಾಡಿದರು. ಅದಕ್ಕೆ ಮುಂಚೆ ಬಂಗಾಳಿ ಭಾಷೆಯ ಬರವಣಿಗೆಯ ಅಭ್ಯಾಸವನ್ನು ನಿತ್ಯದಂತೆ ಮಾಡಿದರು. ಶ್ರೀರಾಮಪುರದಿಂದ ಕಾಲುನಡಗೆಯಲ್ಲಿ ಹೊರಟು ಪೂರ್ವ ಬಂಗಾಳದ ಹಳ್ಳಿಗಳಲ್ಲಿ, ತಮ್ಮ ಮಾಡು ಅಥವ ಮಡಿ "ತತ್ತ್ವಕ್ಕನುಗುಸಾರವಾಗಿ ಅವರು ಕಾಲುನಡಿಗೆ" ಯಲ್ಲಿ ಸಂಚಾರಮಾಡಿದಂದಿನಿಂದ ತಪ್ಪದೆ ಈ ಅಭ್ಯಾಸವನ್ನಿಟ್ಟುಕೊಂಡಿದ್ದಾರೆ. ಅವರ ಊಟದಲ್ಲಿ ಆಡಿನ ಹಾಲು, ಹಸಿ ಮತ್ತು ಬೆಯಿಸಿದ ತರಕಾರಿ ಕಿತ್ತಲೆಹಣ್ಣು ಶುಂಠಿಕಷಾಯ ನಿಂಬೆಹುಳಿ ಮತ್ತು ಗೃತಕುಮಾರಿ ಇವು ಇರುತ್ತಿದ್ದವು ಊಟ ಮುಗಿಯುವುದಕ್ಕೆ ಮುಂಚೆಯೇ ನಾನು ಕಾಂಗ್ರೆಸ್ ಅಂಗರಚನೆಯ ಟಿಪ್ಪಣಿಯನ್ನು ಕೊಂಡು ಹೋದೆ. ಅವರು ತಮ್ಮ ಪದ್ಧತಿಯಂತೆ ಪ್ರತಿಯೊಂದು ಮಾತನ್ನೂ ಬಹು ಎಚ್ಚರಿಕೆಯಿಂದ ಪರೀಕ್ಷಿಸಿದರು. ಪಂಚಾಯ್ತಿಯ ನಾಯಕರ ಸಂಖ್ಯೆಯಲ್ಲಿ ಒಂದು ತಪ್ಪು ಇದ್ದದನ್ನು ತಿದ್ದಿದರು.

ಅನಂತರ ನಾನು ರಾಜೇಂದ್ರ ಬಾಬುರವರ ದೇಹಾರೋಗ್ಯವನ್ನು ಕುರಿತು. ವಿಸ್ತಾರವಾಗಿ ಹೇಳಿದೆ. ಅವರ ಆರೋಗ್ಯವನ್ನು ತಿಳಿದುಕೊಂಡು ಬರಲು ಮೊದಲು ದಿನ ಗಾಂಧಿ ನನ್ನನ್ನು ರಾಜೇಂದ್ರ ಬಾಬುಗಳಲ್ಲಿಗೆ ಕಳುಹಿಸಿದ್ದರು. ಮೊದಲ ದಿನದ ರಾತ್ರಿ ಡಾ|| ಶಾಮುಪ್ರಸಾದ್ ಮುಖರ್ಜಿ ನನಗೆ ತಿಳಿಸಿದ್ದ ಪೂರ್ವಬಂಗಾಳದ ಇತ್ತೀಚಿನ ಸಂಗತಿಗಳನ್ನು ತಿಳಿಸಿದೆ ಅದರಿಂದ ಮಾತು ನವಖಲಿಯ ಕಡೆಗೆ ತಿರುಗಿತು. ಜನರು, ಶಿಸ್ತಿನಿಂದ ನವಖಲಿಯನ್ನು ಬಿಡಬೇಕೆಂದು ನಾನು ಸೂಚಿಸಿದೆ. ಗಾಂಧಿಯವರು ಒಪ್ಪಲಿಲ್ಲ "ಕೆಲಸಗಾರರಾದ ನಾವು ಮಾಡಿ ಅಥವ ಮಡಿ ತತ್ತ್ವಕ್ಕನುಸಾರವಾಗಿ ನಡೆಯುವಂತೆ ನಮ್ಮ ಜನರನ್ನು ಆತ್ಮಗೌರವಕ್ಕಾಗಿ ಮಡಿಯಲೂ ತಯಾರಿಸಬೇಕು. ಕೊನೆಯಲ್ಲಿ ಉಳಿಯುವ ಸಂಖ್ಯೆಅಲ್ಪವಾಗಬಹದು. ಆದರೆ ದುರ್ಬಲರಿಂದ ಶಕ್ತಿಯನ್ನು ಸಂಪಾದಿಸಲು ಬೇರೆ ದಾರಿ ಇಲ್ಲ.

ಆಯುಧಗಳ ಯುದ್ಧದಲ್ಲಿಯೂ ಜನ ಸಾಯುವುದಿಲ್ಲವೆ? ಅಹಿಂಸೆಯಲ್ಲಿಯೂ ಹಾಗಲ್ಲದೆ ಬೇರೆ ಮಾರ್ಗವಿಲ್ಲ"ಎಂದರು. ಮುಂದೆ ಗಾಂಧಿ ಹೀಗೆ ಹೇಳಿದರು. "ನೀನು ಮಾಡುತ್ತಿರುವುದು ಸರಿಯಾದ ಮಾರ್ಗ. ನೀನು ಮರಣ ಭಯವನ್ನು ಬಿಟ್ಟು ಜನರ ಹೃದಯದಲ್ಲಿ ಸ್ಥಾನವನ್ನು ಸ್ಥಾಪಿಸಿಕೊಂಡಿರುವೆ. ಪ್ರೀತಿ ಮತ್ತು ಕಾರ್ಯಕ್ಕೆ ಜ್ಞಾನದ ಸಹಾಯವೂ ಬೇಕು. ನೀನು ಇದನ್ನು ಮಾಡಿದ್ದೀಯೆ. ನೀನು ಒಬ್ಬನೇ ಒಬ್ಬ ನಿನ್ನ ಕಾರ್ಯವನ್ನು ಚೆನ್ನಾಗಿ ಪೂರ್ಣವಾಗಿ ಮಾಡಿದರೆ ನೀವು ಎಷ್ಟೋ ಮಾಡಿದಂತೆ. ಇಲ್ಲಿ ನೀನು ಇರಬೇಕೆಂಬುದು ನಿನಗೆ ಗೊತ್ತಿದೆ. ಇಲ್ಲಿ ಹೊರೆ ಹೆಚ್ಚಾಗಿದೆ. ನಾನು ಜಗತ್ತಿನೊಂದಿಗೆ ಹಂಚಿಕೊಳ್ಳಬೇಕಾದುದು ಬಹಳ ಇದೆ. ಆದರೆ ನೀನು ಇಲ್ಲದುದರಿಂದ ಅದು ಸಾಧ್ಯವಾಗಿಲ್ಲ ಆದರೆ ನನ್ನ ಮನಸ್ಸನ್ನು ಗಟ್ಟಿ ಮಾಡಿಕೊಂಡಿದ್ದೇನೆ. ನೀನು ಮಾಡುತ್ತಿರುವುದು ಹೆಚ್ಚು ಪ್ರಾಮುಖ್ಯವಾದ ಕೆಲಸ" ಅನಂತರ ಗಾಂಧಿಯವರು, ಸರ್ಕಾರ ತನ್ನ ಕೆಲಸವನ್ನು ಮಾಡದಿದ್ದರೆ ಅತ್ಯಾಚಾರಿಗಳನ್ನು ನಾವು ಹೇಗೆ ತಹಬಂದಿಗೆ ತರಬಹುದೆಂದು ತೋರಿಸಿದರು.

ಮಧ್ಯಾಹ್ನದ ನಿದ್ರೆ ಆದಮೇಲೆ ಅವರು ಶ್ರೀ ಸುಧೀರ್ ಘೋಷ್‌ರನ್ನು ನೋಡಿದರು. ಸುಧೀರ್ ಘೋಷರು ಇತರ ಕಾಗದಗಳ ಜತೆಯಲ್ಲಿ ಲಂಡನ್ ಟೈಮ್ಸ್‌ನ ಒಂದು ಸುದ್ದಿಯನ್ನೂ ಇತರ ಇಂಗ್ಲಿಷ್ ಮಿತ್ರರ ಒಂದು ಕಾಗದವನ್ನೂ ತೋರಿಸಿದರು. ಅವುಗಳಲ್ಲಿ ಪಂಡಿತ ನೆಹ್ರುರಿಗೂ ಸರ್ದಾರ್ ಪಟೇಲರಿಗೂ ವ್ಯತ್ಯಾಸವನ್ನುಂಟುಮಾಡುವ ಪ್ರಯತ್ನ ನಡೆದಿತ್ತು. ನೆಹ್ರು ಅಂತರ ರಾಷ್ಟ್ರೀಯ, ಪಟೇಲ ಜಾತಿ ಅಂಧ, ಹೀಗೆ ಒಬ್ಬರನ್ನು ಹೊಗಳಿ ಒಬ್ಬರನ್ನು ತೆಗಳಿದ್ದರು. ಗಾಂಧಿಯವರು "ನನಗೆ ಈ ಚೇಷ್ಟೆ ಗೊತ್ತು. ನಾನೂ ಇದರಿಂದ ಯೋಚನೆಗೊಳಗಾಗಿದ್ದೇನೆ ಪ್ರಾರ್ಥನೆಯನಂತರದ ಒಂದು ಭಾಷಣದಲ್ಲಿ ಈ ವಿಚಾರ ಪ್ರಸ್ತಾಪಿಸಿದ್ದೇನೆ. ಹರಿಜನದಲ್ಲೂ ಬಂದಿದೆ. ಆದರೆ ಇನ್ನೂ ಏನನ್ನಾದರೂ ಮಾಡಬೇಕು. ಯೋಚಿಸುತ್ತೇನೆ" ಎಂದರು.

ಆ ದಿನವೆಲ್ಲಾ ಭೇಟಿಗಳೇ ಆದವು. ಡಿಲ್ಲಿ ಮೌಲಾನಾಗಳು

ಬಂದಿದ್ದರು. ಗಾಂಧಿ ವಾರ್ಧಾಕ್ಕೆ ಹೋಗಬಹುದೆಂದು ಅವರು ಒಪ್ಪಿದರು. ಗಾಂಧಿಯವರು "೧೧ನೇ ತಾರೀಖು ಜಮುನಾಲಾಲರ ಶ್ರಾದ್ಧದ ನಂತರ ನಾನು ಹೆಚ್ಚುದಿನ ವಾರ್ಧಾನದಲ್ಲಿರುವುದಿಲ್ಲ. ೧೪ ನೇ ತಾರೀಖು ಹಿಂದಿರುಗುತ್ತೇನೆ. ಈಗಿನ ಕಾರ್ಯಕ್ರಮ ಹಾಗೆ. ಅನಿರೀಕ್ಷಿತವಾದುದು ಏನಾದರೂ ನಡೆದರೆ ಇಷ್ಟರ ಮೇಲೆ ದೇವರ ಇಚ್ಛೆ" ಎಂದರು.

ನಾನು ಅವರನ್ನು ಇನ್ನೊಂದು ಮಾತು ಕೇಳುವದ್ದಿತ್ತು. "ಬಾಪು........ಯನ್ನು ನವಖಲಿಗೆ ಸ್ವಲ್ಪ ಕಾಲದ ಮಟ್ಟಿಗಾದರೂ ಕರೆದುಕೊಂಡು ಹೋಗಲೆ? ಮುಸಲ್ಮಾನ ಸ್ತ್ರೀಯರೊಂದಿಗೆ ಕೆಲಸ ಮಾಡಲು ಅದರಿಂದ ಸಹಾಯವಾಗುವುದು' ಎಂದೆ 'ನಾನು ಅವರಿಗೆ ರಜೆಕೊಡಲು....ರನ್ನು ಕೇಳುತ್ತೇನೆ' ಎಂದೆ. "ಅಗತ್ಯವಾಗಿ" ಎಂದರು ಗಾಂಧಿ. ಅವರ ಬಾಯಿಂದ ನಾನು ಕೇಳಿದ ಕೊನೆಯಮಾತು ಅದೇಯೆ.

ಸಂಧ್ಯಾಕಾಲ ೪|| ಗಂಟೆಗೆ ಅಭಾ ಗಾಂಧಿ ಅವರ ಸಾಯಂಕಾಲದ ಊಟವನ್ನು ತಂದರು. ಅದೇ ಭೂಮಿಯ ಮೇಲಿನ ಅವರ ಕೊನೆಯ ಊಟ. ಆ ಊಟ ಸ್ವಲ್ಪ ಹೆಚ್ಚು ಕಡಿಮೆ ಬೆಳಗಿನ ಊಟದಂತೆಯೇ ಇತ್ತು. ಕೊನೆಯ ಭೆಟ್ಟಿ ಸರದಾರರೊಂದಿಗೆ ಆಯಿತು. ಮಂತ್ರಿ ಮಂಡಲದಲ್ಲಿ ಒಡಕನ್ನು ಹುಟ್ಟಿಸಲು ನಡೆಯುತ್ತಿರುವ ತಂತ್ರವನ್ನೂ ಕುರಿತು ಅವರು ಚರ್ಚಿಸಿದರು. ಕಾಂಗ್ರೆಸ್‌ನಲ್ಲಿ ಒಡಕು ಬಂದರೆ ಈ ಸಮಯದಲ್ಲಿ ದೇಶಕ್ಕೆ ಖಂಡಿತ ಅಪಾಯವೆಂಬುದು ಗಾಂಧಿಯವರ ಸ್ಪಷ್ಟವಾದ ಮತವಾಗಿತ್ತು. ಆ ವಿಷಯವನ್ನೇ ಕುರಿತು ಅಂದಿನ ಪ್ರಾರ್ಥನೆಯನಂತರ ತಾವು ಮಾತನಾಡುವುದಾಗಿ ಗಾಂಧಿ ಹೇಳಿದರು. ಪ್ರಾರ್ಥನೆ ಯಾದನಂತರ ಪಂಡಿತ್‌ಜಿ ಬಂದು ಅವರೊಂದಿಗೆ ಚರ್ಚಿಸುವರಾಗಿದ್ದರು. ಆವಶ್ಯಕವಾದರೆ ಡಿಲ್ಲಿಯನ್ನು ಬಿಡದೆ ಅಲ್ಲಿಯೇ ಇದ್ದು, ಮಧ್ಯೆ ಬಂದಿದೆ ಎಂದು ಹೇಳುತ್ತಿದ್ದ ವ್ಯತ್ಯಾಸವನ್ನು ಪೂರ್ಣವಾಗಿ ಅಳಿಸಿ ಅನಂತರವೇ ವಾರ್ಧಾಕ್ಕೆ ಹೋಗುವುದಾಗಿ ಹೇಳಿದರು.

ಹೀಗೆ ಮಾತು ಮುಂದುವರಿಯಿತು ಪಾಪ, ಅಭಾ ಮಾತಿಗೆ ವಿಘ್ನಪಡಿಸಲಿಲ್ಲ. ಗಾಂಧಿಯವರು ಯಾವ ಕಾರ್ಯವನ್ನೂ ಸಕಾಲಕ್ಕೆ—

ಅದರಲ್ಲೂ ಪ್ರಾರ್ಥನೆಯನ್ನು—ಮಾಡುವುದನ್ನ ಚೆನ್ನಾಗಿ ಅರಿತ ಆಕೆ ಗಾಂಧಿಯವರ ಗಡಿಯಾರವನ್ನೇ ತೆಗೆದು ಅವರ ಮುಂದೆ ಹಿಡಿದಳು. ಪ್ರಾರ್ಥನೆಯ ಕಾಲ ಮೀರುತ್ತಿದೆಯೆಂದು ಹೇಳಿದಳು. "ಇನ್ನು ನಾನು ನಿಮ್ಮನ್ನು ಬಿಟ್ಟು ಹೋಗಲೇ ಬೇಕು" ಎಂದು ಹೇಳಿಕೊಂಡು ಗಾಂಧಿಯವರು ಪ್ರಾರ್ಥನೆಗೆ ಮುಂಚೆ ಸ್ನಾನ ಗೃಹಕ್ಕೆ ಹೋದರು. ತನ್ನ ಊರುಗೋಲೆಂದು ಕರೆಯುತ್ತಿದ್ದ ಅಭಾ ಮತ್ತು ಮನು ಗಾಂಧಿಯವರೊಂದಿಗೆ ಉದ್ದಕ್ಕೂ ಹಾಸ್ಯವಾಡುತ್ತ, ಪ್ರಾರ್ಥನೆಯ ಮೈದಾನದ ಮಾರ್ಗದ ಎತ್ತರಿಸಿದ್ದ ಮೆಟ್ಟಲುಗಳ ಬಳಿಗೆ ಗಾಂಧಿ ಬಂದರು

ಆ ಸಂಜೆ ಅಬಾ, ಗಾಂಧಿಯವರಿಗೆ ಎರಡು ಹಸಿಮೂಲಂಗಿಯ ರಸವನ್ನು ತಂದು ಕೊಟ್ಟಾಗ ಅವರು ನಗುತ್ತಾ "ಪಶುಗಳ ಆಹಾರವನ್ನು ನನಗೆ ಕೊಡುತ್ತಿದ್ದೀಯೆ" ಎಂದಿದ್ದರು. ಆಕೆ "ಬಾ ಇದು ಕುದುರೆಯ ಆಹಾರವೆಂದಿದ್ದರು" ಎಂದಳು. ಗಾಂಧಿಯವರು "ಯಾರಿಗೂ ಬೇಡವಾದುದು ನನಗೆ ರುಚಿಯಾಗಿರುವುದು ಎಷ್ಟು ಸೊಗಸು!" ಎಂದರು. ಅವರು ಮತ್ತೆ ನಕ್ಕರು.

ಅಭಾ "ಬಾಪು ನಿಮ್ಮ ಗಡಿಯಾರಕ್ಕೆ ತಾನು ತಿರಸ್ಕೃತನೆಂಬ ಭಾವ ಬಂದಿರಬೇಕು. ನೀವು ಅದರ ಕಡೆ ನೋಡುವುದು ಸಹ ಇಲ್ಲ". ಎಂದಳು. ಗಾಂಧಿಯವರು "ನಾನು ಯಾಕೆ ನೋಡಬೇಕು. ನಮ್ಮ ಸಮಯವನ್ನು ಕಾಯುವವರು ನೀವು"? ಎಂದು ಬದಲಿತ್ತರು. ಆಗ ಅವರಲ್ಲಿ ಒಬ್ಬರು "ಆದರೆ ನೀವು ನಿಮ್ಮ ಸಮಯರಕ್ಷಕರ ಕಡೆ ನೋಡುವುದಿಲ್ಲ" ಎಂದಳು ಗಾಂಧಿ ಮತ್ತೆ ನಕ್ಕರು. ಪ್ರಾರ್ಥನೆಯ ಬಯಲಿಗೆ ಹೋಗುವ ಮೆಟ್ಟಲನ್ನು ಹತ್ತುತ್ತಾ ಗಾಂಧಿಯವರು ಹೇಳಿದ ಕೊನೆಯ ಮಾತು ಇದು "ಹತ್ತು ನಿಮಿಷ ಕಾಲಮೀರಿತು. ಕಾಲ ಮೀರುವುದು ನನಗೆ ಬಹಳ ಅಪ್ರಿಯ. ಐದು ಗಂಟೆಗೆ ಸರಿಯಾಗಿ ಪ್ರಾರ್ಥನೆಯ ಸ್ಥಳದಲ್ಲಿರುವುದು ನನಗೆ ಇಷ್ಟ" ಅಲ್ಲಿಂದ ಮುಂದೆ ಯಾರೂ ಮಾತುಗಳನ್ನಾಡಲಿಲ್ಲ. ಪ್ರಾರ್ಥನಾ ಬಯಲು ಬಂದ ಕೂಡಲೇ ಹಾಸ್ಯದ ಮಾತು ನಿಲ್ಲಬೇಕೆಂದೂ ಮನಸ್ಸನ್ನು ಪ್ರಾರ್ಥನೆಯಿಂದ-ತುಂಬಿಕೊಳ್ಳಬೇಕೆಂದೂ "ಊರುಗೋಲು" ಗಳಿಗೂ ಗೊತ್ತಾಗಿತ್ತು.

## ರಾಮ್—ರಾಮ್

ಪ್ರಾರ್ಥನೆಯ ಮೈದಾನದಲ್ಲಿ ಹೋಗುತ್ತಾ, ನೆರೆದಿದ್ದ ಗುಂಪಿನವರು ಮಾಡಿದ ನಮಸ್ಕಾರಕ್ಕೆ ಪ್ರತಿ ನಮಸ್ಕಾರವನ್ನು ಮಾಡಲು ಅವರು ಇಬ್ಬರು ಹುಡುಗಿಯರ ಹೆಗಲಿನಿಂದಲೂ ತಮ್ಮ ಕೈಗಳನ್ನು ಮೇಲೆತ್ತಿದರು. ಇದ್ದಕ್ಕಿದ್ದಂತೆ ಬಲಗಡೆಯಿಂದ ಒಬ್ಬರು ಒರಟಾಗಿ ಮುಂದಕ್ಕೆ ನುಗ್ಗಿದರು ಚಿಕ್ಕ ಹುಡುಗಿ ಮನು ಆತ ನಮಸ್ಕರಿಸಲು ಬರುತ್ತಿರುವನೆಂದರಿತು "ಈಗಲೇ ಪ್ರಾರ್ಥನೆಗೆ ಕಾಲಮೀರಿತು" ಎಂದು ಅವನ ಕೈಯನ್ನು ಹಿಡಿದುಕೊಂಡು ತಡೆಯಲು ಪ್ರಯತ್ನಿಸಿದಳು. ಅವನು ಆಕೆಯನ್ನು ಜೋರಾಗಿ ತಳ್ಳಿಬಿಟ್ಟನು. ಆಕೆಯ ಕೈಯಲ್ಲಿದ್ದ ಆಶ್ರಮ ಭಜನಾವಳಿಯೂ ಮಾಲೆಯೂ ಎಂಜಲು ಪಾತ್ರೆಯೂ ಕೆಳಗೆ ಬಿದ್ದವು. ಅವನ್ನು ತೆಗೆದುಕೊಳ್ಳಲು ಆಕೆ ಬಗ್ಗಿದಾಗ, ಅವನು ಗಾಂಧಿಯ ಎದುರಿಗೆ ಸರಿಯಾಗಿ ಬಂದು ನಿಂತನು—ಎಷ್ಟು ಹತ್ತಿರದಲ್ಲಿ ನಿಂತನೆಂದರೆ ಅನಂತರ ಒಂದು ಗುಂಡಿನ ಮುಸುಕು ಗಾಂಧಿಯವರ ಬಟ್ಟೆಗಳಲ್ಲಿಯೇ ದೊರಕಿತು—ಏಳು ಗುಂಡು ಹಿಡಿಯುವ ಆಟೊಮಾಟಿಕ್ ಪಿಸ್ತೂಲಿನಿಂದ ಮೂರು ಗುಂಡು ಸರಸರನೆ ಹಾರಿತು. ಮೊದಲನೆಯದು ಬಲಗಡೆಯಿಂದ ಗಾಂಧಿಯವರ ಉದರವನ್ನು ಹೊಕ್ಕಳಿನಿಂದ ೨|| ಅಂಗುಲ ಮೇಲೆ ಪ್ರವೇಶಿಸಿತು. ಎರಡನೆಯದು ಹೃದಯದ ಬಲಗಡೆಯನ್ನು ಪ್ರವೇಶಿಸಿತು. ಮೊದಲನೆಯ ಎರಡು ಗುಂಡುಗಳು ಮುಂದುಗಡೆ ಹೊರಟು ಹೊಟ್ಟೆಯನ್ನು ಸೀಳಿಕೊಂಡು ಹಿಂದೆ ಬಂದವು. ಮೂರನೆಯದು ಶ್ವಾಸಕೋಶದಲ್ಲಿ ನಿಂತಿತು. ಮೊದಲನೆಯ ಗುಂಡಿಗೇ, ಚಲಿಸುತ್ತಿದ್ದ ಅವರ ಹೆಜ್ಜೆ ನಿಂತಿತು. ಅವರು ಇನ್ನೂ ನಿಂತಿರುವಂತೆಯೇ ಎರಡನೆಯ ಗುಂಡು ಬಡಿಯಿತು. ಗಾಂಧಿಯವರು ಬಿದ್ದರು. ಅವರು ಹೇಳಿದ ಕೊನೆಯ ಮಾತು ರಾಮ್ ರಾಮ್ ಎಂಬುದೇ. ಮುಖವು ಬೂದಿ ಬಣ್ಣವಾಯಿತು. ರಕ್ತದ ಕರೆ ಬಿಳಿಯ ಬಟ್ಟೆಯ ಮೇಲೆ ತೋರಿತು ನಮಸ್ಕಾರ ಮಾಡಲು ಎತ್ತಿದ್ದ ಕೈ ಮೆತ್ತಗೆ ಕೆಳಕ್ಕೆ ಬಂತು. ಒಂದು ಕೈ ಸ್ವಾಭಾವಿಕವಾಗಿ ಅಭಾಳ ಹೆಗಲ ಮೇಲೆ

ಬಂತು. ಬಳಲುತ್ತಿದ್ದ ದೇಹ ಕೆಳಕ್ಕೆ ಬಿದ್ದಿತು ಸಂಭ್ರಾಂತರಾಗಿದ್ದ ಆಭಾ ಮತ್ತು ಮನುಗಳಿಗೆ ನಡೆದದ್ದೇನೆಂಬುದು ಆಗ ತಾನೇ ಗೊತ್ತಾಯಿತು.

ಮರುದಿನ ನವಖಲಿಗೆ ಹೋಗಲು ನನ್ನ ಸಿದ್ಧತೆಗಳನ್ನು ಮಾಡಿ ಕೊಳ್ಳಲು ನಾನು ಪಟ್ಟಣಕ್ಕೆ ಹೋಗಿ ಆಗ ತಾನೇ ಹಿಂದಿರುಗಿದ್ದೆ. ಪ್ರಾರ್ಥನಾ ಮೈದಾನದ ಮಾರ್ಗದ ಮೆಟ್ಟಲನ್ನು ನಾನು ಹತ್ತುತ್ತಿರು ವಾಗ ಶ್ರೀ ಚಂದವಾನಿ ಓಡಿಬಂದು "ಡಾ|| ಕೃಷ್ಣರವರಿಗೆ ಟೆಲಿ ಫೋನ್ ಮಾಡಿ. ಬಾಪುವನ್ನು ಗುಂಡಿನಿಂದ ಹೊಡೆದಿದ್ದಾರೆ" ಎಂದು ಕೂಗಿದನು. ನಾನು ಕನಸಿನಲ್ಲಿದ್ದವನಂತಾದೆ. ಸ್ಥಂಭೀತನಾಗಿ ಯಂತ್ರದಂತೆ ಎದ್ದು ಯಾರ ಹತ್ತಿರವೋ ಟೆಲಿಫೋನ್ ಮಾಡಿಸಿದೆ.

ಎಲ್ಲರೂ ಸಂಭ್ರಾಂತರಾದರು. ನನ್ನ ಹಿಂದೆ ಬಂದ ಡಾಕ್ಟರ್ ರಾಜ್‌ಸಬರ್‌ವಾಲ್ ಗಾಂಧಿಯವರ ಅರ್ಧ ಕಣ್ಣು ಮುಚ್ಚಿ ಬಿದ್ದಿದ್ದ ದೇಹವನ್ನು ಎತ್ತಿ ತೊಡೆಯ ಮೇಲೆ ತಲೆಯಿಟ್ಟುಕೊಂಡರು. ಕೊಲೆ ಪಾತಕನನ್ನು ಬಿರ್ಲಾಭವನದ ಮಾಲಿ ಹಿಡಿದನು ಇತರರು ಸೇರಿದರು ಸ್ವಲ್ಪ ಹೋರಾಡಿನಂತರ ಕೊಲೆಪಾತಕನು ತೆಪ್ಪಗಾದನು. ಇನ್ನೂ ಬಳುಕುತ್ತಿದ್ದ ಗಾಂಧಿಯವರ ದೇಹವನ್ನು ಒಳಕ್ಕೆ ಎತ್ತಿಕೊಂಡು ಹೋಗಿ [ಅವರು ಕುಳಿತು ಕೆಲಸ ಮಾಡುತ್ತಿದ್ದ] ಹಾಸಿಗೆಯ ಮೇಲೆ ಮಲಗಿಸಿದರು. ಆದರೆ ಯಾರೂ ಏನನ್ನೂ ಮಾಡುವುದಕ್ಕೆ ಮುಂಚೆ ಗಡಿಯಾರ ನಿಂತು ಹೋಗಿತ್ತು. ಒಳಕ್ಕೆ ಎತ್ತಿಕೊಂಡು ಹೋದ ಕೂಡಲೆ ಅವರ ಬಾಯಿಗೆ ಬಿಟ್ಟ ಬಿಸಿನೀರೂ ಜೇನುತುಪ್ಪವೂ ಒಳಕ್ಕೆ ಹೋಗಲಿಲ್ಲ. ಏಟು ಬಿದ್ದಕೂಡಲೇ ಮರಣವುಂಟಾಗಿತ್ತು.

ಡಾಕ್ಟರ್ ಸುಶೀಲೆಯನ್ನು ಗಾಂಧಿ ಒಂದು ಕರುಣೆಯ ಕೆಲಸ ಕ್ಕಾಗಿ ಬಹವಲ್‌ಪುರಕ್ಕೆ ಕಳುಹಿಸಿದ್ದರು. ಡಾಕ್ಟರ್ ಭಾರ್ಗವ್‌ರು ಬಂದು ಸುಶೀಲೆಯ ಔಷಧಿಯ ಪೆಟ್ಟಿಗೆಯನ್ನು ಅಡ್ರೆನಾಲಿನ್ ಔಷಧಿ ಗಾಗಿ ಹುಡುಕಿದರು. ನಾನು "ನಿಮಗೆ ಶ್ರಮಬೇಡ" ಎಂದೆ. ತನ್ನ ಪ್ರಾಣವನ್ನು ಉಳಿಸುವುದಕ್ಕಾಗಿಯೂ, ಬಹಿಷ್ಕೃತವಾದ ಔಷಧಿಗಳನ್ನು ತನಗೆ ಪ್ರಯೋಗಿಸಕೂಡದೆಂದು ಗಾಂಧಿಜಿ ಅನೇಕವೇಳೆ ನನ್ನನ್ನು

ಎಚ್ಚರಿಸಿದ್ದರು. ಈಚೆಗೆ ಗಾಂಧಿಯವರು ತಮಗೂ ಇತರರಿಗೂ ರಾಮನಾಮವೇ ಸರ್ವೌಷಧಿಯೆಂದು ಹೇಳತೊಡಗಿದ್ದರು. ಅದೇ ಅವರ ದೃಢನಂಬಿಕೆಯಾಗಿತ್ತು. ಅಂದು ವಿಜ್ಞಾನದ ಪರಿಮಿತಿಯನ್ನು ಕುರಿತು ಮಾತನಾಡುತ್ತ ಅವರು ಒಂದೇ ಮಾತಿನಲ್ಲಿ ಹೀಗೆ ಹೇಳಿದ್ದರು. ಗೀತೆಯಲ್ಲಿ ಹೇಳಿರುವ ಏಕಾಂಶೇನ ಸ್ಥಿತೋಜಗತ್ ಎಂಬುದರ ಅರ್ಥ ಇನ್ನೇನು? ಘನಶ್ಯಾಮದಾಸ್ ಬಿರ್ಲಾರೊಂದಿಗೆ ರಾಮನಾಮ [ಜಗತ್ತು ಯಾತರ ಮೇಲೆ ನಿಂತಿದೆಯೋ ಆ ಒಂದೇ ಆಧಾರ] ಸರ್ವೌಷಧಿಯೆಂದು ಹೇಳುತ್ತಾ "ನನ್ನ ಜೀವನದಲ್ಲಿ ಇದನ್ನು ಸ್ಥಾಪಿಸದಿದ್ದರೆ ನನ್ನ ಮರಣದೊಂದಿಗೆ ಹೋಗುವುದು"ಎಂದಿದ್ದರು. ಔಷಧಿಯ ಪೆಟ್ಟಿಗೆಯಲ್ಲಿ ಅಡ್ರೆನಾಲಿನ್ ಹೇಗೂ ಇರಲಿಲ್ಲ. ಡಾಕ್ಟರ್ ಸುಶೀಲ ಸಂಪಾದಿಸಿದ್ದ ಒಂದೇ ಒಂದು ಕೃತಕ ಅಡ್ರೆನಾಲಿನ್‌ನನ್ನು ಆಕೆ ನವಖಲಿಯಲ್ಲಿ ಕಜರ್‌ಖೆಲ್ ಕ್ಯಾಂಪಿನಲ್ಲಿ ಬಿಟ್ಟು ಬಂದಿದ್ದಳು. ಗಾಂಧಿಯವರಿಗೆ ಅದು ಬೇಕಿರಲಿಲ್ಲ.

ಗಾಂಧಿಯವರ ಜತೆಗಾರರ ಪೈಕಿ ಮೊದಲು ಬಂದವರು ಸರ್ದಾರ್ ಪಟೇಲರು. ಪಟೇಲರು ಗಾಂಧಿಯವರ ಸಮೀಪದಲ್ಲಿ ಕುಳಿತು ನಾಡಿ ಹಿಡಿದು ನೋಡಿ, ಇನ್ನೂ ಸ್ವಲ್ಪ ಮಿಡಿಯುತ್ತಿದೆಯೇನೋ ಎಂದು ಭಾವಿಸಿದರು. ಕೆಲವು ಕ್ಷಣಗಳ ನಂತರ ಡಾಕ್ಟರ್ ಜೀವರಾಜ ಮೆಹ್ತ ಬಂದರು. ನಾಡಿಯನ್ನೂ ಕಣ್ಣು ಗುಡ್ಡೆಗಳನ್ನೂ ನೋಡಿ ನಿರಾಶೆಯಿಂದ ತಲೆಯಲ್ಲಾಡಿಸಿದರು. ಹುಡುಗಿಯರು ಗೊಳೋ ಎಂದು ಅಳುವುದಕ್ಕೆ ಪ್ರಾರಂಭಿಸಿದರು. ಚೇತರಿಸಿಕೊಂಡು ರಾಮನಾಮ ಧ್ಯಾನದಲ್ಲಿ ತೊಡಗಿದರು. ಗಾಂಧಿಯವರ ದೇಹದ ಮಗ್ಗುಲಲ್ಲಿ ಬಾಡಿದ ಮುಖವುಳ್ಳವರಾಗಿ ದೃಢ ನೋಟದಿಂದ ಸರದಾರರು ಕುಳಿತಿದ್ದರು. ಮುಂದೆ ಜವಹಿರ್‌ಲಾಲ್ ನೆಹ್ರು ಬಂದರು. ಗಾಂಧಿಯವರ ವಸ್ತ್ರಗಳಿಂದ ಮುಖವನ್ನು ಮುಚ್ಚಿಕೊಂಡು ಮಗುವಿನಂತೆ ಅತ್ತರು. ಶ್ರೀ ದೇವದಾಸ್ ಮತ್ತು ರಾಜೇಂದ್ರಬಾಬು ಅನಂತರ ಬಂದರು. ಜಯರಾಮ ದಾಸ್, ರಾಜಕುಮಾರಿ ಅಮೃತ್ ಕುವರಿ ಆಚಾರ್ಯ ಕೃಪಾಲ್ನಿ ಹೀಗೆ ಹಳೆಯ ಯೋಧರೆಲ್ಲ ಬಂದರು. ಸ್ವಲ್ಪ ಹೊತ್ತಾಗಿ

ಲಾರ್ಡ್ ಮೌಂಟ್‌ಬೇಟನ್‌ರು ಬರುವ ವೇಳೆಗೆ ಹೊರಗೆ ಗುಂಪು ಅಸಾಧ್ಯವಾಗಿತ್ತು. ಅವರೇ ಕಷ್ಟದಿಂದ ಒಳ ಹೊಕ್ಕರು. ನುರಿತಯೋಧರಾದ ಅವರು ಒಂದು ಗಳಿಗೆಯನ್ನೂ ವ್ಯರ್ಥಮಾಡದೆ ಪಂಡಿತ್ ನೆಹ್ರು ಮತ್ತು ಮೌಲಾನಾ ಸಾಹೇಬ್ ಅಜಾದ್‌ರನ್ನು ಬೇರೆ ಕರೆದು ಈ ದುಃಖದ ಅನಾಹುತದಿಂದ ಉಂಟಾಗುವ ಪ್ರತಿಕ್ರಿಯೆಗಳನ್ನು ರಾಜತಂತ್ರ ದೃಷ್ಟಿಯಿಂದ ಚರ್ಚಿಸಿದರು. ದೇಹಕ್ಕೆ ಎಣ್ಣೆ ಹಚ್ಚಿ ಕೆಲವು ದಿನಗಳಾದರೂ ಇಡಬೇಕೆಂಬ ಒಂದು ಸೂಚನೆ ಬಂತು. ಆದರೆ ಈ ವಿಚಾರದಲ್ಲಿ ಗಾಂಧಿಯವರ ಅಭಿಪ್ರಾಯ ಸ್ಪಷ್ಟವಾಗಿದ್ದುದರಿಂದ ಅದನ್ನು ಹೇಳುವುದು ನನ್ನ ಆವಶ್ಯಕವಾದ ಪವಿತ್ರ ಕರ್ತವ್ಯವಾಯಿತು."ಮರಣದನಂತರ ದೇಹ ಒಂದು ವಸ್ತುವೆಂದೇ ಭಾವಿಸಬೇಡಿ". ಎಂದು ಗಾಂಧಿ ಹೇಳಿದುದನ್ನು ನಾನು ಅವರಿಗೆ ಹೇಳಿದೆ. ಗಾಂಧಿಯುವರು ನನಗೆ ಅನೇಕ ಸಲ ಹೇಳಿದ್ದರು "ನನ್ನ ದೇಹವನ್ನು ನೀವು ಅದ್ಭುತವೆಂದು ಭಾವಿಸತೊಡಗಿದರೆ ನಾನು ಸತ್ತಿದ್ದರೂ ನಿಮ್ಮನ್ನು ತಿದ್ದುತ್ತೇನೆ. ನಾನು ಎಲ್ಲಿ ಸತ್ತರೂ ಸರಿ ಸಂಸ್ಕಾರ ಯಾವ ಆಡಂಬರವೂ ಇಲ್ಲದೆ ನಡೆಯಬೇಕು" ಎಂದಿದ್ದರು. ಡಾಕ್ಟರ್ ರಾಜೇಂದ್ರ ಪ್ರಸಾದ್, ಜೈ ರಾಮ್‌ದಾಸ್ ಜಿವರಾಜ್ ಮೆಹತಾ ಇವರೂ ನನ್ನ ಮಾತನ್ನು ಒಪ್ಪಿದರು. ಆದುದರಿಂದ ದೇಹವನ್ನು ತೈಲಲೇಪನದಿಂದ ಉಳಿಸುವ ಪ್ರಶ್ನೆ ಇಲ್ಲವಾಯಿತು. ರಾತ್ರಿಯೆಲ್ಲಾ ಗೀತಾ ಸುಖಮಣಿ ಸಾಹೇಬ್ ಗ್ರಂಥಗಳಿಂದ ಮೃದುವಾದ ಗಾನ ನಡೆಯಿತು. ಮನೆಯ ಸುತ್ತಾ ಗುಂಪು ದರ್ಶನಕ್ಕಾಗಿ ಬಿಡುವಿಲ್ಲದೆ ನುಗ್ಗುತ್ತಿತ್ತು. ಕೊನೆಯಲ್ಲಿ ಗಾಂಧಿಯವರ ದೇಹವನ್ನು ಬಿರ್ಲಾಭವನದ ಮಹಡಿಯ ಮಾಳಿಗೆಯಲ್ಲಿ ಸಾರ್ವಜನಿಕ ದರುಶನಕ್ಕಾಗಿ ಇಡಬೇಕಾಯಿತು.

ಬೆಳಗಿನ ಜಾವ ನಮ್ಮ ಪದ್ಧತಿಗನುಸಾರವಾಗಿ ದೇಹವನ್ನು ಶುದ್ಧ ಮಾಡಿ ಕೊಠಡಿಯ ಮಧ್ಯದಲ್ಲಿ ಹೂವಿನ ಹಾಸಿಗೆಯಲ್ಲಿ ಮಲಗಿಸಿದರು. ಪರದೇಶದ ರಾಯಬಾರಿಗಳೆಲ್ಲಾ ಬೆಳಿಗ್ಗೆ ಬಂದು ಹೂವಿನ ಹಾರ ತುರಾಯಿಗಳನ್ನು ಆತನ ಪಾದಗಳಲ್ಲಿಟ್ಟು ಮೌನವಾಗಿ ಕಾಣಿಕೆ ಸಲ್ಲಿಸಿದರು.

ಮರಣಕ್ಕೆ ಎರಡು ದಿನ ಮುಂಚೆ ಗಾಂಧಿಯವರು ನನ್ನೊಂದಿಗೆ "ಗುಂಡುಗಳ ಹೊಡೆತವನ್ನು ನಗುತ್ತಾ ಎದುರಿಸಿ ಸಾಯುವುದಕ್ಕಿಂತ ನನಗೆ ಹೆಚ್ಚು ಪ್ರಿಯವಾದದು ಯಾವುದೂ ಇಲ್ಲ"ಎಂದಿದ್ದರು. ದೇವರು ಅವರ ಇಚ್ಛೆಯನ್ನು ನಡೆಸಿದಂತೆ ತೋರಿತು

ಹನ್ನೊಂದು ಗಂಟೆಗೆ ನಾವೆಲ್ಲ ಕೊನೆಯ ಪ್ರಣಾಮವನ್ನು ಮಾಡಿದನಂತರ ದೇಹವನ್ನು ಶವವಾಹಕದ ಮೇಲೆ ಇಟ್ಟರು. ಆ ವೇಳೆಗೆ ನಾಗಪುರದಿಂದ ರಾಮದಾಸ್ ಗಾಂಧಿ ಬಂದರು. ಕೊನೆಯಲ್ಲಿ ಬಂದವಳು ಡಾಕ್ಟರ್ ಸುಶೀಲಾ. ಆಕೆಗೆ "ಬಾಪುವಿನ ಕೊನೆಯುಗಳಿಗೆಯಲ್ಲಿ ನಾನು ಇರಲಿಲ್ಲವಲ್ಲ ಎಂಬ ದುಃಖವೂ ಕೊನೆಯ ದರ್ಶನವಾದರೂ ಲಭಿಸಿತಲ್ಲ" ಎಂಬ ಕೃತಜ್ಞತೆಯೂ ಉಂಟಾಗಿದ್ದಿತು.

ಆ ರಾತ್ರಿ ಆಕೆ ಮತ್ತೆ "ಯಾಕೆ ನನಗೆ ಈ ಶಿಕ್ಷೆ?" ಎಂದು ಕೊರಗಿದಳು. ದೇವದಾಸ ಗಾಂಧಿ ಅವಳನ್ನು ಸಮಾಧಾನ ಮಾಡಿದರು. "ಅವರ ಕೊನೆಯ ಅಪ್ಪಣೆಯನ್ನು ನಡೆಸುವುದರಲ್ಲಿ ನೀವು ನಿರತರಾಗಿದ್ದುದು ನಿಮ್ಮ ಹೆಮ್ಮೆಯೇ ಸರಿ. ಅವರಿಂದ ಅತ್ಯಂತ ಕೊನೆಯ ಅಪ್ಪಣೆಯನ್ನು ಪಡೆದವರು ನೀವೇಯೆ" ಎಂದರು. ಅದು ಬಾಪುವಿನ ಸ್ವಭಾವವಾಗಿತ್ತು. ಯಾರಿಗಾಗಿ ಅವರು ಅಷ್ಟೊಂದು ತ್ಯಾಗ ಮಾಡಿದ್ದರೋ ಅವರಿಂದ ಅವರು ಇನ್ನು ಹೆಚ್ಚು ಹೆಚ್ಚು ತ್ಯಾಗವನ್ನು ಅಪೇಕ್ಷೆಸುತ್ತಿದ್ದರು.

ಪೂರ್ಣ ಶಾಂತಿ ದಯೆಯಿಂದ ಕೂಡಿದ ಆ ಮೌನವಾದ ದುಃಖ ಮುಖಮುದ್ರೆಯನ್ನು ನೋಡುತ್ತಾ ಕುಳಿತ್ತಿದ್ದಂತೆ, ನಾನು ಕಾಲೇಜಿನಿಂದ ಹೊಸದಾಗಿ ಬಂದು ಅನೇಕ ಆಸೆ ನಚ್ಚುಗಳೊಡನೆ ಅವರ ಪಾದಗಳ ಬಳಿ ಕುಳಿತ ನನ್ನ ಅವರ ಇಪ್ಪತ್ತೆಂಟು ವರುಷಗಳ ವಿಚ್ಛಿತಿಯಿಲ್ಲದ ಅತ್ಯಂತ ನಿಕಟವಾದ ಸಂಬಂಧದ ದೃಶ್ಯ ನನ್ನ ಕಣ್ಣಮುಂದೆ ಬಂದಿತು ಎಷ್ಟು ಅದ್ಭುತ ಸಂಗತಿಗಳಿಂದ ತುಂಬಿದ ವರುಷಗಳವು!

ನಡೆದುದ್ದರ ಅರ್ಥವನ್ನು ಕುರಿತು ನಾನು ಆಳವಾಗಿ ಯೋಚಿಸಿದೆ. ಮೊದಲು ಸಂಭ್ರಾಂತನಾದೆ. ಅನಂತರ ನಿಧಾನವಾಗಿ ಒಗಟಿ ಸ್ಪಷ್ಟವಾಗತೊಡಗಿತು. ಆ ದಿನ, ಪ್ರತಿಯೊಬ್ಬ ಮನುಷ್ಯನೂ ತನ್ನ

ಭಾಗದ ಕರ್ತವ್ಯವನ್ನು ಪೂರ್ಣವಾಗಿಯೂ ಅಚ್ಚುಕಟ್ಟಾಗಿಯೂ ನಿರ್ವಹಿಸಬೇಕೆಂದು ಗಾಂಧಿ ಹೇಳಿದ್ದರು. ಅವರ ನಿಖರವಾದ ಅಭಿಪ್ರಾಯ ಏನೆಂದು ನಾನು ಆಶ್ಚರ್ಯ ಪಟ್ಟಿದ್ದೆ. ಅವರ ಮರಣದಲ್ಲಿ ಅದಕ್ಕೆ ಉತ್ತರ ಸಿಕ್ಕಿತು. ಹಿಂದೆ ಅವರು ಉಪವಾಸ ಹೂಡುತ್ತಿದ್ದಾಗ ಉಳಿದವರು ಸುಮ್ಮನೆ ಪ್ರೇಕ್ಷಕರಾಗಿ ಪ್ರಾರ್ಥಿಸಬೇಕೆಂದು ಹೇಳಿದ್ದರು. "ತಂದೆ ಸಮೀಪದಲ್ಲಿರುವಾಗ ಮಕ್ಕಳು ಆಟವಾಡುತ್ತಾ ಓಡಾಡುತ್ತಿರಬೇಕು. ನನ್ನ ನಂತರ ನಾನು ಮಾಡುತ್ತಿರುವುದನ್ನೆಲ್ಲಾ ಅವರು ಮಾಡುತ್ತಾರೆ" ಎನ್ನುತ್ತಿದ್ದರು. ಗಾಂಧಿಯವರು ನಮಗಾಗಿ ಸಂಪಾದಿಸಿದ ಸ್ವಾತಂತ್ರ್ಯವನ್ನು ನಾವು ಅನುಭವಿಸಬೇಕಾದರೆ ಎಂತಹ ಬೆಂಕಿಯಲ್ಲಿ ನಮ್ಮ ಪ್ರಾಣತ್ಯಾಗಮಾಡಿ ಆ ಬೆಂಕಿಯನ್ನು ಆರಿಸಬೇಕೆಂಬುದು ಅವರ ಮರಣದಿಂದ ಸ್ಪಷ್ಟವಾಗುತ್ತಿದೆ. [ಪ್ಯಾರೆಲಾಲ್]

## ಅವರು ಬದುಕಿದ್ದಾರೆ

ಮುಲ್ತಾನ್ ಡೆಪುಟಿ ಕಮಿಷನರ ಹೆಂಡತಿ, ೩೦ನೆ ತಾರೀಖು ಸೇಧ್ಯಾಕಾಟ ೪ ಗಂಟೆಗೆ "ಗಾಂಧಿಯವರು ಇಲ್ಲಿಗೆ ಯಾವಾಗ ಬರುತ್ತಾರೆ?" ಎಂದು ಕೇಳಿದ್ದಳು ಇನ್ನೂ ಅನೇಕರೂ ಗಾಂಧಿಯವರ ಆರೋಗ್ಯವನ್ನು ಕುರಿತು ಪ್ರೀತಿಯಿಂದ ವಿಚಾರಿಸಿದ್ದರು. ಕಲ್ಕತ್ತದಲ್ಲಿಯೂ ದಿಲ್ಲಿಯಲ್ಲಿಯೂ ಗಾಂಧಿಯವರು ತಮ್ಮ ಉಪವಾಸಗಳಿಂದ ಸಾಧಿಸಿದ ಅದ್ಭುತಗಳಿಂದ ಪಾಕಿಸ್ಥಾನ ಹಿಂದುಸ್ಥಾನ ಎರಡರಲ್ಲಿಯೂ ಗಾಂಧಿಯವರು ಮುಸಲ್ಮಾನರ ಮಿತ್ರರಾದರು. ಗಾಂಧಿಯವರಿಗೆ ಇದನ್ನು ಹೇಳಿದಾಗ ಅವರಿಗೆ ಎಷ್ಟು ಆನಂದವಾಗಬಹುದೆಂದು ನಾನು ನನ್ನ ಮನಸ್ಸಿನಲ್ಲಿಯೇ ಯೋಚಿಸಿಕೊಂಡು ಹೆಮ್ಮೆ ಪಡುತ್ತಿದ್ದೆ. ಸಾಯಂಕಾಲ ಸುಮಾರು ೬-೪೫ ಕ್ಕೆ ಕಮಿಶನರ ಹೆಂಡತಿ ಗಾಬರಿಯಿಂದ ಒಳಕ್ಕೆ ಬಂದು "ಇದೇನು? ಗಾಂಧಿಯವರನ್ನು ಬಂದೂಕದಿಂದ ಹೊಡೆದಿದ್ದಾರೆಂದು ಕೇಳಿದೆ" ಎಂದಳು ನನ್ನ ಮೈ ನಡುಗಿತು. ಯಾರೊ ಒಬ್ಬರು "ಅದು ಬರಿಯ ಸುದ್ದಿ, ಸುಳ್ಳು ಡಿಲ್ಲಿಗೆ ಟೆಲಿಫೋನ್ ಮಾಡಿಕೊಳ್ಳೋಣ" ಎಂದರು. ಅದನ್ನು ಕಾಯಲು ನನಗೆ ಇಷ್ಟವಿರಲಿಲ್ಲ ನಿಜವೋ ಸುಳ್ಳೊ ನಾನು ಲಾಹೋರಿಗೆ ಹೋಗಿ

ಅಲ್ಲಿಂದ ತತ್‌ಕ್ಷಣ ದಿಲ್ಲಿಗೆ ಹೋಗ ಬಯಸಿದೆ. ಡೆಪುಟಿ ಕಮಿಶನರು ತಮ್ಮ ಮೋಟಾರನ್ನು ನಮಗೆ ಕೊಟ್ಟರು ನಾವು ರಾತ್ರಿಯೇ ಲಾಹೋರಿಗೆ ಬಂದೆವು ಬೆಳದಿಂಗಳು ಮನೋಹರವಾಗಿತ್ತು. ಎಲ್ಲೆಲ್ಲಿಯೂ ಶಾಂತಿ ನೆಲೆಸಿತ್ತು. ಕಾರು ವೇಗವಾಗಿ ಹೋಗುತ್ತಿರುವಾಗ ನಾನು "ಇಲ್ಲ. ಅದು ಸುಳ್ಳಿರಬೇಕು"ಎಂದು ಪದೇ ಪದೇ ಹೇಳಿಕೊಂಡೆ. ಬಾಪು ಸತ್ತಿಲ್ಲ. ಬಾಪು ಬದುಕಿದ್ದಾರೆ ಎಂದುಕೊಂಡೆ. ಹೃದಯವು "ಬಾಪು ಬದುಕಿದ್ದಾರೆ" ಎಂದು ಮಾರುತ್ತರ ಕೊಟ್ಟಿತು. ನನಗೆ ಸಮಾಧಾನವಾಯಿತು.

ಬೆಳಗಿನ ಆರು ಗಂಟೆಗೆ ಲಾಹೋರಿಗೆ ಬಂದೆವು. ನಾನು ಕಟ್ಟಿಕೊಂಡಿದ್ದ ಕನಸು ಚೂರುಚೂರಾಯಿತು. ಒಬ್ಬ ಮಿತ್ರರು ಸಹಾನುಭೂತಿ ತೋರಿಸಲು ಬಂದರು. ಆ ಸಹಾನುಭೂತಿಯಿಂದ ನಮ್ಮ ದುಃಖ ಇಮ್ಮಡಿಸಿದುದು ಅವರಿಗೆ ಹೇಗೆ ಗೊತ್ತಾಗಬೇಕು! ಒಂದು ಗಳಿಗೆಯನಂತರ ಪಂಡಿತಜಿಯವರ ಚಿರಪರಿಚಿತವಾದ ಧ್ವನಿ ಅತ್ಯಂತ ದುಃಖ ಪೂರಿತವಾಗಿ ಆಕಾಶವಾಣಿಯಲ್ಲಿ ಕೇಳಿಸಿತು. ಗಾಂಧಿಯವರ ನಿಧನದ ಬಗ್ಗೆ ಯಾವ ಸಂಶಯವೂ ಉಳಿಯಲಿಲ್ಲ. ನಾವು ಅನಾಥರಾದೆವು.

ವಿಮಾನ ನಿಲ್ದಾಣದಲ್ಲಿ ನಾನು ಅಶಾಂತಿಯಿಂದ ತಿರುಗಾಡುತ್ತಲಿದ್ದೆ. ಡಿಲ್ಲಿಗೆ ಹೋಗುವ ವಿಮಾನ ೯ ಗಂಟೆಗೆ ಬರಬೇಕಾಗಿದ್ದುದು ೯|| ಗಂಟೆಗೆ ಬಂದಿತು. ಎಲ್ಲರ ಮುಖದಲ್ಲಿಯೂ ದುಃಖ ತುಂಬಿತು. ಅವರು ಪೆಶಾವರಿನಿಂದ ಒಂದು ವಿಮಾನವನ್ನು ಬೇಕಾದರೆ ತರಿಸುವುದಾಗಿ ಹೇಳಿದರು. ಆದರೆ ಅದರಲ್ಲಿಯೂ ಅಷ್ಟೇ ಕಾಲವಾಗುತ್ತಿದ್ದಿತು. ಸಾಧ್ಯವಾದಷ್ಟು ಬೇಗ ಅವರು ಹೊರಟರು. ವಿಮಾನ ಸಾರಥಿ, ಒಂದು ಗಂಟೆ ಇಪ್ಪತ್ತು ನಿಮಿಷಗಳೊಳಗೆ ಲಾಹೋರಿನಿಂದ ಡಿಲ್ಲಿಗೆ ಬಂದನು. ವಿಮಾನ ನಿಲ್ದಾಣದಿಂದ ನಾನು ಬಿರ್ಲಾಗೃಹಕ್ಕೆ ಓಡಿದೆ. ನಾನು ಇನ್ನೂ ಸಂಭ್ರಾಂತಳಾಗಿಯೇ ಕುಳಿತಿದ್ದೆ. ಕೆಲವರು ಜವಾಬ್ದಾರಿಯಿಲ್ಲದೆ ಮಾತನಾಡುತ್ತಾರೆ. ಕೆಲವರು ಕೆಲಸಮಾಡುತ್ತಾರೆ. ಹಿಂದು ಧರ್ಮಕ್ಕೆ ಶಾಶ್ವತ ಕಳಂಕವನ್ನು ತಂದ ಆ ಹುಚ್ಚ

ಮಾಡಿದುದು ನಮ್ಮೆಲ್ಲರ ಆಲೋಚನೆಯ ಫಲವೇ. ನಾವೆಲ್ಲ ಒಂದು ಸಲವಲ್ಲ ಒಂದು ಸಲ ಈ ತಪ್ಪುಮಾಡಿದ್ದೇವೆ, ಎಂದುಕೊಂಡೆ. ನಮ್ಮ ಮಹಿಳೆಯರನ್ನು ಕುರಿತು ಯೋಚಿಸಿದೆ. ಈ ವಿಷದಿಂದ ಅವರೂ ಬಿಡುಗಡೆ ಹೊಂದಿರಲಿಲ್ಲ. ಈ ಸರ್ವವ್ಯಾಪಿ ವಿಷಯದಿಂದ ನಮ್ಮನ್ನು ಹೇಗೆ ತಾನೆ ಗಾಂಧಿಜಿ ಹೊರಕ್ಕೆ ಎಳೆಯುಬಲ್ಲರು ? ಅವರು ಉಪವಾಸ ಮಾಡಿದ್ದರು. ಈಗ ಕೊನೆಯ ಪರೀಕ್ಷಾಸಮಯ ಬಂತು. ಅವರೇ ಹುತಾತ್ಮರಾದರು, ಅದೂ ತಮ್ಮ ಒಬ್ಬ ಮಗನಿಂದಲೆ !

ನಾವು ಬಿರ್ಲಾಭವನಕ್ಕೆ ಬಂದೆವು. ಕಾರು ಹಿಂದಲ ಬಾಗಿಲಿನಿಂದ ಒಳಕ್ಕೆ ಹೋಯಿತು. ಆ ಕಡೆಯ ಜನಗುಂಪು ಬಹಳವಾಗಿತ್ತು. ನಾನು ಹುಚ್ಚಳಂತೆ ನುಗ್ಗಿ ಹೊರಡುವುದಕ್ಕೆ ಸಿದ್ಧವಾಗಿದ್ದ ಪಾಲ್ಕಿಯ ಸಮೀಪಕ್ಕೆ ಹೋದೆ. ಯಾರೋ ಗಾಡಿ ಹತ್ತಲು ನನಗೆ ಸಹಾಯ ಮಾಡಿದರು. ಮೃತರಾದ ಗುರುವಿನ ಪಾದದ ಬಳಿ ಗಂಭೀರವಾದ ದುಃಖ ಮುದ್ರೆಯಿಂದ ಸರದಾರರು ಕುಳಿತಿದ್ದರು. ಅವರು ನನ್ನನ್ನು ಮೇಲಕ್ಕೆ ಎಳೆದುಕೊಂಡರು. ಅಲ್ಲಿ ನಮ್ಮ ಪ್ರಿಯ ಬಾಪು ಮಲಗಿದ್ದರು. ಮುಖ ಕಾಣುತ್ತಿತ್ತು. ಜೀವಿಸಿದ್ದಾಗ ಹೇಗೋ ಹಾಗೆ ಮರಣದಲ್ಲಿಯೂ ಶಾಂತಿಯನ್ನು ಬೀರುತ್ತಿದ್ದರು. ಮರಣದ ಛಾಯೆ ನನಗೆ ತೋರಲಿಲ್ಲ. ಹಿಂದಲಂತೆ ಸ್ವಾಗತದ ನಗೆಯೇ ನನಗೆ ತೋರಿದಂತೆ ಭಾಸವಾಯಿತು ಅತಿ ದುಖದಿಂದ ನಾನು ನನ್ನ ಮುಖವನ್ನು ಅವರ ಎದೆಗೆ ಚಾಚಿದೆ. ಹಿಂದಲಂತೆ ಕೆನ್ನೆಯನ್ನೂ ಬೆನ್ನನ್ನೂ ಅವರು ತಟ್ಟಿ ಆದರಿಸುವರೆಂದು ನಿರೀಕ್ಷಿಸಿದೆ. ಅಭಾ ಮತ್ತು ಮನು ನನ್ನ ಮಗ್ಗುಲಲ್ಲಿದ್ದರು. “ ಇನ್ನು ನೀವು ಕೆಳಕ್ಕೆ ಇಳಿಯಿರಿ ” ಎಂದರು ಯಾರೋ. ಪಂಡಿತ್ ನೆಹ್ರು ನಮ್ಮನ್ನು ಕೆಳಕ್ಕೆ ಇಳಿಸಿದರು. ಅವರು ದುಃಖಿತರಾಗಿ ಗಾಂಧಿಯವರ ತಲೆಯಬಳಿ ನಿಂತಿದ್ದರು. ಮೆರವಣಿಗೆ ಹೊರಟಿತು.

ರುದ್ರಭೂಮಿಯನ್ನು ತಲಪಿ ಒಂದು ಚಿಕ್ಕ ಪ್ರಾರ್ಥನೆ ಮಾಡಿ ದೇಹದ ಮೇಲೆ ಒಣಗಿದ ಗಂಧದ ಚೂರುಗಳನ್ನಿಟ್ಟೆವು. ನಾವೆಲ್ಲ ನಮ್ಮ ಕೊನೆಯ ಪ್ರಣಾಮವನ್ನು ಮಾಡಿದೆವು. ನನ್ನ ಹೃದಯ ಹೀಗೆ

ಕೂಗಿತು “ ಬಾಪು ಕ್ಷಮಿಸಿ, ನಮ್ಮ ದೌರ್ಬಲ್ಯಗಳನ್ನು ಕ್ಷಮಿಸಿ, ನಮ್ಮ ತಪ್ಪುಗಳನ್ನೂ ನಿಶ್ಯಕ್ತಿಯನ್ನೂ ಕ್ಷಮಿಸಿ ” ಚಿಂತೆಯಿಂದ ನಾನು ದೂರ ವಾಗ ಕುಳಿತೆ. ಮುಂದೆ ನೋಡುವುದು ನನ್ನಿಂದ ಸಾಧ್ಯವಾಗಲಿಲ್ಲ. ಗೀತೆಯ ಈ ಶ್ಲೋಕಗಳನ್ನು ಪದೇ ಪದೇ ಹೇಳಿಕೊಳ್ಳುತ್ತಿದ್ದೆ.

“ ಸಖೇತಿ ಮತ್ವಾ ಪ್ರಸಭಂ ಯದುಕ್ತಂ ಹೇ ಕೃಷ್ಣ ಹೇ ಮಾಧವ ಹೇ ಸಖೇತಿ·
ಅಜಾನತಾ ಮಹಿಮಾನಂ ತವೇದಂ ಮಯಾ ಪ್ರಮಾದಾತ್ಪ್ರಣಯೇನವಾಪಿ ।
ಯಚ್ಚಾ ವಹಾಸಾರ್ಥ ಮಸತ್ಕೃತೋಽಸಿ ವಿಹಾರ ಶಯ್ಯಾಸನ ಭೋಜನೇಷು
ಏಕೋಽ ಥವಾ ಪ್ಯಚ್ಯುತ ತತ್ಸಮಕ್ಷಂ ತತ್ಕ್ಷಾಮಯೆತ್ವಾಮಹಮಪ್ರಮೇಯಂ ॥

ಪಿತಾಸಿಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್
ನತ್ವತ್ಸಮೋ ಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಪ್ಯ ಪ್ರತಿಮಪ್ರಭಾವ.
ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇತ್ವಾಮಹಮೀಶಮೀಡ್ಯಮ್ ।
ಪಿತೇವ ಪುತ್ರಸ್ಯ ಸಖೇವಸಖ್ಯುಃ ಪ್ರಿಯಪ್ರಿಯಾಯಾರ್ಹಸಿ ದೇವ ಸೋಢುಂ

ಹೇ ಕೃಷ್ಣ ನಿನ್ನ ಮಹಿಮೆಯನ್ನು ತಿಳಿಯದೆ ಅಜ್ಞಾನದಿಂದ ಹೇ ಕೃಷ್ಣ ಹೇ ಮಾದವ ಹೇ ಸಖ ಎಂದು ಸಂಬೋಧಿಸಿದ್ದರೆ

ನಿನ್ನೊಂನಿಗೆ ಆಡುವಾಗ ಮಲಗುವಾಗ ಕೂರುವಾಗ ಊಟ ಮಾಡುವಾಗ ಅಥವ ಒಂಟಿಯಾಗಿದ್ದಾಗ ಮತ್ತು ಸ್ನೇಹಿತರ ಗುಂಪಿನಲ್ಲಿರುವಾಗ ನಿನ್ನನ್ನು ನಾನು ಸರಿಯಾಗಿ ತಿಳಿದು ಗೌರವಿಸದಿದ್ದಿದ್ದರೆ ನನ್ನನ್ನು ಕ್ಷಮಿಸು.

ನೀನು ಚರಾಚರದ ತಂದೆ, ಪೂಜೆಗೆ ಏಕ್ರಮಾತ್ರ ಅರ್ಹನು, ಮಹನೀಯನಾದ ಗುರುವು, ನಿನ್ನ ಸಮಾನರು ಯಾರೂ ಇಲ್ಲ. ನಿನಗಿಂತ ಅಧಿಕರು ಇನ್ನು ಮೂರು ಲೋಕದಲ್ಲಿಯೂ ಎಲ್ಲಿಯೂ ಇಲ್ಲ, ನೀನು ಅಪ್ರತಿಮ ಪ್ರಭಾವನು.

ಆದುದರಿಂದ ಶರೀರವನ್ನು ದಂಡದಂತೆ ಭೂಮಿಯಲ್ಲಿ ಕೆಡಹಿ ನಮಸ್ಕರಿಸಿ ನಿನ್ನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುತ್ತೇನೆ. ಮಗನೊಂದಿಗೆ ತಂದೆಯಂತೆಯೂ ಸ್ನೇಹಿತನೊಂದಿಗೆ ಸ್ನೇಹಿತನಂತೆಯೂ ಪ್ರಿಯಳ ವಿಷಯದಲ್ಲಿ ಪ್ರಿಯನಂತೆಯೂ ನೀನು ನನ್ನನ್ನ ಸಹಿಸಿಕೊ.”

ಗುಂಪು ನಮ್ಮನ್ನೂ ಅತಿಕ್ರಮಿಸಿ ನುಗ್ಗಿತು, ಸರದಾರರು ಮನು

ವನ್ನೂ ಅಭಾವನ್ನೂ ಹೇಗೋ ಗುಂಪಿನಿಂದ ಎಳೆದರು. ನಾವು ಒಂದು ಸೈನ್ಯದ ವಾಹನವನ್ನು ಹತ್ತಿ ದೂರದಿಂದ ಉರಿಯನ್ನು ನೋಡಿದೆವು.

ರಾತ್ರಿ ಗಾಂಧಿಯವರ ಚಿತ್ರಪಟದ ಮುಂದೆ ಕುಳಿತು ನಾನು ಆಲೋಚನಾಪರಳಾದೆ. ಪಂಡಿತ್ ನೆಹ್ರುರವರು "ಬೆಳಕು ನಂದಿ ಹೋಯಿತು. ಸುತ್ತಾ ಕತ್ತಲು ಕವಿದಿದೆ" ಎಂದು ರೇಡಿಯೋದಲ್ಲಿ ಹೇಳಿ ತತ್‌ಕ್ಷಣ "ಇಲ್ಲ ಬೆಳಕು ಹೊಳೆಯುತ್ತಿದೆ. ಇನ್ನೂ ಸಾವಿರಾರು ವರುಷ ಹೊಳೆಯುವುದು" ಎಂದು ತಿದ್ದಿಕೊಂಡಿದ್ದರು. ಜೀವಿಸಿದ್ದಾರೆ ಬುದ್ಧನಂತೆ ಕ್ರಿಸ್ತನಂತೆ ಎಂದೆಂದಿಗೂ ಜೀವಿಸಿರುತ್ತಾರೆ ಬುದ್ಧ ಕ್ರಿಸ್ತರು ಪ್ರೇಮದ ಧರ್ಮವನ್ನು ಭೋದಿಸಿದರು ಆದರೆ ಬಾಪು "ಪ್ರೇಮದ ಧರ್ಮ ಬರಿಯ ಸನ್ಯಾಸಿಗಳಿಗೆ ಮಾತ್ರವಲ್ಲ. ಇದು ಸಮಾಜದ ನಿತ್ಯ ಧರ್ಮ" ಎಂಬುದನ್ನು ಆಚರಿಸಿ ತೋರಿಸಿದರು.

ಆಗಾಖಾನರ ಅರಮನೆಯಲ್ಲಿದ್ದಾಗ ಒಬ್ಬರು "ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ನಿಮ್ಮ ಅನುಯಾಯಿಗಳಿಗೆ ನಿಮ್ಮ ತೇಜಸ್ಸಿಲ್ಲ. ನಿಮ್ಮ ಸಂದೇಶವನ್ನು ಸಜೀವವಾಗಿ ಜನರಿಗೆ ಮುಟ್ಟಿಸುವ ಶಕ್ತಿ ಅವರಿಗೆ ಇಲ್ಲ" ಎಂದಿದ್ದರು. ಗಾಂಧಿಯವರು "ಹೌದು ಇಂದು ನಿರ್ಮಾಣ ಕೆಲಸಗಾರರು ನಿಶ್ಯಕ್ತರಾಗಿ ತೋರುತ್ತಾರೆ ಆದರೆ ತಪ್ಪು ನನ್ನದು. ಅವರು ಎಲ್ಲದರಲ್ಲಿಯೂ ಮೇಲುಪಂಕ್ತಿಗಾಗಿ ನನ್ನ ಕಡೆಯೇ ನೋಡುತ್ತಾರೆ ನನ್ನ ಜೀವಿತ ಕಾಲದಲ್ಲಿ ಹೀಗೆಯೇ ಎಂದು ಕಾಣುತ್ತದೆ. ನನ್ನ ನಂತರ ಅವರು ಪುಷ್ಟರಾಗಿ ಅರಳುತ್ತಾರೆ. ಈಗ ಅವರು ಮೌನವಾಗಿ ಸಂಗ್ರಹಿಸಿಕೊಳ್ಳುತ್ತಿರುವುದೆಲ್ಲಾ ಆಗ ಫಲಕ್ಕೆ ಬರುತ್ತದೆ." ಎಂದಿದ್ದರು. ಗಾಂಧಿಯವರು ಮುಂದೆ "ಕ್ರಿಸ್ತನ ಕಾಲದಲ್ಲಿ ಯಾವ ಶಿಷ್ಯನೂ ತನ್ನ ಅದ್ಭುತ ಶಕ್ತಿಯ ಗುರುತನ್ನು ಸಹ ತೋರಿಸಲಿಲ್ಲ. ಕ್ರಿಸ್ತನ ನಂತರವೇ, ಆತನ ತತ್ವಗಳನ್ನು ಬೋಧಿಸಲು ದೇವರು ಅವರಿಗೆ ಶಕ್ತಿಕೊಟ್ಟನು" ಎಂದಿದ್ದರು. ಅವರು ಕುಳಿತು ಕೆಲಸಮಾಡುವಲ್ಲಿದ್ದ ಪಠದ ಮುಂದೆ ಈ ಯೋಚನೆಗಳೆಲ್ಲಾ ನನ್ನ ಮನಸ್ಸಿನಲ್ಲಿ ಬಿರುಗಾಳಿಯಂತೆ ಸುಳಿದವು. "ನಮ್ಮ ಪೂರ್ವ ಪುಣ್ಯದಿಂದ ನಾವೆಲ್ಲಾ ಒಂದಾಗಿ ಸೇರಿ ಆ ಮಹಾಗುರುವಿನ ಪಾದದ ಬಳಿ ಕುಳಿತೆವು. ಅವರ

ಬೋಧನೆಗೆ ಅನುಸಾರವಾಗಿ ನಡೆಯುವ ಶಕ್ತಿಯನ್ನು ದೇವರು ನಮಗೆ ಕೊಡಲಿ ಇನ್ನು ಆ ಪ್ರೇಮದ ಸಮಾಧಾನದ ಇಂಪಾದ ಧ್ವನಿ ನಮಗೆ ಕೇಳುವುದಿಲ್ಲ. ಅವರ ಸ್ಪರ್ಶದ ಇಂಪು ಇನ್ನು ನಮಗೆ ಎಂದೆಂದಿಗೂ ಇಲ್ಲ" ಎಂಬುದನ್ನು ನೆನೆಸಿಕೊಂಡರೇ ಕಣ್ಣು ನೀರಿನಿಂದ ತುಂಬು ವುದು. ಆ ಧ್ವನಿ ಆ ಸ್ಪರ್ಶ ಇವು ನಮಗೆ ಯಾವಾಗಲೂ ಶಕ್ತಿಯನ್ನು ಕೊಟ್ಟು ನಮ್ಮ ದೈಹಿಕ ಮತ್ತು ಮಾನಸಿಕ ಹೊರೆಯನ್ನು ಕಡಿಮೆ ಮಾಡಿದುವು. ಆದರೆ ನಮ್ಮ ದುಃಖಾಶ್ರುಗಳನ್ನು ನಾವು ಹಿಂದಕ್ಕೆ ತಳ್ಳಬೇಕು. ನಮ್ಮ ಭಾವನೆ ದುಃಖಾಶ್ರುವಾಗಿ ಹರಿದು ಹೋಗಲು ನಾವು ಬಿಡಬಾರದು. ನಮಗೆ ಉಂಟಾಗಿರುವ ಈ ದೊಡ್ಡ ನಷ್ಟದ ದುಃಖವನ್ನು ಕಾರ್ಯ ಕ್ಷೇತ್ರಕ್ಕೆ ಮಾರ್ಪಡಿಸಬೇಕು. ಗಾಂಧಿಯವರು ಬದುಕಿದ್ದಾಗ ನಾವು ಅವರನ್ನು, ನಿಂತು ಹೆಜ್ಜೆಯಿಟ್ಟು ಅರೆಮನಸ್ಸಿನಿಂದ ಅನುಸರಿಸಿದೆವು. ಈಗ ದೃಢ ನಿಶ್ಚಯದಿಂದಲೂ ಪೂರ್ಣ ಮನಸ್ಸಿನಿಂದಲೂ ಅನುಸರಿಸುವ ಶಕ್ತಿ ನಮಗೆ ಉಂಟಾಗಲೆಂದು ದೇವರಲ್ಲಿ ಮೊರೆಯಿಡೋಣ. ನೆನ್ನೆ ಒಬ್ಬ ಗೆಳೆಯರು ತಾವು ಬರೆದ ಒಂದು ಆಶು ಕವಿತೆಯನ್ನು ಕಳುಹಿಸಿದರು. ಅದರಿಂದ ಈ ಸಾಲುಗಳನ್ನು ಆರಿಸುತ್ತೇನೆ.

"ಗಾಂಧಿಯವರ ಮಿತ್ರರೂ, ಇದನ್ನು ಓದುವ ಹೊಸಬರೂ ನಿಮ್ಮ ಹೃದಯದಲ್ಲಿ ಭಯದಿಂದ ಈ ವಿಷಯವನ್ನಿಟ್ಟುಕೊಳ್ಳಿ. ಈಗ ನೀವೆ ಅವರ ಕೈಕಾಲುಗಳು. ನಿಮ್ಮ ಕೈಗಳು ಏನನ್ನು ಮುಟ್ಟುತ್ತವೆ. ನಿಮ್ಮ ಹೆಜ್ಜೆಗಳು ಎಲ್ಲಿ ನಡೆಯುತ್ತವೆ ಎಚ್ಚರಿಕೆಯಿಂದಿರಿ"

ನನ್ನ ಹೃದಯದಲ್ಲಿ ಪ್ರತಿ ಧ್ವನಿಯಾಗುತ್ತಿದೆ. "ಇಲ್ಲ ಗಾಂಧಿ ಸತ್ತಿಲ್ಲ ಅವರು ಜೀವಂತರಾಗಿದ್ದಾರೆ, ನಮ್ಮ ಪ್ರಯತ್ನಗಳನ್ನು ತಮ್ಮ ಅದೇ ಹಳೆಯ ಇನಿದಾದ ದುಃಖಪೂರಿತವಾದ ನೋಟದಿಂದ ನೋಡು ತ್ತಿದ್ದಾರೆ." [ಸುಶೀಲ ನಯ್ಯಾರ್]

## ಇಬ್ಬರೂ ಒಂದಾದರು

ನನ್ನ ಮಟ್ಟಿಗೆ ಇದ್ದವರು ಇಬ್ಬರೇ. ದೇವರು ಮತ್ತು ಗಾಂಧಿ. ಈಗ ಅವರಿಬ್ಬರೂ ಒಂದೇ ಆದರು.

ಗಾಂಧಿಯವರ ಮರಣದ ಸುದ್ದಿ ನನಗೆ ತಿಳಿದಾಗ ನನ್ನ ಹೃದಯದ ಅಂತರಾಳ ತೆರೆಯಿತು. ಗಾಂಧಿಯವರ ಆತ್ಮ ಅಲ್ಲಿ ಪ್ರವೇಶಿಸಿತು. ಆ ಗಳಿಗೆಯಿಂದ ಪರಮಾತ್ಮ ನನ್ನೊಳಗಿರುವ ಒಂದು ಹೊಸ ಭಾವನೆ ನನಗೆ ಉಂಟಾಗಿದೆ.

ಬಾಪು ದೇಹದೊಂದಿಗೆ ನಮ್ಮೊಂದಿಗೆ ಇಲ್ಲದಿದ್ದರೂ, ಅವರ ಪವಿತ್ರ ಆತ್ಮ ದೇಹಕ್ಕಿಂತ ಇನ್ನು ಹೆಚ್ಚು ಹತ್ತಿರವಾಗಿದೆ. ಒಂದು ಸಲ ಬಾಪು ಹೀಗೆ ಹೇಳಿದ್ದರು. " ಈ ದೇಹ ಇಲ್ಲದಾದಾಗ ನಾನು ದೂರವಾಗುವುದಿಲ್ಲ. ಹತ್ತಿರದಲ್ಲಿರುವೆ. ದೇಹವೂ ಒಂದು ಅಡಚಣೆ" ಎಂದು. ನಾನು ಆಗ ಶ್ರದ್ಧೆಯಿಂದ ಕೇಳಿದ್ದೆ. ಈಗ ಅನುಭವದಿಂದ ಆ ಮಾತಿನ ಸತ್ಯ ನನಗೆ ತಿಳಿಯುತ್ತಿದೆ.

ಹೀಗಾಗುವುದೆಂದು ಬಾಪುವಿಗೆ ಗೊತ್ತಿತ್ತೆ ? ಡಿಲ್ಲಿಯಿಂದ ಋಷಿಕೇಶಕ್ಕೆ ಹೊರಡುವುದಕ್ಕೆ ಮುಂಚೆ ಡಿಸೆಂಬರ್ ತಿಂಗಳಿನಲ್ಲಿ ಒಂದು ದಿನ ನಾನು ಅವರಿಗೆ ಹೀಗೆ ಹೇಳಿದೆ " ಬಾಪು ಮಾರ್ಚಿಯಲ್ಲಿ ದನಗಳಿಗಾಗಿ ಗುಡಿಸಲುಗಳನ್ನು ಕಟ್ಟಿ ಎಲ್ಲಾ ವ್ಯವಸ್ಥೆಯನ್ನೂ ಮಾಡಿದ ಮೇಲೆ, ನೀವು ಬಂದು ಭಾರತದ ಬಡ ಹಸುವಿಗೆ ಆಶೀರ್ವಾದ ಮಾಡುವ ಸಂದರ್ಭವೇನಾದರೂ ಉಂಟೇ ?" ಎಂದು ಕೇಳಿದೆ. ಬಾಪು ' ನಾನು ಬರುವುದನ್ನು ನೆಚ್ಚಿಕೊಳ್ಳಬೇಡ 'ಎಂದರು. ಅನಂತರ ತಮ್ಮ ಪಾಡಿಗೆ ತಾವೇಯೋ ಎಂಬಷ್ಟು ಮೆತ್ತಗೆ "ಶವವನ್ನು ನೆಚ್ಚಿಕೊಂಡರೆ ಪ್ರಯೋಜನವೇನು? "ಎಂದರು ಆ ಮಾತುಗಳು ಭಯಂಕರವಾಗಿದ್ದವು. ನಾನು ಯಾರಿಗೂ ಹೇಳಲಿಲ್ಲ. ದೇವರಿಗೆ ಪ್ರಾರ್ಥಿಸಿ ಆ ಮಾತುಗಳನ್ನು ಮೌನವಾಗಿ ಹೃದಯದಲ್ಲಿ ಇಟ್ಟುಕೊಂಡೆ. ಅನಂತರ ಗಾಂಧಿಯವರ ಉಪವಾಸ ಬಂತು. ಆ ಮಾತುಗಳಿಗೆ ಅನ್ವಯಿಸುವ ಸಂದರ್ಭ ಅದರ ಜತೆಯಲ್ಲಿ ಹೋಯಿತೆಂದು ನಾನು ಭಾವಿಸಿದೆ. ಆದರೆ ಆ ಮಾತುಗಳು ಭವಿಷ್ಯವಾಣಿಯಾಗಿದ್ದವು. ಆ ಭವಿಷ್ಯವು ನೆರವೇರಿತು. ಆ ಸಾಯಂಕಾಲ ನಾನು ನೆಟ್ಟಗೆ ಕುಳಿತು ಧ್ಯಾನಪರವಶಳಾಗಿದ್ದಾಗ ಜಗತ್ತು ದುಃಖದ ಆ ವೇಗದ ಹಿಡಿತದಲ್ಲಿ ಸಿಕ್ಕಿದುದು ನನಗೆ ಅನುಭವವಾಯಿತು. ಮತ್ತೊಂದು ಬಾರಿ ಒಬ್ಬ ಅವತಾರ ಪುರುಷನ

ರಕ್ತ ಜಗತ್ಕಲ್ಯಾಣಕ್ಕಾಗಿ ಹರಿಯಿತು. ಪಾಪಕೃತ್ಯದ ಹೊರೆಯಿಂದ ಜಗತ್ತು ಅತ್ತಿತು.

ಆ ಪಾಪ ಒಬ್ಬನ ಪಾಪವಲ್ಲ. ಜಗತ್ತಿನಲ್ಲಿ ಯುಗದಿಂದ ಯುಗಕ್ಕೆ ಅದು ಪ್ರವಾಹ ಪ್ರವಾಹವಾಗಿ ನುಗ್ಗಿಬರುತ್ತಿರುವ ಪಾಪ. ದೇವರಿಗೆ ಪ್ರಿಯರಾದವರು ಹುತಾತ್ಮರಾಗುವುದರಿಂದ ಮಾತ್ರ ಅದನ್ನು ತಡೆಯಲು ಸಾಧ್ಯ. ಬಾಪು ನಮಗೆ ಬಿಟ್ಟುಹೋದ ಕೆಲಸಗಳನ್ನು ನಾವು ಪೂರೈಸಲು, ಭೂಮಿ ಆಕಾಶಗಳನ್ನು ಒಂದು ಮಾಡಬೇಕು. ಬಾಪು ನಮಗಾಗಿ–ಪ್ರತಿ ಹೆಣ್ಣು ಗಂಡು ಮಗುವಿಗಾಗಿ–ಬದುಕಿ ಪ್ರಾಣ ಕೊಟ್ಟಿದ್ದಾರೆ ನಾವು ಹಿಂಸೆ ಅಸತ್ಯ ದುರಾಸೆ ದುರ್ಮಾರ್ಗಗಳಿಂದ, ಸನ್ಮಾರ್ಗಕ್ಕೆ ತಿರುಗಬೇಕೆಂದು ಅವರು ಸತತವಾಗಿ ದುಡಿದು ಕೊನೆಯಲ್ಲಿ ಹುತಾತ್ಮರಾದರು. ನಾವು ನಮ್ಮ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡು ಗಾಂಧಿಯವರ ಪವಿತ್ರೋದ್ದೇಶಗಳನ್ನು ನೆರವೇರಿಸಬೇಕಾದರೆ, ಎಲ್ಲ ಬಗೆಯ ಜಾತೀಯತೆಗಳೂ ನಿರ್ಮೂಲವಾಗಬೇಕು. ಜಾತೀಯತೆ ಮಾತ್ರವೇ ಅಲ್ಲ. ಇನ್ನೂ ಅನೇಕ ದೋಷಗಳು ಹೋಗಬೇಕು ಕಾಳಸಂತೆ ಲಂಚಕೋರತನ, ಪಕ್ಷಪಾತ ಅಸೂಯೆ ಪೈಪೋಟಿ ಮುಂತಾದ ನೂರಾರು ಹಿಂಸೆ ಮತ್ತು ಅಸತ್ಯದ ಅವತಾರಗಳು ನಿರ್ಮೂಲವಾಗಬೇಕು. ಇವನ್ನು ನಿರ್ದಾಕ್ಷಿಣ್ಯವಾಗಿ ಶಿಸ್ತಿನಿಂದ ಮಟ್ಟಹಾಕಬೇಕು. ಬಾಪು ಪ್ರೇಮ ಮತ್ತು ದಯಾಪೂರ್ಣರಾಗಿದ್ದರು. ಆದರೆ ಕೆಟ್ಟದ್ದಕ್ಕೆ ವಿರೋಧವಾಗಿ ಹೋರಾಡುವಾಗ ಅವರು ನಿರ್ದಾಕ್ಷಿಣ್ಯವಾಗಿ ಖಡಾಖಂಡಿತವಾಗಿದ್ದರು.

ಬಾಪು ಹೊರಗಿನ ದೋಷದೊಂದಿಗೆ ಹೋರಾಡಲು ಶಕ್ತರಾದುದು ಒಳಗಿನ ದೋಷವನ್ನು ಅವರು ಜಯಿಸಿದ್ದ ಕಾರಣದಿಂದಲೇ. ಮುಂದಿರುವ ಮಹತ್ಕಾರ್ಯವನ್ನು ನಾವು ಮಾಡಲು ಅರ್ಹರಾಗುವಂತೆ ನಮ್ಮ ದೇವರು ನಮ್ಮನ್ನು ಪವಿತ್ರರನ್ನಾಗಿ ಮಾಡಲಿ.

[ಮೀರಾ]

## ಮನುಷ್ಯ ಪ್ರಪಂಚಕ್ಕೇ ದೊಡ್ಡ ನಷ್ಟ

ಗಾಂಧಿಯವರ ಮರಣದ ಸುದ್ದಿ ಕೇಳಿ ನಾನೂ ರಾಣಿಯೂ

ಸ್ಥಂಬಿತರಾಗಿದ್ದೇವೆ. ಜಗತ್ತೂ ಭಾರತೀಯರೂ ಅನುಭವಿಸುತ್ತಿರುವ ಈ ತುಂಬಲಸಾಧ್ಯವಾದ ನಷ್ಟದಲ್ಲಿ ನಮ್ಮ ಶ್ರದ್ಧಾ ಪೂರ್ವಕವಾದ ಸಹಾನುಭೂತಿಯಿದೆ.

[ಜಾರ್ಜ್ ಚಕ್ರವರ್ತಿ]

ಚಕ್ರವರ್ತಿಗಳ ಮೇಲಿನ ಸಂದೇಶಕ್ಕೆ ಗವರ್ನರ್ ಜನರಲ್ ಮೌಂಟ್ ಬೇಟನ್ ಹೀಗೆ ಪ್ರತ್ಯುತ್ತರವಿತ್ತರು "ಭಾರತೀಯರ ಈ ದುಃಖ ಸಂದರ್ಭದಲ್ಲಿ ತಮ್ಮ [ಚಕ್ರವರ್ತಿ ಚಕ್ರವರ್ತಿನಿಯರ] ಅಮೋಘ ವಾದ ಸಹಾನುಭೂತಿಗಾಗಿ ವಂದಿಸುತ್ತೇವೆ. ಗಾಂಧಿಯವರು ಪ್ರೇಮ ಮತ್ತು ಸಹಿಷ್ಣುತೆಯ ಪ್ರಚಾರಕ್ಕಾಗಿ ಮಡಿದರು. ಆ ಧ್ಯೇಯಗಳು ಇಂದು ಜಗತ್ತಿಗೆ ಬೇಕಾಗಿವೆ. ಮನುಷ್ಯ ಪ್ರಪಂಚಕ್ಕೆ ಇದರಿಂದ ದೊಡ್ಡ ನಷ್ಟವುಂಟಾಗಿದೆ. ಜಗತ್ತಿಗೆ ಇಂತಹ ಆದರ್ಶ ಜೀವಿಯನ್ನು ಕೊಟ್ಟು ದಕ್ಕೆ ಭಾರತಕ್ಕೆ ಈ ದುಃಖದಲ್ಲಿಯೂ ಹೆಮ್ಮೆಯುಂಟಾಗಿದೆ. ಗಾಂಧಿ ಯವರ ಮೇಲುಪಂಗ್ತಿ, ಭಾರತದ ಧ್ಯೇಯಸಾಧನೆಗೆ ಸ್ಫೂರ್ತಿಯೂ ಶಕ್ತಿಯೂ ಆಗುವುದೆಂಬ ನಂಬಿಕೆ ಭಾರತಕ್ಕೆ ಇದೆ.

[ಲಾರ್ಡ್ ಮೌಂಟ್ ಬೇಟನ್]

"ಗಾಂಧಿಯವರ ಮರಣ ರಾಷ್ಟ್ರೀಯ ಅಪಘಾತ ಮಾತ್ರವಲ್ಲ. ಅಂತರ ರಾಷ್ಟ್ರೀಯ ನಷ್ಟ. ನನ್ನ ಹೃದಯ ದುಃಖದಿಂದ ತುಂಬಿದೆ. ಬಾಯಿನಲ್ಲಿ ಮಾತುಗಳು ಹೊರಡುವುದಿಲ್ಲ. ಗಾಂಧಿಯವರ ಮರಣ ಜಗತ್ತಿಗೇ ನಷ್ಟ. ಅವರು ದೊಡ್ಡ ನಾಯಕರು. ಅವರ ಧ್ಯೇಯ ಗಳನ್ನು ಇನ್ನು ಅನುಸರಿಸುವುದೇ ನಮಗಿರುವ ಕೆಲಸ.

[ಲೇಡಿ ಮೌಂಟ್ ಬೇಟನ್]

ಅಂತರ ರಾಷ್ಟ್ರ ಭದ್ರತಾ ಮಂಡಲದಲ್ಲಿ ಜನವರಿ ೩೦ನೆತಾರೀಖು ರಾತ್ರಿ ಗಾಂಧಿಯವರ ನಿಧನದ ಸುದ್ದಿ ಕೇಳಿದಕೂಡಲೆ ಬಾವುಟಗಳ ನ್ನೆಲ್ಲ ಅರ್ಧಮಾಡಿದರು. ಭದ್ರತಾ ಮಂಡಲದ ಸದಸ್ಯರಲ್ಲದವರ ಗೌರವಕ್ಕಾಗಿ, ಅಥವ ಒಂದು ರಾಜ್ಯದ ಮುಖ್ಯಾಧಿಕಾರಿಗಳಲ್ಲದವರ ಗೌರವಕ್ಕಾಗಿ ಭದ್ರತಾ ಮಂಡಲದಲ್ಲಿ ಹೀಗೆ ಬಾವುಟವನ್ನು ಇಳಿಸಿ ದುದು ಜಗತ್ತಿನ ಇತಿಹಾಸದಲ್ಲಿ ಅದೇ ಮೊದಲು. ಭದ್ರತಾ ಮಂಡ

ಲದ ಅಧ್ಯಕ್ಷರಾದ ಫರ್‌ನಾಂಡ್ ವಾನ್ ಲಾಂಗೆನ್‌ಹೊವ್ ಹೀಗೆ ಹೇಳಿದರು

ಅತ್ಯಂತ ಘನವಾದ ಆದರ್ಶಗಳಲ್ಲಿ ಸಂಪೂರ್ಣ ನಿಷ್ಠೆಯನ್ನು ಹೇಗೆ ಇಡಬೇಕೆಂಬ ಮೇಲುಪಂಗ್ತಿಯ ನಿದರ್ಶನವನ್ನು ಗಾಂಧಿಯವರು ಜಗತ್ತಿಗೆ ಹಾಕಿಕೊಟ್ಟರು. ದೀರ್ಘಕಾಲ ಪರಿಣಾಮವುಳ್ಳ ಅವರ ಬೋಧನೆಗಳು ಅವರ ಮರಣಾನಂತರವೂ ಹೆಚ್ಚು ಪರಿಣಾಮಕಾರಿಗಳಾಗಿ ಉಳಿಯುವುವು. ಅವರ ದೇಶದಲ್ಲಿಯೂ ಇತರ ದೇಶಗಳಲ್ಲಿಯೂ ಇರುವ ಅವರ ಭಕ್ತರೆಲ್ಲಾ ಭದ್ರತಾಮಂಡಲದ ಅಡಿಗಟ್ಟು ಎನಿಸಿದ ಅಹಿಂಸೆ ಸಹನೆ ಔದಾರ್ಯ ಅನ್ಯೋನ್ಯತೆಗಳ ಗುಣಗಳನ್ನು ಪ್ರಚಾರಮಾಡುತ್ತಾ ಹೋಗುವರು. ಗಾಂಧಿಯವರ ಮರಣದಿಂದ ಅವರ ಲೋಕಹಿತ ಕಾರ್ಯ ನಿಲ್ಲುವುದಿಲ್ಲ".

ಭದ್ರತಾ ಮಂಡಲದ ಕಾರ್ಯದರ್ಶಿ ಬೈರನ್‌ಪ್ರೈಸ್‌ರು ಸಂದೇಶವನ್ನು ಭಾರತಕ್ಕೆ ಕಳುಹಿಸುತ್ತಾ ಹೀಗೆ ಹೇಳಿದರು " ಗಾಂಧಿಯವರ ನಿಧನದಿಂದ ಜಗತ್ತಿಗೆ ತುಂಬಲಸಾಧ್ಯವಾದ ನಷ್ಟವುಂಟಾಗಿದೆ. ಈ ತೊಡಕಿನ ಸಂದರ್ಭದಲ್ಲಿ ಜಗತ್ತಿಗೆ ಅವರ ಆತ್ಮ ಶಕ್ತಿಯ ನೇತೃತ್ವ ಬಹಳ ಬೇಕಾಗಿತ್ತು. ಗಾಂಧಿಯವರು ಶಾಂತಿಯ ಉಪಾಸಕರಾಗಿದ್ದರು. ಭದ್ರತಾ ಮಂಡಲದ ಧ್ಯೇಯಗಳನ್ನೆಲ್ಲಾ ತಮ್ಮ ಬಾಳಿನಲ್ಲಿಯೇ ಆಚರಣೆಗೆ ತರುತ್ತಿದ್ದರು. ಭದ್ರತಾ ಮಂಡಲ ಅವರ ನಿಧನದಿಂದ ದುಃಖಿತವಾಗಿದೆ. ಅವರ ಆತ್ಮತ್ಯಾಗದ ಪರಿಣಾಮವಾಗಿ ಅವರು ಯಾವ ಆದರ್ಶಕ್ಕೆ ಬಾಳನ್ನು ಮುಡುಪಾಗಿಟ್ಟಿದ್ದರೋ ಅದು ಊರ್ಜಿತಗೊಳಲೆಂದು ನಂಬುತ್ತಡೆ. ಭಾರತೀಯರಿಗೂ ಭಾರತ ಸರಕಾರಕ್ಕೂ ನಮ್ಮ ಪೂರ್ಣ ಸಹಾನುಭೂತಿ."

ಗಾಂಧಿಯವರ ನಿಧನದ ಪ್ರಯುಕ್ತ ಭದ್ರತಾಮಂಡಲದ ಕಾರ್ಯಕ್ರಮವನ್ನು ಮುಂದೆ ಹಾಕಲಾಯಿತು. ಅಧ್ಯಕ್ಷರಾದ ಫರ್ನಂಡ್‌ವಾನ್ ಲಾಂಗೆನ್ ಹೋವ್ ಹೀಗೆ ಹೇಳಿದರು.

"ಒಂದು ದುಃಖ ಸಂಗತಿ ನಮ್ಮ ಮನಸ್ಸನ್ನು ಪೂರ್ಣವಾಗಿ ಆವರಿಸಿದೆ. ಗಾಂಧಿಯವರ ಮರಣದಿಂದ ಜಗತ್ತಿಗೆ ಕವಿದಿರುವ ಮಂಕಿನಲ್ಲಿ

ನಾವಿದ್ದೇವೆ. ಈ ಅನ್ಯಾಯದ ಪ್ರತಿಕ್ರಿಯೆ ಅದರಲ್ಲಿಯೂ ಭಾರತೀಯ ರಿಗೆ ಎಷ್ಟು ಎಂಬುದು ನಮಗೆ ಚೆನ್ನಾಗಿ ಗೊತ್ತಾಗಿದೆ. ಭದ್ರತಾ ಮಂಡಲದ ಹೆಸರಿನಲ್ಲಿ ಭಾರತೀಯರಿಗೂ ಆ ಸರಕಾರದ ಪ್ರತಿನಿಧಿಗೂ ಆ ಸರಕಾರಕ್ಕೂ, ಆ ಹುಚ್ಚನ ಅತ್ಯಾಚಾರದಿಂದ ನಮಗಾಗಿರುವ ದುಃಖವನ್ನು ನಾವು ವ್ಯಕ್ತಪಡಿಸುತ್ತೇವೆ. ಗಾಂಧಿಯವರು ಜಗತ್ತಿಗೆ ಗುರು. ತಮ್ಮ ಧ್ಯೇಯದಲ್ಲಿ ಅವರಷ್ಟು ಭಕ್ತಿಯುಳ್ಳವರು ಜಗತ್ತಿನಲ್ಲಿಯೇ ಇಲ್ಲ. ಆ ಧ್ಯೇಯಗಳ ಸಾಧನೆಗಾಗಿ ಅನೇಕ ವೇಳೆ ಅವರು ತಮ್ಮ ಪ್ರಾಣವನ್ನೇ ಬಲಿಕೊಡಲು ಸಿದ್ಧರಾಗಿದ್ದರು.

ಈ ದೂರದಿಂದ, ಅವರು ನಮಗೆ ಈಗಾಗಲೇ ಬಹಳ ಮೇಲೆ ಇರುವಂತೆ ತೋರುತ್ತಾರೆ, ಅವರು ಶಾಂತಿಯ ಪ್ರತೀಕ. ಭಾರತೀಯರ ಸ್ವಾತಂತ್ರ್ಯಾಭಿಲಾಷೆಯನ್ನು ಅವರ ತಮ್ಮ ಉಜ್ವಲವಾದ ಮತ್ತು ಗಂಭೀರವಾದ ಬಾಳಿನಲ್ಲಿ ಪ್ರತಿನಿಧಿಸಿದರು.

ಭಾರತವು ಸ್ವತಂತ್ರವಾಗುವುದನ್ನು ನೋಡುವಷ್ಟು ಕಾಲವೂ ಅವರು ಬದುಕಿದ್ದರು. ಔದಾರ್ಯ ಭ್ರಾತೃತ್ವ ಒಗ್ಗಟ್ಟು ಇವು ಅವರ ಮಂತ್ರಗಳಾಗಿದ್ದವು. ಆ ಕಾರಣದಿಂದ ನಮ್ಮ ಚರ್ಚೆಗಳ ಕಾಲದಲ್ಲಿ ಅವರ ಹೆಸರು ಪದೇ ಪದೇ ಬರುತ್ತಿದ್ದಿತು. ಜಗತ್ತಿನ ಶಾಂತಿಸ್ಥಾಪನೆಯ ಕಾರ್ಯದಲ್ಲಿ ಅವರು ನಮ್ಮ ಹಿಂದಿದ್ದಾರೆ ಎಂಬುದು ನಮಗೆ ನಂಬಿಕೆಯಾಗಿತ್ತು."

"ಜಗತ್ತಿನ ಇತಿಹಾಸನಲ್ಲಿ ಅನೇಕ ವಿಭೂತಿಗಳು ಕೊಲೆಪಾತಕರ ಕೈಯಿಂದ ಸತ್ತಿದ್ದಾರೆ. ಗಾಧಿಯವರಿಗೆ ತಿಳಿದಿದ್ದಂತೆ, ಆ ಇತರ ವಿಭೂತಿಗಳಿಗೂ ತಮಗೆ ಶತ್ರುಗಳಿರುವುದು ಗೊತ್ತಿತ್ತು. ಆದರೆ ಅಪಾಯದ ವಿಷಯದಲ್ಲಿ ಗಾಂಧಿಯವರಷ್ಟು ತಿರಸ್ಕಾರ ಮತ್ತಾರಿಗೂ ಇರಲಿಲ್ಲ. ಕೊಲೆಪಾತಕತನವೂ ಅದರ ಜನಕ ಮತಾಂಧತೆಯೂ ಎಷ್ಟು ಬುದ್ಧಿ ಹೀನವಾದ ವ್ಯರ್ಥವಾದ ಕಾರ್ಯವೆಂಬುದನ್ನು ಗಾಂಧಿಯವರು ತಮ್ಮ ಮರಣದಿಂದ ಸ್ಪಷ್ಟವಾಗಿ ತೋರಿಸಿದ್ದಾರೆ. ಗಾಂಧಿಯವರ ಸಾಧನೆಗಳು ಇನ್ನೂ ಫಲಕಾರಿಯಾಗುವುವೇ. ಗಾಂಧಿಯವರು

ದೀನರ ದರಿದ್ರರ ದಳಿತರ ಸಮಾಜಬಾಹಿರರ ಮಿತ್ರರಾಗಿದ್ದರು"

[ನೋಯೆಲ್ ಬಾಕರ್, ಬ್ರಿಟನ್]

ಸೋವಿಯೆಟ್ ನಿಯೋಗ ಮಂಡಲಿಯ ಪರವಾಗಿ, ಗಾಂಧಿಯವರ ಮರಣದಿಂದುಂಟಾದ ದುಃಖವನ್ನು ಭಾರತ ನಿಯೋಗಕ್ಕೆ ತಿಳಿಸುತ್ತಿದ್ದೇನೆ. ಗಾಂಧಿಯವರು ಭಾರತದ ಪ್ರಮುಖ ನಾಯಕರು. ಭಾರತ ಇತಿಹಾಸದಲ್ಲಿ ಅವರ ಸ್ಥಾನ ಹಿರಿಯದು, ಅಳಿಸಲಾಗದುದು. ಭಾರತೀಯ ಸ್ವಾತಂತ್ರ್ಯ ಚಳವಳಿಯಲ್ಲಿ ಅವರ ಹೆಸರು ಸುವರ್ಣಾಕ್ಷರಗಳು.

[ಆಂಡ್ರಿ ಗ್ರೊಮಿಕೋ—ರಷ್ಯ]

ಮಹಾತ್ಮ ಗಾಂಧಿಯವರ ನಿಧನದಿಂದ ಏಷ್ಯದ ಅತ್ಯಂತ ಮಹನೀಯನಾದ ಜೀವಂತ ಯೋಗಿಯು ಕಣ್ಮರೆಯಾಗಿದ್ದಾರೆ ಏಷ್ಯದ ವಿವೇಕವೂ ಜ್ಞಾನವೂ ಔದಾರ್ಯವೂ ಘನತೆಯೂ ಅವರಲ್ಲಿ ಪ್ರಕಾಶವಾದಂತೆ ಮತ್ತಾರಲ್ಲಿಯೂ ಆಗಲಿಲ್ಲ. ಅವರ ಧ್ಯೇಯಗಳು ಜಗತ್ತಿನ ಮನ್ನಣೆಯನ್ನು ಪಡೆಯುವ ವ್ಯಾಪ್ತಿಯುಳ್ಳವು.

[ಡಾಕ್ಟರ್ ಸಿಯಾಂಗ್, ಚೀನ]

ಪಾಕಿಸ್ತಾನದ ಪ್ರಜೆಗಳ, ಸರಕಾರದ ಮತ್ತು ನನ್ನ ಪರವಾಗಿ ಹಿಂದು ಧರ್ಮದ ಅತ್ಯುಚ್ಚ ಆದರ್ಶಗಳನ್ನು ಆಚರಿಸುತ್ತಿದ್ದ ಮಹಾತ್ಮ ಗಾಂಧಿಯವರನ್ನು ಗೌರವಿಸುತ್ತೇನೆ. ಅವರ ಮರಣದಿಂದ ಭಾರತಕ್ಕೂ ಪಾಕಿಸ್ತಾನಕ್ಕೂ ಸಮಾನವಾದ ನಷ್ಟವುಂಟಾಗಿದೆ. ಜಗತ್ತಿನ ಶಾಂತಿ ಸ್ಥಾಪನೆಗೆ ತುಂಬಲಸಾಧ್ಯವಾದ ಕೊರೆಯುಂಟಾಗಿದೆ.

ಗಾಂಧಿಯವರು ಕೋಟಿ ಸಂಖೆಯ ಜನರ ಪ್ರಿಯರು. ಅವರ ಹೆಸರನ್ನು ಕೇಳಿದವರೆಲ್ಲಾ ಅವರನ್ನು ಗೌರವಿಸುತ್ತಿದ್ದರು. ಅವರ ಬಾಳಿನ ಸಂದಿಗ್ಧ ಸಂದರ್ಭಗಳಲ್ಲಿ ವಿವೇಕದಿಂದ ವರ್ತಿಸಿ ಜಯಶಾಲಿಯಾಗುವುದು ಅವರ ಒಂದು ಮುಖ್ಯಲಕ್ಷಣವಾಗಿತ್ತು. ಅವರಿಗೆ ಯಾರಾದರೂ ಅಪಾಯ ಮಾಡಬಹುದೆಂಬುದು ಕನಸಿನಲ್ಲಿಯೂ ಹೊಳೆಯುವುದಿಲ್ಲ. ಕೊಲೆಪಾತಕನ ಕೈಯಿಂದ ಗಾಂಧಿಯವರು ಸತ್ತರು ವಿಧಿಯ ವಿಚಿತ್ರ! ಬಿರುಗಾಳಿಗೆ ಸಿಕ್ಕಿ ನೆಲೆ ಕಾಣದೆ ಅಲೆಯುತ್ತಿರುವ ಜಗತ್ತಿನ ದೋಣಿಗೆ, ಅವರು ಮಾತ್ರ ಸರಿಯಾದ ನಾಯಕರಾಗಿದ್ದರು.

ಭಾರತವೆಂಬ ಕಮಾನಿನ ಮಧ್ಯದ ಬಿಗಿಕಲ್ಲನ್ನು [Key stone] ಕೊಲೆಪಾತಕನು ತೆಗೆದುಹಾಕಿದನು. ಈ ಅತ್ಯಾಚಾರದ ನಷ್ಟವೆಷ್ಟೆಂಬುದನ್ನು ಈಗ ತಿಳಿಯಲು ಸಾಧ್ಯವಿಲ್ಲ. ಗಾಂಧಿಯವರು ಯಾವ ಧ್ಯೇಯಕ್ಕಾಗಿ ತಮ್ಮ ಬಾಳನ್ನೇ ಮೀಸಲಾಗಿಟ್ಟರೋ ಆ ಧ್ಯೇಯ, ಈ ಅವರ ತ್ಯಾಗದಿಂದ ಪೂರ್ಣವಾಗಲೆಂದು ಹಾರೈಸೋಣ.

[ಸರ್ ಜಫರುಲ್ಲಾಖಾನ್, ಪಾಕಿಸ್ತಾನ್]

ಭಾರತದ ಪ್ರತಿನಿಧಿ ಗೋಪಾಲಸ್ವಾಮಿ ಐಯಂಗಾರ್ಯರು ಹೀಗೆ ಪ್ರತ್ಯುತ್ತರ ಕೊಟ್ಟರು "ನಮ್ಮ ಈ ದುಃಖ ಸಮಯದಲ್ಲಿ ನೀವು ನಮ್ಮಲ್ಲಿ ತೋರಿಸಿರುವ ಸಹಾನುಭೂತಿಗಾಗಿ ನಮ್ಮ ಅನಂತ ಕೃತಜ್ಞತೆಗಳು. ಮುಂದಾಗಬಹುದಾದ ಪ್ರತಿ ಕ್ರಿಯೆಗಳನ್ನು ಊಹಿಸಲಸಾಧ್ಯವಾದ ಈ ಸಂದರ್ಭದಲ್ಲಿ ನಿಮ್ಮ ಸಹಾನುಭೂತಿಯಿಂದ ಸ್ವಲ್ಪವಾದರೂ ಸಮಾಧಾನವಾಗುವುದು.

ನಮ್ಮ ಹೃದಯ ದುಃಖದಿಂದ ತುಂಬಿದೆ. ಮಾತು ಹೊರಡುವುದಿಲ್ಲ ಭಾರತದ ಇತ್ತೀಚಿನ ಇತಿಹಾಸದಲ್ಲಿ ನಡೆಯುದಿದ್ದ ವಿಷಾದ ಘಟನೆ ನಡೆದಿದೆ.

ಗಾಂಧಿಯವರ ಬಾಳು ಭಾರತೀಯರಿಗೆ ಆದರ್ಶ. ಜಗತ್ತಿನಲ್ಲಿ ಯಾರ್ಯಾರು "ತಮ್ಮ ವ್ಯವಹಾರದಲ್ಲಿ ಹಿಂಸೆ ಬೇಕಿಲ್ಲ. ಮಾನವತೆಯ ಅತ್ಯುಚ್ಚ ಸಾಧನೆ ಅಹಿಂಸೆಯಿಂದ ಮಾತ್ರ ಸಾಧ್ಯ" ಎಂದು ನಂಬಿದ್ದಾರೋ ಇವರಿಗೆಲ್ಲಾ, ಆ ರಾಷ್ಟ್ರಗಳಿಗೆಲ್ಲಾ ಗಾಂಧಿ ಧ್ರುವತಾರೆ.

ಭದ್ರತಾಮಂಡಲದ ಧ್ಯೇಯಗಳನ್ನೆಲ್ಲಾ ತನ್ನ ಬಾಳಿನಲ್ಲಿ ಆಚರಣೆಗೆ ತಂದು ಪ್ರಚಾರಮಾಡಿದ ಒಬ್ಬರೇ ಒಬ್ಬರೆಂದರೆ ಮಹಾತ್ಮಾ ಗಾಂಧಿ

ಭಾರತದಲ್ಲಿ ಮಹಾತ್ಮಾಗಾಂಧಿ ಎಂದರೆ ಐಕ್ಯತೆಯ ಗುರುತು. ಭಾರತ ವಿಭಜನೆಯಿಂದ ಅವರು ಬಹಳ ಖಿನ್ನರಾಗಿದ್ದರು. ತಮ್ಮ ಜೀವಮಾನದ ಕಾರ್ಯ ವ್ಯರ್ಥವಾಯಿತೆಂದು ಭಾವಿಸಿದರು. ಆದರೆ ವಿಭಜನೆ ನಡೆದ ಮೇಲೆ ಜಾತಿ ಜಾತಿಗಳ ಪಂಗಡ ಪಂಗಡಗಳ ಸ್ನೇಹ ಸೌಹಾರ್ದವನ್ನು ಹೆಚ್ಚಿಸುವುದು ಅವರ ಜೀವನದ ಕರ್ತವ್ಯವಾಯಿತು.

ಐಕ್ಯತೆಯುನ್ನೂ ಸಹಾನುಭೂತಿಯುನ್ನೂ ನಾಶಮಾಡುತ್ತಿದ್ದ ಶಕ್ತಿಗಳಿಗೆ ವಿರೋಧವಾಗಿ ಅವರು ಸತತವಾಗಿ ಹೋರಾಡಿದರು. ಸೇಡಿನ ಮನೋಭಾವದ ಜನತೆಯು ತಮ್ಮನ್ನು ಎದುರಿಸಿದರೂ ಗಾಂಧಿಯವರು ತಮ್ಮ ಧ್ಯೇಯವನ್ನು ಬಿಡಲಿಲ್ಲ.

ಕೆಟ್ಟದ್ದಕ್ಕೆ ಪ್ರತಿಯಾಗಿ ಒಳ್ಳೆಯದನ್ನು ಮಾಡುವುದು ಅವರ ಧ್ಯೇಯವಾಗಿತ್ತು. ಅದರ ಪ್ರಚಾರದಲ್ಲಿ ಅದಕ್ಕಾಗಿ ಅವರು ಬಲಿಯಾದರು. ಭಾರತಕ್ಕೆ ಅವರ ಅವಶ್ಯಕತೆ ಈಗಿನಷ್ಟು ಮತ್ತಾವಾಗಲೂ ಹೆಚ್ಚಾಗಿರಲಿಲ್ಲ.

ಗಾಂಧಿಯವರ ಧ್ಯೇಯ ಅವರು ಹುತಾತ್ಮರಾದುದರಿಂದ ಸಾಧಿತವಾಗಬಹುದೆಂದು ಹೇಳಲಾಗಿದೆ. ಹಾಗಾಗಲೆಂದು ಆಶಿಸುತ್ತೇವೆ

ಭಾರತೀಯರಿಗೆ ಈಗ ದೊಡ್ಡ ಜವಾಬ್ದಾರಿ ತಲೆಯಮೇಲೆ ಬಿದ್ದಿದೆ ಗಾಂಧಿಯವರ ಧ್ಯೇಯಗಳನ್ನು ನಮ್ಮ ಬಾಳಿನಲ್ಲಿ ತಂದು ಅವರು ಪ್ರಚಾರ ಮಾಡಿದ ವಿಶ್ವಪ್ರೇಮ ಧ್ಯೇಯಗಳನ್ನು ಸಾಧಿಸಬೇಕಾಗಿದೆ.

ಗಾಂಧಿಯವರಿಗೆ ಪ್ರಿಯವಾದ, ಭಾರತ ದೇಶಕ್ಕೆ ಶಾಂತಿ ಸಮೃದ್ಧಿಗಳೂ ಸಮರಸವೂ ದೊರೆಯಲೆಂದು ನಾವು ಪ್ರಾರ್ಥಿಸಿ ಆ ದಾರಿಯಲ್ಲಿ ದುಡಿಯೋಣ."—

"ಗಾಂಧಿಯವರು ತಮ್ಮ ಅನುಯಾಯಿಗಳಿಗೆ ಸ್ವಯೂದಕಲಹ ಭಾರತಕ್ಕೆ ಹಿತವಲ್ಲ. ಅದು ಭಾರತದ ಶತ್ರುಗಳಿಗೆ ಹಿತ ಎಂದು ಮುಂದಟ್ಟುಮಾಡಿದರು. ಗಾಂಧಿಯವರ ಮರಣದಿಂದ, ಶಾಂತವಾದ ಭದ್ರವಾದ ಭಾರತ ರಾಜ್ಯಸ್ಥಾಪನೆಯ ಕಾರ್ಯಕ್ಕೆ ತಡೆಯಾಗುವುದಿಲ್ಲವೆಂದು ನಾವು ನಂಬುತ್ತೇವೆ.

[ವ್ಯಾಸಿಲಿ ತಾರಾ ಸೆಂಕೊ, ಯುಕ್ರೇನ್]

ಸಹನೆಯ ಆವಶ್ಯಕತೆ ಇಷ್ಟೊಂದು ಹೆಚ್ಚಾಗಿರುವ ಈ ಸಂದರ್ಭದಲ್ಲಿ ಗಾಂಧಿಯವರ ಮರಣ ಸಂಭವಿಸಿದುದು ಜಗತ್ತಿಗೆ ಅನ್ಯಾಯ. ಅವರ ತ್ಯಾಗದಿಂದ ಅವರ ಧ್ಯೇಯಗಳನ್ನು ಸಾಧಿಸುವ ಇನ್ನು ಹೆಚ್ಚು ಉತ್ಸಾಹ ಭದ್ರತಾಮಂಡಲಕ್ಕೆ ಉಂಟಾಗಲಿ.

[ಸಿನೇಟರ್ ಆರ್ ವಾರೆನ್ ಆಸ್ಟಿನ್. ಯುನೇಟೆಡ್ ಸ್ಟೇಟ್ಸ್]

ಈ ಯೋಗಿಯು ಹೀಗೆ ಸತ್ತುದು ಜಗತ್ತಿನ ದುರದೃಷ್ಟ ಅವರು ಬದುಕಿದ್ದಾಗಿನದಕ್ಕಿಂತ ಮರಣದ ನಂತರ ಅವರ ಧ್ಯೇಯಕ್ಕೆ ಗೌರವ ಹೆಚ್ಚು. ಭಾರತೀಯರು ಅವರ ಧ್ಯೇಯಗಳನ್ನು ಅನುಸರಿಸಿದರೆ ಅವರ ಮರಣ ವ್ಯರ್ಥವಾಗುವುದಿಲ್ಲ. ಅವರ ಸ್ಮೃತಿ ಪವಿತ್ರವಾಗಲಿ

[ಪಾರಿಸ್ ಬೆ ಎಲ್ ಖೌರಿ. ಸಿರಿಯ]

ಗಾಂಧಿಯವರು ನಿಸ್ಸಂದೇಹವಾಗಿ ಆಧುನಿಕಕಾಲದ ಒಬ್ಬ ನಾಯಕರು. ಅವರು ಆಚರಣೆಯಲ್ಲಿಯೂ ಬೋಧನೆಯಲ್ಲಿಯೂ ಆತ್ಮದ ಶಕ್ತಿಯನ್ನು ಪ್ರಕಾಶಪಡಿಸಿದರು. ಅವರು ಜಗತ್ತಿಗೆ ಮೇಲು ಪಂಗ್ತಿಯವರಾದರು ಸತ್ಯಕ್ಕೆ ಅವರು ಹೊಸ ಹುತಾತ್ಮರು. ಅವರ ತತ್ವಗಳಲ್ಲಿ ನಮಗೆ ನಂಬಿಕೆ ಇರುವುದಾದರೆ ನಮ್ಮ ಧ್ಯೇಯಕ್ಕೆ ಜಯವಾಗುವುದೆಂದು ನಾವು ನಿರೀಕ್ಷಿಸಬಹುದು. ಜಗತ್ತಿನ ಶಾಂತಿ ಶಕ್ತಿಗಳಿಗೆ ಜಯವಾಗಲೆಂದು ನಮ್ಮ ಹಾರೈಕೆ.

[ಡಾಕ್ಟರ್ ಜೇಸ್ ಆರ್ಕ್; ಅರ್ಜೆಂಟೈನಾ]

ಗಾಂಧಿಯವರ ಮರಣದಿಂದ ಮನುಷ್ಯ ಪ್ರಪಂಚದ ಅತ್ಯಂತ ಮಹತ್ತಾದ ಮಹಿಮಾನ್ವಿತವಾದ ಮನೋಹರ ವ್ಯಕ್ತಿ ಮರೆಯಾಯಿತು. ಗಾಂಧಿಯವರ ಹೆಸರನ್ನು ಕೇಳಿ ಗೌರವಿಸದ ಫ್ರಾನ್ಸಿನವನು ಯಾರೂ ಇಲ್ಲ. ಅವರು ತಮ್ಮ ಧ್ಯೇಯಕ್ಕಾಗಿ ಸತ್ತರು. ಹುತಾತ್ಮರಾಗಿ ತಮ್ಮ ಬಾಳಿನ ಶಿಖರವನ್ನು ಮುಟ್ಟಿದರು.

[ಗೈ ಡೆಲಾ ಟೌರ್ನೆಲ್, ಫ್ರಾನ್ಸ್]

ಗಾಂಧಿಯವರ ಮರಣ ಭಾರತಕ್ಕೆ ಮಾತ್ರವೇ ಅನ್ಯಾಯವಲ್ಲ. ಜಗತ್ತಿನ ಸಾತ್ವಿಕರಿಗೆಲ್ಲಾ ಅನ್ಯಾಯ. ಅವರ ಪ್ರಭಾವ ಇನ್ನೂ ಬೆಳೆಯಲಿ. ಶಾಂತಿಗಾಗಿಯೂ ಸ್ವಾತಂತ್ರ್ಯಕ್ಕಾಗಿಯೂ ದುಡಿಯುತ್ತಿರುವವರ ಮನಸ್ಸುಗಳು ಹೆಚ್ಚು ಹೆಚ್ಚು ವಿಶಾಲವಾಗಿ ಸಮತೆ ಹೊಂದಲಿ ಎಂದು ನಾವು ಈ ದುಃಖ ಸಂದರ್ಭದಲ್ಲಿ ಪ್ರಾರ್ಥಿಸೋಣ.

[ಜನರಲ್ ಆಂಡ್ರೂ ಮಾಕ್‌ನಾಟನ್. ಕನಡ]

## ಸನ್ಯಾಸಿ

ಗಾಂಧಿಯವರ ಮರಣದ ಸುದ್ದಿಯನ್ನು ಎಲ್ಲರೂ ದುಃಖದಿಂದ ತಿಳಿದಿದ್ದೀರಿ. ಭಾರತದ ಅತ್ಯುತ್ಕೃಷ್ಟ ನಾಗರೀಕರಾದ ಗಾಂಧಿಯವರ ನಿಧನದ ಸಂದರ್ಭದಲ್ಲಿ ನಾನು ಬ್ರಿಟನ್ ದೇಶದವರ ಪರವಾಗಿ ಭಾರತಕ್ಕೆ ಸಹಾನುಭೂತಿಯರ್ಪಿಸುತ್ತಿದ್ದೇನೆ.

ಮಹಾತ್ಮ ಗಾಂಧಿ (ಭಾರತದಲ್ಲಿ ಅವರ ಹೆಸರು) ಇಂದಿನ ಜಗತ್ತಿನ ಮಹಾವ್ಯಕ್ತಿಗಳ ಪೈಕಿ ಒಬ್ಬರು. ಆದರೆ ಅವರು ಇತಿಹಾಸದ ಒಂದು ಬೇರೆ ಕಾಲಕ್ಕೆ ಸೇರಿದವರಂತೆ ತೋರುತ್ತಿದ್ದರು.

ಅವರದು ಸನ್ಯಾಸಿಯ ವಿರಕ್ತಿಬಾಳು. ಭಾರತೀಯರನೇಕರು ಅವರು ದೇವರ ಅವತಾರವೆಂದು ನಂಬಿದ್ದರು. ಅವರ ಪ್ರಭಾವ ತಮ್ಮ ಮತದ ಮೇರೆಯನ್ನು ಮೀರಿತ್ತು. ಮತ ಶ್ರದ್ಧೆ ಹೆಚ್ಚಾಗಿರುವ ಭಾರತದಲ್ಲಿ ಇತರ ಮತದವರೂ ಅವರ ಬೋಧನೆಯ ಪ್ರಭಾವಕ್ಕೆ ಒಳಗಾಗಿದ್ದರು. ಕಾಲುಶತಮಾನಕಾಲ ಭಾರತ ರಾಜಕೀಯದ ಎಲ್ಲಾ ಪ್ರಶ್ನೆಗಳಲ್ಲಿಯೂ ಇವರೇ ದೊಡ್ಡ ಸಮಸ್ಯೆ.

ಭಾರತೀಯರ ಸ್ವಾತಂತ್ರ್ಯ ಧ್ವನಿಯೇ ಗಾಂಧಿ. ಆದರೆ ಗಾಂಧಿ ಬರಿಯ ಭಾರತ ರಾಷ್ಟ್ರಪಿತರಷ್ಟೇ ಅಲ್ಲ.

ಬೇರೆ ದೇಶದ ಆಳ್ವಿಕೆಗಾರರ ದೃಷ್ಟಿಯಲ್ಲಿ ಗಾಂಧಿ ಭಾರತ ಸ್ವಾತಂತ್ರ್ಯ ಪ್ರತಿನಿಧಿಯಾದರೂ, ನಿಜವಾದ ಗಾಂಧಿ ಪಾಶ್ಚಾತ್ಯ ವಿರುದ್ಧವಾದ ಪೌರಾತ್ಯ ಸ್ವಾತಂತ್ರ್ಯ ಗಾಂಧಿಯೇ. ಪಾಶ್ಚಾತ್ಯ ನಾಗರೀಕತೆಗೆ ವಿರುದ್ಧವಾದ ದಂಗೆಕೋರ; ಪಾಶ್ಚಾತ್ಯ ಭೌತವಾದದಿಂದ, ಸರಳತೆಗೆ ಬಾಳನ್ನು ತಿರುಗಿಸಬೇಕೆಂಬುದು ಆತನ ಗುರಿ.

ಆದರೆ ಆತನ ಮುಖ್ಯ ವಾದ ಮತ್ತು ಪೃಥಕ್ಕಾದ ತತ್ತ್ವ ಕೇಡನ್ನು ಎದುರಿಸಲು ಅಹಿಂಸೆಯಿಂದ ಸಾಧ್ಯವೆಂಬುದು ಗಾಂಧಿಯ ಅಹಿಂಸೆ, ನಂಬಿಕೆ.

ಹಿಂಸಾವಾದಿಗಳಿಗೆ ಎದುರಾಗಿ ಆತ ಅಹಿಂಸೆಯನ್ನೇ ಒಡ್ಡಿದನು. ಅಂತಹ ಸಮಯಗಳಲ್ಲಿ ಭಾರತದಲ್ಲಿ ಪ್ರಾಣನಾಶವಾದಾಗ ಗಾಂಧಿಗೆ ನಿಜವಾಗಿ ದುಃಖವಾಗುತ್ತಿತ್ತು. ಅವರ ಶ್ರದ್ಧೆ ಪ್ರಾಮಾಣಿಕತೆಗಳು ನಿಸ್ಸಂದೇಹವಾಗಿ ಸಂಶಯದ ಮೇರೆಯನ್ನು ಮೀರಿದ್ದುವು.

ಭಾರತ ಸ್ವಾತಂತ್ರ್ಯದನಂತರ ಜಾತೀಯ ಕಲಹ ಬಂಗಾಳದಲ್ಲಿ ತುದಿಮುಟ್ಟಿದಾಗ, ಅವರ ಆಮರಣಾಂತ ಉಪವಾಸಭಯದಿಂದ ಹಿಂಸಾಕೃತ್ಯಗಳು ನಿಂತವು. ಇನ್ನೂ ಇತರ ಕಡೆಗಳಲ್ಲಿಯೂ ಅದೇ ಫಲ ವುಂಟಾಯಿತು.

ಗಾಂಧಿ ಅನ್ಯಾಯವನ್ನು ಎಲ್ಲಿ ಕಂಡರೂ ಪ್ರತಿಭಟಿಸುತ್ತಿದ್ದರು. ಅವರು ಯಾವಾಗಲೂ ಬಡವರಿಗಾಗಿ ಹೋರಾಡುತ್ತಿದ್ದರು. ಭಾರತದ ಹರಿಜನರ ಸೇವೆಗೆ ಅವರು ತಮ್ಮ ಬಾಳನ್ನು ನಡೆಸಿದರು.

ಕೊಲೆಪಾತಕನ ಕೈ ಅವರನ್ನು ಕೊಂದಿತು. ಭ್ರಾತೃತ್ವ ಶಾಂತಿಗಳನ್ನು ಪ್ರಚಾರ ಮಾಡುತ್ತಿದ್ದ ಧ್ವನಿ ಮೌನವಾಯಿತು ಆದರೆ ಅವರ ಸಂದೇಶ ಮುಂದೆಯೂ ಭಾರತೀಯರನ್ನು ಸ್ನೇಹ ಸೌಹಾರ್ದಗಳಿಗೆ ಪ್ರೇರಿಸುವುದರಲ್ಲಿ ನನಗೆ ಸಂಶಯವಿಲ್ಲ.

ಮಹಾತ್ಮ ಗಾಂಧಿಯವರ ಮರಣದ ಸುದ್ದಿ ಕೇಳಿ ಬ್ರಿಟಿಷ್ ಸರಕಾರಕ್ಕೆ ಸಿಡಿಲು ಬಡಿದಂತಾಗಿದೆ. ಭಾರತದ ಇತಿಹಾಸದಲ್ಲಿ ಇವರಿಗಿಂತ ಹೆಚ್ಚು ಪ್ರಧಾನ ಪಾತ್ರವನ್ನು ವಹಿಸಿದವರು ಯಾರೂ ಇಲ್ಲ

ತಮ್ಮ ದೀರ್ಘಜೀವಿತದಲ್ಲಿ ಅವರು ಶಾಂತಿ ಪ್ರಚಾರಕರಾಗಿ ಹಿಂಸಾ ಮಾರ್ಗವನ್ನು ಖಂಡಿಸಿದರು ಜಗತ್ತಿನ ನಾನಾ ಭಾಗದ ಎಲ್ಲ ಬಗೆಯ ಜನರೂ ಅವರ ನಿಧನದಿಂದ ಕೊರಗುವರು.

ದುಃಖಿತವಾದ ಜಗತ್ತಿಗೆ ಅವರ ನೀತಿಜೀವನದ ನಾಯಕತ್ವ, ಉದಾಹರಣೆಗಳು, ದೊಡ್ಡ ಸ್ಫೂರ್ತಿಗಳಾಗಿವೆ. ಬ್ರಿಟನ್ನು ಭಾರತದ ಈ ಸಂಕಷ್ಟ ಸಮಯದಲ್ಲಿ ಪೂರ್ಣ ಸಹಾನುಭೂತಿಯುಳ್ಳದುದಾಗಿದೆ. ಈ ಅದ್ವಿತೀಯವಾದ ವಿಭೂತಿಯ ನಿಧನದಿಂದ ಬ್ರಿಟಿಷ್ ದೇಶಕ್ಕೆ ಮಾತ್ರವಲ್ಲದೆ ಜಗತ್ತಿಗೇ ನಷ್ಟವಾಗಿದೆ. ಮನುಷ್ಯಜಗತ್ತಿನ ಈ ಮಹನೀಯ ಸೇವಕರ ನಿಧನದಿಂದ ಬ್ರಿಟನ್ನಿನಲ್ಲಿ ನಾವೆಲ್ಲಾ ತುಂಬ ದುಃಖಕರಾಗಿದ್ದೇವೆ. [ಕ್ಲೆಮೆಂಟ್ ಅಟ್ಲಿ]

ಈ ಕೆಟ್ಟ ಅತ್ಯಾಚಾರದಿಂದ ನಾನು ಸ್ತಂಭೀತನಾಗಿದ್ದೇನೆ. [ಚರ್ಚಿಲ್]

ಭಾರತಕ್ಕೂ ಜಗತ್ತಿಗೂ ಈ ಭಯಂಕರ ಕೃತ್ಯದಿಂದ ಆಗಿರುವ

ನಷ್ಟವನ್ನು ವರ್ಣಿಸಲು ನನಗೆ ಮಾತುಗಳೇ ದೊರೆಯವು. ಗಾಂಧಿಯವರ ಕೊನೆಯ ಪ್ರಯತ್ನಗಳನ್ನು ನಾವು ಮೆಚ್ಚುಕೆಯಿಂದ ನಿರೀಕ್ಷಿಸುತ್ತಿದ್ದೆವು. ಈ ಸುದ್ದಿ ನಮ್ಮನ್ನು ಸ್ತಂಭಿಸಿತು: ಭಾರತೀಯರಿಗೂ ಭಾರತಕ್ಕೂ ಇದರ ಪರಿಣಾಮವೇನೆಂಬುದು ನಮಗೆ ಗೊತ್ತಾಗಿದೆ. ಗಾಂಧಿಯವರ ಆದರ್ಶವಾದ ಶಾಂತಿ, ಭಾರತಕ್ಕೆ ದೊರೆಯಲಿ ಎಂಬುದೇ ನಮ್ಮ ಆಸೆ. (ಅರ್ನೆಸ್ಟ್ ಬೆವಿನ್— ವಿದೇಶ ಮಂತ್ರಿ)

ಮಹಾತ್ಮ ಗಾಂಧಿಯವರ ಕೊಲೆ ಜಗತ್ತಿಗೂ ಭಾರತಕ್ಕೂ ಅತ್ಯಂತ ಪರಿಣಾಮಕಾರಿಯಾದ ಹತ್ಯೆ. ಭಾರತಕ್ಕೆ ಸ್ವಾತಂತ್ರ್ಯ ದೊರೆತನಂತರ ಶಾಂತಿಯ ಮಾರ್ಗದಲ್ಲಿ ಅವರು ಬಹಳ ಫಲಪ್ರದವಾದ ಕೆಲಸವನ್ನು ಮಾಡಿದ್ದರು. ಶಾಂತಿಸ್ಥಾಪಕರಿಗೆಲ್ಲಾ ಅವರ ನಿಧನದಿಂದ ತುಂಬ ದುಃಖವಾಗಿದೆ.

ಅವರ ಮಿತ್ರರಿಗಂತೂ ಈ ನಷ್ಟವನ್ನು ತುಂಬುವುದು ಸಾಧ್ಯವಿಲ್ಲ. ಅಹಿಂಸೆಯಲ್ಲಿಯ ತಮ್ಮ ನಂಬಿಕೆಯನ್ನು ಅವರು ಮಾತುಗಳಲ್ಲಿ ಮಾತ್ರವೇ ಅಲ್ಲ. ಕಾರ್ಯದಲ್ಲಿಯೂ ತೋರಿಸಿದರು. ತಮ್ಮ ಧ್ಯೇಯಕ್ಕಾಗಿ ಪೂರ್ಣತ್ಯಾಗ ಮಾಡಿದರು.

ಜಗತ್ತಿನಲ್ಲಿ ಅವರಿಗಿಂತ ಹೆಚ್ಚಾದ ಆತ್ಮಜ್ಞಾನದ ಗುರು ನಮ್ಮ ಕಾಲದಲ್ಲಿ ಇಲ್ಲ. ಎಲ್ಲಾದಕ್ಕಿಂತ ಹೆಚ್ಚಾಗಿ ಆತ್ಮಕ್ಕೆ ಬೆಲೆಯುಂಟೆಂದು ಭಾವಿಸುವವರಿಗೆಲ್ಲಾ ಅವರ ಮರಣದಿಂದ ತುಂಬ ನಷ್ಟವುಂಟಾಗಿದೆ.

[ಸರ್ ಸ್ಟಾಫರ್ಡ್‌ಕ್ರಿಪ್ಸ್]

“ ಇದು ಅತ್ಯಂತ ಭಯಂಕರವಾದ ಘಟನೆ. ಮಹಾತ್ಮ ಗಾಂಧಿಯವರ ಮರಣದಿಂದ ಭಾರತಕ್ಕೆ ಮಾತ್ರವೇ ಅಲ್ಲ ಜಗತ್ತಿಗೇ ಅಪಾರ ನಷ್ಟ ಅವರ ನಿಧನಕ್ಕಾಗಿ ಎಲ್ಲೆಲ್ಲೂ ಅಳುತ್ತಾರೆ. ನನ್ನ ಯೋಚನೆಗಳು ಸ್ಥಿಮಿತಕ್ಕೆ ಬರಲಾರದಷ್ಟು ನಾನು ದುಃಖಿತನಾಗಿದ್ದೇನೆ.

[ಲಾರ್ಡ್ ಲಿಸ್ಟೊವೆಲ್]

ಮಹಾತ್ಮ ಗಾಂಧಿಯವರ ಮರಣದ ಸುದ್ಧಿ ಕೇಳಿ ಬಹಳ ದುಃಖಿತನಾಗಿದ್ದೇನೆ. ಅವರ ಬಾಳು ಜಗತ್ತಿಗೇ ಮಾದರಿ.

[ಲಾರ್ಡ್ ಅಡಿಸನ್]

ಜಗತ್ತಿನ ಅತ್ಯದ್ಭುತ ವ್ಯಕ್ತಿ ಮರೆಯಾದರು. ಇತಿಹಾಸದ ಅತ್ಯದ್ಭುತ ವ್ಯಕ್ತಿ ಎಂದೇ ಹೇಳಬಹುದು. ಭಾರತ ಗಾಂಧಿಯವರ ಮಾರ್ಗವನ್ನು ಅನುಸರಿಸಲಿ. ಜಗತ್ತೆಲ್ಲ ಆ ಬೋಧನೆಯನ್ನು ಅನುಸರಿಸಿದರೆ ಗಾಂಧಿಯವರಿಗೆ ಪ್ರಿಯವಾದ ಶಾಂತಿಯನ್ನು ಹೊಂದುವುದು.

[ಫೆನ್ನರ್ ಬ್ರಾಕ್‌ವೆ]

ಹರ್ಬರ್ಟ್ ಮಾರಿಸನ್, ಶ್ರೀ ಅಮೆರಿ, ಲಾರ್ಡ್‌ಲಿನ್‌ಲಿತ್‌ಗೌ ಆರ್ಚ್ ಬಿಷಪ್ ಆಪ್‌ಕ್ಯಾಂಟರ್‌ಬರಿ, ಕ್ಲೆಮೆಂಟ್ ಡೇವಿಸ್, ಲಿಬರಲ್ ಪಕ್ಷದ ಮುಖಂಡರು ಲಾರ್ಡ್ ವಾನ್ಸಿಟಾರ್ಟ್, ಇವರೆಲ್ಲಾ ದುಃಖವನ್ನು ವ್ಯಕ್ತಪಡಿಸಿದರು.

ಅತಿ ಒಳ್ಳೆಯವನಾಗಿರುವುದು ಕೂಡ ಅಪಾಯವೆಂದು ಇದರಿಂದ ಗೊತ್ತಾಗುತ್ತದೆ [ಜಾರ್ಜ್ ಬರ್ನಡ್ ಷಾ]

ನನ್ನ ಆಪ್ತ ಮಿತ್ರನಾದ, ಭಾರತದ ಪ್ರೀತಿಯ ಗುರುವಾದ ಗಾಂಧಿಜಿಯ ಮರಣದ ಸುದ್ದಿ ಕೇಳಿದೆ ಬೆಚ್ಚಿ ಬಿದ್ದೆ.

ತಮ್ಮ ಮರಣದ ಸೇಡನ್ನು ತೀರಿಸಿಕೊಳ್ಳಬಾರದು, ತನ್ನ ಮರಣದಿಂದ, ಕಷ್ಟದಲ್ಲಿ ಶಾಂತಿಸ್ಥಾಪನೆಯಾಗಬೇಕೆಂಬುದು ಗಾಂಧಿಯವರ ಉದ್ದೇಶವಾಗಿದ್ದಿತೆಂಬುದರಲ್ಲಿ ನನಗೆ ಅನುಮಾನವಿಲ್ಲ

[ಲಾರ್ಡ್ ಪೆಥಿಕ್ ಲಾರೆನ್ಸ್]

ಗಾಂಧಿಯವರು ತಮ್ಮ ಧ್ಯೇಯಕ್ಕಾಗಿ ತಮ್ಮ ಜೀವವನ್ನು ಕೊಡಲು ಯಾವಾಗಲೂ ಸಿದ್ಧರಾಗಿದ್ದರು. ಆದರೆ ಭಾರತಕ್ಕೆ ಇದು ದೊಡ್ಡ ಶೋಕ.

ಅವರಿಗಿಂತ ದೊಡ್ಡ ಭಾರತ ಸೇವಕರು ಇಲ್ಲ. ಅವರ ಮರಣದಿಂದ, ಅವರ ತತ್ವಗಳನ್ನು ಅನುಸರಿಸುವ ಬುದ್ಧಿ ಭಾರತೀಯರಿಗೆ ಉಂಟಾಗಲಿ ಎಂಬುದೇ ಭಾರತದ ಮಿತ್ರರ ಬಯಕೆ.

ತಮ್ಮ ವ್ಯಕ್ತಿ ಜೀವನದಿಂದ ತಮ್ಮ ದೇಶದ ಇತಿಹಾಸದ ಮೇಲೆ ಇಂತಹ ಅದ್ಭುತವಾದ ಪರಿಣಾಮವನ್ನುಂಟುಮಾಡಿದವರು ಇಲ್ಲವೇ ಇಲ್ಲವೆನ್ನಬಹುದು.

[ಲಾರ್ಡ್ ಇರ್ವಿನ್. ಲಾರ್ಡ್‌ಹಾಲಿಫಾಕ್ಸ್]

ಯಾರೂ ಸೇಡು ತೀರಿಸಿಕೊಳ್ಳಬಾರದೆಂಬುದು ಮಹಾತ್ಮಾ ಗಾಂಧಿಯವರ ಬಯಕೆ ಎಂಬುದು ಅವರ ಮಿತ್ರರಿಗೆಲ್ಲಾ ಗೊತ್ತು.

ಅವರು ಜೀವನವನ್ನು ಬಾಳಿದುದು ಶಾಶ್ವತವಾದ ಫಲಗಳ ದೃಷ್ಟಿಯಿಂದ. ಅಂತಹ ಬಾಳನ್ನು, ಜನತೆಗೆ ಮಾಘಲಾದ ಬಾಳನ್ನು ಅವರು ಬದುಕಿದುದಕ್ಕಾಗಿ ನಾವು ಕೃತಜ್ಞತೆಯನ್ನು ವ್ಯಕ್ತಪಡಿಸ ಬೇಕು.

ಭಾರತದ ಮೇಲೆಯೂ ಜಗತ್ತಿನ ಮೇಲೆಯೂ ಅವರು ಬೆಳಗಿದ ಪ್ರಭಾವ ಅದ್ಭುತ, ಯಾಕೆಂದರೆ ಅವರು ರಾಜಕೀಯದಲ್ಲಿಯೂ ಆತ್ಮ ಶಕ್ತಿಯನ್ನು ಪ್ರಯೋಗಿಸಿ ಜಯಶಾಲಿಯಾಗುವುದಕ್ಕೆ ಸಾಕ್ಷಿಯಾ ಗಿದ್ದರು [ಸೋರೆನ್‌ಸೆನ್]

ಇಂಗ್ಲೆಂಡಿನ ಲೇಬರ್ ಪಾರ್ಟಿ ಗಾಂಧಿಯವರ ಮರಣದ ಸುದ್ದಿ ಯನ್ನು ಅತ್ಯಂತ ದುಃಖದಿಂದ ಕೇಳುತ್ತದೆ. ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವ ಲೇಬರ್ ಪಾರ್ಟಿಯ ವಾಗ್ದಾನವನ್ನು ಕಾರ್ಯಕಾರಿಯಾಗಿ ಮಾಡುವ ತೊಡಕುಗಳಲ್ಲೆಲ್ಲಾ, ಮಹಾತ್ಮ ಗಾಂಧಿಯವರ ಪ್ರಭಾವ ದಿಂದ ತುಂಬ ಸಹಾಯವಾಯಿತು.

ಎರಡು ಡೊಮಿಯನ್‌ಗಳೂ ಅಹಿಂಸಾ ಮಾರ್ಗದಿಂದ ತಮ್ಮ ವ್ಯತ್ಯಾಸಗಳನ್ನು ಹೋಗಲಾಡಿಸಿಕೊಂಡು ಶಾಂತಿಯನ್ನು ಸ್ಥಾಪಿಸಿ ಅವರ ಸ್ಮಾರಕವನ್ನು ಬೆಳಗಿಸಲಿ ಎಂಬುದೇ ನಮ್ಮ ಆಸೆ.

[ಮಾರ್ಗನ್ ಫಿಲಿಪ್ಸ್—ಲೇಬರ್ ಪಾರ್ಟಿ ಕಾರ್ಯದರ್ಶಿ]

ಗಾಂಧಿಯವರು ಭಾರತದ ಹಿರಿಯ ರಾಷ್ಟ್ರಪುರುಷರು. ಅಷ್ಟೇ ಅಲ್ಲ. ಅವರು ಅಂತರಾಷ್ಟ್ರ ಮಹನೀಯರೂ ಹೌದು. ಅವರ ಆಚರಣೆ ಜೀವನಕೃತಿಗಳು ಜಗತ್ತಿನಲ್ಲಿ ಎಲ್ಲರ ಮೇಲೂ ಪರಿಣಾಮವುಂಟು ಮಾಡಿವೆ.

ಅವರ ಪ್ರಭಾವ, ಸರ್ಕಾರದಲ್ಲಿ ಮಾತ್ರವೇ ಅಲ್ಲ. ಆತ್ಮದ ಪ್ರಪಂಚದಲ್ಲಿಯೂ ತೋರುತ್ತಿದ್ದಿತು. ತಮ್ಮ ಧ್ಯೇಯ ಪೂರ್ತಿ ಕಾರ್ಯ ಕಾರಿಯಾದುದನ್ನು ನೋಡಲು ಅವರು ಜೀವಿಸಿರಲಿಲ್ಲ. ಆದರೆ ಅವರ ಆದರ್ಶ ಎಂದೆಂದಿಗೂ ಅವರ ಕೀರ್ತಿ ಧ್ವಜ. ಭಾರತದ ಪ್ರಜೆ

ಗಳಿಗೆಲ್ಲಾ ಅವರ ಉದಾಹರಣೆಯೇ ಜ್ಯೋತಿಯಾಗುವುದು. ಭಾರತೀಯರು ಮಾತ್ರವೇ ಅಲ್ಲ, ಜಗತ್ತಿನ ಜನರೆಲ್ಲಾ, ಮಹಾತ್ಮರಿಗೆ ಪ್ರಿಯವಾದ ಧ್ಯೇಯ ಸಾಧನೆಗಾಗಿ ಹೆಣಗುವರು.[ಪ್ರೆಸಿಡೆಂಟ್ ಟ್ರೊಮನರು,] ಭಾರತದ ಗವರ್ನರ್ ಜನರಲ್‌ರಿಗೆ [ಪ್ರೆಸಿಡೆಂಟ್ ಟ್ರೊಮನ್] ಈ ಸಂದೇಶವನ್ನು ಕಳುಹಿಸಿದರು.

ಗಾಂಧಿಯವರ ಮರಣದ ಸುದ್ಧಿಯಿಂದ ದುಃಖಿತನಾಗಿದ್ದೇನೆ. ಭಾರತೀಯರಿಗೆ ನನ್ನ ಸಹಾನುಭೂತಿಯನ್ನು ಕಳುಹಿಸುತ್ತೇನೆ.

"ಅವರು ಭಾರತದಲ್ಲಿ ಮಾತ್ರವೇ ಅಲ್ಲ. ಜಗತ್ತಿಗೇ ಆದರ್ಶಪ್ರಾಯಃರಾಗಿದ್ದರು. ಜಗತ್ತಿನ ಶಾಂತಿಪ್ರಿಯರಿಗೆಲ್ಲಾ ಗಾಂಧಿಯವರ ಮರಣದಿಂದ ದುಃಖವಾಗಿದೆ. ಮನುಷ್ಯ ಪ್ರಪಂಚದ ಭ್ರಾತೃತ್ವಕ್ಕಾಗಿ ದುಡಿದ ಮತ್ತೊಂದು ಅದ್ಭುತ ವ್ಯಕ್ತಿ ಮರೆಯಾಯಿತು. ಭಾರತೀಯರು ಮಹಾತ್ಮರ ಧ್ಯೇಯವನ್ನು ಸಾಧಿಸಲು ಪ್ರಯತ್ನಿಸುವರೆಂದು ನನಗೆ ಗೊತ್ತು. ಈ ಮರಣ ಜಗತ್ತಿಗೆ ನಷ್ಟ".

ಅಮೆರಿಕದ ಸೆನೇಟಿನ ಡೆಮಾಕ್ರಾಟಿಕ್ ನಾಯಕ ಆಲ್‌ಬೆನ್ ಬಾರ್ಕ್ಲಿ, ಫಾರಿನ್ ರಿಲೇಶನ್ಸ್ ಸಮಿತಿಯ ಸದಸ್ಯ ಆಲ್ಬರ್ಟ್ ಥಾಮಸ್, ಫಾರಿನ್ ಅಫೇರ್ಸ್ ಕಮಿಟಿಯ ಅಧ್ಯಕ್ಷ ಚಾರಲ್ಸ್ ಎ. ಈಟನ್ ಎಲ್ಲರೂ ಉದ್ದುದ್ದವಾದ ಹೇಳಿಕೆಗಳಲ್ಲಿ ದುಃಖವನ್ನು ಸೂಚಿಸಿದರು. ನ್ಯೂಯಾರ್ಕ್ ರೇಡಿಯೊ, ತನ್ನ ನಿತ್ಯದ ಕಾರ್ಯ ಕ್ರಮವನ್ನು ನಿಲ್ಲಿಸಿ ಈ ಸುದ್ದಿಯನ್ನು ಹೊರಗೆಡಹಿತು. ಸುದ್ದಿಯನ್ನು ಕೇಳಿ ನೀಗ್ರೊಗಳೆಲ್ಲಾ ಪೆಚ್ಚಾದರು. ವರ್ಣದವರ ಏಳಿಗೆಯ ಸಂಘದ ಸದಸ್ಯರು 'ಭಯಂಕರ ಸುದ್ದಿ ದಳಿತರಿಗಾಗಿಯೂ ದೀನರಿಗಾಗಿಯೂ ಅಲ್ಪ ಸಂಖ್ಯಾತರಿಗಾಗಿಯೂ ಜಗತ್ತಿನಲ್ಲಿ ಅಹಿಂಸೆಯಿಂದ ಹೋರಾಡಿದವರು ಗಾಂಧಿ. ಗಾಂಧಿಯವರ ಮರಣದಿಂದ ಅಲ್ಪ ಸಂಖ್ಯಾತರಿಗೆಲ್ಲಾ ನಷ್ಟವುಂಟಾಗಿದೆ." ಎಂದು ಕೊರಗಿದರು.

ಅಮೆರಿಕದ ಸೆಕ್ರೆಟರಿ ಮಾರ್ಶಲ್‌ರು "ಗಾಂಧಿಯವರು ಮನುಷ್ಯ ಪ್ರಪಂಚದ ಆತ್ಮಸಾಕ್ಷಿ. ಅಮೆರಿಕ ದುಃಖದಿಂದ ಸ್ತಬ್ಧವಾಗಿದೆ. ಭಾರತದ ನಷ್ಟದಲ್ಲಿ ಭಾಗಿಯಾಗುತ್ತಿದೆ" ಎಂದು ಪಂಡಿತ ನೆಹ್ರುರಿಗೆ ತಂತಿ ಕಳುಹಿಸಿದರು.

"ಮಹಾತ್ಮಾ ಗಾಂಧಿಯವರ ಮರಣದಿಂದ ಭಾರತಕ್ಕೆ ಸಂಭವಿಸಿರುವ ಈ ದುಃಖದಲ್ಲಿ ನನ್ನ ಸಹಾನುಭೂತಿಯನ್ನು ಅರ್ಪಿಸುತ್ತೇನೆ.

ಜಗತ್ತಿನ ಸ್ವಾತಂತ್ರ್ಯ ಪ್ರೇಮಿಗಳ ಜತೆಯಲ್ಲಿ, ಐರ್ಲೆಂಡೂ ಭಾರತೀಯರ ಜತೆ ದುಃಖಿಸುತ್ತದೆ. ಗಾಂಧಿಯವರ ಭಾರತದ ಸೇವೆ, ಜಗತ್ತಿಗೆ ಆದರ್ಶ.

ಭಾರತಕ್ಕೂ ಜಗತ್ತಿಗೂ, ದೇವರು ಭ್ರಾತೃಪ್ರೇಮ ಸೌಹಾರ್ದಗಳನ್ನು ಕರುಣಿಸಲಿ

" ಗಾಂಧಿಯವರ ಮರಣ ಸುದ್ದಿ ಕೇಳಿ ತುಂಬ ದುಃಖಿತನಾದೆ. ನಿಮಗೆ ಐರ್ಲೆಂಡ್ ಸರ್ಕಾರ ಮತ್ತು ಐರ್ಲೆಂಡ್ ಪ್ರಜೆಗಳ ಸಹಾನುಭೂತಿಯನ್ನು ಅರ್ಪಿಸುತ್ತೇನೆ. ಈ ನಷ್ಟ ಭಾರತಕ್ಕೆ ಮಾತ್ರವೇ ಅಲ್ಲ. ಜಗತ್ತಿನ ಒಬ್ಬ ನಾಯಕರು ಮರೆಯಾದರು. ಅವರ ಮರಣದನಂತರವೂ ಅವರ ಪ್ರಭಾವ ಬಹುಕಾಲ ಇರುತ್ತದೆ.

ಈ ನಷ್ಟ ಅಪಾರವಾದರೂ ಭಾರತ ಮಹಾತ್ಮಾಗಾಂಧಿಯವರ ಆದರ್ಶವನ್ನು ಮುಟ್ಟುವುದರಲ್ಲಿ ಮುಂದುವರಿಯುವುದೆಂದು ನಂಬುತ್ತೇವೆ

ಅಂತ್ಯಭಾಗದಲ್ಲಿ ನಮ್ಮ ಸ್ವಾತಂತ್ರ್ಯದ ಹೋರಾಟವೂ ಭಾರತ ಸ್ವಾತಂತ್ರ್ಯ ಹೋರಾಟವೂ ಸಮಾನವಾದುವು. ನಾವೂ ಭಾರತೀಯರೂ ಅಣ್ಣ ತಮ್ಮದಿರಾಗಿ ಒಬ್ಬರಿಗೊಬ್ಬರು ಶುಭಾಶಯವನ್ನು ಕೋರಿದೆವು ಇಂದು ಭಾರತೀಯರು ಅನಾಥರು. ನಾವು ಅವರೊಂದೊಂದಿಗೆ ಅವರ ಶೋಕದಲ್ಲಿ ಭಾಗಿಗಳು. ಭಾರತೀಯರು ತಮ್ಮ ರಾಷ್ಟ್ರಪಿತನನ್ನು ಕಳೆದುಕೊಂಡರು. ತಮ್ಮ ಪ್ರಾಣವನ್ನೆ ಅವರು ಅವರ ಧ್ಯೇಯಕ್ಕಾಗಿ ಅರ್ಪಿಸಿದರು. ಆ ತ್ಯಾಗದಿಂದ ಭಾರತೀಯರಿಗೆ, ಗಾಂಧಿಯವರ ಗುರಿಯಾದ ಭ್ರಾತೃತ್ವ ಪ್ರೇಮಗಳು ಲಭಿಸಲಿ.

[ಪ್ರಿಮಿಯರ್ ಈಮನ್ ಡಿ. ವೆಲರಾ ಐರ್ಲೆಂಡ್]

ಹಿಂಸೆಗೆ ವಿರೋಧವಾಗಿ ಹೋರಾಡುವುದರಲ್ಲಿ ತನ್ನ ಆಯುಸ್ಸನ್ನು ಸವೆಸಿದ ಜೀವ, ಹಿಂಸೆಯ ಕೈಯಿಂದ ಕೊನೆಯಾದುದು ಬಹಳ ಭೀಭತ್ಸವಾದುದೆ. [ಕೆನಡ ಮುಖ್ಯಮಂತ್ರಿ ಮಾಕೆನ್ಸಿಕಿಂಗ್]

“ ಈ ವೃದ್ಧನನ್ನು ಕೊಂದುದಕ್ಕಿಂತ ಹೆಚ್ಚು ಹೀನವಾದ ಕೃತ್ಯ ನಮ್ಮ ಜಗತ್ತಿನಲ್ಲಿ ನಡೆದಿಲ್ಲ. ಅವರು ಹಿಂಸೆಯಿಂದ ಮರಣಕ್ಕೊಳಗಾದುದು, ಎಲ್ಲಾ ವಿವೇಕವನ್ನೂ ಮೀರಿದ ಒಗಟು. ನಮ್ಮ ನಾಗರೀಕತೆ ಉಳಿಯಬೇಕಾದರೆ, ಮನುಷ್ಯ ಸಮಾಜ ತನ್ನ ವ್ಯವಹಾರದಲ್ಲಿ ಹಿಂಸೆಗೆ ಬದಲಾಗಿ ಅಹಿಂಸೆಯನ್ನೇ ಅನುಸರಿಸಬೇಕೆಂಬುದನ್ನು ಎಲ್ಲರೂ ಒಪ್ಪಲೇಬೇಕು. ಯಾಕೆಂದರೆ ಹಿಂಸೆಯಲ್ಲಿಯೇ ಹಿಂಸೆಯ ನಾಶವೂ ಅಡಗಿದೆ. [ಜನರಲ್ ಡೊಗ್ಲಾಸ್ ಮಾರ್ಆರ್ಥರ್]

“ ಈ ಅಹಿಂಸಾ ಯೋಧ, ಹಿಂಸೆಗೆ ಬಲಿಯಾದುದು ದೊಡ್ಡ ಅಪಘಾತವೇ ಸರಿ ನಿಮಗೂ, ಅವರ ಕುಟುಂಬದವರಿಗೂ ಭಾರತೀಯರಿಗೂ ನಾವು ಸಹಾನುಭೂತಿಯನ್ನು ಸೂಚಿಸುತ್ತೇವೆ. ಮಹಾತ್ಮ ಗಾಂಧಿಯವರ ಮರಣದಿಂದ ನಾವು ಸ್ತಂಭಿತರಾಗಿದ್ದೇವೆ.

[ಚಿಯಾಂಗ್ ಕೈಶೇಕ್ ಮತ್ತು ಸತೀ ಚಿಯಾಂಗ್ ಕೈಶೇಕ್].

ಮಹಾತ್ಮ ಗಾಂಧಿಯವರ ಅಕಾಲಮರಣದಿಂದ ದುಃಖಿತನಾಗಿದ್ದೇನೆ. ಭಾರತ ಮಾತ್ರವೇ ಅಲ್ಲ. ಜಗತ್ತೇ ಗುರುವನ್ನು ಕಳೆದು ಕೊಂಡಿದೆ. ನಿಮ್ಮ ಅಪಾರವಾದ ದುಃಖದಲ್ಲಿ ನನ್ನ ಸಹಾನುಭೂತಿಯನ್ನು ಸ್ವೀಕರಿಸಿ. ಅವರ ಬಾಳು ನಮ್ಮ ಏಷ್ಯದವರಿಗೆಲ್ಲ ಮೇಲುಪಂಗ್ತಿ. ಅವರ ಹೆಸರೇ ನಮ್ಮ ಹೆಮ್ಮೆ. [ಪ್ರಿಮಿಯರ್ ಚಾಂಗ್ ಚುನ್]

ಮಹಾತ್ಮ ಗಾಂಧಿಯವರ ಮರಣದ ಸುದ್ದಿ ಕೇಳಿ ನಾವು ದುಃಖಿತರಾಗಿದ್ದೇವೆ ಅವರ ಮರಣದಿಂದ ಭಾರತದ ಆಧ್ಯಾತ್ಮ ನಾಯಕರೂ ಜಗತ್ತಿನ ಗುರುವೂ ಇಲ್ಲವಾಗಿದ್ದಾರೆ ನೀವೂ ನಿಮ್ಮ ಸಹಕಾರಿಗಳೂ ಈ ಕಷ್ಟವನ್ನು ಧೈರ್ಯದಿಂದಲೂ ದೃಢತೆಯಿಂದಲೂ ಎದುರಿಸಬೇಕು.

[ವಾಂಗ್ ಪೈಚಿ, ಚೀನದ ಪರದೇಶ ಮಂತ್ರಿ]

ಭಾರತದಿಂದ ಬಂದ ಈ ಭಯಂಕರವಾದ ಸುದ್ದಿಯಿಂದ ಬರ್ಮದವರು ಪೂರ್ಣ ದುಃಖಿತರಾಗಿದ್ದಾರೆ. ಮಹಾತ್ಮ ಗಾಂಧಿಯವರ ಮರಣ ಬರ್ಮಾಕ್ಕೂ ನಷ್ಟ. ಆದುದರಿಂದ ಇಂದು ಬ್ರಹ್ಮದೇಶದಲ್ಲಿಯೂ ಶೋಕದಿನ. ಇಂದು ಇಲ್ಲಿ ಹರತಾಳ. ಈ ಸಹದುಃಖದಲ್ಲಿ ಬರ್ಮ ಭಾರತಕ್ಕೆ ಸಹಾನುಭೂತಿಯನ್ನು ನೀಡುತ್ತದೆ.

[ತಾಕಿನ್ ನು ಬರ್ಮ ಮಂತ್ರಿ]

" ಇದು ಅತ್ಯಂತ ದುಃಖ ಸಮಾಚಾರ " [ಜಪಾನಿನ ಚಕ್ರವರ್ತಿ ಹಿರೊ ಹಿಟೊ.]

ಗಾಂಧಿಯವರ ಮರಣದ ದುಃಖ ನಮ್ಮ ಸ್ವಂತ ದುಃಖ.

[ಮುಹಮ್ಮದ್ ಹಟ್ಟ—ಇಂಡೊನೇಶಿಯನ್ ವೈಸ್‌ಪ್ರೆಸಿಡೆಂಟ್]

ಆಸ್ಟ್ರೇಲಿಯದ ಜನರೂ ಸರ್ಕಾರವೂ ಗಾಂಧಿಯವರ ಮರಣ ಸುದ್ದಿಯನ್ನು ದುಃಖದಿಂದ ಕೇಳಿದರು. ಶಾಂತಿ ಸ್ಥಾಪಕರಾದ ಗಾಂಧಿಯವರನ್ನು ಆಸ್ಟ್ರೇಲಿಯ ಎಂದೂ ಮರೆಯುವುದಿಲ್ಲ. ಭಾರತೀಯರಿಗೆ ನಮ್ಮ ಸಹಾನುಭೂತಿಯನ್ನು ತಿಳಿಸುತ್ತೇವೆ.

[ಜೋಸಫ್ ಬಿ. ಚಿಪ್ಲಿ. ಆಸ್ಟ್ರೇಲಿಯನ್ ಪ್ರೈಮ್ ಮಿನಿಸ್ಟರ್]

ಗಾಂಧಿಯವರ ಮರಣ ಸುದ್ದಿಯನ್ನು ದುಃಖದಿಂದ ಕೇಳಿದೆ. ಅವರ ಶಾಂತತೆಯ ಧ್ಯೇಯವೂ ದೇಶಭಕ್ತಿಯೂ ತ್ಯಾಗವೂ ಜಗತ್ತಿಗೆ ಎಂದೆಂದಿಗೂ ಆದರ್ಶ. ನಿಮಗೂ ಅವರ ಕುಟುಂಬದವರಿಗೂ ಈ ದುಃಖ ಸಮಯದಲ್ಲಿ ನನ್ನ ಸಹಾನುಭೂತಿಯನ್ನು ತಿಳಿಸುತ್ತೇನೆ.

[ರಾಜ ಫರೂಕ್, ಕೈರೊ, ಈಜಿಪ್ಟ್]

ನಿಮ್ಮ ನಷ್ಟ ಜಗತ್ತಿಗೆ ನಷ್ಟ. ಇಟಲಿ ನಿಮ್ಮೊಂದಿಗೆ ಈ ನಷ್ಟದಲ್ಲಿ ಪೂರ್ಣಭಾಗಿ [ಕೌಂಟ್ ಸ್ಫೊರಜ, ಇಟಲಿಯ ಪರದೇಶ ಮಂತ್ರಿ]

ಮಹಾತ್ಮ ಗಾಂಧಿಯವರ ಮರಣದಿಂದ ಭಾರತಕ್ಕೆ ಸಂಭವಿಸಿರುವ ಸಾರ್ವಜನಿಕ ದುಃಖದಲ್ಲಿ ನಾವೂ ಭಾಗಿಗಳು. ಗಾಂಧಿಯವರ ಜೀವನ ಧ್ಯೇಯಗಳು ಮನುಷ್ಯ ಪ್ರಪಂಚಕ್ಕೇ ಒಂದು ವರ. ಇವು ಎಂದೆಂದಿಗೂ ಶಾಶ್ವತವಾಗಿ ಉಳಿಯುವುವು

[ಜಾರ್ಜ್ ಬಾಡಾಲ್ಟ್ ಫ್ರೆಂಚ್ ಫಾರಿನ್ ಮಿನಿಸ್ಟರ್]

ಮಹಾತ್ಮ ಗಾಂಧಿಯವರ ಮರಣದಿಂದ ತುಂಬ ದುಃಖಿತರಾಗಿದ್ದೇವೆ. ಮಹಾತ್ಮ ಗಾಂಧಿಯವರು ಜನತೆಯ ಹಿತಕ್ಕಾಗಿ ತಮ್ಮ ಯಾವ ತ್ಯಾಗವನ್ನೂ ಹೆಚ್ಚೆಂದು ಭಾವಿಸಲಿಲ್ಲ.

[ಡಾಕ್ಟರ್ ಲೂಯಿನ್ ಬೆಲ್. ಡಚ್ ಪ್ರೈಮ್ ಮಿನಿಸ್ಟರ್]

ಸ್ವಾತಂತ್ರ್ಯದ ಪ್ರತಿನಿಧಿಯಾದ ಮಹಾತ್ಮ ಗಾಂಧಿಯವರ ಮರಣದ ನಿಮ್ಮ ದುಃಖದಲ್ಲಿ ನನ್ನ ಸಹಾನುಭೂತಿ.

[ಡಾಕ್ಟರ್ ಬೆನೆಸ್. ಜೊಗಸ್ಲವೇಕಿಯ]

ಫ್ರಾನ್ಸಿನಲ್ಲಿರುವ ಭಾರತೀಯರ ಪರವಾಗಿ ನಾನು ಹೀಗೆ ಹೇಳು ತ್ತೇನೆ. "ಗಾಂಧಿಯವರ ಮರಣದಿಂದ ನಾವು ಸ್ತಂಭಿತರಾಗಿದ್ದೇವೆ. ಇದು ಭಾರತಕ್ಕೆ ದೊಡ್ಡ ನಷ್ಟ. ಭಾರತರಾಷ್ಟ್ರ ಪಿತನ ಮರಣದ ಹೊಡೆತದಿಂದ ಚೇತರಿಸಿಕೊಳ್ಳಲು ನಮಗೆ ಬಹಳ ಕಾಲ ಬೇಕಾಗು ತ್ತದೆ. [ಗೋಪಾಲಜಿ ಸಾಂಬು, ಫ್ರಾನ್ಸಿನ ಭಾರತೀಯರ ಸಂಘದ ಕಾರ್ಯದರ್ಶಿ.]

ಫ್ರಾನ್ಸಿನ ನ್ಯಾಶನಲ್ ಅಸೆಂಬ್ಲಿಯವರು ಎದ್ದು ನಿಂತು ಗಾಂಧಿ ಜಿಗೆ ಗೌರವವನ್ನು ತೋರಿಸಿದರು. ಗಾಂಧಿಯವರು ಮನುಷ್ಯ ಪ್ರಪಂ ಚಕ್ಕೆ ಸೇವೆಮಾಡಿದರೆಂದು ಸ್ಪೀಕರ್ ಹೇಳಿದರು. ಫ್ರೆಂಚ್ ರಾಷ್ಟ್ರ ವೆಲ್ಲಾ ಈ ದುಃಖದಲ್ಲಿ ಭಾಗಿಯಾಗಿದೆಯೆಂದು ಹೇಳಲಾಯಿತು. ಗಾಂಧಿಯವರು ಗುರು". ಜಗತ್ತಿನಲ್ಲಿ ದ್ವೇಷಕ್ಕಿಂತ ಪ್ರೀತಿಗೇ ಹೆಚ್ಚು ಶಕ್ತಿ ಎಂದು ಅವರು ತೋರಿಸಿದರು". ನ್ಯಾಶನಲ್ ಅಸೆಂಬ್ಲಿಯ ಠರಾವು ಹೀಗೆ ಇತ್ತು. "ಆತ್ಮ ಶಕ್ತಿಯ ಲ್ಲಿ ನಂಬುಕೆಯುಳ್ಳವರನ್ನೆಲ್ಲಾ ಗಾಂಧಿ ಯವರ ಮರಣ ದುಃಖದಲ್ಲಿ ಮುಳುಗಿಸಿರುವ ಈ ಕಾಲದಲ್ಲಿ ಫ್ರೆಂಚ್ ಅಸೆಂಬ್ಲಿ ಭಾರತ ಸರ್ಕಾರಕ್ಕೂ ಭಾರತ ಜನತೆಗೂ ತನ್ನ ಸಹಾನು ಭೂತಿಯನ್ನು ವ್ಯಕ್ತಪಡಿಸುತ್ತದೆ. ಈ ಅಸೆಂಬ್ಲಿ ಗಾಂಧಿಯವರನ್ನು ಫ್ರಾನ್ಸಿನ ಮಿತ್ರರಾಗಿ ಭಾವಿಸಿದೆ. ಅವರು ದೇಶಭಕ್ತರು ಮತ್ತು ಯೋಗಿ."

ಫ್ರಾನ್ಸಿನ ಪ್ರಸಿದ್ಧ ಗ್ರಂಥಕರ್ತರೂ ಫ್ರೆಂಚ್ ಅಕಾಡಮಿಯ ಸದಸ್ಯರೂ ಆದ ಫ್ರಾನ್ಸಿಸ್ ಮಾರಿಯಾಕ್ ಹೀಗೆ ಹೇಳಿದರು :—

ಗಾಂಧಿಯವರು ತಮ್ಮ ಜನರು ಮತ್ತು ಧರ್ಮದ ವಿಷಯದಲ್ಲಿ ನಮಗೆ ಉಚ್ಚ ಭಾವನೆಗಳನ್ನು ಉಂಟುಮಾಡಿದ್ದಾರೆ. ಮತ್ತಾವ ರಾಷ್ಟ್ರ ದಲ್ಲಿಯೂ ಒಬ್ಬ ಮುದುಕನ ಉಪವಾಸದಿಂದ ಜನರು ಆಯುಧ ಗಳನ್ನು ಎಸೆಯುವುದಿಲ್ಲ. ಗಾಂಧಿಯವರಂತಹ ಮಹಾತ್ಮರು ಮನುಷ್ಯ ಪ್ರಪಂಚದಲ್ಲಿ ಯಾವಾಗಲೂ ಜನಿಸಲಿಲ್ಲ. ಮುಂದೆಯೂ ಜನಿಸು ವುದಿಲ್ಲ.

ಫ್ರಾನ್ಸಿನ ಹಿಂದಲ ಪ್ರಿಮಿಯರ್‌ರಾದ ಲಿಯಾನ್‌ಬ್ಲುಂ ಹೀಗೆ

ಹೇಳಿದರು:—"ನಾನು ಸ್ತಂಭಿತನಾಗಿದ್ದೇನೆ. ಗಾಂಧಿಯವರ ಮರಣದ ಸೇಡನ್ನು ತೀರಿಸಿಕೊಳ್ಳಬಾರದು. ತಮ್ಮ ಮರಣ ಜಗತ್ತಿನ ಶಾಂತಿಗೆ ಎಂಬುದು ಗಾಂಧಿಯವರ ಇಷ್ಟವಾಗಿತ್ತು.

ಫ್ರಾನ್ಸಿನ ಪ್ರಿಮಿಯರ್ ಹೀಗೆ ಹೇಳಿದರು. " ಈ ವರ್ತಮಾನ ನಮ್ಮನ್ನೂ ಫ್ರಾನ್ಸ್ ಜನರನ್ನೂ ಬಹಳ ವಿಚಲಿತವಾಗಿ ಮಾಡಿದೆ. ಗಾಂಧಿಯವರ ಜ್ಞಾಪಕಕ್ಕೆ ವಂದಿಸುತ್ತೇವೆ. ಇದರಿಂದ ಭಾರತಕ್ಕೆ ಹೆಚ್ಚು ಕೇಡುಂಟಾಗದಿರಲೆಂದು ಹಾರೈಸುತ್ತೇವೆ.

ಇಂದಿನ ಸುದ್ದಿ ನಮ್ಮ ಕಾಲದ ಅತ್ಯಂತ ದುಃಖ ಸಮಾಚಾರ. ಕೆಲವೇ ದಿನಗಳ ಮುಂಚೆ ತ್ಯಾಗದಿಂದಲೂ ಔದಾರ್ಯದಿಂದಲೂ ದ್ವೇಷ ದುರಾಸೆಯನ್ನು ಜಯಿಸಬಹುದೆಂಬುದನ್ನು ತೋರಿಸಿದಾತ ಇಂದು ಒಬ್ಬ ಹುಚ್ಚು ಕೊಲೆಪಾತಕನ ಕೈಯಲ್ಲಿ ಮಡಿದಿದ್ದಾನೆ. ಭಾರತೀಯರು ಮಾತ್ರವೇ ಅಲ್ಲ. ಜಗತ್ತಿನಲ್ಲಿ ಭ್ರಾತೃತ್ವ ಸಾಧ್ಯವೆಂದು ಭಾವಿಸಿರುವವರೆಲ್ಲಾ ಇಂದು ದುಃಖಿತರಾಗಿದ್ದಾರೆ. ಜಾತಿ ಮತ ಬಣ್ಣ ದೇಶ ಯಾವುದಿರಲಿ ಮನುಷ್ಯ, ಮನುಷ್ಯನೇ ಎಂಬ ಮೊಂಡು ಮೂಲಭೂತ ಸತ್ಯದ ಅನ್ವೇಷಕ ಗಾಂಧಿ. ಫ್ರಾನ್ಸು ಇಂದು ಆತನ ಚಿತೆಯ ಮುಂದೆ ನಿಂತಿದೆ. ಆತನ ತ್ಯಾಗ ಆತನ ಬಾಳಿನ ಶಿಖರ ವಾಗಲಿ. [ಜಾರ್ಜ ಬಿಡಾಲ್ಟ್ ಫ್ರೆಂಚ್, ಫಾರಿನ್ ಮಿನಿಸ್ಟರ್]

ಮಹಾತ್ಮ ಗಾಂಧಿಯವರು ಭಾರತಕ್ಕಾಗಿ ಸಾಧಿಸಿದುದನ್ನು ಯಾವ ರಾಜನೂ ಯೋಗಿಯೂ ಸಾಧಿಸಲಾರ. ಭೌಗೋಲಿಕ ವಾಗಿಯೂ ಧಾರ್ಮಿಕವಾಗಿಯೂ ಬೇರೆ ಬೇರೆಯಾಗಿರುವ ಈ ದೊಡ್ಡ ದೇಶದಲ್ಲಿ ಗಾಂಧಿಯವರು ಧ್ಯೇಯಗಳು ಐಕ್ಯತೆಯನ್ನುಂಟುಮಾಡಿ ದರು. ಗಾಂಧಿಯವರ ಆತ್ಮ ಶಕ್ತಿಯೇ ಭಾರತವನ್ನು ಒಂದು ಕಡೆ ಯಿಂದ ಮತ್ತೊಂದೆಡೆಗೆ ಬಂಧಿಸಿತು. [ಭಾರತ ಟ್ರೇಡ್ ಕಮಿಷನರ್ ಬಾಜಪಾಯ್]

ಸ್ವಾತಂತ್ರ್ಯ ಚಳುವಳಿಗಾಗಿ ತನ್ನ ದೇಹವನ್ನು ಅರ್ಪಿಸಿದ ಗಾಂಧಿ ಯವರನ್ನು ಹಿಂಸಾವಾದಿ ಕೊಂದಿರುವುದು, ಕಳೆದ ಯುದ್ಧ ಜನರ ಮನಸ್ಸಿನಲ್ಲಿ ಉಂಟುಮಾಡಿರುವ ಪಾಶವೀ ವೃತ್ತಿಯ ಗುರುತು.

[ಹಾನ್ಸ್ ಹೆಡ್ ಟಾಫ್ಟ್, ಡೇನಿಷ್ ಪ್ರಿಮಿಯರ್]

ಆದರ್ಶವಾದವನ್ನು, ಇಂದಿನ ಅಶಾಂತಿ ಜಗತ್ತಿನಲ್ಲಿ ಕಾರ್ಯಕಾರಿಯಾಗಿ ಸ್ಥಾಪಿಸಿರುವ ಗಾಂಧಿಯವರ ಮರಣದಿಂದ ಸ್ತಂಭಿತನಾಗಿದ್ದೇನೆ. [ಜನರಲ್ ಲೂಷಿಯಸ್ ಡಿ. ಕ್ಲೆ ಜರ್ಮನಿಯಲ್ಲಿ ಅಮೆರಿಕರ ಮಿಲಿಟರಿ ಗವರ್ನರ್]

ನಮ್ಮ ಜನತೆಯನ್ನು ಮುಂಕುಹಿಡಿಸುತ್ತಿರುವ ಪಾಶವೀ ಶಕ್ತಿಯ ಗುರುತೇ ಗಾಂಧಿಯವರ ಹತ್ಯೆ. ಯೂರೋಪು ರಾಷ್ಟ್ರೀಯತೆಯನ್ನು ಸೃಷ್ಟಿಸಿತು. ಅದು ಈಗ ಏಸಿಯಾ ಆಫ್ರಿಕಗಳಿಗೆ ಪ್ರವೇಶಿಸುತ್ತಿದೆ. ಆ ದೇಶಗಳು ರಕ್ತದಲ್ಲಿ ಈಜುತ್ತಿವೆ [ಕೌಂಟ್ ಕಾರ್ಲೊ ಸ್ಫೊರ್‌ಸಾ ಇಟಲಿಯ ಫಾರಿನ್ ಮಿನಿಸ್ಟರ್]

ರಷ್ಯದಿಂದ ಶ್ರೀಮತಿ ವಿಜಯಲಕ್ಷ್ಮಿಪಂಡಿತ್, ಜವಹರ್‌ಲಾಲ್ ನೆಹ್ರುಗೆ ಹೀಗೆ ತಂತಿ ಕಳುಹಿಸಿದರು. "ಭಾರತವ ಸಹಿಸಲಸಾಧ್ಯವಾದ ದುಃಖ ಸಂಗತಿ ಈಗತಾನೆ ತಿಳಿಯಿತು. ನಿಮ್ಮ ಆಕಾಶವಾಣಿ ಭಾಷಣ ಸಹ ಕೇಳಿದೆವು ನಿಮ್ಮ ಸ್ವಂತ ಮತ್ತು ದೇಶದ ಸಂಕಟ ಸಮಯದಲ್ಲಿ ಏನು ಹೇಳಲಿ? ನನ್ನ ಪ್ರೇಮವನ್ನು ಕಳುಹಿಸುತ್ತಿದ್ದೇನೆ. ಬಾಪು ಯಾವ ಧ್ಯೇಯಕ್ಕಾಗಿ ಮಡಿದರೋ ಆ ಸಾಧನೆಗೆ ನನ್ನನ್ನು ಮೀಸಲಾಗಿಸುತ್ತೇನೆ. [ವಿಜಯಲಕ್ಷ್ಮಿ ಪಂಡಿತ್]

ಗಾಂಧಿಯವರ ಮರಣದಿಂದ ಜೆಕೊಸ್ಲೊವೇಕಿಯ ಸ್ತಂಭಿತವಾಯಿತು.

ಹಿಂದು ಮುಸಲ್ಮಾನರ ಸೌಹಾರ್ದವನ್ನು ಸ್ಥಾಪಿಸವುದರಲ್ಲಿ ಗಾಂಧಿಯವರ ಮರಣವುಂಟಾದುದಕ್ಕೆ ಜಗತ್ತಿನೊಂದಿಗೆ ಈಜಿಪ್ಟೂ ದುಃಖಿಸುತ್ತಿದೆ. ಗಾಂಧಿ ಜಗತ್ತಿನ ಅದ್ಭುತ ಮಹಾವ್ಯಕ್ತಿಗಳಲ್ಲಿ ಒಬ್ಬರು. [ನಾಹಸ್ ಪಾಷಾ, ಈಜಿಪ್ಟ್]

ಮನುಷ್ಯ ಪ್ರಪಂಚಕ್ಕೆ ವಿರುದ್ಧವಾದ ಇದಕ್ಕಿಂತ ದೊಡ್ಡ ಪಾಪವಿಲ್ಲ. ಜಗತ್ತಿನ ಒಂದು ಅದ್ಭುತ ವ್ಯಕ್ತಿ ಮಾಯವಾಗಿದೆ.

[ಅಜಂ ಪಾಷಾ]

ಗಾಂಧಿಯವರ ಮರಣದಿಂದ ಸ್ತಂಭಿತವಾಗಿದ್ದೇನೆ. ಗಾಂಧಿ

ಯವರು ಜಗತ್ತಿನ ಮಹಾಪುರುಷರಲ್ಲಿ ಒಬ್ಬರು. ಅವರ ಮರಣದಿಂದ ಭಾರತಕ್ಕೆ ಮಾತ್ರವೇ ಅಲ್ಲ ಜಗತ್ತಿಗೇ ನಷ್ಟ. ರಾಕ್ಷಸೀ ವೃತ್ತಿಗಳಿಗೆ ಎದುರಾಗಿ ಹೋರಾಡಿ ಶಾಂತಿಸ್ಥಾಪನೆಗಾಗಿ ತಮ್ಮ ಆಯುಸ್ಸನ್ನು ಸವೆಸಿದವರಲ್ಲಿ ಗಾಂಧಿಯವರು. ಮುಖ್ಯರು [ಕಾಮಿಲ್ ಚಂನರ್ಚಿ ಬಾಗದಾದ್ ಇರಾಕ್]

" ಗಾಂಧಿಯವರ ಕೊಲೆಯ ಸುದ್ದಿಯನ್ನು ಅತಿ ದುಃಖದಿಂದ ಕೇಳಿದೆ. ಜಗತ್ತೆಲ್ಲ ದುಃಖಿತವಾಗಿರುವುದರಲ್ಲಿ ಸಂದೇಹವಿಲ್ಲ.

ಗಾಂಧಿಯವರು ನಮ್ಮ ಕಾಲದ ಅದ್ಭುತ ವ್ಯಕ್ತಿ. ನನಗೆ ಅವರೊಂದಿಗೆ ಮುನ್ನತ್ತು ವರುಷದ ಸಂಪರ್ಕವಿದೆ. ನನ್ನ ವಿಧಾನ ಅವರ ವಿಧಾನದಿಂದ ಬೇರೆಯಾದರೂ ನನಗೆ ಅವರಲ್ಲಿ ಯಾವಾಗಲೂ ಗೌರವ ಹೆಚ್ಚುತ್ತಲೇ ಇದೆ.

ಮನುಷ್ಯ ಶ್ರೇಷ್ಠರೊಬ್ಬರ ನಿಧನವಾಯಿತು. ಭಾರತದೊಂದಿಗೆ ನಾನೂ ದುಃಖಿತನಾಗಿದ್ದೇವೆ. ಈ ದುಃಖದಿಂದ ಭಾರತದಲ್ಲಿ ಜಾತಿ ದ್ವೇಷ ಕಡಿಮೆಯಾಗಲಿ. ಗಾಂಧಿಯವರು ಯಾವ ಶಾಂತಿಗಾಗಿ ದೇಹವನ್ನು ಬಲಿಕೊಟ್ಟರೋ ಆ ಶಾಂತಿ ಭಾರತಕ್ಕೆ ಉಂಟಾಗಲಿ.

[ಜನರಲ್ ಸ್ಮಟ್ಸ್, ಕೇಪಟೌನ]

ಸುದ್ದಿಯನ್ನು ನಂಬುವುದಕ್ಕೇ ಆಗುವುದಿಲ್ಲ. ಗಾಂಧಿಯವರ ಮರಣದಿಂದ ಜಗತ್ತಿನಲ್ಲೆಲ್ಲ ಪ್ರತಿಕ್ರಿಯೆ ಯಾಗುವುದು.

[ಯೂಸಫ್ ಡಾಡು; ಟ್ರಾನ್ಸವಾಲ್ ಸತ್ಯಾಗ್ರಹಿಗಳ ಸಂಘದ ಅಧ್ಯಕ್ಷರು]

ಮಾನವ ಸಮಾಜದ ಈ ಶ್ರೇಷ್ಠ ಪುತ್ರನ ನಿಧನದಿಂದ ಭಾರತಕ್ಕೆ ಉಂಟಾಗಿರುವ ದುಃಖದಲ್ಲಿ ನಾವು ಭಾಗಿಗಳಾಗುತ್ತೇವೆ.

[ಡಾಕ್ಟರ್ ಜಿ ಎಂ. ನಾಯಿಕ್ ನೇಟಾಲ್ ಇಂಡಿಯನ್ ಕಾಂಗ್ರೆಸ್ ಅಧ್ಯಕ್ಷ]

ಭಾರತಕ್ಕೆ ಇದು ಸಹಿಸಲಸಾಧ್ಯ ನಷ್ಟ. [ಜೆ. ಡಬ್ಲು ಗಾಡ್‌ಫ್ರೆ ನೆಟಾಲ್ ಇಂಡಿಯನ್ ಆರ್ಗನಿಸೇಶನ್]

ಗಾಂಧಿಯವರ ಮರಣದ ಸುದ್ದಿ ಕೊಲಂಬೋದಲ್ಲಿ ಬೆಂಕಿ

ಯಂತೆ ಹರಡಿತು. ಜನ ಎಲ್ಲೆಲೂ ಹೆಚ್ಚು ಸುದ್ದಿಗಾಗಿ ಹಾತೊರೆಯ ತೊಡಗಿದರು.

ಸುದ್ದಿಯೇ ಭಯಂಕರ. ಬಾಯಲ್ಲಿ ಮಾತು ಹೊರಡುವುದಿಲ್ಲ ಗಾಂಧಿಯವರ ಮರಣ ಜಗತ್ತಿನ ಮನುಷ್ಯ ಜನಾಂಗಕ್ಕೇ ವಿರುದ್ಧ ವಾದ ಪಾಪ. [ಕೊಲಂಬೊ, ವಿ. ವಿ ಗಿರಿ]

## ಕೊಂಲಬೊ

ಈ ಕೊಲೆಯ ಜಗತ್ತಿನಲ್ಲಿಯೂ ಪ್ರಪಂಚದಲ್ಲಿಯೂ ಏನು ನಡೆ ಯುಬಹುದೆಂದು ಹೇಳುವುದು ಸಾಧ್ಯವಿಲ್ಲ. ನಾನು ಪೂರ್ಣ ದುಃಖಿತ ನಾಗಿದ್ದೇನೆ.[ಡಿ.ಎಸ್. ಸೇನಾನಾಯಕ್. ಸಿಲೋನ್ ಮುಖ್ಯಮಂತ್ರಿ]

ಭಾರತಕ್ಕೆ ಮಾತ್ರವಲ್ಲ, ಜಗತ್ತಿಗೇ ಇದು ಊಹನಾತೀತವಾದ ದುಃಖ ಪ್ರಸಂಗ. ನನ್ನ ಮೊದಲನೆಯ ಯೋಚನೆ ಪಂಡಿತ್ ಜವಹರ್ ಲಾಲ್ ನೆಹ್ರು ಮತ್ತು ಅವರ ಹೆಗಲ ಮೇಲಿರುವ ಅತ್ಯಂತ ಹೆಚ್ಚಾದ ಜವಾಬ್ದಾರಿಯ ಕಡೆಗಿದೆ [ಸರ್ ಆಲಿವರ್ ಗೂನೆಟಿಲ್ಲೆಕೆ ಗೃಹಮಂತ್ರಿ ಸಿಲೋನ್]

"ದುಃಖದಿಂದ ಜರ್ಝರಿತನಾಗಿದ್ದೇನೆ ಏನೂ ಹೇಳಲಾರೆ"
[ಬಂಡಾರ ನಾಯಕ್ ಸ್ಥಳೀಯ ಮಂತ್ರಿ ಸಿಲೋನ್]

## ಸಿಂಗಪುರ್

ಶಾಂತರಾಗಿರಿ ಅಹಿಂಸೆಯ ಈ ಮಹತ್ ಯೋಗಿಯ ಸಂದೇಶ ವನ್ನು ಅನುಸರಿಸಿ. [ಜಮೆಬಾಯಿ, ಛೇಂಬರ್ ಆಫ್ ಕಾಮನ್ಸ್ ಅಧ್ಯಕ್ಷ, ಸಿಂಗಪುರ್]

## ಚೀನ

ಚೀನಿ ಸರ್ಕಾರ ಈ ಪ್ರಕಟನೆ ಹೊರಡಿಸಿತು.

ಮಹಾತ್ಮ ಗಾಂಧಿಯವರ ಮರಣದ ಸುದ್ದಿಯನ್ನು ಈ ಸರ್ಕಾರ ಅತ್ಯಂತ ದುಃಖದಿಂದ ಕೇಳಿತು. ಆತ್ಮಶಕ್ತಿಯ ನಮ್ಮ ದೊಡ್ಡ ಗುರು ನಮ್ಮಿಂದ ಕಣ್ಮರೆಯಾಗಿದ್ದಾರೆ. ಜಗತ್ತು ಈ ನಷ್ಟವನ್ನು ಸಹಿಸಲು ಶಕ್ತವಲ್ಲ.

"ಮಹಾತ್ಮ ಗಾಂಧಿಯವರ ನಿಧನ, ಭಾರತೀಯರನ್ನು ಸ್ತಂಭಿತರ

ನ್ನಾಗಿ ಮಾಡಿದೆ. ಅವರ ಧೀರವಾದ ನಾಯಕತ್ವವೂ ತ್ಯಾಗವೂ ಇಲ್ಲದಿದ್ದರೆ ಭಾರತ ಇನ್ನೂ ಪಾರತಂತ್ರ್ಯದಲ್ಲಿಯೇ ಇರುತ್ತಿದ್ದಿತು. ಅವರು ಭಾರತೀಯರ ಅತ್ಯುತ್ಕೃಷ್ಟ ಆದರ್ಶದ ಮೂರ್ತಿಯಾಗಿದ್ದರು. ಭಾರತದ ಐಕ್ಯತೆಗಾಗಿ ಕೊನೆಯ ಧಾರ್ಮಿಕ ಹೋರಾಟವನ್ನು ಹೂಡಿದ್ದಾಗ ಗಾಂಧಿಯವರ ಕೊಲೆಯಾಯಿತು. ಭಾರತದ ಐಕ್ಯತೆಗಾಗಿ ಅವರಿಗೆ ಉಂಟಾದ ಮರಣದಿಂದ ಮಹಾತ್ಮ ಗಾಂಧಿಯವರು ಅತ್ಯಂತ ಘನತೆಗೇರಿದ್ದಾರೆ. ಚೀಣವು ಈ ನಷ್ಟದಲ್ಲಿ ಪೂರ್ಣ ಭಾಗಿಯಾಗಿದೆ.

ಗಾಂಧಿಯವರು ಏಸಿಯದ ಮಹಾತ್ಮರು. ಅವರನಂತರವೂ ಅವರ ಧ್ಯೇಯ ಭಾವಿ ಜಗತ್ತಿಗೆ ಆದರ್ಶವಾಗಿ ಉಳಿಯುವುದು.

ಗಾಂಧಿಯವರ ನಿಧನದಿಂದ ದೇಶವನ್ನು ನಡೆಸುವ ಭಾರವೆಲ್ಲಾ ನೆಹ್ರು ಮತ್ತು ಪಟೇಲರ ಹೆಗಲ ಮೇಲೇರಿದೆ. ಭಾರತೀಯರೆಲ್ಲಾ ಒಗ್ಗಟ್ಟಾಗಿ ಸರ್ಕಾರಕ್ಕೆ ಬೆಂಬಲ ಕೊಡಬೇಕು. ಸರ್ಕಾರದವರು ಜಾತೀಯ ಸಂಸ್ಥೆಗಳನ್ನು ಬಹಿಷ್ಕರಿಸಿ ಅವನ್ನು ತುಳಿಯಬೇಕು. ಜಾತೀಯ ಸಂಸ್ಥೆಗಳು ರಾಷ್ಟ್ರ ಶತ್ರುಗಳು. ಭಾರತೀಯರು ಜಾತೀಯತೆಯ ಅಪಾಯವನ್ನು ಧೈರ್ಯದಿಂದ ಎದುರಿಸಬೇಕು.

“ನಮಗೆ ಗಾಂಧಿಯವರ ನೀತಿ ಜ್ಞಾನಬಲ ಈಗ ಪೂರ್ಣವಾಗಿ ಬೇಕಾಗಿತ್ತು. ಭಾರತರಾಷ್ಟ್ರ ಸಂಘಟಿತವಾಗಿ ಉಳಿಯಬೇಕು. ದೇಶದ್ರೋಹಕರವಾದ ದುಷ್ಟಶಕ್ತಿಗಳನ್ನೆಲ್ಲಾ ಎಲ್ಲರೂ ಸೇರಿ ತುಳಿಯಬೇಕು. [ಜಯಪ್ರಕಾಶ ನಾರಾಯಣ]

ಪ್ರಾರ್ಥನೆಗೆ ಹೋಗುತ್ತಿರುವಾಗ ಭಾರತದ ರಾಷ್ಟ್ರದ ಪಿತ, ಜಗತ್ತಿನ ಮಹಾವ್ಯಕ್ತಿ ಕೊಲೆಪಾತಕನ ಗುಂಡಿಗೆ ತುತ್ತಾದರು. ಇದು ನಮ್ಮ ಪರೀಕ್ಷಾಸಮಯ. ನಮ್ಮಲ್ಲಿ ಶಾಂತಿಯೂ ಔದಾರ್ಯವೂ ಬೆಳೆಯಲಿ. ಗಾಂಧಿಜಿಯವರು ಮನುಷ್ಯನ ಮನಸ್ಸಾಕ್ಷಿಯಾಗಿದ್ದರು. ಪ್ರತಿಯೊಬ್ಬರೂ ತಮ್ಮ ಮನಸ್ಸಾಕ್ಷಿಯನ್ನು ತುಳಿಯುತ್ತಾರೆ. ಅವರನ್ನು ಗುರುವೆಂದು ಭಾವಿಸಿರುವ ನಾವು ಅವರು ಅರ್ಧ ಮುಗಿಸಿಬಿಟ್ಟಿರುವ ಕಾರ್ಯವನ್ನು ಮುಂದುವರಿಸಬೇಕು. ತಮ್ಮ ಶಾಂತಿಸ್ಥಾಪನೆಯ ಕಾರ್ಯದಲ್ಲಿ ಅವರು ತೊಡಗಿರುವಾಗ ಅವರನ್ನು ಹೀಗೆ

ಕೊಂದುದು ನಮ್ಮ ದೇಶದ ದುರದೃಷ್ಟ. ಅವರ ಕಾರ್ಯವನ್ನು ನಾವು ಮುಂದುವರಿಸಬೇಕು. ಆ ಕಾರ್ಯವನ್ನು ಗಾಂಧಿಯುವರಿಗಿಂತ ಹಿಂದೆ ಇತರರು ಪ್ರಾರಂಭಿಸಿದ್ದರು. ಅವರನ್ನೂ ಅವರ ಕಾಲದ ಜನ, ನಾಶ ಮಾಡಿದರು. ಆದರೆ ಆ ಕಾರ್ಯ ಫಲಕಾರಿಯಾಗುತ್ತಿದೆ ಭಾರತದಲ್ಲಿ ಮಹಾತ್ಮ ಗಾಂಧಿಯುವರ ತತ್ತ್ವವನ್ನು ವಿರೋಧಿಸುವವರು ಅನೇಕರು ಇರುವುದು ನನಗೆ ಗೊತ್ತು. ಆದರೆ ಅವರು ಸ್ವಾತಂತ್ರ್ಯಪ್ರೇಮಿಗಳಾ ದರೆ, ಭಾರತಪ್ರೇಮಿಗಳಾದರೆ, ನಮ್ಮ ಹೊಸ ಸ್ವಾತಂತ್ರ್ಯದ ನಾಶವನ್ನು ಬಯಸದವರಾದರೆ, ಅವರು ಶಾಂತಿ ಶಿಸ್ತು ಔದಾರ್ಯಗಳೊಂದಿಗೆ ವರ್ತಿ ಸಲಿ. ಗಾಂಧಿ ಸ್ವರ್ಗಸ್ಥರಾದರು; ಗಾಂಧಿ ಅಮರರಾದರು. ಗಾಂಧಿ ಎಂದೆಂದಿಗೂ ಬಾಳ್ಗೆ.

[ಬಿ. ಜಿ. ಖೇರ್, ಬೊಂಬಾಯಿ ಮುಖ್ಯ ಮಂತ್ರಿ.

ಮಹಾತ್ಮ ಗಾಂಧಿಯುವರ ಮರಣದಿಂದ ಭಾರತದ ಮುಸಲ್ಮಾ ನರ ನಿಜವಾದ ಸ್ನೇಹಿತರು ಇಲ್ಲವಾದರು. ಜಗತ್ತಿನ ಶಾಂತಿಸ್ಥಾಪಕರು ಮರೆಯಾದರು. ಅವರ ಆದರ್ಶ ನಮಗೆ ಮಾರ್ಗದರ್ಶಕವಾಗಿ ಸ್ಫೂರ್ತಿ ಕೊಡಲಿ. [ಹೆಚ್. ಹೆಚ್. ಆಗಾಖಾನರ ಪರವಾಗಿ, ಅವರ ಮಂತ್ರಿ]

ಮಹಾತ್ಮ ಗಾಂಧಿ ಸ್ವರ್ಗಸ್ಥರಾದರು. ಆದರೆ ನಮ್ಮ ಹೃದಯ ದಲ್ಲಿರುವ ಗಾಂಧಿ ಎಂದಿಗೂ ಸಾಯುವವರಲ್ಲ. ಈ ದುಃಖದಲ್ಲಿ, ನಾವು ಏನು ಗಾಂಧಿ ಮಾಡಬೇಕೆಂದು ಬಯಸುತ್ತಿದ್ದರೋ, ಅದನ್ನೇ ಮಾಡ ಬೇಕು. ನಮಗೆ ಎಷ್ಟೇ ಕಷ್ಟಬರಲಿ, ಔದಾರ್ಯ ಪ್ರೀತಿ ಸೌಹಾರ್ದದ ಮಾರ್ಗವನ್ನು ಬಿಡಕೂಡದು.

[ಎಂ ಎಸ್. ಆಣೆ. ಬಿಹಾರ್ ಗವರ್ನರ್,]

ಗಾಂಧಿಜಿ ಹುತಾತ್ಮರಾದರು. ನನ್ನ ದುಃಖವನ್ನು ವರ್ಣಿಸಲು ನನಗೆ ಮಾತು ದೊರೆಯುವುದಿಲ್ಲ. ಈ ಪ್ರಾಂತ್ಯಕ್ಕೆಲ್ಲ ಹಾಗೆಯೇ. ಭಾರತಕ್ಕೆ ದೊರೆತಂಥ ನಾಯಕರು ಇತರ ದೇಶಗಳಿಗೆ ದೊರೆತಿಲ್ಲ. ಇತರ ದೇಶಗಳು ಇಂತಹ ನಾಯಕರಿಗಾಗಿ ಹುಡುಕುತ್ತಿದ್ದಾರೆ. ಆದರೆ ಅವರಿಗೆ ದೊರೆತಿಲ್ಲ. ಜಗತ್ತಿಗೇ ಪೂಜ್ಯರಾದ ಪರಿಶುದ್ಧ ಚರಿತ್ರ ರಾದ ಗಾಂಧಿ, ಈ ದೇಶಕ್ಕೆ ನಾಯಕರಾಗಿ ದೊರೆತುದು ಈ ದೇಶದ

ಪುಣ್ಯ. ಗಾಂಧಿಯವರು ಔದಾರ್ಯ ಸಹನೆ ಮಿತಿ ಪ್ರೇಮ ಇವುಗಳನ್ನು ಬೋಧಿಸಿದರು. ಭಾರತದ ಈ ಕಷ್ಟಕಾಲದಲ್ಲಿ ಅದೇ ಭಾರತಕ್ಕೆ ಬೇಕಾಗಿರುವುದು. ಮದರಾಸು ಪ್ರಾಂತದವರು ಅವರ ಬೋಧನೆಗಳನ್ನು ಒಪ್ಪಿ ನಮ್ಮ ಕೈಲಾದವುಟ್ಟಿಗೆ ಅವುಗಳನ್ನು ಅನುಸರಿಸಿದ್ದೇವೆ. ನಮಗೆ ಸ್ವಲ್ಪ ಜಯವೂ ಆಗಿದೆಯೆಂದು ಹೇಳಬಹುದು.

ಗಾಂಧಿಯವರು ಯಾವ ಗುರಿಗಾಗಿ ಬಲಿಯಾದರೋ ಅವು ನಮಗೆ ದಿನ ದಿನಕ್ಕೂ ಹೊಸ ಸ್ಫೂರ್ತಿಯನ್ನು ಕೊಡಲಿ. ಗಾಂಧಿಯವರು ನಿಧನರಾದರೂ ಅವರ ಕೀರ್ತಿ ತೇಜಸ್ಸು ಗೌರವ—ಎಲ್ಲವುಗಳಿಗಿಂತ ಹೆಚ್ಚಾಗಿ ಅವರ ಮೇಲುಪಂಕ್ತಿ, ಎಂದೆಂದಿಗೂ ನಮ್ಮಮುಂದೆ ಉಳಿಯುವುದು. ಗಾಂಧಿಯವರು ತಮ್ಮ ಧ್ಯೇಯಕ್ಕಾಗಿ ಮಡಿದರು. ಈ ಘೋರವಾದ ಪಾಪಕ್ಕೆ ಪ್ರಾಯಶ್ಚಿತ್ತ, ನಾವು ಎಲ್ಲಾ ಜಾತಿಗಳಿಗೂ, ರಾಜಕೀಯ ಪಂಗಡಗಳಿಗೂ, ಪ್ರೀತಿ ಸಹಾನುಭೂತಿ ಔದಾರ್ಯವನ್ನು ತೋರಿಸುವುದೇ ಆಗಿದೆ. [ಮದ್ರಾಸ್ ಗವರ್ನರ್ ಸರ್ ಆರ್ಚಿಬಾಲ್ಡ್ ನೈ]

ಯಾವ ರಾಜ್ಯದ ಗುಲಾಮಗಿರಿಯನ್ನು ತಪ್ಪಿಸಲು ಜಗತ್ಪೂಜ್ಯರಾದ ಗಾಂಧಿಜಿ ತಮ್ಮ ಬಾಳನ್ನೆಲ್ಲಾ ಸವೆಸಿದರೋ, ಆ ರಾಜ್ಯದಲ್ಲಿಯೇ ನಮ್ಮವರ ಕೈಯಿಂದಲೇ ಅವರ ಕೊಲೆಯಾಗಿದೆ. ನಾವೂ ದುಃಖಿಗಳಾಗಿ ಉಪವಾಸ ಪ್ರಾರ್ಥನೆ ಮಾಡೋಣ.

[ರಾಮಸ್ವಾಮಿ ರೆಡ್ಡಿಯಾರ್]

ಗಾಂಧಿಯವರ ದೇಹ ಮಾತ್ರ ಮರೆಯಾಗಿದೆ. ಆ ಕಾರಣದಿಂದಲೇ ನಾವು ನಿರುತ್ಸಾಹಿಗಳಾಗಕೂಡದು. ನಮ್ಮ ದೇಶಸೇವೆಯ ಧ್ಯೇಯ ಇನ್ನೂ ಹೆಚ್ಚು ದೃಢವಾಗಬೇಕು. [ಟಿ. ಪ್ರಕಾಶಂ]

ಮಹಾತ್ಮ ಗಾಂಧಿ, ನಿಧನರಾದರು. ಇದು ನಮ್ಮ ದೇಶಕ್ಕೂ ಜಗತ್ತಿಗೂ ದೊಡ್ಡ ಅಪವಾದ. ಈ ದುಃಖದಿಂದ ಜನತೆಗೆ ಉಂಟಾಗಿರುವ ಸಂಕಟ ವರ್ಣನಾತೀತವಾದುದು. ಈ ಕಷ್ಟಕಾಲದಲ್ಲಿ ನಾವು ಶಾಂತಿ ಶಿಸ್ತಿನಿಂದ ಇರೋಣ. [ಕಾಮರಾಜ ನಾಡರ್]

ಮಹಾತ್ಮ ಗಾಂಧಿಯವರ ಮರಣ ಸುದ್ದಿ ಸಿಡಿಲೆರಗಿದಂತೆ ಎರ

ಗಿದೆ. ಮನುಷ್ಯ ಜನಾಂಗಕ್ಕೆ ಇದು ಅತಿ ಕ್ರೂರವಾದ ಏಟು. ಈಗ ಮಾತಿಗೆ ಅವಕಾಶವಿಲ್ಲ ದೇವರು ಮನುಷ್ಯ ಜಗತ್ತನ್ನು ಕಾಪಾಡಲಿ. ನಾಳೆ ಮುಸಲ್ಮಾನರಾದಿಯಾಗಿ ಎಲ್ಲರೂ ಹರತಾಳ ಪ್ರಾರ್ಥನೆ ಉಪವಾಸ ಮಾಡಲಿ. [ಮಿ|| ಮಹಮ್ಮದ್ ಇಸ್ಮಾಯಿಲ್, ಮದ್ರಾಸ್]

"ಜಗತ್ತಿನ ತಳವೇ ಬಿದ್ದಂತೆ ನನಗೆ ಭಾಸವಾಗುತ್ತಿದೆ. ಇನ್ನು ದುಃಖಿಗಳ ದುಃಖವನ್ನು ಶಮನವಮಾಡುವರಾರು? ಅಳುವವರ ಕಣ್ಣೀರನ್ನೊರಸುವರಾರು? ನಮ್ಮ ಕಷ್ಟಗಳಲ್ಲೆಲ್ಲಾ ನಾವು ಅವರ ಕಡೆಗೆ ಸಲಹೆಗಾಗಿ ತಿರುಗುತ್ತಿದ್ದೆವು. ನಮ್ಮ ಆಶೆ ಯಾವಾಗಲೂ ಭಂಗವಾಗುತ್ತಿರಲಿಲ್ಲ."

"ಭಾರತವೇ ರೋದಿಸು. ನಿನ್ನ ಹೃದಯ ಒಡೆಯುವವರೆಗೆ ರೋದಿಸು. ಸತ್ಯ ಧರ್ಮ ಪ್ರೇಮ, ದಳಿತರಲ್ಲಿಯೂ ದೀನರಲ್ಲಿಯೂ ಕರುಣೆ ತೋರಿದ ಬೆಳಕು ನಂದಿಹೋಯಿತು. ಅವರ ಬೋಧೆ ನಮಗೆ ಬೆಳಕಾಗಲಿ. ಆ ಶಾಂತಿ ಸಂದೇಶವನ್ನು ಆಚರಣೆಗೆ ತರಲು ಪ್ರಯತ್ನಿಸೋಣ."

ನಾವು ಮಾಡುತ್ತಿರುವುದನ್ನು ಗಾಂಧಿ ನೋಡುತ್ತಿದ್ದಾರೆ. ಅವರ ಕನಸಾದ ಹಿಂದು ಮುಸ್ಲಿಂ ಐಕ್ಯವನ್ನು ಸಾಧಿಸೋಣ. ಜನರೆಲ್ಲಾ ಒಂದು ಎಂಬುದನ್ನು ತೋರಿಸೋಣ. [ಹೆಚ್. ಎಸ್. ಸುಹ್ರವರ್ದಿ]

ಭಾರತ ರಾಷ್ಟ್ರಪಿತ, ಜಗತ್ತಿನ ವಿಭೂತಿಗಳಲ್ಲಿ ಒಬ್ಬರಾದ ಗಾಂಧಿಯವರ ನಿಧನದಿಂದ ಬಹಳ ದುಃಖಿತರಾಗಿದ್ದೇವೆ.

[ಕಾನ್ಸಿಟ್ಯೂಯೆಂಟ್ ಅಸೆಂಬ್ಲಿಯ ಮುಸ್ಲಿಂಲೀಗ್ ಸದಸ್ಯರು]

ನಮ್ಮ ದೇಶದ ಇತಿಹಾಸದಲ್ಲಿ ಈ ದಿನ ಶಾಶ್ವತ ದುಃಖದಿನ. ಭಾರತದ ಮತ್ತು ಪ್ರಪಂಚದ ಮೆಚ್ಚಿನ ನಾಯಕನನ್ನು ಕೊಂದುದು ಮನುಷ್ಯ ಪ್ರಪಂಚಕ್ಕೆ ಮಾಡಿದ ದೊಡ್ಡ ಅನ್ಯಾಯ. ಕೊಲೆಪಾತಕನ ಗುಂಡು ನಮ್ಮ ದೇಶದ ಇತಿಹಾಸದ ಪಟಗಳನ್ನು ರಕ್ತಕಲೆಗಳಿಂದ ಕಲುಷಿತ ಮಾಡಿದೆ. ಗಾಂಧಿಯವರ ಆದರ್ಶಕ್ಕಾಗಿ ನಮ್ಮ ಬಾಳನ್ನು ಮೀಸಲಾಗಿಡಬೇಕು. ಭಾರತದ ಹೃದಯ ಬಹಳ ನೊಂದಿದೆ. ದೇವರು ನಮಗೆ ಸನ್ಮಾರ್ಗವನ್ನು ತೋರಿಸಲಿ.

[ನವಾಬ್ ಜೆನ್ ಯಾರ್‌ಜಂಗ್‌ಬಹದ್ದೂರ್]

ಗಾಂಧಿಯವರ ನಿಧಿನದಿಂದ ಭಾರತದ ಆತ್ಮ ನಾಶವಾಯಿತು. ಗಾಂಧಿಯವರು ಯೋಗಿಯಾಗಿದ್ದರು. ಅವರಿಲ್ಲದ ಹುಲುಮಾನಿಸರಾದ ನಾವು ಇನ್ನು ಅನಾಥರು. [ನವಾಬ್ ಚತ್ತಾರಿ]

ಶಾಂತಿ ಸ್ಥಾಪನೆಗಾಗಿ ಹುತಾತ್ಮರಾದ ಭಾರತಜ್ಯೋತಿ ಗಾಂಧಿಯವರ ನಿಧನ ದುಃಖದಲ್ಲಿ, ಬ್ರಿಟನ್ನಿನವರ ಪರವಾಗಿ ನಮ್ಮ ಪೂರ್ಣ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತೇವೆ.

(ಸರ್‌ಮಾರಿಸ್‌ಗ್ವಾಯರ್ ಆರ್ಥರ್‌ಮೂರ್)

ಭಾರತ ರಕ್ಷಕನನ್ನು ಶಿಲುಬೆಗೇರಿಸಿಯಾಯಿತು. ಆ ಶಿಲುಬೆಯ ನೆರಳಲ್ಲಿ ನಾವು ಎಂದೆಂದಿಗೂ ನಡೆಯಬೇಕೆಂದು ಅವರು ಮಡಿದರು. ಮತ್ತಾವ ದೇಶಕ್ಕೂ ಮತ್ತಾವಾಗಲೂ ಇಂತಹ ಅಪಾಯ ಸಂಭವಿಸಲಿಲ್ಲ.

ನಮ್ಮ ದೀಪ ಆರಿರುವುದು ಮಾತ್ರವಲ್ಲ. ಜಗತ್ತಿನ ಅತಿ ಹೊಳಪಾದ ಆತ್ಮಜ್ಯೋತಿ ನಂದಿಹೋಯಿತು. ಅವರನ್ನು ಬಾಪು ಎಂದು ಕರೆದುದು ಸುಳ್ಳಲ್ಲ. ಅವರ ಮರಣದಿಂದ ಅನೇಕ ಕೋಟಿ ಜನ ಅನಾಥರಾಗಿದ್ದಾರೆ.

ಈ ರಾಷ್ಟ್ರ ದುಃಖಸಂದರ್ಭದಲ್ಲಿ, ಅವರ ತತ್ವಗಳಾದ ಅಹಿಂಸೆ ಸತ್ಯಗಳನ್ನು ಆಚರಣೆಗೆ ತರಲು, ದೇಶಸೇವೆಗೆ ಜೀವವನ್ನು ಸವೆಸಲು ಮತ್ತೆ ಪ್ರತಿಜ್ಞೆಮಾಡೋಣ.

(ಸೈಯದ್ ಹುಸೇನ್. ಈಜಿಪ್ಟಿನಲ್ಲಿ ಭಾರತ ರಾಯಭಾರಿ)

ಮಹಾತ್ಮ ಗಾಂಧಿಯವರ ಮರಣದಿಂದ ಜಗತ್ತು ಹೆಚ್ಚು ದರಿದ್ರವಾಯಿತು. ಜಗತ್ತಿನ ಅದ್ಭುತವ್ಯಕ್ತಿಯೊಬ್ಬರು ಮರೆಯಾದರು. (ಭೋಪಟ್ಕರ್. ಹಿಂದು ಮಹಾಸಭೆ).

ಭಾರತದ ಆತ್ಮ, ಸತ್ತಿತ್ತು. ನಾಳೆ "ಮಹಾತ್ಮಗಾಂಧಿ-ಭಾರತದ ಆತ್ಮ" ಎಂಬ ಪ್ರಾರ್ಥನಾ ಸಂದೇಶವನ್ನು ಸ್ವೀಡಿಷ್ ರೇಡಿಯೋ ವಿಸ್ತರಿಸುವುದು (ತೇಜ್ ಎರ್ಲಾಂಡರ್ ಸ್ವೀಡನ್ ಪ್ರೀಮಿಯರ್)

ಜಗತ್ತಿನ ಧ್ರುವತಾರೆ ನಂದಿಹೋಯಿತು. ಆದರೆ ನಿಜವಾಗಿ ಜ್ಯೋತಿ ನಂದಿಲ್ಲ. ಗಾಂಧಿ ಅಮೃತತತ್ವವನ್ನು ಹೊಂದಿದರು ನುಂದಲ

ಜನಾಂಗ, ಈ ಜಗದ್ಗುರುವಿನ ಸಂದೇಶವು-ಆತ್ಮಶಕ್ತಿಯು ಸಫಲವಾಗು ವುದನ್ನು ಆಸೆಯಿಂದ ನಿರೀಕ್ಷಿಸುವುದು.

(ಮಹಾತ್ಮ ಗಾಂಧಿಯವರ ಅಕಾಲಮರಣದಿಂದ, ಜಗತ್ತು ಈಗ ಅತ್ಯವಶ್ಯಕವಾದ ಒಬ್ಬ ನಾಯಕರನ್ನು ಕಳೆದುಕೊಂಡಿದೆ ಅವರ ಸಂದೇಶ ಶಾಶ್ವತವಾಗಿ ಉಳಿದು ಮನುಷ್ಯ ಪ್ರಪಂಚಕ್ಕೆ ಮಾರ್ಗದರ್ಶಕ ವಾಗುವುದರಲ್ಲಿ ಸಂದೇಹವಿಲ್ಲ.)

(ಸಿಲೋನಿನ ಮುಖ್ಯಮಂತ್ರಿ ಸೇನಾನಾಯಕ್)

ಭಾರತವು ರಾಷ್ಟ್ರಪಿತನನ್ನು ಕಳೆದುಕೊಂಡಿತು. ಜಗತ್ತು ನಾಯಕನನ್ನು ಕಳೆದುಕೊಂಡಿತು. ಮನುಷ್ಯ ಪ್ರಪಂಚ ಒಬ್ಬ ದೊಡ್ಡ ಗುರುವನ್ನು ಕಳೆದುಕೊಂಡಿತು. ಅಮೃತತ್ವವನ್ನು ಹೊಂದಿದ ಗಾಂಧಿ ಜೀವಿಸಿದ ಗಾಂಧಿಗಿಂತ ಹೆಚ್ಚು ಶಕ್ತರು. ಅವರ ಮರಣದಿಂದ ಭಾರತ ಬಯಸುತ್ತಿರುವ ಶಾಂತಿ ಅದಕ್ಕೆ ದೊರಕಲಿ. ಭಾರತದೊಂದಿಗೂ ಜಗತ್ತಿನೊಂದಿಗೂ ಈ ದುಃಖದಲ್ಲಿ ಸಮಭಾಗಿಯಾಗುವುದು ನಮ್ಮ ಕರ್ತವ್ಯ. ಮಹಾತ್ಮರ ಜೀವಿತ ನಮಗೆ ಆದರ್ಶವಾಗಲಿ. ಭಾರತ ಸರ್ಕಾರಕ್ಕೂ ಭಾರತೀಯರಿಗೂ ನಮ್ಮ ಅನುತಾಪವನ್ನು ವ್ಯಕ್ತಪಡಿಸು ತ್ತೇವೆ. (ಸರ್ ಆಲಿವರ್ ಸೂನೆತಿಲಕೆ. ಲೀಡರ್ ಸಿನೇಟ್‌ಹೌಸ್. ಸಿಲೋನ್)

ನಮ್ಮ ದೇಶಕ್ಕೆ ಈಗ ಇದಕ್ಕಿಂತ ಹೆಚ್ಚು ವಿನಾಶಕರವಾದುದು ಯಾವುದೂ ಇಲ್ಲ. ಅವರ ಜ್ಞಾನಪ್ರದವಾದ ಸಲಹೆಯೂ ಮಾರ್ಗ ದರ್ಶನವೂ ಇನ್ನು ನಮಗೆ ಇಲ್ಲ. ಆದರೆ ಈ ಹುತಾತ್ಮ ಯೋಗಿಯು, ತಮ್ಮ ಹಿಂದೆ ಜ್ಞಾನಭಂಡಾರವನ್ನೇ ಬಿಟ್ಟಿದ್ದಾರೆ. ನಾವು ಅದನ್ನು ಅನುಸರಿಸಬೇಕು. ಮೈಸೂರು ಅರಸರಿಗೆ ಅವರಿಂದ ಪದೇ ಪದೇ ಆಶೀರ್ವಾದ ಮಾರ್ಗದರ್ಶನ ಸಲಹೆಗಳನ್ನು ಹೊಂದುವ ಪುಣ್ಯ ದೊರೆ ತ್ತಿತ್ತು. ಈ ರಾಷ್ಟ್ರದುಃಖದ ಸಮಯದಲ್ಲಿ ನಾವೂ, ಮೈಸೂರು ಪ್ರಜೆಗಳೂ ಮಹಾತ್ಮಗಾಂಧಿಯವರ ನೆನಪಿಗೆ ನಮ್ಮ ಅಂಜಲಿ ಯನ್ನರ್ಪಿಸುತ್ತೇವೆ. (ಮೈಸೂರು ಮಹಾರಾಜರು)

ಭಾರತದ ನಾಯಕರು ನಮ್ಮ ಕಣ್ಣಿನಿಂದ ಮರೆಯಾದರು. ಈ

ಹುಚ್ಚು ಕೆಲಸದಿಂದ ದೇಶ ಅಂಧಕಾರದಲ್ಲಿ ಮುಳುಗಿದೆ. ಗಾಂಧಿಯವರು ನಮ್ಮ ನಡುವೆ ಇಲ್ಲ. ಆದರೆ ಅವರ ಆತ್ಮ ನಮ್ಮೊಂದಿಗೆ ಇದ್ದು ನಮಗೆ ಮಾರ್ಗದರ್ಶಕವಾಗುವುದು. ಈ ತ್ಯಾಗಿಯ ನೆನಪಿಗೆ ನಾವೂ ನಮ್ಮ ಪ್ರಜೆಗಳೂ ನಮಿಸುತ್ತೇವೆ. (ಪಾಟಿಯಾಲ ರಾಜರು)

ಭಾರತದ ಪುನರುಜ್ಜೀವನದ ಚರಿತ್ರೆಯೇ ಮಹಾತ್ಮಗಾಂಧಿಯವರ ಚರಿತ್ರೆ. ಗಾಂಧಿಯವರ ಕಾರ್ಯರಂಗ ಬರಿಯ ರಾಜಕೀಯ ಮಾತ್ರವೇ ಆಗಿರಲಿಲ್ಲ. ಜೀವನದ ಎಲ್ಲಾ ಅಂಗಗಳನ್ನೂ ಅದು ವ್ಯಾಪಿಸಿತ್ತು. ಗಾಂಧಿಯವರ ಧ್ಯೇಯಸಾಧನೆಗಾಗಿ ನಾವೂ ಮುಂದಲ ಜನಾಂಗವೂ ದುಡಿಯಬೇಕು. (ಗ್ವಾಲಿಯರ್ ರಾಜರು)

ದುಃಖದಿಂದ ಸ್ತಬ್ಧರಾಗಿದ್ದೇವೆ. ನಿಮ್ಮ (ದೇವದಾಸರ) ತಂದೆ ಅನಾಥರಿಗೆ ನಾಥ ಅವರ ಆದರ್ಶ ನಮಗೆ ಸ್ಫೂರ್ತಿಕೊಡಲಿ. [ಸರ್ ಆಕ್ಬರ್ ಹೈದರಿ-ಅಸ್ಸಾಂಗವರ್ನರ್.]

ಈ ಭಯಂಕರವಾದ ಸುದ್ದಿಯಿಂದ ನನಗೆ ದುಃಖವಾಗಿದೆ.
(ರೇನೆ ಮಾಸಿಗ್ಲಿ ಬ್ರಿಟನಿನ್ನ ಫ್ರೆಂಚ್ ರಾಯಭಾರಿ)

ಭಾರತಕ್ಕೆ ಅಮೆರಿಕದ ರಾಯಭಾರಿ ಡಾಕ್ಟರ್ ಗ್ರೇಡಿ, ಬ್ರಿಟನ್ನಿನ ಅಮೆರಿಕದ ರಾಯಭಾರಿ ವಾಲ್ಟೆಮೂರ್ ಜೆ ಗಾಲಿಮಾರ್, ಪಾಕಿಸ್ತಾನ್ ಹೈಕಮಿಶನರ್ ಹಬಿಬ್ ಇಬ್ರಾಹೀಂ ರಹಿಮುತ್ತುಲ್ಲಾ ಎಲ್ಲರೂ ದುಃಖವನ್ನು ವ್ಯಕ್ತಪಡಿಸಿದರು.

ಗಾಂಧಿಯವರ ಮೇಲೆ ನಡೆದ ಈ ಹತ್ಯದಿಂದ ನಾನು ಮಾತನಾಡಲಾರದಷ್ಟು ಸ್ತಂಭಿತನಾಗಿದ್ದೇನೆ. ನಂಬಹರ್ಲವಲ್ಲದುದೂ ಅಸಾಧ್ಯವಾದುದು ನಡೆದಿದೆ. ಈ ಅತ್ಯಂತ ಶುದ್ಧನೂ ಸಾತ್ವಿಕನೂ ಸ್ಫೂರ್ತಿದಾಯಕನೂ ಅಭ್ಯುತ್ಥಾನಕಾರಿಯೂ ಆದ ವ್ಯಕ್ತಿ ಒಬ್ಬ ಹುಚ್ಚನ ಗುಂಡಿಗೆ ಸಿಕ್ಕಿದುದನ್ನು ನೋಡಿದರೆ, ವಿಷಪಾನ ಮಾಡಿದ ಸಾಕ್ರಟೀಸನ ಮತ್ತು ಶಿಲುಬೆ ಏರಿದ ಏಸುವಿನ ಕಾಲದಿಂದ ಈಚೆಗೆ ಇಂದಿನವರೆಗೆ, ಮನುಷ್ಯನ ಸ್ವಭಾವ ಬದಲಾಯಿಸಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಜಗತ್ತು, ಸಾತ್ವಿಕರಿಗೆ ಎಂದು ಸುಗಮವಾಗುವುದೊ? ಜಗ

ತ್ತಿಗೂ ಎರಡು ಡೋಮಿನಿಯನ್‌ಗಳಿಗೂ ಚೆನ್ನಾಗಿ ತಿಳಿಯಲಿ; ನಾವು ಹಿಂಸೆಯ ಕೈವಾಡದಲ್ಲಿ ಸಿಲುಕಿ ನಾಶವಾಗದಿರಬೇಕಾದರೆ, ನಾವು ಮಹಾತ್ಮಾಗಾಂಧಿಯವರು ಯಾವ ಧ್ಯೇಯಕ್ಕಾಗಿ ಬಾಳಿದರೋ ಮಡಿದರೋ ಆ ಧ್ಯೇಯದಿಂದ ಮಾತ್ರ ಸಾಧ್ಯ.

ಸರ್ ಸರ್ವಪಲ್ಲಿ ರಾಧಾಕೃಷ್ಣನ್.

ಎಲ್ಲಾ ಪತ್ರಿಕೆಗಳೂ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಗಾಂಧಿಯವರ ಮರಣವಾರ್ತೆಯನ್ನೂ ಅವರ ಜೀವನ ಚರಿತ್ರೆಯನ್ನೂ ಅವರ ಚಟುವಟಿಕೆಗಳಿಗೆ ಸಂಬಂಧಿಸಿದ ಚಿತ್ರಗಳನ್ನೂ ಪ್ರಕಟಿಸಿದವು. “ಪ್ರತಿಯೊಂದು ದೇಶದಲ್ಲಿಯೂ ತಮ್ಮ ಜೀವಿತ ಕಾಲದಲ್ಲಿಯೇ ಪ್ರಸಿದ್ಧರಾಗುವವರು ಒಬ್ಬಿಬ್ಬರು ಮಾತ್ರ. ಅಂತವರ ಪೈಕಿ ಗಾಂಧಿ ಒಬ್ಬರು. ಜಗತ್ತಿನ ಶಾಂತಿಗಾಗಿ ಹೋರಾಡಿದ ಇವರ ಮರಣದಿಂದ ಜಗತ್ತಿನ ಸ್ವಾತಂತ್ರ್ಯ ಪ್ರೇಮಿಗಳು ಲಜ್ಜೆಯಿಂದ ತಲೆ ತಗ್ಗಿಸುವಂತಾಗಿದೆ. ಈ ಜಾತೀಯತೆಗೆ ಎದುರಾಗಿ ಅವರು ೫೦ ವರುಷಗಳಿಂದ ಕಾದಿದರು. ಆ ಪಿಶಾಚಿ ಶಕ್ತಿಗಳು ಅವರನ್ನು ಕೊನೆಗೆ ಆಹುತಿ ತೆಗೆದುಕೊಂಡವು. ಅವರ ತ್ಯಾಗಜೀವನವೂ ನಿರಾಡಂಬರ ವಾಗ್ಝುರಿಯೂ ವಿದ್ಯಾವಂತರನ್ನೂ ಆಕರ್ಷಿಸಿದವು. ಅವರು ನಿಜವಾಗಿ ಭಾರತದ ಆತ್ಮವೇ ಆದರು.”

೧೯೪೦-೪೫ರವರೆಗೆ ಇಂಡಿಯ ಸ್ಟೇಟ್ ಸೆಕ್ರಟರಿಯವರಾಗಿದ್ದ ಎಲ್ ಎಸ್. ಅಮೆರಿಯವರು ಗಾಂಧಿಯವ ಮೇಲೆ ಒಂದು ದೊಡ್ಡ ಲೇಖನವನ್ನು ಬರೆದು ಭಾರತೀಯರು ಇವರನ್ನು ಎಂದೆಂದಿಗೂ ತಮ್ಮ ಹೃದಯದಲ್ಲಿ ಪೂಜಿಸುವರೆಂದರು.

ಲಂಡನ್ ಸ್ತ್ರೀಯರೆಲ್ಲಾ ಶೋಕಗ್ರಸ್ತರಾದವು.

ಪೋರ್ಚುಗಲ್—ಎಲ್ಲಾ ಪೋರ್ಚುಗೀಸ್ ಪತ್ರಿಕೆಗಳೂ ಮಹಾತ್ಮಗಾಂಧಿಯವರ ಕಾರ್ಯರಂಗವನ್ನು ವಿವರಿಸಿ ದೊಡ್ಡ ದೊಡ್ಡ ಲೇಖನಗಳನ್ನು ಬರೆದವು. ಒಂದು ಪತ್ರಿಕೆ “ಮಹಾತ್ಮರನ್ನು ಕೊಂದವನು ನಿಜವಾಗಿ ಯುದ್ಧಪ್ರೇಮಿ” ಎಂದಿತು. ಸೆಕುಲೋ ಎಂಬ ಮತ್ತೊಂದು ಮುಖ್ಯ ಪತ್ರಿಕೆಯು ಕೊಲೆಪಾತಕನು ಈ ಕೃತ್ಯದಿಂದ

ಗಾಂಧಿಯವರ ಸತ್ಯಾಗ್ರಹ ತತ್ವಕ್ಕೆ ದ್ರೋಹಿಯಾದನು ಎಂದಿತು.

ಅಬಿಸೀನಿಯ –ಎಲ್ಲೆಲ್ಲೂ ದುಃಖ ಪ್ರದರ್ಶನ ಸಭೆಗಳಾದವು.

ಸಿಂಗಾಪುರ್—ಮಹಾತ್ಮ ಗಾಂಧಿಯವರ ಪ್ರತಿಮೆಯನ್ನು ಸ್ಥಾಪಿಸಬೇಕೆಂದು ತೀರ್ಮಾನಿಸಲಾಯಿತು.

ಕಾನಡ ಸಹಾನುಭೂತಿಯನ್ನು ಕಳುಹಿಸಿತು. ಕಾನಡ ಹೈಕಮಿಃಶನರು ಸಂದೇಶವನ್ನು ಭಾರತ ಸರ್ಕಾರಕ್ಕೆ ಮುಟ್ಟಿಸಿದರು.

ಪೋಲಂಡ್—ಎಲ್ಲಾ ಪತ್ರಿಕೆಗಳೂ ಮಹಾತ್ಮಗಾಂಧಿಯವರನ್ನು ಕುರಿತು ದುಃಖ ಲೇಖನಗಳನ್ನು ಪ್ರಕಟಿಸಿದುವು.

ಜರ್ಮನಿ—ಜರ್ಮನಿಯ ಪತ್ರಿಕೆಗಳು ಮಹಾತ್ಮಗಾಂಧಿಯವರ ದೊಡ್ಡ ದೊಡ್ಡ ಜೀವನ ಚರಿತ್ರೆ ಲೇಖನಗಳನ್ನು ಬರೆದವು.

ಗಾಂಧಿಯವರು ಒಬ್ಬರೇ ಭಾರತದಲ್ಲಿ ಜನಿಸಿದ ಆಧುನಿಕ ಯೋಗಿ ಮತ್ತು ವೇದಾಂತಿ. ಆತ್ಮಶಕ್ತಿಯಿಂದ ಇಂತಹ ಪ್ರಭಾವ ವನ್ನು ಬೀರುವುದು ಏಷ್ಯದಲ್ಲಿಯೂ ಭಾರತದಲ್ಲಿಯೂ ಮಾತ್ರ ಸಾಧ್ಯ. ಗಾಂಧಿಯಂತಹ ಅದ್ಭುತ ಪಶ್ಚಿಮದಲ್ಲಿ ಸಾಧ್ಯವಿಲ್ಲ ಇದರಿಂದ ಲಾದರೂ ಪೂರ್ವದೇಶದ ರಾಜಕೀಯದಲ್ಲಿ ತಾವು ಪ್ರವೇಶಿಸಬಾರ ದೆಂಬುದು ಪಾಶ್ಚಾತ್ಯನಿಗೆ ತಿಳಿಯಬೇಕು. (ಲಿನ್ ಯುಟಾಂಗ್)

ಫಿಲಿಪೈನ್ಸ್—ನಮ್ಮ ಕಾಲದಲ್ಲಿ ಗಾಂಧಿಯವರು ಸ್ವಾತಂತ್ರ್ಯದ ಮುಖ್ಯಜ್ಯೋತಿ. ಜಗತ್ತಿನ ಸ್ವಾತಂತ್ರ್ಯ ಪ್ರೇಮಿಗಳೆಲ್ಲಾ ಅವರಿಗಾಗಿ ದುಃಖಿಸುವರು. (ಪ್ರೆಸಿಡೆಂಟ್ ರೋಕ್ಸಾಸ್)

ಇರಾಕ್—ಹವಾನಾ, ಕೈರೊ ಟೆಹರಾನ್ ಇರಾಕ್ ಮುಂತಾ ದೆಡೆಗಳಲ್ಲೆಲ್ಲಾ ಪ್ರಜೆಗಳೂ ಸರ್ಕಾರಗಳೂ ದುಃಖಸಂದೇಶಗಳನ್ನು ಸಾರಿ ದವು. ಇರಾನ್ ರಿಜೆಂಟರು "ಗಾಂಧಿ ಜಗತ್ತಿನ ಶಾಂತಿ ಸ್ಥಾಪಕರಲ್ಲಿ ಅಗ್ರಗಣ್ಯರು. ಗಾಂಧಿಯವರ ಮರಣ ಭಾರತದ ನಷ್ಟ ಮಾತ್ರವಲ್ಲ. ಜಗತ್ತಿನ ನಷ್ಟ ಭಾರತಕ್ಕೆ ನನ್ನ ಪೂರ್ಣಸಹಾನುಭೂತಿ" ಎಂದರು.

ಪರದೇಶ ಮಂತ್ರಿಗಳಾದ ಹಮದಿ ಪಚಾಚಿಯವರು "ಗಾಂಧಿ ಸತ್ತಿಲ್ಲ. ಅವರ ಆದರ್ಶಗಳು ಎಂದೆಂದಿಗೂ ಉಳಿಯುವುವು. ಗಾಂಧಿ ಯವರ ಮಾರ್ಗವೇ ಜಗತ್ತಿನ ಶಾಂತಿಯ ಮಾರ್ಗ" ಎಂದರು.

ಕೈರೋ—"ಗಾಂಧಿಯವರ ಮರಣ, ದೊಡ್ಡ ದೊಡ್ಡ ಆದರ್ಶಗಳಿಗೆ ಏಟು." [ನಾಹಸ್ ಪಾಷಾ]

" ಆಫ್ರಿಕದ ನೀಗ್ರೋಗಳ ಪರವಾಗಿ, ಪೂರ್ಣ ಸಹಾನುಭೂತಿ. ಜಗತ್ತಿನ ಅದ್ಭುತ ವ್ಯಕ್ತಿಯ ಭೌತ ದೇಹದ ಅವಶೇಷದ ಮುಂದೆ ನಮಿಸುತ್ತೇವೆ. ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಆಫ್ರಿಕದ ಬಣ್ಣದವರಿಗೆ, ಗಾಂಧಿಯವರ ಜೀವನವೇ ಧ್ರುವತಾರೆ. ಭಾರತದ ಭವಿಷ್ಯ, ಆ ಉಜ್ವಲ ಭಾರತ ಪುತ್ರನಿಗೆ ಅರ್ಹವಾಗಲಿ."
[ಜೋಸಿ ಮಿಚೆಲ್, ಬಣ್ಣದವರ ಸಂಸ್ಥೆಯ ಸೆಕ್ರೆಟರಿ, ವಾಷಿಂಗ್‌ಟನ್]

ಜಗತ್ತು ದರಿದ್ರವಾಗಿದೆ. ಹಿಂಸೆಯ ಪ್ರಾಬಲ್ಯ ಕಳೆದ ಮೇಲೂ ಮಹಾತ್ಮ ಗಾಂಧಿಯವರ ಪ್ರಭಾವ ಉಳಿದೇ ಉಳಿಯುವುದು.
[ಡಾಕ್ಟರ್ ಹುಬರ್ಟ್ಸ್ ವಾನ್‌ಮುಕ್, ಬಟಾವಿಯ, ಡಚ್ ಸರ್ಕಾರ]

ಎರಡು ರಾಷ್ಟ್ರಗಳ ಹಿಂಸಾಶಕ್ತಿಯನ್ನೂ ಅಡಗಿಸುವ ಪ್ರಭಾವ ಮಹಾತ್ಮರಲ್ಲಿ ಮಾತ್ರ ಇತ್ತು. ಅವರ ಆತ್ಮಶಕ್ತಿ ಜಾತಿ ಮತಗಳ ಮೇರೆಯನ್ನು ಮೀರಿತ್ತು. [ಸ್ವಿಡ್‌ಸರ್‌ಲಂಡ ಪತ್ರಿಕೆಗಳು]

## ಗಾಂಧಿಯ ಮಾರ್ಗ ಸರಿ

ಯೇಸುಕ್ರಿಸ್ತ ಸರಿ ಎನ್ನುವುದಾದರೆ ಗಾಂಧಿಯೂ ಸರಿಯೇ. ಹಾಗೆ ಒಪ್ಪಿದಂದು ರೂಸವೆಲ್ಟ್, ಹಿಟ್ಲರ್,, ವ್ಯಾಲೆಸ್, ಟ್ಯಾಫ್ಟ್, ಟ್ರೂಮನ್, ಸ್ಟಾಲಿನ್—ಇವರೆಲ್ಲ ಒಟ್ಟಿಗೆ ಕೆಳಗೆ ಬೀಳುವರು. ಇದು ನಿಜವಾದರೆ, ಕಲ್ಪನೆಗೇ ಭಯವಾಗುವುದು ಚರ್ಚಿಲರ ವಿಶ್ವ ಸಾಮ್ರಾಜ್ಯದಾಹ, ಹಿಟ್ಲರನ ವಿಶ್ವದಾಸ್ಯ ಇವುಗಳಿಗಾದ ಗತಿ ನಾವು ನೋಡಿದ್ದೇವೆ. ಗಾಂಧಿಯ ಮಾರ್ಗ ಸರಿಯಾದರೆ, ಉಳಿದ ಮಾನವ ಕೋಟಿ ಪ್ರೇಮಧರ್ಮದಲ್ಲಿ ನಡೆದು ಬಾಳಿ ಉಳಿಯುವುದಾದೊಡೆ ಅಂದಿಗೆ, ಬಲಪ್ರಯೋಗದಿಂದಲೇ ಕಟ್ಟಿದ ಸಾಮ್ರಾಜ್ಯವಾದವೂ ಬಲಪ್ರಯೋಗದಿಂದಲೇ ಕಟ್ಟಬೇಕಾದ ಸಮತಾವಾದ (ಕಮ್ಯುನಿಸಂ) ಇವು—ಗಾಂಧಿಯವರ ಮಾರ್ಗ ಸರಿ ಎಂಬುದಕ್ಕೆ ಕಳಂಕಿತ ಸಾಕ್ಷ್ಯಗಳಾಗಿ ಉಳಿಯುವುವು.

[ಮಿಲ್ಟನ್ ಮೇಯರ್, ಲೇಖಕ]

## ದೇವ ಪುತ್ರ

ಗಾಂಧಿ ಮಡಿದಿಲ್ಲ ಗಾಂಧಿ ಬದುಕಿದ್ದಾರೆ. ದೇವರ ಮಕ್ಕಳು ಎಂದಿಗೂ ಮಡಿಯರು. [ಡೀನ್ ಕ್ಯಾಂಟರ್ಬರಿ]

## ಅಣು ಬಾಂಬು ಅಥವ ಗಾಂಧಿ

ಅಣು ಬಾಂಬು ಅಥವ ಗಾಂಧಿ? ಯಾರ ಭಕ್ತರಾಗಬೇಕೆಂದು ಬಯಸುವಿರಿ? ಆಯ್ದುಕೊಳ್ಳಿ. ಸತ್ಯವೇ ಜಗತ್ತಿನ ಚೇತನವೆಂದು ಗಾಂಧಿ ನಂಬಿದ್ದ. ಅದು ಖಡ್ಗದ ಮೊನೆಗಿಂತ ಪ್ರಬಲವಾದುದೆಂದು ಅವನು ನಂಬಿದ್ದ ದ್ವೇಷದ ಮಧ್ಯೆ ಪ್ರೇಮವಾಗಿ, ಸೇಡಿನ ನಡುವೆ ಕ್ಷಮೆಯಾಗಿ, ಕೆಡುಕಿನೆಡೆ ಒಳ್ಳೆಯವನಾಗಿ ಆತ ಬಾಳಿದ. ಯಾವುದು ದೇವರೋ ಅದೇ ಮನುಷ್ಯನ ಆತ್ಮದೊಳಗಿರುವ ಆತ್ಮ, ಅದು ಜಗತನ್ನು ಗೆಲ್ಲಬಲ್ಲದು. ಅದೇ ಗಾಂಧಿ ಕಂಡ ಬೆಳಕು. ಆ ಬೆಳಕನ್ನೇ ಆತ ಸತ್ಯವೆಂದು ಕಾಣಿಸಿದ. ನಾವು ಬದುಕಬೇಕಾದರೆ ಅದನ್ನೇ ಅಪ್ಪಬೇಕು. [ರೆವರೆಂಡ್ ಜಾನ್ ಹೋಮ್ಸ್, ನ್ಯೂಯಾರ್ಕ್]

## ಭೂಲೋಕದ ಸಂತರಲ್ಲಿ ಒಬ್ಬ

ಅಮೆರಿಕದ ಹಳ್ಳಿಯ ಶಾಂತವಾದ ನಮ್ಮ ಹೊಲ ಮನೆಯಲ್ಲಿ ಎಂದಿನಂತೆ ಬೆಳಗಾಯಿತು. ನಾವು ಮುಂಜಾನೆಯೇ ಎದ್ದಿದ್ದೆವು. ಏಕೆಂದರೆ ನಮ್ಮ ಮಕ್ಕಳು ದೂರದ ಶಾಲೆಗೆ ಹೋಗಬೇಕು. ಬೆಳಗಿನ ಫಲಹಾರ ತಿನ್ನಲು ನಾವೆಲ್ಲ ಮೇಜಿನ ಸುತ್ತ ಕುಳಿತು ನಿತ್ಯದ ಮಾತುಕಥೆಯಾಡುತ್ತಿದ್ದೆವು. ಹೊರಗೆ ಮಂಜು ದಟ್ಟವಾಗಿ ಬಿದ್ದಿತ್ತು. ಆಕಾಶ ಬೂದಿಯಾಗಿತ್ತು. ಮಂಜು ಇನ್ನೂ ಹೆಚ್ಚಾಗಿ ಬೀಳಬಹುದೆಂದು ಮಕ್ಕಳು ಆಶ್ಚರ್ಯಪಡುತ್ತಿದ್ದರು.

ನಮ್ಮ ಕುಟುಂಬದ ಯಜಮಾನರು ಕೋಣೆಯೊಳಕ್ಕೆ ಬಂದರು. ಗಂಭೀರ ಮುಖ. "ರೇಡಿಯೋ ಈಗತಾನೇ ಒಂದು ಭಯಂಕರ ಸುದ್ದಿ ಸಾರಿತು" ಎಂದರು.

ನಾವೆಲ್ಲ ಅವರ ಮುಖ ನೋಡತೊಡಗಿದೆವು. "ಗಾಂಧಿ ಸತ್ತು ಹೋದರು" ಎಂಬ ಘೋರವಾದ ಮಾತು ನಮಗೆ ಕೇಳಿಸಿತು.

ಭಾರತದಿಂದ ಅನೇಕ ಸಹಸ್ರ ಮೈಲಿ ದೂರದಲ್ಲಿರುವ ಅಮೆರಿಕದ ಸಂಸಾರವೊಂದಕ್ಕೆ ಆ ಮಾತುಗಳನ್ನು ಕೇಳಿ ಹೇಗೆ ಆಯಿತೆಂಬುದನ್ನು ಭಾರತೀಯರಿಗೆ ತಿಳಿಸುವುದು ನನ್ನ ಇಷ್ಟ. ಮುಂದೆ ಮನಸ್ಸನ್ನು ತಳಮಳಗೊಳಿಸಿದ ವಿವರಗಳನ್ನೆಲ್ಲ ಕೇಳಿದೆವು. ಅದು ಸಾಧಾರಣ ವಾದ ಸಾವಲ್ಲ ಗಾಂಧಿ—ತನ್ನ ಜನಕ್ಕಾಗಿ ತನ್ನ ಬಾಳನ್ನು ಮುಡ ಪಾಗಿಟ್ಟ ಶಾಂತಿಪುರುಷ—ಕೊಲೆಯಾಗಿದ್ದಾರೆ. ನಮ್ಮ ಹತ್ತು ವರ್ಷದ ಹುಡುಗ ಕಣ್ಣೀರು ತುಂಬಿಕೊಂಡು ಹೇಳಿದ. "ಬಂದೂಕ ಮಾಡುವುದನ್ನು ಯಾರೂ ಕಲಿಯದೆ ಇದ್ದಿದ್ದರೆ ಚೆನ್ನಾಗಿತ್ತು!"

ನಮ್ಮಲ್ಲಿ ಯಾರೂ ಗಾಂಧಿಯವರನ್ನು ನೋಡಿರಲಿಲ್ಲ. ನಾವು ಭಾರತದಲ್ಲಿದ್ದಾಗ ಅವರು ಯಾವಾಗಲೂ ಸೆರೆಮನೆಗಳಲ್ಲಿಯೇ ಇರು ತ್ತಿದ್ದರು. ಆದರೆ ನಾವೆಲ್ಲ ಅವರನ್ನು ಬಲ್ಲೆವು. ಅವರು ನಮ್ಮ ಮನೆ ಯಲ್ಲಿಯೇ ವಾಸವಾಗಿದ್ದರೆ ಹೇಗೋ ಹಾಗೆ, ಮಕ್ಕಳಿಗೆಲ್ಲ ಅವರ ಪರಿ ಚಯವಿತ್ತು. ನಮ್ಮ ಭಾಗಕ್ಕೆ ಅವರು ಭೂಲೋಕದ ಕೆಲವು ಸತ್ಪು ರುಷ (ಸಂತ) ರಲ್ಲಿ ಒಬ್ಬರಾಗಿದ್ದರು. ತಾವು ಯಾವುದನ್ನು ಸರಿ ಎಂದು ನಂಬಿದ್ದರೋ ಅದಕ್ಕಾಗಿ ಹೋರಾಡುವ ಕೆಲವು ಧೈರ್ಯಶಾಲಿಗಳಲ್ಲಿ ಅವರು ಒಬ್ಬರು.

ಅವರ ಬದುಕಿನಿಂದ ಹೊರಡುವ ಅರ್ಥವೇನು? ಅವರ ಮರಣ ದಿಂದ ಹೊರಪಡಬಹುದಾದ ಅರ್ಥವೇನು? ಎಂಬುದನ್ನು ಕುರಿತು ನಾವು ಮಾತನಾಡಿದೆವು. ಗಾಂಧಿ ಭಾರತದ ಜನರಲ್ಲಿ ಒಬ್ಬರಾದುದ ರಿಂದ ನಮಗೆ ಭಾರತದ ವಿಷಯದಲ್ಲಿ ಬಹಳ ಹೆಮ್ಮೆ. ಆದರೆ ಒಬ್ಬ ಭಾರತೀಯನೇ ಅವರನ್ನು ಕೊಂದನಲ್ಲ ಎಂಬ ಮರುಕ. ಅನಂತರ ಮೌನದಿಂದ ದುಃಖದಿಂದ ನಮ್ಮ ಕಾರ್ಯಗಳಲ್ಲಿ ತೊಡಗಿದೆವು.

ಅಮೆರಿಕದಲ್ಲಿ ಗಾಂಧಿಯವರ ವಿಷಯ ಎಷ್ಟು ಗೊತ್ತಿದೆ ಎಂಬುದು ತಿಳಿದರೆ ಭಾರತೀಯರಿಗೆ ಆಶ್ಚರ್ಯವಾಗಬಹುದು. ಒಂದು ಗಂಟೆಯ ಹಿಂದೆ ನಾನು ದಾರಿಯಲ್ಲಿ ಒಬ್ಬ ರೈತನನ್ನು ಕಂಡೆ. ಆತ ನನ್ನನ್ನು ತಡೆದು "ಪ್ರಪಂಚದಲ್ಲಿ ಪ್ರತಿಯೊಬ್ಬರೂ ಗಾಂಧಿ ಒಳ್ಳೆಯ ಮನುಷ್ಯ ನೆಂದು ನೆನೆದಿದ್ದರು. ಆತನನ್ನು ಏಕೆ ಕೊಂದರು?" ಎಂದು ಕೇಳಿದ.

ನಾನು ತಲೆಯಲ್ಲಾಡಿಸಿದೆ. ಆತ ನಿಟ್ಟುಸಿರು ಬಿಟ್ಟು "ಏಸುವನ್ನು ಕೊಂದ ರೀತಿಯಲ್ಲಿ ಅವನನ್ನು ಕೊಂದರೆಂದು ತೋರುತ್ತದೆ" ಎಂದ. ಅವನು ಹೇಳಿದುದು ನಿಜ. ಕ್ರಿಸ್ತನನ್ನು ಶಿಲುಬೆಗೆ ಏರಿಸಿದುದನ್ನು ಬಿಟ್ಟರೆ ಗಾಂಧಿಯವರ ಕೊಲೆಯಷ್ಟು ಅರ್ಥಪೂರ್ಣವಾದ ಘಟನೆ ಬೇರೆ ಯಾವುದೂ ಇಲ್ಲ. ಗಾಂಧಿಯವರ ಸಾವು ತನ್ನವರ ಕೈಯಿಂದಲೇ ಆದ ಮತ್ತೊಂದು ಶಿಲುಬೆಗೊಲೆ. ದುಃಖದಲ್ಲಿರುವುದು ನಮ್ಮ ಮನೆ ಮಾತ್ರವಲ್ಲ. ಪ್ರಪಂಚವೆಲ್ಲ. ಗಾಂಧಿಯವರನ್ನು ಕಣ್ಣಿನಿಂದ ಕಾಣದವರೆಲ್ಲ ಅವರಿಗಾಗಿ ಶೋಕಿಸುತ್ತಿದ್ದಾರೆ. ಅಪೂರ್ವ ಪ್ರಭಾವಾನ್ವಿತವಾದ ಗಳಿಗೆಯಲ್ಲಿ ಅವರು ಮಡಿದಿದ್ದಾರೆ.

ಗಾಂಧಿಯವರ ಬಗ್ಗೆ ಅತ್ಯುತ್ತಮವಾದ ಪೂಜ್ಯಭಾವ ಜನರಲ್ಲಿ ನೆಲೆಗೊಳ್ಳಲು ಮೊದಲಾಗಿತ್ತು. ಅವರ ಮಾರ್ಗ ಸರಿ ಎಂದು ನಮಗೆ ತೋರತೊಡಗಿತ್ತು. ಆ ಹೊಸ ಶಕ್ತಿಯನ್ನು ನಮ್ಮ ಪತ್ರಿಕಾ ಪ್ರಪಂಚ ಅರಿಯತೊಡಗಿತ್ತು. ಅದರಿಂದ ಭಾರತಕ್ಕೆ ಬಹಳ ಪ್ರಯೋಜನವಾಯಿತು. ರಾಷ್ಟ್ರ ರಾಷ್ಟ್ರಗಳ ಭಿನ್ನಾಭಿಪ್ರಾಯಗಳನ್ನು ಶಾಂತಿ ಸಂಧಾನ ಮಾರ್ಗದಿಂದ ಪರಿಹರಿಸಬೇಕೆಂದು ಗಾಂಧಿಯವರು ಹೋರಾಡುತ್ತಿದ್ದುದು ನಮ್ಮೆಲ್ಲರ ಮನಸ್ಸಿನ ಮೇಲೆ ಬಹಳ ಪರಿಣಾಮವುಂಟುಮಾಡಿತ್ತು

ನಾವು ಮಹಾತ್ಮ ಗಾಂಧಿಯವರಲ್ಲಿ ನಮ್ಮ ಆಕಾಂಕ್ಷೆಗಳನ್ನೆಲ್ಲ ಹುದುಗಿಸಿದ್ದೆವು. ಸುಮ್ಮನೆ ಆ ತೆಳ್ಳನೆಯ ಕನ್ನಡಕ ಧರಿಸಿದ್ದ ವ್ಯಕ್ತಿಯನ್ನು ಪೂಜಿಸುತ್ತಿದ್ದೆವೆಂದಲ್ಲ ಮಾನವನ ಬಾಳಿನ ಆಧಾರವಾದ ಮೂಲಭೂತ ಸತ್ಯವನ್ನು ಅವರು ಕಂಡುಕೊಂಡಿರುವರೆಂದು ನಾವು ಹೇಗೋ ನಂಬಿ ಆಸೆಯಿಟ್ಟುಕೊಂಡಿದ್ದೆವು. ಆತನ ಸಾವಿನಿಂದ ಸೋಲೇ ಗೆಲುವೆ ?—ಎಂಬುದನ್ನು ಭಾರತೀಯರು ಈಗ ನಮಗೆ ತೋರಿಸಬೇಕಾಗಿದೆ. ಗಾಂಧಿಯವರ ಮಾರ್ಗ ಸರಿ ಎಂದು ನಂಬಿದ ಜನರಲ್ಲಿ ಅವರ ಸಾವು ನವಶಕ್ತಿಯನ್ನೂ ದೃಢ ಸಂಕಲ್ಪವನ್ನೂ ತುಂಬುವುದಾದರೆ, ಭಾರತಕ್ಕೆ ಮಾತ್ರವಲ್ಲದೆ ಮಾನವ ಕೋಟಿಯಲ್ಲಿ ನಂಬಿಕೆಯುಳ್ಳ ನಮಗೆಲ್ಲ ಒಳ್ಳೆಯದು. ಅವರ ಮರಣದಿಂದ ನಿರಾಶೆ

ಮತ್ತು ಸೋಲು ಎನ್ನುವುದಾದರೆ ನಿಜವಾಗಿ ಜಗತ್ತಿನ ಮಾನವ ಜನಾಂಗವೇ ಸೋತಂತೆ. [ಪರ್ಲ್ ಬಕ್, ಸುಪ್ರಸಿದ್ಧ ಲೇಖಕಿ]

ವಿಶ್ವಜ್ಯೋತಿಗೆ ವಿಶ್ವ ವರ್ಷಿಸಿದ ಭಾಷ್ಪಾಂಜಲಿ, ಗಾಂಧಿಯ ವರನ್ನು ಪಡೆದ ನಾವು ಎಂತಹ ಧನ್ಯರೆಂಬುದನ್ನು ಸೂಚಿಸುತ್ತದೆ. ಇಂತಹ ವಿಭೂತಿಗೆ ಅರ್ಹರಾಗುವ ಯೋಗ್ಯತೆ ನಮಗೆ ಉಂಟಾಗಲಿ.

---

*

# ೧೬ ಡೆಲ್ಲಿ ಡೈರಿ

## (೧)

ಭಾರತವು ೧೯೪೭ ನೆ ಆಗಸ್ಟ್ ಹದಿನೈದರಂದು ದೀರ್ಘಕಾಲದ ದಾಸ್ಯ ಶೃಂಖಲೆಯಿಂದ ಮುಕ್ತವಾಯಿತು. ನಿರ್ವೀರ್ಯರೂ ನಿಶ್ಶಕ್ತರೂ ಆಗಿದ್ದ ಭಾರತೀಯರು ಸ್ವಾತಂತ್ರ್ಯ ವಾತಾವರಣದ ಅಮೃತ ಕಣಗಳನ್ನು ಸೇವಿಸಿ ತೇಜಃಪುಂಜಗಳಾದ ಮನಸ್ಸು ಮೈಯುಳ್ಳವರಾಗಿ ಹಿಂದಲ ನೂರಾರು ವರುಷಗಳ ನಿರ್ಜೀವವಾಗಿದ್ದ ಬಾಳನ್ನು ಕೆಟ್ಟ ಕನಸಿನಂತೆ ಮರೆತರು. ಪುರಾತನವಾದರೂ ಚಿರನೂತನವಾದ ಭಾರತ ವೃಕ್ಷ, ಹಣ್ಣೆಲೆಗಳನ್ನು ಕೊಡವಿ ಹೊಸ ಹೊಸ ಆಸೆಗಳಂತೆ ಹುಟ್ಟುತ್ತಿರುವ ಚಿಗುರುಗಳೊಂದಿಗೆ ಮಾನವ ಜಗತ್ತಿನ ಕಲ್ಯಾಣಕ್ಕೆ ತನ್ನ ಭಾಗವನ್ನೂ ಅರ್ಪಿಸಲು ಸಿದ್ಧವಾಯಿತು ಅಶೋಕ ಚಕ್ರವರ್ತಿಯ ಕಾಲವನ್ನು ಬಿಟ್ಟರೆ ಭಾರತೀಯರು ಹೀಗೆ ತಲೆ ಎತ್ತಿಕೊಂಡು ನಿಂತುದು ಈಗಲೇ.

ಆದರೆ ಭಾರತಕ್ಕೆ ದೊರೆತ ಈ ಸ್ವಾತಂತ್ರ್ಯದ ಬೆಲ್ಲದ ಜತೆಯಲ್ಲಿ ಬೇವೂ, ಅಮೃತದ ಕೂಡ ಹಾಲಾಹಲವೂ, ಸುಖವನ್ನು ಬೆನ್ನ ಹಿಂದೆ ನಿಂತು ಅಣಕಿಸುವ ದುಃಖದಂತೆ, ನೆರಳುಗಳಾದವು. ಮನುಷ್ಯ ಜಗತ್ತೆಲ್ಲವೂ ಒಂದೇ ಜಾತಿ ಎಂಬುದನ್ನು ಅನಾದಿಕಾಲದಿಂದ ಬೋಧಿಸಿದ ಸನಾತನ ಋಷಿಗಳ ಪಂಕ್ತಿಯಲ್ಲಿ ಕಿರೀಟವಾಗಿ ಹೊಳೆಯುತ್ತಿರುವ ಮಹಾತ್ಮ ಗಾಂಧಿಯವರ ಅಹಿಂಸಾ ಮಾರ್ಗದಲ್ಲಿ ಇಪ್ಪತ್ತೈದು ವರುಷ ಪಳಗಿದರೂ, ಪರಕೀಯರ ಕುತಂತ್ರದಿಂದ ಭಾರತ ಸ್ವಾತಂತ್ರ್ಯದ ಅಮೃತ ಮಂಥನದಲ್ಲಿ ಜನಿಸಿದ ಜಾತೀಯತೆಯ ವಿಷಕ್ಕೆ ಭಾರತೀಯರು ತುತ್ತಾದರು. ನೂರಾರು ವರುಷಗಳಿಂದ ಸಮಾಜದಲ್ಲಿ ನಾನಾ ಬಗೆಯ ಏರುಪೇರು, ಮೇಲುಕೀಳು ವ್ಯತ್ಯಾಸಗಳನ್ನು ಬೆಳೆಸುತ್ತಾ ಬಂದಿದ್ದ ಆಂಗ್ಲ ಸರ್ಕಾರ, ಸ್ವಾತಂತ್ರ್ಯದೊಂದಿಗೆ ಭಾರತವನ್ನು ಭಾಗಿಸಿ, ಭಾರತೀಯರಾಗಿದ್ದವರನ್ನು ರಾಜಕೀಯ ದೃಷ್ಟಿಯಿಂದ ಹಿಂದೂಸ್ಥಾನಿ, ಪಾಕಿಸ್ಥಾನಿ ಎಂದು ಸ್ಪಷ್ಟವಾಗಿ

ಎರಡು ಭಾಗ ಮಾಡಿತು. ಪ್ರಬಲವಾಗಿದ್ದ ಒಂದು ದೊಡ್ಡ ರಾಷ್ಟ್ರವನ್ನು ಹೀಗೆ ಎರಡಾಗಿ ಒಡೆದು ಅದರ ಶಕ್ತಿಯನ್ನು ಕುಗ್ಗಿಸುವುದು ಇಂಗ್ಲೆಂಡು ಅಮೆರಿಕ ಮೊದಲಾದ ಬಂಡವಾಳ ಪ್ರಧಾನ ರಾಷ್ಟ್ರಗಳು ಯಾವಾಗಲೂ ನಡೆಸುತ್ತಿರುವ ತಂತ್ರ. ಇದರ ಜತೆಗೆ ಭಾರತದಲ್ಲಿ ಬ್ರಿಟಿಷರ ಪ್ರೋತ್ಸಾಹದಿಂದಲೇ ಬೆಳೆದಿದ್ದ ಮುಸ್ಲಿಮ್ ಲೀಗ್ ಸಂಸ್ಥೆಯ ರಾಜಕಾರಣ ಪಟುಗಳು ಭೋಧಿಸಿದ "ಹಿಂದೂಗಳದೇ ಬೇರೆ ರಾಷ್ಟ್ರ, ಮುಸಲ್ಮಾನರದೇ ಬೇರೆ ರಾಷ್ಟ್ರ" ಎಂಬ ಎರಡು ರಾಷ್ಟ್ರಗಳ ತತ್ವದಿಂದ, ೧೯೪೬ ರಲ್ಲಿ ತಾತ್ಕಾಲಿಕ ಸರ್ಕಾರ ಪಂಡಿತ್ ನೆಹ್ರು ರವರ ನೇತೃತ್ವದಲ್ಲಿ ಸ್ಥಾಪಿತವಾದ ಕೂಡಲೇ, ಜಾತೀಯ ಕಲಹದ ದ್ವೇಷಾಗ್ನಿ ದೇಶದಲ್ಲಿ ಭಯಂಕರವಾಗಿ ತಾಂಡವಾಡತೊಡಗಿತು. ಮುಸಲ್ಮಾನರು ಅಧಿಕ ಸಂಖ್ಯೆಯಲ್ಲಿರುವ ಪೂರ್ವ ಬಂಗಾಳದ ನವಖಲಿ ಜಿಲ್ಲೆಯಲ್ಲಿ, ಹಿಂದುಗಳ ಮೇಲೆ ಅಮಾನುಷವಾದ ದೌರ್ಜನ್ಯಗಳನ್ನು ಎಸಗುವುದರ ಮೂಲಕ ಈ ಯಾದವೀ ಕಲಹ ಪ್ರಾರಂಭವಾಯಿತು. ಹಳ್ಳಿಗಳನ್ನು ಸುಡುವುದು, ಆಸ್ತಿಪಾಸ್ತಿಗಳನ್ನು ದೋಚುವುದು, ಬಲಾತ್ಕಾರವಾಗಿ ಮತಾಂತರಿಸುವುದು, ಸ್ತ್ರೀಯರನ್ನು ಬಲಾತ್ಕಾರದಿಂದ ಜಾತಿ ಬದಲಾಯಿಸಿ ಮದುವೆಯಾಗುವುದು, ಮಹಿಳೆಯರ ಮೇಲೆ ಅತ್ಯಾಚಾರ, ಕೊಲೆ, ಚಿತ್ರಹಿಂಸೆ, ದಿನ ದಿನವೂ ಈ ಘೋರವಾದ ಸುದ್ದಿಯಿಂದ ದೇಶ ತಲ್ಲಣಿಸಿತು. ಪೂರ್ವ ಬಂಗಾಳದ ಹಿಂದುಗಳು ಮನೆಮಠಗಳನ್ನು ಬಿಟ್ಟು ಓಡಿದರು. ಜಾತೀಯ ಕಲಹದ ವಿಷ ಅಲ್ಲಿಂದ ಬಿಹಾರಿಗೆ ಹಬ್ಬಿತು. ಪೂರ್ವ ಬಂಗಾಳದಲ್ಲಿ ಹಿಂದುಗಳಿಗೆ ಸಂಭವಿಸಿದುದೇ ಬಿಹಾರಿನಲ್ಲಿ ಮುಸಲ್ಮಾನರಿಗೆ ಸಂಭವಿಸಿತು. ಬೊಂಬಾಯಿ ಪಂಜಾಬು ಸಿಂಧ್ ಹೀಗೆ ಎಲ್ಲೆಲ್ಲಿಯೂ. ಅನೇಕ ವರ್ಷಗಳಿಂದ ಒಂದೇ ದೇಶದ ಪ್ರಜೆಗಳಾಗಿ ಒಂದೇ ದೇಶದ ಗಾಳಿ ನೀರನ್ನು ಕುಡಿದು ಅಣ್ಣ ತಮ್ಮಂದಿರಂತೆ ಜೀವಿಸಿದ್ದ ಜನ ಸುಂದೋಪಸುಂದರಂತೆ ಒಬ್ಬರ ಪ್ರಾಣವನ್ನು ಒಬ್ಬರು ಹೀರಲು ಕಾತರರಾಗಿದ್ದರು.

ಭಾರತದ ಸ್ವಾತಂತ್ರ್ಯಕ್ಕಾಗಿ, ಭಾರತದಲ್ಲಿ ಸುಖಶಾಂತಿಯ ರಾಮರಾಜ್ಯಕ್ಕಾಗಿ ದುಡಿದಿದ್ದ ರಾಷ್ಟ್ರಪಿತ ಮಹಾತ್ಮ ಗಾಂಧಿಯವರು

ಜಾತೀಯತೆಯ ಸೌಹಾರ್ದ ಸ್ಥಾಪನೆಯಾಗದಿದ್ದರೆ, ಈ ಸ್ವಾತಂತ್ರ್ಯದಿಂದ ಸುಖವಿಲ್ಲವೆಂದು ಕೊರಗಿದರು. ಅಪಾಯವು ಎದುರಾದಾಗ ಸುಮ್ಮನೆ ಕೊರಗುತ್ತಾ ಕುಳಿತಿರುವುದು ಗಾಂಧಿಯವರ ಸ್ವಭಾವವಲ್ಲ. ಯಾವ "ಮಾಡು ಅಥವ ಮಡಿ" ಎಂಬ ಮಾತಿನೊಂದಿಗೆ ಅವರು "ಭಾರತದಿಂದ ತೊಲಗಿ" ಎಂಬ ಮಂತ್ರವನ್ನು ಪ್ರಾರಂಭಿಸಿದ್ದರೋ, ಜಾತೀಯ ಕಲಹದ ದಾವಾನಲವನ್ನು ನಂದಿಸಲು ಅವರು ಆ ಮಂತ್ರವನ್ನು ತಮಗೇ ಪ್ರಯೋಗಿಸಿಕೊಂಡರು. "ಜಾತೀಯ ಗಲಭೆ ಎಲ್ಲಿದೆಯೋ ಅಲ್ಲಿ ಮಧ್ಯೆ ಪ್ರವೇಶಿಸಿ ಶಾಂತಿ ಮಾರ್ಗದಿಂದ ಪರಿಸ್ಥಿತಿಯನ್ನು ಸುಧಾರಿಸಬೇಕು. ಈ ಕಾರ್ಯದಲ್ಲಿ ತೊಡಗಿರುವಾಗ ಯಾವ ಅಪಾಯ ಬಂದರೂ ಸ್ವೀಕರಿಸಬೇಕು. ಮರಣ ಬಂದರೂ ಸ್ವಾಗತಿಸಬೇಕು ಜಾತೀಯ ಕಲಹದ ಅಗ್ನಿಗೆ ಇಂತಹ ಶಾಂತಿ ಸ್ಥಾಪಕರ ಆಹುತಿಯೇ ಶಮನ ! ಇದೇ ಮಾಡು ಅಥವ ಮಡಿ ಎಂಬುದರ ಅರ್ಥ"ವೆಂದು ಗಾಂಧಿಯವರು ವಿವರಿಸಿದರು ದೇಶದಲ್ಲಿ ಜಾತೀಯ ಒಗ್ಗಟ್ಟನ್ನು ಸ್ಥಾಪಿಸುವುದರ ಎದುರಿನಲ್ಲಿ ಉಳಿದ ಕಾರ್ಯಗಳೆಲ್ಲ ಅತ್ಯಲ್ಪವಾಗಿ ಗಾಂಧಿಯವರಿಗೆ ತೋರಿದವು. ಸರಿಯಾದ ಮಾರ್ಗ ಯಾವುದೆಂಬುದು ತೋರಿದ ಕೂಡಲೇ ಒಂದು ನಿಮಿಷವೂ ಸಾವಕಾಶಮಾಡದೆ ಅದನ್ನು ಅನುಸರಿಸುವುದು ಗಾಂಧಿಯವರ ಪದ್ಧತಿ. "ಸ್ವಾತಂತ್ರ್ಯ ರಾಜಕೀಯವಾದರೆ ಸಾಲದು ಅದು ಸಾಮಾಜಿಕವಾಗಿರಬೇಕು. ಭಾರತದಿಂದ ಪರಕೀಯರು ಮಾತ್ರವೇ ಅಲ್ಲ. ಸಾಮಾಜಿಕ ದೌರ್ಜನ್ಯಗಳೂ ಜಾತೀಯ ಕಲಹವೂ ತೊಲಗಬೇಕು. ಸ್ವಾತಂತ್ರ್ಯ ಸಂಪಾದನೆ ನನ್ನ ಕಿರೀಟವಾದರೆ ಜಾತೀಯ ಕಲಹ ನನ್ನ ಅವನತಿ" ಹೀಗೆ ಹೇಳಿಕೊಂಡು ಗಾಂಧಿಯವರು ತಮ್ಮ ರಾಜಕೀಯ ಕಾರ್ಯಗಳು ಎಷ್ಟೇ ಇದ್ದರೂ ಎಲ್ಲವನ್ನು ಮರೆತು ಪೂರ್ವ ಬಂಗಾಳಕ್ಕೆ ಹೊರಟು ಹೋದರು. ಅಲ್ಲಿಯ ಜನರ ಕರುಣಾಜನಕವಾದ ಸ್ಥಿತಿಯನ್ನು ನೋಡಿ ಗಾಂಧಿಯವರ ಹೃದಯ ದುಃಖದಿಂದ ನೀರಾಯಿತು "ಭಗವಂತ ಈ ಕಾಡುಗಿಚ್ಚನ್ನು ಆರಿಸುವ ಶಕ್ತಿಯನ್ನು ನನಗೆ ಕೊಡು. ಇಲ್ಲದಿದ್ದರೆ ನನ್ನ ಬಾಳನ್ನು ಮುಗಿಸು. ಭಾರತ ಸ್ವಾತಂತ್ರ್ಯಕ್ಕಾಗಿ

ನನ್ನ ಜೀವವನ್ನೇ ತೇದ ನಾನು, ಆ ಸ್ವಾತಂತ್ರ್ಯ ನಾಶವನ್ನು ನೋಡಲು ಬಾಳಲಾರೆ" ಎಂದು ನೊಂದರು. "ನಾವು ಮಾಡುತ್ತಿರುವುದು ಪರಮಾತ್ಮನ ಕಾರ್ಯ. ಈ ಕಾರ್ಯದಲ್ಲಿ ನಮಗೆ ಪರಮಾತ್ಮನ ಬಲವೇ ಬಲ. ಮನುಷ್ಯನಿಂದ ಯಾವ ಸಹಾಯವೂ ಆಗುವಂತಿಲ್ಲ. ಮಾಡಿ ಅಥವ ಮಡಿಯಿರಿ" ಎಂದು ಹೇಳಿ ಆ ೭೮ ವರ್ಷದ ವೃದ್ಧ ತಪಸ್ವಿ, ಪ್ಯಾರಿಲಾಲ್, ಡಾಕ್ಟರ್ ಸುಶೀಲನಯ್ಯಾರ್ ಮೊದಲಾದ ತಮ್ಮ ಆಪ್ತರನ್ನೆಲ್ಲಾ ಬೇರೆ ಬೇರೆ ಸ್ಥಳಗಳಿಗೆ ಶಾಂತಿಸ್ಥಾಪನೆಗೆ ಕಳುಹಿಸಿ ತಾವೊಬ್ಬರೇ ತಮ್ಮ ಗಂಟನ್ನು ಹೊತ್ತುಕೊಂಡು ನೀರಿನ ರಸ್ತೆಗಳಲ್ಲಿ, ದೋಣಿಗಳೇ ವಾಹನಗಳಾದ ಪೂರ್ವ ಬಂಗಾಳದ ಹಳ್ಳಿಗಳಲ್ಲಿ ಸಂಚರಿಸಿ ಹಿಂದುಗಳಿಗೆ ಧೈರ್ಯವನ್ನೂ ಸಹಾನುಭೂತಿಯನ್ನು ಬೋಧಿಸಿದರು. ಮುಸಲ್ಮಾನರಿಗೆ ಕರುಣೆಯನ್ನೂ ವಿವೇಕವನ್ನೂ ಬೋಧಿಸಿದರು. ಬೀಹಾರಿನ ಹಿಂದುಗಳಿಗೆ ಶಾಂತಿಯನ್ನು ಕಲಿಸಿದರು. ಹೀಗೆ ೧೯೪೭ ನೇ ಆಗಸ್ಟ್ ಹದಿನೈದರಂದು ಅರ್ಧರಾತ್ರಿಯಲ್ಲಿ ಭಾರತದ ಸ್ವಾತಂತ್ರ್ಯ ವೈಭವೋತ್ಸವ ಹೊಸ ಡಿಲ್ಲಿಯಲ್ಲಿ ಜರುಗುತ್ತಿರುವಾಗ ಗಾಂಧಿಯವರು, ನೊಂದ ಹೃದಯಗಳನ್ನು ಸಂತೈಸುತ್ತಾ ಪೂರ್ವ ಬಂಗಾಳದಲ್ಲಿ ತಿರುಗುತ್ತಿದ್ದರು. ಗಾಂಧಿಯವರ ಉಪವಾಸದಿಂದ ರಕ್ತ ಸಮುದ್ರವಾಗಿದ್ದ ಕಲ್ಕತ್ತ ಶಾಂತವಾಯಿತು. ಹಿಂದಲ ಕಾಲದ ಮಹರ್ಷಿಗಳ ಸಾನ್ನಿಧ್ಯದಲ್ಲಿ ಹುಲಿಯೂ ಹುಲ್ಲೆಯೂ ಒಂದೇ ತಟ್ಟೆಯಿಂದ ಹಾಲು ಕುಡಿಯುತ್ತಿದ್ದುವೆಂದು ಕೇಳಿದ್ದೇವೆ. ಹಾಗೆ ಗಾಂಧಿಯವರು ಇದ್ದೆಡೆ ಹಿಂದು ಮುಸಲ್ಮಾನ್ ಸಿಖರು ಶಾಂತರಾಗಿರುತ್ತಿದ್ದರು. ಲಾರ್ಡ್ ಮೌಂಟ್‌ಬೇಟನ್ನರು "ಭಾರತದಲ್ಲಿ ಇಬ್ಬರು ಗಾಂಧಿ ಇದ್ದಿದ್ದರೆ ಅಲ್ಲಿ ಜಾತೀಯ ಕಲಹವಿರುತ್ತಿರಲಿಲ್ಲ"ವೆಂದು ಹೇಳಿದುದರ ಅರ್ಥವೂ ಇದೆಯೇ.

ಆದರೆ ಕಲ್ಕತ್ತೆಯಲ್ಲಿ ಗಲಭೆಗಳು ಶಾಂತವಾದ ಕೂಡಲೇ ಗಾಂಧಿಯವರು ದಿಲ್ಲಿಗೆ ಬಂದರು. ಭಾರತ ಡೊಮಿನಿಯನ್‌ನ ರಾಜಧಾನಿಯಾದ ದಿಲ್ಲಿ ನಗರದಲ್ಲಿ ಹಿಂದು ಸಿಖ್ ಮುಸಲ್ಮಾನ ದ್ವೇಷ ಹತ್ತಿ ಉರಿಯುತ್ತಿದ್ದಿತು. ದಿನ ದಿನವೂ ಬರುತ್ತಿದ್ದ ಪಾಕಿಸ್ತಾನದ ಮುಸ

ಲ್ಮಾನರ ಅತ್ಯಾಚಾರದ ಸುದ್ದಿಗಳಿಂದ ದಿಲ್ಲಿಯ ಸಿಖ್‌ರೂ ಹಿಂದೂಗಳೂ ಹುಚ್ಚರಾಗಿದ್ದರು ಪೂರ್ವ ಪಂಜಾಬಿನಿಂದಲೂ ಇತರ ಭಾಗಗಳಿಂದಲೂ ಬಂದು ದಿಲ್ಲಿಯಲ್ಲಿ ನೆರೆದಿದ್ದ ನಿರಾಶ್ರಿತರದೇ ದೊಡ್ಡ ಸಮಸ್ಯೆಯಾಗಿತ್ತು. ದಿಲ್ಲಿಯಲ್ಲಿದ್ದ ಸ್ಥಳಗಳನ್ನೆಲ್ಲಾ ನಿರಾಶ್ರಿತರು ಆಕ್ರಮಿಸಿಕೊಂಡಿದ್ದರು. ಬೀದಿ ಬೀದಿಗಳೇ ಅವರ ಮನೆಗಳಾಗಿದ್ದವು. ಗಾಂಧಿಯವರು ದಿಲ್ಲಿಯಲ್ಲಿ ಯಾವಾಗಲೂ ಇಳಿದುಕೊಳ್ಳುತ್ತಿದ್ದ ವಾಲ್ಮೀಕಿ ಮಂದಿರ ಎಂದಿಗಿಂತಲೂ ಹೆಚ್ಚಾಗಿ ಜನ ನಿಬಿಡವಾಗಿದ್ದುದರಿಂದ ಅವರು ಬಿರ್ಲಾಭವನದಲ್ಲಿ ಉಳಿಯಬೇಕಾಯಿತು. ಬಿರ್ಲಾಭವನದಲ್ಲಿ ಗಾಂಧಿಯವರು ಪ್ರತಿ ದಿನವೂ ಸಂಧ್ಯಾಕಾಲ ಪ್ರಾರ್ಥನೆ ನಡೆಸುತ್ತಿದ್ದರು. ಆ ಪ್ರಾರ್ಥನೆಯಾದ ನಂತರ, ಹದಿನೈದು ನಿಮಿಷ ನೆರೆದಿದ್ದವರಿಗೆ ಬೋಧನೆ ಮಾಡುತ್ತಿದ್ದರು. ಮಹಾತ್ಮ ಗಾಂಧಿಯವರು ಭಾರತದ ಭಾಗ್ಯವಿಧಾತ; ಭಾರತದ ಇತಿಹಾಸದ ನಾಯಕರೇ ಅವರು. ಭಾರತ ದೇಶಕ್ಕೆ ಸಂಬಂಧಿಸಿದ ಸಮಸ್ತ ಪ್ರಶ್ನೆಗಳೂ ಅವರು ಇದ್ದಲ್ಲಿಯೇ ತೀರ್ಮಾನ. ಈ ಕಾರಣದಿಂದ ಅವರ ಪ್ರಾರ್ಥನಾನಂತರದ ಭಾಷಣಗಳಲ್ಲಿ ಸಾಧಾರಣವಾಗಿ ಭಾರತದ ಎಲ್ಲಾ ಸಮಸ್ಯೆಗಳೂ ಜಗತ್ತಿನ ಪ್ರಶ್ನೆಗಳೂ ವಿವರಿತವಾಗುತ್ತಿದ್ದವು. ಗಾಂಧಿಯವರು ಒಬ್ಬ ವ್ಯಕ್ತಿಯಾದದ್ದು ಎಂದೋ ಹೋಗಿ ಭಾರತಮಾತೆಯ ಮೂರ್ತಿಯೂ ಧ್ವನಿಯೂ ಆಗಿದ್ದುದರಿಂದ, ಅವರ ಆ ಸಾರ್ವಜನಿಕ ಭಾಷಣಗಳಲ್ಲಿ ಭಾರತೀಯರ ಆಸೆ ಆಕಾಂಕ್ಷೆ, ಸಾಂಪ್ರತ ಸ್ಥಿತಿ, ರಾಜಕೀಯ ವಿವರಣೆ, ನಿರಾಶ್ರಿತರ ಪ್ರಶ್ನೆ, ಸರ್ಕಾರಗಳ ಕರ್ತವ್ಯ, ಸ್ವತಂತ್ರಭಾರತದಲ್ಲಿ ಪ್ರಜೆಗಳ ಜವಾಬ್ದಾರಿ, ಜಗತ್ತಿನ ಮನ್ನಣೆಯನ್ನು ಗಳಿಸಬೇಕಾದರೆ ಎರಡು ಡೊಮಿನಿಯನ್‌ಗಳೂ ನಡೆದುಕೊಳ್ಳಬೇಕಾದ ಮಾರ್ಗ—ಇವೆಲ್ಲಾ ಕೂಲಂಕಷವಾಗಿ ಗಂಭೀರವಾಗಿ, ಅಖಿಲ ಮಾನವ ಜಗತ್ತಿನ ಕಲ್ಯಾಣಕ್ಕಾಗಿ ದುಡಿಯುತ್ತಿರುವ ಮಹರ್ಷಿಯ ದಿವ್ಯದರ್ಶನ ಕರುಣಾವಾಣಿಯಾಗಿ ನಿರೂಪಿತವಾಗುತ್ತಿದ್ದವು. ಪ್ರಕೃತಕ್ಕೆ ಯಾವ ಪ್ರಶ್ನೆ ಅತ್ಯಂತ ಮುಖ್ಯವಾದುದೋ ಅದೊಂದನ್ನೆ ಒತ್ತಿ ಒತ್ತಿ ಹೇಳುವುದು ಗಾಂಧಿಯವರ ಪದ್ಧತಿ. ತಮ್ಮ ಅಭಿಪ್ರಾಯ

ಜನರಿಗೆ ತಿಳಿಯಬೇಕೆಂಬುದೇ ಅವರ ಗುರಿಯಾಗಿದ್ದಿತೇ ಹೊರತು ತಮ್ಮ ಭಾಷಾ ಪ್ರೌಢಿಮೆ ಅಥವ ವಾಗ್ವೈಖರಿ ಪ್ರದರ್ಶನವಲ್ಲ. ಇಂದು ನಮ್ಮ ದೇಶದಲ್ಲಿ ಜಾತೀಯ ಸೌಹಾರ್ದದಷ್ಟು ಮುಖ್ಯವಾದ ಪ್ರಶ್ನೆ ಮತ್ತಾವುದೂ ಇಲ್ಲ. ಆದುದರಿಂದ ಗಾಂಧಿಯವರ ಭಾಷಣಗಳು ಸ್ವಾಭಾವಿಕವಾಗಿ ಆ ಪ್ರಶ್ನೆಯನ್ನೇ ಹೆಚ್ಚಾಗಿ ಕುರಿತುವಾಗಿವೆ. ಕಲ್ಕತ್ತದಲ್ಲಿ ಉಪವಾಸ ಮುಕ್ತಾಯ ಕಾಲದಲ್ಲಿ ಗಾಂಧಿಯವರು ಹೀಗೆ ಹೇಳಿದರು : “ ಈ ಶಾಂತಿಯನ್ನು ಕಾಪಾಡಿಕೊಂಡು ಹೋಗುವ ಭಾರ ಕಲ್ಕತ್ತದ ಪ್ರಜೆಗಳ ಮೇಲೆ ಇದೆ. ಸರ್ಕಾರದ ಭಯದಿಂದ ಉಂಟಾಗುವ ಶಾಂತಿಯಲ್ಲ ಬೇಕಾದುದು. ಪ್ರಜೆಗಳು ತಾವಾಗಿಯೇ ಶಾಂತಿಯನ್ನು ಉಳಿಸಿಕೊಳ್ಳಬೇಕು. ಹಾಗಾಗದಿದ್ದರೆ ನನಗೆ ಉಳಿದಿರುವ ಮಾರ್ಗ ಆಮರಣಾಂತ ಉಪವಾಸವೇ. ಈಗ ಕಲ್ಕತ್ತೆಯ ಪ್ರಜೆಗಳ ಹುಚ್ಚು ಬಿಡುಗಡೆಯಾದುದರಿಂದ ಪಾರಣೆ ಮಾಡುತ್ತೇನೆ. ಬಿಹಾರ್‌ನ ವಿಷಯಕ್ಕೂ ಹೀಗೆಯೇ ಮಾಡಿದೆ. ನವಖಲಿಗೂ ಹೀಗೆಯೇ ಮಾಡಿದೆ. ಈಗ ಕಲ್ಕತ್ತಕ್ಕೂ ಹೀಗೆಯೇ ಮಾಡುತ್ತಿದ್ದೇನೆ. ಇದರ ಹೊರತು ನನಗೆ ಬೇರೆ ಮಾರ್ಗವೇ ಇಲ್ಲ. ಕಲ್ಕತ್ತೆ ಶಾಂತವಾಗಿದ್ದರೆ ಆದರ ಫಲಗಳನ್ನು ಯೋಚಿಸಿ. ಆಗ ಪೂರ್ವ ಬಂಗಾಳಾ ಮತ್ತು ಪಶ್ಚಿಮ ಬಂಗಾಳಾ ಶಾಂತವಾಗಿರುವುದು. ಬಿಹಾರ್ ಮತ್ತು ಪಂಜಾಬ್ ಸಹ ಶಾಂತವಾಗುವುದು. ಈಗ ದೇವರು ನನ್ನನ್ನು ಪಂಜಾಬಿಗೆ ಕಳುಹಿಸುತ್ತಿದ್ದಾನೆ. ಪಂಜಾಬು ವಿವೇಕಿಯಾದರೆ, ಭಾರತವೆಲ್ಲಾ ಅದರ ಮಾರ್ಗವನ್ನೇ ಅನುಸರಿಸುತ್ತದೆ. ದೇವರು ಎಲ್ಲರಿಗೂ ಈ ಸದ್ಬುದ್ಧಿಯನ್ನು ಕೊಡಲಿ.”

ಮಹಾತ್ಮ ಗಾಂದಿಯವರು ೧೯೪೭ ನೆ ಸೆಪ್ಟಂಬರ್ ಹತ್ತರಿಂದ ೧೯೪೮ ನೆ ಜನವರಿ ೨೯ ರ ಪೂರ್ತಾ [ಗಾಂಧಿಯವರ ಕೊಲೆ ಜನವರಿ ೩೦ ನೆ ತಾರೀಖು] ಮಾಡಿದ ಪ್ರಾರ್ಥನಾನಂತರದ ಭಾಷಣವನ್ನು ನವಜೀವನ ಪ್ರಕಟನಕಾರರು ಡಿಲ್ಲಿ ಡೈರಿ ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಇದು ಬರಿಯ ಭಾಷಣಗಳ ವರದಿ ಮಾತ್ರವೇ ಅಲ್ಲ. ಆ ಐದು ತಿಂಗಳಿನ ಗಾಂಧಿಯವರ ಜೀವನ ಕ್ರಮದ ದಿನಚರಿಯೂ

ಹೌದು. ಭಾರತದ ಅವನತಿಯು ಕಾರಣದಿಂದ ಗಾಂಧಿಯವರ ಮನಸ್ಸಿನ ಮೇಲೆ ಉಂಟಾದ ವೇದನೆಯೂ ಸಹ ಈ ಡೈರಿಯನ್ನು ಓದುವವರಿಗೆ ಮಂದಟ್ಟಾಗುತ್ತದೆ. ಪ್ರತಿಯೊಂದು ಮಾತೂ ಪೂರ್ಣ ಶ್ರದ್ಧೆಯಿಂದ ಗಾಂಧಿಯವರ ಸತ್ಯಾನ್ವೇಷಣೆಯ ನೊಂದ ಹೃದಯದಿಂದ ಹೊರಬಿದ್ದುದಾಗಿದೆ. ಮಾತುಗಳ ಎಡೆಯಲ್ಲಿಯೇ ಗಾಂಧಿಯವರ ದುಃಖಾಶ್ರುವೂ ಕರುಣಾರಸವೂ ತೊಟ್ಟಿಕ್ಕುತ್ತಿರುವಂತೆ ಕಾಣುತ್ತದೆ. ಡಿಲ್ಲಿ ಡೈರಿಯಿಂದ ಕೆಲವು ಭಾಗವನ್ನು ಅನುವಾದ ಮಾಡಿಕೊಡುತ್ತೇನೆ.

(೨)

[ಗಾಂಧಿಯವರು ಡಿಲ್ಲಿಗೆ ಬಂದ ದಿನ ಅಲ್ಲಿ ಕರ್ಫ್ಯೂ ಜಾರಿಯಲ್ಲಿದ್ದಿತು. ಸರ್ದಾರ್ ಪಟೇಲರ ಮುಖದಲ್ಲಿ ಅವರಿಗೆ ಸ್ವಾಭಾವಿಕವಾಗಿದ್ದ ನಗುವೂ ಹಾಸ್ಯವೂ ಇರಲಿಲ್ಲ. ಗಾಂಧಿಯವರನ್ನು ಎದುರುಗೊಂಡ ಪೋಲೀಸಿನವರೂ ಸೈನಿಕರೂ ದಿಲ್ಲಿಯ ದುಃಖವಿಷಾದದ ಕುರುಹಾಗಿದ್ದರು. ನಗುನಗುತ್ತಿದ್ದ ಡಿಲ್ಲಿ ಸ್ಮಶಾನವಾಗಿತ್ತು. ಗಾಂಧಿಯವರ ಮೊದಲನೆಯ ಮಾತುಗಳೇ ನಿರಾಶ್ರಿತರನ್ನು ಕುರಿತುದಾಯಿತು]

## ೧. ನಿರಾಶ್ರಿತರು

"ನಿರಾಶ್ರಿತರ ಪ್ರಶ್ನೆ ಎದ್ದಿರುವುದೇ ಭಾರತ ಜನಾಂಗಕ್ಕೆ ಅವಮಾನ. ಕಾಯಿದೆ ಆಜಾಂ ಜಿನ್ನರೂ, ಲಿಯಾಖತ್ ಆಲಿಯವರೂ ಸರ್ದಾರ್ ಪಟೇಲ್ ನೆಹ್ರೂರವರೂ ತಮ್ಮ ರಾಷ್ಟ್ರಗಳಅಲ್ಪಸಂಖ್ಯಾತರನ್ನೂ, ಬಹುಸಂಖ್ಯಾತರನ್ನು ರಕ್ಷಿಸುವಂತೆಯೇ ರಕ್ಷಿಸುವುದಾಗಿ ಹೇಳಿಲ್ಲವೆ? ಇವು ಎರಡು ರಾಷ್ಟ್ರಗಳವರೂ ಆಡುತ್ತಿರುವ ಬರಿಯ ಸಿಹಿಯಾದ ಬಾಯಿಮಾತುಗಳೋ ಅಥವ 'ನಾವು ಅದರಂತೆ ನಡೆಯುತ್ತೇವೆ. ನಡೆಯದಿದ್ದರೆ ಆ ಪ್ರಯತ್ನದಲ್ಲಿ ಪ್ರಾಣಬಿಡುತ್ತೇವೆ" ಎಂಬುದನ್ನು ಜಗತ್ತಿಗೆ ತೋರಿಸಬೇಡವೆ? ಪಾಕಿಸ್ಥಾನದಿಂದ ಹಿಂದುಗಳೂ ಸಿಖರೂ ತಮ್ಮ ಮನೆಮಠಗಳನ್ನು ಬಿಟ್ಟು ಓಡಿಬರಲು ಕಾರಣವೇನು? ಕ್ವೆಟ್ಟ, ನವಾಬ್ ಷಾ, ಕರಾಚಿಗಳಲ್ಲಿ ಇಂತಹ ಅತ್ಯಾಚಾರಗಳು ಯಾಕೆ? ಪಶ್ಚಿಮ ಪಾಕಿಸ್ಥಾನದ ಕತೆಗಳನ್ನು ಕೇಳಿದರೆ ಹೃದಯ ಒಡೆದು ನೀರಾಗುವುದು. ಎರಡು ಪಕ್ಷಗಳವರೂ 'ನಾವೇನು ಮಾಡೋಣ ನಮ್ಮಿಂದ ತಪ್ಪಿಲ್ಲ. ಇದೆಲ್ಲಾ ಪೋಕರಿಗಳ ಕೆಲಸ' ಎಂದು

ಸಮಾಧಾನ ಮಾಡಿಕೊಂಡರೆ ಪ್ರಯೋಜನವಿಲ್ಲ. ತಮ್ಮ ರಾಷ್ಟ್ರದಲ್ಲಿರುವವರ ರಕ್ಷಣೆಯ ಭಾರವನ್ನು ಎರಡು ರಾಜ್ಯಗಳವರೂ ವಹಿಸಿಕೊಳ್ಳಬೇಕು. ಯಾಕೆ ಎಂದು ಕೇಳುವುದಲ್ಲ. ಮಾಡಬೇಕು ಮಡಿಯಬೇಕು. ಈಗ ಪರಕೀಯರು ಇಲ್ಲಿ ಆಳುತ್ತಿಲ್ಲ. ಆದಂತೆ ಆಗಲಿ ಎಂದು ನಾವು ಕುಳಿತಿರುವಂತಿಲ್ಲ. ಅಂದಮಾತ್ರಕ್ಕೆ ಇಲ್ಲಿ ನ್ಯಾಯವಾದ ಕಾನೂನಿನ ಆಡಳಿತಕ್ಕೆ ಧಕ್ಕೆ ಬರಕೂಡದು. ಆಗ ಜಗತ್ತಿನಲ್ಲಿ ತಲೆ ಎತ್ತಿ ತಿರುಗಲು ನಮಗೆ ನಾಚಿಕೆಯಾಗುವುದು. ಭಾರತದ ಮಂತ್ರಿಗಳು, ಪ್ರಜೆಗಳು ನ್ಯಾಯಬದ್ಧರಾಗಿ ನಡೆಯುವುದಿಲ್ಲವೆಂದು ಹೇಳಿ ನಿಶ್ಯಕ್ತಿಯನ್ನು ಪ್ರಕಟಿಸುವುದಕ್ಕಾಗುವುದೇ ! ಮಂತ್ರಿಗಳು ಆ ಪ್ರಯತ್ನದಲ್ಲಿ ತಮ್ಮ ಪ್ರಾಣವನ್ನೇ ಬಿಡಬೇಕು. ಅಪಜಯವನ್ನು ಒಪ್ಪಬಾರದು. ದಿಲ್ಲಿ ಸ್ಮಶಾನವಾಗಿ ಕಾಣುತ್ತಿದೆ. ನಾನು ಇಳಿದಿರುವ ಮನೆಯಲ್ಲಿ ಸಹ ಹಣ್ಣು ತರ್ಕಾರಿ ಇಲ್ಲ. ಯಾರೋ ಮುಸಲ್ಮಾನರು ಸುಬ್ಜಿಮಂಡಿಯಲ್ಲಿ ಬಂದೂಕ ಹಾರಿಸಿದ ಮಾತ್ರಕ್ಕೆ ಹಣ್ಣು ತರಕಾರಿಗಳಿಗೇ ದಿಲ್ಲಿಯಲ್ಲಿ ಅಭಾವವಾಗಬೇಕೇ ? ”

## ೨. ಸರ್ಕಾರವನ್ನು ನಂಬಿ

೧೯೧೫ ರಲ್ಲಿ ನಾನು ಪ್ರಿನ್ಸಿಪಲ್ ರುದ್ರರ ಮನೆಯಲ್ಲಿ ಇಳಿದಿದ್ದೆ. ರುದ್ರರು ಭಾರತದ ಪುತ್ರರಾಗಿದ್ದಂತೆ ಕ್ರಿಸ್ತನ ಪುತ್ರರೂ ಆಗಿದ್ದರು. ನನಗೂ, ಹಕೀಮ ಅಜಮುಲ್‌ಖಾನ್, ಡಾಕ್ಟರ್ ಅನ್ಸಾರಿ ಅವರಿಗೂ ಪರಿಚಯ ಮಾಡಿಸಿದರು. ಡಾಕ್ಟರ್ ಅನ್ಸಾರಿ ಮತ್ತು ಹಕಿಂ ಅಜಮುಲ್‌ಖಾನರು ಭಾರತೀಯರನ್ನೆಲ್ಲಾ ಸಮವಾಗಿ ಪ್ರೀತಿಸುತ್ತಿದ್ದರು. ಸಾವಿರಾರು ಬಡ ಹಿಂದುಗಳಿಗೆ ಹಕಿಂ ಅಜಮುಲ್‌ಖಾನರು ಉಚಿತವಾದ ಔಷಧಿ ಕೊಡುತ್ತಿದ್ದರು. ಅವರೇ ದಿಲ್ಲಿಯ ಸರದಾರರಾಗಿದ್ದರು. ಅಂತಹವರೆಲ್ಲ ಅಯೋಗ್ಯರೆ? ಡಾಕ್ಟರ್ ಜಕಿರ್‌ಹುಸೇನರು ಕೆಲವು ದಿನಗಳ ಮುಂಚೆ ಜಲಂಧರ್‌ಗೆ ಹೊರಟಾಗ ಅವರನ್ನು ಕೋಪಿಷ್ಠರಾದ ಸಿಖ್ಖರು ಕೊಲ್ಲುವುದರಲ್ಲಿದ್ದರು. ಅನೇಕ ಹಿಂದುಗಳು ವ್ಯಾಸಂಗ ಮಾಡಿದ ಜಮಿಯಾಮಿಲ್ಲಿಯ ಸಂಸ್ಥೆ ಸಹ ಹಿಂದುಗಳ ಆಕ್ರೋಶಕ್ಕೆ ಪಾತ್ರವಾಗುವುದರಲ್ಲಿತ್ತು. ಇದನ್ನೆಲ್ಲಾ ಕೇಳಿ ನಾನು ನಾಚಿಕೆಯಿಂದ

ತಲೆ ತಗ್ಗಿಸಿದೆ. ಡಾಕ್ಟರ್ ಅನ್ಸಾರಿ ಅವರ ಪುತ್ರಿ ಶ್ರೀಮತಿ ಜೊಹ್ರ ಮತ್ತು ಆಕೆಯ ಗಂಡ ಡಾಕ್ಟರ್ ಶೌಕತುಲ್ಲಾಖಾನ್‌ರು ಹಿಂದುಗಳ ಮತ್ತು ಸಿಖ್‌ರ ಭಯದಿಂದ ತಮ್ಮ ಮನೆಯನ್ನು ಬಿಟ್ಟು ಹೋಟಲಿನಲ್ಲಿದ್ದಾರೆ. ಇಂತಹ ಮುಸಲ್ಮಾನರು ನಿರ್ಭಯವಾಗಿ ಭಾರತದಲ್ಲಿರಲು ಸಾಧ್ಯವಾಗದಿದ್ದರೆ, ನಾನು ಬದುಕಲಾರೆ. ಎಲ್ಲಾ ಮುಸಲ್ಮಾನರೂ ಪಂಚಮದಳದವರೆಂದು ನನಗೆ ಅನೇಕರು ಹೇಳುತ್ತಾರೆ. ಒಂದೇ ಏಟಿಗೆ ಹಾಗೆ ಒಪ್ಪಲು ನಾನು ಸಿದ್ಧನಿಲ್ಲ. ಭಾರತದಲ್ಲಿ ನಾಲ್ಕುವರೆ ಕೋಟಿ ಮುಸಲ್ಮಾನರಿದ್ದಾರೆ. ಅವರೆಲ್ಲ ಪಂಚಮ ದಳದವರಾದರೆ, ಇಂಸ್ಲಾಂ ಗೋರಿಯನ್ನು ಅವರೇ ಅಗೆದಂತಾಯಿತು. ಜಿನ್ನಾರವರು, ಭಾರತದ ಮುಸಲ್ಮಾನರು ಭಾರತದ ಭಕ್ತರಾಗಿರಬೇಕೆಂದು ಹೇಳಿದ್ದಾರೆ. ಸರ್ಕಾರ ದೇಶದ್ರೋಹಿಗಳನ್ನು ಸರಿಯಾಗಿ ದಂಡಿಸುವುದು. ಪ್ರಜೆಗಳು ತಾವೇ ಕಾನೂನನ್ನು ಚಲಾಯಿಸಬಾರದು. ಸರ್ಕಾರದ ಕಣ್ಣಿನಿಂದ ಯಾವ ದೇಶದ್ರೋಹಿಯೂ ತಪ್ಪಿಸಿಕೊಳ್ಳಲಾರ. ಅಮೇರಿಯವರ ಮಗನಿಗೆ ಸಹ ಮರಣದಂಡನೆಯಾಯಿತು. ಅದು ನನ್ನ ಮಾರ್ಗವಲ್ಲ. ಆದರೆ ಸರ್ಕಾರ ದೇಶದ್ರೋಹಿಗಳಿಗೆ ಮಾಡುವ ಶಿಕ್ಷೆ ಮಾಡಿಯೇ ಮಾಡುತ್ತದೆ ಎಂಬುದಕ್ಕೆ ಉದಾಹರಣೆ. ಜನರು ಒಂದು ಕಡೆಯಿಂದ ಒಂದು ಕಡೆಗೆ ಬರುವುದು ಹುಚ್ಚು. ಪರಿಸ್ಥಿತಿ ಶಾಂತವಾದ ಕೂಡಲೇ ಅವರವರ ದೇಶಗಳಿಗೆ ಹೋಗಬೇಕು. ಎರಡು ರಾಷ್ಟ್ರಗಳೂ ತಮ್ಮ ತಮ್ಮ ತಪ್ಪುಗಳನ್ನು ನಿಸ್ಸಂಕೋಚವಾಗಿ ಒಪ್ಪಿಕೊಂಡು ಹೃದಯ ಶುದ್ಧಿಮಾಡಿಕೊಳ್ಳಬೇಕು. ಮುಸ್ಲಿಂ ನಿರಾಶ್ರಿತರಿಗಾಗಿ ನಿಧಿಯನ್ನು ಕೇಳುವ ಜಿನ್ನಾರವರ ಮನವಿಯಲ್ಲಿ ಪಾಕಿಸ್ಥಾನದ ದೌರ್ಜನ್ಯದ ಖಂಡನೆ ಇಲ್ಲದುದರಿಂದ ನಾನು ನೊಂದಿದ್ದೇನೆ. ಎರಡು ಸರ್ಕಾರಗಳೂ ತಮ್ಮ ದೇಶದ ಬಹುಮತದವರ ತಪ್ಪುಗಳನ್ನು ಸ್ಪಷ್ಟವಾಗಿ ಒಪ್ಪಿಕೊಳ್ಳಬೇಕು.

### ೩. ಶಾಂತಿಯಿರಲಿ

ಕೋಪದಿಂದ ಏನೂ ಪ್ರಯೋಜನವಿಲ್ಲ. ಇಂದಿನ ಅತ್ಯಾಚಾರಗಳಿಗೆಲ್ಲಾ ಕೋಪ ಮತ್ತು ಸೇಡಿನ ಮನೋಭಾವನೆಯೇ ಮುಖ್ಯ

ಕಾರಣ. ದಿಲ್ಲಿಯಲ್ಲಿ ನಡೆದುದರ ಸೇಡನ್ನು ಮುಸಲ್ಮಾನರೂ, ಗಡಿನಾಡು ಪಂಜಾಬಿನಲ್ಲಿ ನಡೆದುದರ ಸೇಡನ್ನು ಹಿಂದುಗಳೂ ಸಿಖ್ಖರೂ ತೀರಿಸಿಕೊಂಡರೆ ಏನು ಆದಂತಾಯಿತು? ಒಬ್ಬನಾಗಲಿ ಒಂದು ಗುಂಪಾಗಲಿ ಹುಚ್ಚರಾದರೆ ಎಲ್ಲರೂ ಹಾಗೆಯೇ ಆಗಬೇಕೆ? ಕೊಲ್ಲುವುದರಿಂದಲೂ ಲೂಟಿಮಾಡುವುದರಿಂದಲೂ ಅವರವರ ಧರ್ಮವೇ ನಾಶವಾಗುತ್ತದೆ ನನಗೆ ಎಲ್ಲಾ ಮತಗಳ ಪರಿಚಯವೂ ಇದೆ. ಯಾವ ಧರ್ಮವೂ ಈ ಹುಚ್ಚನ್ನು ಬೋಧಿಸುತ್ತಿಲ್ಲ. ಸ್ವಾತಂತ್ರ್ಯವೆಂಬ ಅಮೃತಫಲವನ್ನು ಅರಗಿಸಿಕೊಳ್ಳಲಾರದೆ ನೀವು ಕಳೆದುಕೊಂಡಿರೆಂದು ಮುಂದಲ ಜನಾಂಗ ನಿಮ್ಮನ್ನು ದೂರದಿರಲಿ. ಈ ಹುಚ್ಚನ್ನು ನೀವು ನಿಲ್ಲಿಸದಿದ್ದರೆ ಭಾರತದ ಧವಳಕೀರ್ತಿಗೆ ಜಗತ್ತಿನಲ್ಲಿ ತುಂಬ ಕುಂದಕವುಂಟಾಗುವುದು. ನಾನು ಮುದುಕ. ಬಹಳ ಅನುಭವಗಳನ್ನು ಹೊಂದಿದ್ದೇನೆ. ನನ್ನ ಮಾತನ್ನು ಕೇಳಿ. ಕೇಡಿಗೆ ಪ್ರತಿ ಕೇಡನ್ನು ಮಾಡುವುದರಿಂದ ಏನೂ ಪ್ರಯೋಜನವಿಲ್ಲ. ಒಳ್ಳೆಯದನ್ನು ನೂಡಿದವರಿಗೆ ಒಳ್ಳೆಯದನ್ನು ಮಾಡುವುದು ಹೆಚ್ಚಲ್ಲ. ಕೆಟ್ಟದ್ದು ಮಾಡಿದವರಿಗೆ ಒಳ್ಳೆಯದನ್ನು ಮಾಡಿ.

## ೪. ನಂಬಿಕೆಯಿಂದ ನಂಬಿಕೆ ಹುಟ್ಟುತ್ತದೆ.

ನಿಮ್ಮ ಸರ್ಕಾರವನ್ನು ನೀವು ನಂಬಿ. ನಿಮ್ಮ ಸರ್ಕಾರ ನಿಮಗೆ ನ್ಯಾಯವನ್ನು ಕೊಡುತ್ತದೆ. ತಪ್ಪಿತಸ್ಥರು ಎಷ್ಟೇ ಶಕ್ತರಾಗಿದ್ದರೂ ಅವರನ್ನು ಅಡಗಿಸುತ್ತದೆ. ಅಲ್ಪಸಂಖ್ಯಾತರ ಆಸ್ತಿಗಳನ್ನೂ ಹಿಂದಕ್ಕೆ ಕೊಡಿಸುತ್ತದೆ. ಸತ್ತವರನ್ನು ಬದುಕಿಸುವುದಂತೂ ಯಾವ ಸರ್ಕಾರಕ್ಕೂ ಸಾಧ್ಯವಿಲ್ಲ. ನ್ಯಾಯಬೇಕು ಎಂದು ಕೇಳುವವರು ತಾವು ನ್ಯಾಯವಾಗಿರಬೇಕು ಎದುರು ಪಕ್ಷ ಧರ್ಮವಾಗಿ ನಡೆಯಲಿ ಅಥವ ಬಿಡಲಿ ನಾವು ಧರ್ಮವಾಗಿರೋಣ. ದಿಲ್ಲಿಯಿಂದ ಓಡಿ ಹೋಗಿರುವ ಮುಸಲ್ಮಾನರನ್ನು ದಿಲ್ಲಿಯಲ್ಲಿಯ ಹಿಂದುಗಳು ಹಿಂದಕ್ಕೆ ಕರೆಯಬೇಕು. ಇದರಿಂದ ನಿರಾಶ್ರಿತರ ಸಮಸ್ಯೆ ಬಹಳಮಟ್ಟಿಗೆ ಪರಿಹಾರವಾಗುವುದು. ಪಾಕಿಸ್ಥಾನ ನಮ್ಮಲ್ಲಿ ಆಗ ನ್ಯಾಯವಾಗಿ ನಡಯಲೇಬೇಕು. ಜಗತ್ತೇ ನಮ್ಮನ್ನು ಮೆಚ್ಚುತ್ತದೆ. ನಂಬಿಕೆಯಿಂದ ನಂಬಿಕೆ ಹುಟ್ಟುತ್ತದೆ. ಲಕ್ಷಾಂತರ ಜನರು ಒಂದು ಕಡೆಯಿಂದ ಒಂದು

ಕಡೆಗೆ ಹೋಗುವುದನ್ನು ನಾನು ಸಹಿಸಲಾರೆ. ಅದು ತಪ್ಪು. ಪಾಕಿಸ್ಥಾನ ಮಾಡಿದ ಅನ್ಯಾಯವನ್ನು ನಾವು ಸರಿಪಡಿಸೋಣ. ಈ ಮಾತನ್ನು ನಾನೊಬ್ಬನೇ ಹೇಳುವವನಾದರೂ ನಾನು ಹೇಳುತ್ತೇನೆ.

## ೫. ಎಲ್ಲರಿಗೂ ಒಂದೇ ಸಂದೇಶ

ನಾನು ಹಿಂದು ಮುಸ್ಲಿಂ ಸಿಖ್ ಎಲ್ಲರ ಸೇವಕ. ನನ್ನ ಸಂದೇಶ ಎಲ್ಲರಿಗೂ ಒಂದೇ. ಭಾರತದ ಭಕ್ತನಾದ ಮುಸಲ್ಮಾನನು ಯಾರೇ ಆಗಲಿ ಭಾರತದಲ್ಲಿರಬಹುದು. ತಮ್ಮ ದೇಶ ಬಿಟ್ಟು ಬಂದಿರುವ ಸಿಖ್ಖರೂ ಹಿಂದುಗಳೂ ಪಾಕಿಸ್ಥಾನಕ್ಕೆ ಹಿಂದಿರುಗಬೇಕು. ಇಷ್ಟೊಂದು ಹಿಂದುಗಳೂ ಸಿಖ್ಖರೂ ಪಾಕಿಸ್ಥಾನದಿಂದ ಯಾಕೆ ಬರುತ್ತಿದ್ದಾರೆ! ಸಿಖ್ಖನಾಗಿರುವುದೇ ಪಾಕಿಸ್ಥಾನದಲ್ಲಿ ಅಪರಾಧವೇ? ಮುಸಲ್ಮಾನರು ಭಾರತವನ್ನು ಬಿಡಕೂಡದು. ಅವರು ಭಾರತದ ಭಕ್ತರಾಗಿದ್ದರೆ ಯಾರೂ ಅವರನ್ನು ಮಾತನಾಡಿಸುವುದಿಲ್ಲ, ಆಯುಧಗಳನ್ನು ಎಲ್ಲರೂ ಹಿಂದಿರುಗಿಸಬೇಕು. ಇಲ್ಲದಿದ್ದರೆ ಸರ್ಕಾರ ಕಿತ್ತುಕೊಳ್ಳಲಿ.

ಮುಸಲ್ಮಾನರು ಪಾಕಿಸ್ಥಾನಕ್ಕೆ ಹೋಗುವುದು, ಸರ್ದಾರ್ ಪಟೇಲರಿಗೆ ಒಪ್ಪಿಗೆ ಎಂದು ಕೆಲವರು ಹೇಳುತ್ತಾರೆ. ಇದು ಸುಳ್ಳು ಆದರೆ ಮುಸಲ್ಮಾನರಲ್ಲಿ ಬಹುಸಂಖ್ಯಾತರು ಭಾರತದ ಭಕ್ತರಲ್ಲವೆಂಬುದು ಸರ್ದಾರರ ನಂಬಿಕೆ. ಅಂತಹವರು ಪಾಕಿಸ್ಥಾನಕ್ಕೆ ಹೋಗಲಿ. ಆದರೆ ಸರ್ಕಾರದ ಈ ಸಂಶಯದಿಂದ ಅವರ ನೀತಿ ಬದಲಾಗುವುದಿಲ್ಲ. "ಭಾರತವು ನಮ್ಮ ದೇಶ. ಇದರ ರಕ್ಷಣೆಗಾಗಿ ಜಗತ್ತನ್ನೇ ಎದರಿಸುತ್ತೇವೆ" ಎಂಬ ಮುಸಲ್ಮಾನರು ಭಾರತ ಯೂನಿಯನ್ನಿನಲ್ಲಿ ಇರಲಿ. ಯಾರುಬೇಕಾದರೂ ಪಾಕಿಸ್ಥಾನಕ್ಕೆ ಹೋಗಬಹುದು. ಆದರೆ ಅವರು ತಮ್ಮ ಸ್ವಂತ ಇಚ್ಛೆಯಿಂದ ಹೋಗಲಿ. ಭಯದಿಂದಲ್ಲ. ದಿಲ್ಲಿಯ ಮುಸಲ್ಮಾನರೆಲ್ಲ "ನಾವು ಭಾರತ ಯೂನಿಯನ್ ಭಕ್ತರು" ಎಂದು ಬರೆದಿದ್ದಾರೆ. ಅವರನ್ನು ರಕ್ಷಿಸುವುದು ಸರ್ಕಾರದ ಕರ್ತವ್ಯ. ಭಾರತದ ಮುಸಲ್ಮಾನರು ತ್ರಿವರ್ಣ ಧ್ವಜವನ್ನು ಗೌರವಿಸಬೇಕು. ಬಹುಸಂಖ್ಯಾತರಾದ ಭಾರತದ ಹಿಂದುಗಳು ಮುಸಲ್ಮಾನರನ್ನು ಕರುಣೆಯಿಂದ ಕಾಣಬೇಕು. ಅವರಿಗೆ ಹೆದರಬಾರದು. ಅವರನ್ನು ಅವರವರ ಮನೆಗಳಲ್ಲಿ

ಸ್ಥಾಪಿಸಬೇಕು. ಭಾರತದ ಶಾಂತಿಗೆ ಇದೇ ದಾರಿ. ಈ ಔದಾರ್ಯಕ್ಕೆ ಹಿಂದೂಧರ್ಮ ಎಂದೆಂದಿಗೂ ಪ್ರಸಿದ್ಧವಾಗಿದೆ. ಎಲ್ಲರನ್ನೂ ತನ್ನ ರಕ್ಷಣೆಯಲ್ಲಿ ತೆಗೆದುಕೊಳ್ಳುವುದೇ ಹಿಂದೂಧರ್ಮದ ತಿರುಳು. ಒಳ್ಳೆಯದನ್ನು ಬಿತ್ತಿದರೆ ಒಳ್ಳೆಯದು ಬೆಳೆಯುತ್ತೆ; ಪ್ರೇಮವನ್ನು ಬಿತ್ತಿದರೆ ಪ್ರೇಮ ಬೆಳೆಯುತ್ತೆ. ದುಷ್ಟರನ್ನು ದೇವರ ಕೈಗೆ ಬಿಡಿ. ದೇವರು ಶಿಕ್ಷಿಸುತ್ತಾನೆ. ಇಲ್ಲದಿದ್ದರೆ ಭಾರತವೂ ಪಾಕಿಸ್ತಾನವೂ ಎರಡೂ ನಾಶವಾಗುವುದು. ಆ ಘಳಿಗೆಯನ್ನು ನೋಡಲು ನಾನು ಬದುಕುವುದಿಲ್ಲ. ಈ ಅಗ್ನಿಜ್ವಾಲೆಯನ್ನು ನಿಲ್ಲಿಸುತ್ತೇನೆ. ಇಲ್ಲದಿದ್ದರೆ ಆ ಪ್ರಯತ್ನದಲ್ಲಿ ಮಡಿಯುತ್ತೇನೆ. ಮುಸ್ಲಿಂ ಲೀಗ್ ಮಾಡಿದುದಕ್ಕೆ ಇದು ಪ್ರತಿ ಎನ್ನಬೇಡಿ. ಭಾರತದ ಪ್ರೇಮಿಯಾದ ನನಗೆ ಭಾರತೀಯರ ಅವನತಿಯನ್ನು ನೋಡಿ ತಲೆ ತಗ್ಗಿಸುವಂತಾಗಿದೆ.

## ೬. ಆಯುಧಗಳು

ಆಯುಧಗಳ ವಿಷಯದಲ್ಲಿ ಇಷ್ಟು ಬೊಬ್ಬೆ ಏಕೆ? ದಿಲ್ಲಿಯಲ್ಲಿಯೂ ಕೆಲವು ಆಯುಧಗಳು ಸಿಕ್ಕಿವೆ. ಕೆಲವರು ತಾವಾಗಿಯೇ ನನಗೆ ತಮ್ಮ ಆಯುಧಗಳನ್ನೂ ಒಪ್ಪಿಸಿದ್ದಾರೆ. ಎಲ್ಲಾ ಆಯುಧಗಳನ್ನೂ ಪತ್ತೆಮಾಡಿ; ಬೇಡವೆನ್ನುವುದಿಲ್ಲ. ಇದುವರೆಗೆ ಹುಡುಕಿದುದರಲ್ಲಿ ದಿಲ್ಲಿಯಲ್ಲಿ ಅಷ್ಟೊಂದು ಆಯುಧ ಸಿಕ್ಕಿಲ್ಲ. ಬ್ರಿಟಿಷರ ಕಾಲದದಲ್ಲಿಯೂ ಆಯುಧಗಳನ್ನಿಟ್ಟುಕೊಂಡಿದ್ದರು. ಆದರೆ ಆಗ ಯಾರೂ ಇಷ್ಟು ಗದ್ದಲಮಾಡಲಿಲ್ಲ. ಆಯುಧಗಳನ್ನು ಮುಚ್ಚಿಟ್ಟುಕೊಂಡಿರುವುದು ತಿಳಿದರೆ, ಖಂಡಿತ ಕಿತ್ತುಕೊಳ್ಳಿ. ಆದರೆ ಬರಿಯ ಗದ್ದಲ ಬೇಡ. ಬ್ರಿಟಿಷರು ಇದ್ದಾಗ ಒಂದು ನೀತಿ, ಈಗ ಒಂದು ನೀತಿ ಬೇಡ. ಒಬ್ಬನಿಗೆ ಶಿಕ್ಷೆಕೊಡಲು ಅವನ ಮೇಲೆ ಇಲ್ಲದ ಆಪಾದನೆ ಬೇಡ. ಅರವತ್ತು ವರುಷಗಳಿಂದ ಹೋರಾಡಿ ಸಂಪಾದಿಸಿರುವ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಯಾವ ಕಷ್ಟಬಂದರೂ ಸಹಿಸಲು ಸಿದ್ಧರಾಗಿರೋಣ. ಈ ಸಹನೆಯಿಂದ ನಾವು ಹೆಚ್ಚು ಧೀರರೂ ವಿವೇಕಿಗಳೂ ಆಗುತ್ತೇವೆ. ಬಹುಸಂಖ್ಯಾತರು ಅಲ್ಪ ಸಂಖ್ಯಾತರಲ್ಲಿ ಅಪನಂಬಿಕೆ ಇಡುವುದು ಹೇಡಿತನ. ಯಾರು ನಿಮ್ಮ ಶತ್ರುವೋ ಅವನೆದುರಿಗೆ ಧೈರ್ಯದಿಂದಿರಿ.

## ೭. ಸ್ತ್ರೀಯರ ಅಪಹರಣ

ಪಾಕಿಸ್ಥಾನದಲ್ಲಿ ಸ್ತ್ರೀಯರ ಅಪಹರಣ ಅಪಮಾನದಿಂದ ನನಗೆ ಬಹಳ ನೋವಾಗಿದೆ. ಆ ಸಾಧ್ವಿಯರಿಗೆ ಏನೇನು ಸಂಭವಿಸಿದೆಯೋ ದೇವರೇ ಬಲ್ಲ. ಮುಸ್ಲಿಂ ಮಹಿಳೆಯರ ಅಪಹಾರವೂ ಮಾನಭಂಗವೂ ಆಗಿದೆ ಪಾಕಿಸ್ಥಾನದಲ್ಲಿ ೨೫ ಸಾವಿರ ಹಿಂದು ಮಹಿಳೆಯರೂ ಪೂರ್ವ ಪಂಜಾಬಿನಲ್ಲಿ ೧೨ ಸಾವಿರ ಮುಸ್ಲಿಂ ಮಹಿಳೆಯರೂ ಅಪಹೃತರಾಗಿದ್ದಾರೆಂದು ಕೇಳಿದೆ. ಅಷ್ಟೊಂದು ಇರಲಾರದು ಎಂದು ಕೆಲವರು ಹೇಳುತ್ತಾರೆ. ಒಂದೇ ಒಂದು ಅಪಹಾರವಾದರೂ ನಾಚಿಕೆಯಿಂದ ತಲೆ ತಗ್ಗಿಸಬೇಕು. ಅಷ್ಟು ಮಹಿಳೆಯರನ್ನು ಅಷ್ಟು ಪುರುಷರು ಅಪಹರಿಸಿರಬೇಕು. ಹಾಗಾದರೆ ಅವರೆಲ್ಲಾ " ಗೂಂಡ " ಗಳೆಂದು ಹೇಳುವುದಕ್ಕಾಗುತ್ತದೆಯೇ ? ಅವರೆಲ್ಲರೂ ಸಮಾಜದಲ್ಲಿ ಯೋಗ್ಯರಾಗಿ ವೇಷಹಾಕಿಕೊಂಡು ತಿರುಗುವವರೇಯೆ. ಅವರಿಗೆ ಮಾನ ಮರ್ಯಾದೆ ಇಲ್ಲ. ಇಂತಹ ಸ್ತ್ರೀಯರ ಮತಾಂತರ ಮತಾಂತರವಲ್ಲ. ಅವರ ಮೇಲೆ ನಡೆದಿರುವ ಅತ್ಯಾಚಾರದ ಕಾರಣದಿಂದ ಅವರನ್ನು ತಿರಸ್ಕರಿಸಬಾರದು. ಸೀತೆಯಂತಹ ತೇಜಸ್ಸುಳ್ಳ ಹೆಣ್ಣನ್ನು ಯಾರಿಂದಲೂ ಮುಟ್ಟಲು ಸಾಧ್ಯವಿಲ್ಲ. ಆದರೆ ಈ ಕಾಲದಲ್ಲಿ ಸೀತೆಯಂತವರು ಅಪರೂಪ. ಆ ಮಟ್ಟಕ್ಕೆ ಏರುವುದು ಎಲ್ಲಾ ಮಹಿಳೆಯರಿಗೂ ಸಾಧ್ಯವಿಲ್ಲ. ಬಲಾತ್ಕಾರವಾಗಿ ಹೆಂಗಸಿಗೆ ಮಾನಭಂಗವಾದರೆ ಆಕೆ ನಾಚಿಕೆ ಪಡಬೇಕಾದ ಕಾರಣವಿಲ್ಲ. ಆಕೆ ಅಶುದ್ಧಳೂ ಅಲ್ಲ. ಅನೇಕ ಅಶುದ್ಧರಾದ ಸ್ತ್ರೀಪುರುಷರು ಶಿಕ್ಷೆಯನ್ನು ತಪ್ಪಿಸಿಕೊಳ್ಳುತ್ತಾರೆ. ಸುಸಂಸ್ಕೃತ ಸಮಾಜದಲ್ಲಿರುವ ಸ್ತ್ರೀಯರ ಅನೀತಿ ತಿಳಿಯುವುದೇ ಇಲ್ಲ. ಹೀಗಿರುವಲ್ಲಿ ಬಲಾತ್ಕಾರದ ಅತ್ಯಾಚಾರಕ್ಕೆ ಒಳಗಾದವರನ್ನು ಶಿಕ್ಷಿಸುವುದು ಅನ್ಯಾಯ. ಈ ಹಗೆತನದ ಮನೋಭಾವ ನನಗೆ ಬಹಳ ದುಃಖವನ್ನು ಉಂಟು ಮಾಡುತ್ತದೆ. ನನ್ನ ಹೆಂಡತಿಯಾಗಲಿ ಮಗಳಾಗಲಿ ಇಂತಹ ಬಲಾತ್ಕಾರ ದೋಷಕ್ಕೆ ತುತ್ತಾಗಿದ್ದರೆ ನಾನು ಅವರನ್ನು ತಿರಸ್ಕರಿಸುತ್ತಿರಲಿಲ್ಲ. ಇಂತಹ ಅನೇಕ ಹಿಂದು ಮತ್ತು ಮುಸ್ಲಿಂ ಸ್ತ್ರೀಯರನ್ನು ನಾನು ಕಂಡಿದ್ದೇನೆ. " ನೀವು ನಾಚಿಕೆಪಡಬೇಡಿ, ತಪ್ಪು ನಿಮ್ಮದಲ್ಲ " ಎಂದು ಹೇಳಿದ್ದೇನೆ.

ಒಬ್ಬ ಮುಸಲ್ಮಾನನಲ್ಲಿ ಅಪಹೃತರಾದ ಕೆಲವು ಹಿಂದು ಮಹಿಳೆಯರಿದ್ದಾರಂತೆ. ಅದೇ ಸಂಖ್ಯೆಯ ಮುಸಲ್ಮಾನ ಮಹಿಳೆಯನ್ನು ತಂದುಕೊಟ್ಟರೆ ಅವರನ್ನು ಬಿಡುವನಂತೆ; ಇದು ನಾಚಿಕೆಗೇಡಿನ ವ್ಯಾಪಾರ. ಮತ್ತೊಬ್ಬ ಮುಸಲ್ಮಾನನಲ್ಲಿ ಕೆಲವು ಹಿಂದು ಮಹಿಳೆಯರಿದ್ದಾರೆ. ಅವನಿಗೆ ಹಣದ ಪ್ರತಿಫಲ ಬೇಕಂತೆ. ಅಂದರೆ ಅವನ ತಪ್ಪಿಗೆ ಬಹುಮಾನವನ್ನು ಕೊಟ್ಟ ಹಾಗೆ ಆಯಿತು. ಮನುಷ್ಯಸ್ವಭಾವ ಈ ಮಟ್ಟಕ್ಕೆ ಇಳಿಯಬಹುದೆ? ಎರಡು ಡೊಮಿನಿಯನ್‌ಗಳೂ ತಮ್ಮ ತಮ್ಮ ವಶದಲ್ಲಿರುವ ಸ್ತ್ರೀಯರನ್ನು ಹಿಂದಕ್ಕೆ ಒಪ್ಪಿಸಬೇಕು. ಅಪಹೃತಳಾದ ಒಂದು ಹುಡುಗಿ ಇದ್ದರೂ ಅವರು ಸುಮ್ಮನಿರಲಾಗದು

## ೮. ಕಷ್ಟದಿಂದ ಶುದ್ಧರಾಗಿ

ನಿರಾಶ್ರಿತರು ಎಲ್ಲ ಕಾರ್ಯಗಳನ್ನು ಸರ್ಕಾರದಿಂದಲೇ ನಿರೀಕ್ಷಿಸಬಾರದು. ಈ ಸಮಸ್ಯೆ ಯಾವ ಸರ್ಕಾರಕ್ಕೂ ಕಷ್ಟ. ನಿರಾಶ್ರಿತರು ಸೋಮಾರಿಗಳು. ತಮ್ಮ ಸ್ವಂತ ಕೆಲಸ ಮಾಡಿಕೊಳ್ಳುವುದಕ್ಕೂ ಅವರು ಸಿದ್ಧರಾಗಿಲ್ಲ. ಎಲ್ಲವನ್ನೂ ಸರ್ಕಾರ ಒದಗಿಸುವುದು ಸಾಧ್ಯವಿಲ್ಲ. ನಿರಾಶ್ರಿತರಲ್ಲಿ ಪರಸ್ಪರ ಸಹಾನುಭೂತಿ ಸಹಕಾರ ಇರಬೇಕು. ಭಾರತದ ಜೀವನದಲ್ಲಿ ಅವರಿಂದ ಉಂಟಾಗಿರುವ ತೊಡಕನ್ನು ಅವರು ಅರ್ಥಮಾಡಿಕೊಳ್ಳಬೇಕು. ಇತರರಿಗಿಂತ ಹೆಚ್ಚಾಗಿ ಮತ್ತೊಬ್ಬರು ಏನನ್ನೂ ಬಯಸಬಾರದು. ಅವರು ಅನುಭವಿಸಿರುವ ಕಷ್ಟ, ಅವರನ್ನು ಪವಿತ್ರರನ್ನಾಗಿಯೂ ಶುದ್ಧರನ್ನಾಗಿಯೂ ಮಾಡಬೇಕು.

## ೯. ಯುದ್ಧ ಅನಿವಾರ್ಯವೇ ?

ನಾನು ಯಾವಾಗಲೂ ಎಲ್ಲಾ ಯುದ್ಧಕ್ಕೂ ವಿರೋಧಿ. ಆದರೆ ಪಾಕಿಸ್ಥಾನದಿಂದ ಮತ್ತಾವ ಮಾರ್ಗದಿಂದಲೂ ನಮಗೆ ನ್ಯಾಯ ದೊರಕದಿದ್ದರೆ, ಪಾಕಿಸ್ಥಾನ ತಾನು ಮಾಡಿದ ತಪ್ಪು ತಪ್ಪಲ್ಲವೆಂದೇ ಸಾಧಿಸುತ್ತಾ ಹೋದರೆ ಅದರ ಮೇಲೆ ಯುದ್ಧ ಮಾಡದೆ ವಿಧಿ ಇಲ್ಲ. ಯುದ್ಧವೆಂಬುದು ಹುಡುಗಾಟವಲ್ಲ. ಯುದ್ಧ ಯಾರಿಗೂ ಬೇಕಿಲ್ಲ. ಅದರಿಂದ ಸರ್ವನಾಶ. ಆದರೆ ಅನ್ಯಾಯವನ್ನು ಒಪ್ಪಬೇಕೆಂದೂ ಸಹಿಸಬೇಕೆಂದೂ ನಾನು ಯಾರಿಗೂ ಹೇಳುವುದಿಲ್ಲ. ಧರ್ಮವನ್ನು ಸ್ಥಾಪಿಸುವ ಪ್ರಯ

ತ್ಯಕ್ಕೆ ಹಿಂದುಗಳೆಲ್ಲಾ ನಾಶವಾದರೂ ನನಗೆ ಚಿಂತೆ ಇಲ್ಲ. ಯುದ್ಧ ಉಂಟಾದರೆ ಪಾಕಿಸ್ಥಾನದಲ್ಲಿರುವ ಹಿಂದುಗಳು ಪಂಚಮದಳವಾಗ ಕೂಡದು. ಪಾಕಿಸ್ಥಾನಭಕ್ತರಾದ ಭಾರತದ ಮುಸಲ್ಮಾನರೂ ಹಾಗೆಯೇ. ಅಂತವರು ಪಾಕಿಸ್ಥಾನಕ್ಕೆ ಹೋಗಿಬಿಡಲಿ. ಮುಸಲ್ಮಾನರು "ಹನ್ಸ್‌ಕೆಲಿಯ ಪಾಕಿಸ್ಥಾನ್, ಲಡಕೆ ಲೇಂಗೆ ಹಿಂದೂಸ್ಥಾನ್" ಎಂದು ಹೇಳುತಿದ್ದಾರೆಂದು ಕೆಲವರು ನನಗೆ ತಿಳಿಸಿದರು. ಇನ್ನು ಕೆಲವು ಮುಸಲ್ಮಾನರು ಹಿಂದೂಸ್ಥಾನವನ್ನೆಲ್ಲ ಇಸ್ಲಾಂ ಮಾಡಲು ಹವಣಿಸು ತ್ತಿದ್ದಾರೆ. ಪಾಕಿಸ್ಥಾನ ಹಿಂದುಸ್ಥಾನವನ್ನು ಯುದ್ಧಮಾಡಿ ಗೆಲ್ಲಲಾರದು. ಅದು ನಾನೆಪ್ರತಿಭಟಿಸುತ್ತೇನೆ. ಹಿಂದು ಧರ್ಮವನ್ನು ನಾಶಮಾಡಲು ಪಾಕಿಸ್ಥಾನಕ್ಕೆ ಸಾಧ್ಯವಿಲ್ಲ. ಹಿಂದುಗಳ ಧರ್ಮ ನಾಶವಾಗುವುದಾದರೆ ಹಿಂದುಗಳಿಂದಲೇ; ಇಸ್ಲಾಂ ಧರ್ಮ ನಾಶವಾಗುವುದಾದರೆ ಮುಸ ಲ್ಮಾನರಿಂದಲೇ.

## ೧೦. ಕಾಂಗ್ರೆಸ್ ಜಾತಿರಹಿತ ಸಂಸ್ಥೆ

ಪ್ರತಿಯೊಬ್ಬರೂ ತಮ್ಮ ಧರ್ಮವನ್ನು ಅನುಸರಿಸಿಕೊಂಡು ಹೋಗಲು ಅವಕಾಶವಿಲ್ಲದ ಸ್ವಾತಂತ್ರ್ಯ ಸ್ವಾತಂತ್ರ್ಯವೇ ಅಲ್ಲ. ಕಾಂಗ್ರೆಸ್ ಆಗಲಿ ಕಾಂಗ್ರೆಸ್ ಸರ್ಕಾರವಾಗಲಿ ಕಾಂಗ್ರೆಸ್ ಸದಸ್ಯ ರಾಗಲಿ ಜನರ ಧರ್ಮದಲ್ಲಿ ಪ್ರವೇಶಿಸಕೂಡದು. ನಮ್ಮನ್ನು ವಿಭಾಗಿ ಸುವ ಜಾತಿ ಮತಗಳಿಗಿಂತ ನಮ್ಮನ್ನು ಒಂದುಗೂಡಿಸುವ ಸಂದರ್ಭ ಗಳೇ ಹೆಚ್ಚಾಗಿದ್ದರೂ, ನಾವು ಜಾತಿಯ ಹೆಸರಿನಲ್ಲಿ ಕಾದಾಡುವುದು ದುರ್ದೈವ. ಕಾಂಗ್ರೆಸ್ಸು ಜಾತಿರಹಿತ ಸಂಸ್ಥೆ. ಅದರ ಆಶ್ರಯದಲ್ಲಿ ಎಲ್ಲಾ ಜಾತಿಯವರೂ ನಿರ್ಭಯದಿಂದಿರಬಹುದು.

## ೧೧. ವಾಗ್ದಾನಕ್ಕೆ ತಪ್ಪಬಾರದು

ಕಾಂಗ್ರೆಸ್ ಮಂತ್ರಿಗಳು ಅಧಿಕಾರಕ್ಕೆ ಬಂದಮೇಲೆ ಹಿಂದೆ ಮಾಡಿದ ವಾಗ್ದಾನಗಳನ್ನೆಲ್ಲಾ ಮರೆಯುತ್ತಿದ್ದಾರೆಂದು ನನಗೆ ಅನೇಕ ದೂರುಗಳು ಬಂದಿವೆ. ಅವರು ಏನು ವಾಗ್ದಾನ ಮಾಡಿದ್ದರೋ ನನಗೆ ಗೊತ್ತಿಲ್ಲ. ಭಾರತ ಸ್ವತಂತ್ರವಾಗಿದೆ. ಕೋಟ್ಯಾಂತರ ರೂಪಾಯಿಗಳ ಆಡಳಿತ ಮುಖಂಡರ ಕರಗತವಾಗಿದೆ. ಅವರು ಬಹಳ ಎಚ್ಚರಿಕೆ

ಯಿಂದಿರಬೇಕು. ಅವರು ಪ್ರಾಮಾಣಿಕರಾಗಿ ನಮ್ರರಾಗಿರಬೇಕು. ವಾಗ್ದಾನಕ್ಕೆ ತಪ್ಪಬಾರದು. ಮಾಡಲು ಸಾಧ್ಯವಾಗದುದನ್ನು ವಾಗ್ದಾನ ಮಾಡಲೇಬಾರದು. ಒಂದುಸಲ ವಾಗ್ದಾನ ಮಾಡಿದ ಮೇಲೆ ಎಂದೆಂದಿಗೂ ಆದರಂತೆ ನಡದೇತೀರಬೇಕು. ಇದು ಸರ್ಕಾರಕ್ಕೆ ಮಾತ್ರವೇ ಅನ್ವಯಿಸುವುದಿಲ್ಲ; ಎಲ್ಲರಿಗೂ ಅನ್ವಯಿಸುತ್ತದೆ.

ಪಂಡಿತ್ ಜವಹಿರ್‌ಲಾಲ್ ನೆಹ್ರು "ನಾನು ಮುಖ್ಯ ಮಂತ್ರಿಯಲ್ಲ, ಜನರ ಮೊದಲನೆಯ ಸೇವಕ" ಎಂದುಕೊಂಡರು. ಎಲ್ಲಾ ಅಧಿಕಾರಿಗಳೂ ಹಾಗೆ ಜನರ ಸೇವಕರೇ? ಹಾಗಿದ್ದರೆ ಅವರಿಗೆ ವೈಭವದಲ್ಲೂ ಸುಖದಲ್ಲಿಯೂ ಆಸೆ ಇರುವುದೇ ಇಲ್ಲ. ಅವರು ಯಾವಾಗಲೂ ಪ್ರಜೆಗಳ ಆವಶ್ಯಕತೆಯನ್ನೇ ಕುರಿತು ಯೋಚಿಸುತ್ತಿರುತ್ತಾರೆ. ಅದು ನಿಜವಾದ ರಾಮರಾಜ್ಯ; ಅದು ನಿಜವಾದ ಸಾತಂತ್ರ್ಯ. ಇಂದಿನ ಸ್ವಾತಂತ್ರ್ಯದಿಂದ ನನ್ನ ಉಸಿರು ಕಟ್ಟಿದೆ.

## ೧೨. ಅಧಿಕಾರಿಗಳ ಸಂಬಳ

ಅಧಿಕಾರಿಗಳು ಹೆಚ್ಚು ಸಂಬಳ ತೆಗೆದುಕೊಳ್ಳುತ್ತಿದ್ದಾರೆಂದು ನನಗೆ ಅನೇಕ ದೂರುಗಳು ಬಂದಿವೆ. ಹಿಂದೆ ಕಾಂಗ್ರೆಸ್ಸಿನವರು ಸಂಬಳವಿಲ್ಲದೆ ಕೆಲಸಮಾಡುತ್ತಿದ್ದರು. ಪಾರ್ಲಿಮೆಂಟರಿ ಸೆಕ್ರೆಟರಿಯಾದ ಕೂಡಲೇ ಅಷ್ಟೊಂದು ಸಂಬಳ ಯಾಕೆ ತೆಗೆದುಕೊಳ್ಳಬೇಕು! ಪಾರ್ಲಿಮೆಂಟರಿ ಸೆಕ್ರೆಟರಿಗಳು ಬೇಕೆಂಬುದು ನನಗೆ ತಿಳಿದಿರಲಿಲ್ಲ. ಕಾಂಗ್ರೆಸ್ ಪಾರ್ಟಿಗಳು ಸರ್ಕಾರಕ್ಕೆ ಹೆಚ್ಚು ಖರ್ಚನ್ನು ಒಡ್ಡಬಾರದು. ಕಾಂಗ್ರೆಸ್ಸಿನ ಆದರ್ಶದ ಮಟ್ಟವನ್ನು ಕಡಿಮೆ ಮಾಡಬಾರದು ಉತ್ಪತ್ತಿ ಒಂದೇ ಸಮನಾಗಿರುವಾಗ ವೆಚ್ಚವನ್ನು ಸುಮ್ಮನೆ ಹೆಚ್ಚಿಸಬಾರದು. ವೆಚ್ಚಕ್ಕಿಂತ ಉತ್ಪತ್ತಿ ಹೆಚ್ಚಾಗಿರಬೇಕೆಂಬುದು ಎಲ್ಲಾ ಸಣ್ಣ ವ್ಯಾಪಾರಿಗಳಿಗೂ ಗೊತ್ತು. ಈ ಮೂಲತತ್ತ್ವವನ್ನೇ ಮರೆತು ಸ್ವತಂತ್ರ ಭಾರತವನ್ನು ಆಳುವುದು ಸಾಧ್ಯವಿಲ್ಲ. ಇವತ್ತು ಸ್ವಲ್ಪ ಹಣವಿದೆ. ಅದನ್ನು ಸುಲಭವಾಗಿ ಖರ್ಚು ಮಾಡಿಬಿಡಬಹುದು. ಆದರೆ ಬುದ್ಧಿವಂತರಾದ ವ್ಯಾಪಾರಿಗಳಂತೆ ನಡೆದುಕೊಳ್ಳದೆ ಹೋದರೆ ಆ ಹಣ ಬಹಳಕಾಲ ನಿಲ್ಲಲಾರದು.

## ೧೩. ನಾನು ಅಖಂಡ ಭಾರತದ ಪ್ರಜೆ

* * * * *

[ಡೆಲ್ಲಿ ಡೈರಿ, ಭಾರತದ ಪರಿಸ್ಥಿತಿಯ ಕೈಪಿಡಿ. ನಮ್ಮ ನೆರೆಹೊರೆಯವರೊಂದಿಗೆ ವ್ಯವಹರಿಸುವುದರಿಂದ ಹಿಡಿದು ಜಗತ್ತಿನ ರಾಷ್ಟ್ರಗಳು ವಿಶ್ವಭ್ರಾತೃತ್ವದ ಮಾರ್ಗದಲ್ಲಿರಲು ಅನುಸರಿಸಬೇಕಾದ ಆದರ್ಶಗಳು ಅದರಲ್ಲಿ ಸೂಚಿತವಾಗಿದೆ. ಭಾರತೀಯರಿಗಂತೂ ಅದೂ ಒಂದು ಭಗವದ್ಗೀತೆ. ಈ ಸಣ್ಣ ಪರಿಚಯವನ್ನು ಓದುವುದರಿಂದ ಯಾರೂ ದಿಲ್ಲಿಯ ಡೈರಿಯನ್ನು ಓದಿದೆವೆಂದು ಭಾವಿಸದಿರಲಿ. ಮಹಾತ್ಮ ಗಾಂಧಿಯವರ ಭಾವನೆಗಳ ರತ್ನಗಣಿಗೆ ಇದೊಂದು ಸೂಚನೆ ಮಾತ್ರ]

---

# ೧೭. ಸರ್ವೋದಯಸಮಾಜ

ಮಹಾತ್ಮ ಗಾಂಧಿಯವರು ಬರಿಯ ಒಂದು ವ್ಯಕ್ತಿ ಮಾತ್ರವೇ ಅಲ್ಲ; ಭಾರತದ ಯುಗಪುರುಷರಾಗಿದ್ದುದಲ್ಲದೆ ಭಾರತದ ಐಕ್ಯತೆಗೆ ಅವರೊಂದು ಮುಖ್ಯ ಸಾಧನವಾಗಿದ್ದರು. ಭಾರತದ ಸಂಸ್ಕೃತಿ, ಗಂಗಾನದಿ ಹಿಮಾಲಯ ಇವು ಹೇಗೆ ಭಾರತೀಯರೆಲ್ಲರನ್ನೂ ಒಂದು ಗೂಡಿಸುವ ಸಾಧನಗಳೋ, ಹಾಗೆಯೇ ಮಹಾತ್ಮ ಗಾಂಧಿಯವರೂ ಭಾರತದ ಒಗ್ಗಟ್ಟಿನ ಪ್ರಯತ್ನದ ಕೇಂದ್ರವಾಗಿದ್ದರು. ಅವರ ನಿಧನದ ನಂತರ ಬಂದ ಜಗತ್ತಿನ ದುಃಖಾಶ್ರುಗಳಲ್ಲಿ "ಜಗತ್ತಿನಲ್ಲಿ ಆತ್ಮ ಶಕ್ತಿಯ ಭಕ್ತರೆಲ್ಲಾ ಗಾಂಧಿಯವರ ಅನುಯಾಯಿಗಳು. ಈ ದೃಷ್ಟಿಯಿಂದ ಮಹಾತ್ಮ ಗಾಂಧಿಯವರು ಮನುಷ್ಯಪ್ರಪಂಚವನ್ನೇ ಒಂದು ಗೂಡಿಸುವ ದೈವೀಶಕ್ತಿ" ಎಂಬ ಭಾವನೆ ಸಾಮಾನ್ಯವಾಗಿದ್ದಿತು.

ವಿಧವಿಧವಾದ ಭಾಷೆ, ವೇಷ, ಭೂಷಣ ಪದ್ಧತಿಗಳನ್ನುಳ್ಳ ಭಾರತದ ನಾನಾ ಭಾಗದ ಜನತೆಯೆಲ್ಲಾ ಗಾಂಧಿಯವರ ಕಾರಣದಿಂದ ಬಾಂಧವ್ಯವನ್ನು ಬೆಳೆಸಿಕೊಂಡಿದ್ದರು. ಈ ಬಾಂಧವ್ಯಕ್ಕೆ ಗಾಂಧಿಯವರ ಅನುಯಾಯಿಗಳ ಬಿಳಿಯ ಟೋಪಿಗಳಾಗಲಿ ಅಥವ ಖಾದಿಯ ಅರಿವೆಗಳಾಗಲಿ ಮಾತ್ರವೇ ಕಾರಣವಲ್ಲ. ಒಂದೇ ಬಗೆಯ ಉಡುಪು, ಒಂದೇ ರೀತಿಯ ಆಚರಣೆ, ಒಂದೇ ಮಾರ್ಗದ ಮಾತುಕತೆ ಇವು ಸಾಮಾನ್ಯ ಐಕ್ಯತೆಗೆ ಎಷ್ಟರ ಮಟ್ಟಿಗೆ ಸಹಕಾರಿಯೋ ಅಷ್ಟರ ಮಟ್ಟಿಗೆ ಮಾತ್ರ ಖಾದಿ ಅರಿವೆಯೂ ಸಹಕಾರಿಯಾಗಿತ್ತು. ಬರಿಯ ವೇಷ ಭೂಷಣಗಳ ಸಾಮಾನ್ಯತೆಯಿಂದ ಉಂಟಾಗುವ ಒಗ್ಗಟ್ಟಿನ ಬಂಧನ, ಬಹಳ ಸಡಿಲವಾದ ಬಂಧನ. ಗಾಂಧಿ ಬರಿಯ ಒಂದು ಬಡಗುರುವೋ, ಒಣ ತತ್ತ್ವಪ್ರಚಾರಕನೋ ಆಗಿದ್ದರೆ ಇಂತಹ ಒಂದು ಬಾಹ್ಯವೇಷದ ಐಕ್ಯತೆಯೇ ಸಾಕಾಗುತ್ತಿದ್ದಿತು. ಆದರೆ ಗಾಂಧಿಯವರು ಬರಿಯ ವೇಷದ ಗುರುವಲ್ಲ. ಅವರು ತಮ್ಮ ಆತ್ಮವನ್ನೇ ತಾವು ಪ್ರತಿನಿತ್ಯವೂ ಪರೀಕ್ಷಿಸಿಕೊಳ್ಳುತ್ತಿದ್ದರು. "ನಿಮ್ಮ ತಪ್ಪನ್ನು ಪೂರ್ಣವಾಗಿ ಒಪ್ಪಿಕೊಂಡು, ಸಾರ್ವಜನಿಕರ ಎದುರಿಗೆ

ಹೇಳಿ, ಇನ್ನು ಈ ಬಗೆಯ ತಪ್ಪನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿಕೊಳ್ಳದೆ ಒಂದು ದಿನವೂ ನಿದ್ರೆ ಹೋಗಬೇಡಿ" ಎಂಬುದು ಅವರ ಬೋಧನೆ. ಈ ಕಾರಣದಿಂದ ಗಾಂಧೀಜಿ ಎಂದರೆ ಒಂದು ಜೀವನ ಕ್ರಮ ಎಂಬುದು ಅವರ ಹೆಸರನ್ನು ಉಚ್ಚರಿಸಿದ ಕೂಡಲೇ ಜನತೆಯ ಕಣ್ಣಿನ ಮುಂದೆ ಬರತೊಡಗಿತು. ಸತ್ಯ, ಅಹಿಂಸೆ, ಸೌಹಾರ್ದ, ಔದಾರ್ಯ, ಸರ್ವ ಧರ್ಮ ಸಮಾನತೆ, ಪ್ರೇಮ, ನಿಷ್ಪಕ್ಷ ಪಾತ ಜೀವನ ಇವು ಮೂರ್ತಿವೆತ್ತವರು ಗಾಂಧಿ ಎಂದು ಜನತೆ ನಂಬ ತೊಡಗಿತು.

ಆ ಶುದ್ಧ ಜೀವನದ ಪ್ರಭಾವ ಜನತೆಯ ಮೇಲೆ ಪೂರ್ಣವಾಗಿ ಉಂಟಾಯಿತು. ಎಲ್ಲಿಯೇ ಗಾಂಧಿ ಅನುಯಾಯಿ ಎನ್ನಿಸಿಕೊಳ್ಳುವವ ನಿರಲಿ, ಆತನು ಶುದ್ಧಜೀವಿ, ತ್ಯಾಗಿ ಎಂಬ ನಂಬಿಕೆ ಜನತೆಗೆ ಉಂಟಾ ಯಿತು. ಗಾಂಧಿಯವರ ಜೀವಿತ ಕಾಲದಲ್ಲಿಯೇ ಭಾರತದಲ್ಲಿ ಈ ಬಗೆಯ ಗಾಂಧಿ ಅನುಯಾಯಿಗಳು ಎಲ್ಲೆಲ್ಲಿಯೂ ಹುಟ್ಟಿಕೊಂಡರು. ಕಾಂಗ್ರೆಸ್‌ನಲ್ಲಿದ್ದವರೆಲ್ಲಾ ಗಾಂಧಿ ಅನುಯಾಯಿ ಎನ್ನಿಸಿಕೊಂಡರೂ ಶುದ್ಧ ಜೀವಿ ಎಂಬ ದೃಷ್ಟಿಯಲ್ಲಿ ತಮಗೆ ಬಹಳ ಮಂದಿ ಅನುಯಾಯಿ ಗಳು ಇಲ್ಲವೆಂಬುದು ಗಾಂಧಿಯವರಿಗೆ ಗೊತ್ತಾಗಿದ್ದಿತು. ತ್ಯಾಗ ಮಾಡಿದರೂ, ಕಾಂಗ್ರೆಸ್ ಸಂಸ್ಥೆ ರಾಜಕೀಯ ಅಧಿಕಾರದ ಲಾಲ ಸೆಯ ಸಂಸ್ಥೆ. ಅದರ ಹೆಸರಿನಲ್ಲಿ ಸ್ವಾರ್ಥಪರರೂ, ಜಾತೀಯತೆಯ ಅಗ್ನಿಭಕ್ಷಕರೂ, ಮೂರ್ಖರೂ, ಹೆಡ್ಡರೂ ಅಧಿಕಾರ ಮಾಡುವ ರೆಂಬುದು ಗಾಂಧಿಯವರಿಗೂ ಗೊತ್ತಾಗಿದ್ದಿತು. ಆದುದರಿಂದ ಕಾಂಗ್ರೆಸ್ಸಿನ ಪಾಡಿಗೆ ಕಾಂಗ್ರೆಸ್ಸು ಇದ್ದರೂ ಗಾಂದಿಯವರು ತಮ್ಮ "ಸ್ವಂತ" ಅನುಯಾಯಿಗಳ ಗಾಂಧಿ ಸೇವಾಸಂಘ ಎಂಬ ಸಂಸ್ಥೆ ಯನ್ನು ಸ್ಥಾಪಿಸಿದ್ದರು. ಎಲ್ಲಿಯವರೆಗೆ ಆ ಗಾಂಧಿ ಸೇವಾಸಂಘ ಬರಿಯ ಸೇವಾದೀಕ್ಷೆಯಲ್ಲಿ ಮಾತ್ರ ಇದ್ದಿತೋ ಅಲ್ಲಿಯವರೆಗೆ ಅದು ದೇಶಹಿತದ ಸಂಸ್ಥೆಯೇ ಆಗಿದ್ದಿತು. ಎಲ್ಲಾ ಪ್ರಾಂತದ ಪ್ರಬಲರಾದ ಮುಖಂಡರೂ ಅದರ ಸದಸ್ಯರೇ ಆಗಿದ್ದರು. ಆದರೆ ಕಾಂಗ್ರೆಸ್ ಸಂಸ್ಥೆಗೆ ಜನತೆಯ ತ್ಯಾಗದಿಂದ ಹೆಚ್ಚು ಹೆಚ್ಚು ಬಲ ದೊರೆತಂತೆಲ್ಲಾ,

ಸ್ವಾಭಾವಿಕವಾಗಿ ಗಾಂಧಿಸೇವಾಸಂಘದ ಮುಖಂಡರಾದ ಸದಸ್ಯರೆಲ್ಲಾ ಕಾಂಗ್ರೆಸ್‌ನಲ್ಲಿ ಪ್ರಮುಖವಾದ ಸ್ಥಾನಗಳನ್ನು ಆಕ್ರಮಿಸತೊಡಗಿದರು. ಗಾಂಧಿಯವರ ಅಭಿಪ್ರಾಯದಂತೆ " ಗಾಂಧಿಸೇವಾ ಸಂಘ ಬರಿಯ ಸೇವಕರ, ಆದರ್ಶ ಶುದ್ಧ ಜೀವಿಗಳ, ತ್ಯಾಗಿಗಳ ಸಂಸ್ಥೆ " ಯಾಗಬೇಕಾಗಿತ್ತು. ಅಧಿಕಾರಗ್ರಹಣಕ್ಕೆ ಆ ಸಂಸ್ಥೆಯೂ ಒಂದು ಮಾರ್ಗವಾದುದನ್ನು ಗಾಂಧಿಯವರು ಶೀಘ್ರವಾಗಿ ವಿರೋಧಿಸಿದರು. ಯಾವ ಕಾರಣದಿಂದಲಾಗಲಿ, ಒಂದು ಸಂಸ್ಥೆಯ ಕಾರಣದಿಂದಲಾಗಲಿ, ಅಥವ ತಾನು ಶುದ್ಧ, ಬುದ್ಧಿವಂತ, ಎಂಬ ಕಾರಣದಿಂದಾಗಲಿ ಒಬ್ಬನ ಮೇಲೆ ಮತ್ತೊಬ್ಬ ದಬ್ಬಾಳಿಕೆ ನಡೆಸುವುದನ್ನು ಗಾಂಧಿ ಸಹಿಸುತ್ತಿರಲಿಲ್ಲ. ತನ್ನ ಅತ್ಯಾಪ್ತ ಅನುಯಾಯಿಗಳು, ಗಾಂಧಿಸೇವಾಸಂಘದ ಸದಸ್ಯರು ಸರ್ಕಾರದಲ್ಲಿಯಿರಲಿ—ಕಾಂಗ್ರೆಸ್ ಸಂಸ್ಥೆಯಲ್ಲಿರಲಿ—ತಮ್ಮ ಸೇವೆಗೆ ಪ್ರತಿಫಲವಾಗಿ, ಮುಖ್ಯವಾದ ಅಧಿಕಾರಸ್ಥಾನಗಳನ್ನು ಆಕ್ರಮಿಸಕೂಡದೆಂದು ಗಾಂಧಿಜಿ ಹೇಳಿದರು.

೧೯೪೦ ನೆಯ ಸಂವತ್ಸರದ ವೇಳೆಗೆ ಗಾಂಧಿಸೇವಾಸಂಘದ ಪ್ರಮುಖ ಸದಸ್ಯರನೇಕರು—ವಲ್ಲಭಾಯ್ ಪಟೇಲ್, ರಾಜಗೋಪಾಲಾಚಾರಿ, ಶಂಕರರಾವ್‌ದೇವ್—ಮುಂತಾದವರೆಲ್ಲ ಕಾಂಗ್ರೆಸ್ ಅಧಿಕಾರವರ್ಗಗಳಲ್ಲಿ ಪ್ರಮುಖ ಸ್ಥಾನಗಳನ್ನು ಆಕ್ರಮಿಸಿಕೊಂಡುದರಿಂದ ಗಾಂಧಿ ಸೇವಾಸಂಘದವರಲ್ಲದಿದ್ದರೂ—ಕಾಂಗ್ರೆಸ್ ಅನುಯಾಯಿಗಳಾಗಿದ್ದ ಅನೇಕರಿಗೆ ಮಹಾತ್ಮ ಗಾಂಧಿಯವರ ಮೇಲೆಯೂ, ಗಾಂಧಿಸೇವಾಸಂಘದ ಮೇಲೆಯೂ ಅಪ್ರೀತಿಯುಂಟಾಯಿತು. ಗಾಂಧಿಯವರು, ಗಾಂಧಿ ಸೇವಾಸಂಘದ ಸಮ್ಮೇಳನಕ್ಕೆ ಬಂಗಾಳದ ಮಾಲಿಕಂಡ ಎಂಬಲ್ಲಿಗೆ ಬಂದಾಗ ಈ ಗಾಂಧಿ ವಿರೋಧ ಸ್ಪಷ್ಟವಾಗಿ ಪ್ರಕಟವಾಯಿತು. ಮಾಲಿಕಂಡದಲ್ಲಿ ಅನೇಕ ಸಹಸ್ರಜನ ಗಾಂಧಿ ಭಕ್ತರಿದ್ದರೂ, ಗಾಂಧಿ ವಿರೋಧಿಗಳ ಒಂದು ಸಣ್ಣ ಗುಂಪು ಸಹ ಅಲ್ಲಿ ಕಪ್ಪುಬಾವುಟಗಳನ್ನು ಹಿಡಿದು ನಿಂತಿದ್ದರು. ಗಾಂಧಿಯನ್ನು ಬಹಿಷ್ಕರಿಸಿ ಎಂಬ ಹಸ್ತಪತ್ರಿಕೆಗಳನ್ನು ಹಂಚಿದ್ದರು. ಗಾಂಧಿಯವರು ಆ ವಿರೋಧಿಗಳನ್ನು ಸಹ ಎದುರುಗೊಂಡು ಸಮಂಜಸವಾಗಿ ಮಾತನಾಡಿದರು.

ಗಾಂಧಿಯವರು ಒಳಕ್ಕೆ ಹೋದಮೇಲೆ ಗಾಂಧಿ ಭಕ್ತರಿಗೂ ಕಪ್ಪು ಬಾವುಟದವರಿಗೂ ತಿಕ್ಕಾಟವಾಗಿ ಕೈ ಕೈ ಮಿಲಾಯಿಸಿತು. ಮಾಲಿ ಖಂಡಕ್ಕೆ ಬರುವುದಕ್ಕೆ ಮುಂಚೆ ಬೋಲ್‌ಪುರ್ ಸ್ಟೇಷನ್ನಿನಲ್ಲಿಯೂ ಗಾಂಧಿ ವಿರೋಧಿಗಳು ಕಪ್ಪು ಬಾವುಟ ಹಿಡಿದಿದ್ದರು. ಹೌರಾ ಸ್ಟೇಷನ್‌ನಲ್ಲಿ ಸರದಾರ್ ಪಟೇಲರಿಗೂ ಒಂದು ಕಪ್ಪು ಬಾವುಟ ಎದು ರಾಗಿತ್ತು. ಇವೆಲ್ಲವುಗಳಿಂದ ಗಾಂಧಿಯವರಿಗೆ ದುಃಖವಾಯಿತು.

"ನಮ್ಮ ಅಧಿಕಾರಲಾಲಸೆಯಿಂದ, ಜನರಿಗೆ ನಮ್ಮಲ್ಲಿ ದ್ವೇಷ ವುಂಟಾಗುವುದೆಂಬುದನ್ನು" ಗಾಂಧಿ ಸ್ಪಷ್ಟಪಡಿಸಿದರು. ಈ ಅಧಿಕಾರ ಸರ್ಕಾರದ ಆಳ್ವಿಕೆಯ ಅಧಿಕಾರ ಮಾತ್ರವಲ್ಲ, ಕಾಂಗ್ರೆಸ್ ಸಂಸ್ಥೆಯ ಲ್ಲಿಯ ಅಧಿಕಾರ ಸಹ ಎಂದು ಒತ್ತಿ ಒತ್ತಿ ಹೇಳಿದರು. "ಒಂದು ಪಕ್ಷದ ಜನರಿಗೆ ನಮ್ಮ ದುರ್ಗುಣಗಳು ಕಾಣುತ್ತಿವೆ ನಾವು ಈ ವಿರೋಧ ವನ್ನು ತಿರಸ್ಕಾರದಿಂದ ಕಾಣಕೂಡದು. ಗಾಂಧಿ ಸೇವಾಸಂಘ ರಾಜ ಕೀಯ ಸಂಸ್ಥೆಯಲ್ಲ. ಇದು ಶುದ್ಧ ಜೀವನ ಪ್ರಚಾರ ಸಂಸ್ಥೆ. ಈ ಸಂಘದವರು ರಾಜಕೀಯಕ್ಕೆ ಪ್ರವೇಶಿಸುವುದರಿಂದ ಇತರ ಪಕ್ಷದ ವರಿಗೆ ಇವರ ಮೇಲೆ ದ್ವೇಷವುಂಟಾಗಿ ಹಿಂಸಾವೃತ್ತಿ ಬೆಳೆಯುತ್ತದೆ. ಆದುದರಿಂದ ಗಾಂಧಿಸೇವಾಸಂಘ ರಾಜಕೀಯವನ್ನು ಬಿಡಬೇಕು. ರಾಜಕೀಯದಲ್ಲಿ ನಿರ್ಮಾಣಕಾರ್ಯ ಸಹ ಸೇರಿದೆ. ಆದರೆ ನಿರ್ಮಾಣ ಕಾರ್ಯವೇ-ಗಾಂಧಿಸೇವಾಸಂಘದ ಮುಖ್ಯಗುರಿ ರಾಜಕೀಯ ವೆಂಬುದು ಸಾಧಾರಣವಾಗಿ ಅಧಿಕಾರಲಾಲಸರ ರಾಜಕೀಯವಾಗು ತ್ತದೆ ಸಂಘದ ಸದಸ್ಯರು ಕಾಂಗ್ರೆಸ್ಸಿನ ಪ್ರಾಥಮಿಕ ಸದಸ್ಯರಾಗಿರ ಬಹುದು. ಆದರೆ ಜವಾಬ್ದಾರರಾದ ಕಾಂಗ್ರೆಸ್ ಅಧಿಕಾರಿಗಳಾಗಿರ ಕೂಡದು. ಆದುದರಿಂದ ರಾಜಕೀಯವಾದ ಮನೋಭಾವವುಳ್ಳ ಸದಸ್ಯರೆಲ್ಲ, ಗಾಂಧಿ ಸೇವಾಸಂಘವನ್ನು ಬಿಡಬೇಕು.

ಮಹಾತ್ಮ ಗಾಂಧಿಯವರು ಗಾಂಧಿ ಸೇವಾಸಂಘವು ಅಹಿಂಸೆಯ ಪ್ರಯೋಗವನ್ನು ನಡೆಸುವ ಎಂಟು ಹತ್ತು ನಿಪುಣರ ಪ್ರಯೋಗಶಾಲೆ ಯಾಗಿರಬೇಕೆಂದು ಹೇಳಿ ವ್ಯವಹಾರಿಕ ದೃಷ್ಟಿಯಿಂದ ಗಾಂಧಿಸೇವಾ ಸಂಘವನ್ನು ವಿಲೀನಮಾಡಿಬಿಟ್ಟರು. ಕಾಂಗ್ರೆಸ್ ಬದುಕಬೇಕಾದರೆ

ಭಕ್ತರು ಅಧಿಕಾರದ ಆಸೆಯನ್ನು ಬಿಡಬೇಕು. ಅಧಿಕಾರದ ಹೊರಗಿದ್ದು ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ಕೆಲಸಗಾರರು, ಅಧಿಕಾರ ಲಾಲಸೆಯುಳ್ಳವರಿಗಿಂತ ನಿಜವಾದ ಕಾಂಗ್ರೆಸ್ ಭಕ್ತರು. ಅಧಿಕಾರಕ್ಕಾಗಿ ಕಾಂಗ್ರೆಸ್‌ನಲ್ಲಿ ಸೇರುವವರಿಗಿಂತ ಸೇವಕರಾಗಿ ಸೇರುವವರನ್ನು ಜನ ಗೌರವಿಸುತ್ತಾರೆ. ಕಾಂಗ್ರೆಸ್ಸಿನ ಅಧಿಕಾರಸ್ಥಾನಗಳಲ್ಲಿ ಒಂದು ಲಕ್ಷ ಜನರು ಇರಬಹುದು. ಆದರೆ ಕಾಂಗ್ರೆಸ್ ಭಕ್ತರು ಮೂವತ್ತು ಕೋಟಿ ಇದ್ದಾರೆ. ಒಂದು ಲಕ್ಷದವರಾಗುವುದಕ್ಕಿಂತ ಮೊದಲು ಮೂವತ್ತು ಕೋಟಿಯವರಲ್ಲಿ ಒಬ್ಬನಾಗಬೇಕು. ಅಧಿಕಾರಕ್ಕಾಗಿ ಚರ್ಚೆ ನಡೆಯುವಾಗ ನಿರ್ಮಾಣಕಾರ್ಯಗಾರರು ಹಿಂದಕ್ಕೆ ಸರಿದು ಬಿಡಬೇಕು. ಕಾಗದದ ದೋಣಿಯಲ್ಲಿ ನದಿಯನ್ನು ದಾಟುವುದು ಸಾಧ್ಯವಿಲ್ಲ. ಹಾಗೆಯೇ ನಿರ್ಮಾಣ ಕೆಲಸಗಾರರ ನಂಬಿಕೆಗೆ ಪಾತ್ರರಾಗದ ಕಾಂಗ್ರೆಸ್ ಅಧಿಕಾರಿಗಳ ಸ್ಥಾನ ಭದ್ರವಿಲ್ಲ. ಕಾಂಗ್ರೆಸ್ ಸಂಸ್ಥೆಯ ಸದಸ್ಯರಿಗೆ ಅಧಿಕಾರದ ಆಸೆ ತಪ್ಪಿದರೆ ಕಾಂಗ್ರೆಸ್ ಕೆಲಸ ಚೆನ್ನಾಗಿ ನಡೆಯುವುದು. ಒಬ್ಬ ಕಾಂಗ್ರೆಸ್ ಕೆಲಸಗಾರ ಅಧಿಕಾರದಲ್ಲಿರಬೇಕೆಂಬುದು, ಜನರ ಇಷ್ಟವಾದರೆ ಅವರು ಬಲಾತ್ಕಾರವಾಗಿ ಆ ಭಾರವನ್ನು ಅವನ ಮೇಲೆ ಹೊರಿಸುವರು. ಅಂತಹ ಸಂದರ್ಭದಲ್ಲಿ ಮಾತ್ರ ಕೆಲಸಗಾರ ಅಧಿಕಾರವನ್ನು ವಹಿಸಿಕೊಳ್ಳಬೇಕು."

ಹೀಗೆ ಮಹಾತ್ಮ ಗಾಂಧಿಯವರು, ತಮ್ಮ ಅನುಯಾಯಿಗಳಾದವರು, ತಮ್ಮ ಅತ್ಯಂತ ನೆಚ್ಚಿನ ಶಿಷ್ಯರು, ರಾಜಕೀಯದ ಪಕ್ಷವಿಪಕ್ಷಗಳ ಕ್ಷುದ್ರ ಹೋರಾಟದಲ್ಲಿ ಸೇರಲು, ತಾವು ಗಾಂಧಿ ಸೇವಾಸಂಘದ ಸದಸ್ಯರೆಂಬ ಒಂದು ಹೆಚ್ಚಿನ ಅರ್ಹತೆಯನ್ನು ಇಟ್ಟುಕೊಳ್ಳಬಾರದೆಂದು ಆ ಸಂಘವನ್ನೇ ವಿಲೀನಮಾಡಿದರು. ಪ್ರತಿಯೊಬ್ಬನೂ ಹೆಜ್ಜೆ ಹೆಜ್ಜೆಗೂ ತನ್ನ ಆತ್ಮವನ್ನೂ ಚಾರಿತ್ರ್ಯವನ್ನೂ ಶುದ್ಧಿಮಾಡಿಕೊಳ್ಳುತ್ತಾ ಹೋಗುತ್ತಿರಬೇಕೇ ಹೊರತು, ಮತ್ತಾವ ರೀತಿಯಿಂದಲೂ, ತಾನು ಯಾವುದೋ ಸಂಘದ ಸದಸ್ಯನೆನ್ನುವ ಕಾರಣದಿಂದಲೂ ಜನತೆ ಅವನನ್ನು ಗೌರವಿಸಲಾರದು.

ಗಾಂಧಿ ಸೇವಾಸಂಘ ವಿಲೀನವಾದನಂತರ ಮಹಾತ್ಮ ಗಾಂಧಿ

ಯುವರ ಜೀವಿತಕಾಲದಲ್ಲಿ ಪೃಥಕ್ಕಾದ ಯಾವ ಬೇರೆ ಒಂದುಸಂಘವೂ ಬೇಕಾಗಲಿಲ್ಲ. ಗಾಂಧಿಯುವರ ಜೀವನ ಕ್ರಮುವೂ, ದಿನ ದಿನದ ನಡವಳಿಕೆಯೂ ಜಗತ್ತಿಗೆ ಆದರ್ಶವಾದಂತೆ ನಮಗೂ ಆದರ್ಶವಾಯಿತು. ಗಾಂಧಿಯವರು ಇರುವವರೆಗೆ ಅವರೇ ಸಮಸ್ತರನ್ನೂ ಆಕರ್ಷಿಸಿ ತಮ್ಮ ವ್ಯಕ್ತಿತ್ವದಲ್ಲಿಯೇ ತಮ್ಮ ಅನುಯಾಯಿಗಳನ್ನೆಲ್ಲ ಕೇಂದ್ರೀಕೃತಮಾಡಿಕೊಂಡಿದ್ದರು. ಗಾಂಧಿಯವರನಂತರ ಭಾರತದ ನಾನಾ ಭಾಗದಲ್ಲಿ ಹರಡಿರುವ ಗಾಂಧಿ ಭಕ್ತರಿಗೆ ಅದರಲ್ಲಿಯೂ ರಚನಾತ್ಮಕ ಕೆಲಸಗಾರರಿಗೆ ತಾವು ಒಂದಾಗಿ ಸೇರುವ, ಪರಸ್ಪರ ವಿಚಾರ ವಿನಿಮಯಮಾಡಿಕೊಳ್ಳುವ, ತಾವು ಅನಾಥರಲ್ಲ ಒಬ್ಬರಿಗೊಬ್ಬರು ಬಲವಾಗಿದ್ದೇವೆ, ನಾವೆಲ್ಲ ಸತ್ಯದ, ಅಹಿಂಸೆಯ, ಆತ್ಮಶಕ್ತಿ ಪ್ರಯೋಗದ ಮಾರ್ಗದಲ್ಲಿ ಸಮಾನ ಸಾಧಕರು ; ಗಾಂಧಿಯವರ ನಿಧನದಿಂದ ತಬ್ಬಲಿಗಳಾದ ನಾವು ಮತ್ತೆ ಅವರ ಸಂದೇಶದ ಬಲದಲ್ಲಿ ಸನಾಥರಾಗಿದ್ದೇವೆ ಎಂಬ ಧೈರ್ಯದ, ಆತ್ಮಪ್ರತ್ಯಯದ ಆವಶ್ಯಕತೆಯುಂಟಾಗಿತ್ತು.

ನಿರ್ಮಾಣ ಕಾರ್ಯಕರ್ತರ ಸಭೆ ಮಾರ್ಚಿ ೧೩, ೧೪, ೧೫ ರಲ್ಲಿ ಗ್ರಾಮದಲ್ಲಿ ಸೇರಿತು. ಗಾಂಧೀಜಿಯವರ ಮರಣದನಂತರ ಸಮ್ಮೇಳನದ ಆವಶ್ಯಕತೆ ಇನ್ನೂ ಹೆಚ್ಚಾಯಿತು. ಸಮ್ಮೇಳನಕ್ಕೆ ಭಾರತದ ನಾನಾ ಭಾಗಗಳಿಂದ ೫೦೦ ನಿರ್ಮಾಣ ಕೆಲಸಗಾರರು ಬಂದಿದ್ದರು. ಮುಖ್ಯ ಮಂತ್ರಿ ಪಂಡಿತ್ ಜವಹರ್‌ಲಾಲ್ ನೆಹ್ರು, ಮೌಲಾನಾ ಅಬ್ದುಲ್‌ಕಲಾಂ ಆಜಾದ್, ಶ್ರೀಮತಿ ಅಮೃತ್‌ಕುವರಿ, ಜಯರಾಮದಾಸ್ ದೌಲತ್‌ರಾಮ್ ಮುಂತಾದ ಕೇಂದ್ರದ ಮಂತ್ರಿಗಳೂ, ಮಧ್ಯಪ್ರಾಂತ ಮತ್ತು ಸಂಯುಕ್ತಪ್ರಾಂತದ ಗವರ್ನರ್‌ಗಳೂ, ಬೊಂಬಾಯಿ, ಮದರಾಸು, ಮೈಸೂರು, ಒರಿಸ್ಸಾ ಪ್ರಾಂತಗಳ ಮುಖ್ಯ ಮಂತ್ರಿಗಳೂ, ಆಚಾರ್ಯ ಕೃಪಲಾನಿ, ಜಯಪ್ರಕಾಶ್ ನಾರಾಯಣ್ ಮುಂತಾದ ಮುಖಂಡರೂ ಸಭೆಗೆ ಉಪಸ್ಥಿತರಾಗಿದ್ದರು.

ಗಾಂಧಿಯವರ ಬೋಧನೆಗಳು, ಕಾಡಿನಲ್ಲಿ ಕುಳಿತ ಆದರ್ಶವಾದಿಗಳಿಗೆ ಮಾತ್ರವೇ ಅಲ್ಲ. ಅದನ್ನು ನಿತ್ಯಜೀವನದಲ್ಲಿ ಎಲ್ಲರೂ ಪರಿಣಾಮಕಾರಿಯಾಗಿ ಅನುಸರಿಸಬಹುದು. ಅವರು ಬೋಧಿಸಿದುದರ

ಬಹುಭಾಗ ನಮಗೂ, ಭವಿಷ್ಯ ಜಗತ್ತಿಗೂ ಅವರ ಬರವಣಿಗೆಗಳಲ್ಲಿ ದೊರೆಯುತ್ತದೆ. ಭಾರತದಲ್ಲಿಯೂ, ಜಗತ್ತಿನ ನಾನಾ ಭಾಗದಲ್ಲಿಯೂ ಗಾಂಧಿಯವರ ಮೂಸೆಯಲ್ಲಿ ತಮ್ಮ ಬಾಳನ್ನು ಎರಕ ಹೊಯ್ದು ಗಾಂಧಿಯವರ ಧ್ಯೇಯದ ಸಮಾಜವನ್ನು ಕಟ್ಟುವುದರಲ್ಲಿ ತೊಡಗಿರುವವರು ಅನೇಕರಿದ್ದಾರೆ. ಗಾಂಧಿಯವರ ಧ್ಯೇಯವನ್ನೂ, ಜೀವನ ಕ್ರಮವನ್ನೂ ಮುಂದುವರಿಸಿಕೊಂಡು ಹೋಗುವ ಒಂದು ಸಂಸ್ಥೆಯನ್ನು ಸ್ಥಾಪಿಸಬೇಕೆ? ಹಾಗೆ ಸ್ಥಾಪಿಸುವುದಾದರೆ ಸಂಘದ ಸ್ವರೂಪವೂ ಕಾರ್ಯ ಕ್ಷೇತ್ರವೂ ಹೇಗಿರಬೇಕು? ಎಂಬುದನ್ನು ಸಮ್ಮೇಳನವು ಮೊದಲನೆಯದಾಗಿ ಚರ್ಚಿಸಿತು. ಎರಡನೆಯದಾಗಿ ಗಾಂಧಿಯವರ ಬಗೆ ಬಗೆಯ ರಚನಾತ್ಮಕ ಕಾರ್ಯಗಳನ್ನು ಯಾವರೀತಿ ಮುಂದುವರಿಸಬೇಕೆಂಬುದನ್ನೂ ಸಮ್ಮೇಳನವು ಆಲೋಚಿಸಿತು. ಪ್ರತಿಯೊಬ್ಬರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಬಿಚ್ಚಿಹೇಳಿದರು. ಗಾಂಧಿಯವರ ಬೋಧನೆಯನ್ನು ಅಧ್ಯಯನಮಾಡಿ, ಅದನ್ನು ಎಲ್ಲರೂ ತಮ್ಮ ಬಾಳಿನಲ್ಲಿ ಆಚರಣೆಗೆ ತರುವ ಪ್ರಯತ್ನಗಳನ್ನು ಮಾಡುವುದು ಹೇಗೆ ಎಂಬುದೇ ಮುಖ್ಯವಾದ ಪ್ರಶ್ನೆಯಾಯಿತು. ಈ ಕಾರ್ಯಕ್ಕೆ ಒಂದು ಸಂಸ್ಥೆ ಬೇಕೇ? ಬೇಕಾದರೆ ಅದರ ಸದಸ್ಯರು ಸುವ್ಯವಸ್ಥಿತರಾಗಿ ಶಿಸ್ತಿನಿಂದ ಸಂಸ್ಥೆಯ ನಿಯಮಕ್ಕೆ ಅನುಸಾರವಾಗಿ ಕೆಲಸ ಮಾಡಬೇಕೇ? ಅಥವ ಸಂಸ್ಥೆಯು ನಿಯಮ ಶಿಸ್ತುಗಳ ಅತಿ ತೊಡಕಿಲ್ಲದ ಸಡಿಲವಾದ ಸಂಘವಾಗಬೇಕೇ? ಇಲ್ಲದಿದ್ದರೆ ಗಾಂಧಿಯವರ ಆದರ್ಶವನ್ನು ಅನುಸರಿಸುವ ಸರ್ವಸಾಮಾನ್ಯವಾದ ನಿಯಮದಿಂದಲೇ ನಮ್ಮ ಬಾಳಿನಲ್ಲಿ ಗಾಂಧಿ ಬೋಧನೆಯನ್ನು ಆಚರಿಸುವ ಸ್ತ್ರೀಪುರುಷರು ತಮ್ಮ ಕಾರ್ಯ ಕ್ಷೇತ್ರಗಳಲ್ಲಿ ಕೆಲಸಮಾಡಬೇಕೆ? ಇತಿಹಾಸದಲ್ಲಿ ಗುರುಗಳಿಗೂ ಮತಾಚಾರ್ಯರಿಗೂ ಕಡಿಮೆ ಇಲ್ಲ. ಆ ಅನುಯಾಯಿಗಳು ಗುರುವಿನ ಬೋಧನೆಯನ್ನು ಒಣಸೂತ್ರ ಪದ್ಧತಿಗಳಾಗಿ ಮಾಡಿ ಗುರುವಿನ ಹಿಂಬಾಲಕರೆಲ್ಲ ಅದನ್ನೇ ಅನುಸರಿಸಬೇಕೆಂದು ಮಾಡಿದರು. ಕೆಲವು ಕಾಲದನಂತರ ಪದ್ಧತಿಗಳ ಒಳ ಅರ್ಥ ಅನುಯಾಯಿಗಳಿಗೆ ಮರೆಯಾಗಿ ಪದ್ಧತಿಗಳು ಬರಿಯ ಒಣ ಪದ್ಧತಿಗಳಾಗಿಯೇ ಉಳಿದವು.

ಗಾಂಧಿಯವರ ಆದರ್ಶಗಳಿಗೆ ಆ ಗತಿಯುಂಟಾಗಬಾರದೆಂದು ಗಾಂಧಿ ಅನುಯಾಯಿಗಳು ಬಯಸಿದರು.

## ಗಾಂಧಿಯವರ ಮಾರ್ಗ

ಗಾಂಧಿಯವರ ದೀರ್ಘವಾದ ತಮ್ಮ ಜೀವನಕಾಲದಲ್ಲಿ ಜೀವನದ ನಾನಾ ಕಾರ್ಯರಂಗಗಳಲ್ಲಿ ಬೋಧನೆಮಾಡಿ ಕಾರ್ಯಮಾಡಿದರು. ಅವರು ಒಂದಿಲ್ಲ ಒಂದು ಕಾಲದಲ್ಲಿ ವಿಮರ್ಶಿಸದ ಆಧುನಿಕ ಪ್ರಶ್ನೆ ಯಾವುದೂ ಇಲ್ಲವೇ ಇಲ್ಲ. ದೊಡ್ಡ ದೊಡ್ಡ ರಾಜಕೀಯ ಸಾರ್ವಜನಿಕ ಪ್ರಶ್ನೆಗಳು ಮಾತ್ರವೇ ಅಲ್ಲ. ವ್ಯಕ್ತಿಗೆ ಸಂಬಂಧಪಟ್ಟ, ಅವನ ಅಡಿಗೆ ಮನೆಯ ರೂಪ, ಅಲ್ಲಿಯ ಕೆಲಸ, ಪಾಯಖಾನೆ ಗೃಹವನ್ನು ಶುದ್ಧಿಮಾಡುವ ಕ್ರಮ ಮುಂತಾದ ಸಣ್ಣ ವಿಷಯಗಳನ್ನೆಲ್ಲಾ ಅವರು ಶ್ರದ್ಧೆಯಿಟ್ಟು ನೋಡಿ ಅವಕ್ಕೆಲ್ಲ ಪರಿಹಾರವನ್ನು ಬೋಧಿಸಿದರು. ಗಾಂಧಿಯವರಿಗೆ ಯಾವುದೂ ಅತಿ ಸಣ್ಣದೂ ತಿರಸ್ಕಾರಯೋಗ್ಯವೂ ಆಗಿರಲಿಲ್ಲ. ಯಾವುದೂ ಅತಿ ದೊಡ್ಡದೂ ಅಸಾಧ್ಯವಾದುದೂ ಆಗಿರಲಿಲ್ಲ. ಸ್ವಾಭಾವಿಕವಾಗಿ ಅವರ ಬಾಳು, ಅವರು ತಮ್ಮ ಆತ್ಮಚರಿತ್ರೆಯನ್ನು ಕರೆದಂತೆ ಸತ್ಯದ ವಿವಿಧ ಪ್ರಯೋಗಗಳೇ. ಒಂದು ಸಂದರ್ಭದಲ್ಲಿ ಅವರು ಒಂದು ವಿಷಯದ ಮೇಲೆ ಒಂದು ಅಭಿಪ್ರಾಯವನ್ನು ಕೊಟ್ಟರೆ ಅದು ಅದರ ಆಗಿನ ಅಭಿಪ್ರಾಯ ಮಾತ್ರ. ಬೇರೆ ಒಂದು ಸಮಯದಲ್ಲಿ, ಬೇರೆ ಸಂದರ್ಭದಲ್ಲಿ ಅವರು ಒಂದು ವಿಷಯದ ಮೇಲೆ ಒಂದು ಅಭಿಪ್ರಾಯವನ್ನು ಕೊಟ್ಟರೆ ಅದು ಅವರ ಆಗಿನ ಅಭಿಪ್ರಾಯ ಮಾತ್ರ. ಬೇರೆ ಒಂದು ಸಮಯದಲ್ಲಿ ಬೇರೆ ಸಂದರ್ಭದಲ್ಲಿ ಅವರು ಅದರಿಂದ ಭಿನ್ನವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದರೂ ಯಾರೂ ಆಶ್ಚರ್ಯ ಪಡಬೇಕಾಗಿರಲಿಲ್ಲ. ಗಾಂಧಿಯವರೇ ಹಾಗೆ ಅನೇಕವೇಳೆ ಹೇಳಿದ್ದರು. ಸಾಧಾರಣವಾಗಿ ಯಾವುದನ್ನು ಪರಸ್ಪರ ವಿರುದ್ಧ ಎನ್ನುತ್ತೀರೊ, ಇದು ಅದಲ್ಲ. ಒಂದು ತತ್ತ್ವಕ್ಕೆ ಹೊಂದಿಕೊಂಡು ಪರಿಸ್ಥಿತಿಗಳನ್ನೆಲ್ಲಾ ಆ ತತ್ತ್ವಕ್ಕೆ ಒರೆಹಚ್ಚಿ ಅದರ ಫಲವಾಗಿ ಬೇರೆ ಬೇರೆಯಾದ ತೀರ್ಮಾನಗಳನ್ನು ನಿರ್ಭೀತಿಯಿಂದ ತೆಗೆದುಕೊಳ್ಳುವವರ ಸ್ವಭಾವ ಇದು. ಮೂಲತತ್ತ್ವ ಬದಲಾವಣೆ

ಯಾಗದಿದ್ದರೆ ಸಾಕು. ಗಾಂಧಿಯವರನ್ನು, ನಿಮ್ಮ ತತ್ತ್ವಗಳನ್ನು ಜಗತ್ತಿನ ದಿನ ದಿನದ ನಿತ್ಯ ಜೀವನದ ಸಮಸ್ಯೆಗಳಿಗೆ ಹೇಗೆ ಅನ್ವಯಿಸ ಬಹುದೆಂಬುದನ್ನು ಒಂದು ಪಠ್ಯಪುಸ್ತಕರೂಪದಲ್ಲಿ ಬರೆಯಿರಿ ಎಂದು ಕೇಳಿದ್ದೆವು. ಅವರು "ಅದು ಸಾಧ್ಯವಿಲ್ಲ. ಮೂಲತತ್ತ್ವಗಳು ಮಾತ್ರ ನನ್ನ ಆಚರಣೆಯಲ್ಲಿವೆ ಆದರೆ ಅವುಗಳನ್ನು ಪರಿಸ್ಥಿತಿ ಒದಗಿದಾಗ ಅದಕ್ಕನುಸಾರವಾಗಿ ಉಪಯೋಗಿಸುತ್ತೇನೆ" ಎಂದಿದ್ದರು ಸಮ್ಮೇಳ ನದ ಸದಸ್ಯರು ಇದನ್ನೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕಾಗಿ ಬಂದಿತು. ಗಾಂಧಿಯವರೇ ತಮ್ಮ ಜೀವಿತಕಾಲದಲ್ಲಿ ಬೇಡವೆಂದಿದ್ದ ಅವರ ತತ್ತ್ವದ ಸೂತ್ರರೂಪವನ್ನು "ಇದೇ ಗಾಂಧಿ ತತ್ತ್ವ" ಎಂದು ಜನರ ಮುಂದೆ ಇಡಕೂಡದೆಂಬುದು ಸಮ್ಮೇಳನದ ಕಾರ್ಯಕರ್ತರ ಗುರಿ ಯಾಗಿತ್ತು. ಒಂದು ಸಂಸ್ಥೆಯನ್ನು ಸ್ಥಾಪಿಸಿದರೆ ಅದು ಕಾಲಾನು ಕಾಲಕ್ಕೆ ಬರಿಯ ಸಂಪ್ರದಾಯವಾಗಿ ಮತಪದ್ಧತಿಯಂತಾಗಿಬಿಡ ಬಹುದು. ಹಾಗಾಗದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳುವುದೂ ಸಮ್ಮೇಳನದ ಧ್ಯೇಯವಾಗಿತ್ತು.

## ನಿರ್ಮಾಣಕಾರ್ಯ—ಸತ್ಯಾಚರಣೆ

ಗಾಂಧಿಯವರು ಸತ್ಯವೆಂದು ತಮಗೆ ತೋರಿದ ಆದರ್ಶಗಳನ್ನು ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೀವನದಲ್ಲಿ ಆಚರಣೆಗೆ ತರಬೇಕೆಂಬುದು ಅವರ ಇಷ್ಟವಾಗಿತ್ತು. ಆದುದರಿಂದ ಅವರು ಪ್ರಾರಂಭಿಸಿದ ನಿರ್ಮಾಣಕಾರ್ಯಗಳೆಲ್ಲಾ ಸತ್ಯ ಅಹಿಂಸೆಯ ಪ್ರಯೋ ಗಗಳೇ. ಆ ತತ್ತ್ವಗಳನ್ನು ಇನ್ನೂ ಆಳವಾಗಿ ಪರಿಶೋಧಿಸಿದಾಗ ಅಹಿಂಸೆ ಸತ್ಯದಲ್ಲಿ ಅಡಕವಾಗಿರುವುದು ಅವರಿಗೆ ಗೊತ್ತಾಯಿತು. ಧ್ರುವತಾರೆಯನ್ನು ಹಿಡಿದಂತೆ ಗಾಂಧಿ ಸತ್ಯವನ್ನು ನೆಚ್ಚಿ ಹಿಡಿದರು. ಗಾಂಧಿಯವರಿಗೆ, ಸತ್ಯ ಬರಿಯ ಒಂದು ನೀತಿಯಾಗಲಿಲ್ಲ. ಅದೇ ದೇವರಾಯಿತು. ಆದುದರಿಂದ ಸತ್ಯದಿಂದ ಹೊರಗಾದ ನಿರ್ಮಾಣ ಕಾರ್ಯದಿಂದ ಫಲವಿಲ್ಲ. ನಿರ್ಮಾಣಕಾರ್ಯ ಸತ್ಯಸಮಾಜವನ್ನು ಸೃಷ್ಟಿಮಾಡಬೇಕೆಂದೂ ಗಾಂಧಿ ಹೇಳಿದರು. ವ್ಯಕ್ತಿಗಳೂ ಸಮಾಜವೂ ನಿರ್ಮಾಣಕಾರ್ಯವೆಂಬ ಮೆಟ್ಟಲುಗಳ ಮೂಲಕ ಸತ್ಯಶಿಖರವನ್ನು

ಏರಬೇಕು. ಬೇರೆ ಬೇರೆ ಮಾರ್ಗಗಳಿದ್ದರೂ ಶಿಖರ ಒಂದೇ ಆಗಿರುವಂತೆ, ರಚನಾತ್ಮಕಕಾರ್ಯದ ಬೇರೆ ಬೇರೆ ಭಾಗಗಳಿಗೂ ಗುರಿ ಸತ್ಯವೆಂಬ ದೇವರೇ. ಯೋಚನೆಮಾಡಿ ಬುದ್ಧಿಯಿಂದಲೂ ಜ್ಞಾನದಿಂದಲೂ ಹೊಂದುವ ಆನಂದ ಮಾತ್ರವಲ್ಲ ಅದು; ರಚನಾತ್ಮಕ ಕಾರ್ಯವನ್ನು ನಿತ್ಯಜೀವನಕ್ಕೆ ಅನ್ವಯಿಸಿ ಹೊಂದುವ ಸಾಧನೆ. ಗಾಂಧಿಯವರ ಈ ತತ್ತ್ವವನ್ನು ನಿತ್ಯಜೀವನದಲ್ಲಿ ಆಚರಣೆಗೆ ತರುವ ಮಾರ್ಗವನ್ನು ಕಂಡು ಹಿಡಿಯುವುದು ಸಮ್ಮೇಳನದ ಕಾರ್ಯವಾಯಿತು.

## ಸಡಿಲವಾದ ಸಂಸ್ಥೆ

ಜನರ ಜೀವನವನ್ನು ವ್ಯವಸ್ಥೆಗೊಳಿಸುವುದರಲ್ಲಿ ಹೊರಗಿನ ಬಲಾತ್ಕಾರಕ್ಕಿಂತ ಒಳಗಿನ ಪ್ರೇರಣೆ ಹೆಚ್ಚೆಂದು ಗಾಂಧಿಯವರು ನಂಬಿದ್ದರು. ಆದುದರಿಂದ ಅವರ ಅನುಯಾಯಿಗಳೆನ್ನಿಸಿಕೊಳ್ಳುವವರು ಯಾವ ಒಂದು ಬೇರೆಯ ಸಂಘದ ಮೇಲೆ ಅವಲಂಬಿಸಿದರೂ ಅದು ಗಾಂಧಿ ತತ್ತ್ವಗಳಿಗೆ ವಿರೋಧವಾಗುತ್ತದೆ. ಆದರೆ ಸಮಸ್ತವನ್ನೂ ಬಂಧಿಸುವ ಒಂದು ಸಂಸ್ಥೆ ಇಲ್ಲದಿದ್ದರೂ ಆಗುವುದಿಲ್ಲ. ಆದುದರಿಂದ ಸಮ್ಮೇಳನವು ಒಂದು ಮಧ್ಯಮಾರ್ಗವನ್ನು ಅನುಸರಿಸಿತು.

ಗಾಂಧಿಯವರ ಬೋಧನೆಯಂತೆ ಜೀವನವನ್ನು ನಡೆಸುವುದರಲ್ಲಿ ನಂಬಿಕೆಯುಳ್ಳವರೆಲ್ಲಾ ಆ ಸಂಘದ ಸದಸ್ಯರಾಗಿರಬೇಕೆಂದು ತೀರ್ಮಾನವಾಯಿತು.

## ಸದಸ್ಯರು ಮಾಡಬೇಕಾದುದೇನು ?

ಸಂಸ್ಥೆಗೆ ಸದಸ್ಯರನ್ನು ಮಾಡಬೇಕೆ ? ಮಾಡಬೇಕಾದರೆ ಅದರ ನಿಯಮಗಳೇನು ? ಸದಸ್ಯರನ್ನು ಮಾಡಿಕೊಳ್ಳುವುದು ಹೇಗೆ ಎಂಬ ಪ್ರಶ್ನೆ ಎದ್ದಿತು. ಗಾಂಧಿಯವರ ಧ್ಯೇಯಗಳಲ್ಲಿ ನಂಬಿಕೆಯುಳ್ಳ, ರಚನಾತ್ಮಕ ಕಾರ್ಯಕ್ರಮದ ಯಾವುದಾದರೂ ಒಂದು ಭಾಗವನ್ನು ಅನುಸರಿಸುವ ಪ್ರಯತ್ನ ಮಾಡುತ್ತಿರುವವರೆಲ್ಲಾ ತಾವು ಈ ಸಂಘದ ಸದಸ್ಯರೆಂದುಕೊಳ್ಳಬಹುದೆಂದು ತೀರ್ಮಾನವಾಯಿತು. ಈ ಸದಸ್ಯತ್ವ, ಸಾಧಾರಣವಾದ ಔಪಚಾರಿಕ ಸಂಘಗಳ ಸದಸ್ಯತ್ವದಂತಿಲ್ಲ. ಒಂದು ದೃಷ್ಟಿಯಲ್ಲಿ ಇದರ ಬಂಧನ ಸಡಿಲ. ಮತ್ತೊಂದು ದೃಷ್ಟಿಯಲ್ಲಿ ಅಂದರೆ

ಸದಸ್ಯರಿಗೆ ಗಾಂಧಿಯವರ ಬೋಧನೆಯಲ್ಲಿ ಮಾತ್ರವೇ ಅಲ್ಲ; ದಿನ ದಿನದ ಆಚರಣೆಯಲ್ಲಿಯೂ ಆ ಬೋಧನೆಗಳನ್ನು ಅನುಸರಿಸಬೇಕೆಂಬ ನಂಬಿಕೆಯ ದೆಸೆಯಿಂದ, ಸದಸ್ಯರನ್ನು ಪರಸ್ಪರವಾಗಿ ಬಂಧಿಸುವ ಕಟ್ಟು ಬಿಗಿಯಾದುದೇ. ಆದುದರಿಂದ ತಾನು ಸದಸ್ಯನಾಗಲು ಅರ್ಹ ಎಂದು ಭಾವಿಸಿರುವವರು ಸಂಘದ ಅಧಿಕಾರಿಗಳಿಗೆ ತಮ್ಮ ಹೆಸರನ್ನು ಬರೆದು ಕಳುಹಿಸಬೇಕು ; ಅಷ್ಟೆ. ಸದಸ್ಯ ಎಂಬುದನ್ನು ಉದ್ದೇಶ ಪೂರ್ವಕವಾಗಿ ತೆಗೆದು "**ಸೇವಕ**" ಎಂಬುದನ್ನು ಇಡಲಾಗಿದೆ.

ಆದುದರಿಂದಲೇ ಔಪಚಾರಿಕ ಅರ್ಥವುಳ್ಳ ಸಂಘವೆಂಬುದನ್ನು ಬಿಟ್ಟು ಸಡಿಲವಾದ, ಭ್ರಾತೃತ್ವಸೂಚಕವಾದ ಸಮಾಜ ಎಂಬುದನ್ನು ಉಪಯೋಗಿಸಿದೆ. ಯಾವ ಹೆಸರನ್ನು ಉಪಯೋಗಿಸಬೇಕೆಂಬುದೂ ಚರ್ಚೆಯಾಗಿ ಕೊನೆಗೆ "**ಸರ್ವೋದಯ ಸಮಾಜ**" ಎಂಬ ಹೆಸರು ಒಪ್ಪಿಗೆಯಾಯಿತು. ಗಾಂಧಿಯವರು ತಮ್ಮ ಬೋಧನೆಗಳನ್ನೆಲ್ಲಾ ಅಡಕಮಾಡಲು ಆ ಪದವನ್ನು ಉಪಯೋಗಿಸಿದ್ದರು. ಕೆಲಸಗಾರರ ದೃಷ್ಟಿ ಸರ್ವೋದಯದ ಮೇಲೆ ಅಂದರೆ ಸಮಸ್ತರ ಹಿತದ ಕಡೆಗೇ ಇರುವುದಕ್ಕೂ ಇದರಿಂದ ಸಹಾಯವಾಗುವುದು. ಆದುದರಿಂದ ಸತ್ಯ ಮತ್ತು ಅಹಿಂಸೆಯ ಆಧಾರದಮೇಲೆ ನಮ್ಮ ಜನಾಂಗವನ್ನು ಕಟ್ಟು ವುದೇ ಸರ್ವೋದಯ ಸಮಾಜದ ಗುರಿ ಇಲ್ಲಿ ಜಾತಿ, ಮತ, ಬಂಡ ವಾಳದ ದಬ್ಬಾಳಿಕೆ, ಒಬ್ಬರನ್ನು ಒಬ್ಬರು ತುಳಿಯುವುದು ಇವಾವು ದಕ್ಕೂ ಅವಕಾಶವಿಲ್ಲ. ವ್ಯಕ್ತಿಗಳಿಗೂ ಪಂಗಡಗಳಿಗೂ ಪೂರ್ಣ ಬೆಳ ವಣಿಗೆಯ ಸ್ವಾತಂತ್ರ್ಯವುಂಟು. ನಿರ್ಣಯದಲ್ಲಿ ರಚನಾತ್ಮಕ ಕಾರ್ಯ ಕ್ರಮದ ಮೂಲಕ ಸತ್ಯ ಅಹಿಂಸೆಯನ್ನು ಸ್ಥಾಪಿಸುವುದರಲ್ಲಿ ತೊಡಗಿ ರುವವರನ್ನೆಲ್ಲ ಸಮಾಜದ ಸದಸ್ಯರೆಂದು ಪರಿಗಣಿಸಬೇಕೆಂದು ತೀರ್ಮಾನ ವಾಯಿತು.

## ವಾರ್ಷಿಕ ಮೇಳ

ಸದಸ್ಯರೆಲ್ಲಾ ಒಂದೆಡೆ ಸೇರಲು ವರ್ಷಕ್ಕೆ ಒಂದುಸಲ, ಜನವರಿ ೩೦ ನೇ ತಾರೀಕು ಒಂದು ಮೇಳ. ಮೇಳ ಕಾಂಗ್ರೆಸ್‌ನಂತೆ ದೊಡ್ಡ ಉತ್ಸವವಲ್ಲ ; ಇದು ಬಡವನ ಯಾತ್ರೆ. ಇತರ ಜಾತ್ರೆಗಳಲ್ಲಿ ಮಾಡು

ವಂತೆ ಸದಸ್ಯರು ತಮ್ಮ ಊಟ ತಿಂಡಿಗಳ ವ್ಯವಸ್ಥೆ ತಾವೇ ಮಾಡಿಕೊಳ್ಳಬೇಕು. ಸದಸ್ಯರಿಗೆ ಸಾಧ್ಯವಲ್ಲದ ನೈರ್ಮಲ್ಯ ಮುಂತಾದ ಕೆಲಸಗಳನ್ನು ಮಾಡುವ ಏರ್ಪಾಡನ್ನು ಮಾಡಲಾಗುವುದು ಸೇವಕರು ತಮ್ಮ ತಮ್ಮ ಕಾರ್ಯರಂಗದಲ್ಲಿಯ ಅನುಭವಗಳನ್ನು ವಿಚಾರ ವಿನಿಮಯಮಾಡಿ ಮುಂದಲ ಕಾರ್ಯಕ್ಕೆ ಬೇಕಾದ ಸ್ಫೂರ್ತಿಯನ್ನು ಈ ಮೂಲಕ ಹೊಂದುವರು. ಸರ್ವೋದಯಸಮಾಜ ಯಾವ ಪಕ್ಷ ಅಥವ ಸಂಗಡ ಅಲ್ಲ. ಅದರ ಸದಸ್ಯರು ತಮ್ಮ ಜೀವನದಲ್ಲಿ, ಯಾರ ಭಯ ಪ್ರಶಂಸೆಗಳನ್ನೂ ಲೆಕ್ಕಿಸದೆ ಗಾಂಧಿ ತತ್ತ್ವಗಳನ್ನು ಆಚರಿಸುವರು. ಸಮಾಜದ ಹೆಸರಿನಲ್ಲಿ ಯಾರು ಯಾವ ಕಾರ್ಯವನ್ನೂ ಮಾಡಕೂಡದು. ಪ್ರತಿಯೊಂದು ವ್ಯಕ್ತಿಯ ಆತ್ಮಶುದ್ಧಿಯೇ ಅವನವನ ಯೋಗ್ಯತೆ. ಸರ್ವೋದಯಸಮಾಜ ತನ್ನ ಸದಸ್ಯರ ಉರಿಯುತ್ತಿರುವ ಜ್ಯೋತಿಯನ್ನು ಆರಿಸದಂತೆ ಕೆಲಸಮಾಡುವುದು.

## ಜಾತೀಯ ಸೌಹಾರ್ದ

ಜಾತೀಯ ಸೌಹಾರ್ದ, ಬಹು ಮುಖ್ಯ ಪ್ರಶ್ನೆ. ಗಾಂಧಿಯವರು ತಮ್ಮ ಬಾಳಿನ ಮುಖ್ಯ ಭಾಗವನ್ನು ಈ ಪ್ರಶ್ನೆಗೆ ಅರ್ಪಿಸಿದರು. ಪ್ರಶ್ನೆ ಬರಬರುತ್ತಾ ಹೆಚ್ಚು ಜಟಿಲವಾಗುತ್ತಾ ಬಂತು. ಗಾಂಧಿಯವರ ಸದುದ್ದೇಶವನ್ನು ಸಹ ಕೆಲವರು ನಂಬಲಿಲ್ಲ. ದೇಶ ಇಬ್ಭಾಗವಾದರೂ ಹಿಂದು-ಮುಸಲ್ಮಾನ ಪ್ರಶ್ನೆ ಸಹ ತೀರ್ಮಾನವಾಗಿಲ್ಲ. ವಿಭಾಗದ ನಂತರ ಜನ ಅವರ್ಣನೀಯವಾದ ಕಷ್ಟಕ್ಕೊಳಗಾದರು. ಲಕ್ಷಾಂತರ ಜನ ಪ್ರಾಣತೆತ್ತರು. ಅನೇಕ ಕೋಟಿ ರೂಪಾಯಿಗಳ ಬೆಲೆಯ ಪದಾರ್ಥಗಳು ನಾಶವಾಗಿವೆ. ಹಿಂದು-ಮುಸಲ್ಮಾನ್, ಸಿಖ್ಖರು ಅನಾಥರಾಗಿ ದೇಶ ದೇಶ ತಿರುಗುತ್ತಿದ್ದಾರೆ. ಪಶ್ಚಿಮ ಪಾಕಿಸ್ಥಾನದಲ್ಲಿಯೂ ಸಿಖ್ಖರೂ ಹಿಂದುಗಳೂ ಇನ್ನು ಅನೇಕ ಲಕ್ಷ ಸ್ಥಳಾಂತರವಾಗಲು ಕಾದಿದ್ದಾರೆ. ಪಾಕಿಸ್ಥಾನದಿಂದ ಭಾರತಕ್ಕೆ ಅರ್ಧಕೋಟಿ ಜನ ಸ್ಥಳಾಂತರವಾಗಿದ್ದಾರೆ. ಪೂರ್ವ ಪಾಕಿಸ್ಥಾನದಿಂದ ಪಶ್ಚಿಮ ಬಂಗಾಳಕ್ಕೆ ಏಳೆಂಟು ಲಕ್ಷ ಜನರು ಹೋಗಿದ್ದಾರೆ. ತಮ್ಮ ಪೂರ್ವಿಕರ ಮನೆಗಳನ್ನು ಬಿಟ್ಟು ಸಾವಿರಾರು ಮೈಲಿಗಳ ದೂರ ದೇಶದಲ್ಲಿ

ಹೋಗಿ ಹೊಸದಾಗಿ ಸ್ಥಾಪಿಸುವ ಸಂಕಟ ಊಹನಾತೀತ. ಇದರಿಂದ ದ್ವೇಷಾಸೂಯೆ ಬೆಳೆದರೆ ಆಶ್ಚರ್ಯವಲ್ಲ. ತಮ್ಮ ತಮ್ಮ ಮತದವರ ಕಷ್ಟ ನೋಡಿ ಹಿಂದು-ಮುಸಲ್ಮಾನ ಸಿಖ್ಖರು ದುಃಖಿತರಾಗಿದ್ದಾರೆ. ದೇಶವನ್ನು ವಿಭಾಗಿಸಿದುದರಿಂದ ಜಾತೀಯತೆಯ ಪ್ರಶ್ನೆ ಪರಿಹಾರ ವಾಗಲಿಲ್ಲ. ಕೆಲವು ದೃಷ್ಟಿಯಿಂದ ಅದು ಇನ್ನೂ ಜಟಿಲವಾಗಿದೆ.

ಗಾಂಧಿಯವರು ಈ ಭೂತಕ್ಕೆ ಎದುರಾಗಿ ಹೋರಾಡಿದರು. ತಮ್ಮ ಸಮಸ್ತ ಶಕ್ತಿಯನ್ನೂ ಹಿಂದು-ಮುಸಲ್ಮಾನ ಸೌಹಾರ್ದಸ್ಥಾಪನೆ ಗಾಗಿ ಧಾರೆ ಎರೆದರು ಅವರ ಸರ್ವೌಷಧಿಯಾದ ಅಹಿಂಸೆಯ ಅಸ್ತ್ರ ದಿಂದ ಜಾತೀಯ ಸೌಹಾರ್ದ ಸ್ಥಾಪನೆಗೆ ಪ್ರಯತ್ನಿಸುತ್ತಿದ್ದರು. ನಮ್ಮ ದೇಶದ ಹಿಂದುಗಳೂ ಸಿಖ್ಖರೂ ಭಾರತದ ಮುಸಲ್ಮಾನರನ್ನು ಚೆನ್ನಾಗಿ ನಡೆಸಿಕೊಂಡರೆ, ಪಾಕಿಸ್ಥಾನದವರು ಹಿಂದುಗಳನ್ನು ಸರಿ ಯಾಗಿಯೇ ರಕ್ಷಿಸುವರೆಂದು ಅವರು ನಂಬಿದ್ದರು.

ಈ ಗುರಿಗಾಗಿ ಒಂದು ಶಾಂತಿ ಸೇನಾದಳವನ್ನು ಸ್ಥಾಪಿಸಬೇಕೆಂ ಬುದು ಗಾಂಧಿಯವರ ಉದ್ದೇಶವಾಗಿತ್ತು. ಆ ದಳದ ಧ್ಯೇಯ ಮತ್ತು ಕಾರ್ಯ, ಜನರಲ್ಲಿ ಶಾಂತಿಸ್ಥಾಪನೆಯೇ. ಜಾತೀಯ ಭಿನ್ನತೆಯನ್ನು ಅಳಿಸಲು ಇಂತಹ ಒಂದು ದಳ ಅವಶ್ಯಕ. ಈ ದಳದ ಕಾರ್ಯ ಜಾತೀಯ ದಂಗೆ ಎದ್ದಾಗ ಪೋಲೀಸಿನವರಂತೆ ಅದನ್ನು ಅಡಗಿಸುವು ದಲ್ಲ. ಜನತೆಯಲ್ಲಿ ಸೇರಿ ಸೌಹಾರ್ದ ಮತ್ತು ಸದಿಚ್ಛಾಕಾರ್ಯ ಮಾಡಿ ಜಾತೀಯ ಹೋರಾಟವೇ ನಡೆಯದಂತಹ ವಾತಾವರಣವನ್ನು ಸ್ಥಾಪಿಸುವುದು. ಇಂತಹ ಶಾಂತಿ ದಳಕ್ಕೆ ಆಯುಧಗಳಿಲ್ಲ. ಅಹಿಂಸೆಯೇ ಅದರ ಆಯುಧ.

ಗಾಂಧಿ ಅನುಯಾಯಿಗಳೆಲ್ಲ ಸರ್ವೋದಯ ಸಮಾಜದ ಸದ ಸ್ಯರು. ಯಾರು ದೇವರಿಗೂ ತಮ್ಮ ಅಂತರಾತ್ಮನಿಗೂ ಮಾತ್ರ ಹೆದರಿ ಕೊಂಡು ಜನತಾ ಸೇವೆಯಲ್ಲಿ ತೊಡಗಿದ್ದಾರೆಯೋ ಅವರೆಲ್ಲಾ ಸರ್ವೋ ದಯಸಮಾಜದವರು. ಗಾಂಧಿಯವರ ಪಟ್ಟಶಿಷ್ಯರಾದ ವಿನೋಬ ಭಾವೆಯವರು ಸರ್ವೋದಯಸಮಾಜವನ್ನು ಕುರಿತು ಹೀಗೆ ಹೇಳಿ ದ್ದಾರೆ. "ಸರ್ವೋದಯಸಮಾಜ ಜಗತ್ತಿಗೆ ಸೇರಿದ್ದು. ಸರ್ವರ ಹಿತವೇ

ಸಮಾಜದ ಗುರಿ. ಆದರೆ ಒಂದು ನಿಯಮವನ್ನು ಮಾತ್ರ ಅನುಸರಿಸ ಬೇಕು. ವ್ಯಕ್ತಿ ಜೀವನದಲ್ಲಿಯೂ ಸಾಮಾಜಿಕ ವ್ಯವಹಾರದಲ್ಲಿಯೂ ಹಿಂಸೆಯನ್ನೂ ಅಸತ್ಯವನ್ನೂ ಬಿಡಬೇಕು. ಸರ್ವೋದಯಸಮಾಜದ ಸದಸ್ಯರು ತಮ್ಮ ಅಂತರಂಗವನ್ನು ಪರೀಕ್ಷಿಸಿಕೊಳ್ಳಬೇಕು. ಅವರು ಹಿಂದೆ ತಪ್ಪುಮಾಡಿದ್ದಿರಬಹುದು. ಆದರೆ ಇನ್ನು ಮುಂದೆ ಮಾಡುವು ದಿಲ್ಲವೆಂದು ನಿಶ್ಚಯಿಸಿಕೊಂಡರೆ ಆಯಿತು. "

ಸರ್ವೋದಯಸಮಾಜದ ಸದಸ್ಯರು ಈ ಕೆಳಗಿನ ಏಳು ನಿಯಮ ಗಳನ್ನು ಪಾಲಿಸಬೇಕು.

(೧) ಪ್ರತಿಯೊಬ್ಬನೂ ನಿಯಮಿತವಾಗಿ ನೂಲಬೇಕು. ಇದು ಬರಿಯ ಶಾಸ್ತ್ರವಲ್ಲ. ಪ್ರತಿಯೊಬ್ಬರೂ ಹುಡುಗರಾಗಲಿ, ಮುದುಕ ರಾಗಲಿ, ಯಾವುದಾದರೂ ಕೆಲಸ ಮಾಡಲೇಬೇಕೆಂಬುದು ಜೀವನದ ಮೂಲನಿಯಮ. ಒಗ್ಗಟ್ಟನಿಂದ ಕೆಲಸಮಾಡಿದರೆ ಹೇಗೆ ಫಲವುಂಟೆಂ ಬುದಕ್ಕೆ ನೂಲುವುದು ಒಳ್ಳೆಯ ಉದಾಹರಣೆ. ಅದೇ ಸರ್ವೋದಯ ದಲ್ಲಿ ಮೊದಲ ಪ್ರವೇಶ.

(೨) ಖಾದಿಯನ್ನೇ ಧರಿಸಬೇಕು.

(೩) ಸಾಧ್ಯವಾದ ಮಟ್ಟಿಗೆ ಹಳ್ಳಿಯಲ್ಲಿ ತಯಾರಾದ ಪದಾರ್ಥ ಗಳನ್ನೇ ಉಪಯೋಗಿಸಬೇಕು.

(೪) ಸಾಧ್ಯವಾದ ಮಟ್ಟಿಗೆ, ತನ್ನ ಮನೆಯಲ್ಲಿ ಹಸುವಿನ ಹಾಲನ್ನೇ ಉಪಯೋಗಿಸಬೇಕು.

(೫) ಸರ್ವೋದಯಸಮಾಜದ ಸದಸ್ಯರು, ತಿಂಗಳಿಗೆ ಒಂದು ಸಲ ವಾದರೂ ಝಾಡಮಾಲಿಯಾಗಬೇಕು; ಅಥವ ಹಳ್ಳಿಯನ್ನು ಶುದ್ಧ ಮಾಡಬೇಕು.

(೬) ಮೂಲ ಶಿಕ್ಷಣದ ಶಾಲೆಗಳಿರುವ ಕಡೆ, ಅಲ್ಲಿಯೇ ತನ್ನ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಬೇಕು.

(೭) ಸರ್ವೋದಯಸಮಾಜದ ಸದಸ್ಯ ದೇವನಾಗರಿಯನ್ನೂ ಉರ್ದುವನ್ನೂ, ದಕ್ಷಿಣ ಭಾರತದ ಒಂದು ಲಿಪಿಯನ್ನೂ ಕಲಿಯಬೇಕು.

ಕೊನೆಯ ನಿಯಮದ ವಿಚಾರದಲ್ಲಿ ಆಚಾರ್ಯ ವಿನೋಬಭಾವೆ

ಹೀಗೆ ಹೇಳಿದ್ದಾರೆ. “ ದೇವನಾಗರಿ ಮತ್ತು ಉರ್ದು ಜತೆಗೆ, ದ್ರಾವಿಡ ಭಾಷೆಯನ್ನೂ ಕಲಿಯಬೇಕೆಂಬುದು ನನ್ನ ಸಲಹೆ. ಇದಾಗದೆ, ಭಾರತದ ಒಗ್ಗಟ್ಟು ಸಾಧ್ಯವಿಲ್ಲ. ಲಿಪಿಯ ಜತೆಯಲ್ಲಿ ಭಾಷೆಯ ಜ್ಞಾನವೂ ಬಂದೇ ಬರುವುದು. ದಕ್ಷಿಣ ಭಾರತದಲ್ಲಿ ನಾಲ್ಕು ಭಾಷೆಗಳೂ ಮೂರು ಲಿಪಿಗಳೂ ಇವೆ. ಯಾವುದಾದರೂ ಒಂದನ್ನು, ಈ ತತ್ತ್ವದೃಷ್ಟಿಯಿಂದ ಕಲಿತರೆ ಸಾಕು. ಇದರ ಪ್ರಾಮುಖ್ಯತೆ ಮುಂದಟ್ಟಿದರೆ ಕಲಿಯುವುದು ಕಷ್ಟವಿಲ್ಲ. ಉತ್ತರ ಭಾರತದ ಭಾಷೆ ದಕ್ಷಿಣದವರಿಗೆ ಹೇಗೆ ಕಷ್ಟವೋ, ಉತ್ತರದವರಿಗೂ ದಕ್ಷಿಣದವರ ಭಾಷೆ ಅಷ್ಟೇ ಕಷ್ಟ, ಆದರೆ ಕಷ್ಟದ ಮಾತಂತಿರಲಿ; ಭಾರತದ ಒಗ್ಗಟ್ಟಿಗಾಗಿ ನೀವು ಹಿಂದಿ ಕಲಿಯಿರಿ ಎಂದು ನಾವು ದಕ್ಷಿಣದವರನ್ನು—ಆ ಒಗ್ಗಟ್ಟಿಗೆ ನಾವು ಮಾತ್ರ ಯಾವ ಪ್ರಯತ್ನವನ್ನೂ ಮಾಡದೆ—ಕೇಳುವುದು ನಮಗೆ ಭೂಷಣವಲ್ಲ. ಹಾಗೆ ಮಾಡಿದರೆ ಕಾರ್ಯವಾಗುವುದಿಲ್ಲ. ಲಿಪಿಯನ್ನು ಮೊದಲು ಕಲಿತು ಅನಂತರ, ಪರಿಚಿತವಾದ ಭಗವದ್ಗೀತಾ ಮುಂತಾದ ಯಾವುದಾದರೂ ಗ್ರಂಥವನ್ನು ಆ ಭಾಷೆಯಲ್ಲಿ ಓದುವುದರಿಂದ ಭಾಷೆ ಸುಲಭವಾಗಿ ಬರುವುದು. ತಮಿಳಿನಲ್ಲಿ ಬರೆಯುವಂತೆ, ಎಲ್ಲಾ ಭಾಷೆಗಳಲ್ಲಿಯೂ ಒತ್ತಕ್ಷರವನ್ನು ತೆಗೆದು ಹಿಂದಲ ಅಕ್ಷರದ ಮೇಲೆ ಚಿಕ್ಕಿ ಇಟ್ಟರೆ ಭಾಷೆಗಳನ್ನು ಕಲಿಯುವುದು ಸುಲಭವಾಗುವುದು.”

ಹೀಗೆ ಗಾಂಧಿ ಅನುಯಾಯಿಗಳೆನ್ನಿಸಿಕೊಳ್ಳುವವರು ಈ ಏಳು ನಿಯಮಗಳನ್ನೂ ಅನುಸರಿಸಬೇಕು. ಈ ನಿಯಮಗಳನ್ನು ಆನಂದದಿಂದ, ಸ್ವಂತ ಇಚ್ಛೆಯಿಂದ ಅನುಸರಿಸಬೇಕೇ ಹೊರತು ಬಲಾತ್ಕಾರದಿಂದ ಹೊರೆಯಾಗಿ ಅನುಸರಿಸಬಾರದು. ಗಾಂಧಿ ಅನುಯಾಯಿಗಳು ಈ ನಿಯಮಗಳನ್ನು ಅನುಸರಿಸಿದ ಮಾತ್ರದಿಂದಲೇ ತಮ್ಮನ್ನು ಇತರರೊಂದಿಗೆ ಹೋಲಿಸಿಕೊಂಡು ತಾವು ಉತ್ತಮರು ಎಂದು ಹೆಮ್ಮೆಪಡಬಾರದು.

“ ಗಾಂಧಿ ಪಂಥ, ಒಂದು ಪಂಗಡವಾಗಬಾರದು. ಈ ಪಂಥದಲ್ಲಿ ದೋಷಗಳಿದ್ದರೆ ಅದು ನಾಶವಾಗಲಿ. ಸತ್ಯವೂ ಅಹಿಂಸೆಯೂ

ಎಂದಿಗೂ ನಾಶವಾಗುವುದಿಲ್ಲ. ಗಾಂಧಿ ಪಂಥ ಒಂದು ಮತಪಂಗಡ ವಾದರೆ ಅದು ನಾಶವಾಗಬೇಕಾದುದೇ. "ನನ್ನ ಮರಣಾನಂತರ, ನನ್ನ ತತ್ತ್ವಗಳೆಲ್ಲಾ ಬರಿಯ ಒಣಪದ್ಧತಿಗಳಾದವೆಂದು ತಿಳಿದರೆ ನನಗೆ ಬಹಳ ದುಃಖವಾಗುವುದು. ನಾವು ಮೌನವಾಗಿ, ನಿಶ್ಶಬ್ದವಾಗಿ ಕೆಲಸ ಮಾಡಬೇಕು. ನಾನು ಗಾಂಧಿಯ ಅನುಯಾಯಿ ಎಂದು ಯಾರೂ ಹೇಳಿಕೊಳ್ಳಬೇಡಿ. ನಾನೇ ನನ್ನ ಅನುಯಾಯಿಯಾದರೆ ಸಾಕು. ನಾನೇ ನನ್ನ ಪೂರ್ಣ ಅನುಯಾಯಿಯಲ್ಲವೆಂಬುದು ನನಗೆ ಗೊತ್ತು. ಯಾಕೆಂದರೆ ನನ್ನ ಧ್ಯೇಯಕ್ಕನುಸಾರವಾಗಿ ಬಾಳುವುದು ನನ್ನಿಂದ ಸಾಧ್ಯವಾಗಿಲ್ಲ.

"ನಾನು ಗಾಂಧಿಯ ಅನುಯಾಯಿ ಎಂದು ಹೇಳಿಕೊಳ್ಳುವುದ ರಿಂದ ಯಾರೂ ಅನುಯಾಯಿಯಾಗುವುದು ಬೇಡ. ಆಚರಣೆಯನ್ನು ನೋಡಿದರೆ 'ಈತ ದೇವರ ಅನುಯಾಯಿ' ಎಂಬುದು ತಿಳಿಯಲಿ. ಎಂದು ಗಾಂಧಿ ಹೇಳಿದ್ದಾರೆ."

ಇವು ಸರ್ವೋದಯಸಮಾಜದ ಸದಸ್ಯರಿಗೆ ನಿಯಮಗಳು. ಆದರೆ ಈ ನಿಯಮವನ್ನು ಪಾಲಿಸುವವರೆಲ್ಲಾ ಆ ಸಮಾಜದ ಸದಸ್ಯರೆ. ಗಾಂಧಿಯವರ ಆದರ್ಶದಲ್ಲಿ ನಡೆಯುವ ಭಾರತೀಯರು ಮಾತ್ರವೇ ಅಲ್ಲ; ಜಗತ್ತಿನಲ್ಲಿರುವವರೆಲ್ಲಾ ಆ ಸಮಾಜದ ಸದಸ್ಯರು.

---

# ೧೮ ಗಾಂಧಿಯವರ ದೃಷ್ಟಿಯ

## ರಾಮರಾಜ್ಯ

ಇವತ್ತು ನಾನು ಮಾತನಾಡಬೇಕೆಂದು ಹೇಳಿರುವುದು ಗಾಂಧಿಯವರ ದೃಷ್ಟಿಯ ರಾಮರಾಜ್ಯವನ್ನು ಕುರಿತು. ರಾಮರಾಜ್ಯವೆಂಬುದೇ ನಮಗೆ ಮನೋಹರವಾದ ಹೆಸರು. ರಾಮನನ್ನು ಅನೇಕರು ದೇವರೆಂದು ಭಾವಿಸಿರುವುದೊಂದೇ ಇದಕ್ಕೆ ಕಾರಣವಲ್ಲ. ಆದಿಕವಿ ವಾಲ್ಮೀಕಿ, ವೀಣೆಯ ತಂತಿಯ ಮಂದರ ನಿಸ್ವನದಂತಹ ಗಾನದಲ್ಲಿ ಸ್ವಚ್ಛಂದವಾದ ನಿರರ್ಗಳವಾದ ತನ್ನದೇ ಆದ ಶೈಲಿಯಲ್ಲಿ, ತನ್ನಿಂದಲೇ ನಿಯಮಿತವಾದ ಕಾವ್ಯನಿಯಮಕ್ಕೆ ಮಾತ್ರ ಒಳಗಾಗಿ " ನಿಯತಿಕೃತ ನಿಯಮರಹಿತಾಂ ಹ್ಲಾದೈಕಮಯೀಂ, ಅನನ್ಯ ಪರತಂತ್ರಾಂವಾಕ್ ಶ್ರೀ"ಯನ್ನು ಧಾರೆಧಾರೆಯಾಗಿ ಹರಿಸಿ, ಯುಗಯುಗಾಂತರಗಳ ಭಾರತ ಸಂಸ್ಕೃತಿ ಕಥೆಗಳನ್ನು ಆ ಕಾವ್ಯದಲ್ಲಿ ಚಿತ್ರಿಸಿರುವುದು ಮಾತ್ರವೇ ಕಾರಣ ಅಲ್ಲ. ರಾಮಾಯಣದ ಪಾತ್ರಗಳು ಹಳೆಯವೇ ಆದರೂ ಚಿರನೂತನವಾಗಿ ಕ್ಷಣಕ್ಷಣಕ್ಕೂ ರಮಣೀಯವಾದ ಹೊಸ ಅರ್ಥಗಳನ್ನು ಸ್ಫುರಿಸುವುದಾಗಿ, ಭಾರತದ ಅನಾದಿ ಸನಾತನ ಧರ್ಮದ ಕುರುಹುಗಳಾದ ಸತ್ಯ, ಧರ್ಮ, ಪ್ರಜಾಹಿತೈಷಿ ರಾಜ, ಆದರ್ಶಪುತ್ರ ಧರ್ಮ ಏಕಪತ್ನೀವ್ರತ, ಪಾತಿವ್ರತ್ಯ, ದೈವೀ ಆಸುರೀ ಶಕ್ತಿಗಳ ಹೋರಾಟ ತ್ಯಾಗ, ಸಹನೆ ಔದಾರ್ಯಗಳ ಖನಿಯಾಗಿ ಒಂದೊಂದು ನೀತಿ ತತ್ವದ ಪಡಿಯಚ್ಚುಗಳಾಗಿರುವುದು ಮಾತ್ರವೇ ಕಾರಣವಲ್ಲ. ಇವುಗಳೆಲ್ಲವುಗಳ ಮಿಳನದಿಂದ ಶ್ರೀರಾಮ ಎಂಬ ಹೆಸರು ಅತ್ಯಂತ ಪ್ರಿಯವಾದುದು. ಮನುಷ್ಯನಾಗಿ ಜನಿಸಿ ಸಂಸಾರ ಜೀವನದ ಸಮಸ್ತ ಅವಸ್ಥೆಗಳನ್ನೂ ಧೈರ್ಯದಿಂದ ಎದುರಿಸಿ, ಕೊನೆಯಲ್ಲಿ ಮಾನವನ ಆತ್ಮದ ಗುರಿಯಾದ ದೇವತ್ವವನ್ನು ಪಡೆದ, ಕವಿಯ ಅಮೃತವಾಗ್‌ಝರಿಯ ದಿವ್ಯದರ್ಶನವೇ ಶ್ರೀರಾಮಚರಿತ್ರೆ. ಕರತಲಾಮಲಕದಂತೆ ಶ್ರೀರಾಮಚರಿತ್ರೆಯನ್ನು ಮನೋನೇತ್ರದಿಂದ ಭಾವನೆಯ ಜ್ಯೋತಿಯಲ್ಲಿ ಕಂಡರೂ ಕವಿಋಷಿ ವಾಲ್ಮೀಕಿ ಸಹಾ

ಅರಿಯದ ಭಾಗಗಳು, ಶ್ರೀರಾಮಚಂದ್ರನ ಚಾರಿತ್ರದಲ್ಲಿ ಇದ್ದಿರಬಹುದು. ಅವನ್ನೆಲ್ಲಾ ಕವಿ ನಮ್ಮ ಊಹನೆಗೆ ಬಿಟ್ಟಿದ್ದಾನೆ. ರಾಮಾಯಣ ಸರ್ವಾವರಣೀಯ. ಗಂಗೆ ಭಾರತದ ಕೆಲವು ಭಾಗದಲ್ಲಿ ಮಾತ್ರ ಹರಿಯುತ್ತದೆ. ಆದರೆ ರಾಮಾಯಣದ ಅಮೃತಪ್ರವಾಹ ಭಾರತವನ್ನೆಲ್ಲ ಸೇಚನೆ ಮಾಡುತ್ತಿದೆ.

ಈ ನವರಾತ್ರಿಯಲ್ಲಿ ಜಗದಾಹ್ಲಾದಕರನಾದ ಶ್ರೀರಾಮಚಂದ್ರನನ್ನು ಧ್ಯಾನಮಾಡುವ ಸುಯೋಗ ದೊರೆತುದರಿಂದ ನಾವು ಧನ್ಯರು. ಅಂದಿನ ಕಾಲದಲ್ಲಿ ಜೀವಿಸಿದ್ದು, ಶ್ರೀರಾಮಚಂದ್ರನ ಪಾದಸ್ಪರ್ಶದಿಂದ ಪವಿತ್ರವಾದ ಅಯೋಧ್ಯಾನಗರದಲ್ಲಿ ಸಂಚರಿಸುತ್ತಾ, ಆತನ ಚೈತನ್ಯದಾಯಕ ಸವಿನುಡಿಗಳ ಅಮೃತಾಸ್ವಾದದಿಂದ ಉಲ್ಲಾಸಿಗಳಾದ ಆ ಜನ, ಆ ವನ, ಆ ಕಪಿಗಳು, ಆ ದೈತ್ಯರು ಎಲ್ಲರನ್ನೂ ಕಂಡು ನಮಗೆ "ಅಯ್ಯೋ ನಾವು ಆ ಕಾಲದಲ್ಲಿ ಆ ಸಾನ್ನಿಧ್ಯದಲ್ಲಿ ಇರಲಿಲ್ಲವಲ್ಲ?" ಎಂದು ಹೊಟ್ಟೆಕಿಚ್ಚುಂಟಾಗುತ್ತದೆ. ಆದರೆ ನಮಗೆ ದಿವ್ಯದೃಷ್ಟಿ ಇರಬಲ್ಲುದಾದರೆ, ಅಂದಿನ ಜನ ಇಂದು ನಮ್ಮನ್ನು ನೋಡಿ "ಅಯ್ಯೋ ನಾವು ಗಾಂಧಿ ಯುಗದಲ್ಲಿ ಇಲ್ಲವೆಲ್ಲ? ಗಾಂಧಿಯನ್ನು ನೋಡುವ ಪುಣ್ಯಪಡೆದ ಜನರು ಎಂತಹ ಸುಕೃತಶಾಲಿಗಳು" ಎಂದು ಕೊರಗುವುದನ್ನು ಕಾಣಬಹುದು. ಜಾಂಬುವಂತನಿಗೆ ಒಂದುಸಲ ರಾಮನೂ ಕೃಷ್ಣನೂ ಇಬ್ಬರೂ ಒಬ್ಬರೇ ಆಗಿ ತೋರಿದರೆಂದು ಕತೆಯಿದೆ.

ಮಹಾತ್ಮ ಗಾಂಧಿಯವರ ಜನ್ಮೋತ್ಸವ ಹೀಗೆ ನವರಾತ್ರಿಯಲ್ಲಿ ಬರುವುದು ಒಂದು ಆಕಸ್ಮಿಕವೆಂದು ನಾನು ಎಣಿಸಿಲ್ಲ. ೧೯೪೬ನೇ ಜನವರಿಯಲ್ಲಿ ಮಹಾತ್ಮ ಗಾಂಧಿಯವರು ಹಿಂದೂಸ್ಥಾನಿ ಸಭೆಯ ರಜತೋತ್ಸವಕ್ಕಾಗಿ ಮದರಾಸಿಗೆ ಆಗಮಿಸಿದ್ದರು. ಆಗ ಹಿಂದುಸ್ಥಾನಿ ಸಭೆಯ ಪ್ರವೇಶದ ತ್ಯಾಗರಾಜ ನಗರದ ನಾಲ್ಕು ಮಹಾದ್ವಾರಗಳನ್ನು ಹೊಸದಾಗಿ ಕಟ್ಟಿ ಅಲಂಕರಿಸಿದ್ದರು. ಒಂದು ಮಹಾದ್ವಾರ ದಂಡಿ ಯಾತ್ರೆಯನ್ನು ಚಿತ್ರಿಸುವುದಾಗಿದ್ದಿತು. ಅದರಲ್ಲಿ ಮಹಾತ್ಮರನ್ನು ಶ್ರೀರಾಮನಂತೆಯೂ, ಕಸ್ತೂರಿಬಾರವರನ್ನು ಸೀತಾದೇವಿಯಂತೆಯೂ ಚಿತ್ರಿಸಿದ್ದರು. ನಿಜವಾಗಿ ಮಹಾತ್ಮ ಗಾಂಧಿಯವರು ಉಳಿದ ಏಸು, ಬುದ್ಧ

ಎಲ್ಲರಿಗಿಂತ ಹೆಚ್ಚಾಗಿ ಶ್ರೀರಾಮಚಂದ್ರನನ್ನು ಹೋಲುತ್ತಾರೆ. ಜಗತ್ತಿನ ಅತ್ಯಂತ ಪ್ರಬಲವಾದ ಜರ್ಮನಿ, ಜಪಾನುಗಳನ್ನು ಮಟ್ಟ ಹಾಕಿದ ಬ್ರಿಟಿಷರನ್ನು, ಬರಿಯ ಅಹಿಂಸೆಯ ಅಸ್ತ್ರದಿಂದಲೇ, ವಿಶ್ವಾಮಿತ್ರನ ದಿವ್ಯಾಸ್ತ್ರಗಳನ್ನೆಲ್ಲ ವಸಿಷ್ಟನು ಬರಿಯ ಬ್ರಹ್ಮದಂಡದಿಂದಲೇ ಮಣ್ಣುಗೂಡಿಸಿದಂತೆ, ಮಣ್ಣುಗೂಡಿಸಿದ ಗಾಂಧಿ, ರಾವಣ, ಕುಂಭಕರ್ಣ, ಹೈರಾವಣ ಮೈರಾವಣ ಮತ್ತು ಇಂದ್ರಜಿತುಗಳ ನಾನಾಬಗೆಯ ಮಾಯಾಸ್ತ್ರಗಳನ್ನು ಕಪಿ, ಕರಡಿ, ಶಿಂಗಳೀಕ, ಕಲ್ಲು, ಮರಗಳ ಅವ್ಯವಸ್ಥಿತವಾದ ದೊಂಬಿಸೇನೆಯಿಂದ ರಾಮನು ಸೋಲಿಸಿದಂತೆ, ನಿಶ್ಶಸ್ತ್ರರಾದ ನಿರ್ವೀರ್ಯರಾದ ಭಾರತೀಯರಿಂದ ಸೋಲಿಸಿದರು.

ಪರತಂತ್ರವ ಮುರಿಯಲವಂ
ನಿರವಿಸಿದನದೊಂದ ಪೂರ್ವ ಸಾತ್ವಿಕ ಬಲಮಂ
ಪುರುಷತೆಯಂ ಕ್ಲೀಬರ್ಗಿ
ತ್ತರುಧಿರ ರಣದಿಂ ಪ್ರಜಾಸ್ವರಾಜ್ಯವ ತಂದಂ †

ಇದು ಮಾತ್ರವೇ ಅಲ್ಲ. ಸತ್ಯಪ್ರಿಯತೆ ಶುದ್ಧತೆ ಧೈರ್ಯಸಾಹಸ ಕ್ಷಮೆ, ಬ್ರಹ್ಮಚರ್ಯ ಇಂದ್ರಿಯ ನಿಗ್ರಹಗಳ ಹೊಸ ಹೊಸ ಪ್ರಯೋಗಗಳು ಇವುಗಳೆಲ್ಲದರ ಅನುಷ್ಠಾನದಲ್ಲಿಯೂ ಗಾಂಧಿಯವರು ಶ್ರೀರಾಮಚಂದ್ರನ ಜ್ಞಾಪಕವನ್ನೇ ತರುತ್ತಾರೆ.

ಮಹಾತ್ಮ ಗಾಂಧಿಯವರಿಗೆ ಶ್ರೀರಾಮನು ದೊಡ್ಡ ಸತ್ಯ ; ದೇವರೂ ಅಹುದು. ಅವರ ಪ್ರಾರ್ಥನೆಯಲ್ಲಿ ರಾಮಭಜನೆಗೆ ಪ್ರಾಧಾನ್ಯ. ಬೆಳಗಿನ ಜಾವದ ಬ್ರಾಹ್ಮೀ ಮುಹೂರ್ತದಲ್ಲಿ ತುಲಸೀದಾಸ ರಾಮಾಯಣದಿಂದ ಗೀತೆಗಳು ಸುಮನೋಹರ ಧ್ವನಿಯಲ್ಲಿ ಅವರ ಎದುರಿಗೆ ಮೊಳಗುತ್ತಿದ್ದವು. ವಿಗ್ರಹಾರಾಧನೆಯ ವಿರೋಧಿಗಳಂತೆ ರಾಮಪೂಜೆಯ ವಿರೋಧಿಗಳೂ ಇಲ್ಲದಿಲ್ಲ. ಅಂಥವರ ಪೈಕಿ ಒಬ್ಬರು ಒಂದುಸಲ ಗಾಂಧಿಯವರಿಗೆ "ನೀವು ಸಾರ್ವಜನಿಕ ಪ್ರಾರ್ಥನೆಯ ನೆಪದಲ್ಲಿ ರಾಮನೆಂಬ ಒಬ್ಬ

---

† ಮಹಾತ್ಮ ಗಾಂಧಿ ಜ್ಞಾಪಕ ಪದ್ಯ ಸಂಗ್ರಹ_ಡಿ.ವಿ.ಜಿ.

ರಾಜನ ಪೂಜೆಗೆ ಜನರನ್ನು ಅಳುವಡಿಸುತ್ತಿದ್ದೀರಿ." ಎಂದು ಆಕ್ಷೇಪಿಸಿದರು. ಗಾಂಧಿಯವರು "ರಾಮನೆಂಬುವನು ನೀವು ಅರಿತಂತೆ ಬರಿಯ ದಶರಥನ ಮಗ ಮಾತ್ರವಲ್ಲ. ಅವನು ದಶರಥನ ಮಗನೂ ಆಗಿದ್ದಿರಬಹುದು. ಆದರೆ ಆ ಅಷ್ಟೇ ರಾಮನನ್ನಲ್ಲ ನಾವು ಪೂಜಿಸುತ್ತಿರುವುದು. ತಲೆತಲಾಂತರಗಳಿಂದ ರಾಮನೆಂಬುದು ಬೆಳೆದು ಬಂದು ಇಂದು ನಮಗೆ ದೇವರಾಗಿದೆ. ರಾಮನೆಂದು ಹೇಳುವಾಗ ಯಾವ ಹಿಂದುವೂ ದಶರಥನ ಮಗ ರಾಮನನ್ನು ಮನಸ್ಸಿನಲ್ಲಿಟ್ಟುಕೊಂಡಿರುವುದಿಲ್ಲ. ಅವನು ದೇವರಾಗಿ ಬೆಳೆದ ರಾಮನನ್ನು ಮನಸ್ಸನಲ್ಲಿಟ್ಟುಕೊಂಡಿರುತ್ತಾನೆ. ರಾಮನಾಮವೆಂಬುದೂ ಹಾಗೆಯೇ. ಅದು ಬರಿಯ ಹೆಸರಲ್ಲ. ಭಗವಂತನಿಗೆ ಸಹಸ್ರ ಹೆಸರುಗಳಿವೆ. ಅದರಲ್ಲಿ ರಾಮನೂ ಒಂದು. ಇದು ಅಯೋಧ್ಯಾಧಿಪತಿಯಾದ ರಾಜನ ಹೆಸರು ಮಾತ್ರವಲ್ಲ." ಎಂದರು.

ಗಾಂಧಿಯವರಿಗೆ ರಾಮನಾಮದಲ್ಲಿ ಅಚಲವಾದ ನಂಬಿಕೆ. ಅವರು ಪ್ರಕೃತಿ ಚಿಕಿತ್ಸೆಯ ಸಂದರ್ಭದಲ್ಲಿ ರಾಮನಾಮವು ಸರ್ವೌಷಧ ಎಂದು ಒತ್ತಿಒತ್ತಿ ಹೇಳಿದ್ದಾರೆ. "ಪ್ರಕೃತಿ ವೈದ್ಯ ಎರಡುಭಾಗ, ಮೊದಲನೆಯದು ರಾಮನಾಮೋಚ್ಚಾರಣೆಯಿಂದ ರೋಗವನ್ನು ವಾಸಿಮಾಡಿಕೊಳ್ಳುವುದು; ಎರಡನೆಯದು ರೋಗ ಬರದಂತೆ ಪ್ರಕೃತಿನಿಯಮಕ್ಕನುಸಾರವಾಗಿ ಜೀವಿಸುವುದು. ರಸ್ತೆಗಳಿಲ್ಲದ ಹತ್ತಾರು ಜನರಿರುವ ಹಳ್ಳಿಗಳ ಭಾರತವೇ ನನ್ನ ಭಾರತ; ನಾನು ಜೀವಿಸಿರುವುದು ಅವರಿಗಾಗಿಯೇ. ಆ ಹಳ್ಳಿಗರಿಗೆ ಪಟ್ಟಣದ ವೈದ್ಯಸಲಹೆಯನ್ನು ಒದಗಿಸಲು ಸಾಧ್ಯವಿಲ್ಲ. ಇಂತವರಿಗೆ ರಾಮನಾಮವೇ ಗತಿ. ರೋಗವಿಲ್ಲದವರು ಈ ಲೋಕದಲ್ಲಿ ಯಾರೂ ಇಲ್ಲ. ಕೆಲವು ರೋಗಗಳಿಗೆ ಔಷಧಿಯೇ ಇಲ್ಲ. ಕೈಯಿಲ್ಲದವನಿಗೆ ರಾಮನಾಮ ಕೈಯನ್ನು ಕೊಡಲಾರದ, ನಿಜ. ಆದರೆ ರಾಮನಾಮ ಅದಕ್ಕಿಂತ ಹೆಚ್ಚಾಗಿ ಅದ್ಭುತವನ್ನು ಮಾಡಬಲ್ಲದು. ಅದು ಕೈಯನ್ನು ಕಳೆದುಕೊಂಡವನಿಗೆ ಕೈಯಿಲ್ಲದಿದ್ದರೂ ಶಾಂತಿಯನ್ನು ಕೊಡಬಲ್ಲದು ಮರಣಭಯವನ್ನೇ ತಪ್ಪಿಸಬಲ್ಲದು. ಪ್ರಕೃತಿ ವೈದ್ಯಕ್ಕೆ ದೇವರೇ ಕೇಂದ್ರ. ವೈದ್ಯರು ರಾಮನಾಮ ಸರ್ವರೋಗಹರವೆಂದು ತಿಳಿದಿಲ್ಲ. ಆಯುರ್ವೇದದವರೂ ತಿಳಿದಿಲ್ಲ. ಅವರು ರಾಮನಾಮವನ್ನು

ಮಂತ್ರ ತಂತ್ರ ತಾಯಿತವೆಂದು ಉಪಯೋಗಿಸುತ್ತಾರೆ. ಇದರಿಂದ ಮೂಢನಂಬಿಕೆ ಹೆಚ್ಚುತ್ತೆ. ರಾಮನಾಮಕ್ಕೂ ಮೂಢನಂಬಿಕೆಗೂ ಸಂಬಂಧವಿಲ್ಲ. ರಾಮನಾಮ ಪ್ರಕೃತಿಯ ಅದ್ವಿತೀಯ ಧರ್ಮ. ರಾಮ ನಾಮವನ್ನು ಅನುಸರಿಸುವವರಿಗೆ ರೋಗವಿಲ್ಲ. ರೋಗವಿರುವವರು ಅನುಸರಿಸುತ್ತಿಲ್ಲ. ರಾಮನೇ ನನ್ನ ದೇವರು. ಓಂಕಾರದಿಂದ ಹಿಡಿದು ದೇವರಿಗೆ ಬಂದಿರುವ ಅಸಂಖ್ಯಾತಗಳಾದ ಹೆಸರುಗಳನ್ನೆಲ್ಲ ಕೇಳಿದರೂ ಒಂದೇ ತೀರ್ಮಾನಕ್ಕೆ ಬರುತ್ತೇವೆ. ದೇವರು ಒಂದೇ, ಧರ್ಮವೂ ಒಂದೇ ಎಂಬುದೇ ಆ ತೀರ್ಮಾನ. ಧರ್ಮವನ್ನು ಆಚರಿಸುವುದೇ ದೇವರ ಪೂಜೆ. ರಾಮನಾಮ ಬರಿಯ ಪುಸ್ತಕ ಪಾಠವಲ್ಲ. ಅದರ ಮಹಿಮೆ ಅನುಭವದಿಂದ ಮಾತ್ರಸಾಧ್ಯ. ಅದನ್ನು ಅನುಭವಿಸಿದವರು ಅದನ್ನೇ ಔಷಧಿಯನ್ನಾಗಿ ಸೂಚಿಸುತ್ತಾರೆ.

ವಿಷ್ಣು ಸಹಸ್ರ ಮೂರ್ಧಾನಾಂ ಚರಾ ಚರಪತಿಂ ವಿಭುಂ
ಸ್ತುವನ್ನಾಮ ಸಹಸ್ರೇಣ ಜ್ವರಾನ್ ಸರ್ವಾನ್ ವ್ಯಪೋಹತಿ

ವಿಷ್ಣುವಿನ ಒಂದು ನಾಮದಿಂದ ಎಲ್ಲಾ ಜ್ವರಗಳೂ ನಾಶವಾಗುತ್ತವೆ. ಯಾವ ಸ್ತೋತ್ರಪಾಠದ ಪುಸ್ತಕದಿಂದ ತೆಗೆದ ಶ್ಲೋಕವೂ ಅಲ್ಲ ಇದು. ವೈದ್ಯ ಗ್ರಂಥವಾದ ಚರಕದಿಂದ ತೆಗೆದುದು." ಎಂದು ಗಾಂಧಿ ಹೇಳಿದ್ದಾರೆ.

ರಾಮನಾಮದಲ್ಲಿ ಗಾಂಧಿಯವರ ಭಕ್ತಿ ಹೀಗೆ ಅಗಾಧ ಈ ವರುಷದ ಜನವರಿ ಹದಿಮೂರರಂದು ಅವರು ಡಿಲ್ಲಿಯಲ್ಲಿ ಪ್ರಾರಂಭಿಸಿದ ಉಪವಾಸವನ್ನು ಕುರಿತು ಕಿಶೋರಿಲಾಲ್ ಮಶ್ರುವಾಲ್‌ರಿಗೆ ಕಾಗದ ಬರೆಯುತ್ತಾ "ಈಸಲದ ಉಪವಾಸದಲ್ಲಿ ಸ್ವಲ್ಪ ಆರೋಗ್ಯ ಹದಗೆಟ್ಟಿತು. ರಾಮನಾಮದಲ್ಲಿ ನಂಬಿಕೆ ಕಡಿಮೆಯಾದುದೇ ಅದಕ್ಕೆ ಕಾರಣವೆಂದು ಭಾವಿಸುತ್ತೇನೆ" ಎಂದು ಬರೆದಿದ್ದರು. ಕೊನೆಯಲ್ಲಿಯೂ ಗಾಂಧಿಯವರ ಆತ್ಮಶ್ರೀ ರಾಮನಾಮದೊಂದಿಗೆ ಸ್ವಸ್ಥಾನವನ್ನು ಸೇರಿಹೋಯಿತು.

ಹೀಗೆ ರಾಮನಾಮದಲ್ಲಿ, ಶ್ರೀರಾಮನಲ್ಲಿ, ಗಾಂಧಿಯವರಿಗೆ ಅಚಲವಾದ ನಂಬಿಕೆ ಇದ್ದುದರಿಂದ ಅವರು ಸ್ವಾಭಾವಿಕವಾಗಿ ಹಿಂದೆ ರಾಮರಾಜ್ಯವಾಗಿದ್ದ ನಮ್ಮ ದೇಶ ಇಂದೂ ರಾಮರಾಜ್ಯವಾಗಬೇಕೆಂದು

ಬಯಸಿ ಯೋಚಿಸಿ ಅದಕ್ಕಾಗಿ ದುಡಿದರು. ಆ ಕೃತ, ತ್ರೇತ, ದ್ವಾಪರ ಯುಗಗಳಲ್ಲಿ ಬಯಸಿದುದನ್ನು ಕೊಡುತ್ತಿದ್ದ ಕಾಮಧೇನು, ಕಲ್ಪವೃಕ್ಷ ಚಿಂತಾಮಣಿಗಳಿದ್ದವು. ಒಂದು ನಂದಿನಿ ಧೇನು ದೇವಾಸುರರಿಗೆಲ್ಲಾ ಆತಿಥ್ಯ ಮಾಡುತ್ತಿತ್ತು. ಭಾರದ್ವಾಜ ಮುನಿಗಳು ಇಚ್ಛಾಮಾತ್ರದಿಂದ ಭರತನ ಸೈನ್ಯಕ್ಕೆಲ್ಲ ಇಂದ್ರವೈಭವದ ಅದ್ಭುತ ಅರೋಗಣೆಯನ್ನು ಏರ್ಪ ಡಿಸಿದರು. ದ್ರೌಪದಿಯ ಅಕ್ಷಯಪಾತ್ರೆ ನಿತ್ಯ ಹನ್ನೆರಡು ಸಾವಿರ ಜನಕ್ಕೆ ಮೃಷ್ಟಾನ್ನವನ್ನು ಒದಗಿಸುತ್ತಿದ್ದಿತು. ಅನ್ನವಿಲ್ಲದಾಗ, ವಿಗಡ ದೂರ್ವಾಸ ಮುನಿ ಎಂಬತ್ತು ಸಾವಿರ ಶಿಷ್ಯರೊಂದಿಗೆ ಬಂದು "ಎಲ್ಲಿ ನನ್ನ ಅನ್ನ?" ಎಂದಾಗ ಶ್ರೀ ಕೃಷ್ಣನು ಮಾಡಿದ ತಂತ್ರದಿಂದ "ತೇಗುವ ಹಿಗ್ಗುವಳ್ಳಿಗಳ ಕೊರಳಿಗಡರುವ ಹೊಟ್ಟೆಗಳ ಋಷಿಗಳು "ಇನ್ನು ಸಾಕು. ಹೊಟ್ಟೆ ತುಂಬಿತು" ಎಂದು ಬೇಡಿದರು. ಅಂತಹ ಮಾರ್ಗ ಯಾವುದಾದರೂ ದೊರೆತರೆ ಇಂದಿನ ಮಂತ್ರಿಗಳು ಎಷ್ಟು ಹಿಗ್ಗಿಯಾರು!

ಆದರೆ ನಮಗೆ ಇಂದು ದೊರೆತಿರುವ ರಾಮಾಯಣದಲ್ಲಿ ಆಗಿನ ರಾಜ್ಯಪದ್ಧತಿ ಹೇಗಿದ್ದಿತೆಂಬುದನ್ನೂ, ಜಟಿಲವಾದ ಜೀವನದ ನಾನಾ ಸಮಸ್ಯೆಗಳನ್ನು ಅವರು ಹೇಗೆ ಪರಿಹರಿಸಿದರೆಂಬುದನ್ನೂ ಸೂಚಿಸಿಲ್ಲ. ಅವು ತ್ರಿಕಾಲಾ ಬಾಧಿತಗಳಾದ ಸತ್ಯವಲ್ಲವೆಂಬುದನ್ನೂ ಕಾವ್ಯವಸ್ತು ಗಳಲ್ಲವೆಂಬುದನ್ನೂ ವಾಲ್ಮೀಕಿ ಅರಿತಿದ್ದಿರಬೇಕು. ರಾವಣಸಂಹಾರಾ ನಂತರ ರಾಮರಾಜ್ಯದ ವರ್ಣನೆಯನ್ನು ಮಾಡುತ್ತಾ ವಾಲ್ಮೀಕಿ ಋಷಿಯು ಆ ಸಮಯದಲ್ಲಿ "ವಿಧವೆಯಾದ ಸ್ತ್ರೀಯರು ಇರಲೇ ಇಲ್ಲ. ಸರ್ಪಭೀತಿಯೂ, ರೋಗಬಾಧೆಯೂ, ಚೌರ್ಯವೂ, ಅನರ್ಥವೂ ಇರಲಿಲ್ಲ. ಮುದುಕರಾದವರು ಬಾಲಕರಿಗೆ ಪ್ರೇತಕಾರ್ಯವನ್ನು ಮಾಡ ಲಿಲ್ಲ. (ಹಾಗೆ ಸಂಭವಿಸಲಿಲ್ಲ) ಸಮಸ್ತ ಲೋಕವೂ ಸಂತೋಷಯುಕ್ತ ವಾಗಿತ್ತು. ಸರ್ವರೂ ಧರ್ಮದಲ್ಲಿ ಆಸಕ್ತರಾಗಿದ್ದರು. ಆಗ ವೃಕ್ಷಗಳು ರೆಂಬೆಗಳಿಂದ ವಿಸ್ತಾರವಾಗಿ ಯಾವಾಗಲೂ ಫಲಪುಷ್ಪಭರಿತವಾಗಿದ್ದವು. ಕಾಲ ಕಾಲಕ್ಕೆ ಮಳೆಯಾಗುತ್ತಿತ್ತು. ಗಾಳಿ ಸುಖವಾಗಿ ಬೀಸುತ್ತಿತ್ತು. ಜನರು ಅನೃತವನ್ನು ಹೇಳುತ್ತಿರಲಿಲ್ಲ. ಚಾತುರ್ವರ್ಣದವರೂ ಲೋಭ ರಹಿತರಾಗಿ ಸಂತೋಷಚಿತ್ತರಾಗಿ ಸ್ವಸ್ವಕರ್ಮಗಳಲ್ಲಿ ನಡೆಯುತ್ತಿದ್ದರು.

ಪಣ್ಗಾಯಿ ಪೂ ತಳಿರ್ಬೀತ ತರುಲತೆಯಿಲ್ಲ
ತಣ್ಗೊಳಂ ಕೆರೆ ಕಾಳ್ಪೊಳೆಗಳಿಲ್ಲ ದಿಳೆಯಿಲ್ಲ
ಪೆಣ್ಗಂಡುಗಳೊರೋರ್ವರಂ ನಿಜಾಚಾರ ವಿರಹಿತರಾಗಿ ನಡೆದರಿಲ್ಲ
ಬಿಣ್ಗಿಚ್ಚಲಿಕ್ಕ ಕೊಡವಾಲ್ಕರೆಯ ದಾವಿಲ್ಲ
ಸುಣ್ಗಾಡಿ ವೆತ್ತಿರದ ಪಶುಪಕ್ಷಿ ಮೃಗಮಿಲ್ಲ
ಕಣ್ಗೊಳಿಪ ರಾಮರಾಜ್ಯದೊಳಕಾಲ
ಮರಣಮಿಲ್ಲಖಿಳ ಜೀವಿಗಳ್ಗೆ.

ನಮ್ಮ ಲಕ್ಷ್ಮೀಶಕವಿ, ರಾಮರಾಜ್ಯವನ್ನು ಹೀಗೆ ವರ್ಣಿಸಿದ್ದಾನೆ. ಹಿರಿಯರು ಹೇಳುವಂತೆ ಅದು ಒಳ್ಳೆಯ ಕಾಲ. ಮಳೆ ಬೆಳೆ ಚೆನ್ನಾಗಿ ಆಗುತ್ತಿತ್ತು. ಹಸುಗಳು ಕೊಡ ಹಾಲು ಕರೆಯುತ್ತಿದ್ದವು. ಕಾಡಿನಲ್ಲಿ ಗೆಡ್ಡೆಗೆಣಸು ಬೇಕಾದಂತೆ ದೊರೆಯುತ್ತಿತ್ತು. ಕಾಡುಗಳೂ ಸಮೃದ್ಧವಾಗಿದ್ದವು. ಪನಸರಿ ದ್ರಾಕ್ಷಿ, ಜಂಬು, ಸಾರಂಗ, ಜಂಬೀರ, ಖರ್ಜೂರ, ಕಿತ್ತಲೆ, ಮಾತುಳಂಗ, ತಿಂತ್ರಿಣಿ, ಚೂತ, ನೆಲ್ಲಿ, ಬಿಲ್ವ, ಕಪಿತ್ಥ ಫಲ ವೃಕ್ಷಗಳು "ನಮ್ಮ ಭಾರವನ್ನು ಕೆಳಗೆ ಇಳುಕಿ" ಎಂದು ಪ್ರಾರ್ಥಿಸುತ್ತಿದ್ದವು. ಆದರೆ ಇಂದು ಜೀವನದ ಸಮಸ್ಯೆಗಳು ಬಹಳ ಜಟಿಲವಾಗಿವೆ.

ಜನ ಜಾನಪದಗಳೀ ಹಗೆಗೆ ಕಂಡೆಯೊಂದು ?
ಅನು ನಯದ ಸಖ್ಯ ವಿಳೆಯೊಳಗುದಿಪುದೆಂದು ? *

ಎಂದು ಮೇಧಾವಿಗಳೆಲ್ಲ ಆತರದಿಂದ ಕೇಳುತ್ತಿದ್ದಾರೆ. ಒಂದೆಡೆ ಪ್ರಬಲ ರಾಷ್ಟ್ರಗಳ ಅಣುಬಾಂಬಿನ ನೀತಿ, ಬರ್ನಾರ್ಡ ಷಾ ರವರು ಹೇಳಿರುವಂತೆ ಮನುಷ್ಯನನ್ನು ಕಪಿಯನ್ನಾಗಿಸಿ ಜಗತ್ತನ್ನೆಲ್ಲಾ ಒಂದೇ ಏಟಿಗೆ ಧ್ವಂಸ ಮಾಡುವಂತೆ ಕಾಣುತ್ತಿದೆ. ವಿಜ್ಞಾನ, ಮನುಷ್ಯನಿಗೆ ಸ್ವಾಧೀನವಾಗಿದೆಯೇ ಹೊರತು ಅದನ್ನು ಉಪಯೋಗಿಸುವ ಸುಜ್ಞಾನ ಅವನಿಗೆ ಇನ್ನೂ ಬಂದಿಲ್ಲ. ಎರಡನೆಯ ಮಹಾಯುದ್ಧ ಮುಗಿದು ಆರು ವರುಷವಾದರೂ ಇಂದಿನವರೆಗೆ ಜಗತ್ತಿಗೆ ಶಾಂತಿ ದೊರೆತಿಲ್ಲ. ಗಳಿಗೆಗಳಿಗೂ ಜಗತ್ತು ಮೂರನೆಯ ಯುದ್ಧದತ್ತ ಸಾಗುತ್ತಿದೆ. ಇದಕ್ಕೆ ಪ್ರಬಲ

* ಗಾಂಧಿ ಜ್ಞಾಪಕ ಪದ್ಯ ಸಂಗ್ರಹ—ಡಿ. ವಿ. ಜಿ.

ರಾಷ್ಟ್ರಗಳ ದುರಾಕ್ರಮಣ ನೀತಿಯೂ, ತಮ್ಮ ಜನಾಂಗ ಉತ್ತಮವೆಂಬ ಹೆಮ್ಮೆಯೂ ಅವರಲ್ಲಿ ಸೇರಿರುವ ಪ್ರಳಯಕಾಲದ ವಿಧ್ವಂಸಕ ಆಯುಧಗಳೂ ಕಾರಣವಾಗಿವೆ. ಇಂದು ಶ್ರೀರಾಮನೇ ಬಂದು ಆಳ್ವಿಕೆಮಾಡಿದರೂ, ಅವನಿಗೂ ಎದುರಾಗಿ ಕಪ್ಪು ಬಾವುಟ ಹಿಡಿಯುವವರು ಇದ್ದಾರೆ. ಬಂಡವಾಳ—ಕೂಲಿ, ಜಮೀನ್‌ದಾರ್—ರೈತ, ಆಹಾರ ಬಟ್ಟೆ ವ್ಯವಸಾಯದ ಪುನರ್ವ್ಯವಸ್ಥೆ, ಜನಸಂಖ್ಯೆ ಹೆಚ್ಚುತ್ತಿರುವ ಈ ಕಾಲದಲ್ಲಿ ಜೀವನದ ಆವಶ್ಯಕತಗಳು, ವಿದ್ಯೆ, ರಕ್ಷಣೆ, ವಾಸಗೃಹಗಳನ್ನು ಒದಗಿಸುವ ಪ್ರಶ್ನೆ, ಹಳ್ಳಿಗಳಿಗೂ ಪಟ್ಟಣಗಳಿಗೂ ಈಗಿರುವ ಅಂತರವನ್ನು ತಪ್ಪಿಸಿ, ಹಿಂದೆ ಇದ್ದಂತೆ ಭಾರತದ ಕಣ್ಣು ಹಳ್ಳಿಗಳಲ್ಲಿ ನೆಲಸುವಂತೆ ಮಾಡುವುದು, ಹಳ್ಳಿಗಳ ಮತ್ತು ಪಟ್ಟಣಗಳ ಸರ್ವತೋಮುಖವಾದ ಅಭಿವೃದ್ಧಿ ಪ್ರಶ್ನೆ, ಇವು ಎಂತಹ ಶ್ರೀರಾಮಚಂದ್ರನಿಗೂ ಗಾಬರಿಯನ್ನುಂಟುಮಾಡುವವೆ! ಶ್ರೀರಾಮಚಂದ್ರನ ರಾಜ್ಯಭಾರದ ವ್ಯವಸ್ಥೆಯ ಯೋಜನೆ ಹೇಗೆ ನಮಗೆ ದೊರೆತಿಲ್ಲವೋ, ಹಾಗೆಯೇ ಗಾಂಧಿಯವರ ರಾಮರಾಜ್ಯದ ಯೋಜನೆಯೂ ನಮಗೆ ಸ್ಪಷ್ಟವಾಗಿ ದೊರೆತಿಲ್ಲ. ಆದರೆ ಗಾಂಧಿಯವರನ್ನು ಒಂದುಸಲ "ನಿಮ್ಮ ಯೋಜನೆಯ ರಾಮರಾಜ್ಯ ಯಾವುದು? ಅದನ್ನು ಸ್ಪಷ್ಟವಾದ ರೀತಿಯಲ್ಲಿ ಬರೆದಿಡಿ" ಎಂದು ಕೇಳಿದಾಗ ಗಾಂಧಿಯವರು "ಹಾಗೆ ಸಾಧ್ಯವಿಲ್ಲ. ಮನುಷ್ಯನ ಜಗತ್ತಿನ ಕಾರ್ಯಕ್ಷೇತ್ರ ದಿನ ದಿನಕ್ಕೂ ಬೆಳೆಯುತ್ತಿದೆ. ಜಟಿಲವಾದ ಸಂಬಂಧಗಳು ಗಳಿಗೆಗಳಿಗೆಗೂ ಉಂಟಾಗುತ್ತವೆ. ಹೆಜ್ಜೆಹೆಜ್ಜೆಗೂ ನನ್ನ ತತ್ತ್ವಗಳನ್ನು ಅನ್ವಯಿಸಿ ಪ್ರಯೋಗಿಸಿ ದೊರೆತ ಫಲದ ದೃಷ್ಟಿಯಲ್ಲಿ ಮುಂದಲ ಕಾರ್ಯಕ್ರಮವನ್ನು ನಿರ್ಣಯಿಸಬೇಕು" ಎಂದಿದ್ದಾರೆ. ಗಾಂಧಿಯವರು ಜಗತ್ತಿನ ಪ್ರಜೆಯಾದುದರಿಂದ ಜಗತ್ತಿನ ಶಾಶ್ವತ ಶಾಂತಿಗೆ ಕೆಲವು ಮೂಲ ತತ್ತ್ವಗಳನ್ನೂ ಭಾರತದ ಸುಖಸಮೃದ್ಧಿಗೆ ಕೆಲವು ಸೂತ್ರಗಳನ್ನೂ ಹೇಳಿದ್ದಾರೆ. ಸತ್ಯ ಅಹಿಂಸೆಗಳ ಒರೆಗಲ್ಲಿನಲ್ಲಿ ಅವರು ಗಳಿಗೆಗಳಿಗೆಗೂ ತಮ್ಮ ಅನುಭವಗಳನ್ನು, ತೀಡುತ್ತಿದ್ದುದರಿಂದ, ವಿಜ್ಞಾನ ಶಾಸ್ತ್ರಜ್ಞನಪ್ರಯೋಗದಂತೆ ಬಂದ ಫಲಗಳನ್ನು ನಿರ್ದಾಕ್ಷಿಣ್ಯವಾಗಿ ಜನತೆಯ ಮುಂದೆ ಇಡುತ್ತಿದ್ದರು. ಒಂದೊಂದುವೇಳೆ ಅವು ಪರಸ್ಪರ ವಿರೋಧವಾಗಿ ತೋರುತ್ತಿದ್ದವು.

ಆಗ ಗಾಂಧಿಯವರು "ಮನುಷ್ಯನು ಯಂತ್ರವಲ್ಲ. ಅವನ ಮನಸ್ಸು ಜಡವಸ್ತುವಲ್ಲ. ಅದು ಸಜೀವವಾದ ಸೂಕ್ಷ್ಮವಾದ ವಸ್ತು. ಸತ್ಯ ಮತ್ತು ಅಹಿಂಸೆಯ ನಿಕಷದಲ್ಲಿ ಪರೀಕ್ಷಿಸಿದಾಗ ಒಂದೊಂದುಸಲ ಬೇರೆ ಬೇರೆ ಫಲಗಳು ದೊರೆತರೆ, ಅದು ಬೆಳೆಯುತ್ತಿರುವ ಮನಸ್ಸಿನ ಕುರುಹು" ಎಂದಿದ್ದಾರೆ. ಆ ಮೂಲತತ್ತ್ವವನ್ನು ದೃಷ್ಟಿಯಲ್ಲಿಟ್ಟುಕೊಂಡು ಗಾಂಧಿಯವರ ರಾಮರಾಜ್ಯದ ಯೋಜನೆಯನ್ನು ಅವರ ಅನುಯಾಯಿಗಳು ತಯಾರಿಸಿದ್ದಾರೆ. ಆದರೆ ಗಾಂಧಿಯೋಜನೆ ರಾಮರಾಜ್ಯಯೋಜನೆ ಎಂದು ಇದುವರೆಗೆ ನಾವು ಕೇಳುತ್ತಿರುವುದು, ಗಾಂಧಿಯವರ ಮೂಲತತ್ತ್ವಗಳ ಮೇಲೆ ಹೇಗೆ ಆದರ್ಶ ಸಮಾಜವನ್ನು ಕಟ್ಟಬಹುದೆಂಬ ವ್ಯವಸ್ಥೆ ಮಾತ್ರ.

ಜಗತ್ತಿನ ಶಾಶ್ವತ ಶಾಂತಿಗೆ ಮಹಾತ್ಮ ಗಾಂಧಿಯವರು ಸೂಚಿಸಿದ ಮಾರ್ಗ, ಪರಸ್ಪರ ವಿಚಾರ ವಿನಿಮಯ ಯುದ್ಧವಿರೋಧಿ ಮಾರ್ಗ. ಅದು ಆಚರಣೆಗೆ ಕಷ್ಟವಾದ ಮಾರ್ಗವೆಂದ ಮಾತ್ರಕ್ಕೆ ಅದರ ಸತ್ಯಕ್ಕೆ ಭಂಗವಿಲ್ಲ. ಮಹಾತ್ಮ ಗಾಂಧಿಯವರ ನಿಧನದ ನಂತರ ಅವರಿಗೆ ಅರ್ಪಿತವಾದ ದುಃಖ ಭಾಷ್ಪಾಂಜಲಿಗಳಲ್ಲಿ, ಜಗತ್ತಿನ ಭದ್ರತಾಮಂಡಲದವರು ಹೇಳಿದ ಮಾತುಗಳು, ಮಹಾತ್ಮರು ಜಗತ್ತಿನ ಶಾಂತಿಗೆ ಮೊದಲನೆಯ ಶಂಕುಸ್ಥಾಪಕರೆಂಬುದನ್ನು ಸೂಚಿಸುತ್ತವೆ. ಯು. ಎನ್. ಒ. ಚರ್ಚೆಯಲ್ಲಿ "ಗಾಂಧಿಯವರ ಯುದ್ಧರಹಿತ ಸಂಧಾನದ ಮಾರ್ಗವನ್ನು ನಾವು ಅನೇಕಸಲ ಅನುಸರಿಸಿದ್ದೇವೆ" ಎಂದಿದ್ದಾರೆ. ಗಾಂಧಿಯವರು ರಾಮರಾಜ್ಯದ ಬಾಹ್ಯ ವ್ಯವಸ್ಥೆ ಹೇಗಿರಬೇಕೆಂದು ಹೇಳಿಲ್ಲ. ಅದು ಗಳಿಗಳಿಗೆಗೆ ಬದಲಾಯಿಸುವುದೆಂದು ಅವರಿಗೆ ಗೊತ್ತು. ಆದರೆ ಅವರು ಅದಕ್ಕಿಂತ ಹೆಚ್ಚು ಆವಶ್ಯಕವಾದ, ಆಳ್ವಿಕೆ ಮಾಡುವ ರಾಮರುಗಳ ಯೋಗ್ಯತೆ ತ್ಯಾಗ ಹೇಗಿರಬೇಕೆಂಬುದನ್ನೂ, ಪ್ರಜೆಗಳು ಹೇಗೆ ಸನ್ಮಾರ್ಗದಲ್ಲಿರಬೇಕೆಂಬುದನ್ನೂ ಹೆಚ್ಚಾಗಿ ಬೋಧಿಸಿದ್ದಾರೆ. ಗಾಂಧಿಯವರ ರಾಮರಾಜ್ಯದ ಯೋಜನೆಯನ್ನು ಹೀಗೆ ವಿವರಿಸಬಹುದು, "ಹಳ್ಳಿಗಳು ಉದ್ಧಾರವಾದರೆ ಪಟ್ಟಣಗಳು ತಾವಾಗಿಯೇ ಉದ್ಧಾರವಾಗುವುವು. ಹಳ್ಳಿಗಳು ನಾಶವಾದರೆ ಭಾರತ ನಾಶವಾಗುತ್ತದೆ. ಭಾರತ ಆಗ

ಭಾರತವಾಗುವುದಿಲ್ಲ. ಜಗತ್ತಿಗೆ ಭಾರತದ ಸಂದೇಶ ನಾಶವಾಗುವುದು. ಹಳ್ಳಿಗಳನ್ನು ಲೂಟಿಮಾಡುವುದು ನಿಂತಾಗಲೇ ಹಳ್ಳಿಯ ಏಳಿಗೆ ಸಾಧ್ಯ. ಆದುದರಿಂದ ಹಳ್ಳಿಗಳ ಸ್ವಯಂಪರಿಪೂರ್ಣತೆಗೆ ಪ್ರಯತ್ನಿಸಬೇಕು. ಹಳ್ಳಿಗಳನ್ನು ಸ್ವಪರಿಪೂರ್ಣಮಾಡುವ ದೃಷ್ಟಿಯಿಂದ ಯಂತ್ರೋಪಕರಣಗಳನ್ನು ಒದಗಿಸಲು ನನ್ನ ಅಡ್ಡಿಯಿಲ್ಲ. ನನ್ನ ಅಭಿಪ್ರಾಯದಲ್ಲಿ ಭಾರತದಲ್ಲೆಲ್ಲಾ ಗ್ರಾಮ ಸ್ವರಾಜ್ಯಗಳಿರಬೇಕು. ಅವು ತಮ್ಮ ನಿತ್ಯದ ಆವಶ್ಯಕತೆಗಳಿಗೆ ಇತರರಮೇಲೆ ಅವಲಂಬಿಸಬಾರದು. ಎಲ್ಲಿ ಅವಲಂಬನೆ ಆವಶ್ಯಕವೋ ಅಲ್ಲಿ ಇರಲಿ. ಈ ದೃಷ್ಟಿಯಿಂದ ಪ್ರತಿ ಹಳ್ಳಿಯೂ ತನ್ನ ಆಹಾರ ಹತ್ತಿ ಬೆಳೆದುಕೊಳ್ಳಬೇಕು. ದನಗಳ ತಳಿಯನ್ನು ವೃದ್ಧಿಪಡಿಸಬೇಕು. ಪ್ರತಿಹಳ್ಳಿಗೂ ಸರಿಯಾದ ಗೋಮಾಳವಿರಬೇಕು. ಹುಡುಗರಿಗೆ ಆಟದ ಮೈದಾನ, ಹಿರಿಯರಿಗೆ ನಾಟಕಶಾಲೆ ಗ್ರಾಮಪಂಚಾಯಿತಿ ಭವನ, ಶುದ್ಧವಾದ ನೀರು ಇರಬೇಕು. ಮಕ್ಕಳಿಗೆ ಬಲಾತ್ಕಾರವಾಗಿ ಮೂಲಶಿಕ್ಷಣವನ್ನು ಕೊಡಬೇಕು. ಎಲ್ಲಾ ಕಾರ್ಯಗಳನ್ನೂ ಸಾಧ್ಯವಾದಮಟ್ಟಿಗೆ ಸಹಕಾರ ತತ್ವಕ್ಕನುಸಾರವಾಗಿ ನಡೆಸಬೇಕು. ಇಂತಹ ಗ್ರಾಮಸ್ವರಾಜ್ಯದಲ್ಲಿ ಜಾತಿಗಳಿರುವುದಿಲ್ಲ. ಅಸ್ಪೃಶ್ಯತೆ ಇರುವುದಿಲ್ಲ. ಗ್ರಾಮದ ರಕ್ಷಣೆಯನ್ನು ಗ್ರಾಮಸ್ಥರೇ ಸರದಿವಾರಾಗಿ ನೋಡಿಕೊಳ್ಳಬೇಕು. ಪಂಚಾಯ್ತಿ, ಗ್ರಾಮದ ಸರ್ವಾಧಿಕಾರಿಯಾಗಿರಬೇಕು. ಪ್ರತಿಯೊಂದು ಗ್ರಾಮವೂ ಇಂದು ಇಂತಹ ಗ್ರಾಮಸ್ವರಾಜ್ಯವಾಗಬಲ್ಲದು. ಇಲ್ಲಿ ವ್ಯಕ್ತಿಗೆ ಸ್ವಾತಂತ್ರ್ಯ, ಪೂರ್ಣಸ್ವರಾಜ್ಯ. ವ್ಯಕ್ತಿಯೇ ಸ್ವಾತಂತ್ರ್ಯದ ಶಿಲ್ಪಿ. ಇಂತಹ ಹಳ್ಳಿಗಳು ಪ್ರಪಂಚವನ್ನೇ ಬೇಕಾದರೂ ಎದುರಿಸಬಲ್ಲವು. ಯಾಕೆಂದರೆ ಪ್ರತಿಯೊಬ್ಬ ಹಳ್ಳಿಗನೂ ತನ್ನ ಹಳ್ಳಿಯ ಗೌರವವನ್ನು ಕಾಪಾಡಲು ಪ್ರಾಣವನ್ನು ಕೊಡಲೂ ಸಿದ್ಧನಾಗಿರುತ್ತಾನೆ. ನನ್ನ ಕನಸಿನ ಸ್ವರಾಜ್ಯ ದೀನರ ಮತ್ತು ಬಡವರ ಸ್ವರಾಜ್ಯ. ಹಳ್ಳಿಯವರಿಗೆ ಜೀವನದ ಎಲ್ಲಾ ಆವಶ್ಯಕತೆಗಳೂ ದೊರಕಬೇಕು. ಪಟ್ಟಣಿಗರಿಗಿರುವ ಸೌಕರ್ಯಗಳೆಲ್ಲಾ ಅವರಿಗೂ ದೊರಕಬೇಕು. ಅಲ್ಲಿಯವರೆಗೆ ನಮ್ಮ ಸ್ವಾತಂತ್ರ್ಯ ಸ್ವರಾಜ್ಯವಲ್ಲ. ಸ್ವರಾಜ್ಯವೆಂಬುದು ಸರ್ವರ ಸಮಾನಹಿತ. ನಾನು ಅದನ್ನೇ ರಾಮರಾಜ್ಯವೆಂದು ಕರೆದಿದ್ದೇನೆ.

ಹಳ್ಳಿಯ ಕೆಲಸ ಎಂದರೆ ನಮಗೆ ಭಯವಾಗುತ್ತದೆ. ಪಟ್ಟಣದವರಿಗೆ ಹಳ್ಳಿಯವಾಸ ಕಷ್ಟವಾಗುತ್ತದೆ. ನಮ್ಮ ದೇಹ ಆ ಕಷ್ಟವನ್ನು ಒಪ್ಪುವು ದಿಲ್ಲ. ಆದರೆ ನಾವು ಆ ಕಷ್ಟವನ್ನು ಎದುರಿಸಲೇಬೇಕು. ಇಲ್ಲದಿದ್ದರೆ ನಮ್ಮ ಸ್ವಾತಂತ್ರ್ಯ, ಒಂದು ಗುಂಪಿನವರ ಆಳ್ವಿಕೆಹೋಗಿ ಮತ್ತೊಂದು ಗುಂಪಿನವರ ಆಳ್ವಿಕೆಯಾಗುತ್ತದೆ ಅಷ್ಟೆ. ಅದು ಇನ್ನೂ ಕೆಟ್ಟ ಆಳ್ವಿಕೆ ಯೇಆಗಬಹುದು. ಇದುವರೆಗೆ ಪಟ್ಟಣಿಗರಾದ ನಾವು ಬದುಕಲೆಂದು ಹಳ್ಳಿಯವರು ಸಹಸ್ರಾರು ಸಂಖೆಯಲ್ಲಿ ಮಡಿದಿದ್ದಾರೆ. ಈಗ ಅವರು ಬದುಕಲೆಂದು ನಾವು ಮಡಿಯಬೇಕಾಗಿದೆ. ನಮ್ಮ ಈ ತ್ಯಾಗದಿಂದ ರಾಷ್ಟ್ರದ ಘನತೆ ಏರುವುದು. ಇದು ಈಗ ಅವಶ್ಯಕವಾದ ತ್ಯಾಗ."

ಮಹಾತ್ಮ ಗಾಂಧಿಯವರು ಯಾವಾಗಲೂ ಫಲಕ್ಕಿಂತ ಹೆಚ್ಚಾಗಿ ಮಾರ್ಗ ಮತ್ತು ತ್ಯಾಗಕ್ಕೆ ಬೆಲೆಕೊಡುತ್ತಿದ್ದರು. ರಾಮರಾಜ್ಯದಲ್ಲಿ ರಾಮರಾಜರು ಹೇಗಿರಬೇಕೆಂಬುದನ್ನೆ ಅವರು ಒತ್ತಿಒತ್ತಿ ಹೇಳಿದರು. ರಾಜಕೀಯ ಪ್ರಧಾನವಾದ ನಮ್ಮ ದೇಶದಲ್ಲಿ ರಾಜಕಾರಣ ಮುಖ್ಯ ವಾಗುವುದು ಸ್ವಾಭಾವಿಕ. ಇಂತಹ ರಾಜಕಾರಣದಲ್ಲಿ ಅಧಿಕಾರ ಪ್ರತಿಷ್ಠೆ ಸಂಬಳಗಳು ದೊರೆತಾಗ ಎಲ್ಲರೂ ಗಾಂಧಿ ಅನುಯಾಯಿಗಳೇ ಆಗುತ್ತಾರೆ. ೧೯೧೯ನೇ ಸಂವತ್ಸರದಲ್ಲಿ ಗಾಂಧಿಯವರು ಮೊದಲು ಬೆಂಗಳೂರಿಗೆ ಬಂದಾಗ ಅವರಿಗೆ ಪುರಜನರು ಕೊಟ್ಟ ಬಿನ್ನವತ್ತಳೆಗೆ ಗಾಂಧಿ ಹೀಗೆ ಪ್ರತ್ಯುತ್ತರ ವಿತ್ತಿದ್ದರು " ನಮಗೆ ಈ ಗೌರವ ಬೇಡ. ಹೀಗೆ ಗೌರವ ತೋರಿಸಿ ನಾವು ಸಾರ್ವಜನಿಕ ಸೇವಕರನ್ನು ಹಾಳುಮಾಡ ಬಾರದು. ಅವರು ಮೌನವಾಗಿ ಕೆಲಸಮಾಡಬೇಕು. ಗೌರವ ಸಿಕ್ಕುತ್ತೆ ಆದುದರಿಂದ ಕೆಲಸಮಾಡಬೇಕು ಎಂಬ ಭಾವನೆ ನಮ್ಮ ಸಾರ್ವಜನಿಕರಿಗೆ ಬರಬಾರದು. ಸಾರ್ವಜನಿಕ ಸೇವಕರಿಗೆ ' ಜನರಿಗೆ ನಮ್ಮಲ್ಲಿ ಉದಾ ಸೀನ. ನಮ್ಮ ಕೈಬಿಟ್ಟರು ' ಎಂಬ ಭಾವನೆ ಬರಲಿ. ಆದರೂ ಅವರು ಸೇವೆ ಮಾಡಲಿ. ಸೇವೆಯ ಬಹುಮಾನ ಸೇವೆಯೆ " ಎಂದು. ಮಹಾತ್ಮ ಗಾಂಧಿಯವರೇ ಒಂದು ಸಲ 'ನನ್ನ ಅನುಯಾಯಿ ಯಾರೂ ಅಲ್ಲ. ನಾನೇ ನನ್ನ ಪೂರ್ಣ ಅನುಯಾಯಿಯಲ್ಲ.' ಎಂದರು. ಗಾಂಧಿ ಅನು ಯಾಯಿ ಎಂಬ ಹೆಸರಿನಿಂದ ಚರಿತ್ರಹೀನರು ಸಮಾಜದಲ್ಲಾಗಲೀ

ಆಳ್ವಿಕೆಯಲ್ಲಾಗಲಿ ಪ್ರಮುಖರಾಗುವುದನ್ನು ಗಾಂಧಿ ಒಪ್ಪುತ್ತಿರಲಿಲ್ಲ. ಯಾವಕಾರಣದಿಂದಾಗಲಿ ಒಬ್ಬಮನುಷ್ಯ ಅಥವ ಒಂದು ಸಂಸ್ಥೆ ಇತರರ ಮೇಲೆ ದಬ್ಬಾಳಿಕೆ ಮಾಡುವುದನ್ನು ಗಾಂಧಿ ಒಪ್ಪುತ್ತಿರಲಿಲ್ಲ. ಗಾಂಧಿ ಸೇವಾಸಂಘದ ಸದಸ್ಯರು ಗಾಂಧಿಯವರ ಮಹಿಮೆಯಿಂದ ರಾಜಕೀಯ ದಲ್ಲಿ ಪ್ರಬಲರಾಗುತ್ತಿದ್ದರು. ಜನರು ಒಪ್ಪದೆ ಒಂದು ಸಲ ಗಾಂಧಿ ಯವರಿಗೇ ಕಪ್ಪು ಬಾವುಟ ಹಿಡಿದರು. ಸರ್ದಾರ್ ಪಟೇಲರಿಗೂ ಕಪ್ಪು ಬಾವುಟ ಹಿಡಿದರು. ೧೯೪೦ರಲ್ಲಿ ಮಾಲಕಂಡ ಎಂಬಲ್ಲಿ ಗಾಂಧಿ ಸೇವಾ ಸಂಘದ ಸದಸ್ಯರಿಗೂ ಇತರ ರಾಜಕೀಯ ಕೆಲಸಗಾರರಿಗೂ ಕೈಗೆ ಕೈ ಮಿಲಾಯಿಸಿತು. ಕೇವಲ ರಚನಾತ್ಮಕ ಕಾರ್ಯದಲ್ಲಿ ತೊಡಗಿರಬೇಕಾದ ಗಾಂಧಿಸೇವಾಸಂಘದ ಸದಸ್ಯರು, ರಾಜಕೀಯ ಅಧಿಕಾರಗಳಿಗೆ ಇಳಿದು ದರಿಂದ ಗಾಂಧಿ ದುಃಖಿತರಾದರು. " ನಮ್ಮ ಅಧಿಕಾರ ಲಾಲಸೆಯಿಂದ ಒಂದು ಪಕ್ಷದ ಜನರಿಗೆ ನಮ್ಮ ದುರ್ಗುಣಗಳು ಎದ್ದು ಕಾಣುತ್ತಿವೆ. ನಮ್ಮಲ್ಲಿ ಧ್ವೇಷವುಂಟಾಗುತ್ತಿದೆ. ಈ ಅಧಿಕಾರ ಸರ್ಕಾರಿ ಅಧಿಕಾರ ಮಾತ್ರವೇ ಅಲ್ಲ. ಕಾಂಗ್ರೆಸ್ ಸಂಸ್ಥೆಯೊಳಗಿನ ಅಧಿಕಾರವೂ ಸಹ. ಈ ವಿರೋಧವನ್ನು ನಾವು ತಿರಸ್ಕರಿಸಕೂಡದು. ಗಾಂಧಿ ಸೇವಾ ಸಂಘ ರಾಜಕೀಯ ಸಂಸ್ಥೆಯಲ್ಲ. ಇದು ಶುದ್ಧ ಜೀವನ ಸಂಸ್ಥೆ. ಈ ಸಂಸ್ಥೆ ಯವರು ರಾಜಕೀಯಕ್ಕೆ ಪ್ರವೇಶಿಸುವುದರಿಂದ ಇತರ ಪಕ್ಷದವರಿಗೆ ಇವರ ಮೇಲೆ ದ್ವೇಷವುಂಟಾಗಿ ಹಿಂಸಾವೃತ್ತಿ ಬೆಳೆಯುತ್ತದೆ. ಗಾಂಧಿ ಸೇವಾ ಸಂಘ ರಾಜಕೀಯವನ್ನು ಬಿಡಬೇಕು. ನಿರ್ಮಾಣ ಕಾರ್ಯವೇ ಗಾಂಧಿ ಅನುಯಾಯಿಗಳ ಮುಖ್ಯ ಗುರಿ. ರಾಜಕೀಯ, ಸಾಧಾರಣವಾಗಿ ಅಧಿಕಾರಲಾಲಸರ ಸಂಸ್ಥೆಯಾಗುತ್ತದೆ. ರಾಜಕೀಯ ಮನೋಭಾವ ವುಳ್ಳವರೆಲ್ಲ ಗಾಂಧಿ ಸೇವಾ ಸಂಘವನ್ನು ಬಿಡಬೇಕು." ಹೀಗೆ ಹೇಳಿ ಮಹಾತ್ಮ ಗಾಂಧಿಯವರು ಗಾಂಧಿ ಸೇವಾ ಸಂಘವನ್ನು ವಿಲೀನಮಾಡಿ ಬಿಟ್ಟರು. ಗಾಂಧಿಯವರ ಈ ಆದೇಶದ ಎದುರಿಗೆ "ತಾನು ಗಾಂಧಿ ಭಕ್ತನಾದುದರಿಂದ ತನಗೆ ಇದು ಬೇಕೆನ್ನುವವರಿಗೆ" ಎಂಟೆದೆ ಇರಬೇಕು.

ರಾಮರಾಜ್ಯ ಸ್ಥಾಪನೆ ಅಧಿಕಾರ ಲಾಲಸರಿಂದ ಸಾಧ್ಯವಲ್ಲವೆಂಬು ದನ್ನು ಗಾಂಧಿ ಸ್ಪಷ್ಟಪಡಿಸಿದರು. ಅವರು ಹೀಗೂ ಹೇಳಿದರು.

“ಕಾಂಗ್ರೆಸ್ ಬದುಕಬೇಕಾದರೆ ಕಾಂಗ್ರೆಸ್ ಭಕ್ತರು ಅಧಿಕಾರ ಲಾಲಸೆ ಬಿಡಬೇಕು. ಅಧಿಕಾರದ ಹೊರಗಿದ್ದು ನಿರ್ಮಾಣ ಕಾರ್ಯದಲ್ಲಿ ತೊಡಗಿರುವವರು ನಿಜವಾದ ಕಾಂಗ್ರೆಸ್ ಭಕ್ತರು. ಅಧಿಕಾರಕ್ಕಾಗಿ ಕಾಂಗ್ರೆಸ್ನಲ್ಲಿ ಸೇರುವವರಿಗಿಂತ ಸೇವಕರಾಗಿ ಸೇರುವವರನ್ನು ಜನ ಹೆಚ್ಚು ಗೌರವಿಸುತ್ತಾರೆ. ಕಾಂಗ್ರೆಸ್ ಅಧಿಕಾರ ಸ್ಥಾನದಲ್ಲಿ, ಒಂದು ಲಕ್ಷ ಜನರಿರಬಹುದು. ಆದರೆ ಕಾಂಗ್ರೆಸ್ ಭಕ್ತರು ೩೦ ಕೋಟಿ ಇದ್ದಾರೆ. ಅಧಿಕಾರ ಸ್ಥಾನಕ್ಕಾಗಿ ಚರ್ಚೆ ನಡೆಯುವಾಗ, ನನ್ನ ನಿಜವಾದ ಅನುಯಾಯಿಗಳು ಹಿಂದೆಗೆಯಬೇಕು. ಕಾಗದದ ದೋಣಿಯಲ್ಲಿ ನದಿಯನ್ನು ದಾಟುವುದು ಸಾಧ್ಯವಿಲ್ಲ. ಹಾಗೆಯೇ ನಿರ್ಮಾಣ ಕಾರ್ಯಕರ್ತರ ನಂಬಿಕೆಗೆ ಪಾತ್ರರಾಗದ ಕಾಂಗ್ರೆಸ್ಸಿಗರ ಅಧಿಕಾರ ಸ್ಥಾನ ಸ್ಥಿರವಲ್ಲ. ಕಾಂಗ್ರೆಸ್ಸಿಗರಿಗೆ ಅಧಿಕಾರದ ಆಸೆ ತಪ್ಪಿದರೆ ಕಾಂ ಗ್ರೆಸ್ ಕೆಲಸ ಚೆನ್ನಾಗಿ ನಡೆಯುವುದು. ಒಬ್ಬ ಕಾಂಗ್ರೆಸ್ ಕೆಲಸಗಾರ ಅಧಿಕಾರದಲ್ಲಿರಬೇಕೆಂಬುದು ಜನರ ಇಷ್ಟವಾದರೆ, ಅವರು ಬಲಾತ್ಕಾರವಾಗಿ ಆ ಭಾರವನ್ನು ಅವನ ತಲೆಯ ಮೇಲೆ ಹಾಕುವರು. ಅಂತಹ ಸಂದರ್ಭದಲ್ಲಿ ಮಾತ್ರ ಕಾಂಗ್ರೆಸ್ಸಿಗರು ಅಧಿಕಾರ ವಹಿಸಬೇಕು.

ನಿರ್ಮಾಣ ಕಾರ್ಯವೇ ರಾಮರಾಜ್ಯದ ಅಡಿಗಲ್ಲು. ನಿರ್ಮಾಣ ಕಾರ್ಯಕರ್ತರು ಇರಬೇಕಾದುದು ಮೇಲಿನ ಗಾಂಧಿವಾಕ್ಯಗಳ ಮಾದರಿ. ರಾಮರಾಜ್ಯ ಸ್ಥಾಪಿಸುತ್ತೇನೆನ್ನುವವರು ಹೆಜ್ಜೆಹೆಜ್ಜೆಗೂ ತಮ್ಮ ಚರಿತ್ರೆಯನ್ನು ಪರೀಕ್ಷಿಸಿಕೊಳ್ಳಬೇಕು. ಯಾವುದೋ ಒಂದು ಕಾಲದಲ್ಲಿ ಒಂದು ತ್ಯಾಗ, ಒಂದು ಸಾಹಸಮಾಡಿದ ಹಳೆಯ ಸರ್ಟಿಫಿಕೇಟನ್ನೇ ಎಂದೆಂದಿಗೂ ‘ಕ್ಯಾಷ್’ ಮಾಡುತ್ತಾ ಹೋಗುವುದು ಸಾಧ್ಯವಿಲ್ಲ. ಗಾಂಧಿಯವರು ತಮ್ಮ ಅತ್ಯಂತ ನಿಕಟ ಅನುಯಾಯಿಗಳಿಗೆ ಸಹ “ಯಾರೊಬ್ಬನೂ ನಾನು ಗಾಂಧಿ ಅನುಯಾಯಿ ಎಂದು ಹೇಳಿಕೊಳ್ಳುವುದು ಬೇಡ. ನಿಮ್ಮ ಆಚರಣೆಯನ್ನು ನೋಡಿದರೇ ಜಗಕ್ಕೆ ‘ಇವನು ದೇವರ ಮನುಷ್ಯ ಸಾತ್ವಿಕ’ ಎಂಬ ಭಾವನೆ ಬರಲಿ” ಎಂದಿದ್ದಾರೆ.

ಗಾಂಧಿಯವರ ಬೋಧನೆಗಳು ಬರಿಯ ಆದರ್ಶಗಳಲ್ಲ. ಅವು ನಿತ್ಯ ಜೀವನದ ಕಾರ್ಯಕಾರಿಮಾರ್ಗ ಮತ್ತು ಅಭ್ಯಾಸಗಳು. ಅಸತ್ಯ,

ಅಧೈರ್ಯ; ಸ್ವಾರ್ಥತೆ, ಅಶಿಸ್ತು, ಬುದ್ಧಿಹೀನತೆ, ಅಥವ ಕಡಿಮೆ ಬುದ್ಧಿಗೆ ಗಾಂಧಿ ವಾದದಲ್ಲಿ ಎಡೆಯಿಲ್ಲ. ಅವರು ಹೀಗೆ ಹೇಳುತ್ತಾರೆ. "ಅಹಿಂಸೆಯನ್ನೂ ಸತ್ಯವನ್ನೂ, ದಡ್ಡರೂ ಬುದ್ಧಿಹೀನರೂ ಪಾಲಿಸುವುದು ಸಾಧ್ಯವಿಲ್ಲ. ಈ ಎರಡು ಸತ್ಯಗಳನ್ನೂ ಅನುಸರಿಸುವವರ ದೇಹ ಮತ್ತು ಮನಸ್ಸು ಪೂರ್ಣಬೆಳವಣಿಗೆ ಹೊಂದುತ್ತವೆ. ಅಹಿಂಸೆಯ ಅಭ್ಯಾಸದ ಜೊತೆಯಲ್ಲಿ ಬುದ್ಧಿಯೂ ಚುರುಕಾಗುತ್ತದೆ. ಸ್ವರಾಜ್ಯವು ಬುದ್ಧಿವಂತರಿಗಾಗಿಯೇ ಹೊರತು ದಡ್ಡರಿಗಾಗಿ ಅಲ್ಲ. ಅಜ್ಞಾನವೇ ಎಲ್ಲಾ ಅಪಜಯಕ್ಕೂ ಕಾರಣ. ಹೆಡ್ಡತನ ಜೀವರಹಿತ ದೇಹದಂತೆ."

[Truth and non-violence are not for the dunce; True practice of Ahimsa means keenest intelligence and wide awake Conscience. Swaraj is for the awakened, not for the sleepy and the ignorant. Ignorance is at the root of all failures. An un intelligent effort is like a Corpse]

ಗಾಂಧಿಯವರು ಯಾವೆಡೆಯಲ್ಲಿಯೂ ಯಾವ ಹೆಸರಿನಲ್ಲಿಯೂ ದಡ್ಡತನವನ್ನೂ ಅಶಿಸ್ತನ್ನೂ ಒಪ್ಪುವುದಿಲ್ಲ. ಪಂಡಿತ ಜವಹರ್ ಲಾಲರಿಗೂ ದಡ್ಡರನ್ನು ಕಂಡರೆ ಮೈ ಉರಿಯುತ್ತದೆ. ಗಾಂಧಿಯವರು ತಮ್ಮ ೬೩ನೇ ವಯಸ್ಸಿನಲ್ಲಿ ಎಡಗೈಯಲ್ಲಿ ನೂಲುವುದನ್ನು ಕಲಿತರು. ಅವರು ನಂದಿ ಬೆಟ್ಟಕ್ಕೆ ಬಂದಿದ್ದಾಗ ಎಡಗೈನಲ್ಲಿ ಬರೆಯುತ್ತಿದ್ದುದು ನಾವೆಲ್ಲ ಕಂಡ ವಿಚಾರ. ಮಕ್ಕಳೆಲ್ಲ ಎರಡು ಕೈಗಳಲ್ಲಿಯೂ ಎಲ್ಲಾ ಕಾರ್ಯಗಳನ್ನೂ ಮಾಡುವುದನ್ನು ಕಲಿಯಬೇಕೆಂದು ಅವರು ಹೇಳಿದ್ದಾರೆ. ಆದರೂ ಗಾಂಧಿ ಅನುಯಾಯಿಗಳೆಂದುಕೊಳ್ಳುವ ಕೆಲವು ಮುಖಂಡರಿಗೂ, ಸರ್ಕಾರಗಳಿಗೂ, ಬುದ್ಧಿಗಿಂತ ದಡ್ಡತನವೇ ಹೆಚ್ಚು ಪೂಜನೀಯವಾಗಿ ತೋರುವುದು ಆಶ್ಚರ್ಯ!

ಗಾಂಧಿಯವರು ಅಂತಹ ಗೊಡ್ಡು ವೈದೀಕರಲ್ಲ. ಮುಖ್ಯವಾದ ಮೂಲತತ್ವ ಸರಿಹೋದರೆ ಉಳಿದವು ತಾವೇ ಸರಿಯಾಗುವುವೆಂಬುದು

ಅವರ ಅನುಭವ. ಹಳ್ಳಿಯವರಿಗೆ ಸುಖವಾಗಬೇಕು. ಇದು ಆ ಮೂಲ ತತ್ವ. ಯಂತ್ರದ ವಿಷಯದಲ್ಲಿ ಸಹ ಅವರು ಖಡಾಖಂಡಿತವಾಗಿಲ್ಲ. “ ಹಳ್ಳಿಗರ ಉದ್ಯೋಗವನ್ನು ಕಿತ್ತುಕೊಳ್ಳದ ಯಂತ್ರ ಬರಲಿ ” ಎಂದರು. “ವಿದ್ಯುಚ್ಛಕ್ತಿ ಸಹ ಗ್ರಾಮ ಕೈಗಾರಿಗೆ”ಎಂದರು. ಸ್ಟೀಮ್ ಶಿಪ್ (ಹಡಗು) ಯಂತ್ರವೇ ಆದರೂ ನನ್ನ ವಿರೋಧವಿಲ್ಲ ಎಂದರು. ಪ್ರತಿ ಒಬ್ಬನಿಂದಲೂ ಅವನ ಶಕ್ತಿ ಇದ್ದಷ್ಟು, ಪ್ರತಿಯೊಬ್ಬರಿಗೂ ಅವನ ಆವಶ್ಯಕತೆಯಷ್ಟು (From each according to his capacity & to each according to his need) ಇದು ಅವರ ಸಮತಾವಾದ.

ಗಾಂಧಿಯವರ ರಾಮರಾಜ್ಯದ ಯೋಜನೆ ಬರಿಯ ಸಾವಿರಕೋಟಿ ಹತ್ತುಸಾವಿರ ಕೋಟಿ ಯೋಜನೆಗಳಲ್ಲ. ಗೀತೆಯ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ಎಂದರೆ ಅದೊಂದು ಟೈಂಟೇಬಲ್ ಕ್ರಮದ ಜೀವನಕ್ರಮವೇ ? ಅದು ಒಂದು ಮನೋಭಾವ ; ಗಾಂಧಿಯವರ ರಾಮರಾಜ್ಯವೂ ಆ ಬಗೆಯ ಮನೋಭಾವ.

ನಮ್ಮ ಹೃದಯವನ್ನು ಪರೀಕ್ಷಿಸಿಕೊಳ್ಳುವ ಕಾಲ ಇದು. ಗಾಂಧಿ ನಮ್ಮನ್ನಗಲಿದಂದಿನಿಂದ ಈ ಎಂಟು ತಿಂಗಳಿನಲ್ಲಿ ನಾವು ಎಷ್ಟುಸಲ ಅಂತರ್ಮುಖವಾಗಿ ನಮ್ಮನ್ನು ಪರೀಕ್ಷಿಸಿಕೊಂಡಿದ್ದೇವೆ ? ಗಾಂಧಿಯವರ ಆದರ್ಶಗಳು ನಮ್ಮ ನಿತ್ಯಜೀವನದ ಸೂತ್ರಗಳಾಗಿವೆಯೇ ? ಗಾಂಧಿಯವರ ಪ್ರಭಾವ ನಮಗೆ ಮಾರ್ಗದರ್ಶಕವಾಗಿದೆಯೆ ? ಗಾಂಧಿ ಜಯಂತಿಯು, ಇತರ ಜಯಂತಿಗಳಂತೆ ಗಾಂಧಿ ಪೂಜಾರಿಗಳ ಕೋಸುಂಬರಿ ಕೈಂಕರ್ಯವಾಗುತ್ತಿದೆಯೆ ? ಗಾಂಧಿಯವರಂತಹ ನಾಯಕರು ಜಗತ್ತಿಗೆ ದೊರೆಯುವುದಿಲ್ಲ. ನಮಗೆ ದೊರೆತುದು ನಮ್ಮ ಪುಣ್ಯ. ಜಗತ್ತಿನಲ್ಲಿ ಮತ್ತಾರಿಗೂ ದೊರಕದ ಆ ಸುಕೃತವನ್ನು, ಭಗವಂತ ನಮಗೆ ಕರುಣಿಸಿದ್ದಾನೆ. ಅದರ ಅರಿವು ನಮಗಿರುವಂತೆ ನಾವು ನಡೆಯುತ್ತಿದ್ದೇವೆಯೆ ?

ಪೊರೆದಿರುವೆ ನೀನಿಂದು ನಮಗೊಬ್ಬ ಗುರುವ
ಪರಸಿರುವೆ ನೀನಿಂದು ನರಕುಲದ ಶಿರವ
ದೊರಕಿಸಿಹೆ ಜಗಕೊಂದು ನವ್ಯ ದರ್ಶನವ.
ಕರುಣಿಸೈ ಜನಕವನು ನೋಳ್ಪ ಲೋಚನವ. †

---

† ಗಾಂಧಿ ಜ್ಞಾಪಕ ಪದ್ಯ ಸಂಗ್ರಹ—ಡಿ. ವಿ. ಜಿ.

ನಾವು ಕಳೆದುಕೊಂಡಾಯಿತು. ಇನ್ನಾದರೂ ಆ ಸಾನ್ನಿಧ್ಯಕ್ಕೆ ನಾವು ಅರ್ಹರಾಗಬೇಕು.

ಗಾಂಧಿಯವರ ತತ್ವಗಳನ್ನು ನಮ್ಮ ಜೀವನದಲ್ಲಿ ಅನುಷ್ಠಿಸಲು ಪ್ರಯತ್ನಿಸೋಣ.

---

# ೧೯ ಪೂರ್ಣಪುರುಷ ಗಾಂಧಿ

ಸೇವಾಗ್ರಾಮದಿಂದ ಮಹಾತ್ಮ ಗಾಂಧಿಯವರು ಹಿಂದೆ ಪದೇ ಪದೇ ವೈಸರಾಯರನ್ನು ನೋಡಲು ಡಿಲ್ಲಿಗೆ ಹೋಗುತ್ತಿದ್ದಾಗ ಒಂದು ಸಲ ಒಂದು ಚಿಕ್ಕ ಮಗು ಗಾಂಧಿಯವರಿಗೆ "ಯಾವಾಗಲೂ, ನೀವೇ ವೈಸ್‌ರಾಯರನ್ನು ನೋಡಲು ಹೋಗುತ್ತೀರೆಲ್ಲ. ವೈಸ್‌ರಾಯರು ನಿಮ್ಮನ್ನು ನೋಡಲು ಇಲ್ಲಿ ಯಾಕೆ ಬರುವುದಿಲ್ಲ," ಎಂದು ಕೇಳಿದ್ದಿತು. ಆಗ ಮಗುವಿನ ಮಾತು ಒಂದು ವಿನೋದವಾಗಿ ಕಂಡರೂ ಆ ಮಗು ಹಿರಿಯರಿಗಿಂತ ಹೆಚ್ಚು ವಿವೇಕಿಯಾಗಿದ್ದಿತೆಂಬುದು ಈಚೆಗೆ ನಡೆದ ಇತಿಹಾಸದಿಂದ ಸ್ಪಷ್ಟವಾಗಿದೆ. ಗವರ್ನರ್ ಜನರಲ್ ಚಕ್ರವರ್ತಿ ರಾಜಗೋಪಾಲಾಚಾರಿಯವರು, ಸೇವಾಗ್ರಾಮಕ್ಕೆ ಮೊನ್ನೆ ಭೇಟಿ ಇತ್ತರು. ಪಾದಚಾರಿಗಳಾಗಿ ಬರಿಯ ತಲೆಯಲ್ಲಿ, ಮಹಾತ್ಮರ ಸಾನ್ನಿಧ್ಯದಿಂದ ಪವಿತ್ರವಾದ ಆಶ್ರಮದಲ್ಲಿ ಸಂಚರಿಸಿದರು. ಭಾರತದ ಭವಿಷ್ಯಕ್ಕೆ ಕಾರ್ಯಕಾರಿಯಾದ ಸಾಹಸಪೂರಿತವಾದ ಅನೇಕ ನಿರ್ಣಯಗಳನ್ನು ತೆಗೆದುಕೊಳ್ಳಲು ಕಾರಣರಾದ ಮಹಾತ್ಮರ ಗುಡಿಸಲಿನ ಮುಂದೆ ವಿನೀತ ಭಾವದಿಂದ ನಿಂತು, ಭಾರತ ಭಾಗ್ಯವಿಧಾತನ ವಿಭೂತಿ ಜೀವನವನ್ನು ನೆನೆದರು. ಮೊನ್ನೆ ಮೊನ್ನೆ ಭಾರತದ ಉಪ ಪ್ರಧಾನಿ ಸರ್ದಾರ್ ಪಟೇಲರು ಸಹ ಸೇವಾಗ್ರಾಮದಲ್ಲಿ ಹೋಗಿ ತಲ್ಲೀನವಾಗಿ ಆ ಅದ್ಭುತ ಜೀವನದ ಧ್ಯಾನದಲ್ಲಿ ತೊಡಗಿ ಕುಳಿತರು. "ನತ್ವಯಂ ಕಾಮಯೇ ರಾಜ್ಯಂ ನಸ್ವರ್ಗಂ ನಾಪುನರ್ಭವಂ, ಕಾಮಯೇ ದುಃಖ ತಪ್ತಾನಾಂ ಪ್ರಾಣಿನಾಂ ಆರ್ತಿನಾಶನಂ" ಎಂದು ಜೀವಿತವನ್ನೆಲ್ಲ ಜಗತ್ತಿನ ದಳಿತರ ಏಳಿಗೆಗಾಗಿ ಕಳೆದ ಮಹಾತ್ಮರ ಗುಡಿಸಲಿನಲ್ಲಿಯೇ ಭಾರತ ಸ್ವಾತಂತ್ರ್ಯ ಜನಿಸಿದುದು, ಗಾಂಧಿಯವರ ಆತ್ಮಶಕ್ತಿಯಿಂದಲೇ

ಚಿಂದಿ ಬಟ್ಟೆಯೇ ಜ್ಞಾನಕ್ಕೆ ಭೂಷಣ, "ಕೌಪೀನ ವಂತಃಖಲು ಭಾಗ್ಯವಂತಃ" ಎಂಬ ನಾಣ್ಣುಡಿಯಂತೆ ಈ ಮಹಾತ್ಮರಿಂದಲೇ ಭಾರತದ ಕಲ್ಯಾಣವಾದುದು, ಭಾರತದ ದೃಷ್ಟಿಯಿಂದ ಆಶ್ಚರ್ಯವೂ ಅಲ್ಲ. ಇದು

ಭಾರತದ ಸಂಸ್ಕೃತಿಗೆ ಅನುಸಾರವಾದುದೇ. ಜಗತ್ತಿನ ಕಲ್ಯಾಣ ಯಾವಾಗಲೂ ಧರ್ಮಿಷ್ಠರಿಂದಲೇ ಸಾಧ್ಯವೆಂಬುದನ್ನು ಪೌರಾತ್ಯ ದೇಶಗಳು ಮಾತ್ರ ಆಚರಿಸಿ ತೋರಿಸಿವೆ. ಬುದ್ಧ, ಶಂಕರ, ರಾಮಾನುಜ, ಚೈತನ್ಯ ಇವರೆಲ್ಲ ಧರ್ಮದ ಹೆಸರಿನಿಂದಲೇ ಮಾನವನ ಏಳಿಗೆಯನ್ನು ಸಾಧಿಸಿದರು. ಮಾನವ ಕಲ್ಯಾಣವನ್ನು ಸಾಧಿಸಲು ರಾಜ್ಯತ್ಯಾಗ ಮಾಡಿದ ಹೊರತು ಸಿದ್ಧಾರ್ಥನಿಂದ ಸಾಧ್ಯವಾಗಲಿಲ್ಲ. ಜಗತ್ ಕಲ್ಯಾಣದ ಜ್ಯೋತಿಯು ಇದರಿಂದ ಬೆಳಗಿದಷ್ಟು, ಉಳಿದ ಯಾವ ರಾಜಮಹಾರಾಜ ಸೇನಾಪತಿ ಸರ್ವಾಧಿಕಾರಿಗಳಿಂದಲೂ ಬೆಳಗಲಿಲ್ಲ. ಧರ್ಮಿಷ್ಟರ ಪ್ರಭಾವವನ್ನರಿತ ರಾಜರು ಪಾದಚಾರಿಗಳಾಗಿ ನಮ್ರರಾಗಿ ಹೋಗಿ ಅವರಿಂದ ಸಲಹೆ ಪಡೆಯುತ್ತಿದ್ದರು. ದುಶ್ಯಂತನು ಪಾದಚಾರಿಯಾಗಿಯೇ ಕಣ್ವರ ಆಶ್ರಮವನ್ನು ಪ್ರವೇಶಿಸಿದನು. ವಸಿಷ್ಠರ ಮಾತನ್ನು ಕೇಳಿಕೊಂಡು ಧರ್ಮಕ್ಕಾಗಿ ದಿಲೀಪ ರಾಜನು ದನವನ್ನೇ ಕಾದನು. ರಾಜರಿಗಿಂತ ಅವರ ಧರ್ಮಗುರುಗಳೇ ಹಿರಿಯರಾದರು. ಅಶೋಕನು ರಾಜನಾದರೂ ಅವನ ಆದರ್ಶವಾದ ಬೌದ್ಧ ಧರ್ಮವೂ ಭಗವಾನ್ ಬುದ್ಧ ದೇವರೂ ಅವನಿಗಿಂತ ದೊಡ್ಡವರಾದರು ಧರ್ಮವು ಭಾರತದಲ್ಲಿರುವಷ್ಟು, ಮತ್ತೆಲ್ಲಿಯೂ ರಾಜಕೀಯಕ್ಕೆ ಗುರುವಾಗಲಿಲ್ಲ. ಸರ್ವಸಂಗಪರಿತ್ಯಾಗಿಗಳಾದ ಅಜಾತಶತ್ರುಗಳಾದ ಧರ್ಮಜ್ಞರು ರಾಜನ ಕಾರ್ಯಗಳನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸುತ್ತಿದ್ದರು.

## ವಿಭೂತಿಗಳ ಕಾಲ

ಧರ್ಮವು ಗ್ಲಾನಿಯಾದಾಗ ನಾನು ಜನಿಸುತ್ತೇನೆಂಬ ಭಗವದ್ವಚನ ಭಾರತದ ಇತಿಹಾಸಪರಂಪರೆಯ ಆಧಾರದ ಮೇಲೆಯೇ ಹುಟ್ಟಿದೆ. ಪ್ರಾಚೀನಳಾದ ಭುವನ ಮನಮೋಹಿನಿಯಾದ ಭಾರತದೇವಿ, ತನ್ನ ಮಕ್ಕಳ ಪರಸ್ಪರ ಸ್ವಯೂಥಕಲಹದಿಂದ ಸ್ವಾತಂತ್ರ್ಯವನ್ನು ಕಳೆದುಕೊಂಡಳು. ಎರಡು ಶತಮಾನಗಳ ಕಾಲ ಇಲ್ಲಿ ಪರಕೀಯರ ಧಾಳಿ ನಡೆಯಿತು. ಈ ಕಾಲ ನಮ್ಮ ದಾಸ್ಯ ಕಾಲವೆಂಬ ಕಾರಣದಿಂದ ನಮ್ಮ ಅವನತಿಯ ಕಾಲವಾದರೂ, ಭಗವಂತನ ವಿಶ್ವದೃಷ್ಟಿಯಿಂದ ಈ ಕಾಲ ಮಹತ್ ವಿಭೂತಿಗಳ ಆವಿರ್ಭಾವಕ್ಕೆ ಅರ್ಹವಾದ ಕಾಲ. ಭಾರತದಲ್ಲಿ

ಹಿಂದೆ ಬುದ್ಧ, ರಾಮ, ಕೃಷ್ಣ, ಶಂಕರರು ಜನಿಸಿದಂತೆ ಈ ಕಾಲದಲ್ಲಿ ಸಹ ವಿಭೂತಿಗಳ ಆವಿರ್ಭಾವವಾಯಿತು. ಮಹಾತ್ಮಗಾಂಧಿಯವರು ಜನ್ಮವೆತ್ತಿದ ಹತ್ತು ವರುಷಗಳ ಹಿಂದೆ ಮುಂದೆ, ಭಾರತದಲ್ಲಿ ಯಾವೆಡೆ ನೋಡಿದರೂ ಪ್ರಖ್ಯಾತ ಕಣ್ಮಣಿಗಳು ದೇಹವೆತ್ತ ಮಹದಾತ್ಮಗಳಾಗಿ ವಿರಾಜಿಸುತ್ತಿವೆ. ಭಾರತ ರಾಮಾಯಣಗಳ ಕಾಲ ಹೇಗೆ ಮಹದ್ವ್ಯಕ್ತಿಗಳ ಕಾಲವೋ ಹಾಗೆಯೇ ಹತ್ತೊಂಬತ್ತು ಇಪ್ಪತ್ತನೆಯ ಶತಮಾನದ ಪೂರ್ತಿ, ವಿಶ್ವದೃಷ್ಟಿಯಿಂದ ಪವಿತ್ರವಾದ ಮಹದ್ವ್ಯಕ್ತಿಗಳ ಜನ್ಮಕಾಲ. ಕಣ್ಣನ್ನು ಯಾವೆಡೆ ಪಸರಿಸಿದರೂ ಆಕಾಶದಲ್ಲಿ ತೋರುವ ಚುಕ್ಕಿಗಳಂತೆ ಮಹಾತ್ಮರು ಕಣ್ಗೊಳಿಸುತ್ತಾರೆ. ರಾಜಕೀಯ ಸಾಮಾಜಿಕ ಧರ್ಮ ಸುಧಾರಣೆ, ಎಲ್ಲದರಲ್ಲು ಅದು ಧೀರರ ಕಾಲ. ರಾಜಾರಾಮಮೋಹನ ರಾಯ ರಾಮಕೃಷ್ಣ ಪರಮಹಂಸ ವಿವೇಕಾನಂದ ಟಾಕೂರ್ ಸ್ವಾಮಿ ಶ್ರದ್ಧಾನಂದ ಇವರೆಲ್ಲ ಭಾರತ ಸಂಸ್ಕೃತಿಯ ಕೈದೀವಿಗೆಯಂತೆ ತೋರುತ್ತಿದ್ದಾರೆ. ಇನ್ನು ರಾಜಕೀಯದಲ್ಲಿಯಂತೂ ಇದು ಪೂರ್ಣ ಬೆಳೆಯ ಕಾಲ; ಬಾಲಾ ಲಾಲ್ ಪಾಲ್ ಗಾಂಧಿ ನೆಹರು ಟಿಳಕ್ ದಾಸ್ ಬೋಸ್ ಚಕ್ರವರ್ತಿ ರಾಜಗೋಪಾಲಾಚಾರಿ. ಹೀಗೆ ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತದ ಮಹದ್ವ್ಯಕ್ತಿಗಳ ಆವಿರ್ಭಾವ ಭಾರತದ ಸಂಸ್ಕೃತಿಗೆ ಅನುಗುಣವಾಗಿದೆ.

ಇಂತಹ ಶ್ರೀಮಂತ ಅಧ್ಯಾತ್ಮ ಸಂಪತ್ತಿನ ವಾತಾವರಣದಲ್ಲಿ ಜನಿಸಿದರೂ ಗಾಂಧಿಯವರಿಗೆ ಅಂದಿನ ನಮ್ಮ ದೇಶದ ಪರಿಸ್ಥಿತಿಯಿಂದ ಸ್ವಾತಂತ್ರ ಸಮರದಲ್ಲಿಯೇ ಹೆಚ್ಚಾಗಿ ಹೋರಾಡುವ ಪ್ರಮೇಯವುಂಟಾಯಿತು. “ನಾನು ಧರ್ಮದ ಮನುಷ್ಯ. ರಾಜಕೀಯವು ನನ್ನ ರಕ್ತದ ರಕ್ತವಲ್ಲ. ಧರ್ಮವು ನನ್ನ ಕಣ್ಣಿನ ಬೆಳಕು, ಜೀವದ ಉಸಿರು. ಆದರೆ ಪಾರತಂತ್ರದಲ್ಲಿರುವವನು ತನ್ನ ಆತ್ಮೋನ್ನತಿಯನ್ನು ಸಹ ಮಾಡಿಕೊಳ್ಳಲಾರ. ಆದುದರಿಂದ ಸ್ವಾತಂತ್ರವನ್ನು ಮೊದಲು ಗಳಿಸಬೇಕು. ಇದಕ್ಕಾಗಿ ಪ್ರಾಣವನ್ನು ಬಲಿಗೊಡಬೇಕು” ಎಂಬುದು ಗಾಂಧಿಯವರ ಧ್ಯೇಯವಾಯಿತು.

* * * *

ಚೇತನ ಕುಸುಮ ವಿಕಾಸಂ
ಸ್ವಾತಂತ್ರ್ಯರವಿ ಪ್ರಕಾಶದಿಂದೆನುತೀತಂ
ಸಾತತ್ಯದ ತಪದಿಂ ವಿ
ಖ್ಯಾತ ಕ್ರಿಯನಾದನಾ ಭಗೀರಥ ಸದೃಶಂ

ಆದರೆ ಗಾಂಧಿಯವರ ಒಲವು ಸ್ವಾಭಾವಿಕವಾಗಿ ಧರ್ಮದ, ಆಧ್ಯಾತ್ಮದ ಕಡೆಗೆ ಇತ್ತು. ರಾಜಕೀಯ ಸ್ವಾತಂತ್ರ್ಯ ಅದರ ಮಾರ್ಗದ ಬರಿಯ ಒಂದು ಹೆಜ್ಜೆ ಮಾತ್ರವಾಯಿತು. ಆ ಸ್ವಾತಂತ್ರ್ಯವೇ ತಮ್ಮ ಗುರಿ ಎಂದು ಅವರು ಭಾವಿಸಲಿಲ್ಲ. ಅವರು ಧರ್ಮಮಾರ್ಗಾನು ವರ್ತಿಗಳಾದುದರಿಂದು ರಾಜಕೀಯವನ್ನೂ ಧರ್ಮಯುದ್ಧವನ್ನಾಗಿ ಮಾಡಿದರು. ರಾಜಕೀಯದಲ್ಲಿ ಕುಟಿಲತಂತ್ರದ ಬದಲು ಪ್ರಾಮಾಣಿಕತೆಯನ್ನು ಅಭ್ಯಸಿಸುವಂತೆ ಬೋಧಿಸಿದರು. ಭಾರತದ ಹಿಂದಲ ರಾಜಕೀಯ ಗುರುಗಳಂತೆ ವಿದ್ಯಾರಣ್ಯರಂತೆ ಆತ್ಮಶಕ್ತಿ ಒಂದೇ ಇವರ ಮುಖ್ಯ ಅಸ್ತ್ರವಾಯಿತು.

ಭಾರತ, ಯಂತ್ರನಾಗರಿಕತೆಯಲ್ಲಿ ಎಷ್ಟೇ ಹಿಂದೆ ಬಿದ್ದಿದ್ದರೂ, ಅದರ ಜೀವನದ ಮಟ್ಟ ಎಷ್ಟೇ ಕಡಿಮೆಯಾಗಿದ್ದರೂ ವಸ್ತುಗಳ ತಯಾರಿಕೆ ಇಲ್ಲಿ ಅಧಿಕಪ್ರಮಾಣದಲ್ಲಿ ನಡೆಯದಿದ್ದರೂ, ಭಾರತದ ಆತ್ಮಶಕ್ತಿಯ ಪ್ರಭಾವದಿಂದ ಇದನ್ನು ಯಾರೂ, ಹಿಂದುಳಿದ ದೇಶವೆನ್ನಲು ಸಾಧ್ಯವಿಲ್ಲ. ಯಂತ್ರ ನಾಗರಿಕತೆಯೇ ಪ್ರಗತಿಯ ಗುರುತು ಎನ್ನುವ ಈ ಅಣುಬಾಂಬಿನ ಕಾಲದಲ್ಲಿ ಸಹ ಆತ್ಮದ ಶಕ್ತಿ ಪಶುಶಕ್ತಿಗಿಂತ ಮೇಲು ಎಂಬುದನ್ನು ತೋರಿಸಲು ದೇವರು ಭಾರತವನ್ನೇ ಆರಿಸಿಕೊಂಡನು. ಇಲ್ಲದಿದ್ದಿದ್ದರೆ ಹಿಟ್ಲರ್ ಮುಸಲೊನಿ ಹಿರೊಹಿಟೊಗಳಿಗೆ ಮಣಿಯದ, ಅಮೆರಿಕದ ಅದ್ಭುತ ವಿಧ್ವಂಸಕ ಶಕ್ತಿಗಳ ಸಹಾಯವುಳ್ಳ ಇಂಗ್ಲೆಂಡು ಈ ಬಡಜೋಗಿಯ ಸಾರಥ್ಯದ ಭಾರತಕ್ಕೆ ಬಗ್ಗುತ್ತಿದ್ದಿತೆ? ಭಾರತದ ಬಲ ಇಂದಿಗೂ ಈ ಧರ್ಮ ಎಂಬುದನ್ನು ಪೌರಾತ್ಯರೂ ಪಾಶ್ಚಾತ್ಯರೂ ಪೂರ್ಣವಾಗಿ ಒಪ್ಪಿದ್ದಾರೆ.

ಈ ಆತ್ಮಶಕ್ತಿಯ, ಧರ್ಮದ ಬೆಳವಣಿಗೆಯ ಕಾರಣದಿಂದ ಮಹಾತ್ಮಗಾಂಧಿಯವರು, ಆತ್ಮೋನ್ನತಿಯ ಸತ್ಯಶೋಧನೆಯ ಸ್ವಂತ,

ಕತ್ತ್ರಿಯ ಅಲುಗಿನ ಮಾರ್ಗದಲ್ಲಿ ತೊಡಗಿದ್ದರೂ, ಅವರು ಭಾರತ ಜನತೆಯ ಪ್ರತಿನಿಧಿಗಳಾದುದರಿಂದ ಭಾರತೀಯರಿಗೆ ಎಲ್ಲಾ ಮಾರ್ಗದಲ್ಲಿಯೂ ಮಾರ್ಗದರ್ಶನಮಾಡುವುದು ಅವರ ಕರ್ತವ್ಯವಾಯಿತು ಈ ದೃಷ್ಟಿಯಿಂದ ನೋಡುವಾಗ ಗಾಂಧಿಯವರು ಒಂದೆಡೆ ನಮಗೆ ದೃಷ್ಟಿಗೂ ಎಟಕದ ಅತ್ಯಂತ ಎತ್ತರವಾದ ಹಿಮಾಚಲದ ಉನ್ನತ ಶಿಖರವಾಗಿದ್ದರು. ಮತ್ತೊಂದೆಡೆ ನಮ್ಮ ನಿತ್ಯ ವ್ಯವಹಾರದಲ್ಲಿ ನಿತ್ಯ ಜೀವನದಲ್ಲಿ ದಿನದಿನದ ಬಾಳಿನಲ್ಲಿ ಸೇರಿ, ಈ ಕ್ಷಣಿಕ ಜಗತ್ತಿನ ಸಂಸಾರದ ಕೋಟಲೆಗೆ ಅವಶ್ಯಕವಾದ ರೀತಿಯಲ್ಲಿ, ದುರ್ಬಲವುಳ್ಳ ಹುಲುಮಾನಿಸನಿಗೆ ಸಹ ಸಮನಾಗಿದ್ದರು. ಆತ್ಮೋನ್ನತಿಯ ಆ ಶಿಖರವನ್ನು ಏರಿದವರು ತಮ್ಮ ಮಹತ್ ಎತ್ತರದ ಮಟ್ಟದಿಂದ ಯಾವುದು ಅಲ್ಪವೆಂದು ಗಣಿಸುತ್ತಿದ್ದರೋ, ಅಷ್ಟೇ ಎತ್ತರದ ಶಿಖರವನ್ನೇರಿದರೂ, ಗಾಂಧಿಯವರು ಈ ಬಾಳನ್ನೂ ಇದರ ಸಾಧನೆಗಳನ್ನೂ ಅಲ್ಪವೆಂದು ಎಣಿಸಲಿಲ್ಲ. ಒಂದೆಡೆ "ಮರಣವು ಮನುಷ್ಯನ ಸ್ವಾಭಾವಿಕವಾದ ಗುರಿ, ಮರಣಕ್ಕೆ ಯಾಕೆ ಹೆದರಬೇಕು. ಮರಣವೇ ನಮ್ಮ ವಿಶ್ರಾಂತಿ ಸ್ಥಾನ, ಮರಣವೇ ನಮ್ಮ ಅತ್ಯುತ್ಕೃಷ್ಟ ಮಿತ್ರ" ಎಂದರು. ಆದರೆ ಹಾಗೆ ಹೇಳಿಕೊಂಡು "ಜೀವನ ಆದ ಹಾಗೆ ಆಗಲಿ" ಎನ್ನಲಿಲ್ಲ. "ಧೈರ್ಯದಿಂದ ತೇಜಸ್ಸಿನಿಂದ ಪ್ರಾಮಾಣಿಕರಾಗಿ ಬಾಳಿ, ಆತ್ಮಗೌರವಕ್ಕೆ ವಿರೋಧವಾಗಿ ಬಾಳಬೇಡಿ. ಹೇಡಿಯಾಗಿ, ಬಾಳುವುದಕ್ಕಿಂತ ಸಾವು ಮೇಲು. ತುಂಬ ಜೀವನವನ್ನು, ಪೂರ್ಣ ಬಾಳನ್ನು ಸಾಧಿಸಿ" ಎಂದು ಬೋಧಿಸಿದರು. ಆ ಬೋಧನೆಯನ್ನು ಆಚರಿಸಿದರು. ಅಣುವನ್ನು ಕುರಿತು ನಡೆಯುವಾಗ ಅಣುವಾಗಿಯೇ ನಡೆಯುತ್ತಿದ್ದರು. ಮಹತ್ತಾದುದನ್ನು ಆಚರಿಸುವಾಗ ಮಹತ್ತಾದುದಾಗಿಯೇ ನಡೆಯುತ್ತಿದ್ದರು. ಆ ಪೂರ್ಣಜೀವನ ಯಾವ ದೃಷ್ಟಿಯಿಂದ ನೋಡಿದರೂ-ಬ್ರಹ್ಮಚಾರಿಯಾಗಿ, ಗೃಹಸ್ಥನಾಗಿ ಸರ್ವಸಂಗಪರಿತ್ಯಾಗಿಯಾಗಿ ವಿಶ್ವಪ್ರೇಮಿಯಾಗಿ ರಾಜಕಾರಣ ಪಟುವಾಗಿ ಆಧ್ಯಾತ್ಮ ಗುರುವಾಗಿ-ಪೂರ್ಣವೂ ದೋಷರಹಿತವೂ ಕೃತಕೃತ್ಯವೂ ಆದುದಾಗಿ ತೋರುತ್ತಿದ್ದಿತು.

* * * *

ಪರಮಾರ್ಥಿಕ ಸತ್ಯಂ ದೇವಂ
ಬಾಳೆಲ್ಲಂ ದೇವ ನಿತ್ಯಲೀಲಾ ವಿಭವಂ
ಒಲಗಿಪೊಡೆ ದೇವನ ನೀ
ವೀ ಲೋಕವ ಸೊಗಸುಗೊಳಿಪುದೆಂಪವನೀತಂ

## ದಕ್ಷ

ಯೋಗಿಯ ಲಕ್ಷಣಗಳನ್ನು ಕುರಿತು ಹೇಳುವಾಗ ಭಗವದ್ಗೀತೆಯ ಹನ್ನೆರಡನೆಯ ಅಧ್ಯಾಯದಲ್ಲಿ ದಕ್ಷಃ ಎಂದು ಹೇಳಿದೆ. ದಕ್ಷನಲ್ಲದವನಿಗೆ ಯೋಗವು ಸಿದ್ಧಿಸುವುದಿಲ್ಲ. ಗಾಂಧಿಯವರು ತಮ್ಮ ಸಮಸ್ತ ಕಾರ್ಯ ದಲ್ಲಿಯೂ ದಕ್ಷರೇ ಆಗಿದ್ದರು. ಯಾವ ಕಾರ್ಯವನ್ನೂ ಸಣ್ಣದೇ ಆಗಲಿ ದೊಡ್ಡದೇ ಆಗಲಿ ಅಚ್ಚುಕಟ್ಟಾಗಿ ಮಾಡಬೇಕೆಂಬುದು ಅವರ ತತ್ವ ವಾಗಿತ್ತು. ಯಾವ ಕಾರ್ಯವನ್ನೂ ಉದಾಸೀನದಿಂದ ಮಾಡುವುದು ದ್ರೋಹ ಎಂದು ಅವರು ಪದೇ ಪದೇ ಹೇಳಿದ್ದಾರೆ. ಅಹಿಂಸೆಯ ಅನು ಸರಣೆಯ ಜತೆಯಲ್ಲಿ ಬುದ್ಧಿಯೂ ಬೆಳೆಯುತ್ತದೆ, ಎಂದಿದ್ದಾರೆ.

## ನಿಷ್ಕೃಷ್ಟಜ್ಞಾನ

ಮಹಾತ್ಮಗಾಂಧಿಯವರಿಗೆ ವಿಷಯಜ್ಞಾನ ಎಷ್ಟು ಸ್ಪಷ್ಟವೂ ನಿಷ್ಕೃಷ್ಟವೂ ಆಗಿದ್ದಿತೆಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡ ಬಹುದು. ಭಾರತ ದೇಶದಲ್ಲಿ ಇಷ್ಟೊಂದು ರೈಲುಗಳು ಸಂಚರಿಸು ತ್ತಿವೆಯೆಲ್ಲ. ಅನೇಕ ಕಡೆಗಳಲ್ಲಿ ಒಂದು ರೈಲಿನಿಂದ ಮತ್ತೊಂದು ರೈಲಿಗೆ ಬದಲಾಯಿಸಿ ಪ್ರಯಾಣ ಮುಂದುವರಿಯಬೇಕು. ಕೆಲವು ಕೇಂದ್ರ ಗಳಿಗೆ ದೇಶದ ಒಳಭಾಗದಿಂದ ಸಹ ಎರಡು ಮೂರು ರೈಲು ಮಾರ್ಗ ಗಳಿಂದ ಸಂಬಂಧವಿದೆ. ಯಾವ ರೈಲಿನಲ್ಲಿ ಯಾವ ಹೊತ್ತಿನಲ್ಲಿ ಕಾಗದ ವನ್ನು ಹಾಕಿದರೆ ಅದು ಯಾವ ಕಾಲಕ್ಕೆ ತನ್ನ ಗುರಿಯನ್ನು ಮುಟ್ಟುವು ದೆಂಬುದು ಮಹಾತ್ಮರಿಗೆ ಸ್ಪಷ್ಟವಾಗಿ ಗೊತ್ತು. ಒಂದು ಸಲ ವೈಸ ರಾಯರು ಗಾಂಧಿಯವರಿಗೆ ಒಂದು ಕಾಗದವನ್ನು ಹಾಕಿ "ಅದು ಇಂತಹ ವೇಳೆಗೆ ಅವರಿಗೆ ಮುಟ್ಟುವುದೆಂದು" ನಿರೀಕ್ಷಿಸಿದ್ದರು. ಆದರೆ ಆ ವೇಳೆಗೆ ಆ ಕಾಗದ ಗಾಂಧಿಯವರಿಗೆ ಮುಟ್ಟಲಿಲ್ಲ. ಗಾಂಧಿಯವರು "ನೀವು ಆ ರೈಲಿನಲ್ಲಿ ಹಾಕಿಸಿದ್ದರೆ ಆದು ನನಗೆ ತಲಪಿಯೇ ತಲಪುತ್ತಿದ್ದಿತು.

ನೀವು ಬೇರೆ ಮಾರ್ಗದಿಂದ ಬರುವ ಇನ್ನೊಂದು ರೈಲಿಗೆ ಹಾಕಿಸಿದ್ದಿರಬೇಕು"ಎಂದರು. ಅನಂತರ ವೈಸರಾಯರು ವಿಚಾರಿಸಿದ ಮೇಲೆ ಗಾಂಧಿಯವರ ಮಾತು ನಿಜವೆಂಬುದು ಅವರಿಗೆ ಗೊತ್ತಾಯಿತು.

ನಿಷ್ಕೃಷ್ಟವಲ್ಲದ ಜ್ಞಾನದಿಂದ ಹೇಗೆ ಪ್ರಯೋಜನವಿಲ್ಲವೋ ಹಾಗೆಯೇ ಅನವಶ್ಯಕವಾಗಿ ತಲೆಯಲ್ಲಿ ತುಂಬಿಕೊಂಡ ಪುಸ್ತಕದ ಜ್ಞಾನದಿಂದಲೂ ಏನೂ ಪ್ರಯೋಜನವಿಲ್ಲ. ಆಹಾರ ಬಟ್ಟೆ ಇವುಗಳನ್ನು ಆವಶ್ಯಕವಾದುದಕ್ಕಿಂತ ಹೆಚ್ಚಾಗಿ ಇಟ್ಟುಕೊಳ್ಳುವುದು ಹೇಗೆ ತಪ್ಪೋ ಕಳವೋ, ಹಾಗೆಯೇ ಆವಶ್ಯಕವಲ್ಲದ ಬರಿಯ ಒಣ ಜ್ಞಾನವನ್ನೂ ತಲೆಯಲ್ಲಿ ತುಂಬಿಕೊಳ್ಳಬಾರದು. ನಮ್ಮ ಜೀವನನಾಟಕಕ್ಕೆ ಆವಶ್ಯಕವಾದ ಜ್ಞಾನ ಬೇಕೇ ಬೇಕು, ಆದರೆ ಆ ಜ್ಞಾನ ಸ್ಪಷ್ಟವಾಗಿ ಖಚಿತವಾಗಿರಬೇಕು. ಮಹಾತ್ಮ ಗಾಂಧಿಯವರು ಹಿಂದೆ ಆರೋಗ್ಯದ ನಿಮಿತ್ತ ನಂದಿಬೆಟ್ಟಕ್ಕೆ ಬಂದಿದ್ದರಷ್ಟೆ. ಆಗ ಅನಂತರ ಬೆಂಗಳೂರು ಬಿಟ್ಟು ಹೊರಡುವಾಗ ಅವರು ಜನಸಂದಣಿಯನ್ನು ತಪ್ಪಿಸಿಕೊಳ್ಳಲು ಕೃಷ್ಣರಾಜಪುರಂ ಸ್ಟೇಷನ್ನಿನಲ್ಲಿ ರೈಲನ್ನು ಹತ್ತುವುದೆಂದು ಗೊತ್ತಾಯಿತು. ರೈಲು ಅಲ್ಲಿಗೆ ಬರುವುದಕ್ಕೆ ಸ್ವಲ್ಪ ಮುಂಚೆ ಗಾಂಧಿಯವರನ್ನು ಮೋಟಾರಿನಲ್ಲಿ ಸ್ಟೇಷನ್ನಿಗೆ ಕರೆದುಕೊಂಡು ಬಂದರು. ಗಾಂಧಿಯವರಂತವರು ಬಂದರೆ ಯಾವ ಯಾವ ಬೆಂಗಳೂರಿನ ಪ್ರಮುಖರು ಅವರ ಸುತ್ತ ಇರಬಹುದೋ, ಅಂತಹವರೆಲ್ಲ ಕೃಷ್ಣರಾಜಪುರಂ ಸ್ಟೇಷನ್ನಿನಲ್ಲಿ ಬಂದು ಸೇರಿದ್ದರು. ೧೦-೧೫ ನಿಮಿಷಗಳಾದರೂ ರೈಲು ಬರುವ ಸೂಚನೆ ತೋರಲಿಲ್ಲ. ಆಗ ಗಾಂಧಿಯವರು ಮಗ್ಗುಲಲ್ಲಿದ್ದ ಒಬ್ಬ ಬೆಂಗಳೂರು ಪುಢಾರಿ (ಮುಖಂಡ) ಯವರನ್ನು "ರೈಲು ಎಷ್ಟು ಹೊತ್ತಿಗೆ ಬರುತ್ತೆ?"ಎಂದು ಕೇಳಿದರು. ಅವರು ೯-೩೦ ಒಂಬತ್ತುವರೆಗೆ ಬರುತ್ತೆ ಎಂದರು. ಒಂದೆರಡು ನಿಮಿಷ ಬಿಟ್ಟು, ಗಾಂಧಿಯವರೇ ಮತ್ತೊಬ್ಬ ಪುಢಾರಿಯನ್ನು ಕೇಳಿದರು. ಆತ ೯-೧೦ ಕ್ಕೆ ಬರುತ್ತೆ ಎಂದ. ಗಾಂಧಿಯವರು ಇನ್ನು ೩-೪ ಪುಡಾರಿಗಳನ್ನು ಕೇಳಿದರು. ಒಬ್ಬೊಬ್ಬರು ಒಂದೊಂದು ಹೇಳಿದರು. ಕೊನೆಗೆ ಗಾಂಧಿಯವರೇ ನಗುತ್ತಾ "ಒಬ್ಬೊಬ್ಬರು ಒಂದೊಂದು ಕಾಲವನ್ನು ಹೇಳುತ್ತೀರಿ.

ಯಾರಿಗೂ ಸ್ಪಷ್ಟವಾಗಿ ತಿಳಿಯದೆ? ತಿಳಿಯದಿದ್ದರೆ ಸ್ಟೇಷನ್ ಮಾಸ್ಟರರನ್ನಾದರೂ ಕೇಳಿ" ಎಂದರು. ಗಾಂಧಿಯವರನ್ನು, ಸ್ಟೇಷನ್ನಿಗೆ ಕರೆದುಕೊಂಡು ಬಂದಿದ್ದವರ ಪೈಕಿ ಒಬ್ಬರಿಗಾದರೂ ಸರಿಯಾದ ರೈಲು ಪ್ರಯಾಣ ಕಾಲ ತಿಳಿದಿರಲಿಲ್ಲ.

ದಕ್ಷತೆಯ ಜತೆಗೆ ಯಾವ ಕೆಲಸದಲ್ಲಿಯೂ ಅಚ್ಚುಕಟ್ಟು ಗಾಂಧಿಯವರ ಸ್ವಭಾವವಾಗಿತ್ತು. ಅವರ ಪದಾರ್ಥಗಳನ್ನೆಲ್ಲಾ ಅವರು ಬಹಳ ಅಚ್ಚುಕಟ್ಟಾಗಿ ಇಡುತ್ತಿದ್ದರು. ತಮ್ಮ ಸುತ್ತಮುತ್ತ ಕೊಳೆಯ ಲೇಶವೂ ಸೇರಲು ಅವರು ಅವಕಾಶ ಕೊಡುತ್ತಿರಲಿಲ್ಲ. ಅವರ ಪದಾರ್ಥಗಳು ಹಾಗೆ ಯಾವಾಗಲೂ "ಸದಾ ಶುಚಿ" ಯಾಗಿರುತ್ತಿದ್ದವು. "ನಾನು ಬಹಳ ಕಷ್ಟಕೊಡುವ ಯಜಮಾನ, ನನ್ನಲ್ಲಿಯೂ ಕೊಳೆ ಸಹಿಸುವುದಿಲ್ಲ. ಇತರರಲ್ಲಿಯೂ ಸಹಿಸುವುದಿಲ್ಲ", ಎಂದು ಅವರು ಹೇಳುತ್ತಿದ್ದರು. ಗಾಂಧಿಯವರಿಗೆ ಒಳ್ಳೆಯ ಬರವಣಿಗೆ (ಅಕ್ಷರ) ಕಂಡರೆ ಪ್ರೀತಿ. ತಮ್ಮ ಅಕ್ಷರ ಚೆನ್ನಾಗಿಲ್ಲವೆಂಬ ಕೊರಗು ಅವರಿಗೆ ಕೊನೆಯವರೆಗೆ ಇದ್ದಿತು.

* * * *

## ಸದಾ ಶುಚಿ

ಒಂದೊಂದು ವೇಳೆ ಈ ಶುಚಿಯೊಂದಿಗೆ ಅವರ ಸ್ವಾಭಾವಿಕವಾದ ಹಾಸ್ಯ ಹೊರಹೊಮ್ಮುತ್ತಲೇ ಇದ್ದಿತು. ಅಹಮ್ಮದಾಬಾದ್ ಕಾಂಗ್ರೆಸ್ಸಿನ ವೇಳೆಗೆ (೧೯೨೧) ಖಾದಿಗೆ ಇನ್ನೂ ೩-೪ ವರುಷಗಳ ಪ್ರಾಯ. ಕಾಂಗ್ರೆಸ್ ನಗರವನ್ನು ಭವ್ಯವಾಗಿ ಶುದ್ಧವಾದ ಬಿಳಿಯ ಖಾದಿಯಲ್ಲಿ ರಚಿಸಿದ್ದರು. ನೂರಾರು ಹೊಲಿಗೆಯವರು ಕಾಂಗ್ರೆಸ್ಸಿನ ಚಪ್ಪರಲ್ಲಿ ಮುಂದೆ ತಮ್ಮ ಯಂತ್ರಗಳನ್ನಿಟ್ಟುಕೊಂಡು ಕೆಲಸಮಾಡುತ್ತಿದ್ದರು. ವಿಷಯ ನಿಯಾಮಕ ಸಮಿತಿಗೆ ಗಾಂಧಿಯವರೂ ಅವರ ಜತೆ ಹಕೀಂ ಅಜಮಲ್ ಖಾನ್ ಸರೋಜನಿ ನಾಯ್ಡು ಆಂಡ್ರೂಸ್ ಎಲ್ಲರೂ ಬಂದರು. [ನಾನು ಅಹಮ್ಮದಾಬಾದ್ ಕಾಂಗ್ರೆಸಿನಲ್ಲಿ ಸ್ವಯಂಸೇವಕನಾಗಿದ್ದು ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದೆ] ಆಗಲೇ ಒಳಕ್ಕೆ ಪ್ರವೇಶಿದ್ದವರ ಜೋಡಿನರಾಸಿಗಳು ಬಾಗಿಲಿನಲ್ಲಿ ಎಂಜಲು ಹಾಳೆಗಳಂತೆ ಹಾರಾಡುತ್ತಿದ್ದವು. ಒಬ್ಬರ ಜೋಡು ಒಬ್ಬರಿಗೆ ಗುರುತು ಸಿಕ್ಕುವ

ಪ್ರಮೇಯವೇ ಇರಲಿಲ್ಲ. ಗಾಂಧಿ ಒಂದುಗಳಿಗೆ ನೋಡಿ ಸಮೀಪದ ದರ್ಜಿಯನ್ನು ಕರೆದು ಅಲ್ಲೇ ಇದ್ದ ಖಾದಿಬಟ್ಟೆಯನ್ನು ತೋರಿಸಿ "ಒಂದು ಚೀಲ ಮಾಡು" ಎಂದರು. ಆತನು ಒಂದೇ ನಿಮಿಷದಲ್ಲಿ ಸರಕ್ಕನೆ ಒಂದು ಚೀಲ ಹೊಲಿದುಕೊಟ್ಟ. ಎಲ್ಲರೂ ಆಶ್ಚರ್ಯದಿಂದ ನೋಡುತ್ತಿರುವಾಗಲೇ ಗಾಂಧಿ ತಮ್ಮ ಜೋಡನ್ನು ಶುಭ್ರವಾದ ಆ ಚೀಲದಲ್ಲಿ ಹಾಕಿಕೊಂಡು ಅದನ್ನು ಕೈಯಲ್ಲಿ ಹಿಡಿದುಕೊಂಡು ಒಳಕ್ಕೆ ಹೋದರು. ಅಲ್ಲಿಂದ ಮುಂದೆ ಅಹಮದಾಬಾದ್ ಕಾಂಗ್ರೆಸ್ಸಿನಲ್ಲಿ ದರ್ಜಿಗಳಿಗೆ ಖಾದಿಯ ಚೀಲವನ್ನು ಹೊಲೆಯುವುದರ ಹೊರತು ಬೇರೆ ಕೆಲಸವಾಗಲಿಲ್ಲ. ಆ ಕಾಂಗ್ರೆಸ್‌ನಲ್ಲಿ ಸುಮಾರು ಒಂದು ಲಕ್ಷ ಕೈಚೀಲಗಳು ವೆಚ್ಚವಾಗಿದ್ದಿರಬಹುದು. ಖಾದಿಧಾರಿಗಳು ಮೊದಮೊದಲು ಹಿಡಿಯುತ್ತಿದ್ದ ಕೈಚೀಲ, ಹೀಗೆ ಜವಹರರ ವೇಸ್ಟ್‌ಕೋಟ್‌ನಂತೆ ಗಾಂಧಿಯವರಿಂದ ಬಳಕೆಗೆ ಬಂತು. ಆದರೆ ಅದರ ಮೂಲ ಅನೇಕರಿಗೆ ತಿಳಿಯದು.

ಗಾಂಧಿಯವರು ಯಾವ ಕಾರ್ಯವನ್ನೂ ತಾವು ಮೊದಲು ಮಾಡಿ ಅನಂತರ ಇತರರಿಗೆ ಬೋಧಿಸುತ್ತಿದ್ದರೆಂಬುದು ಸರ್ವ ವಿದಿತವಷ್ಟೆ. ಒಂದು ದೃಷ್ಟಿಯಲ್ಲಿ ಕಸ್ತೂರಿಬಾ ತಮಗೆ ಗುರುಗಳಾಗಿದ್ದರೆಂದು ಗಾಂಧಿ ಒಂದೆಡೆ ಹೇಳಿದ್ದಾರೆ. ಆದರೆ ಗಾಂಧಿ ಎಲ್ಲ ದೃಷ್ಟಿಯಿಂದಲೂ ಕಸ್ತೂರಿಬಾರವರಿಗೆ ಗುರುಗಳಾಗಿದ್ದರು. ಆಹಾರ ಪರಿಶೋಧನೆಯಲ್ಲಿ ಅವರು ತೊಡಗಿದ್ದಂತೆ ಅಡಿಗೆಯ ಮನೆಯನ್ನು ಶುಚಿಯಾಗಿಡುವುದನ್ನೂ ಅವರು ತಮ್ಮ ಕಾರ್ಯದಿಂದ ತೋರಿಸಿದ್ದರು. ಅವರು ಕಸ್ತೂರಿಬಾ ಜತೆಯಲ್ಲಿದ್ದರೂ ತಾವೇ ಒಂದೊಂದು ಸಲ ಪಾತ್ರೆಗಳನ್ನು ಬೆಳಗುತ್ತಿದ್ದರು. ಆಚಾರ್ಯ ಕೃಪಾಲಾನಿಯವರು ಗಾಂಧಿಯವರ ಜತೆಯಲ್ಲಿದ್ದಾಗ ಒಂದು ಸಲ ಹೀಗೆ ಆಯಿತು. ಆಚಾರ್ಯರೂ ಗಾಂಧಿಯವರೂ ಅಡಿಗೆ ಮಾಡಿದ ಪಾತ್ರೆಗಳನ್ನು ಬೆಳಗುತ್ತಿದ್ದರು ಆಚಾರ್ಯರಿಗೆ ಮೊಣಕೈವರೆಗೆ ಮಸಿಯಾಗಿದ್ದಿತು. ಆ ವೇಳೆಗೆ ಕಸ್ತೂರಿಬಾ ಅಲ್ಲಿಗೆ ಬಂದರು. ಕೈಕಾಲುಗಳಿಗೆಲ್ಲ ಮಸಿಯ ದೃಷ್ಟಿಬೊಟ್ಟುಗಳನ್ನಿಟ್ಟುಕೊಂಡಿದ್ದ ಆಚಾರ್ಯರನ್ನೂ ಗಾಂಧಿಯವರನ್ನೂ ನೋಡಿ, ಪಾತ್ರೆಗಳನ್ನು ಅವರ ಕೈಯಿಂದಲೇ ಕಸಿದುಕೊಂಡು "ಹೋಗಿ, ನಿಮ್ಮ ಕೆಲಸ ನೀವು ಮಾಡಹೋಗಿ, ನನ್ನ ಕೆಲಸ

ನಾನು ಮಾಡುತ್ತೇನೆ" ಎಂದರು. ಗಾಂಧಿಯವರು ನಗುತ್ತ ಕೃಪಲಾನಿ ಯವರಿಗೆ "ನೋಡು ನಮಗೆ ಇಷ್ಟಬಂದ ಕೆಲಸ ನಾವು ಮಾಡುವುಕ್ಕೆ ಸಹ ನಮಗೆ ಅವಕಾಶವಿಲ್ಲ. ಮದುವೆಯಾದವರ ಪಾಡು ಹೀಗೆ," ಎಂದು ಹೇಳಿಕೊಂಡು ಪಾತ್ರೆಗಳನ್ನು ಅಲ್ಲೇ ಬಿಟ್ಟು ಒಳಕ್ಕೆ ಹೋದರು. (ಆ ವೇಳೆಗೆ ಆಚಾರ್ಯ ಕೃಪಲಾನಿಯವರಿಗೆ ಇನ್ನು ವಿವಾಹವಾಗಿರಲಿಲ್ಲ) ಪಾತ್ರೆಯಲ್ಲಾಗಲಿ ಸುತ್ತಮುತ್ತಲಾಗಲಿ ಒಂದು ರವೆಯಷ್ಟು ಕೊಳೆ ಇದ್ದರೂ ಅದನ್ನು ಗುರುತಿಸುವ ಕಣ್ಣು ಕಸ್ತೂರಿಬಾರವರಿಗೆ ಗಾಂಧಿ ಯವರಿಂದಲೇ ಉಂಟಾಗಿತ್ತು.

ಕೃಪಲಾನಿಯವರ ಕಾರಣದಿಂದ ದೊರೆಯುವ ನಗುವನ್ನು ಗಾಂಧಿ ಬಿಡುತ್ತಿರಲಿಲ್ಲ. ಚಂಪಾರಣ್ಯದ ಸತ್ಯಾಗ್ರಹದ ಕಾಲದಲ್ಲಿ ಬೀಹಾರಿನ ಒಬ್ಬ ಕಲೆಕ್ಟರು ಗಾಂಧಿಯವರಿಗೆ " ನೀವೇನೋ ಸರಿ. ಸತ್ಯ ಅಹಿಂಸೆ ಎನ್ನುತ್ತೀರಿ. ಅದರಂತೆ ನಡೆಯುತ್ತೀರಿ. ಆದರೆ ನಿಮ್ಮ ಅನುಯಾಯಿ ಗಳು ಶುದ್ಧ ಠಕ್ಕರು. ಈಗ ಕೃಪಲಾನಿ ನೋಡಿ (Arch Agitator) (ಪಟಿಂಗ ಚಳುವಳಿಗಾರ) ಎಂದರು. ಗಾಂಧಿ ನಗುತ್ತಾ " ಅಯ್ಯೋ ಪಾಪ ಅವನು ಚಳವಳಿಗಾರನೆ. ಅವನು ಕಸ್ತೂರಿಬಾಗೆ ಅಡಿಗೆಯಲ್ಲಿ ಸಹಾಯ ಮಾಡುತ್ತಿದ್ದಾನೆ. ಮಸಿ ಮಡಕೆಯಿಂದ ಮೇಲಕ್ಕೆ ತಲೆ ಎತ್ತುವುದಕ್ಕೇ ಅವನಿಗೆ ಹೊತ್ತಿಲ್ಲ !" ಎಂದರು.

ನಮ್ಮ ಜೀವನದ ಆವಶ್ಯಕತೆ ಮತ್ತು ಪರಿಶುದ್ಧತೆಗಾಗಿ ನಾವು ಮಾಡುವ ಯಾವ ದೇಹಶ್ರಮದ ಕಾರ್ಯವೂ ನೀಚವೂ ತುಚ್ಛವೂ ಅಲ್ಲ ವೆಂದು ಮಹಾತ್ಮ ಗಾಂಧಿಯವರು ಪದೇ ಪದೇ ಹೇಳುತ್ತಿದ್ದರೂ ಅವರ ಅತ್ಯಂತ ಸಮೀಪದ ಅನುಯಾಯಿಗಳಿಗೆ ಸಹ ಒಂದೊಂದು ವೇಳೆ ಅವರ ಕಾರ್ಯವನ್ನು ನೋಡಿ ಆಶ್ಚರ್ಯ ಮತ್ತು ದಿಗ್ಭ್ರಾಂತಿ ಯುಂಟಾಗು ತ್ತಿದ್ದಿತು. ಒಂದು ಸಲ ಬಿರ್ಲಾರವರಿಗೆ ಕಾಹಿಲೆಯಾದಾಗ ಅವರು ಬಂದು ತಮ್ಮಲ್ಲಿ ಉಳಿದು ಔಷಧಿ ಪಥ್ಯ ಉಪಚಾರ ಮಾಡಿಕೊಳ್ಳಬೇಕೆಂದು ಗಾಧಿ ಹೇಳಿದರು. ಬಿರ್ಲಾ ಅದೇ ರೀತಿ ಆಶ್ರಮಕ್ಕೆ ಬಂದರು. ಬಂದ ಮರುದಿನವೇ ಮಹಾತ್ಮ ಗಾಂಧಿಯವರೂ ಮಹಾದೇವ ದೇಸಾಯಿಯ ವರೂ ಪಾಯಖಾನೆ ಗೃಹವನ್ನು ಶುದ್ಧಿಮಾಡುತ್ತಿದ್ದುದು, ಬಿರ್ಲಾರವರ

ಕಣ್ಣಿಗೆ ಬಿದ್ದಿತು. ಗಾಂಧಿಯವರ ತತ್ತ್ವಗಳೆಲ್ಲ ತಮಗೆ ಗೊತ್ತಿದ್ದರೂ ಸಹ ಅವರು "ನಾನು ಆಶ್ರಮದಲ್ಲಿ ಇನ್ನು ಇರುವುದಿಲ್ಲ" ಎಂದು ಮೊಂಡು ಹಿಡಿದರು ಪಾಯಖಾನೆ ಮನೆಯನ್ನು ಪರಿಶುದ್ಧ ಮಾಡು ವುದು ಬಿರ್ಲಾರಿಗೆ ಅಷ್ಟು ವಿಚಿತ್ರವಾಗಿ, ಕಂಡುದರಿಂದ ಗಾಂಧಿಯವರೂ ಮಹದೇವ ದೇಶಾಯಿಯವರೂ ಬಿದ್ದು ಬಿದ್ದು ನಕ್ಕರು.

ಸಣ್ಣ ವಿಷಯಗಳಲ್ಲಿ ಸಹ ಗಾಂಧಿಯವರ ಸದಾಶುಚಿತ್ವ ವ್ಯಕ್ತ ವಾಗುತ್ತಿದ್ದಿತು. ಅವರಿಗೆ ಯಾವ ವಿಷಯವೂ ಸಣ್ಣದಾಗಿ ತೋರು ತ್ತಲೇ ಇರಲಿಲ್ಲ. ಅವರನ್ನು ನೋಡಿದರೆ ಮಹನೀಯರಾದವರು ಎಲ್ಲಾ ಕಾರ್ಯಗಳಲ್ಲಿಯೂ ಒಂದೇ ಸಮನಾಗಿ ಅಚ್ಚುಕಟ್ಟುತನವನ್ನು ತೋರಿಸು ವುದು ವ್ಯಕ್ತವಾಗುತ್ತಿತ್ತು. ಹರಿಜನ ನಿಧಿಗಾಗಿ ಚೆಕ್ಕುಗಳು ವಸೂಲಾಗು ತ್ತಿದ್ದುವಷ್ಟೆ. ಒಂದು ದಿನ ಆ ಚೆಕ್ಕುಗಳ ಹಿಂದೆ ರುಜು ಹಾಕಲು ಒಬ್ಬರು ಗಾಂಧಿಯವರಿಗೆ ತಮ್ಮ ಫೌಂಟನ್‌ಪೆನ್ ಕೊಟ್ಟರು. ಕೊಡುವು ದಕ್ಕೆ ಮುಂಚೆ ನೆಲದಮೇಲೆ ಅದನ್ನು ಒಂದು ಸಲ ಒದರಿದರು. ಪೆನ್‌ನ ಶಾಯಿ ನೆಲದಮೇಲೆ ಬಿತ್ತು. ಅದನ್ನು ನೋಡಿ ಒಂದು ಕ್ಷಣ ಗಾಂಧಿ ಬೇಸರಿಕೆ ಪಟ್ಟುಕೊಂಡರು. ಕೂಡಲೇ ತಮ್ಮ ಸ್ವಾಭಾವಿಕವಾದ ಶಾಂತಿ ಯನ್ನು ಪಡೆದು "ನೆಲವನ್ನು ಹೀಗೆ ಶಾಯಿ ಹುಯಿದು ಕೊಳೆಮಾಡು ವುದೇ ?" ಎಂದರು.

ವಸೂಲಾದ ನಿಧಿಯ ಲೆಕ್ಕಾಚಾರವಾದ ಹೊರತು ಗಾಂಧಿಯವರು ನಿದ್ರೆ ಹೋಗುತ್ತಿರಲಿಲ್ಲ. ಈ ಕಾರ್ಯವಾಗಬೇಕಾದರೆ ಒಂದೊಂದು ದಿನ ರಾತ್ರಿ ಹನ್ನೆರಡು, ಒಂದು ಗಂಟೆ ಸಹ ಆಗುತ್ತಿದ್ದಿತು. ಗಾಂಧಿಯವರು ನಿದ್ರೆ ಮಾಡುವುದಕ್ಕೆ ಮುಂಚೆ ಕಾಣಿಕೆಯಾಗಿ ಬಂದಿದ್ದ ಚಿನ್ನ ಬೆಳ್ಳಿ ಒಡವೆಗಳನ್ನೆಲ್ಲ ವಿಲೆ ಮಾಡಿ ಬಿಡುತ್ತಿದ್ದರು. ಚೆಕ್ಕುಗಳಿಗೆಲ್ಲ ರುಜು ಹಾಕಿ ಅಂದಿನ ಕಾರ್ಯವನ್ನು ಮುಗಿಸುತ್ತಿದ್ದರು. ರಾತ್ರಿ ಮಲಗುವುದು ಎಷ್ಟೇ ಹೊತ್ತಾದರೂ ಅವರು ಒಂದು ದಿನವೂ ಬೆಳಗಿನ ಜಾವದ ಪ್ರಾರ್ಥನೆಗೆ ತಪ್ಪಿಸಿಕೊಳ್ಳುತ್ತಿರಲಿಲ್ಲ. ಅವರ ಜೀವಮಾನದಲ್ಲಿ ಅವರು ಒಂದು ದಿನವೂ ಬೆಳಗಿನ ಜಾವದ ಪ್ರಾರ್ಥನೆಗೆ ತಪ್ಪಿಸಿಕೊಂಡಿರಲಿಲ್ಲ ವೆಂಬುದು ಅವರ ಸಮೀಪದ ಅನುಯಾಯಿಗಳಿಗೆ ಗೊತ್ತು.

ಸತತವಾದ ದುಡಿಮೆಯೇ ಸಾರ್ವಜನಿಕ ಸೇವಕರಿಗೆ ಮರ್ಯಾದೆ. ಗಾಂಧಿಯವರು ತಮ್ಮ ಕಾಲವನ್ನು ಚೂರುಚೂರಾಗಿ ವಿಂಗಡಿಸಿ ಇಂತಿಂತದುಕ್ಕೆ ಈ ಕಾಲವೆಂದು ವಿಭಾಗಿಸಿಬಿಟ್ಟಿದ್ದರೆಂದು, ನೆಹ್ರು ಹೇಳುತ್ತಾರೆ. ಆ ಕಾಲಕ್ಕೆ ಸರಿಯಾಗಿ ಆ ಕಾರ್ಯವನ್ನು ಅವರು ತಪ್ಪದೆ ಮಾಡುತ್ತಿದ್ದರು. ಅವರು ಸಂಪಾದಿಸುತ್ತಿದ್ದ ಹರಿಜನ ಪತ್ರಿಕೆಗಳು ಇಪ್ಪತ್ತೈದು ವರುಷಗಳ ಕಾಲದಲ್ಲಿ ಒಂದು ದಿನವೂ ನಿಯಮಿತವಾದ ಕಾಲವನ್ನು ಮೀರಿ ಬರಲಿಲ್ಲ. ಎಷ್ಟು ಶ್ರಮವಾದರೂ ಸರಿಯೆ. ಆಗಬೇಕಾದ ಕಾರ್ಯ ಆ ಕಾಲಕ್ಕೆ ಆಗಿಯೇ ತೀರಬೇಕು. ಅಂತಹ ಸಂದರ್ಭಗಳಲ್ಲಿ ಗಾಂಧಿಯವರು ದೇಹಶ್ರಮವನ್ನು ಲೆಕ್ಕಿಸುತ್ತಿರಲಿಲ್ಲ. ಒಂದು ಸಲ ರೈಲ್ವೆ ನಿಲ್ದಾಣಕ್ಕೆ ವಾಹನ ಸೌಕರ್ಯ ದೊರಕುದುದರಿಂದ ೧೩-೧೪ ಮೈಲಿ ಅವರು ನಡೆದುಕೊಂಡೇ ಹೋಗಿಬಿಟ್ಟರು. ಒಮ್ಮೆ ಒರಿಸ್ಸಾದಲ್ಲಿ ಕಾಕಾ ಕಾಳೇಳ್ಕರರನ್ನು ೧೫ ಮೈಲಿ ನಡೆದುಕೊಂಡು ಹೋಗಿ ರೈಲು ಹಿಡಿಯುವಂತೆ ಕಳುಹಿಸಿದರು. ಮತ್ತೊಂದು ಸಲ, ಗಾಂಧಿಯವರು ಹೊರಡುವ ವೇಳೆಗೆ ವಾಹನ ಬರಲಿಲ್ಲ. ವಾಹನಕ್ಕಾಗಿ ಕಾಯದೆ ಅವರು ನಡೆದುಕೊಂಡು ಹೊರಟೇ ಬಿಟ್ಟರು. ಸಮೀಪದಲ್ಲಿದ್ದವರು "ವಾಹನ ಬರುವುದು ಎರಡು ನಿಮಿಷ ತಡವಾದರೂ ಅದರಲ್ಲಿ ಹೊರಟರೆ ಸಕಾಲದಲ್ಲಿ ಅಲ್ಲಿಗೆ ತಲಪಬಹುದು. ಈಗ ನಡೆದುಕೊಂಡು ಹೊರಟರೆ ಹೇಗೂ ತಡವಾಗುತ್ತೆ" ಎಂದರು. ಗಾಂಧಿಯವರು "ನಾವು ಅಲ್ಲಿ ಹೋಗಿ ತಲಪುವುದು ಮುಖ್ಯವಾದುದಲ್ಲ. ನಾವು ಸಕಾಲಕ್ಕೆ ಹೊರಡುವುದು ಮುಖ್ಯವಾದುದು" ಎಂದರು. ಪ್ರಯಾಣ ಮಾಡುತ್ತಿರುವಾಗಲೂ ಅವರು ಬರವಣಿಗೆ ಕೆಲಸ ಮಾಡುತ್ತಿದ್ದರು. ಸಕಾಲದಲ್ಲಿ ಪ್ರಾರ್ಥನೆ ಮಾಡುತ್ತಿದ್ದರು. ರೈಲಿನಲ್ಲಿ ಪ್ರಯಾಣ ಮಾಡುವಾಗ, ಆಗಾಗ್ಗೆ ದೀಪ ಹೋಗಿಬಿಡುತ್ತಿದ್ದುದರಿಂದ, ದೀಪವನ್ನೂ ಬೆಂಕಿಪೊಟ್ಟಣವನ್ನೂ ಜತೆಯಲ್ಲಿಟ್ಟುಕೊಂಡಿರಬೇಕೆಂದು ಅವರು ತಮ್ಮ ಕಾರ್ಯದರ್ಶಿಗಳಿಗೆ ಸೂಚಿಸುತ್ತಿದ್ದರು. ಒಂದು ಸಲ ಹಾಗೆ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ದೀಪವನ್ನು ಇಟ್ಟುಕೊಳ್ಳದುದರಿಂದ, ಪ್ಯಾರಿಲಾಲ್‌ರೂ ಮಹದೇವ ದೇಸಾಯಿಯವರೂ

ಮೊದಲನೆಯ ತರಗತಿಯ ಶೌಚಗೃಹದಲ್ಲಿ ಹರಿಜನ ಪತ್ರಿಕೆಯ ಕಾರ್ಯವನ್ನು ಸಾಗಿಸಬೇಕಾಯಿತು. ಗಾಂಧಿಯವರು ಅದನ್ನು ನೋಡಿ ನಗುತ್ತಾ ಹೋದರು. ಬೇಡವೆನ್ನಲಿಲ್ಲ. ಆಗಬೇಕಾದ ಕಾರ್ಯ ಆ ಕಾಲದಲ್ಲಿ ಆಗಲೇಬೇಕು.

ಮನುಷ್ಯ ತನ್ನ ಕರ್ತವ್ಯ ತಾನು ಮಾಡಬೇಕು; ವಾಗ್ದಾನದಂತೆ ನಡೆಯಬೇಕು; ಇದಕ್ಕೆ ಎಂದಿಗೂ ತಪ್ಪಬಾರದು, ಎಂಬುದು ಗಾಂಧಿಯವರ ಉಪದೇಶವಾಗಿತ್ತು. ಯಂಗ್ ಇಂಡಿಯಾ ಪತ್ರಿಕೆಯ ಅಚ್ಚಿನ ಭಾರವನ್ನು ವಹಿಸಿಕೊಳ್ಳಲು ಸ್ವಾಮಿ ಆನಂದರು ಒಂದು ದಿನ ಬರಬೇಕಾಗಿತ್ತು. ಆದರೆ ಆ ದಿನ ಸ್ವಾಮಿ ಆನಂದ್ ಬರಲಿಲ್ಲ. ಗಾಂಧಿಯವರು "ವಾಗ್ದಾನದಂತೆ ಸ್ವಾಮಿ ಆನಂದ ನಡೆಯದಿರಲು ಕಾರಣವೇನು? ಅವನಿಗೆ ಕಾಹಿಲೆಯಾಗಿರಬೇಕು. ಇಲ್ಲ ಅವನು ಸತ್ತಿರಬೇಕು" ಎಂದರು. ಸ್ವಾಮಿ ಆನಂದ್, ಮರುದಿನ ಬಂದರು. ಮೊದಲ ದಿನ ದಾರಿಯಲ್ಲಿ ಅವರಿಗೆ ಜ್ವರ ಬಂದಿತ್ತು.

ಯಾವ ಕಾರ್ಯವನ್ನೂ ಸಾಧ್ಯವಾದ ಮಟ್ಟಿಗೆ ತಾವೇ ಮಾಡಿಕೊಳ್ಳುವುದು ಗಾಂಧಿಯವರ ನಿಯಮ. ಇದಕ್ಕೆ ಸರ್ವ ಸಮಾನತೆಯ ಅವರ ಭಾವನೆಯೇ ಮುಖ್ಯ ಕಾರಣ. ಮತ್ತೊಬ್ಬರಿಂದ ನಮಗಾಗಿ ದುಡಿಸಿಕೊಳ್ಳುವಾಗ ಮೇಲು ಕೀಳುಗಳ ಭಾವನೆಯುಂಟಾಗುತ್ತದೆ. ಅದರಿಂದ ಸೂಕ್ಷ್ಮ ಸ್ವಭಾವದ ಮೃದುಜೀವಿಗಳಿಗೆ ಜಿಗುಪ್ಸೆಯುಂಟಾಗುತ್ತದೆ. ಗಾಂಧಿಯವರು ಒಂದು ಕಾಲದಲ್ಲಿ ಅಡಿಗೆಯವನನ್ನು ನಿಯಮಿಸಿಕೊಂಡಾಗಲೂ ಕೂಡ, ಅವರು ಅವನನ್ನು ಸಮಾನನಾದ ಸ್ನೇಹಿತನಂತೆ ಕಂಡರು. ಮತ್ತೊಬ್ಬನಿಂದ ದುಡಿಸಿಕೊಳ್ಳುವಾಗ ಹೇಗಾದರೂ ದಬ್ಬಾಳಿಕೆಯ ಮನೋಭಾವ ಬರುವುದರಿಂದ ಗಾಂಧಿಯವರು ಅಂತಹ ಸಂದರ್ಭಗಳನ್ನೇ ಕಡಿಮೆಮಾಡಿಕೊಳ್ಳುತ್ತಿದ್ದರು. ಬಟ್ಟೆ ಹೊಲಿಯುವವನ ಆವಶ್ಯಕತೆಯೇ ಇಲ್ಲದಂತೆ ತಮ್ಮ ಬಟ್ಟೆಗಳಲ್ಲಿ ಹೊಲಗೆಯೇ ಇರದಂತೆ ಅಳವಡಿಸಿಕೊಂಡಿದ್ದರು. ಅವರ ಪತ್ರವ್ಯವಹಾರಕ್ಕೆ ಕೊನೆಯಪಕ್ಷ ೬ ಜನ ಕಾರ್ಯದರ್ಶಿಗಳು ಬೇಕಾಗಿದ್ದಿತೆಂದು ಜವಹರರೇ ಹೇಳುತ್ತಾರೆ. ಆದರೆ ಗಾಧಿಯವರಿಗೆ ಕಾರ್ಯದರ್ಶಿ, ಶೀಘ್ರಲಿಪಿ ಟೈಪರೈಟರ್

ಯಾವುದೂ ಬೇಕಾಗಿರಲಿಲ್ಲ. ಒಂದು ಗೋಣೀಚೀಲದಷ್ಟು ಪತ್ರವ್ಯವಹಾರಕ್ಕೆ ತಾವೇ ಪ್ರತ್ಯುತ್ತರ ಕೊಡುತ್ತಿದ್ದರು. ಒಂದು ಸಲ ಪ್ರತ್ಯುತ್ತರ ಕೊಡಲಾಗದ ಪತ್ರಗಳು ಬಹಳ ಉಳಿದುದರಿಂದ ಒಂದು ತಿಂಗಳ ಕಾಲ ಮೌನವನ್ನಾಚರಿಸಿ ಉತ್ತರಗಳನ್ನು ತಾವೇ ಬರೆದು ಮುಗಿಸಿದರು.

ಸಾಧಾರಣವಾಗಿ ಬೆಳಗಿನ ಜಾವದ ಪ್ರಾರ್ಥನೆಯಾದನಂತರ ಗಾಂಧಿಯವರು ಕುಳಿತುಕೊಂಡು ತಮ್ಮ ಮಂಡಿಯ ಮೇಲೆಯೇ ಕಾಗದಗಳನ್ನು ಬರೆಯುತ್ತಿದ್ದರು. ಅವರು ಹೊಸದಾಗಿ ಬಂದ ಸ್ಥಳಗಳಲ್ಲಿ ಹಾಗೆ ಬರೆಯುತ್ತಿರುವಾಗ ಯಾರಾದರೂ ಮೇಜ ಕಾಲುಮಣೆಗಳಿಗಾಗಿ ಓಡಾಡುತ್ತಿದ್ದರೆ ಗಾಂಧಿಯವರು ಮುಗುಳುನಗುತ್ತಾ "ನನ್ನ ತೊಡೆಯೇ ನನಗೆ ಮೇಜ" ಎನ್ನುತ್ತಿದ್ದರು.

ರಾಜಕೀಯದಲ್ಲಿ ಮಹಾತ್ಮರ ಪ್ರವೇಶದಿಂದ ಪೂರ್ಣವಾಗಿ ಶುದ್ಧತೆಯುಂಟಾದಂತೆ, ಸಾರ್ವಜನಿಕ ನಿಧಿಸಂಗ್ರಹ, ರಕ್ಷಣೆ, ವಿನಿಯೋಗ ಇವುಗಳೆಲ್ಲದರ ವಿಷಯದಲ್ಲಿ ಅತ್ಯಂತ ಜಾಗರೂಕತೆ ಪ್ರಾಮಾಣಿಕತೆ ಇರಬೇಕೆಂದೂ, ಲೆಕ್ಕಪತ್ರಗಳನ್ನೆಲ್ಲಾ ಸರಿಯಾಗಿಡಬೇಕೆಂದೂ, ಎಲ್ಲವೂ ಶಿಸ್ತಿನಿಂದ ನಡೆಯಬೇಕೆಂದೂ ಅವರು ಪದೇ ಪದೇ ಹೇಳುತ್ತಿದ್ದುದಲ್ಲದೆ, ತಾವು ಸಂಗ್ರಹಿಸುತ್ತಿದ್ದ ಎಲ್ಲಾ ನಿಧಿಗಳ ವಿಷಯದಲ್ಲಿಯೂ ಹೀಗೆಯೇ ನಡೆಯುತ್ತಿದ್ದರು. ಅವರ ಬಿಡಾರದಲ್ಲಿ ಕಾರ್ಯದರ್ಶಿಗಳೂ ಕೆಲಸಗಾರರೂ ಯಾವಾಗಲೂ ಚಿಲ್ಲರೆ ಎಣಿಸುತ್ತಿದ್ದುದು ಕಣ್ಣಿಗೆ ಬೀಳುತ್ತಿದ್ದಿತು. ೧೯೪೬ನೇ ಇಸವಿ ಜನವರಿಯಲ್ಲಿ ಗಾಂಧಿಯವರು ಬಂಗಾಳದಿಂದ ಮದರಾಸಿಗೆ ಹಿಂದುಸ್ಥಾನಿ ರಜತೋತ್ಸವಕ್ಕಾಗಿ ಬಂದಾಗ ಅವರ ಜತೆಯಲ್ಲಿ ಚಿಲ್ಲರೆಯ ಒಂದು ದೊಡ್ಡ ಚೀಲ ಬಂತು. ಅದು ರೈಲು ನಿಲ್ದಾಣಗಳಲ್ಲಿ ಉದ್ದಕ್ಕೂ ಸಂಗ್ರಹಿಸಿದ್ದ ಸಾರ್ವಜನಿಕ ನಿಧಿ. ಹಾಗೆಯೇ ಪ್ರತಿ ದಿನವೂ ಮದರಾಸಿನ ಮೈದಾನದಲ್ಲಿಯೂ ಹರಿಜನ ನಿಧಿಯನ್ನು ಸಂಗ್ರಹಿಸುತ್ತಿದ್ದರು. ಅದರ ಎಣಿಕೆ ಪ್ರಾರ್ಥನೆಯಾದನಂತರ ಆಯಾ ದಿನವೇ ಆಗಬೇಕಾಗಿತ್ತು. ಒಂದು ಸಲ ಕಾರ್ಯದರ್ಶಿ ಪ್ಯಾರಿಲಾಲರು ಹೀಗೆ ಹೇಳಿಕೆ ಕೊಟ್ಟರು. "ಅಂದಂದು ವಸೂಲಾಗುವ ಹಣವನ್ನು ಅಂದಂದೇ ಎಣಿಸಿ ಲೆಕ್ಕಕ್ಕೆ ಜಮ ಮಾಡಬೇಕೆಂಬುದು ಗಾಂಧಿಯವರ ಇಚ್ಛೆ. ಆದುದರಿಂದ ಹರಿಜನನಿಧಿಗೆ

ಹಣ ಕೊಡುವವರು ಸಾಧ್ಯವಾದಮಟ್ಟಿಗೆ ನೋಟುಗಳು ಉಂಡೆ ರೂಪಾಯಿಗಳನ್ನೇ ಕೊಡಬೇಕಾಗಿ ಅರಿಕೆ. ಹಾಗೆ ಯಾರಿಗೆ ಸಾಧ್ಯವಿಲ್ಲವೋ ಅವರೂ, ಪ್ರಾರ್ಥನಾ ಮೈದಾನದಲ್ಲಿ ಕೊಡುವವರೂ, ಚಿಲ್ಲರೆ ನಾಣ್ಯಗಳನ್ನು ಧಾರಾಳವಾಗಿ ಕೊಡಬಹುದು".

ಹಣ ಹೀಗೆ ಸಾರ್ವಜನಿಕರದಾದುದರಿಂದ ಅದನ್ನು ಯಾವ ರೀತಿಯಲ್ಲಿಯೂ ದುರ್ವ್ಯಯ ಮಾಡಲು ಗಾಂಧಿಯವರು ಒಪ್ಪುವುದಿಲ್ಲ. ಈ ದೃಷ್ಟಿಯಿಂದ ಪ್ರತಿಯೊಬ್ಬ ಖಾಸಗೀ ವ್ಯಕ್ತಿಯ ಬಳಿ ಇರುವ ಅವನ ನಿತ್ಯದ ವ್ಯವಹಾರ ಜೀವನದ ಆವಶ್ಯಕತೆಗಿಂತ ಹೆಚ್ಚಾದ ಹಣವೆಲ್ಲಾ, ಸಾರ್ವಜನಿಕರಿಗೆ, ಎಂದು ಗಾಂಧಿ ಭಾವಿಸುತ್ತಾರೆ. ಧನಿಕರು ಹಣದ ಟ್ರಸ್ಟಿ ವಿಶ್ವಸ್ತ ಎಂಬುದರ ಅವರ ಅರ್ಥ ಇದೇಯೆ. ಈ ಬಡ ದೇಶವಾದ, ಭಾರತದಲ್ಲಿ ವ್ಯಕ್ತಿ ತನ್ನ ಸ್ವಂತ ಸುಖಕ್ಕೆ ಸಾಧ್ಯವಾದಷ್ಟು ಕಡಿಮೆ ವೆಚ್ಚಮಾಡಬೇಕು. ಗಾಂಧಿಯವರೇ ಇದಕ್ಕೆ ದೊಡ್ಡ ಉದಾಹರಣೆ. ಇಂಗ್ಲೆಂಡಿನಲ್ಲಿದ್ದಾಗ ವಿದ್ಯಾರ್ಥಿದೆಸೆಯಲ್ಲಿಯೇ ಅವರು ಮೊದಲು ಮೊದಲು ತಮಗೆ ಆಗುತ್ತಿದ್ದ, ತಿಂಗಳಿಗೆ ೧೫ ಪೌಂಡು ವೆಚ್ಚವನ್ನು ೩-೪ ತಿಂಗಳಿನಲ್ಲಿಯೇ ೪ ಪೌಂಡಿಗೆ ಇಳಿಸಿದರು. ಸಾರ್ವಜನಿಕ ಜೀವನ ಕ್ಷೇತ್ರದಲ್ಲಿ ಕೆಲಸ ಮಾಡುವವರು, ತಾವು ಯಾವ ಬಡಜನರ ಪ್ರತಿನಿಧಿ ಎಂದು ಕೊಳ್ಳುತ್ತಾರೋ ಆ ಬಡಜನರಿಗಿಂತ ಬಡವರಾಗಿ ಜೀವಿಸಬೇಕು. ದಿನಕ್ಕೆ ನಾಲ್ಕು ಆಣೆ ಸಂಪಾದನೆಯುಳ್ಳ ಭಾರತದ ರೈತನ ಪ್ರತಿನಿಧಿಯೆನ್ನಿಸಿ ಕೊಳ್ಳುವವನು ದಿನಕ್ಕೆ ೧೫ ರೂಪಾಯಿಗಳನ್ನು ವೆಚ್ಚಮಾಡುತ್ತ ಮೋಟಾರಿನಲ್ಲಿ ತಿರುಗುತ್ತಿದ್ದರೆ ಆ ಪ್ರಾತಿನಿಧ್ಯಕ್ಕೆ ಸಾರ್ಥಕ್ಯವೆಲ್ಲಿ ಬಂತು? ಇದರಲ್ಲಿ ತನ್ನ ಉತ್ಪತ್ತಿಗೆ ತಕ್ಕ ಖರ್ಚು ಎಂಬ ವ್ಯಾಪಾರದ ಮನೋಭಾವ, ಹಣ ಶೇಖರಣೆಯ ಚೌಕಸಿ ಭಾವಮಾತ್ರವೇ ಅಲ್ಲ. ಗಾಂಧಿಯವರ ಅಭಿಪ್ರಾಯದಲ್ಲಿ ಅಂತಹವನ ಸರಳ ಜೀವನಕ್ಕೂ ಅದರ ಬೆಲೆಯುಂಟು. ಸಾಲಗಾರನಾಗಬಾರದೆಂಬ ಸಾಮಾನ್ಯ ಸಂಸಾರ ಧರ್ಮವನ್ನು ಸಹ ಗಾಂಧಿ ಮೆಚ್ಚುತ್ತಾರೆ. ಭಾರತದಲ್ಲಿ ಯುದ್ಧದ ದೆಸೆಯಿಂದುಂಟಾದ ಹಣದ ಅತಿಪ್ರಸರಣಕಾಲದಲ್ಲಿ, ವೇದಾಂತಿ ಹಿಂದೂಧರ್ಮಭೂಷಣ ಮಾಳವ್ಯಜಿ ಸಹ " ಒಂದು ರೂಪಾಯಿಯನ್ನು

ಉಳಿಸಿದರೆ ಒಂದು ರೂಪಾಯಿಯನ್ನು ಸಂಪಾದಿಸಿದಂತೆ" ಎಂದು ಹೇಳಿದರು. ಯಾವ ರೀತಿಯಿಂದ ಯಾವ ಉದ್ದೇಶಕ್ಕಾಗಿ ಮಾಡಿದರೂ ಭಾರತದಲ್ಲಿ ಸರಳ ಜೀವನಕ್ಕೆ,ಅದಕ್ಕೆ ತಕ್ಕ ಬೆಲೆ ಇದೆ. ಇನ್ನು ದೇಶಕ್ಕಾಗಿ ಕೆಲಸಮಾಡುತ್ತೇನೆನ್ನುವರು ಸರಳ ಜೀವನವನ್ನು ನಡೆಸುವುದು ಅವರ ಕರ್ತವ್ಯವೇ ಆಗುವುದು.

ಸಾರ್ವಜನಿಕರ ಹೆಸರಿನಲ್ಲಿ ನಿಧಿಸಂಗ್ರಹ ಮಾಡುವಾಗ, ತನ್ನ ಸ್ವಂತ ಹಣವನ್ನು ಹೇಗೆಯೋ ಅದಕ್ಕಿಂತ ಹೆಚ್ಚು ಎಚ್ಚರಿಕೆಯಿಂದ ಮಿತವಾಗಿ ವೆಚ್ಚ ಮಾಡಬೇಕು. ವಸೂಲ್ಮಾಡುವ ನಿಧಿಯಷ್ಟೇ ಅಥವ ಆ ನಿಧಿಗಿಂತ ಹೆಚ್ಚಾಗಿ ಪ್ರಯಾಣಕ್ಕಾಗಿ ಖರ್ಚುಮಾಡಿ ಬಿಡುವವರುಂಟು. ಅದೂ ಅವರವರ ಸ್ವಭಾವಕ್ಕನು ಗುಣವಾಗಿ ನಡೆಯುತ್ತದೆ. ಶ್ರೀಮತಿ ಸರೋಜನಿದೇವಿಯವರದು ಸಾಧಾರಣವಾಗಿ ಸುಖಜೀವನ, ಸ್ವಲ್ಪ ಖರ್ಚು ಹೆಚ್ಚು. ಒಂದು ಸಲ ಅವರು ಒಂದು ನಿಧಿಸಂಗ್ರಹಕ್ಕಾಗಿ ಹೊರಟಾಗ "ಅವರ ಪ್ರಮಾಣದ ಖರ್ಚಿಗೆ ಅವರು ಸಂಗ್ರಹಿಸುವ ನಿಧಿಗಿಂತ ಹೆಚ್ಚು ವೆಚ್ಚವಾಗುವುದೆಂದು" ಗಾಂಧಿ ವಿನೋಧವಾಗಿ ಹೇಳಿದರೆಂದು ವದಂತಿ. ದಕ್ಷಿಣಭಾರತ ಪ್ರವಾಸಕ್ಕೆ ಮಹಾತ್ಮರು ಬಂದಿದ್ದಾಗ ಬೆಂಗಳೂರಿನ ಧನಿಕರೊಬ್ಬರು ಅವರ ದಕ್ಷಿಣಭಾರತ ಸಂಚಾರಕ್ಕಾಗಿ ಒಂದು ಮೋಟಾರು ತೆಗೆದುಕೊಡುವುದಾಗಿ ಹೇಳಿದರು. ಮಹಾತ್ಮರ ಅತ್ಯಂತ ಹತ್ತಿರದ ಅನುಯಾಯಿಗಳಾಗಿದ್ದವರು ಅವರ ಮಾತನ್ನು ನಂಬಿ, ಅವರು ಹಣ ಕೊಟ್ಟಾಗ ಲೆಕ್ಕಾಚಾರಕ್ಕೆ ಜಮ ಹಿಡಿಯಬಹುದೆಂದು, ವಸೂಲಾಗಿದ್ದ ನಿಧಿಯಿಂದ ಒಂದು ಕಾರನ್ನು ಕೊಂಡುಕೊಂಡು ಮಹಾತ್ಮರ ಪ್ರವಾಸಕ್ಕೆ ಹೇಗೆ ಅದು ಅನುಕೂಲವಾಗಬೇಕೋ ಹಾಗೆ ಅದನ್ನು ಅಳವಡಿಸಿಕೊಂಡರು. ಎಲ್ಲಿ ಅವಕಾಶ ಸಿಕ್ಕಿದರೆ ಅಲ್ಲಿ ಮಹಾತ್ಮರು ಕಾರಿನಲ್ಲಿಯೇ ೧೦ ನಿಮಿಷ ೧೫ ನಿಮಿಷ ಮಲಗಿ ನಿದ್ರಿಸುತ್ತಿದ್ದದರಿಂದ ಅದಕ್ಕೂ ಕಾರಿನಲ್ಲಿ ಅನುಕೂಲ ಮಾಡಿದ್ದರು. ಈ ಸಿದ್ಧತೆಗಳೆಲ್ಲಾ ಆಗಿ ಬೆಂಗಳೂರಿನಿಂದ ಕಾರು ಮಹಾತ್ಮರ ಜತೆಯಲ್ಲಿ ಮದ್ರಾಸು ಮುಂತಾದ ದಕ್ಷಿಣ ಯಾತ್ರೆ ಹೊರಡುವ ಕಾಲ ಸಮೀಪಿಸಿದರೂ, ವಾಗ್ದಾನಮಾಡಿದ್ದ ದಾತೃ ಹಣ ಕೊಡಲಿಲ್ಲ. ನಿಧಿಯಿಂದ ಕಾರನ್ನು ಕೊಳ್ಳುವ ಜವಾಬ್ದಾರಿ

ವಹಿಸಿಕೊಂಡಿದ್ದವರಿಗೆ ದಿನ ದಿನವೂ ಎದೆ ಡವ ಡವ ಎನ್ನ ತೊಡಗಿತು. ಅದು ಬರಿಯ ಹಣದ ಪ್ರಶ್ನೆ ಮಾತ್ರವೇ ಆಗಿರಲಿಲ್ಲ. "ನಿಧಿಯ ಹಣ ವನ್ನು ಒಂದು ಗಳಿಗೆಯೇ ಆಗಲಿ, ಮತ್ತೊಂದೆಡೆಗೆ ಅಡ್ಡತಿರುಗಿಸಲು ಕಾರಣವೇನು? ಇದು ನಿಧಿಯ ದುರುಪಯೋಗವೆಂದು'' ಗಾಂಧಿ ಕೋಪಿಸಿಕೊಳ್ಳುವುದು ಖಂಡಿತವೆಂದು ಗಾಂಧಿಯವರ ಪಟ್ಟಶಿಷ್ಯರಿಗೆ ಸಹ ಗೊತ್ತಿತ್ತು. ಬೆಂಗಳೂರಿನಿಂದ ದಕ್ಷಿಣದ ಕಡೆಗೆ ಹೊರಡುವ ಮುನ್ನ ಗಾಂಧಿ ಶಿಷ್ಯರು ಮತ್ತೆ ಹೋಗಿ ದಾತೃವನ್ನು ಕೇಳಿದರು. ಆತ ಉತ್ಸಾಹದ ಭರದಲ್ಲಿ ಅಥವ ಭಕ್ತಿಯ ಭರದಲ್ಲಿ ಹೇಳಿಬಿಟ್ಟಿದ್ದ. ಆದರೆ ಕೈಗೆ ಹಣ ದೊರೆಯಲಿಲ್ಲ. ಹೇಗಿದ್ದರೂ ಗಾಂಧಿ ದಕ್ಷಿಣದ ಪ್ರವಾಸ ಮುಗಿಸಿ ಮತ್ತೆ ಬೆಂಗಳೂರಿಗೆ ಬಂದು ಅಲ್ಲಿಂದ ಉತ್ತರಕ್ಕೆ ಹೊರಡ ಬೇಕಾಗಿತ್ತು. ಆದುದರಿಂದ ಆ ದಾತೃವು ನೀವು ಈ ಕಾರನ್ನು ನನ್ನ ದೆಂದೇ ಪರಿಗಣಿಸಿ; ನೀವು ಹಿಂದಿರುಗುವ ವೇಳೆಗೆ ಹಣ ಜತೆಮಾಡಿ ಇಟ್ಟಿರುತ್ತೇನೆ" ಎಂದರು. ಗಾಂಧಿಯವರು ಅನುಯಾಯಿಗಳೊಂದಿಗೆ ದಕ್ಷಿಣದೇಶದ ಯಾತ್ರೆ ಹೊರಟರು. ತಮ್ಮ ಉಪಯೋಗಕ್ಕಾಗಿ ಬೇರೆ ಬೇರೆ ಕಡೆಗಳಲ್ಲಿ ಬೇರೆ ಕಾರು ದೊರೆಯುತ್ತಿದ್ದಂತೆ ಆ ಕಾರು ದೊರೆ ತಿದೆಯೆಂದುಕೊಂಡು ಅವರ ವಿಷಯ ಅವರು ಹೆಚ್ಚಾಗಿ ಪ್ರಶ್ನಿಸಲಿಲ್ಲ.

ದಕ್ಷಿಣ ದೇಶದ ಪ್ರವಾಸವನ್ನೆಲ್ಲಾ ಮುಗಿಸಿಕೊಂಡು ಗಾಂಧಿಯ ವರು ಮತ್ತೆ ಬೆಂಗಳೂರಿಗೆ ಹಿಂದಿರುಗಿದರು. ಕಾರು ಹತ್ತಿರ ಹತ್ತಿರ ಬಂದಂತೆ ಅವರ ಪಟ್ಟಶಿಷ್ಯರ ಭಯ ಕಾತರ ಆಸೆ ನಿರೀಕ್ಷೆಗಳು ಹೆಚ್ಚಾ ದುವು. ಹೇಳಿದ್ದಂತೆ ದಾತೃ ಹಣ ಕೊಡುತ್ತಾನೆಯೇ? ಎಂಬುದೇ ಅವರ ಯೋಚನೆಯಾಯಿತು. ಬೆಂಗಳೂರಿನಲ್ಲಿ ಕುಮಾರಾ ಪಾರ್ಕಿನಲ್ಲಿ ಗಾಂಧಿ ಬಿಡಾರ ಮಾಡಿದರು. ಆಗ ಅವರು ಹೆಚ್ಚು ಕಾಲ ಇರುವವರಾಗಿಯೂ ಇರಲಿಲ್ಲ. ಬೆಂಗಳೂರಿಗೆ ಬಂದ ಮರುದಿನವೇ ದಾತೃ ಕಾರಿಗೆ ಹಣ ಕೊಡುವುದಿಲ್ಲವೆಂಬುದು ಗಾಂಧಿ ಶಿಷ್ಯರಿಗೆ ಗೊತ್ತಾಯಿತು. ಶ್ರೀ ರಾಜ ಗೋಪಾಲಾಚಾರ್ಯರು ಹೆದರುತ್ತಾ ಹೆದರುತ್ತ ಗಾಂಧಿಯವರಲ್ಲಿ ಹೋಗಿ ನಡೆದ ಸಂಗತಿ ಹೇಳಿಯೇಬಿಟ್ಟರು. ಸಾರ್ವಜನಿಕ ನಿಧಿಯಿಂದ ಕಾರನ್ನು ಕೊಂಡುದನ್ನು ಗಾಂಧಿಯವರು ಬಹಳ ಆಕ್ಷೇಪಿಸಿ

ದರು. " ಇದು ನಿಧಿಯ ದುರುಪಯೋಗ. ಜನ ಹಣ ಕೊಟ್ಟಿರುವುದು ನಾನೂ ನೀವೂ ಕಾರನ್ನು ನಮಗೆ ಇಷ್ಟಬಂದಂತೆ ಅಳವಡಿಸಿಕೊಂಡು ಸುಖಪ್ರಯಾಣ ಮಾಡುವುದಕ್ಕಲ್ಲ. ನಿಧಿ ಸಂಗ್ರಹವನ್ನೂ, ನಾವೂ ಕಷ್ಟವನ್ನು ಸಹಿಸುತ್ತಲೇ ಮಾಡಬೇಕು. ಕಾರು ಇಲ್ಲದಿದ್ದರೆ ರೈಲು ಆಗಲಿ, ಬಸ್ ಆಗಲಿ, ಎತ್ತಿನ ಬಂಡಿ, ಕೊನೆಗೆ ನಡೆಯುವುದೇ ಆಗಲಿ. ಸಾರ್ವಜನಿಕರು ನಮಗೆ ಕೊಟ್ಟ ಪ್ರತಿಯೊಂದು ಕಾಸಿಗೂ ನಾವು ಸರಿಯಾದ ಹೊಣೆ ಹೊರಬೇಕು " ಎಂದರು. ಗಾಂಧಿಯವರಿಗೆ ಕೋಪಕ್ಕಿಂತ ದುಃಖವೇ ಹೆಚ್ಚಾಯಿತು. " ತಪ್ಪು ನಿಮ್ಮದಕ್ಕಿಂತ ನನ್ನದೇ ಹೆಚ್ಚು, ನನ್ನನ್ನೇ ಇನ್ನೂ ಪರಿಶುದ್ಧಿಗೊಳಿಸಿಕೊಳ್ಳಬೇಕು". ಎಂದುಕೊಂಡರು. ಆ ನಿಮಿಷದಲ್ಲಿಯೇ ಆ ಕಾರನ್ನು ಹರಾಜು ಮಾಡಿ ಬಂದ ಹಣವನ್ನು ನಿಧಿಗೆ ಮತ್ತೆ ಸೇರಿಸಿದರು. ನಿಧಿ ಸಂಗ್ರಹ ಕಾಲದಲ್ಲಿ ವೆಚ್ಚ ಹೆಚ್ಚಾಗುವುದನ್ನು ಗಾಂಧಿ ಒಪ್ಪುವುದಿಲ್ಲ. ೧೯೪೬ ನೇ ಇಸವಿಯಲ್ಲಿ ಗಾಂಧಿ ಮದರಾಸಿಗೆ ಬಂದಿದ್ದಾಗ ವಿದ್ಯಾರ್ಥಿಗಳು ನಿಧಿಯನ್ನರ್ಪಿಸುತ್ತಾ ಇಷ್ಟು ವೆಚ್ಚವಾಗಿದೆಯೆಂದು ಹೇಳಿದಾಗ ಗಾಂಧಿ " ಸಾರ್ವಜನಿಕ ನಿಧಿಯಿಂದ ವೆಚ್ಚ ಅಷ್ಟೊಂದು ಕೂಡದೆಂದು "ಎಚ್ಚರಿಸಿದರು. ನಿಧಿ ಸಂಗ್ರಹದ ಕಾಲದಲ್ಲಿ ದುಂದು ವೆಚ್ಚ ಮಾಡುತ್ತಾ ನಿಧಿಯ ಹಣದಿಂದ ನಿಧಿಯ ಕಾರ್ಯಕ್ಕಾಗಿಯೇ ಆದರೂ ಹೆಚ್ಚು ವೆಚ್ಚದ ಕಾರು ಮೊದಲಾದ ಭೋಗಗಳನ್ನು ಗಾಂಧಿಯವರು ಒಪ್ಪುತ್ತಿರಲಿಲ್ಲವೆಂಬುದು, ಅಂತಹ ಕಾರ್ಯಗಳಲ್ಲಿ ತೊಡಗಿರುವವರಿಗೆ ಮೇಲು ಪಂಗ್ತಿಯಾಗಬೇಕು.

ಸರ್ಕಾರದ ಹಣವೇ ಆದರೂ ಅದು ದೇಶದ ಪ್ರಜೆಗಳ ಹಣವಾದುದರಿಂದ ಸರ್ಕಾರದಲ್ಲಿ ಕೈವಾಡವಿರುವವರಾಗಲಿ ಸರ್ಕಾರದ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿರುವವರಾಗಲಿ ಆ ಹಣವನ್ನು ಹೆಚ್ಚಾಗಿ ಉಪಯೋಗಿಸಕೂಡದೆಂಬುದು ಗಾಂಧಿಯವರ ಮತ. ಅವರು ನಂದಿಬೆಟ್ಟದಲ್ಲಿ ಬಂದು ಮೈಸೂರು ಸರ್ಕಾರದ ಅತಿಥಿಗಳಾಗಿದ್ದಾಗ ಸರ್ಕಾರದ ಹಣ ಹೆಚ್ಚಾಗಿ ಖರ್ಚಾಗಲು ಅವಕಾಶಕೊಡುತ್ತಿರಲಿಲ್ಲ. ಆ ಬಿಡಾರದಲ್ಲಿ ಆವಶ್ಯಕವಾದ ಜನವೆಷ್ಟೋ ಅದಕಿಂತ ಹೆಚ್ಚು ಜನ ಊಟಮಾಡಿದರೂ ಗಾಂಧಿಯವರಿಗೆ ಗೊತ್ತಾಗುತ್ತಿದ್ದಿತು. ಗಾಂಧಿಯ

ವರ ಬಿಡಾರದ ವ್ಯವಸ್ಥೆಯಲ್ಲಿದ್ದವರು ತಮ್ಮ ಅತ್ಯಂತ ಆಪ್ತ ಮಿತ್ರರನ್ನೂ ಸಮೀಪದ ಹೋಟಲಿನ ಆತಿಥ್ಯಕ್ಕೆ ಕಳುಹಿಸಿದುದುಂಟು. ಬಿಡಾರದ ವ್ಯವಸ್ಥಾಪಕರೂ ಅಲ್ಲಿಗೆ ಊಟಕ್ಕಾಗಿ ಹೋದ ಸ್ನೇಹಿತರಿಗೆ "ಇದು ಹಿಂದೆ ಕುಮಾರಪಾರ್ಕಿನಲ್ಲಿದ್ದಂತೆ ಅಲ್ಲ" ಎಂದು ಎಚ್ಚರಿಸುತ್ತಿದ್ದರು. ಮಾಮೂಲಿಗಿಂತ ಹೆಚ್ಚಾಗಿ ಹಣ್ಣು, ತರ್ಕಾರಿ, ಹಾಲು ಯಾವುದನ್ನು ತೆಗೆದುಕೊಂಡರೂ ಗಾಂಧಿಯವರಿಗೆ ಗೊತ್ತಾಗಬೇಕಾಗಿತ್ತು. ಸರ್ಕಾರ ಖರ್ಚನ್ನೆಲ್ಲ ವಹಿಸುವಾಗ ಇವರಿಗೆ ಇಷ್ಟು ಚೌಕಸಿಯಾಕೆ ಎಂದು ನಮ್ಮಲ್ಲಿ ಯೋಚಿಸಿದವರು ಇಲ್ಲದೆ ಇಲ್ಲ. ಗಾಂಧಿಯವರು ತಮಗಾಗಿ ಸೇಬಿನ ಹಣ್ಣನ್ನು ತರಿಸಬಹುದಾಗಿದ್ದರೂ ಬರಿಯ ಪಪಾಯ ಹಣ್ಣನ್ನೇ ಅದು ಅಗ್ಗವಾದ ಕಾರಣದಿಂದ ತರಿಸುತ್ತಿದ್ದರು. ಕೊನೆಯಲ್ಲಿ ಸರ್ಕಾರಕ್ಕೆ ಅವರ ಆತಿಥ್ಯಕ್ಕಾಗಿ ವೆಚ್ಚವಾದ ಹಣ ದೊಡ್ಡ ಅಧಿಕಾರಿಗಳ ಒಂದೆರಡು ದಿನಗಳ ಪ್ರವಾಸ ಭತ್ಯದಷ್ಟು ಮಾತ್ರವಾದುದನ್ನು ನೋಡಿ ನಮಗೆಲ್ಲಾ ಆಶ್ಚರ್ಯವಾಯಿತು.

ಯರವಾಡ ಸೆರೆಮನೆಯಲ್ಲಿ ಗಾಂಧಿಯವರಿಗಾಗಿ ಸರ್ಕಾರದವರು ತಿಂಗಳಿಗೆ ನೂರೈವತ್ತು ರೂಪಾಯಿಗಳನ್ನು ಮಂಜೂರ್ಮಾಡಿದರೂ ತಿಂಗಳಿಗೆ ಮೂವತ್ತೈದು ರೂಪಾಯಿಗಳನ್ನು ಮಾತ್ರ ಖರ್ಚುಮಾಡಿಸಿ ಉಳಿದುವನ್ನು ಸರ್ಕಾರಕ್ಕೆ ಉಳಿಸುತ್ತಿದ್ದರು. ಸೆರೆಮನೆಯ ಅಧಿಕಾರಿಗಳು "ನೀವು ತಿಂಗಳಿಗೆ ಎಷ್ಟು ಕಾಗದ ಬರೆಯ ಬಯಸುತ್ತೀರಿ ಎಂದು ಕೇಳಿದಾಗ ಗಾಂಧಿ ಒಂದೂ ಇಲ್ಲ" ಎಂದರು. "ನಿಮಗೆ ಎಷ್ಟು ಕಾಗದ ಬರುತ್ತೆ" ಎಂದುದಕ್ಕೆ, ಒಂದೂ ಇಲ್ಲ ಎಂಬ ಉತ್ತರ ಬಂತು. ನೆಂಟರಿಂದ ಕಾಗದ ಇಲ್ಲವೇ ಎಂದು ಅಧಿಕಾರಿ ಕೇಳಿದುದಕ್ಕೆ ಗಾಂಧಿ "ಭಾರತವೆಲ್ಲ ನನ್ನ ನೆಂಟರೇ" ಎಂದು ಪ್ರತ್ಯುತ್ತರವಿತ್ತರು.

* * * *

ಮಿತವ್ಯಯದ ನಿಯಮವನ್ನು ಗಾಂಧಿ ಯಾರ ವಿಷಯದಲ್ಲಿಯೂ ಸಡಿಲಗೊಳಿಸಲಿಲ್ಲ. ಅವರ ಅಕ್ಕ ಗೋಕಿ ಬಹನ್‌ರಿಗೆ ಪ್ರಾಣಜೀವನ ಮೆಹ್ತಾರು, ತಿಂಗಳಿಗೆ ಹತ್ತು ರೂಪಾಯಿಗಳನ್ನು ಕಳುಹಿಸಬೇಕೆಂದು ಗಾಂಧಿ ನಿಯಮಿಸಿದ್ದರು. ಒಂದು ಸಲ ಗೋಕಿ ಬಹನ್‌ರ ಮನೆಗೆ

ಅವರ ಮಗಳು, ವಿಧವೆ ಬಂದರು. ಖರ್ಚು ಹೆಚ್ಚಾದುದರಿಂದ ಇನ್ನು ಸ್ವಲ್ಪ ಹೆಚ್ಚಾಗಿ ಕಳುಹಿಸಲೇ ಎಂದು ಪ್ರಾಣಜೀವನ ಮೆಹ್ತ ಕೇಳಿದರು. ಗಾಂಧಿ "ಬೇಡ. ಖರ್ಚು ಹೆಚ್ಚಾದರೆ ನೂತು ಸಂಪಾದಿಸಿಕೊಳ್ಳಲಿ" ಎಂದುಬಿಟ್ಟರು.

೧೯೩೭ ನೇ ಇಸವಿಯಲ್ಲಿ ಒಂದು ಸಲ ಗಾಂಧಿಜಿ, ಕುಮಾರ ಪಾರ್ಕಿನಲ್ಲಿ, ಅಗಸನಿಗೆ ಕೊಟ್ಟ ದುಡ್ಡು ಹೆಚ್ಚಾಯಿತೆಂದು ಹೇಳಿ ಎಲ್ಲ ರನ್ನೂ ತರಾಟೆಗೆ ತೆಗೆದುಕೊಂಡಿದ್ಧರು. ಆ ಸಂದರ್ಭದಲ್ಲಿ "ಮಹಾದೇವ ದೇಸಾಯಿ "ನಿತ್ಯ ಬೆಳಗಿನ ಜಾವ ನಾಲ್ಕು ಗಂಟೆಗೆ ಎದ್ದು ರಾತ್ರಿ ೧೨ ರ ವರೆಗೆ ಕೆಲಸ ಮಾಡುತ್ತೇನೆಂದು" ಹೇಳಿದಾಗ ಅವರು ಇನ್ನು ಮೆಲೇ ೩||ಗೆ ಎದ್ದು ಬಟ್ಟೆ ಒಗಿದುಕೋ" ಎಂದರು.

ಹಣವೆಲ್ಲ ದೇಶದ ಸ್ವತ್ತು ಆದುದರಿಂದ, ತಾನು ಆ ಹಣವನ್ನು ಹೆಚ್ಚಾಗಿ ಖರ್ಚುಮಾಡುವುದಿಲ್ಲವೆಂಬುದು ಮಾತ್ರವೇ ಅಲ್ಲ; ತನ ಗಾಗಿಯೇ ಆಗಲಿ ತನ್ನ ಪರಿವಾರದವರಿಗಾಗಿಯೇ ಆಗಲಿ ಜನರು ಹೆಚ್ಚು ವೆಚ್ಚಮಾಡಲೂ ಗಾಂಧಿ ಬಿಡುವುದಿಲ್ಲ. ಗಾಂಧಿಯವರು ನಂದಿಯಲ್ಲಿರು ವಾಗ ಭಕ್ತಾದಿಗಳು, ಶ್ರೀ ರಾಮಚಂದ್ರನಿಗೆ ಗುಹನು ತಂದು ಒಪ್ಪಿಸಿದಂತೆ ಬುಟ್ಟಿಗಳಲ್ಲಿ ಹಣ್ಣುಗಳನ್ನ ತಂದು ಒಪ್ಪಿಸ ತೊಡಗಿದರು. ಇವುಗಳ ಸಂಖೆ ದಿನದಿನಕ್ಕೆ ಹೆಚ್ಚಾಗ ತೊಡಗಿತು ಗಾಂಧಿ, ಭಕ್ತರಿಗೆ "ಹೀಗೆ ನೀವು ಇಲ್ಲಿ ತರಬೇಡಿ. ಯಾರಿಗೆ ಆವಶ್ಯಕವೋ ಅವರಿಗೆ ತೆಗೆದುಕೊಂಡು ಹೋಗಿ ಕೊಡಿ, ನಾನು ರೋಗಿಯೂ ಅಲ್ಲ. ನಿಶ್ಯಕ್ತನೂ ಅಲ್ಲ"ಎನ್ನು ತ್ತಿದ್ದರು. ಆದರೆ ಹಾಗೆ ತಮಗೆ ಕೊಡಲು ತಂದವರ ಪ್ರೀತಿ ಗೌರವ ಗಳಾಗಲಿ ತಮ್ಮ ಜತೆಯಲ್ಲಿರುತ್ತಿದ್ದ ಅನೇಕರಿಗೆ ಹಣ್ಣುಗಳಲ್ಲಿ ಆಸೆ ಎಂಬು ದಾಗಲಿ ಗಾಂಧಿಯವರಿಗೆ ತಿಳಿಯದೆ ಇರಲಿಲ್ಲ. ಸ್ವತಃ ಗಾಂಧಿ ತಾವು ಸ್ವಾದವನ್ನು ಜಯಿಸಿದವರಾದರೂ ಅದನ್ನು ಜಯಿಸದವರ ದೌರ್ಬಲ್ಯ ದಲ್ಲಿ ಅವರಿಗೆ ತಿರಸ್ಕಾರವಿರುತ್ತಿರಲಿಲ್ಲ. ಅಂತಹವರನ್ನು ನೋಡಿದಾಗ ಅವರಿಗೆ ಸಾಮಾನ್ಯವಾಗಿ ಕನಿಕರವೂ ಒಂದೊಂದು ಸಲ ವಿನೋದವೂ ಉಂಟಾಗುತ್ತಿದ್ದಿತು. ವಿಶ್ವವನ್ನೇ ಕುಟುಂಬವಾಗಿ ಸ್ವೀಕರಿಸಿದಾತನಿಗೆ ತನ್ನ ಎದುರಿಗೇ ಕುಳಿತಿರುವವರ ಆಸೆ ಚಪಲ ದೌರ್ಬಲ್ಯಗಳು ತಿಳಿಯವೆ?

ಮತ್ತು ಹಾಗೆ ತಿಳಿದಮೇಲೆ ತನ್ನ ಕರುಣೆಯ ಆಲಿಂಗನದಲ್ಲಿ ಆತ ಅವರನ್ನು ತೆಗೆದುಕೊಳ್ಳದೆ ಬಿಡುವನೆ ? ನಂದಿಯಲ್ಲಿ ಮಹಾತ್ಮರು ವಿಶ್ರಾಂತಿ ಹೊಂದುತ್ತಿರುವಾಗ ಹಿಂದೆ ಹೇಳಿದಂತೆ ಒಬ್ಬ ಭಕ್ತರು, ಅರುಣ ಕಾಲದ ಸೂರ್ಯನಂತೆ ಕೆಂಪಾಗಿ ಗುಂಡಾಗಿದ್ದ ಕಿತ್ತಲೆ ಹಣ್ಣಿನ ಬುಟ್ಟಿ ಯೊಂದನ್ನು ತೆಗೆದು ಕೊಂಡು ಬಂದು ಮಹಾತ್ಮರ ಪಾದದಲ್ಲಿ ಇಟ್ಟರು. ಅದರ ಕಡೆಗೆ ಚಕ್ರವರ್ತಿ ರಾಜಗೋಪಾಲಾಚಾರ್ಯರ ದೃಷ್ಟಿ ಬಿತ್ತು. ರಾಜಾಜಿ ಸಹ ಸ್ವಾದವನ್ನು ಜಯಿಸಿದವರೇ. ಆದರೆ ರಾಜಾಜಿಗೆ ಒಳ್ಳೆಯ ಪದಾರ್ಥಗಳಲ್ಲಿ ಆಸೆ. ಒಳ್ಳೆಯ ಹಣ್ಣನ್ನು ಕಂಡರೆ ಅವರ ಮನಸ್ಸು ಅತ್ತಕಡೆ ಹರಿವುದು. ಆ ನೋಟದಲ್ಲಿ ಒಳ್ಳೆಯದರ ಕಡೆಗೆ ಆಸೆಯೂ ಅದನ್ನು ಜಯಿಸಿದ ನಿಷ್ಠುರವೂ ಎರಡೂ ಸೇರಿರುವುವು. ರಾಜಾಜಿ ಕಿತ್ತಲೆಹಣ್ಣಿನ ಕಡೆ ನೋಡಿದಾಗ, ಆ ಭಾವಗಳು ಅವರ ಮುಖ ದಲ್ಲಿ ಕಂಡುದನ್ನು ನೋಡಿ ಗಾಂಧಿಗೆ ವಿನೋದವಾಯಿತು. ಅವರು ಕಿತ್ತಲೆ ಹಣ್ಣನ್ನು ತಂದವರಿಗೆ "ಬೇಡ ಆಸ್ಪತ್ರೆಯ ರೋಗಿಗಳಿಗೆ ತೆಗೆದು ಕೊಂಡು ಹೋಗಿ ಕೊಡಿ" ಎಂದು ಹೇಳುತ್ತಿದ್ದವರು "ರಾಜಾಜಿಗೆ ಇದರ ಮೇಲೆ ಆಸೆ ಇರಬಹುದು" ಎಂದರು. ರಾಜಾಜಿಗೆ ಮಾತ್ರವೇ ಅಲ್ಲ. ಗಾಂಧಿಯವರ ಹೊರತು ಅಲ್ಲಿದ್ದ ಎಲ್ಲರಿಗೂ ಅದರ ಮೇಲೆ ಆಸೆ ಇತ್ತು. ಹಣ್ಣು ಗಾಂಧಿ ಬಿಡಾರವನ್ನು ಸೇರಿದುದನ್ನು ನೋಡಿ ಹಣ್ಣನ್ನು ತಂದಿದ್ದವರಿಗೆ ಕೃತ ಕೃತ್ಯತೆಯ ಭಾವವುಂಟಾಯಿತು.

ನೂರೈವತ್ತು ಸಂವತ್ಸರಗಳು ಪಾರತಂತ್ರ್ಯದಲ್ಲಿದ್ದ ರಾಷ್ಟ್ರ, ಸ್ವಾತಂತ್ರ್ಯದ ಹೋರಾಟದ ವೀರರಿಗೆ ಹೆಚ್ಚಾದ ಸನ್ಮಾನವನ್ನು ತೋರಿಸುವುದು ಸ್ವಾಭಾವಿಕವಾದುದು. ಹೋರಾಟದ ಪಾರಿಶುದ್ಧತೆ ಹೆಚ್ಚಿದಷ್ಟೂ ಅದರ ಯೋಧರಿಗೆ ಗೌರವ ಹೆಚ್ಚು. ಅಹಿಂಸಾತ್ಮಕ ಅಸಹಕಾರದ ಹೋರಾಟದಲ್ಲಿ ಜನತೆ ಸಹಸ್ರ ಸಂಖೆಯಲ್ಲಿ, ದಶಸಹಸ್ರ ಶತಸಹಸ್ರ ಸಂಖೆಯಲ್ಲಿ ಕೂಡಿ ಸತ್ಯಾಗ್ರಹಿಗಳನ್ನು ಸ್ವಾಗತಿಸುವುದು, ರಾಷ್ಟ್ರಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗಿಗಳಾದವರಿಗೆಲ್ಲ ಇದು ಅನುಭವ. ಜನತೆ ಧೀರರನ್ನು ಹಾಗೆ ಗೌರವಿಸುವುದು ವ್ಯಕ್ತಿಪೂಜೆಯಲ್ಲ. ಆತ ಸ್ವಾತಂತ್ರ್ಯದ ಒಂದು ಸಂಕೇತವೆಂದು. ಕೆಲವರು ಅನುಸರಿಸುವ

ಮಾರ್ಗವನ್ನು ಜನ ಒಪ್ಪದಿದ್ದರೂ ಆತನ ಗುರಿಯನ್ನೂ ಸಾಹಸವನ್ನೂ ಒಪ್ಪಿಯೇ ಒಪ್ಪುತ್ತದೆ. ಭಾರತದಲ್ಲಿ ಯಾವಾಗಲೂ ಹಿಂಸಾವಾದಿಗಳಿಗೆ ಮನ್ನಣೆಯಿಲ್ಲ, ಹಿಂಸೆ ಭಾರತದ ಸಂಸ್ಕೃತಿಗೆ ಹೊರತಾದುದು. ಆದರೆ ಪರದೇಶದ ದಬ್ಬಾಳಿಕೆಯ ಆಕ್ರಮಣಕ್ಕೆ ಎದುರಾಗಿ ಹಿಂಸಾವಾದಿ ಎದ್ದಾಗ, ಆತನ ಮಾರ್ಗ ಮರೆಯಾಗಿ ಆತ, ಸ್ವಾತಂತ್ರ್ಯದ ಜ್ಯೋತಿಯಾಗಿ ಉಳಿಯುತ್ತಾನೆ. ಆತ ಅವಮಾನಗಳಿಗೆಲ್ಲಾ ಎದುರಾಗಿ ಸೇಡನ್ನು ತೀರಿಸಿಕೊಳ್ಳಲು ನಿಂತ ಒಂದು ಸಂಕೇತವಾಗುತ್ತಾನೆ. ಭಗತ್ ಸಿಂಗ್‌ನ ವಿಷಯದಲ್ಲಿ ಹಾಗೆಯೇ ಆಯಿತು. ಭಗತ್ ಸಿಂಗ್‌ನಿಗಿಂತ ಹಿಂದೆ ಅನೇಕ ಕ್ರಾಂತಿಕಾರರು ಭಾರತ ರಾಜಕೀಯದಲ್ಲಿ ಗುಂಡನ್ನು ಹಾರಿಸಿದ್ದರು. ಆದರೆ ಭಗತ್‌ಸಿಂಗ್‌ನಿಗೆ ದೊರೆತ ಅದ್ಭುತವಾದ ಗಾರುಡಿ ಪ್ರಸಿದ್ಧಿ ಅವರಾರಿಗೂ ದೊರೆಯಲಿಲ್ಲ. ೧೯೩೦-೩೧ ರಲ್ಲಿ ಭಗತ್‌ಸಿಂಗನ ಹೆಸರು ಭಾರತದ ಮೂಲೆ ಮೂಲೆಗಳಲ್ಲಿ ಮನೆ ಮಾತಾಗಿದ್ದಿತು. ಅವನ ಹೆಸರನ್ನು ಕೇಳದ ಹಳ್ಳಿ, ಗುಡಿಸಲು ಯಾವುದೂ ಇರಲಿಲ್ಲ. ಅವನ ಮೇಲೆ ಗೀತಗಳೂ ಲಾವಣಿಗಳೂ ಯಕ್ಷಗಾನ ಪ್ರಸಂಗಗಳೂ ಹಾಡುಗಳೂ ಭಾರತದ ಎಲ್ಲಾ ಭಾಷೆಗಳಲ್ಲಿಯೂ ಅಸಂಖ್ಯಾತವಾಗಿ ಬೆಳೆದವು. ಭಗತ್‌ಸಿಂಗ್ ಭದ್ರವಾಗಿ ತಪ್ಪಿಸಿಕೊಳ್ಳಲಸಾಧ್ಯವಾದ ಸೆರೆಮನೆಯ ಕಬ್ಬಿಣದ ಸಲಾಕಿಗಳ ಒಳಗೆ ಇದ್ದರೂ, ಅಧಿಕಾರಿಗಳು ಅವನ ಹೆಸರನ್ನು ಕೇಳಿದರೆ ನಡುಗುತ್ತಿದ್ದರು. ಇದಕ್ಕೆ ಮುಖ್ಯ ಕಾರಣ ಭಗತ್‌ಸಿಂಗ್, ರಾಷ್ಟ್ರಕ್ಕೆ ಆದ ಅವಮಾನಕ್ಕೆ ಪ್ರತೀಕಾರದ ಸಂಕೇತವಾಗಿದ್ದನು. ಸೈಮನ್ ಕಮಿಶನ್ ಭಾರತಕ್ಕೆ ಬಂದಾಗ ದೇಶಭಕ್ತ ಪಂಜಾಬ್ ಸಿಂಹ ಲಾಲಾಲಜಪತ್‌ರಾಯ್‌ರನ್ನು ಪೋಲೀಸರು ಲಾಠಿಯಿಂದ ಬಡಿದರು. ಅದೇ ಸಂದರ್ಭದಲ್ಲಿ ಪಂಡಿತ ಜವಹರ್‌ಲಾಲ್‌ರಿಗೂ ದೊಣ್ಣೆ ಏಟು ಬಿತ್ತು. ಲಾಲಾಜಿ ಅದರಿಂದಲೇ ಮೃತರಾದರು. "ಈ ಬ್ರಿಟಿಷ್ ಸರ್ಕಾರದಲ್ಲಿ ರಾಷ್ಟ್ರದ ಕಣ್ಣು ಆದವರಿಗೆ ಸಹ ಅವಮಾನ ತಪ್ಪಿದುದಲ್ಲ. ಈ ಪೈಶಾಚಿಕ ಸರ್ಕಾರವನ್ನು ನಾಶಮಾಡಬೇಕು" ಎಂಬುದು ರಾಷ್ಟ್ರದಲ್ಲಿ ಪ್ರತಿಯೊಬ್ಬರ ಆಕಾಂಕ್ಷೆಯಾಗಿತ್ತು. ಭಗತ್‌ಸಿಂಗ್ ಆ ಆಕಾಂಕ್ಷೆಯ ಮೂರ್ತಿಯಾದನು. ಭಗತ್‌ಸಿಂಗ್‌ನ ಪ್ರಾಣವನ್ನುಳಿಸಲು ಮಹಾತ್ಮರು ಸಹ ಪ್ರಯತ್ನಿಸಿ ವಿಫಲರಾದರು.

ಕಾಂಗ್ರೆಸ್ಸಿಗರಿಗೆ ದೊರೆಯುತ್ತಿದ್ದ ಅದ್ಭುತ ಸ್ವಾಗತ ಸನ್ಮಾನಗಳನ್ನು ಕುರಿತು ಮಾತನಾಡುತ್ತಾ ಗಾಂಧಿಯವರು "ಜನತೆ ಸೇವಕರನ್ನು ಇಷ್ಟೊಂದು ಸನ್ಮಾನಿಸಕೂಡದು. ಆಗ ಪ್ರತಿಯೊಬ್ಬ ದೇಶ ಸೇವಕನೂ ತನ್ನ ಸೇವೆಗೆ ಈ ಪ್ರತಿಫಲ ದೊರಕಬೇಕೆಂಬುದನ್ನು ನೀರಿಕ್ಷಿಸಲು ಹೇಳಿಕೊಟ್ಟಂತಾಗುವುದು. ತಮ್ಮನ್ನು ಜನ ಉದಾಸೀನ ಮಾಡುತ್ತಿದ್ದಾರೆ. ಕೊನೆಗೆ ಕಲ್ಲಿನಿಂದ ಹೊಡೆಯುತ್ತಾರೆ. ಆದರೂ ದೇಶಸೇವೆ ಮಾಡಬೇಕು ಎಂದು ಸೇವಕರು ತಮ್ಮ ಕಾರ್ಯದಲ್ಲಿ ತೊಡಗಬೇಕು" ಎಂದಿದ್ದಾರೆ. ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ದಂಡಿ ಯಾತ್ರೆ ಹೊರಟಾಗ ಜನ ದಾರಿಯುದ್ದಕ್ಕೂ ಸತ್ಯಾಗಹಿಗಳಿಗೆ ಬಹಳ ಸುಖವಾದ ಭೋಜನವಾಡಿಸುತ್ತಿದ್ದರು. ಗೂಡೆಗಳಲ್ಲಿ ಹಣ್ಣಿನರಾಸಿಗಳು ಬಂದು ಬೀಳುತ್ತಿದ್ದವು. ಒಂದೆರಡು ದಿನ ಅದನ್ನು ನೋಡುವುದರೊಳಗಾಗಿ ತಮ್ಮ ಅನುಯಾಯಿಗಳು ಮಾಡುತ್ತಿರುವುದು ತಪ್ಪು ಎಂದು ಗಾಂಧಿಯವರಿಗೆ ಗೊತ್ತಾಯಿತು. ಬ್ರಿಟಿಷ್ ಸರ್ಕಾರದೊಂದಿಗೆ ಹೂಡಿದ್ದ ಅಂತಹ ಮಹತ್ತಾದ ಯುದ್ಧದ ಸಂದರ್ಭದಲ್ಲಿಯೂ ಅವರಿಗೆ ನಮ್ಮವರ ತಪ್ಪು ಸಣ್ಣದಾಗಿ ತೋರಲಿಲ್ಲ. ತಮ್ಮ ಜತೆಯಲ್ಲಿದ್ದ ೮೦ ಜನ ಯಾತ್ರಿಕರನ್ನು ಕುರಿತು ಅವರು ಹೀಗೆ ತಮ್ಮ ಹೃದಯವನ್ನು ಬಿಚ್ಚಿದರು. "ನಾನು ಹೇಳುವ ಮಾತುಗಳು ಯಾವಾಗಲೂ ಸ್ಪಷ್ಟ. ಬೆಟ್ಟದಷ್ಟು ದೊಡ್ಡದಾದ ಸರ್ಕಾರದ ತಪ್ಪನ್ನು ನಾನು ತೆಗಳುವುದರಲ್ಲಿ ಹಿಂದೆಗೆದಿಲ್ಲ. ಹಾಗೆಯೇ ನಮ್ಮವರ ತಪ್ಪು ಸಣ್ಣದಾದರೂ ಅದನ್ನು ಬೆಟ್ಟದಷ್ಟು ಮಾಡಿ ಹೇಳುವುದು, ನನ್ನ ಸ್ವಭಾವ. ತಮ್ಮ ದೊಡ್ಡ ತಪ್ಪನ್ನು ಸಣ್ಣದಾಗಿ ನೋಡುವುದು ಜನರ ಪದ್ಧತಿ. ಆದರೆ ಅನೇಕ ವರುಷಗಳಿಂದ ನಾನು ಆ ಪದ್ಧತಿಗೆ ವಿರೋಧವಾಗಿ ನಡೆದಿದ್ದೇನೆ. ಇದರಿಂದ ನನ್ನ ಅನೇಕ ಮಿತ್ರರಿಗೆ ನೋವಾಗಿದೆ. ಕೆಲವರು ನನ್ನನ್ನು ಬಿಟ್ಟು ಹೋಗಿ ಬಿಟ್ಟಿದಾರೆ. ಇಂದು ಮತ್ತೆ ನಾನು ಅದೇ ನೋವಿನ ಶಸ್ತ್ರ ಚಿಕಿತ್ಸೆಯನ್ನು ಮಾಡಬೇಕಾಗಿದೆ.

"ಇಂದಿನ ಬೆಳಗಿನ ಪ್ರಾರ್ಥನೆಯ ಸಮಯದಲ್ಲಿ ನಾನು ನನ್ನ ಸಂಗಡಿಗರಿಗೆ ಹೀಗೆ ಹೇಳಿದೆ. ಕಾಯಿದೆಭಂಗ ಮಾಡುವ ಈ ಜಿಲ್ಲೆಗೆ ನಾವು ಈಗ ಬಂದಿದ್ದೇವೆ. ಇಲ್ಲಿ ನಮ್ಮ ಪಾರಿಶುದ್ಧತೆ ಕಾರ್ಯತತ್ಪರತೆ

ಇನ್ನೂ ಹೆಚ್ಚಾಗಿರಬೇಕು. ಇಲ್ಲಿ ಅನೇಕ ಒಳ್ಳೆಯ ಕೆಲಸಗಾರರಿದ್ದಾರೆ. ಈ ಜಿಲ್ಲೆಯಲ್ಲಿ ಕಾಂಗ್ರೆಸ್ ಕಾರ್ಯ ಒಳ್ಳೆ ವ್ಯವಸ್ಥೆಯಿಂದ ನಡೆದಿದೆ. ಇಂತಹ ಕಾಂಗ್ರೆಸ್ ಭಕ್ತರು ಇಲ್ಲಿರುವುದರಿಂದ ಇಲ್ಲಿ ನಮ್ಮನ್ನು ಮುದ್ದು ಮಾಡುವವರು ಹೆಚ್ಚು" ಎಂದು. ನಾವು ದೇವತೆಗಳಲ್ಲ. ನಾವು ಬಹಳ ದುರ್ಬಲರು, ಆಶಾಪಾಶಕ್ಕೆ ಒಳಗಾಗಿ ಬಿಡುತ್ತೇವೆ. ನಮ್ಮ ಕುಂದುಗಳು ಅನೇಕವಾಗಿವೆ. ದೇವರು ದೊಡ್ಡವನು, ನಮ್ಮ ಕೆಲವು ಕುಂದುಗಳು ಇಂದೂ ಪ್ರಕಟವಾದುವು. ಒಬ್ಬ ಯಾತ್ರಿಕರು ತಮ್ಮ ತಪ್ಪನ್ನು ತಾವೇ ಒಪ್ಪಿಕೊಂಡರು. ನಾನು ಕೊಡುತ್ತಿರುವ ಈ ಎಚ್ಚರಿಕೆ ಸಕಾಲದಲ್ಲಿ ಬಂದಿದೆ. ಇಲ್ಲಿಯ ಕೆಲಸಗಾರರು ಸೂರತ್‌ನಿಂದ ಮೋಟಾರು, ಲಾರಿಯಲ್ಲಿ ಹಾಲು ಬರಲು ಏರ್ಪಡಿಸಿದ್ದಾರೆ. ಇಂತಹ ಖರ್ಚುಗಳನ್ನೆಲ್ಲ ನಾನು ಒಪ್ಪುವುದಿಲ್ಲ" ನಾನು ಅದನ್ನು ತೀವ್ರವಾಗಿ ಖಂಡಿಸಿದೆ.

"ಇಂತಹುದರಲ್ಲಿ ನಾನು ವೈಸರಾಯರಿಗೆ ನೀವು ಸಾಮಾನ್ಯ ಭಾರತೀಯನ ೫೦೦೦ ರಷ್ಟು ಸಂಬಳ ತೆಗೆದುಕೊಳ್ಳುತ್ತಿದ್ದೀರೆಂದು ಬರೆದುದು ಯಾವ ನ್ಯಾಯ? ಆತನಿಗೆ ಅಷ್ಟು ಹಣಯಾಕೆ? ನಮ್ಮ ಉತ್ಪತ್ತಿಗೆ ಸಂಬಂದವಿಲ್ಲದಂತೆ ಆತನು ಅಷ್ಟು ಹಣ ತೆಗೆದು ಕೊಳ್ಳುವುದನ್ನು ನಾವು ಹೇಗೆ ಸಹಿಸುವುದಕ್ಕಾಗುತ್ತೆ? ನಾನು ವೈಸರಾಯರಿಗೆ ತಿಂಗಳಿಗೆ ೨೧ ಸಾವಿರವಿರಲಿ, ಎರಡುಸಾವಿರದ ನೂರನ್ನು ಸಹ ಕೊಡಲು ಒಪ್ಪುವುದಿಲ್ಲ. ಆದರೆ ನಾನು ಯಾವಾಗ ಪ್ರತಿಭಟಿಸಬಹುದು? ನಾನೂ ಜನರಿಂದ ಅಷ್ಟೇ ದಂಡವನ್ನು ತೆಗೆದುಕೊಂಡರೆ ಆದೀತೆ? ನನ್ನ ಜೀವನದ ವೆಚ್ಚ ನಮ್ಮ ದೇಶದ ಜನರ ಸಾಮಾನ್ಯ ಜೀವನಕ್ಕೆ ಸ್ವಲ್ಪ ಮಟ್ಟಿಗಾದರೂ ಸರಿಹೋದಾಗ ಮಾತ್ರ ನಾನು ವೈಸರಾಯರ ಸಂಬಳವನ್ನು ಪ್ರತಿಭಟಿಸಬಹುದು. ನಾವು ಹೋರಾಡುತ್ತಿರುವುದು ದೇವರ ಹೆಸರಿನಲ್ಲಿ, ನಾವು ಹಸಿದವರ ಬೆತ್ತಲೆ ಇರುವವರ ನಿರುದ್ಯೋಗಿಗಳ ಪರವಾಗಿ ಹೋರಾಡುತ್ತಿರುವೆವೆಂದು ಹೇಳಿಕೊಳ್ಳುತ್ತೇವೆ. ನಾವು ಬಡಕ್ಕೆತನ ಜೀವನದ ವೆಚ್ಚದ ೫೦ ರಷ್ಟು ಖರ್ಚುಮಾಡುವುದಾದರೆ ವೈಸರಾಯಿಗಳ ಸಂಬಳವನ್ನು ಟೀಕಿಸಲು ನನಗೆ ಹಕ್ಕು ಎಲ್ಲಿದೆ? ಜನರು ಎಲ್ಲಿ ಸಿಕ್ಕುತ್ತದೆಯೋ ಅಲ್ಲಿಂದ ಉತ್ತಮವಾದ ದ್ರಾಕ್ಷಿಯನ್ನೂ ಸೇಬನ್ನೂ

ನಮಗಾಗಿ ತಂದರೆ, ಫಲ ಇನ್ನೇನು ತಾನೆ ಬೇರೆ ಆಗುತ್ತೆ ? ನನಗೆ ೧೨ ಹಣ್ಣು ಬೇಕಾದಾಗ ಅವರು ೧೨೦ ತಂದರೆ, ಒಂದು ಪೌಂಡು ಹಾಲು ಬೇಕಾದಾಗ ೩ ಪೌಂಡು ತಂದರೆ ಆಗುವುದು ಇನ್ನೇನು ? ಜನರು ನಮಗೆ ಕೊಡುವ ಎಲ್ಲಾ ರುಚಿಯಾದ ಒಳ್ಳೆಯ ಪದಾರ್ಥಗಳನ್ನೂ ನಾವು ತಿನ್ನದಿದ್ದರೆ ಅವರಿಗೆ ನೋವಾಗುವುದೆಂಬ ನೆಪದಿಂದ ನಾವು ತಿನ್ನ ತೊಡಗಿದರೆ ಆಗುವುದಿನ್ನೇನು ? ನೀವು ದ್ರಾಕ್ಷಿಯನ್ನೂ ಸೇಬಿನ ಹಣ್ಣುಗಳನ್ನು ಕೊಡುತ್ತೀರಿ. ಅದು ಒಬ್ಬ ಧನಿಕನಾದ ರೈತನ ಕಾಣಿಕೆ ಎಂದು ನಾವು ತಿನ್ನುತ್ತೇವೆ. ಅನಂತರ ನಾನು ವೈಸರಾಯರಿಗೆ ಬೆಲೆಯಾದ ಹೊಳಪು ಕಾಗದದ ಮೇಲೆ, ಯಾರಿಂದಲೋ ಕಾಣಿಕೆಯಾಗಿ ಬಂದ ಫೌಂಟನ್ ಪೆನ್‌ನಲ್ಲಿ ನಾಜೋಕಾಗಿ ಒಂದು ಕಾಗದ ಬರೆಯುತ್ತೇನೆಂದು ಭಾವಿಸಿ. ಅದು ನಿಮಗೂ ನನಗೂ ಅರ್ಹವಾದುದೆ ? ಅಂತಹ ಕಾಗದದಿಂದ ಏನಾದರೂ ಸ್ವಲ್ಪವಾದರೂ ಫಲವಾದೀತೆ ?

" ಹೀಗೆ ಬಾಳುವುದು ಕದ್ದ ಆಹಾರವನ್ನು ತಿಂದಂತೆ. ಈ ಬಡ ದೇಶದ ಅರ್ಹತೆಗೆ ಮೀರಿದ ಮಟ್ಟದಲ್ಲಿ ಜೀವಿಸುವುದು ಕದ್ದ ಆಹಾರವನ್ನು ತಿಂದಂತಲ್ಲದೆ ಮತ್ತೇನು ? ಕದ್ದ ಆಹಾರವನ್ನು ತಿನ್ನುತ್ತಾ ಈ ಯುದ್ಧವನ್ನೂ ಎಂದಿಗೂ ಜಯಿಸುವುದು ಸಾಧ್ಯವಿಲ್ಲ. ನಮ್ಮ ಯೋಗ್ಯತೆಗೆ ಮೀರಿದ ಮಟ್ಟದಲ್ಲಿ ಜೀವಿಸಬೇಕೆಂದು ನಾನು ಈ ದಂಡಿಯಾತ್ರೆಯನ್ನು ಕೈಕೊಳ್ಳಲಿಲ್ಲ. ಲಕ್ಷಾಂತರ ಸ್ವಯಂಸೇವಕರು ನಮ್ಮ ಸಂದೇಶದಂತೆ ಈ ಚಳುವಳಿಯಲ್ಲಿ ದುಮುಕುತ್ತಾರೆ. ಅವರನ್ನೆಲ್ಲ ಹೀಗೆ ಸುಖದಲ್ಲಿಡಲು ಸಾಧ್ಯವಾಗುವುದಿಲ್ಲ. ನನ್ನ ಸಂದೇಶದ ಈ ತಿರುಳನ್ನು ನೀವು ಗ್ರಹಿಬೇಕು. ಇಲ್ಲದಿದ್ದರೆ ನಮಗೆ ಸ್ವರಾಜ್ಯವಿಲ್ಲ, ನಾವು ಮೂಕರಾದ ಬಡಪ್ರಜೆಗಳ ನಿಜವಾದ ಪ್ರತಿನಿಧಿಗಳಾಗಬೇಕು. ಕಾಂಗ್ರೆಸ್ ಕಾರ್ಯ ಕರ್ತರಿಗೆ ನನ್ನ ಸಂಕಟ ತಿಳಿಯಬೇಕು. ದುರ್ಬಲರಾದ, ಆಸೆಗಳನ್ನು ಜಯಿಸಲಾರದ ನಮ್ಮನ್ನು ನೀವು (ಜನತೆ) ಯಾಕೆ ಹೀಗೆ ಮುದ್ದಿಸುವಿರಿ ? ಇವು ನಮ್ಮ ಹಳ್ಳಿಗಳಲ್ಲಿ ಪ್ರಚಾರವಾಗದಿರಲಿ. ಒಂದು ಲಕ್ಷ ಜನ ಆಂಗ್ಲೇಯರು ನಮ್ಮ ರಕ್ತವನ್ನು ಹೀರುತ್ತಿರುವುದೇ ಸಾಕು; ಒಬ್ಬರ ರಕ್ತ ಒಬ್ಬರು ನಾವೇ ಹೀರಿದರೆ, ಇನ್ನು ಬದುಕುವುದೆಂತು ? ಆಗ ನಮ್ಮ ಹೆಣಗಳನ್ನು ನಾಯಿಗಳು ನೆಕ್ಕುವುವು.

"ನನ್ನ ಮನಸ್ಸಿನಲ್ಲಿರುವ ದುಂದುಗಾರಿಕೆಯ ಗುರುತು, ಈ ದೀಪ ಗಳು. ಈ ನಿದ್ರೆಯಿಂದ ನೀವು ಎಚ್ಚರಗೊಳ್ಳಬೇಕು. ಸ್ವಯಂಸೇವಕರು ಪ್ರತಿಯೊಂದು ಕಾಸನ್ನೂ ಸರಿಯಾದ ರೀತಿಯಲ್ಲಿಯೇ ವೆಚ್ಚಮಾಡಲಿ. ನಾನು ನಮ್ಮವರಿಗೇ ವಿರೋಧವಾಗಿ ಸತ್ಯಾಗ್ರಹ ಹೂಡಬಲ್ಲೆ. ಸೇವಕ ರಾದ ನಮಗೆ ಆತಿಥ್ಯ ಮಾಡುವುದರಲ್ಲಿ ನೀವು (ಜನತೆ) ಹಿಡಿತವಾಗಿರಿ. ಔದಾರ್ಯ ಸಮೃದ್ಧಿಗಳು ಬೇಡ. ಅನಿವಾರ್ಯವಾಗಿ ಪದಾರ್ಥಗಳು ಸಿಕ್ಕ ದಿದ್ದರೆ ಬೇಡ. ನನಗೆ ಆಡಿನ ಹಾಲನ್ನು ಒದಗಿಸುವ ಆತುರದಲ್ಲಿ ಮಕ್ಕ ಳಿಗೆ ಹಾಲು ಸೊನ್ನೆ ಬೀಳದಿರಲಿ. ಹಾಗಾಗುವುದಾದರೆ ಆ ಹಾಲು ನನಗೆ ವಿಷವಾಗುವುದು! ದೊರಕದುದು ಇಲ್ಲದೆಯೇ ಇರಬಹುದು. ಮಾತನಾಡಿ ದುದಕ್ಕೆಲ್ಲಾ ಮೋಟಾರನ್ನು ಉಪಯೋಗಿಸಬೇಡಿ. ಈ ನಿಯಮವಿಟ್ಟು ಕೊಳ್ಳೋಣ—ನಡೆಯುವುದು ಸಾಧ್ಯವಾದೆಡೆ ವಾಹನಬೇಡ. ಈ ಯುದ್ಧ ಹಣದಿಂದ ಗೆಲ್ಲುವ ಯುದ್ಧವಲ್ಲ. ಜನತೆಯ ಚಳುವಳಿಯನ್ನು ಹಣದಿಂದ ನಡೆಸುವುದು ಸಾಧ್ಯವಿಲ್ಲ. ದುಡ್ಡಿನ ದೊಡ್ಡಪ್ಪನಾಗಿ ಚಳವಳಿ ನಡೆಸುವದು ನನ್ನಿಂದಂತೂ ಸಾಧ್ಯವಿಲ್ಲ."

ಹೀಗೆ ಗಾಂಧಿ ಯಾವ ರೂಪದಲ್ಲಯೂ ಈ ಬಡ ದೇಶದಲ್ಲಿ ಹಣದ ದವಲತ್ತನ್ನು ಒಪ್ಪುವುದಿಲ್ಲ. ಇಂಗ್ಲೇಂಡಿಗೆ ದುಂಡುಮೇಜಿನ ಪರಿಷತ್ತಿಗೆ ಹೋದಾಗ ಅವರು ಬಡವರ ಬಿಡಾರದಲ್ಲಿಯೇ ಇಳಿದುಕೊಂಡರು. ಚಕ್ರವರ್ತಿಯ ಜತೆಯಲ್ಲಿ ಭೋಜನ ಮಾಡಿದರೂ ತಾನು ಬಡವರ ಪ್ರತಿನಿಧಿ ಎಂಬುದನ್ನು ಅವರು ಮರೆಯಲಿಲ್ಲ. ದ್ವಂದ್ವಾತೀತನಾದವ ನಿಗೆ ಚಕ್ರವರ್ತಿಯೇನು ? ಭಿಕಾರಿಯೇನು ? ವೈಸರಾಯರೊಂದಿಗೆ ಮಾತ ನಾಡುವಾಗ ಅವರು ಸಾಧಾರಣವಾಗಿ " ನನಗೆ ಇನ್ನೇನೂ ಕೆಲಸವಿಲ್ಲದಿ ದ್ದರೆ ಹೋಗುತ್ತೇನೆ. ಆಶ್ರಮದಲ್ಲಿ ಕೆಲವು ರೋಗಿಗನ್ನು ಉಪಚರಿಸ ಬೇಕು," ಎನ್ನುತ್ತಿದ್ದರು. ಅಣುವಿನಲ್ಲಿ ಅಣುವಾಗಿ ಮಹತ್ತಾದುದರಲ್ಲಿ ಮಹತ್ತಾಗಿ ಸಮನಾಗಿ ಚಲಿಸುವ ಶಕ್ತಿ ಅವರದು. ಅತ್ಯಂತ ಗಹನವಾದ ವೇದಾಂತ, ವಿಶ್ವದ ಶಾಂತಿ, ಪರಮಾತ್ಮನ ಸ್ವರೂಪ ಕುರಿತು ಮಾತ ನಾಡುತ್ತಾ ಇರುವಾಗ ಅವರು ಇದ್ದಕ್ಕಿದ್ದಂತೆ ಪಾಯಿಖಾನೆಯನ್ನು ಗೊಬ್ಬರಮಾಡುವ, ಪಾಯಿಖಾನೆ ಗುಂಡಿಯನ್ನು ಶುದ್ಧಿ ಮಾಡುವ ಕಡೆಗೆ

ತಿರುಗಿಬಿಡುತ್ತಿದ್ದರು. ಖಾದಿ ಬಟ್ಟೆ ಮಂದವಾದುದರಿಂದ ಮಳೆಗಾಲದಲ್ಲಿ ಒಣಗುವುದಿಲ್ಲವೆಂದು ದೂರು ಬಂದುದಕ್ಕೆ "ಎರಡು ಗಳುಗಳ ನಡುವೆ ಒಂದು ಮಡಿಕೆಯಲ್ಲಿ ಅದನ್ನು ಹೇಗೆ ಒಣಗಹಾಕಬೇಕೆಂದು" ಹರಿಜನ ರಲ್ಲಿ ಎರಡುವಾರ ಬರೆದರು. ಹೀಗೆ ಸಣ್ಣದರಿಂದ ದೊಡ್ಡದರವರೆಗೆ ವಿಶ್ವ ವ್ಯಾಪಿಯಾಗಿ ಚಲಿಸುವ ನೋಟ ಅವರದು.

ದ್ವಂದ್ವಾತೀತರಾಗಿದ್ದರೂ ವಿಶ್ವಕುಟುಂಬಿಗಳಾಗಿದ್ದುದರಿಂದಲೇ ಗಾಂಧಿ ಕರುಣಾಸಮುದ್ರರಾಗಿದ್ದರು. ಇತರರ ತಪ್ಪನ್ನು ಕಂಡು ತಮ್ಮನ್ನು ಶಿಕ್ಷಿಸಿಕೊಳ್ಳುತ್ತಿದ್ದ ಉದಾರತೆ ಅವರದು. ದಂಡಿಯಾತ್ರೆ ಯಲ್ಲಿ ರಾತ್ರಿಯ ಪ್ರಯಾಣಕ್ಕಾಗಿ ಒಂದು ಗ್ಯಾಸ್‌ಲೈಟನ್ನು ಒದಗಿಸಿ ದ್ದರು. ಅದು ಹಿಂದಲ ಕಾಲದ ದಪ್ಪವಾದ ಕಾಲುಮಣೆಯ ಮೇಲಿನ ಒಬ್ಬ ಮನುಷ್ಯನಿಗೆ ಹೊರಲು ಕಷ್ಟವಾದ ದೊಡ್ಡಲೈಟ್. ಅವನು ಹೊರ ಲಾರದೆ ಮುಕ್ಕರಿಯುತ್ತಾ ಏದುತ್ತಾ ನಡೆಯುತ್ತಿದ್ದನು. ಅವನ ವೇಗ, ಹೊರೆಯ ಭಾರದಿಂದ ನಿಧಾನವಾಗುತ್ತಿದ್ದುದರಿಂದ ಸ್ವಯಂಸೇವಕರು ಅವ ನನ್ನು ಬೇಗ ಬೇಗ ಹೋಗುವಂತೆ ಅವಸರಿಸುತ್ತಿದ್ದರು. ಅವನ ಸ್ಥಿತಿ ಯನ್ನು ನೋಡಿ ಗಾಂಧಿಯವರಿಗೆ ದುಃಖವಾಯಿತು. ನಾಚಿಕೆಯಾ ಯಿತು. ಅವರು ತಾವೇ ವೇಗ ವೇಗವಾಗಿ ನಡೆದು ಅವನಿಗಿಂತ ಮುಂದೆ ಹೋದರು. ಸ್ವಯಂಸೇವಕರು ದೀಪವನ್ನು ಹೊತ್ತವ ನನ್ನು ಗಾಂಧಿಯವರ ಸಮೀಪಕ್ಕೆ ಮತ್ತೆ ಓಡಿಸಿದರು. ಪ್ರಾರ್ಥನಾ ಸಭೆ ಯಲ್ಲಿ ಗಾಂಧಿಯವರು ಬಹಳ ನೊಂದುಕೊಂಡು "ದೀಪವನ್ನು ಹೊರಲೇ ಬೇಕಾದರೆ ನಮ್ಮಲ್ಲಿ ಯಾರಾದರೂ ಹೊತ್ತರೆ ಎಷ್ಟು ಚೆನ್ನ! ಆಗ ನಮಗೆ ದೀಪವೇ ಬೇಡ ಎನ್ನಿಸುತ್ತದೆ. ಇಂತಹ ಹೊರೆಯನ್ನು ಯಾವ ಕೂಲಿತಾನೆ ತಲೆಯ ಮೇಲೆ ಹೊತ್ತಾನು? ಇದು ಬಿಟ್ಟಿ ಚಾಕರಿ" ಎಂದರು. ಅಂದಿನಿಂದ ಆ ಗ್ಯಾಸಲೈಟು ಮಾಯವಾಯಿತು. ಇಂತಹ ಕಾರುಣ್ಯ, ಆಲಿಂಗಿಸಿಕೊಳ್ಳದ ವ್ಯಕ್ತಿ ಯಾರು? ಒಂದು ಸಲ ಒಬ್ಬ ತೊನ್ನಿನವರು ಆಶ್ರಮಕ್ಕೆ, ಬಂದುಬಿಟ್ಟರು. ತೊನ್ನಿನವರನ್ನು ಆಶ್ರಮದಲ್ಲಿ ಯಾರು ಸೇರಿಸುತ್ತಾರೆ? ಅದು ಅಂಟುಜಾಡ್ಯ ಆಶ್ರಮ ವಾಸಿಗಳೆಲ್ಲಾ "ಇದು ಇವನಿಗೆ ಸ್ಥಳವಲ್ಲ ಇವನನ್ನು ಬೇರೆಲ್ಲಿಗಾದರೂ

ತಳ್ಳಿ" ಎಂದರು. ಆದರೆ ಗಾಂಧಿಯವರು "ಇವನನ್ನು ಯಾರೂ ಸೇರಿಸುವುದಿಲ್ಲ. ಇವನು ಯಾರಿಗೂ ಬೇಕಿಲ್ಲ; ಆದರೆ ನಾನೂ ಬೇಡವೆಂದರೆ ಅವನು ಎಲ್ಲಿ ಹೋಗುತ್ತಾನೆ? ಆದುದರಿಂದ ಇಲ್ಲಿಯೇ ಇರಲಿ! ನಾನೇ ಅವನ ಸೇವೆ ಮಾಡುತ್ತೇನೆ" ಎಂದರು. ಆಳ್ವಾರುಗಳ ಕೀರ್ತನೆಯೊಂದರಲ್ಲಿ ಭಕ್ತನು ಭಗವಂತನಿಗೆ "ನನ್ನನ್ನು ಗಡೀಪಾರು ಮಾಡುವುದು ನನಗೆ ಸಾಧ್ಯವಿಲ್ಲ; ಯಾಕೆಂದರೆ ಬ್ರಹ್ಮಾಂಡದ ಪ್ರತಿಯೊಂದು ಅಂಗುಲದ ಮೇಲೂ ನಿನ್ನ ಸ್ವಾಮಿತ್ವವಿರುವುದರಿಂದ ನಿನ್ನ ಗಡಿಯನ್ನು ದಾಟಿ ನಾನು ಹೋಗುವುದೆಂತು? ಎನ್ನುತ್ತಾನೆ.

ಪ್ರಯಾಣ ಕಾಲದಲ್ಲಿ ರಸ್ತೆಯ ಮಗ್ಗುಲಿನ ಪ್ರತಿಯೊಂದು ಹಳ್ಳಿಯ ಬಳಿಯೂ, ಸಹಸ್ರಾರು ಜನ ಗಾಂಧಿ ದರ್ಶನಕ್ಕಾಗಿ ನೆರೆದಿರುತ್ತಿದ್ದರಷ್ಟೆ. ಜನತೆಯನ್ನೂ ಅವರ ಪ್ರೇಮವನ್ನೂ ಕಂಡರೆ ಗಾಂಧಿಯವರಿಗೆ ಯಾವಾಗಲೂ ಸಂತೋಷವೆ. ಪ್ರಯಾಣ ಕಾಲದಲ್ಲಿ ಅವರು ಎಂತಹ ಬಿಸಿಲಿನಲ್ಲಿಯೂ ಮೋಟಾರಿನ ಮುಸುಕನ್ನು ಹಿಂದಕ್ಕೆ ತೆರೆದೇ ಪ್ರಯಾಣ ಮಾಡುತ್ತಿದ್ದರು. ತಮ್ಮನ್ನು ನೋಡಲು ಕಾದಿರುತ್ತಿದ್ದ ಅಸಂಖ್ಯಾತ ಜನತೆಗೆ, ತಮ್ಮ ದರ್ಶನ ಸುಲಭವಾಗಿ ಆಗಬೇಕೆಂಬುದೇ, ಅವರ ಉದ್ದೇಶ. ತಮಿಳು ನಾಡಿನ ಬಿಸಿಲಿನ ಝಳದಲ್ಲಿ ಒಂದು ಸಲ ಹೋಗುತ್ತಿರುವಾಗ ಗಾಂಧಿಯವರ ಜತೆಯಲ್ಲಿದ್ದ ಅವಿನಾಶಿಲಿಂಗಮ್ "ಬಿಸಿಲು ಬಹಳ ಕ್ರೂರವಾಗಿದೆ. ಕಾರಿನ ಮುಸಕನ್ನು ಮೇಲಕ್ಕೇ ಎಳೆಯಲೇ" ಎಂದು ಕೇಳಿದರು. ಗಾಂಧಿ ನಕ್ಕು "ಜನತೆಯ ಕೋಪ ಬಿಸಿಲಿಗಿಂತಲೂ ಕ್ರೂರವಾದುದು" ಎಂದರು. ಗಾಂಧಿ ದರ್ಶನಕ್ಕಾಗಿ ಜನ ಒಬ್ಬರಮೇಲೊಬ್ಬರು ನುಗ್ಗುತ್ತಾ ಒಬ್ಬರನ್ನು ಒಬ್ಬರು ತುಳಿಯುತ್ತಾ ಕೊನೆಗೆ ಮೋಟಾರಿನ ಗಾಜು ಟೈರುಗಳನ್ನು ಸಹ ಒಡೆಯುವುದು ಅವಿನಾಶಿಯವರಿಗೆ ಅನುಭವವಾಗಿದ್ದದರಿಂದ ಗಾಂಧಿಯವರ ಮಾತಿನ ಸತ್ಯ ಅವರಿಗೆ ತತ್‌ಕ್ಷಣ ಮನದಟ್ಟಾಯಿತು. ಜನರ ತೃಪ್ತಿಗಾಗಿ, ತಮಿಳುನಾಡಿನವರಿಗೇ ಸಹಿಸಲಸಾಧ್ಯವಾದ ಬಿಸಿಲನ್ನು ಗಾಂಧಿ ಸುಲಭವಾಗಿ ತಮ್ಮ ಮೈಮೇಲೆ ತೆಗೆದುಕೊಂಡರು.

ಜಗತ್ತನ್ನೇ ತಮ್ಮ ಪ್ರೇಮದ ಬಲೆಯಲ್ಲಿ ಸಿಕ್ಕಿಸಿಕೊಂಡ ಮಹಾತ್ಮ

ಗಾಂಧಿಯವರ ಕಾರುಣ್ಯದ ಮತ್ತೊಂದು ಉದಾಹರಣೆಯನ್ನು ಹೇಳ ಬಹುದು. ಒಂದುಸಲ ಗಾಂಧಿ ತಮಿಳುನಾಡಿನಲ್ಲಿ ಅವಿನಾಶಿಲಿಂಗಮ್ ಜತೆಯಲ್ಲಿ ಹರಿಜನ ನಿಧಿಶೇಖರಣೆಗಾಗಿ ಹೋಗುತ್ತಿದ್ದರು. ಆ ದಾರಿಯಲ್ಲಿ ಸ್ವಲ್ಪದೂರ ಯಾವ ಹಳ್ಳಿಯೂ ಇಲ್ಲದುದರಿಂದ ಸಾರಥಿ ಕಾರನ್ನು ಸ್ವಲ್ಪ ವೇಗವಾಗಿ ನಡೆಸುತ್ತಿದ್ದನು. ದೂರದಲ್ಲಿ ರಸ್ತೆ ಎಡಗಡೆಗೆ ತಿರುಗುವುದಾಗಿದ್ದು ಆ ತಿರುವಿನಲ್ಲಿಯೇ ರೈಲ್ವೆರಸ್ತೆ ಬಂದು ಗಾಡಿಯು ರಸ್ತೆಯಮೇಲೆ ಹಾದುಹೋಗುತ್ತಿದ್ದಿತು. ರೈಲು ಬರುವ ವೇಳೆಯಾಗಿದ್ದುದರಿಂದ ರೈಲುಕಂಬಿಯ ಆಚೆ ಈಚೆಯ ಗೇಟನ್ನು ಮುಚ್ಚಿದ್ದರು. ಆದರೆ ರಸ್ತೆಯಲ್ಲಿ ತಿರುವು ಇದ್ದುದರಿಂದ, ದೂರದಿಂದ ಮೋಟಾರಿನಲ್ಲಿ ಸಾರಥಿಗೆ ಆ ಗೇಟು ಕಾಣಲಿಲ್ಲ. ಮೋಟಾರು ರಸ್ತೆಯಲ್ಲಿ ತಿರುಗಿದ ನಂತರವೇ ಸಾರಥಿಗೆ ಎದುರಿಗಿದ್ದ ಗೇಟು ಕಂಡುದು. ಆತ ಗಾಬರಿಯಿಂದ ತಕ್ಷಣ ಇದ್ದಕ್ಕಿದ್ದಂತೆ ಬ್ರೇಕ್ ಹಾಕಿದನು. ಅತಿ ವೇಗದಲ್ಲಿ ಓಡುತ್ತಿದ್ದ ಗಾಡಿಗೆ, ತತ್‌ಕ್ಷಣ ಬ್ರೇಕ್ ಹಾಕಿದರೂ ಅದು ನಿಲ್ಲದೆ ನಾಲ್ಕಾರು ಉರುಳು ಮುಂದಕ್ಕೆ ಉರುಳಿ, ಗೇಟಿಗೆ ಧಡಾರನೆ ಬಡಿಯಿತು. ಆ ವೇಗಕ್ಕೆ ಗೇಟಿನ ಮೇಲಿನ ದೀಪವು, ಕಂಬದ ಮೇಲಿನಿಂದ ಜಿಗಿದು ನೆಟ್ಟಗೆ ಕಾರಿನೊಳಕ್ಕೆ ಬಿದ್ದಿತು. ದೀಪವು ಬಹಳ ಭಾರವಾಗಿತ್ತು. ಆದರೆ ದೇವರ ದಯದಿಂದ ಯಾರಿಗೂ ಏಟು ಬೀಳಲಿಲ್ಲ. ಅವಿನಾಶಿಲಿಂಗಂ ಅವರಿಗೆ ಮುಖವೆಲ್ಲ ಬೆವತು ಮೈ ಗಡಗಡನೆ ನಡಗುತ್ತಿದ್ದಿತು. "ದೇವರ ದಯ. ಭಾರತನಿಧಿ ಗಾಂಧಿಗೆ ಏನೂ ಅಪಾಯವಾಗಲಿಲ್ಲ," ಎಂದು ಅವರು ತೃಪ್ತರಾದರೂ, "ಏನಾದರೂ ? ಸಂಭವಿಸಿದ್ದರೋ"ಎಂಬ ಭಯದಿಂದ ಅವರು ಇನ್ನೂ ನಡುಗುತ್ತಲೇ ಇದ್ದರು ಗಾಂಧಿ ಪ್ರೀತಿಯ ಧ್ವನಿಯಿಂದ "ಅವಿನಾಶಿ ಏನಾಯಿತು" ಎಂದರು. ಅವರ ಧ್ವನಿಯಲ್ಲಿ "ಪರವಾಯಿಲ್ಲ ಭಯಪಡಬೇಡ" ಎಂಬ ಭಾವ ತೋರುತ್ತಿದ್ದಿತು. ಸ್ವಲ್ಪ ಜಾಗ್ರತೆಯಿಂದಿರಬೇಕು. ಎಂಬ ಭಾವನೆಯ ಮಾತು ಕೂಡ ಬಾಯಿಂದ ಹೊರಡಲಿಲ್ಲ. ಹೆದರಿದ್ದ ಸಾರಥಿಗೆ ಸಹ ಗಾಂಧಿಯೇ ಸಮಾಧಾನ ಹೇಳಿದರು.

ಮಾನವ ಜಗತ್ತೆಲ್ಲ ತನ್ನವರೇ ಎಂದು ಕೊಳ್ಳುವ ಕರುಣಾ

ಸಮುದ್ರ, ಕೋಪಿಸಿಕೊಂಡು, ಯಾರನ್ನ ತಾನೇ ತನ್ನ ಪ್ರೇಮದ ಆವರಣ ದಿಂದ ಹೊರಗೆ ಹಾಕಿಯಾನು ?

ತಮ್ಮ ಅದ್ಭುತವಾದ ಅನಾಸಕ್ತಿಯಿಂದ ಗಾಂಧಿ ವಜ್ರಾದಪಿಕಠೋರಾಣಿ ಮೃದೂನಿಕುಸುಮಾನಿಚ ಎಂಬಂತೆ ವಿಶ್ವದ ಮಾನವ ಜಗತ್ತನ್ನೇ ತಮ್ಮ ಹೃದಯದಲ್ಲಿ ಆಲಿಂಗಿಸಿಕೊಂಡಿದ್ದಾರೆ. ಅವರ ನಗುವಿನಲ್ಲಿ ಅಂತಹ ಮಾಟವಿದೆ. ಅವರು ಎಂತಹ ನೀರಸವಾದ ಕತ್ತಲೆಯಾದ, ಪ್ರದೇಶಕ್ಕೆ ಬರಲಿ; ಅವರ ಜತೆಯಲ್ಲಿ ಬೆಳಕೂ ಸುವಾಸನೆಯೂ ತೇಜಸ್ಸೂ ಶುದ್ಧವಾದ ಹಗುರವಾದ ಗಾಳಿಯೂ ಬರುತ್ತವೆ. ಮಾನವತೆ ಎಲ್ಲಿದ್ದರೂ ಯಾವ ದೇಶದವರಾದರೂ, ಗಾಂಧಿಗೆ ಅವರು ಹೊಸಬರಲ್ಲ. ದೇವರ ಮೇಲೆ ಭಾರ ಹಾಕಿ ಅವರು ಮಾಡುವ ಎಲ್ಲಾ ಕಾರ್ಯಗಳೂ ಅತ್ಯುತ್ತಮವೇ ಆಗುತ್ತಿದೆ. ಅಹಿಂಸೆಯ ಆಚರಣೆಯ ಜತೆಯಲ್ಲಿ ಬುದ್ಧಿಯೂ ಬೆಳೆಯಲೇ ಬೇಕೆಂದು ಗಾಂಧಿ ಹೇಳುತ್ತಾರೆ. "ಗಾಂಧಿಯವರಿಗೆ ಆತ್ಮಜ್ಞಾನ ಆತ್ಮಶಕ್ತಿ ಧರ್ಮ ತೇಜಸ್ಸು ಇರಬಹುದು. ಆದರೆ ಅವರು ಬುದ್ಧಿಯಲ್ಲಿ ಅವರಷ್ಟಲ್ಲ, ಇವರಷ್ಟಲ್ಲ" ಎಂದು ಕೆಲವರು ಹೇಳುವುದುಂಟು. ಸತ್ಯದ ಅನುಯಾಯಿಯಾದವನಿಗೆ ಸತ್ಯದ ಜತೆಯಲ್ಲಿಯೇ ಎಲ್ಲಾ ಶಕ್ತಿಗಳೂ ಬೆಳೆಯುತ್ತಾ ಹೋಗುತ್ತವೆ. ಗಾಂಧಿಯವರು ದುಂಡು ಮೇಜಿನ ಸಮ್ಮೇಳನಕ್ಕೆ ಹೋಗಿದ್ದಾಗ ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯರು, ಈ ಐದಡಿ ಎತ್ತರದ ಪೂರ್ವ ದೇಶದ ಕೌಪೀನಧಾರಿಯನ್ನು ಪ್ರಶ್ನೆಗಳ ಸುರಿಮಳೆಯಲ್ಲಿ ಕೆಡವಿಬಿಡುತ್ತೇವೆಂದು ಎಣಿಸಿದರು. ಸದಸ್ಯರೆಲ್ಲ ಮೂರು ನಾಲ್ಕು ಐದು ಪ್ರಶ್ನೆಗಳನ್ನು ಗಾಂಧಿಯವರ ಮೇಲೆ ಚಿಮ್ಮಲು ಸಿದ್ಧಮಾಡಿಕೊಂಡಿದ್ದರು. ಆ ಪ್ರಶ್ನೆಗಳಿಗೆ ಉತ್ತರ ಕೊಡಲಾರದೆ ಗಾಂಧಿ ಸೋಲುವರೆಂದು ಅವರು ಭಾವಿಸಿದ್ದರು. ಅನೇಕ ವಿದ್ಯುತ್ ದೀಪಗಳ ಕಾಂತಿಯಿಂದ ಕೋರೈಸುತ್ತಿದ್ದ ಆ ಭವನಕ್ಕೆ ಗಾಂಧಿ, ಮಂಡಿಯ ಮೇಲಕ್ಕೆ ಪಂಚೆಯುಟ್ಟುಕೊಂಡು ಗಂಭೀರವಾಗಿ ಬಂದರು. ಅವರ ಜತೆಯಲ್ಲಿ ಒಂದು ತೇಜಸ್ಸೂ ತೆಂಗಾಳಿಯೂ ಬಂದಿತು. ಗಾಂಧಿ, ಪಾಶ್ಚಾತ್ಯರ ಎದುರಿಗೆ ಭಾರತ ಸಂಸ್ಕೃತಿ ಬಂದು ಮೂರ್ತಿವೆತ್ತು ನಿಂತಂತೆ, ನಿಂತರು. ಆ ನೋಟದಲ್ಲಿ ಬುದ್ಧನ ನೋಟ

ವಿತ್ತು. ಅಮೆರಿಕನ್ ಪಾದ್ರಿ ಹೋಮ್ಸ್‌ರು ಗಾಂಧಿಯನ್ನು ಏಸುವಿಗೆ ಹೋಲಿಸಿರುವುದೂ, ರಾಧಾಕೃಷ್ಣನ್‌ರವರು ಗಾಂಧಿಯನ್ನು ಸಾಕ್ರೆಟಿಸ್‌ನಿಗೆ ಹೋಲಿಸಿರುವುದೂ ಅರ್ಹವಾಗಿದೆ. ಗಾಂಧಿಯರ ಆ ನೋಟದಲ್ಲಿ ದೃಢತೆ, ದೈವಭಕ್ತಿ ನಮ್ರತೆ, ತಾನು ದೇವರ ಮಾರ್ಗಾವಲಂಬಿ ಎಂಬ ನಂಬಿಕೆಗಳು ಮೂಡಿ ಕಾಣುತ್ತಿದ್ದವು. ತನ್ನ ಕಾರ್ಯದಲ್ಲಿ ಮಹತ್ವಾದ ನಂಬಿಕೆಯೂ ತಾನು ಮಾಡುತ್ತಿರುವುದು ಸರಿ ಎಂಬ ದೃಢ ನಿಶ್ಚಯವೂ ತನಗೆ ಸತ್ಯವೆಂದು ತೋರಿದುದನ್ನು ಸಾಧಿಸಲು ಅಚ್ಚಳಿಯದ ಎದೆಗಾರಿಕೆಯೂ ಗಾಂಧಿಯವರ ಮುಖದಲ್ಲಿ ತೋರುತ್ತಿದ್ದುವು. ಅವರು ಎರಡು ಗಂಟೆಗಳ ಕಾಲ ಪಾರ್ಲಿಮೆಂಟರಿ ಸದಸ್ಯರ ಅತಿಬುದ್ಧಿವಂತಿಕೆಯ ಪ್ರಶ್ನೆಗಳಿಗೆಲ್ಲಾ ಸಮಂಜಸವಾದ ಪ್ರತ್ಯುತ್ತರವನ್ನು ಕೊಟ್ಟರು. ಕೊನೆಗೆ ಪ್ರಶ್ನೆ ಹಾಕುವವರೇ ಸುಮ್ಮನಾದರು. ಆ ಸಂದರ್ಭದಲ್ಲಿ ಗಾಂಧಿಯವರು ಕೊಟ್ಟ ಒಂದು ಉತ್ತರ, ಇಂಗ್ಲಿಷರಿಗಿಂತ ಭಾರತದ ಮುಂದ ಪಕ್ಷದವರಿಗೇ ಹೆಚ್ಚು ಅಸಮಾಧಾನವನ್ನೂ ಗಾಬರಿಯನ್ನೂ ಉಂಟುಮಾಡಿದುವು. ಬ್ರಿಟಿಷ್ ಸೈನ್ಯ ಭಾರತದಿಂದ ಒಂದೊಂದು ಸಲಕ್ಕೆ ಎಷ್ಟೆಷ್ಟಾಗಿ ಮತ್ತು ಒಟ್ಟು ಎಷ್ಟು ವರ್ಷದೊಳಗೆ ಇಂಗ್ಲೆಂಡಿಗೆ ವಾಪಸಾಗಬೇಕೆಂದು ಒಬ್ಬ ಸದಸ್ಯರು ಕೇಳಿದುದಕ್ಕೆ, ಗಾಂಧಿಯವರು, "ಎಲ್ಲಾ ಸೈನ್ಯಗಳೂ ತತ್‌ಕ್ಷಣ ವಾಪಸಾಗಬೇಕು" ಎಂದರು. ಆ ಉತ್ತರವನ್ನು ಕೇಳಿ ಭಾರತದ ಮುಂದಪಕ್ಷದ ಮುಂದಾಳುಗಳಿಗೇ ಎದೆ ನಡುಗಿತು. ಅವರು ಅನಂತರ ಬಹಳ ದಿನಗಳವರೆಗೆ ಗಾಂಧಿಯವರ ಆ ಅಭಿಪ್ರಾಯಕ್ಕೆ ವಿರೋಧವಾಗಿ ಪತ್ರಿಕೆಗಳಲ್ಲಿ ಪ್ರಚಾರ ಮಾಡುತ್ತಿದ್ದರು. ಇದರಿಂದ ಇಂಗ್ಲೆಂಡಿನ ಭಾರತ ಸ್ವಾತಂತ್ರ್ಯ ವಿರೋಧಿಗಳಿಗೆ, ಪ್ರಚಾರಕ್ಕೆ ತುಂಬ ಅನುಕೂಲವಾಯಿತು. ಗಾಂಧಿಯವರು ಇಂಗ್ಲೆಂಡಿನಿಂದ ಭಾರತಕ್ಕೆ ಬಂದಾಗ "ನಾನು ಬರಿಯ ಕೈಯಲ್ಲಿ ಹಿಂದಿರುಗಿದೆ. ನಿಜ, ಆದರೆ ದೇಶದ ಗೌರವವನ್ನು ಮಾರಿಕೊಂಡು ಬಂದಿಲ್ಲ" ಎಂದರು. ಸರ್ಕಾರದಲ್ಲಿ ಸೇರುವವರೆಲ್ಲಾ ದೇಶದ ಗೌರವವನ್ನೇ ಮಾರುತ್ತಾ ಬಂದುದರಿಂದ ಗಾಂಧಿಯವರು ಹಾಗೆ ಹೇಳಬೇಕಾಯಿತು ಬ್ರಿಟಿಷರು ಭಾರತದಿಂದ ೪೭ನೇ ಆಗಸ್ಟ್‌ನಲ್ಲಿ ಕಾಲುಕೀಳುವಾಗ, ಬ್ರಿಟಿಷ್ ಸೈನ್ಯವೆಲ್ಲ ಪೂರ್ಣ

ವಾಗಿ ಒಂದೇ ಸಲ ಭಾರತವನ್ನು ಬಿಟ್ಟುಹೋದುದು, ಹದಿನೇಳು ವರುಷಗಳ ಹಿಂದೆಯೇ ಗಾಂಧಿಯವರು ದಿವ್ಯದೃಷ್ಟಿ ಎಷ್ಟು ಸತ್ಯವಾಗಿದ್ದಿತೆಂಬುದನ್ನು ವ್ಯಕ್ತಪಡಿಸುತ್ತದೆ. ಗಾಂಧಿಯವರ ದೃಷ್ಟಿ ಹೀಗೆ ಭವಿಷ್ಯ ನಿರ್ದೇಶವೂ, ಅವರ ವಾದಸರಣಿ ಎದುರಾಳಿಯ ಬಾಯಿ ಕಟ್ಟಿಸುವುದೂ ಆದುದರಿಂದ, ದಬ್ಬಾಳಿಕೆಯಲ್ಲಿ ನಿರತರಾದವರಿಗೆ ಅವರನ್ನು ವಾದದಲ್ಲಿ ಸೋಲಿಸುವುದು ಕಷ್ಟ. ಗಾಂಧಿ ಅವರ ಬಾಯನ್ನು ಕಟ್ಟುತ್ತಾರೆ ಈ ಕಾರಣದಿಂದ ಲಾರ್ಡ್‌ವಿಲಿಂಗ್ಡನ್‌ರು ಗಾಂಧಿಯವರಿಗೆ ಸಂದರ್ಶನವನ್ನೇ ತಿರಸ್ಕರಿಸಿದರು.

ಮಹಾತ್ಮಗಾಂಧಿಯವರ ಬಾಳು, ಕಾರ್ಯದಲ್ಲಿ ಪೂರಾ ಆಸಕ್ತಿ. ಫಲದಲ್ಲಿ ಅನಾಸಕ್ತಿ; ಎಂದುಕೊಂಡು ಕಾರ್ಯಮಾಡದವರನ್ನು ಗಾಂಧಿ ಒಪ್ಪುವುದಿಲ್ಲ. ಅನಾಸಕ್ತ ಜೀವನದ ಉದಾಹರಣೆಯನ್ನು ಗಾಂಧಿಯವರೇ ತಮ್ಮ ಬಾಳಿನಲ್ಲಿ ಅನೇಕ ಸಲ ತೋರಿಸಿದ್ದಾರೆ. ಒಂದು ಸಲ ಆಶ್ರಮದಲ್ಲಿ ಮುಖ್ಯವಾದ ಸಭೆಯೊಂದು ನಡೆಯುವ ಸಂದರ್ಭದಲ್ಲಿ, ಶ್ರೀ ಆರ್ಯನಾಯಕಂರವರ ಮಗ ಯಾವುದೋ ಔಷಧಿ ತಿಂದು ಸತ್ತನು. ಗಾಂಧಿಯವರು ತತ್‌ಕ್ಷಣ ಅಲ್ಲಿಗೆ ಹೋದರು. ಅವರಿಗೂ ದುಃಖ ಸಹಿಸಲಸಾಧ್ಯವಾಗಿ ಎಷ್ಟು ತಡೆದರೂ ನೀರು ಕಣ್ಣಿನಿಂದ ಧಾರೆಧಾರೆಯಾಗಿ ಸುರಿಯತೊಡಗಿತು. ಆದರೆ ಮುಂದಲಗಳಿಗೆಯಲ್ಲಿಯೇ ಆ ಮುಖ್ಯವಾದ ಸಭೆಗೆ ಹೋಗಬೇಕಾಗಿತ್ತು. ಅವರು ಕಣ್ಣೀರನ್ನು ಒರಸಿಕೊಂಡು, ಏನೂ ನಡೆಯದಿದ್ದವರಂತೆ ನೆಟ್ಟಗೆ ಸಭೆಗೆ ಬಂದರು. ಭಾರತದ ವಿಭಾಗವಾದ ಮೇಲೆಯಂತೂ, ಪ್ರತಿದಿನವೂ ಭಾರತೀಯರ ಮರಣ, ಸ್ತ್ರೀಯರ ಅಪಹರಣ ಸುದ್ದಿ, ಸಾವಿರಾರು ಸಂಖ್ಯೆಯಲ್ಲಿ ಬರುತ್ತಲೇ ಇದ್ದವು. ಮುಸಲ್ಮಾನ ಸ್ತ್ರೀಪುರುಷರು ಸಹ ಹೋಗಿ, ಗಾಂಧಿಯವರಲ್ಲಿ ಮೊರೆಯಿಡುತ್ತಿದ್ದರು. ಎಲ್ಲರೂ ನಿರುತ್ಸಾಹ ನಿರಾಸೆ ದುಃಖದಿಂದ ಭಾರವಾಗಿದ್ದರು ಅವರೆಲ್ಲರಿಗೂ ಗಾಂಧಿಯವರೊಬ್ಬರೇ ರಕ್ಷಕರಾದರು. ಹೆಂಡತಿ ಸತ್ತಳು, ಮಗಳನ್ನು ಎತ್ತಿಕೊಂಡು ಹೋದರು. ಮಗನನ್ನು ಇರಿದರು, ಎಂದು ಗೋಳಿಡುತ್ತಿದ್ದವರಿಗೆಲ್ಲಾ ಗಾಂಧಿ " ಧೈರ್ಯಹೊಂದಿ ಮರಣದ ಮಧ್ಯದಲ್ಲಿ ಹೃದಯವನ್ನು ಗಟ್ಟಿಮಾಡಿಕೊಂಡು ಕೆಲಸಮಾಡಿ. ದಿನದಿನವೂ ಮರಣ

ವನ್ನು ನೋಡಿದರೂ, ನನ್ನ ಹೃದಯುವನ್ನು ಉಕ್ಕುಮಾಡಿಕೊಳ್ಳು ವುದನ್ನು ನಾನು ಅಭ್ಯಸಿಸುತ್ತಿದ್ದೇನೆ, ಮರಣವೇ ಅಸದೃಶನಾದ ಮಿತ್ರ" ಎಂದು ಹೇಳಿ ಬಂದವರನ್ನು ಕಾರ್ಯತತ್ಪರರನ್ನಾಗಿ ಮಾಡುತ್ತಿದ್ದರು. ಗಾಂಧಿ "ನಮಗೆ ಕೇಡನ್ನು ಮಾಡಿದವರೂ ನಮ್ಮ ಮಿತ್ರರೇ" ಎಂದು ಭಾವಿಸುತ್ತಾರೆ. ಸ್ವಾಮಿ ಶ್ರದ್ಧಾನಂದರನ್ನು ಅಬ್ದುಲ್ ರಶೀದ್ ಎಂಬ ಮತಾಂಧನು ಕೊಲೆಮಾಡಿದಾಗ, ಗಾಂಧಿಯವರು ಕೊಲೆಪಾತಕನ ವಿಚಾರವಾಗಿ ಬರೆಯುತ್ತಾ " ಸಹೋದರ ಅಬ್ದುಲ್ ರಶೀದ್ " ಎಂದು ಅವನನ್ನು ಕರೆದಿದ್ದರು "ನಿಜವಾದ ಹಿಂದುಗಳಾದವರಿಗೆ ನಾನು ಯಾಕೆ ಆತನನ್ನು ಸಹೋದರ ಎನ್ನುತ್ತೇನೆ ಎಂಬುದು ತಿಳಿಯುತ್ತೆ." ಎಂದು ಬರೆದರು. ಜೀವನವನ್ನು ಪೂರ್ಣವಾಗಿ ಸೇವೆಗೆ ಉಪಯೋಗಿಸಬೇಕು. ಮರಣವನ್ನು ಹೊಂದಿದವರ ಆದರ್ಶವನ್ನನುಸರಿಸುವುದೇ ಅವರಿಗೆ ಸ್ಮಾರಕ, ಹಾಗೆ ಮಾಡದೆ ಅಳುತ್ತಾ ಕೂರುವುದು ಸತ್ತವರಿಗೆ ಸರಿಯಾದ ಗೌರವವಲ್ಲ" ಎಂದಿದ್ದಾರೆ.

ತಾವರೆಯ ಮೇಲಿನ ನೀರಿನಂತೆ ಜೀವನಕ್ಕೆ ಅಂಟಿದರೂ ಅಂಟ ದಂತೆ ಉಳಿದುಕೊಂಡು, ಈ ಬಾಳನ್ನು ಆತ್ಮದ ಗುರಿಯ ಪ್ರಯಾಣದಲ್ಲಿ ಒಂದು ತಂಗುವ ಬಿಡಾರವನ್ನಾಗಿ ಮಾಡಿಕೊಂಡುದರಿಂದ, ಗಾಂಧಿಯವ ರಿಗೆ ಇದು ಸಾಧ್ಯವಾಯಿತು. ಆತ್ಮೋನ್ನತಿಯ ಸಾಧನೆಯಲ್ಲಿ ಈ ಬಾಳೇ ಎಲ್ಲವೂ ಅಲ್ಲ. ಇದೊಂದು ಮೆಟ್ಟಲು ಮಾತ್ರ. ಆದು ದರಿಂದ ಈ ಬಾಳಿನ ಕೃತಕವಾದ ಯಾವ ಲಾಭಕ್ಕಾಗಿಯೂ ಆತ್ಮಘಾತವನ್ನು ಮಾಡಿಕೊಳ್ಳಬಾರದು. ಗಾಂಧಿಯವರು ಆಫ್ರಿಕ ದಲ್ಲಿರುವಾಗಲೇ " ಸಾಯುವವರೆಗೆ ನಮ್ಮಿಂದ ಯಾವ ಅಯೋಗ್ಯ ಕಾರ್ಯವೂ ಆಗದಂತೆ ನೋಡಿಕೊಂಡರೆ ಸಾಕು." ಎಂದಿದ್ದರು. ಯಾವುದೋ ಮಾರ್ಗದಿಂದ ಏನನ್ನೋ ಸಾಧಿಸುವುದಲ್ಲ ಗುರಿ. ಸಾಯು ವವರೆಗೆ ಯಾವುದೂ ಅಕಾರ್ಯ ನಮ್ಮ ಕೈಯಿಂದ ನಡೆಯದಂತೆ ನೋಡಿ ಕೊಳ್ಳುವುದು. ಹೀಗೆ ಮನುಷ್ಯ, ಸಾಮಾನ್ಯನಾಗಿ ಯಾರಿಗೂ ಹಿಂಸಕ ನಾಗದೆ ಪ್ರಸಿದ್ಧನಾಗದಿದ್ದರೂ ಚಿಂತೆಯಿಲ್ಲ, ತನ್ನ ಪಾಡಿಗೆ ತಾನು ಬಾಳ ಬೇಕು. ತನ್ನ ಮನಸ್ಸಿಗೆ ಸಮಾಧಾನವಾದರೆ ಸಾಕು, ತನ್ನಲ್ಲಿ ತನಗೆ

ತೃಪ್ತಿಯುಂಟಾದರೆ ಸಾಕು. ತಮ್ಮ ಮಗ ರಾಮದಾಸನ ವಿವಾಹ ಕಾಲ ದಲ್ಲಿ ಗಾಂಧಿ ಆತನಿಗೆ ಕೊಟ್ಟ ಉಡುಗೆರೆ ಒಂದು ತಕಲಿ. "ನಿಮಗೆ ಕೊಡು ವುದಕ್ಕೆ ನನ್ನಲ್ಲಿ ಏನು ತಾನೆ ಇದೆ. ಅಥವ ಯಾರಿಂದಲಾದರೂ ನಿಮಗೆ ನಾನು ಉಡಗೆರೆ ಕೊಡಿಸಬಹುದು. ಆದರೆ ನಿಮಗೆ ಮುಖ್ಯವಾದುದು ಅದಲ್ಲ. ನೀವು ಸನ್ಮಾರ್ಗ ಜೀವನವನ್ನು ನಡೆಸುವುದೇ ಮುಖ್ಯ. 'ಜಗತ್ತೆಲ್ಲ ನಿಮಗೆ ಮೋಸಮಾಡಿದರೂ ನೀವು ಯಾರಿಗೂ ಮೋಸಮಾಡುವುದಿಲ್ಲ ಎನ್ನುತ್ತೀರಿ. ಅದರಿಂದ ನನಗೆ ಬಹಳ ಹರುಷವಾಯಿತು. ಅದೇ ಯಾವಾ ಗಲೂ ನಿಮ್ಮ ಗುರಿಯಾಗಿರಲಿ" ಎದು ಬೋಧಿಸಿದರು. ಕುಶಲವರು ಋಷಿಗಳ ಮುಂದೆ ವಾಲ್ಮೀಕಿ ರಚಿತ ರಾಮಾಯಣವನ್ನು ಹಾಡಿದಾಗ ಆ ಗಾನ ಮಾಧುರ್ಯ ರಸಪ್ರವಾಹದಲ್ಲಿ ಆನಂದಬಾಷ್ಪವನ್ನು ಸುರಿಸುತ್ತಾ ಪವಿತ್ರವಾದ ತೀರ್ಥದಲ್ಲಿ ಮಿಂದಂತೆ ಪುನೀತಬಾವವನ್ನು ಹೊಂದಿದ ಋಷಿಗಳು, ಕುಶಲವರಿಗೆ, ಒಬ್ಬರು ಕಮಂಡಲವನ್ನೂ, ಒಬ್ಬರು ಕೌಪೀನ ವನ್ನೂ ಒಬ್ಬರು ಶೇಷವಸ್ತ್ರವನ್ನೂ ಒಬ್ಬರು ಕೃಷ್ಣಾಜಿನವನ್ನೂ ಕೊಟ್ಟ ರೆಂದು ಹೇಳಿದೆ. ಇಚ್ಛಾಮಾತ್ರದಿಂದಲೇ ಯಾವ ಧನಿಕನಿಂದಲಾದರೂ ಲಕ್ಷಾಂತರ ರೂಪಾಯಿಗಳನ್ನು ಮಗನಿಗೆ ಕೊಡಿಸಬಹುದಾಗಿದ್ದ ಗಾಂಧಿ, ಮಗನು ತನ್ನ ಕಾಲಿನ ಮೇಲೆ ತಾನು ನಿಲ್ಲುವುದು ಲೇಸೆಂದು ಭಾವಿಸಿ ಜೀವನದ ಯಾತ್ರೆಗೆ ಆವಶ್ಯಕವಾದ ಕೈದೀವಿಗೆಯಂತಿರುವ ನೀತಿ ವಾಕ್ಯ ಗಳನ್ನು ಮಾತ್ರ ಬೋಧಿಸಿದರು ರಾಜಕೀಯ ಸಾಧನೆಯೇ ನಾಟ ಕೀಯವಾದ ಜೀವನಕ್ರಮ. ಕಾರ್ಯ ತತ್ಪರತೆಯೇ ಮುಖ್ಯವಲ್ಲ. ೪೨ನೆಯ ಭಾರತದಿಂದ ತೊಲಗಿ ಚಳುವಳಿಯ ನಂತರ, ಗಾಂಧಿಯವರ ಬಿಡುಗಡೆ ಯಾದಮೇಲೆ ಅವರನ್ನು ಒಬ್ಬ ಯುವಕನು ಸಂಧಿಸಿದನು "ಗಾಂಧಿಜಿ ನಮ್ಮ ದೇಶದ ನಾಯಕರು ಪೂರ್ಣಾಯುಷ್ಯದಿಂದ ಬಾಳಲಿ, ಆದರೆ ನನಗೆ ಮರಣ ಬೇಗ ಬರಲಿ, ಇದೇ ನನ್ನ ಪ್ರಾರ್ಥನೆ." ಎಂದನು. ಗಾಂಧಿ ಯವರು ಸಾವಧಾನವಾಗಿ "ಇದು ಬಹಳ ಅಯೋಗ್ಯವಾದ ಪ್ರಾರ್ಥನೆ. ದೇವರು ನಮಗೆ ನಿಯಮಿಸಿದ ಕಾರ್ಯವನ್ನು ಮಾಡಲು ನಾವು ಶಕ್ತಿಗಾಗಿ ಪ್ರಾರ್ಥಿಸಬೇಕು. ಮರಣಕ್ಕಾಗಿ ಅಲ್ಲ." ಎಂದರು. ಆ ಯುವಕನು ಬಹಳ ಹೆಮ್ಮೆಯಿಂದ "ದೇಶಪ್ರೇಮದ ಬೀಜ ನಮ್ಮ ಮರಣದ ನೀರಿ

ನಿಂದ ಮಾತ್ರ ಬೆಳೆಯುವುದು" ಎಂದು ಉದ್ಗಾರ ತೆಗೆದನು. "೪೨ ನೇ ಇಸವಿಯಲ್ಲಿ ಸತ್ತ ಸಾವಿರಾರು ದೇಶಸೇವಕರ ರಕ್ತದಿಂದ ತಾನೇ ದೇಶಕ್ಕೆ ಈ ಮಹಿಮೆಯೂ ಶಕ್ತಿಯೂ ಉಂಟಾಗಿದೆ." ಎಂದನು. ಗಾಂಧಿಯವರು ಆತನನ್ನು ಗದ್ದರಿಸಿ ಹೀಗೆ ನುಡಿದರು "ವ್ಯರ್ಥವಾಗಿ ದೇವರ ಹೆಸರನ್ನು ತೆಗೆದುಕೊಂಡು ದೇವರಿಗೆ ಅವಮಾನಮಾಡುವುದು ಬೇಡ. ಹೇಗಾದರೂ ದೊರಕಿಸಿಕೊಳ್ಳುವ ಮರಣದಿಂದ ವ್ಯಕ್ತಿಯೂ ದೊಡ್ಡವನಾಗುವುದಿಲ್ಲ ದೇಶವೂ ದೊಡ್ಡದಾಗುವುದಿಲ್ಲ. ೧೯೪೨ ರಲ್ಲಿ ಜನತೆ ನಿರಾಯುಧರಾಗಿ ತೋರಿಸಿದ ಶಾಂತವಾದ ಧೀರತೆಯಿಂದ, ದೇಶಕ್ಕೆ ಈ ಶಕ್ತಿ ದೊರೆತಿದೆ. ದೇವರ ಅನುಯಾಯಿ ದೇವರ ಇಚ್ಛೆಯಂತೆ ಬದುಕಲು, ಸಾಯಲು ಸಿದ್ಧವಾಗಿರುತ್ತಾನೆ. ಅವನು ಮರಣವನ್ನು ಬಯಸುವುದಿಲ್ಲ. ಆದರೆ ತಾನು ಕರ್ತವ್ಯದಲ್ಲಿ ತೊಡಗಿರುವಾಗ, ಮರಣ ಬಂದರೆ ನಗುನಗುತ್ತಾ ಅದನ್ನು ಎದುರುಗೊಳ್ಳುತ್ತಾನೆ. ಅವನಿಗೆ ಆಗ ಬಾಳೂ ಸಾವೂ ಎರಡೂ ಒಂದೇ" ಎಂದರು.

ಹೀಗೆ ಸಾವಿಗೆ ಸಿದ್ಧವಾಗಿ ಅದರ ರಹಸ್ಯದ ಅನ್ವೇಷಣೆಯಲ್ಲಿ ತೊಡಗಿದ್ದರೂ, ಜೀವನದ ಪ್ರತಿಯೊಂದು ಕಾರ್ಯವನ್ನೂ ಚೆನ್ನಾಗಿ ಮಾಡಬೇಕೆಂಬ ಕರ್ಮಯೋಗ ಗಾಂಧಿಯವರದು. ಭಂಗಿ ಕಾರ್ಯವನ್ನು ಹೇಗೆ ಚೆನ್ನಾಗಿ ಮಾಡಬೇಕೆಂಬುದನ್ನೇ ಅವರು ಒಂದು ಶಾಸ್ತ್ರವಾಗಿ ಮಾಡಿದ್ದರು. ರಾಟೆಯಂತಹ ಸಣ್ಣ ಉಪಕರಣವನ್ನು ಸರಿಮಾಡುವುದಕ್ಕಾಗಿ ಅವರು ಅನೇಕ ರಾತ್ರಿಗಳು ನಿದ್ರೆಕೆಟ್ಟಿದ್ದರು. ಪುಷ್ಟಿಯಾದ ಆಹಾರ ಕಡಿಮೆ ವೆಚ್ಚದಲ್ಲಿ ಹೇಗೆ ದೊರೆಯಬಹುದೆಂಬುದಕ್ಕಾಗಿ ಅವರು ತಮ್ಮ ಮೇಲೆಯೇ ಅನೇಕ ಪ್ರಯೋಗಗಳನ್ನು ನಡೆಸಿದ್ದರು. ಅವರ ಸಲಹೆಯ ಮೇರೆ ಆಚಾರ್ಯ ವಿನೋಬ ಭಾವೆಯವರು ೧೫ ವರುಷಗಳ ಕಾಲ ಸತತ ಶ್ರಮವಹಿಸಿ, ಅನೇಕ ಪ್ರಯೋಗಗಳನ್ನು ಮಾಡಿ ಖಾದಿ ಶಾಸ್ತ್ರದ ಸಂವಿಧಾನವನ್ನು ರಚಿಸಿದರು. ನಯೀತಾಲಿಮ್, ಮೂಲಶಿಕ್ಷಣ ಜನ್ಮಿಸಿದುದು ಗಾಂಧಿಯವರ ಶಿಕ್ಷಣ ಕ್ರಾಂತಿ ಭಾವನೆಯಿಂದ. ಗಾಂಧಿಯವರು ಯಾವ ಸಣ್ಣ ವಿಷಯವನ್ನೂ ಉದಾಸೀನಮಾಡುತ್ತಿರಲಿಲ್ಲ. ಅವರು ಕಾಂಗ್ರೆಸ್‌ಗಳಲ್ಲಿ ಪಾಯಖಾನೆ ಮನೆಗಳನ್ನೂ ಅಡಿಗೆ ಮನೆಯನ್ನೂ

ತಪ್ಪದೆ ನೋಡುತ್ತಿದ್ದರು. ೪೬ ನೇ ಸಂವತ್ಸರದಲ್ಲಿ ದಕ್ಷಿಣ ಭಾರತ ಹಿಂದು ಸ್ಥಾನಿ ಸಭೆಯ ಬೆಳ್ಳಿಯ ಹಬ್ಬಕ್ಕೆ ಬಂದಿದ್ದಾಗ ಅವರು ಪ್ರತಿನಿಧಿ ಗಳಿಗೆ "ನನಗೆ ಸಮಯವಿಲ್ಲ. ಇಲ್ಲದಿದ್ದರೆ ನೀವು ಮಲಗುವುದೆಲ್ಲಿ? ಊಟ ಸ್ನಾನ ಸರಿಯಾಗಿ ಮಾಡುತ್ತಿದ್ದೀರಾ? ಉಪಯೋಗಿಸುವ ಪಾತ್ರೆ ಗಳು ಅಚ್ಚುಕಟ್ಟಾಗಿವೆಯೆ? ಪಾಯಖಾನಿ ಗೃಹ ಪರಿಶುದ್ಧವಾಗಿದೆಯೇ ಎಲ್ಲವನ್ನೂ ನೋಡಬೇಕಾಗಿತ್ತು" ಎಂದರು. ತಾವು ಹೊರಡುವುದಕ್ಕೆ ಒಂದು ದಿನ ಮುಂಚೆ ನೋಡಿಯೇ ನೋಡಿದರು.

ತಮಗೆ ಎಷ್ಟೇ ಮಹತ್ತಾದ ಕಾರ್ಯಗಳಿರಲಿ ವಿರಾಮ ಎಷ್ಟೇ ಸ್ವಲ್ಪ ದೊರೆಯಲಿ, ಅವರು ಸಣ್ಣ ಸಣ್ಣ ವಿಷಯಗಳನ್ನೂ ಶ್ರದ್ಧೆವಹಿಸಿ ಗಮನಿಸು ತ್ತಾರೆ. ೪೨ ನೆ ಆಗಸ್ಟ್‌ನಲ್ಲಿ ಸೆರೆವಾಸವಾಗಿ ಬಿಡುಗಡೆಯಾದ ಮೇಲೆ ಪಂಚಾಗ್ನಿಯಲ್ಲಿ ವಿಶ್ರಮಿಸಿಕೊಂಡನಂತರ, ಗಾಂಧಿಯವರು ಬಂಗಾಳದ ಪ್ರವಾಸವನ್ನು ಕೈಕೊಳ್ಳುವುದಕ್ಕೆ ಮುಂಚೆ ೯ ದಿನ ಸೇವಾಗ್ರಾಮ್ಮದಲ್ಲಿ ನಿಂತರು. ಆ ಅವಧಿಯಲ್ಲಿ, ಕಸ್ತೂರಿಬಾ ನಿಧಿಯ ಕಾರ್ಯಕರ್ತರ ಮೂರು ಸಭೆಗಳೂ, ಚರಖ ಸಂಘದ ಕಾರ್ಯಕರ್ತರ ಒಂದು ಸಭೆಯೂ ನಡೆಯಿತು. ಪದ್ಧತಿಯಂತೆ ಇತರ ಭೇಟಿಗಳೂ ಕಾಂಗ್ರೆಸ್ಸಿಗರ ಅಹವಾಲುಗಳೂ ಗಾಂಧಿಯವರ ಕಾಲವನ್ನೆಲ್ಲ ಆಕ್ರಮಿಸಿದವು. ಆದರೂ ಕೂಡ ಗಾಂಧಿ ಯವರು ನಯೀ ತಾಲೀಮ್ ವಿದ್ಯಾಲಯದ ಆಶ್ರಮಕ್ಕೆ ಬೆಟ್ಟಿ ಇತ್ತರು. ಅದಕ್ಕೆ ಕಾರಣ, ಗಾಂಧಿ, ಒಬ್ಬ ಚಿಕ್ಕ ಹುಡುಗನಿಗೆ ಮಾಡಿದ್ದ ವಾಗ್ದಾ ನವೇ.

ಆ ವಾಗ್ದಾನವನ್ನು ಗಾಂಧಿ ಮಾಡಬೇಕಾದ ಸಂದರ್ಭ ಬಂದುದು ಹೀಗೆ. ಗಜರಾಜ್ ಎಂಬ ೯ ವರುಷದ ಹುಡುಗನತಾಯಿ ವಿಧವೆ, ಸ್ವಲ್ಪ ದಿನಗಳು ಮುಂಚೆ ಸೇವಾಗ್ರಾಮದ ಆಶ್ರಮವನ್ನು ಸೇರಿದ್ದಳು ಮಗ ನನ್ನು ಶ್ರೀ ಆರ್ಯನಾಯಕಂರವರ ನಯೀ ತಾಲಿಮ್ ಶಾಲೆಗೆ ಸೇರಿಸ ಬೇಕಾಯಿತು. ಗಾಂಧಿಯವರು ಸ್ಕೂಲಿಗೆ ಒಂದುಸಲ ಬಂದರೆ ತಾನು ಆ ಶಾಲೆಯನ್ನು ಸೇರುವುದಾಗಿ ಹುಡುಗನು ಹಟಹಿಡಿದನು. ಗಾಂಧಿ ಯವರು "ಆಗಲಿ ನಾನು ಬರುತ್ತೇನೆ. ಆದರೆ ಶಾಲೆಗೆ ಬರುವುದಿಲ್ಲ. ನೀವು ಊಟ ನಿದ್ರೆಮಾಡುವ ನಿಮ್ಮ ಬಿಡಾರಕ್ಕೆ ಬರುತ್ತೇನೆ" ಎಂದಿದ್ದರು.

ಸೇವಾಗ್ರಾಮವನ್ನು ಬಿಡುವುದಕ್ಕೆ ಎರಡು ದಿನಗಳ ಮುಂಚೆ ಗಾಂಧಿ ಆ ನಯಿ ತಾಲಿಮ್ ಬಿಡಾರಕ್ಕೆ ಭೇಟಿ ಇತ್ತರು. ಯಾವ ಸಣ್ಣವಿಷಯವೂ ಅವರ ಕಣ್ಣಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಅವರು ಹೀಗೆ ಹೇಳಿದರು " ಬಿಡಾರವನ್ನು ನೋಡಿ ನನಗೆ ಬಹಳ ನೋವಾಯಿತು. ವೈದ್ಯಶಾಲೆಯಾಗಿ ಉಪಯೋಗವಾಗುವ ಕೊಠಡಿಯ ಮುಂದುಗಡೆ ನೆಲ ಬಹಳ ತೇವವಾಗಿದೆ. ಮಕ್ಕಳು ಅಲ್ಲಿ ಕೈಕಾಲು ಮುಖ ತೊಳೆದು ಕೊಳ್ಳುತ್ತಾರೆಂದು ಕೇಳಿದೆ. ಹುಡುಗರು ಮಲಗುವ ತೊಟ್ಟಿಯಲ್ಲಿ ಚಾಪೆ ಗಳನ್ನು ಸರಿಯಾಗಿ ಅಚ್ಚುಕಟ್ಟಾಗಿ ಇಟ್ಟಿಲ್ಲ. ಕೊಠಡಿಯ ಮಧ್ಯೆ ಒಂದು ಶಾಯಿಕುಡಿಕೆ ಲೇಖನಿ ಬಿದ್ದಿದೆ. ಅದನ್ನು ಪರೀಕ್ಷಿಸಿದೆ. ಲೇಖನಿಗೆ ಶಾಯಿ ಮೆತ್ತಿಕೊಂಡಿದೆ. ಸುತ್ತಿಟ್ಟಿದ್ದ ಒಂದು ಹಾಸಿಗೆ ಬಿಚ್ಚಿನೋಡಿದೆ. ದುಪಟಿ ಗಳೆಲ್ಲಾ ಕೊಳೆಯಾಗಿವೆ. ಹರಿದ ಹಾಸಿಗೆಯನ್ನು ಸರಿಯಾಗಿ ಹೊಲಿ ದಿಲ್ಲ. ಕ್ವಿಲ್ಟ್‌ನಲ್ಲಿ ಹತ್ತಿ ಒಂದೇ ಕಡೆಗೆ ಬಂದು ಅದು ಗೋಣೀಚೀಲ ವಾಗಿದೆ. ಎಲ್ಲೆಲ್ಲೂ ಕೊಳಕಲು ಬಟ್ಟೆಬಿದ್ದಿದೆ. ಅಂಗಳದ ಸುತ್ತ ಬಿದಿರು ತಡಿಕೆಗಳನ್ನು ಕಟ್ಟಿ ಹೆಚ್ಚು ಜಾಗಮಾಡಿದ್ದೀರಿ ಅಲ್ಲೂ ಕೊಳೆ."

ಗಾಂಧಿಯವರು ಐದು ನಿಮಿಷಮಾತ್ರ ಅಲ್ಲಿರಬೇಕೆಂದು ಯೋಚಿ ಸಿದ್ದರು. ಆದರೆ ಮುಕ್ಕಾಲು ಗಂಟೆ ಕಳೆದರೂ ಅವರ ಪರೀಕ್ಷೆ ಮುಗಿ ದಿರಲಿಲ್ಲ " ಹುಡುಗರು ಮರಗಳ ಬೊಡ್ಡೆಯಲ್ಲಿ ಕೈಕಾಲು ತೊಳೆದು ಕೊಳ್ಳುವಂತೆ ಹೇಳಿ. ಉಪಯುಕ್ತವಾದ ನೀರನ್ನು ವ್ಯರ್ಥಮಾಡಬೇಡಿ. ಸೊಳ್ಳೆಗಳೂ ಹೆಚ್ಚುತ್ತವೆ. ಹರಿದ ದುಪಟಿಗಳನ್ನು ಎರಡಾಗಿ ಹೊಲಿದು ಕ್ವಿಲ್ಟ್‌ಮಾಡಿ. ನಾನು ಟ್ರಾನ್ಸ್‌ವಾಲಿನಲ್ಲಿರುವಾಗ ಇಂತಹ ಕಂಬಳಿ ಗಳನ್ನು ಮಾಡುವುದನ್ನು ಕಲಿತೆ. ಬೇಕಾದಷ್ಟು ಮಾಡಿದೆ. ಅವು ಬೆಚ್ಚಗಿರುತ್ತವೆ. ಹೆಚ್ಚುಕಾಲ ಬಾಳಿಕೆ ಬರುತ್ತವೆ. ಹರಿದ ಬಟ್ಟೆಗಳನ್ನು ಕಸವೆಂದು ಪರಿಗಣಿಸಬೇಡಿ. ಅವನ್ನು ಚೆನ್ನಾಗಿ ಒಗೆದು ಇಟ್ಟಿರಿ. ಹಳೆ ಬಟ್ಟೆಗಳನ್ನು ಸರಿಮಾಡುವುದಕ್ಕೂ ಇತರ ಅನೇಕ ಉಪಯೋಗ ಗಳಿಗೂ ಅವು ಒದಗುತ್ತವೆ. ಕೆಲವು ವಿದ್ಯಾರ್ಥಿಗಳಿಗೆ ಛಳಿಗಾಲದ ಬಟ್ಟೆಗಳಿಲ್ಲ. ಹೆಚ್ಚಾಗಿ ಬಟ್ಟೆಗಳಿರುವವರು ಇಲ್ಲದವರಿಗೆ ಕೊಡುವುದನ್ನು ಕಲಿಸಿ. ಪರಸ್ಪರ ಸಹಾಯದಲ್ಲಿ ಅದೇ ಒಂದು ಪಾಠವಾಗುವುದು.

" ಇವೆಲ್ಲಾ ನಿಮಗೆ ಅಲ್ಪ ವಿಷಯುಗಳಾಗಿ ತೋರಬಹುದು. ಮಹತ್ಕಾರ್ಯಗಳೆಲ್ಲಾ ಅಲ್ಪ ವಿಷಯುಗಳ ಸಮೂಹವೇ. ನನ್ನ ಪೂರ್ಣ ಬಾಳನ್ನು ಅಲ್ಪ ವಿಷಯುಗಳಮೇಲೆಯೇ ನಿರ್ಮಿಸಿಕೊಂಡಿದ್ದೇನೆ. ಅಲ್ಪ ವಿಷಯುಗಳನ್ನು ಚೆನ್ನಾಗಿ ಮಾಡಲು ನಾವು ವಿದ್ಯಾರ್ಥಿಗಳಿಗೆ ಕಲಿಸದಿದ್ದರೆ ನಾವು ನಮ್ಮ ಕರ್ತವ್ಯವನ್ನು ಮಾಡಿದಂತಾಗುವುದಿಲ್ಲ. ನಾವು ಎನ್ನುವುದರ ಬದಲು ನಾನು ಎನ್ನುತ್ತೇನೆ. ಯಾಕೆಂದರೆ ಈ ನಯಿ ತಾಲೀಮ್ ಪ್ರಯೋಗವನ್ನು ಪ್ರಾರಂಭಿಸಿದವನು ನಾನು. ಇದರಲ್ಲಿ ಕಾರ್ಯ ಮಾಡಲು ನನಗೆ ಸಮುಯವಿಲ್ಲದುದರಿಂದ ಇತರರಿಗೆ ಈ ಭಾರವನ್ನು ಬಿಟ್ಟಿದ್ದೇನೆ. ನನ್ನ ಅಭಿಪ್ರಾಯದಲ್ಲಿ ಪರಿಶುದ್ಧತೆ ಅಚ್ಚುಕಟ್ಟು ಆರೋಗ್ಯ ಇವುಗಳ ಭಾವನೆಯುನ್ನು ಕಲ್ಪಿಸುವುದೇ ನಯೀ ತಾಲಿಮ್‌ನ ಮೂಲ ಮಂತ್ರ. ಈ ಅಭ್ಯಾಸಗಳನ್ನು ಬೆಳೆಸಿಕೊಳ್ಳುವುದಕ್ಕೆ ಏನೂ ಖರ್ಚು ಆಗುವುದಿಲ್ಲ. ಇವಕ್ಕೆ ಆಶ್ಯಕವಾದುದು ಚುರುಕಾದ ಕಣ್ಣು ಮತ್ತು ಕಲಾದೃಷ್ಟಿ. " ಹೀಗೆ ಮಾಡಿದರೆ ಒಬ್ಬರು ಇಬ್ಬರು ಹುಡುಗರನ್ನು ಮಾತ್ರ ನಾವು ತಯಾರಿಸಬಹುದು " ಎಂದು ನೀವು ಹೇಳಿದರೆ ಒಬ್ಬಬ್ಬರನ್ನೇ ಇಟ್ಟುಕೊಳ್ಳಿ. ಹೆಚ್ಚಿಗೆ ಬೇಡವೇ ಬೇಡ ಎನ್ನುತ್ತೇನೆ. ನಮ್ಮ ಕೈಯ್ಯಲ್ಲಿ ಎಷ್ಟು ಸಾಧ್ಯವೋ ಅದಕ್ಕಿಂತ ಹೆಚ್ಚಾದ ಜವಾಬ್ದಾರಿಯನ್ನು ಹೊರುವುದರಿಂದ " ನಮ್ಮ ಕಾರ್ಯದಲ್ಲಿ ಅಸತ್ಯದ ಪ್ರವೇಶವಾಗುತ್ತದೆ.

ತಮಿಳುನಾಡಿನ ಒಂದು ಹರಿಜನ ವಿದ್ಯಾಲಯುದಲ್ಲಿ ಆಗ ವಿದ್ಯುತ್‌ಶಕ್ತಿಯ ದೀಪಗಳಿರಲಿಲ್ಲ. ಬರಿಯ ಹರಿಕೇನ್ ಲಾಂದ್ರಗಳನ್ನಿಟ್ಟಿದ್ದರು. ಗ್ಯಾಸ್ ಲೈಟನ್ನು ತರಲು ಓಡುತ್ತಿದ್ದ ಜನರನ್ನು ನೋಡಿ " ಗಾಂಧಿ ಬೇಡ ಇದೇ ಸಾಕು " ಎಂದರು. ಹರಿಜನ ಮಕ್ಕಳೊಡನೆ ನಗುನಗುತ್ತಾ ಆಟವಾಡಿದರು. ಆ ವೇಳೆಯಲ್ಲಿ ಅವರೂ ಮಕ್ಕಳಷ್ಟೇ ನಿರ್ವ್ಯೋಚನೆಯಿಂದಿದ್ದರು ಯುವಕರೊಂದಿಗೆ ಉತ್ಸಾಹವಾಗಿ ಮಾತನಾಡಿದರು. ಕೂಲಿಗಾರರಿಗೆ ಹಿತೈಷಿಗಳಾಗಿ, ವಯೋವೃದ್ಧರಿಗೆ ಸಂಸಾರದ ಬಂಧುವಾಗಿ ಆರ್ತರಿಗೆ ಆಪದ್ಬಾಂಧವರಾಗಿ ನಡೆದರು. ಸ್ತ್ರೀಯರು ಸ್ವಾಭಾವಿಕವಾಗಿ ತಂದೆಯೊಡನೆ ನಡೆಯುವಂತೆ

ಅವರೊಡನೆ ನಡೆಯುತ್ತಿದ್ದರು. 'ದೇವರು ಎಲ್ಲರಿಗೂ ಎಲ್ಲವೂ ಆಗಿ ತೋರುತ್ತಾನೆ' ಎಂಬ ನುಡಿ ಅವರ ಬಾಳನ್ನು ನೋಡಿದರೆ ಚೆನ್ನಾಗಿ ಅರ್ಥವಾಗುತ್ತಿದ್ದಿತು. ಅವರು ವಿದ್ಯಾಲಯದ ವಿದ್ಯಾರ್ಥಿಗಳಿಗೆ ಈ ಸಂದೇಶವನ್ನು ಕೊಟ್ಟರು. I hope that the boys of the vidyalaya will be strong in truth and faithful to God "ವಿದ್ಯಾಲಯದ ವಿದ್ಯಾರ್ಥಿಗಳು ಸತ್ಯದಲ್ಲಿ ಪ್ರಬಲರಾಗಿ ದೇವ ಭಕ್ತರಾಗುವರೆಂದು" ನಂಬುತ್ತೇನೆ. ಆ ವಾಕ್ಯದಲ್ಲಿ ಗಾಂಧಿಯವರ ದೃಷ್ಟಿಯಲ್ಲಿ ವಿದ್ಯದ ಗುರಿ ಅಡಕವಾಗಿದೆ. ಗಾಂಧಿಯವರು ಈ ಸಂದೇಶವನ್ನು ಬರೆದು ಅದರ ತಳದಲ್ಲಿ ಇಂಗ್ಲಿಷಿನಲ್ಲಿಯೂ ತಮಿಳಿನಲ್ಲಿಯೂ ರುಜು ಮಾಡಿದರು.

ಇಂದಿನ ಕಾಲದ, ಅದಕ್ಕಾಗಿಯೇ ನಿಯಮಿತರಾದ ಯಾವ ಹಾಸ್ಟೆಲ್ ವಾರ್ಡನ್‌ರೂ, ವಿದ್ಯಾರ್ಥಿಗಳ ಕೊಠಡಿಗಳನ್ನೂ ಹಾಸಿಗೆಗಳನ್ನೂ ಈ ಗುರಿಯಿಂದ ಪರೀಕ್ಷಿಸಿರಲಾರರು. ಗಾಂಧಿಯವರ ಪದ್ಧತಿಗಳೆಲ್ಲವೂ ಆ ದೃಷ್ಟಿಯಿಂದ ನೋಡುವಾಗ ವಿಚಿತ್ರವಾಗಿ ಕಾಣುತ್ತವೆ. ಅವರು ಬುದ್ಧಿಯ ಬೆಳವಣಿಗೆಗೆ ಎಷ್ಟು ಪ್ರಾಶಸ್ತ್ಯವನ್ನು ಕೊಡುತ್ತಿದ್ದರೋ ಹಾಗೆಯೇ ಕೈಕಾರ್ಯಕ್ಕೂ ಪ್ರಾಶಸ್ತ್ಯವನ್ನು ಕೊಡುತ್ತಿದ್ದರು. ಕೈಯಿನ ಕಾರ್ಯದ ಸಂಪರ್ಕವಿಲ್ಲದ ಬರಿಯ ಬುದ್ಧಿಯ ಬೆಳವಣಿಗೆಯನ್ನು ಅವರು ಅಷ್ಟಾಗಿ ಒಪ್ಪುತ್ತಲೂ ಇರಲಿಲ್ಲ. ಹತ್ತುವರುಷಗಳ ಕಾಲ ಜಪಾನರನ್ನು ಎದುರಿಸಿ ಯುದ್ಧಮಾಡಿದ ಚೀಣರು, ಇದ್ದಕ್ಕಿದ್ದಂತೆ ಮಿತಿಮೀರಿ ಬೆಳೆಯುತ್ತಿದ್ದ ಬರಿಯ ತಲೆಯ ಕಾರ್ಯವನ್ನು ಬಿಟ್ಟು, ಅದರ ಜತೆಗೆ ಕೈಕಾರ್ಯವನ್ನೂ ಸೇರಿಸಿಕೊಂಡು ಜಯಶೀಲರಾದರು ಒಂದು ಸಂದರ್ಶನದಲ್ಲಿ ಚೀನದ ಒಬ್ಬ ಪ್ರತಿನಿಧಿ ಹೇಳಿದ ಈ ವಾಕ್ಯಗಳು ಗಾಂಧಿಯವರಿಗೆ ಕೈಗೂ ಬುದ್ಧಿಗೂ ಇರುವ ಸಂಬಂಧವನ್ನು ಚೆನ್ನಾಗಿ ವ್ಯಕ್ತಪಡಿಸುವುದಾಗಿ ತೋರಿತು. ಗಾಂಧಿ ಈ ಪದ್ಯವನ್ನು ಹರಿಜನದಲ್ಲಿ ಪ್ರಕಟಿಸಿದ್ದರು.

Two Treasures life long we have
One, a pair of Hands and a Great Brain
He who neglects his hand belongs to the domain

Of the dethroned King's band
He who does not use his brain
Has to endure hunger and pain
He who uses both his brain and hand
Carves a Kingdom out of exploited land

ಕೈಯೂ ತಲೆಯೂ ಸಮನಾಗಿ ಬೆಳೆಯಬೇಕು; ಪ್ರಾಚೀನಕಾಲದಿಂದ ಇಂದಿನವರೆಗೆ ನೋಡಿದರೂ ಕೈಯಿಂದಲೇ ಬುದ್ಧಿಯ ಕಾರ್ಯಗಳೂ ಬೆಳೆದಿರುವುದು. ನಮ್ಮ ಇಂದಿನ ಶಿಕ್ಷಣ ಕ್ರಮದಲ್ಲಿ ಸಮತೆಯಿಲ್ಲದೆ ತಲೆ ಅಸ್ವಾಭಾವಿಕವಾಗಿ ಬೆಳೆದಿದೆ. ಕೈ ಬೆಳೆದೇ ಇಲ್ಲ ಮೂಲ ಶಿಕ್ಷಣವನ್ನು ಗಾಂಧಿ ಒತ್ತಿ ಹೇಳಿದುದರ ಕಾರಣವೂ ಇದೇಯೆ. ಅದನ್ನು ಕಾರ್ಯದಲ್ಲಿ ತೋರಿಸುವುದಕ್ಕಾಗಿಯೋ ಅವರು ಸದಾಕಾಲದಲ್ಲಿಯೂ ಯಾವುದಾದರೂ ಕೈಕೆಲಸದಲ್ಲಿ ತೊಡಗಿಯೋ ಇರುತ್ತಿದ್ದರು.

ಗಾಂಧಿಯವರನ್ನು ಸಾಧಾರಣವಾಗಿ ಹೊರನೋಟದಿಂದ ನೋಡಿದರೆ, ಅವರು ಬರಿಯ ಕಠಿಣವ್ರತಗಳ ನಿಯಮಗಳ ಪ್ರತಿಜ್ಞೆಗಳ ಚಳುವಳಿಗಳ ಒಣಕಾಷ್ಠವಾಗಿ ಕಾಣುತ್ತಾರೆ. ಪಂಡಿತ ಜವಹರರು ಸಹ "ಗಾಂಧಿಯವರ ಬರವಣಿಗೆಗಳು ಅವರಿಗೆ ಅನ್ಯಾಯಮಾಡಿವೆ. ಬರವಣಿಗೆಯನ್ನು ನೋಡಿದವರಿಗೆ ಹೃದಯದಲ್ಲಿ ಅವಿತಿರುವ ವಿಶ್ವಪ್ರೇಮಿ ಮಾನವ ಕಣ್ಣಿಗೆ ಕಾಣುವುದಿಲ್ಲ. ಹೆಚ್ಚುಹೆಚ್ಚಾಗಿ ಅವರನ್ನು ಅರಿತಂತೆ ಹೆಚ್ಚುಹೆಚ್ಚು ಪ್ರೀತಿ ಅವರಲ್ಲಿ ನಮಗೆ ಉಂಟಾಗುವುದು" ಎಂದಿದ್ದಾರೆ. ಗಾಂಧಿಯವರು ತಮ್ಮ ಸಿದ್ಧಿಗಾಗಿ ಅತ್ಯಂತ ಕಠಿಣವ್ರತಗಳನ್ನು ಆಚರಿಸಿದುದುಂಟು. ಆದರೆ ಆ ವ್ರತಗಳನ್ನು ಅವರು ಸ್ವಂತ ಇಚ್ಛೆಯಿಂದ ಪಾಲಿಸುತ್ತಿದ್ದರು. ಇತರರು ಆ ವ್ರತವನ್ನು ಪಾಲಿಸಬೇಕೆಂದು ಅವರು ಎಂದಿಗೂ ಹೇಳುತ್ತಿರಲಿಲ್ಲ. ಅದರ ಬದಲು ಖಂಡಿತಬೇಡಿ ಎಂದೇ ತಡೆಯುತ್ತಿದ್ದರು. ಇತರರ ದೌರ್ಬಲ್ಯವನ್ನು ಪ್ರತಿಭಟಿಸುತ್ತಲೂ ಇರಲಿಲ್ಲ. ಎ. ಐ. ಸಿಸಿ ಸಭೆಗಳಲ್ಲಿ ಸಹ ಆಜಾದರು ಗಾಂಧಿಯವರ ಮಗ್ಗುಲಲ್ಲಿ ಕುಳಿತು ಸರಾಗವಾಗಿ ಸಿಗರೇಟು ಸೇದುತ್ತಿದ್ದರು. ಹಿಂದೆ ಗಾಂಧಿಯವರು ಬೆಂಗಳೂರಿನಲ್ಲಿದ್ದಾಗ ಅಲ್ಲಿಗೆ ಮೋತಿಲಾಲ್ ನೆಹ್ರು ಬಂದರು. ಗಾಂಧಿಯವರು ತಮ್ಮ ಆಹಾರವನ್ನು ಉಪ್ಪು ಸೇರಿ ಐದು ಪದಾರ್ಥಕ್ಕೆ

ಪರಿಮಿತಿಗೊಳಿಸಿದ್ದರೂ, ಮೋತೀಲಾಲ್‌ರಿಗಾಗಿ ಗುಜರಾತಿ ಹೋಟಲು ಗಳಿಂದೆಲ್ಲ ಸಿಹಿ ತಿಂಡಿಗಳನ್ನು ತರಿಸಿದರು. ಇತರರ ದೌರ್ಬಲ್ಯದ ವಿಷಯದಲ್ಲಿ ಹಾಗೆ ಕರುಣೆಯಿಂದ ನಡೆಸುಕೊಳ್ಳುವುದು ಮಹನೀಯರಿ ಗೆಲ್ಲಾ ಸಾಮಾನ್ಯವಾದುದು. ಮದರಾಸಿನ ಕೀರ್ತಿಶೇಷ ಸತ್ಯಮೂರ್ತಿ ಯವರು ಮೊದಲನೆಯ ಸಲ ತಿರುಚನಾಪಳ್ಳಿ ಸೆರೆಮನೆಯಲ್ಲಿರುವಾಗ, ಅದೇ ಸೆರೆಮನೆಯಲ್ಲಿ ಬಂದಿಯಾಗಿದ್ದ ರಾಜಗೋಪಾಲಾಚಾರ್ಯರು ಅವರಿಗೆ ಹೊತ್ತಿಗೆ ಮುಂಚೆ ಎದ್ದು ಕಾಫಿ ಕಾಯಿಸಿಕೊಡುತ್ತಿದ್ದರು. ಗಾಂಧಿಯವರು ೪೬ನೇ ಇಸವಿಯಲ್ಲಿ ಮದರಾಸಿಗೆ ಬಂದಿದ್ದಾಗ ಶಿಬಿರದಲ್ಲಿ ಪ್ರತಿನಿತ್ಯವೂ ಸಾವಿರಾರು ಜನರಿಗೆ ಮೃಷ್ಟಾನ್ನ ಭೋಜನ ನಡೆಯು ತ್ತಿತ್ತು. ಅವರು ಮಾತ್ರ ತಮ್ಮ ೫ ಪದಾರ್ಥಗಳನ್ನು ಬಿಟ್ಟು ಹೆಚ್ಚಿಗೆ ತೆಗೆದುಕೊಳ್ಳುತ್ತಿರಲಿಲ್ಲ. ಊಟಕ್ಕೆ ಏರ್ಪಡಿಸಿದ್ದ ವರ್ತಕರನ್ನು ಕುರಿತು ಅವರು ಒಂದು ಸಲ ಹಾಸ್ಯವಾಗಿ. "ಎಲ್ಲರಿಗೂ ಎಲ್ಲವನ್ನು ಬಡಿಸುತ್ತೀರಿ ನನಗೆ ಯಾಕೆ ಇಲ್ಲ" ಎಂದರು. ಸೇವಾಗ್ರಾಮವನ್ನು ನೋಡಿದವರಿಗೆ ಸಹ ಗಾಂಧಿಯವರ ವ್ರತನಿಯಮ ಅವರ ಅನುಯಾಯಿಗಳಿಗೆ ಇಲ್ಲವೆಂಬುದು ಗೊತ್ತಾಗುತ್ತಿದ್ದಿತು.

ಒಂದು ದೃಷ್ಟಿಯಿಂದ ನೋಡಿದರೆ ಅನಾಸಕ್ತಿಯ ಹಾಸ್ಯ ಮನೋ ಭಾವವೇ ಗಾಂಧಿಯವರ ಎಲ್ಲಾ ಜಯದ ಮೂಲಕಾರಣ ಆದುದ ರಿಂದಲೇ ಅವರು ಭಗವದ್ಗೀತೆಯನ್ನು ಅನಾಸಕ್ತಿ ಯೋಗ ಎಂದು ಕರೆ ದಿದ್ದಾರೆ. ಯಾವ ಕಾರ್ಯವನ್ನೂ ಪ್ರಾರಂಭಿಸುವುದೂ ನಿಲ್ಲಿಸುವುದೂ ಅವರಿಗೆ ಅಷ್ಟು ಸುಲಭವಾಗಿತ್ತು ಸಬರಮತಿ ಆಶ್ರಮವನ್ನು ಒಂದೇ ಏಟಿಗೆ ಸುಲಭವಾಗಿ ತ್ಯಜಿಸಿಬಿಟ್ಟರು. ಹರಿಜನ ಪತ್ರಿಕೆಗಳನ್ನು ನಿಲ್ಲಿಸು ವುದೂ ಪ್ರಾರಂಭಿಸುವುದೂ ಅವರಿಗೆ ಅಷ್ಟೇ ಸುಲಭವಾಗಿರುತ್ತಿದ್ದವು. ೪೨ ನೆ ಚಳುವಳಿಯಲ್ಲಿ ಎಲ್ಲವೂ ಬಲಿಯಾಗಲಿ ಎಂದು ದೃಢಮನಸ್ಸಿ ನಿಂದ ಹೇಳಿದರು. ಫಲದ ಆಸೆ ಇಟ್ಟುಕೊಂಡವನಿಗೆ ಜಮಾ ಖರ್ಚಿನ ಲೆಕ್ಕದವನಿಗೆ, ಇದು ಸಾಧ್ಯವಿಲ್ಲ. ಈ ಜಗತ್ತಿನ ಸಂಸಾರ ಸಂಪರ್ಕ ದಿಂದ ಮೇಲೆದ್ದು, ಜಗತ್ತಿನ ಮಾರ್ಗ ಜಗತ್ತಿಗೆ ನನ್ನ ಮಾರ್ಗ ನನಗೆ ಎಂದುಕೊಂಡು, ಭವಿಷ್ಯದ ದಿವ್ಯದರ್ಶನ ಹೊಂದಿದವರಿಗೆ ಮಾತ್ರ ಇದು

ಸಾಧ್ಯ. ಗಾಂಧಿಯವರು ಮತ್ತೊಬ್ಬನ ತಪ್ಪನ್ನು ಹುಡುಕುವುದಕ್ಕಿಂತ ಹೆಚ್ಚಾಗಿ ತಮ್ಮ ತಪ್ಪನ್ನೇ ಹುಡುಕಿಕೊಳ್ಳುತ್ತಿದ್ದರು. ಅವರು ಯಾವಾಗಲೂ ತಮ್ಮ ಎದುರಾಳಿ ತಮ್ಮನ್ನೂ ತಮ್ಮ ಕಾರ್ಯವನ್ನೂ ಕುರಿತು ಏನು ಬರೆಯುತ್ತಾನೆಂಬುದನ್ನು ತಪ್ಪದೆ ಓದುತ್ತಿದ್ದರು. ಅವರಿಗೆ ಅದರಿಂದ ಕೋಪಬರುತ್ತಿರಲಿಲ್ಲ. "ನಮ್ಮನ್ನು ನಾವು ತಿದ್ದಿಕೊಳ್ಳಲು ಇದೇ ಸರಿಯಾದ ಮಾರ್ಗ" ಎಂದು ಅವರು ಹೇಳುತ್ತಿದ್ದರು. ಅವರು ಬರೆಯಲು ಕುಳಿತುಕೊಳ್ಳುತ್ತಿದ್ದ ಕಾಲುಮಣೆಯ ಮುಂದೆ, ಟೈಂಸ್ ಆಫ್ ಇಂಡಿಯದಲ್ಲಿ ಒಂದು ಸಲ ಬಂದ ಈ ಅಮೃತವಾಕ್ಯ ಮಾರ್ಗದರ್ಶಕವಾಗಿರುತ್ತಿತ್ತು. "ನಿನ್ನದು ಸರಿಯಾಗಿದ್ದರೆ ನೀನು ಕೋಪಿಸಿಕೊಳ್ಳಬೇಕಾಗಿಲ್ಲ. ನಿನ್ನದು ಸರಿಯಾಗಿಲ್ಲದಿದ್ದರೆ ನೀನು ಕೋಪಿಸಿಕೊಂಡರೆ ನಿನಗೆ ಒಳ್ಳೆಯದಾಗುವುದಿಲ್ಲ." ಅವರ ವಾದಸರಣಿಯಲ್ಲಿ ಕೋಪ ಕಾವು ದಪ್ಪದನಿ ಪಟಾಸು ಯಾವುದು ಇರುತ್ತಿರಲಿಲ್ಲ. ಮಾತನಾಡಲು ಅವರು ಎದುರಾಳಿಗಳಿಗೇ ಹೆಚ್ಚು ಅವಕಾಶ ಕೊಡುತ್ತಿದ್ದರು. ಪಾದ್ರಿ ಎಲ್ವಿನ್‌ರು 'ಮೂರ್ಖರು ಹರಟುತ್ತಿದ್ದರೂ ಸುಮ್ಮನೆ ಸಹಿಸಿಕೊಂಡಿರುವ ಶಕ್ತಿ ಅವರಿಗಿದೆ" ಎಂದಿದ್ದಾರೆ.

ಆದರೆ ಗಾಂಧಿಯವರ ವಿನೋದ ಕಾಲಾನುಗುಣವಾಗಿರುತ್ತಿದ್ದಿತು ಅದು ಅಪ್ರಕೃತವಾದುದಾಗಲಿ ವಿರಸವಾದುದಾಗಲಿ ಎಂದಿಗೂ ಆಗುತ್ತಿರಲಿಲ್ಲ. ಯಾವ ಸಭಾ ಕಾರ್ಯದಲ್ಲಿ ಅವರು ತೊಡಗಿದರೂ ಅವರು ಬಂದ ಕೂಡಲೇ ಪ್ರಾರಂಭದಲ್ಲಿ ಅಥವ ನಡುವೆ ಏನಾದರೂ ಹಾಸ್ಯ ಪ್ರಾರಂಭವಾಗಿ, ಸಭೆ ನಗೆಯಲ್ಲಿ ತೇಲುತ್ತಿದ್ದಿತು. ಆದರೆ ಆ ನಗುವು ಕೇವಲ ಒಂದು ನಿಮಿಷ ಮಾತ್ರ ಅದು ಸಭಾ ಕಾರ್ಯವನ್ನು ಭಂಗಪಡಿಸಲು ಅವರು ಅವಕಾಶಕೊಡುತ್ತಿಲ್ಲ. ತತ್‌ಕ್ಷಣ "ಇನ್ನು ಸಾಕು ಕೆಲಸಕ್ಕೆ ತೊಡಗೋಣ" ಎನ್ನುತ್ತಿದ್ದರು. ಕಸ್ತೂರಿಬಾ ರಾಷ್ಟ್ರೀಯ ಸ್ಮಾರಕನಿಧಿಗಾಗಿ ದೇಶ ಒಂದು ಕೋಟಿರೂಪಾಯಿಗಳನ್ನು ಸಂಗ್ರಹಿಸಿ ವಾರ್ಧಾದಲ್ಲಿ ಮಹಾತ್ಮರಿಗೆ ಅರ್ಪಿಸಿತಷ್ಟೆ. ಕೋಟಿ ರೂಪಾಯಿಗಳ ಚೆಕ್ಕನ್ನು ಮಹಾತ್ಮ ಗಾಂಧಿಯವರಿಗೆ ಶ್ರೀಮತಿ ಸರೋಜಿನಿನಾಯ್ಡುರವರು ಅರ್ಪಿಸಲು ಎದ್ದು ನಿಂತು ಚೆಕ್ಕನ್ನು ಕೈಯ್ಯಲ್ಲಿ ಹಿಡಿದುಕೊಂಡು "ಮಹಾತ್ಮಜಿ ಇದನ್ನು ಹಾರಿಸಿ

ಕೊಂಡು ನಾನು ಓಡಿಬಿಟ್ಟರೆ ನೀವು ಏನು ಮಾಡುವಿರಿ ?" ಎಂದರು. ಗಾಂಧಿಯವರು ನಗುತ್ತಾ "ನೀನು ಅಂತಹ ಗಟ್ಟಿಗಿತ್ತಿಯೇ ಹೌದು" ಎಂದರು. ಮುಂದಿನ ನಿಮಿಷದಲ್ಲಿಯೇ ಗಾಂಧಿಯವರ ಮುಖಭಾವ ಗಂಭೀರವಾಯಿತು. ಅವರು "ದೇಶವು ನಮ್ಮ ಮೇಲೆ ಈ ಕೋಟಿ ರೂಪಾಯಿಗಳ ಮೂಲಕ ಹೊರಿಸಿರುವ ಜವಾಬ್ದಾರಿ ಗುರುತರವಾದುದು" ಎಂದು ಕಸ್ತೂರಿಬಾನಿಧಿಯ ವ್ಯವಸ್ಥೆಯನ್ನು ವಿವರಿಸತೊಡಗಿದರು. ಆ ಮಾತಿನ ಜತೆಯಲ್ಲಿಯೇ ಆವರ ಮುಖ ಭಾವ ಗಂಭೀರವಾಗುತ್ತಿದ್ದಿತು ಆನಂತರ ಹಾಸ್ಯ ವಿನೋದಗಳಲ್ಲಿ ತೊಡಗಲು ಯಾರಿಗೂ ಧೈರ್ಯವಿರುತ್ತಿರಲಿಲ್ಲ ಒಂದು ಸಲ ಲೌಡ್‌ಸ್ಪೀಕರು ನಿಂತುಹೋದಾಗ "ನಾಮಕಾ ಲೌಡ್‌ಸ್ಪೀಕರ್ ಕಾಮ್‌ಕಾನಹಿ" ಎಂದರು. ಬೇಬಿ ಎಂಬ ಯುವತಿಗೆ ಹಿಂದುಸ್ಥಾನಿ ಪ್ರಚಾರಕ ಪದವಿ ಪ್ರಶಸ್ತಿ ಪತ್ರವನ್ನು ಕೊಡುವಾಗ "ಬೇಬಿ ಬಡಹೈ" ಎಂದರು. ಒಬ್ಬರು ಒಂದು ಚಿಕ್ಕ ತಕಲಿಯನ್ನು ಪೆಟ್ಟಿಗೆಯಲ್ಲಿ ಹಾಕಿಕೊಂಡು "ಇದು ರಾಮಧನು" ಎಂದರು ಗಾಂಧಿ ನಗುತ್ತಾ "ಇಂತಹ ಧನುಸ್ಸೆ ರಾಮನು ಉಪಯೋಗಿಸುತ್ತಿದ್ದುದು" ಎಂದರು! ಮದರಾಸಿನಲ್ಲಿ ಅವರು ತಮಗೆ ಕೊಟ್ಟಿದ್ದ ತಮ್ಮ ಚಿತ್ರವನ್ನೇ ನೋಡುತ್ತಾ ಹುಟ್ಟು ವ್ಯಾಪಾರಿಯಂತೆ, ಈ "ಚಿತ್ರದಲ್ಲಿ ಕಾಣುವಷ್ಟು ಈ ಮನುಷ್ಯ ಮುದುಕನಲ್ಲ ಹಲ್ಲಿಲ್ಲದಿದ್ದರೂ ಎಷ್ಟು ಲಕ್ಷಣವಾಗಿದ್ದಾನೆ. ನೋಡಿ ಹೋಗಿಬಿಡುತ್ತೆ. ಹರಾಜಿನಲ್ಲಿ ಕೂಗಿ" ಎಂದು ಹರಾಜುಮಾಡುತ್ತಿದ್ದರು ಅದು ಕಲೆಗಾರರ ಸಮ್ಮೇಳನವಾಗಿತ್ತು. ಆ ಸಮ್ಮೇಳನದ ಮಂಟಪಕ್ಕೆ ಹೊರಗಿನಿಂದ ಅನೇಕ ವಿದ್ಯಾರ್ಥಿಗಳು ನುಗ್ಗುವುದನ್ನು ಸ್ವಯಂ ಸೇವಕರು ತಡೆಯುತ್ತಿದ್ದರು. ಅದನ್ನು ನೋಡಿ ಗಾಂಧಿ "ನಿಮ್ಮಲ್ಲಿ ದುಡ್ಡಿರುವವರಿದ್ದರೆ ಬನ್ನಿ" ಎಂದು ಕೂಗಿದರು. ಮೂನ್ನೂರೈವತ್ತು ರೂಪಾಯಿನ ಮೇಲೆ ಚಿತ್ರದ ಬೆಲೆ ಏರದುದರಿಂದ ನಗುತ್ತಾ "ಇದು ಕಲೆಗಾರರ ಮತ್ತು ಲೇಖಕರ ಗೋಷ್ಠಿ. ಇಲ್ಲಿ ಹಣ ಹೆಚ್ಚಾಗಿಲ್ಲ" ಎಂದರು. ಆದರೆ ಗಾಂಧಿ ಪ್ರಾರ್ಥನಾಮಂದಿರದಲ್ಲಿ ವಿನೋದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಪ್ರಾರ್ಥನೆಯ ಸಂದರ್ಭದಲ್ಲಿ ಭಗವಂತನನ್ನು ಧ್ಯಾನಿಸುವುದನ್ನು ಹುಡುಗರು ಮಕ್ಕಳಿಗೆ ಸಹ ಹೇಳಿಕೊಡಬೇಕೆಂದು, ಅವರು ಬೋಧಿಸುತ್ತಿದ್ದರು.

ವೊನ್ನೆ ಗಾಂಧಿಯವರ ಮರಣಕ್ಕೆ ಮುಂಚೆ, ಒಂದು ದಿನ ಪ್ರಾರ್ಥನೆಯ ಸಮಯದಲ್ಲಿ ನೆರದಿದ್ದವರು ತಾಳಲಬದ್ಧವಾಗಿ ಹಾಡದೆ ವಿಕಾರವಾಗಿ ಹಾಡಿದುದರಿಂದ, ಅಭಾ ಗಾಂಧಿ ಮತ್ತು ತೋತಾ ಗಾಂಧಿ ಪ್ರಾರ್ಥನೆಯ ನಡುವೆ ನಕ್ಕುಬಿಟ್ಟರು. ಆದರೆ ಗಾಂಧಿಯವರು ಮರುದಿವಸ ಅವರಿಂದ ಪ್ರಾರ್ಥನಾಸಭೆಯಲ್ಲಿ ಕ್ಷಮಾಪಣೆ ಕೇಳಿಸಿದರು.

ತಾವು ಮಾಡುತ್ತಿದ್ದ ಎಲ್ಲ ಕಾರ್ಯಗಳನ್ನೂ ಗಾಂಧಿಯವರು ನೀತಿಯ ಅಳತೆಕೋಲಿನಿಂದಲೇ ಅಳೆಯುತ್ತಿದ್ದರು. ಸರಿಯೋ ತಪ್ಪೋ ಎಂಬುದನ್ನು ನೀತಿಯ ದೃಷ್ಟಿಯಿಂದ ತೀರ್ಮಾನಿಸಿ, ಅನಂತರ ಅದಕ್ಕೆ ಅನುಸಾರವಾದ ವಾದಸರಣಿಯನ್ನು ಹೂಡುತ್ತಿದ್ದರು. ಒಂದೊಂದು ಸಲ ಆ ವಾದ, ತೃಪ್ತಿಯನ್ನುಂಟುಮಾಡುತ್ತಿರಲಿಲ್ಲ. "ನೀತಿಯ ಮಟ್ಟದಲ್ಲಿ ತೀರ್ಮಾನವನ್ನು ಕೈಕೊಂಡ ಗಾಂಧಿಯೇ ಬೇರೆ. ಅದಕ್ಕೆ ಕಾರಣಗಳನ್ನು ಜೋಡಿಸುತ್ತಿರುವ ಗಾಂಧಿಯೇ ಬೇರೆ. ತೀರ್ಮಾನವನ್ನು ತೆಗೆದುಕೊಂಡ ಗಾಂಧಿ ಮಹನೀಯ. ಆದರೆ ಈ ವಾದ ಸರಣಿತೃಪ್ತಿಕರವಾಗಿಲ್ಲ" ಎಂಬಂತೆ ತೋರುತ್ತಿದ್ದಿತು. ಸ್ವಾಮಿ ಸತ್ಯದೇವ್‌ರು ಆಶ್ರಮದಲ್ಲಿ ಕೆಲಸಗಾರರಾಗಿ ಸೇರುತ್ತೇವೆಂದು ಹೇಳಿದಾಗ ಗಾಂಧಿ " ನೀವು ಸನ್ಯಾಸಿಯ ಬಟ್ಟೆಯನ್ನು ಬದಲಾಯಿಸಿದರೆ ಆಗಬಹುದು " ಎಂದರು. ಸ್ವಾಮಿ ಸತ್ಯದೇವರು ಅದು ಆವಶ್ಯಕವಲ್ಲವೆಂದು ವಾದಿಸಿದಾಗ, ಗಾಂಧಿ ಹೀಗೆ ಹೇಳಿದರು. " ನಾವು ಇರುವುದು ಸೇವೆಮಾಡುವುದಕ್ಕೇ ಹೊರತು ಮಾಡಿಸಿಕೊಳ್ಳುವುದಕ್ಕಲ್ಲ. ನಮ್ಮ ದೇಶದಲ್ಲಿ ಸನ್ಯಾಸಿಗಳು ಸೇವಕರಾಗುವುದು ಸಾಧ್ಯವಿಲ್ಲ. ಉದಾಹರಣೆಗೆ, ನೀವು ಝಾಡಮಾಲಿಯಾದರೆ ಜನ ಸಹಿಸುತ್ತಾರೆಯೇ? ಇಲ್ಲ."—ಅಂತೂ ಸತ್ಯದೇವರು ಕಾವಿಬಟ್ಟೆ ಬಿಟ್ಟು ಆಶ್ರಮವನ್ನು ಸೇರಲಿಲ್ಲ

* * * *

ಮಹಾತ್ಮಗಾಂಧಿಯವರ ತುಂಬಿದ ಬಾಳಿನಲ್ಲಿ, ಕರುಣೆ, ಪರಹಿತಗಳೇ ಮುಖ್ಯ ಗುರಿಗಳು. ಅವರ ಪ್ರತಿಯೊಂದು ಕಾರ್ಯದಲ್ಲಿಯೂ ಅವರ ಮನುಷ್ಯಸ್ವಭಾವದ ಜ್ಞಾನ ಒಡೆಮು ಕಾಣುತ್ತಿತ್ತು. ಒಬ್ಬ ಹೆಣ್ಣಿನ ತಂದೆ ತನ್ನ ಮಗಳನ್ನು ಒಂದು ವರನಿಗೆ ಕೊಡಬೇಕಾಗಿತ್ತು. ವರನು

ಆ ಹುಡುಗಿಯನ್ನು ಮದುವೆಯಾಗಲು ಏನು ಮಾಡಿದರೂ ಒಪ್ಪಿರಲಿಲ್ಲ. ವಧೂವರರ ತಂದೆಗಳಿಬ್ಬರೂ ಗಾಂಧಿಯವರಿಗೆ ಗೊತ್ತು. ಹೆಣ್ಣಿನ ತಂದೆ, ಗಾಂಧಿಯವರಲ್ಲಿ ಬಂದು, " ನೀವು ಏನಾದರೂ ಮಾಡಿ ಗಂಡನ್ನು ಈ ಮದುವೆಗೆ ಒಪ್ಪಿಸಬೇಕು " ಎಂದು ಕೇಳಿಕೊಂಡಿದ್ದರು. ಗಾಂಧಿ ಗಂಡನ್ನು ಕರೆಸಿದರು. ಮೊದಮೊದಲು ಆತ ಹೆಣ್ಣನ್ನು ವಿವಾಹವಾಗಲು ಒಪ್ಪಲಿಲ್ಲ. ಗಾಂಧಿ ಅವನಿಗೆ ಮೂರುದಿನ ಹಗಲು ರಾತ್ರಿ ಬೋಧಿಸಿದರು. ಕೊನೆಯಲ್ಲಿ ಆತ ಬೇಸರಿಕೆಯಿಂದಲೋ ಅಥವಾ ಗಾಂಧಿಯವರಲ್ಲಿ ತನಗಿದ್ದ ಗೌರವದಿಂದಲೋ, ಅಂತೂ ಆ ಹೆಣ್ಣನ್ನೇ ಮದುವೆಯಾಗಲು ಒಪ್ಪಿ ಗಾಂಧಿಯವರ ಕೈಯಿಂದ ಪಾರಾದನು.

ಅನಂತರ ಆ ದಿನವೆಲ್ಲ ಗಾಂಧಿ ಯೋಚಿಸಿದರು. ಹೆಣ್ಣಿನ ತಂದೆ ಬಂದ ಕೂಡಲೇ " ಅಯ್ಯಾ, ವರನೇನೋ ಒಪ್ಪಿದ. ಆದರೆ ಈ ಬಲಾತ್ಕಾರ ವಿವಾಹದಿಂದ ಪ್ರಯೋಜನವೇನು ? ಈ ವಿವಾಹ ಬೇಡ. ಇದೂ ಪ್ರಾಣಿದಯೆ. ನಾವು ನಾಲ್ಕು ಕಾಲಿನ ಗೋವುಗಳನ್ನು ಮಾತ್ರ ರಕ್ಷಿಸಿದರೆ ಸಾಲದು. ಎರಡು ಕಾಲಿನ ಗೋವುಗಳನ್ನೂ ರಕ್ಷಿಸಬೇಕು." ಎಂದರು. ವಧುವಿನ ತಂದೆಯೂ ವರನೂ ಇಬ್ಬರೂ ಸಂತುಷ್ಟರಾಗಿ ತಮ್ಮ ತಮ್ಮ ದಾರಿ ಹಿಡಿದರು.

* * * *

ದೇಶದ ಕಾರ್ಯಮಾಡುವವನಿಗೆ ವಿಶ್ರಾಂತಿ ಅಥವ ಮನೋರಂಜನೆಯು, ದೇಶಕಾರ್ಯಕ್ಕಿಂತ ಹೆಚ್ಚು ಪ್ರಾಮುಖ್ಯವಾಗಬಾರದು. ೧೯೨೭ ನೆ ಇಸವಿಯಲ್ಲಿ ಗಾಂಧಿ ನಂದಿಗೆ ಬಂದಿದ್ದರು. ಜತೆಯಲ್ಲಿ ಅವರ ನೆರಳಾದ ಮಹದೇವ್ ದೇಶಾಯಿ ಸಹ ಇದ್ದರು. ದೇಶಾಯಿಯವರಿಗೆ, ಇತರ ಸ್ನೇಹಿತರ ಜತೆಯಲ್ಲಿ ಗೇರುಸೊಪ್ಪವನ್ನೂ ನೋಡಿಕೊಂಡು ಬರಬೇಕೆಂಬ ಆಸೆಯಿತ್ತು. ಆದರೆ ಆಗ ಅವರು ಯಂಗ್ ಇಂಡಿಯಾ ಪತ್ರಿಕೆಗೆ ಬಹಳ ಕೆಲಸಮಾಡಬೇಕಾಗಿದ್ದುದರಿಂದ ಗಾಂಧಿ ಅವರನ್ನು ಹೋಗಗೊಡಲಿಲ್ಲ. ಇತರ ಮಿತ್ರರು ಹೊರಟುಹೋದರು. ಕಲಾವಂತ ಸೌಂದರ್ಯಪ್ರಿಯ ದೇಶಾಯಿಯು ಮಾಡಿದ ತ್ಯಾಗ ಗಾಂಧಿಯವರಿಗೆ ಅರ್ಥವಾಗದೆ ಇರಲಿಲ್ಲ. ಆಮೇಲೆ ಮತ್ತೊಂದು ಸಲ ದೇಶಾಯಿಯವರು ಮೈಸೂರು ದೇಶಕ್ಕೆ

ಮೈಸೂರು ಕಾಂಗ್ರೆಸ್ಸಿಗೂ ಸರ್ಕಾರಕ್ಕೂ ರಾಜಿಸಂಧಾನಕ್ಕಾಗಿ ಬಂದಾಗ ಗಾಂಧಿಯವರೇ ಸರ್ ಮಿರ್ಜಾರಿಗೆ ದೇಶಾಯಿಯವರನ್ನೂ ಗೇರು ಸೊಪ್ಪಕ್ಕೆ ಕರೆದುಕೊಂಡು ಹೋಗುವಂತೆ ಬರೆದರು.

ಮತ್ತೊಂದು ಸಲ ರಾತ್ರಿಯೆಲ್ಲ ದೇಶಾಯಿ ಒಬ್ಬರೇ ಕೆಲಸಮಾಡಿ ಬೆಳಗಿನಜಾವ ಒಂದುಗಳಿಗೆ ಮಾತ್ರ ಮಲಗಿದರು. ಅವರು ಏಳುವವೇಳೆಗೆ ಗಾಂಧಿಯವರೇ, ಅವರಿಗೆ ಪ್ರಿಯವಾದ ಟೀ ಮಾಡಿಟ್ಟುಕೊಂಡು ಸಿದ್ಧರಾಗಿ ಕುಳಿತಿದ್ದರು. ದೇಸಾಯಿಗೆ ತುಂಬ ಆನಂದವೂ ಸಂಕೋಚವೂ ಆಯಿತು.

* * * *

ಪ್ರೇಮದಿಂದ ಯಾರನ್ನು ಬೇಕಾದರೂ ಗೆಲ್ಲಬಹುದೆಂಬುದನ್ನು ಗಾಂಧಿ ತಮ್ಮ ಬಾಳಿನಲ್ಲಿ ಪದೇ ಪದೇ ತೋರಿಸಿದ್ದರು. ಅವರನ್ನು ಮೊದಲಸಲ ಬಂಧಿಸಿ ಯರವಾಡ ಸೆರೆಮನೆಯಲ್ಲಿಟ್ಟಾಗ, ಸರ್ಕಾರಕ್ಕೆ ದೇಶದಲ್ಲಿ ಯಾವ ದಂಗೆಯುಂಟಾಗುವುದೋ ಎಂಬ ಭಯ ವಿಶೇಷ ವಾಗಿತ್ತು. ಗಾಂಧಿಯವರ ಕಾವಲಿಗೆ ಭಾರತೀಯರಾರನ್ನೂ ನಿಯಮಿಸದೆ, ಸರ್ಕಾರ ಒಬ್ಬ ಮೂಗ ನಿಗ್ರೋವನ್ನು ನಿಯಮಿಸಿತು. ಆತನನ್ನು ನೋಡಿದರೇ ಭಯವಾಗುತ್ತಿತ್ತು. ಆತ ಯಾರೊಂದಿಗೂ ಮಾತ ನಾಡುವ ಅಥವ ಪಳುಗುವ ಸೂಚನೆಯನ್ನೂ ತೋರಿಸಿರಲಿಲ್ಲ. ಗಾಂಧಿ ಯವರ ಪ್ರಭಾವ ಅವನಮೇಲೆ ಏನೂ ನಡೆಯುವುದಿಲ್ಲವೆಂಬುದು ಸರ್ಕಾ ರಕ್ಕೆ ಖಚಿತವಾಗಿ ಗೊತ್ತಾಗಿತ್ತು. ಆದರೆ ಇದ್ದಕ್ಕಿದ್ದಂತೆ ಒಂದುದಿನ ಸರ್ಕಾರದ ಲೆಕ್ಕಾಚಾರವೆಲ್ಲ ತಲೆಕೆಳಗಾಯಿತು.

ನೀಗ್ರೋ ಕಾವಲುಗಾರನನ್ನು, ಒಂದುದಿನ ನೆರಮನೆಯಲ್ಲಿ ಒಂದು ಭಾರಿ ಚೇಳು ಕಡಿಯಿತು. ಅವನು ನೀಗ್ರೊ ಆಗಿ ಅವನ ಚರ್ಮ ಕಪ್ಪಾಗಿದ್ದರೇನು ? ಅವನು ಮನುಷ್ಯನಲ್ಲವೆ ? ಅವನಿಗೆ ಬಾಧೆ ಇಲ್ಲವೆ ? ನೋವನ್ನು ತಾಳಲಾರದೆ ಕಾವಲುಗಾರ ಒಂದೇ ಸಮನೆ ಬಡಿದುಕೊಳ್ಳತೊಡಗಿದ. ಅಷ್ಟು ಶಕ್ತನಾಗಿ ಒರಟನಾಗಿದ್ದವನ ದೀನತೆಯನ್ನು ನೋಡಿ ಎಲ್ಲರಿಗೂ ಕನಿಕರವುಂಟಾಯಿತು. ಆದರೆ ಅವನ ಮುಖಭಾವ ಎಲ್ಲರನ್ನೂ ಹೆದರಿಸುವಂತೆಯೇ ಇದ್ದುದರಿಂದ ಯಾರೊಬ್ಬರೂ ಅವನ ಸಹಾಯಕ್ಕೆ ಬರಲಿಲ್ಲ.

ಅವನು ಯಾರೊಂದಿಗೂ ಪಳಗಿಲ್ಲದೆ ಇದ್ದುದರಿಂದ ಗಾಂಧಿಯವರು ಅವನ ಹತ್ತಿರ ಹೋದರು. ಹೆದರುತ್ತಿದ್ದ ಆವನನ್ನು ಸಮಾಧಾನಪಡಿಸಿ, ಅವನ ಗಾಯಕ್ಕೆ ತುಟಿಯಿಟ್ಟು, ವಿಷರಕ್ತವನ್ನು ಹತ್ತಾರು ಸಲ ಹೀರಿ ಹೀರಿ ಹೊರಕ್ಕೆ ಉಗುಳಿದರು. ಅನಂತರ ಗಾಯಕ್ಕೆ ಬಟ್ಟೆ ಕಟ್ಟಿ, ಅವರಿಗೆ ಗೊತ್ತಿದ್ದ ಪ್ರಕೃತಿ ವೈದ್ಯ ಯಾವುದನ್ನೋ ಮಾಡಿದರು. ಈ ಉಪಚಾರಗಳಿಂದ ಅವನ ನೋವು ಬಹು ಕಡಿಮೆಯಾಯಿತು. ಗಾಂಧಿಯವರ ಹೃದಯದ ಅಪಾರಕರುಣೆ ಅವನ ಪಶುತ್ವವನ್ನೂ ಜಯಿಸಿತು. ತಾನೂ ಒಬ್ಬ ಮನುಷ್ಯ ಎಂಬ ಆತ್ಮ ಪ್ರತ್ಯಯ ಅವನ ಮನಸ್ಸಿನಲ್ಲಿ ಮೂಡುವಂತೆ ಗಾಂಧಿ ಮಾಡಿದರು ಅಲ್ಲಿಂದ ಮುಂದೆ ಅವನು ಎಂದೆಂದಿಗೂ ಗಾಂಧಿ ಭಕ್ತನೇ ಆದನು. ಯರವಾಡ ಸೆರೆಮನೆಯಿಂದ ಗಾಂಧಿಯವರು ಹೊರಟಾಗ ಅವನಷ್ಟು ದುಃಖಿತರಾದವರು ಮತ್ತಾರೂ ಇರಲಿಲ್ಲ.

* * * *

ಭಾರತದ ವೈಸರಾಯರಾಗಿದ್ದ ಲಾರ್ಡ್‌ವೆಲಿಂಗ್ಟನರು ಗಾಂಧಿಯವರನ್ನು ನೋಡಲು ಒಂದುಸಲ ಹಿಂದೆಗೆದುದು "ಗಾಂಧಿಯವರನ್ನು ನೋಡಿದವರು ಅವರ ದೇವತ್ವದ ಪ್ರಭಾವಕ್ಕೆ ಒಳಗಾಗಿ ಬಿಡುತ್ತಾರೆಂಬ" ಕಾರಣದಿಂದ ಗಾಂಧಿಯವರು ಎಲ್ಲಿ ಹೋದರೂ ಜನ, ಸಾಮಾನ್ಯವಾಗಿ ಅವರ ತಪಃ ಪ್ರಭಾವಕ್ಕೆ ಒಳಗಾಗಿಯೇ ಆಗುತ್ತಿದ್ದರು. ಯರವಾಡ ಸೆರೆಮನೆಯಲ್ಲಿ ಕ್ವಿನ್ ಎಂಬುವವರು ಸೂಪರಿಂಟೆಂಡೆಂಟ್‌ರಾಗಿದ್ದರು. ಅವರ ಸ್ವಭಾವ ಬಹಳ ಖಂಡಿತ (ಸ್ಟ್ರಿಕ್ಟ್) ಅವರಿಗೆ ಗುಜರಾತಿಯನ್ನು ಕಲಿಯಬೇಕೆಂದು ಆಸೆಯಾಯಿತು. ಗಾಂಧಿಯವರಂತಹ ಗುರು ದೊರೆಯಲು ಪುಣ್ಯಮಾಡಿರಬೇಕಷ್ಟೆ. ಕ್ವಿನ್, ಗಾಂಧಿಯವರಿಂದ ಗುಜರಾತಿ ಕಲಿತರು. ಸೆರೆಮನೆ ಬಿಡುವಾಗ, ಗಾಂಧಿಯವರಿಗೆ ಫ್ರೆಂಚ್‌ನಲ್ಲಿ ಆಸೆ ಎಂದು ತಿಳಿದು, ಕ್ವಿನ್, ಅವರಿಗೆ ಕೆಲವು ಫ್ರೆಂಚ್ ಪತ್ರಿಕೆಗಳನ್ನೂ ಸಂಕೋಚದಿಂದ ಕಾಣಿಕೆಯಾಗಿ ಅರ್ಪಿಸಿದರು. ಆ ಪ್ರೇಮಸೂಚನೆಯಿಂದ ಗಾಂಧಿ ಬಹಳ ತೃಪ್ತರಾದರು. ಹೊರಡುವಾಗ ಕ್ವಿನ್‌ರು, ಗಾಂಧಿಯವರನ್ನು ಕುರಿತು ನನಗೆ ಏನಾದರೂ ಒಂದು ಸಂದೇಶ ಕೊಡಿ " ಎಂದು ಕೇಳಿದರು. ಸೆರೆಮನೆಯ ಸೂಪರಿಂಟೆಂಡೆಂಟನ ಕಾರ್ಯ

ಬಹಳ ಕ್ರೂರವಾದುದು. ಆತ ಇಲ್ಲಿ ಬ್ರಿಟಿಷ್ ಸರ್ಕಾರದ ಪ್ರತಿನಿಧಿ-ಸೆರೆಮನೆಯಲ್ಲಿ ಆಗಿಂದಾಗ್ಗೆ, ಜನರನ್ನು ಗಲ್ಲಿಗೇರಿಸುವುದು ಸಹ ಅವನ ಕಾರ್ಯವಾಗಿತ್ತು. ಗಾಂಧಿ ಯೋಚಿಸಿ ಅವನಿಗೆ ಈ ಸಂದೇಶಕೊಟ್ಟರು. " ಸೆರೆಯಾಳುಗಳ ವಿಷಯದಲ್ಲಿ ಕರುಣೆಯುಳ್ಳವರಾಗಿ " Be kind to prisoners "

* * * *

ಗಾಂಧಿ ದಕ್ಷಿಣ ಆಫ್ರಿಕದಲ್ಲಿರುವಾಗ, ಒಬ್ಬ ಮುಸಲ್ಮಾನ ಅಡಿಗೆಯವನಿಗೆ ಇಂಗ್ಲಿಷ್ ಕಲಿಯಬೇಕೆಂದು ಆಸೆಯಾಯಿತು. ಅವನಿಗೆ ಇಂಗ್ಲಿಷ್ ಹೇಳಿಕೊಡಲು ಗಾಂಧಿ ಒಪ್ಪಿದರು. ಆದರೆ ನಿತ್ಯಾ ಗಾಂಧಿ ಇರುವಲ್ಲಿಗೆ ಬರಲು ಆ ಅಡಿಗೆಯವನಿಗೆ ಹೊತ್ತು ಇರಲಿಲ್ಲ. ಆಗ ಗಾಂಧಿಯೇ ಅವನಿರುವಲ್ಲಿಗೆ ನಿತ್ಯಾ ನಾಲ್ಕುಮೈಲಿ ನಡೆದುಕೊಂಡು ಹೋಗಿ ಅವನಿಗೆ ಪಾಠ ಹೇಳಿ ಬರುತ್ತಿದ್ದರು.

* * * *

ಮಹಾತ್ಮಾ ಗಾಂಧಿಯವರ ಆಶ್ರಮದಲ್ಲಿ ಅವರ ಅನುಗ್ರಹಬೇಡಿ ನಡೆಯುತ್ತಿದ್ದ ವಿವಾಹಗಳೆಲ್ಲ, ಸಾಮಾನ್ಯವಾಗಿ ಅಂತರ ಜಾತೀಯ ವಿವಾಹಗಳೇ ಆಗಿರುತ್ತಿದ್ದವು ಅಂತಹ ಸಂದರ್ಭಗಳಲ್ಲೆಲ್ಲ ಮಹಾತ್ಮಾ ಗಾಂಧಿಯವರು, ವಧೂವರರನ್ನು " ಹರಿಜನರಿಗೆ ಏನಾದರೂ ಕಾಣಿಕೆ ಕೊಡಿ " ಎಂದು ಕೇಳುತ್ತಿದ್ದರು. ಒಂದು ಸಲ ಹೀಗೆ ಕಾಣಿಕೆ ಕೇಳಿದಾಗ ವರನು "ನಾನೂ ಹರಿಜನ ನನ್ನ ಹೆಂಡತಿಯೂ ಹರಿಜನರವಳು. ಕಾಣಿಕೆ ಕೊಡಲು ನಮ್ಮಲ್ಲಿ ಏನೂ ಇಲ್ಲ " ಎಂದನು. ಗಾಂಧಿ ಸಂತೋಷದಿಂದ ಆಶೀರ್ವಾದ ಮಾಡಿದರು.

* * * *

ಮಹಾತ್ಮಗಾಂಧಿಯವರ ಮೇಲೆ ಒಂದು ಸಲ ಹಾವು ಹತ್ತಿದ್ದಿತೆಂದು ಸಾಧಾರಣವಾಗಿ ಒಂದು ಕತೆ ಪ್ರಚಾರದಲ್ಲಿದೆ. ದಕ್ಷಿಣ ಆಫ್ರಿಕದಲ್ಲಿದ್ದಾಗಿನಿಂದಲೂ, ಅಹಿಂಸೆ ಮಹಾತ್ಮಗಾಂಧಿಯವರ ಆಶ್ರಮದ ಮುಖ್ಯ ನಿಯಮವಾಗಿತ್ತು. ಆಶ್ರಮದಲ್ಲಿ ಒಂದುಸಲ, ಒಂದು ಹಾವನ್ನು ಕೊಲ್ಲಬೇಕೇ ? ಬಿಡಬೇಕೇ ಎಂಬ ಒಂದು ಚರ್ಚೆ ಬಂದು, ಕೊನೆಗೆ ಆ ಹಾವು ತಾನಾಗಿಯೇ ಹೊರಟು ಹೋಯಿತೆಂದು, ಶ್ರೀ ಪೋಲಕ್ ಹೇಳಿದ್ದಾರೆ.

ಮತ್ತೊಂದು ಸಲ ಗಾಂಧಿಯವರು ಕುಳಿತ್ತಿದ್ದಾಗ ಅವರ ಬೆನ್ನಿನಮೇಲೆ ಒಂದು ಹಾವು ಹತ್ತಿತ್ತು. ಸಮೀಪದಲ್ಲಿದ್ದವರೊಬ್ಬರು ಗಾಬರಿಯಾಗದೆ "ಮಹಾತ್ಮಾಜಿ ನಿಮ್ಮ ಬೆನ್ನಿನಮೇಲೆ ಹಾವು ಇದೆ" ಎಂದರು. ಗಾಂಧಿಯವರು ಸ್ವಲ್ಪವೂ ಗಾಬರಿಗೊಳ್ಳದೆ "ನಮ್ಮಪಾಡಿಗೆ ನಾವು ನಮ್ಮ ಕೆಲಸಮಾಡುತ್ತಿರೋಣ. ಅದರ ಪಾಡಿಗೆ ಅದು ಹೋಗುವುದು" ಎಂದು ಹೇಳಿ ತಮ್ಮ ಕೆಲಸದಲ್ಲಿ ತೊಡಗಿದರು. ಹಾವು ಸ್ವಲ್ಪ ಹೊತ್ತಿನನಂತರ ಬಂದದಾರಿ ಹಿಡಿದು ಇಳಿದು ಹೋಯಿತು.

* * * *

ಭಾರತದ ಗುರಿ ಮತ್ತು ಧ್ಯೇಯವೇನೆಂಬುದನ್ನು ಮಹಾತ್ಮ ಗಾಂಧಿಯವರು ಏಷ್ಯನ್ ಸಮ್ಮೇಳನಕ್ಕೆ ಸೇರಿದ ಅಖಿಲ ಏಷಿಯ ರಾಷ್ಟ್ರಗಳ ಪ್ರತಿನಿಧಿಗಳಿಗೆ ತಾ|| ೨-೪-೧೯೪೭ರಲ್ಲಿ ಹೀಗೆ ವಿವರಿಸಿದರು.

"ಏಷಿಯರ ಸಂದೇಶವನ್ನೂ ನೀವು ಅರಿಯಬೇಕು. ಪಾಶ್ಚಾತ್ಯ ಕನ್ನಡಕದ ಮೂಲಕವೂ ಅಣುಬಾಂಬಿನ ಮೂಲಕವೂ ಇದು ಸಾಧ್ಯವಿಲ್ಲ. ಪಾಶ್ಚಾತ್ಯರಿಗೆ ನೀವು ಸಂದೇಶ ಕೊಡಬೇಕಾದರೆ ಅದು ಪ್ರೇಮದ ಮತ್ತು ಸತ್ಯದ ಸಂದೇಶವಾಗಿರಬೇಕು.

"ಭಾರತ ಪೂರ್ಣ ಸ್ವತಂತ್ರ. ಒಬ್ಬ ಯಜಮಾನನನ್ನು ಬದಲಾಯಿಸಿ ಮತ್ತೊಬ್ಬನನ್ನು ಇಟ್ಟುಕೊಳ್ಳುವುದಲ್ಲ ನಮ್ಮ ಗುರಿ. ನಮ್ಮ ದೇಶಕ್ಕೆ ನಾವೇ ಯಜಮಾನರು. ನಮ್ಮ ಕರ್ತವ್ಯವನ್ನು ಮಾಡಿ ಫಲವನ್ನು ದೇವರ ಕೈಲಿ ಬಿಡಬೇಕು. ತನ್ನ ಅದೃಷ್ಟದ ಶಿಲ್ಪಿ, ಮನುಷ್ಯನೇ ಎಂದು ಹೇಳುತ್ತಾರೆ. ನಮ್ಮನ್ನು ಮೀರಿದ ಜಗತ್‌ಶಕ್ತಿಯ ಅಧೀನಕ್ಕೆ ಒಳಗಾಗಿ ಮಾತ್ರ ಮನುಷ್ಯ ತನ್ನ ಅದೃಷ್ಟಶಿಲ್ಪಿ. ಆ ಶಕ್ತಿಯನ್ನು ನಾನು, ಅಲ್ಲ ಖುದಾ ದೇವರು ಎಂದು ಕರೆಯುವುದಿಲ್ಲ. ಸತ್ಯವೆಂದು ಕರೆಯುತ್ತೇನೆ.

"ಈ ಜಗತ್ತು ಒಂದು ಆಗಬೇಕು. ಇಲ್ಲದಿದ್ದರೆ ಇದರಲ್ಲಿ ಬಾಳಲು ನನಗೆ ಇಷ್ಟವಿಲ್ಲ. ಒಂದೇ ಗುರಿಯಿಂದ ಕೆಲಸಮಾಡಿದರೆ, ಈ ಕನಸು ಕಾರ್ಯಗತವಾಗುವುದರಲ್ಲಿ ಸಂಶಯವಿಲ್ಲ.

ನಾವು ಕಲಿಯುತ್ತಿರುವುದು ಇಂಗ್ಲಿಷ್ ಇತಿಹಾಸಕಾರರು ಬರೆದ ಚರಿತ್ರೆಗಳಿಂದ. ನಮ್ಮ ದೇಶದ ಚರಿತ್ರೆಯನ್ನು ನಮ್ಮ ಭಾಷೆಯಾದ

ಹಿಂದು ಸ್ಥಾನಿಯಲ್ಲಿ ನಾವು ಬರೆಯುತ್ತಿಲ್ಲ. ಭಾರತ ಈ ಸಾಂಸ್ಕೃತಿಕ ಗುಲಾಮಗಿರಿಗೆ ಒಳಗಾಗಿದೆ. ಜ್ಞಾನವು ಮೊದಲು ಪೂರ್ವದೇಶದಿಂದ ಪಶ್ಚಿಮಕ್ಕೆ ಹೋಯಿತು. ಈ ಜ್ಞಾನಿಗಳ ಪೈಕಿ ಮೊದಲನೆಯವನು ಜೊರಾಷ್ಟ್ರ. ಆತ ಪೂರ್ವದೇಶದವನು. ನಂತರ ಬುದ್ದ ಬಂದನು. ಬುದ್ಧನ ಹಿಂದೆ ಬಂದವರು ಯಾರು ! ಏಸುಕ್ರಿಸ್ತ ; ಕ್ರಿಸ್ತನಿಗೆ ಮೊದಲು ಮೋಸಸ್ ; ಮೋಸಸ್ ಜನಿಸಿದ್ದು ಈಜಿಪ್ಟಿನಲ್ಲಿ; ಅನಂತರ ಪೈಗಂಬರ್ರು ಬಂದನು. ಏಷಿಯದ ಜ್ಞಾನಿಗಳಿಗೆ ಸರಿಯಾದವರು ಜಗತ್ತಿನಲ್ಲಿ ಎಲ್ಲಿಯೂ ಇಲ್ಲ. ಕ್ರಿಸ್ತಧರ್ಮ ಪಶ್ಚಿಮ ದೇಶಕ್ಕೆ ಹೋದಮೇಲೆ ವಿಕಾರ ರೂಪವನ್ನು ತಾಳಿತು. ಅದನ್ನು ಕುರಿತು ನಾನು ಹೆಚ್ಚಿಗೆ ಹೇಳುವುದಿಲ್ಲ.

"ನೀವು ನೋಡುತ್ತಿರುವ ಈ ದೊಡ್ಡ ನಗರಗಳು ನಿಜವಾದ ಭಾರತವಲ್ಲ. ನಿಜವಾದ ಭಾನತವನ್ನು ನೀವು ನೋಡಬೇಕಾದರೆ ಏಳು ಲಕ್ಷ ಹಳ್ಳಿಗಳಲ್ಲಿರುವ ಬಡಜನರನ್ನು ನೋಡಬೇಕು."

"ನೀವು, ಪಾಶ್ಚಿಮಾತ್ಯ ದೇಶಗಳಿಗೆ ಒಂದು ಸಂದೇಶವನ್ನು ಕೊಡುವುದಾದರೆ ಆ ಸಂದೇಶ, ಸತ್ಯದ ಸಂದೇಶವಾಗಲಿ. ನಾನು ಬುದ್ಧಿಗೆ ಮಾತ್ರ ಹೇಳುವುದಿಲ್ಲ. ಹೃದಯವನ್ನು ಮುಟ್ಟಲು ಬಯಸು ತ್ತೇನೆ.

"ಇಂದು ಪಾಶ್ಚಿಮಾತ್ಯ ರಾಷ್ಟ್ರಗಳು ವಿವೇಕಕ್ಕಾಗಿ ಹಾತೊರೆಯು ತ್ತಿವೆ. ಹೆಚ್ಚುಹೆಚ್ಚಾಗಿ ಅಣುಬಾಂಬು, ಅವರಿಗೂ ಸಾಕಾಗಿದೆ. ಏಕೆಂದರೆ ಇದರಿಂದ ಪಾಶ್ಚಾತ್ಯರು ಮಾತ್ರವೇ ನಾಶಹೊಂದುವರೆಂದಲ್ಲ; ಜಗತ್ತೇ ನಾಶವಾಗುತ್ತದೆ. ಬೈಬಲ್‌ನಲ್ಲಿ ಹೇಳಿರುವ ಪೂರ್ಣಪ್ರಳಯ ಅದೇಯೆ. ಜಗತ್ತಿಗೆ ಈ ಕೇಡು ಮತ್ತು ಪಾಪವನ್ನು ತಿಳಿಸಿ. ನಮ್ಮ ನಿಮ್ಮ ಗುರುಗಳು ಏಷಿಯಾಕ್ಕೆ ಬೋಧಿಸಿರುವ ನಮ್ಮ ಆಸ್ತಿಯಾದ ಜ್ಞಾನ ಭಂಡಾರ ಇದೇಯೆ."

* * * *

ಈ ಮಹಾತ್ಮನ ಬಾಳು ನಮ್ಮ ನಿತ್ಯಜೀವನದಲ್ಲಿ ಹೆಜ್ಜೆಹೆಜ್ಜೆಗೂ ನಮ್ಮನ್ನು ನಡೆಸುವ ಬೆಳಕಾಗಲಿ. ಭಗವಂತನು ಭಾರತಕ್ಕೆ ಕೊಟ್ಟ ವರವನ್ನು ಆ ರೀತಿ ಸಾರ್ಥಕಪಡಿಸಿಕೊಳ್ಳೋಣ.

# ೨೦. ಮಹಾತ್ಮ ಗಾಂಧಿಯವರೂ ಭಾರತ ಸಂಸ್ಕೃತಿಯೂ

ಮಹಾತ್ಮ ಗಾಂಧಿಯವರಂತಹ ವಿಭೂತಿ ಪುರುಷರು ಯಾವ ಯುಗದಲ್ಲಿ ಜನಿಸಿದ್ದರೂ, ಆ ಆವಿರ್ಭಾವ ಆ ಯುಗದ ಅದ್ಭುತ ಸಂಗತಿ ಯಾಗುತ್ತಿತ್ತು. ಅದರಲ್ಲಿಯೂ ಯುದ್ಧೋನ್ಮತ್ತ ಸುಂದೋಪಸುಂದರ, ಜಗದ್ವಿನಾಶಕ ಅಸ್ತ್ರಗಳನ್ನು ಕಪಿಯ ಕೈಯ್ಯಿನ ಮಾಣಿಕ್ಯದಂತೆ ಹೊಂದಿ ರುವ, ತಮ್ಮ ಸ್ವಾರ್ಥ ಸಾಧನೆಗಾಗಿ ಯಾವ ನೀಚ ಮತ್ತು ಹಿಂಸಾ ಕಾರ್ಯವನ್ನೂ ಮಾಡಲು ಹಿಂಜರಿಯದಿರುವ, ಅಸುರರಿಂದ ಆವೃತವಾದ ಈ ಇಪ್ಪತ್ತನೆಯ ಶತಮಾನದಲ್ಲಿ, ಮಹಾತ್ಮಗಾಂಧಿಯವರು ದೇವಾ ಸುರರ ಜಗತ್ಪ್ರಳಯ ಹಿಂಸಾ ಯುದ್ಧವನ್ನು ತಡೆಯುವ, ಅಹಿಂಸೆಯ ಮೋಹಿನಿಯಾದುದು, ಮಾನವ ಜನಾಂಗದ ಸುಕೃತ. ಪುಣ್ಯಭೂಮಿಯೂ ವೇದಸಾದ ಶರೀರೆಯೂ ಗಿರಿ ವನ ಕಂದರ ಕುಂಜರ ಸಮೃದ್ಧೆಯೂ ಗಂಗಾ, ಯಮುನೆ, ಗೋದಾವರಿ, ಕಾವೇರಿ ತೀರ್ಥಗಳಿಂದ ಪುನೀತಳೂ ಆದ, ದೇವತೆಗಳ ಋಷಿಗಳ ಶಾಂತಿ ಸಾರ್ವಭೌಮರ ಯಮನಿಯಮ ಪ್ರಾಣಾಯಾಮನಿರತ ಯೋಗಿಗಳ ನೆಲೆವೀಡಾದ ಭಾರತದಲ್ಲಿ, ಗಾಂಧಿ ಯವರು ಜನ್ಮಿಸಿದುದು ಸ್ವಾಭಾವಿಕವೂ ಪ್ರಕೃತಿನಿಯಮಾನುಸಾರವೂ ಆಗಿದೆ.

ಭಾರತವು ಧರ್ಮಗಳ ತವರಮನೆ. ಆಧ್ಯಾತ್ಮಸಾಧಕರ ಪ್ರಯೋಗ ಶಾಲೆ; ನಾನಾ ಧರ್ಮಗಳು ದರ್ಶನಗಳು ಮತಗಳು, ತತ್ಪ್ರೋಪಾಸಕರು ಸಮರಸವಾಗುವ ರಂಗಸ್ಥಳ. ಇಲ್ಲಿಯವರ ಸಾಧನೆಯಲ್ಲಿ ದೃಷ್ಟಿಗೋಚರ ವಾದ ಆತ್ಮರಹಿತ ಪಾಶವೀ ವೈಭವಕ್ಕಿಂತ, ಸತ್ಯಾನ್ವೇಷಣೆಯ ಸನ್ಮಾರ್ಗ ಆತ್ಮಮಾರ್ಗಕ್ಕೆ, ಪ್ರಾಶಸ್ತ್ಯ ಹೆಚ್ಚು. ಐಹಿಕ ವ್ಯಾಪಾರವನ್ನೂ ಇಲ್ಲಿಯ ಶುಭವನ್ನೂ ಸಾಹಸ, ಧೈರ್ಯ, ತ್ಯಾಗ, ದೇಶಭಕ್ತಿಗಳನ್ನೂ ಭಾರ ತೀಯರು ಆಸ್ಥೆಯಿಂದ ಬೆಳೆಸಿಕೊಳ್ಳಲಿಲ್ಲವೆಂದಲ್ಲ. ಇಹದಲ್ಲಿ ಸುಖವಾದ ಬಾಳನ್ನು ಬಾಳಬೇಕೆಂಬುದು ಅವರ ಆಸೆಯಾಗಿತ್ತು. ಇಲ್ಲಿ ಸುಖ

ವಾಗಿರಬೇಕು, ಸಮೃದ್ಧವಾಗಿರಬೇಕು, ಧನವಂತರಾಗಿರಬೇಕು, ಅನ್ನ ಪೂರ್ಣವಾಗಿರಬೇಕು, ಶಿಷ್ಯ ಸಂಪೂರ್ಣರಾಗಿರಬೇಕು ಪಶು ಸಂಪೂರ್ಣ ರಾಗಿರಬೇಕು, ಅಷ್ಟಪುತ್ರ ಬಹು ಧನಸಂಪನ್ನರಾಗಿರಬೇಕು. ಮನುಷ್ಯನ ಬಾಳು ಸಂತಾನದಿಂದಲೇ ಪೂರ್ಣವಾಗುತ್ತದೆ. (ಪ್ರಜಯಾಹಿ ಮನುಷ್ಯಃ ಪೂರ್ಣಃ) ಈ ಐಹಿಕ ಸುಖ ಬೇಕು. ಆದರೆ ಮನುಷ್ಯ ಬರಿಯ ಆಹಾರ ಬಟ್ಟೆ ಸುಖಗಳ ಪ್ರಾಣಿಯಲ್ಲ. ಈ ಸುಖಗಳೆಲ್ಲ ಇದ್ದರೂ ಅವನಿಗೆ ಮನುಷ್ಯತ್ವ ಬರುವುದಿಲ್ಲ. ಮನುಷ್ಯತ್ವ ಆಹಾರ, ಬಟ್ಟೆ, ಒಳ್ಳೆಯ ಮನೆ ಇವುಗಳನ್ನೆಲ್ಲ ಮೀರಿದುದು. ಒಳ್ಳೆಯ ಮನೆಯಲ್ಲಿ ಕಟ್ಟಿಹಾಕಿದರೆ ಒಂದು ದನವೂ ಸಹ ಇರುತ್ತದೆ. ಆದರೆ ಭಾರತೀಯರು ದೇಹ ಸುಖವನ್ನು ಇಂದ್ರಿಯಾತೀತವಾದ ಆತ್ಮದ ಸಾಧನೆಗಿಂತ ಹೆಚ್ಚೆಂದು ಭಾವಿಸಲಿಲ್ಲ. "ಕಾಯ ಸೌಖ್ಯಕೆ, ಕಾಮಸುಖದ ವಿಡಾಯ ತತುವಕೆ ವೇಡೆಗೊಂಡು ನವಾಯಿಯಲಿ ದುರ್ಗತಿಗೆ" ಧಾವಿಸುವ ಈ ಲೋಕದ ಸುಖ ಅವರಿಗೆ ಸಮಸ್ತ ಪುರುಷಾರ್ಥವೂ ಆಗಲಿಲ್ಲ.

ಶತಾಯುಷಃ ಪುತ್ರ ಪೌತ್ರಾನ್ ವೃಣೀಷ್ವ
ಬಹೂನ್ ಪಶೂನ್ ಹಸ್ತಿ ಹಿರಣ್ಯಮಶ್ವಾನ್
ಭೂಮೇರ್ಮಹದಾಯತನಂ ವೃಣೀಶ್ವ
ಸ್ವಯಂಚ ಜೀವ ಶರದೋ ಯಾವದಿಚ್ಛತಿ
ಏ ಏ ಕಾಮಾ ದುರ್ಲಭಾ ಮರ್ತ್ಯಲೋಕೆ, ಸರ್ವಾನ್ ಕಾಮಾನ್
ಛಾಂದತಃ ಪ್ರಾರ್ಥಯಸ್ವ । ಇಮಾ ರಾಮಾಃ ಸರಥಾಃ
ಸತೂರ್ಯಾ ನಹೀ ದೃಶಾಲಂಬನೀಯಾ ಮನುಷ್ಯೈ.
ಆಭಿರ್ಮತ್ರ್ಪತ್ತಾಭಿಃ ಪರಿಚಾರಯಸ್ವ

[ಪೂರ್ಣಾಯುಸ್ಸನ್ನೂ ಮಕ್ಕಳು ಮೊಮ್ಮಕ್ಕಳನ್ನೂ ಆರಿಸಿಕೊ. ಅನೇಕವಾದ ಗೋವುಗಳನ್ನೂ, ಆನೆಗಳನ್ನೂ, ರತ್ನಗಳನ್ನೂ, ಕುದುರೆಗಳನ್ನೂ ಆರಿಸಿಕೊ ದೊಡ್ಡ ಭೂಭಾಗರಾಜ್ಯವನ್ನೇ ಆರಿಸಿಕೊ. ನಿನಗೆ ಬೇಕಾದಷ್ಟು ಆಯುಸ್ಸನ್ನು ಆರಿಸಿಕೊ. ಯಾವ ಯಾವ ಆಸೆಗಳು ಮನುಷ್ಯ ಲೋಕದಲ್ಲಿ ದುರ್ಲಭವೋ ಆ ಎಲ್ಲಾ ಆಸೆಗಳನ್ನೂ ಕೇಳಿಕೊ. ಈ ಸುಂದರ ಸ್ತ್ರೀಯರು ರಥಗಳು ತೂರ್ಯಗಳು ಮನುಷ್ಯರಿಗೆ ದುರ್ಲಭವಾದುವು. ಇವೆಲ್ಲ ನಿನ್ನನ್ನು ಉಪಚರಿಸುತ್ತವೆ.]

ಇಂತಹ ಆಕರ್ಷಣೆಗೆ ಒಳಗಾಗದವರು ಯಾರು ? ಆದರೆ ಭಾರತದ ಬ್ರಹ್ಮಚಾರಿ " ಈ ಸುಖಗಳೆಲ್ಲ ಕೊನೆಯುಳ್ಳವು. ಇಂದ್ರಿಯಗಳೆಲ್ಲ ಎಂದಿದ್ದರೂ ನಿಶ್ಶಕ್ತವಾಗುತ್ತವೆ. ಇಹಜೀವಿತವೆಲ್ಲ ಅಲ್ಪವಾದುದೆ" ಎಂದು ಅವನ್ನು ತಿರಸ್ಕರಿಸಿದನು. ಪ್ರಾಪ್ತವಾದ ರಾಜ್ಯವನ್ನು ಬಿಟ್ಟು ಜನರ ದುಃಖದ ಕಾರಣವನ್ನೂ ನಿವಾರಣೋಪಾಯವನ್ನೂ ಕಂಡುಹಿಡಿಯಲು ಕಾಡಿನಲ್ಲಿ ಅಲೆದ ಸಿದ್ಧಾರ್ಥನ ರಾಜ್ಯವಿದು. ಇತರ ದೇಶಗಳಲ್ಲಿ ಕತ್ತಿಯ ಧೀರರು ಜನತೆಯ ಆದರ್ಶಗಳಾದರೆ, ಭಾರತದಲ್ಲಿ ಕಾಡಿನಲ್ಲಿ ಕುಳಿತು ಕಂದ ಮೂಲಗಳ ಸೇವನೆಯಿಂದ ದೇಹವನ್ನು ಸವೆಸಿ, ದೇಹ ನಾಶವಾದರೂ ಎಂದೆಂದಿಗೂ ಅಳಿಯದ ಉಪನಿಷತ್‌ಗಳ ಸತ್ಯವನ್ನು ಕಂಡುಹಿಡಿದ ಯೋಗಿವರ್ಯರು ದೇವರಾಗಿರುವ ನಾಡಿದು. ಸಾತ್ವಿಕರಿಗೆ ಅವಮಾನಮಾಡಿದ ಪಾಪವನ್ನು ಪರಿಹರಿಸಿಕೊಳ್ಳಲು, ಪಾದಚಾರಿಯಾಗಿ ಗೋವಿನ ಹಿಂದೆ ಚಕ್ರವರ್ತಿ ಕಾಡಿನಲ್ಲಿ ಅಲೆದ ನಾಡಿದು. ಈ ದೇಶದಲ್ಲಿ ಆತ್ಮಶಕ್ತಿಗೆ ಎಂದೆಂದಿಗೂ ಪ್ರಥಮ ಸ್ಥಾನವೇ. ವಿಶ್ವಾಮಿತ್ರನ ಮಹ ಮಹ ಅಸ್ತ್ರಗಳೆಲ್ಲ ವಸಿಷ್ಠನ ಬಡ ಬ್ರಹ್ಮದಂಡದೆದುರಿಗೆ ನಿಷ್ಫಲವಾದುವು. ಒಬ್ಬ ಬಡಜೋಗಿ ವಿಶ್ವಾಮಿತ್ರನಿಗೆ, ಕೊಟ್ಟ ವಾಗ್ದಾನವನ್ನು ನಡೆಸಲು ಸಮಸ್ತ ರಾಜ್ಯವನ್ನೂ ತೊರೆದು ಹೆಂಡತಿಯನ್ನು ಕಡಿಯಲು ಹೊರಟು, ಆ ವಾಗ್ದಾನಕ್ಕೆ ಒಂದು ಹೊಸ ಅರ್ಥವನ್ನೂ ಬೆಲೆಯನ್ನೂ ಇಲ್ಲಿ ಹರಿಶ್ಚಂದ್ರನು ಸ್ಥಾಪಿಸಿದನು. ರಾಜಾಧಿರಾಜರು ಪಾದಚಾರಿಗಳಾಗಿ ಹೋಗಿ, ಋಷಿಗಳನ್ನು ಸಂದರ್ಶಿಸಿಕೊಂಡು ಬರುತ್ತಿದ್ದರು. ಧರ್ಮರಾಜನು ಕಪಟದ್ಯೂತಕ್ಕೆ ಬಲಿಯಾದರೂ ಸತ್ಯಕ್ಕಾಗಿ ಹನ್ನೆರಡು ವರ್ಷ ಕಾಡಿನಲ್ಲಿ ಅಲೆದನು. ತಂದೆ ಹೇಳಿದ ಮಾತು ಧರ್ಮವಿರುದ್ಧವಾದರೂ, ರಾಜ್ಯವನ್ನು ಬಿಟ್ಟು ರಾಮನು ಹದಿನಾಲ್ಕು ವರ್ಷ ಕಾಡಿನಲ್ಲಿ ಅಲೆದನು. ಹೀಗೆ, ನಮ್ಮವರ ಉತ್ತಮ ಬಾಳಿನ ಮಾನದಂಡವೇ, ಜಗತ್ತಿನ ಇತರ ಜನಾಂಗದವರ ಮಾನದಂಡದಿಂದ ಬೇರೆಯಾಗಿದೆ. ತ್ಯಾಗಕ್ಕಾಗಿ ಧನ ಸಂಪಾದನೆ, ಸತ್ಯಕ್ಕಾಗಿ ಮಿತಭಾಷಣೆ, ಯಶಸ್ಸಿಗಾಗಿ ಜಯ, ಗೃಹಸ್ಥಧರ್ಮ ಪುತ್ರಪ್ರಾಪ್ತಿಗಾಗಿ. ಹೀಗೆ ಭಾರತದ ಧೀರರು, ವೀರ ರಮಣಿಯರು, ಸತೀ ರತ್ನಗಳು, ಜಗತ್ತಿನಲ್ಲಿ

ಎಂದೆಂದಿಗೂ ಅಳಿಯದ ಒಂದೊಂದು ನೀತಿಯ ಮಟ್ಟವನ್ನು ಸ್ಥಾಪಿಸಿದ್ದಾರೆ. ಅಧ್ಯಾತ್ಮ ಅಂತರೀಕ್ಷದಲ್ಲಿ ಬೆಳಗುವ ಇಂತಹ ಜ್ಯೋತಿಗಳು ಮತ್ತಾವ ರಾಷ್ಟ್ರಗಳಲ್ಲಿಯೂ ಇಲ್ಲ. ಇಂದು ಪಾಶ್ಚಾತ್ಯ ರಾಷ್ಟ್ರಗಳ ಪೈಶಾಚಿಕ ಮಟ್ಟದ ನಿಲುವುಗಳನ್ನು ನಿರ್ಣಯಿಸುವ ಅವರ ಸಾಧನೆ ಆಟಂ ಬಾಂಬ್ ಮತ್ತು ಹೈಡ್ರೋಜನ್ ಬಾಂಬ್.

ಭಾರತದ ಸಂಸ್ಕೃತಿ ಇದು. ಈ ಸಂಸ್ಕೃತಿ ಇಲ್ಲಿಯ ಪರಂಪರೆ. ಇದು ಇಲ್ಲಿ ಸ್ವಾಭಾವಿಕವಾಗಿ ಬೆಳೆದು ಬಂದಿದೆ. ಇದರ ಅತ್ಯುತ್ಕೃಷ್ಟ ರೂಪು ಈಚೆಗೆ ವಿವೇಕಾನಂದ, ರಾಮಕೃಷ್ಣ ಪರಮಹಂಸ, ಚೈತನ್ಯ, ಅರವಿಂದ ಘೋಷ್, ರಮಣ ಮಹರ್ಷಿ ಈ ಜ್ಯೋತಿಗಳಲ್ಲಿ ಪ್ರಕಟವಾಗುತ್ತಿದೆ. ಅಂತಹ ಪ್ರತಿಯೊಂದು ಆವಿರ್ಭಾವ ಸಂಭವಿಸಿದಾಗಲೂ ಹಿಂದಲ ವಿಭೂತಿಗಳು ನಡೆದು ಸವೆಸಿದ ಆ ದಾರಿಯ ಅತ್ಯುತ್ಕೃಷ್ಟತೆಗಳನ್ನು ಈ ಹೊಸ ವಿಭೂತಿ ತನ್ನಲ್ಲಿ ಒಳಗೊಂಡು ತನ್ನ ಕಾರ್ಯವನ್ನು ಸಾಧಿಸಿದೆ ಗಾನಬ್ರಹ್ಮ ತ್ಯಾಗರಾಜರು ಅವತಾರ ಮಾಡಿದಾಗ, ಅಂದಿನವರೆಗೆ ಭಾರತ ಸಂಗೀತದಲ್ಲಿದ್ದ ಉತ್ತಮವಾದ ತಿರುಳನ್ನೆಲ್ಲ ಒಳಗೊಂಡು ಈ ಸಂಗೀತದ ಪುಷ್ಪವಾದರು. ಅಲ್ಲಿಯವರೆಗೆ ಭಾರತ ಸಂಗೀತದಲ್ಲಿ ಏನೇನು ವೈವಿಧ್ಯ ವೈಭವಗಳಿದ್ದವೆಂಬುದನ್ನು ತ್ಯಾಗರಾಜರ ಸಾಧನೆ, ಯಿಂದಲೇ ಸ್ಪಷ್ಟವಾಗಿ ನಾವು ಅರಿಯಬಹುದು. ಹಾಗೆಯೇ ಮಹಾತ್ಮ ಗಾಂಧಿಯವರು ಭಾರತ ಸಂಸ್ಕೃತಿಯಲ್ಲಿ ಉತ್ಕೃಷ್ಟವಾದುದು ಯಾವುದೋ ಅವುಗಳೆಲ್ಲದರ ಪ್ರತೀಕ. ಇದುವರೆಗೆ ಭಾರತದಲ್ಲಿ ಯಾವುದು ಸತ್ಯವೋ ಶಿವವೋ ಸುಂದರವೋ, ಅವುಗಳೆಲ್ಲದರ ಕಿರೀಟವಾಗಿ ಗಾಂಧಿಯವರು ತಲೆದೋರಿದರು. ಭಾರತ ಸಂಸ್ಕೃತಿಯನ್ನೂ ಗಾಂಧಿಯವರ ಬಾಳನ್ನೂ ಹೋಲಿಸಿ ನೋಡಿದರೆ, ಗಾಂಧಿಯವರು ಭಾರತದಲ್ಲಲ್ಲದೆ ಮತ್ತೆಲ್ಲಿಯೂ ಸಾಧ್ಯವಾಗುತ್ತಿರಲಿಲ್ಲವೆಂಬುದು ಸ್ಪಷ್ಟ. ಈ ವಿಭೂತಿ ಬೇರಾವ ರಾಷ್ಟ್ರದಲ್ಲಾದರೂ ಜನಿಸಿದ್ದರೆ, ಪ್ರಾಯಶಃ ಕಲ್ಲಿನ ಸಂದಿನಲ್ಲಿ ಸಿಕ್ಕಿದ ಹೂವಿನಂತೆ ಅರೆದು ಹೋಗುತ್ತಿದ್ದರೇನೋ. ನಾಜಿ ಜರ್ಮನಿಯಲ್ಲಾಗಲಿ, ಆಟಂಬಾಂಬಿನ ಅಮೆರಿಕದಲ್ಲಾಗಲಿ ಕೈಗಾರಿಕೆಯ ಜಪಾನಿನಲ್ಲಾಗಲಿ ಗಾಂಧಿಯವರಂತಹ ಮಹೋನ್ನತ ಜೀವಿ ತನ್ನ ಪೂರ್ಣ ಬೆಳವಣಿಗೆಯನ್ನು ಸಾಧಿಸುತ್ತಿರಲಿಲ್ಲ.

ಗಾಂಧಿಯವರ ಬಾಳಿನಿಂದ ಮನುಷ್ಯತ್ವಕ್ಕೇ ಒಂದು ಹೊಸ ಅರ್ಥವುಂಟಾಯಿತು. ಮನುಷ್ಯನನ್ನು ಅವನು ಮನುಷ್ಯ ಎಂಬುದಕ್ಕಾಗಿಯೇ ಗೌರವಿಸಬೇಕು. ಅವನು ಧನಿಕ, ವಿದ್ಯಾವಂತ, ಅಧಿಕಾರಿ, ಸ್ತ್ರೀ ಪುರುಷ, ಮುಂತಾದ ಯಾವ ಬಾಹ್ಯ ಮತ್ತು ಲೌಕಿಕ ಕಾರಣಗಳಿಗಿಂತ ಹೆಚ್ಚಾಗಿ, ಮನುಷ್ಯನನ್ನು ಮನುಷ್ಯನನ್ನಾಗಿ ಮನ್ನಿಸಬೇಕೆಂಬ ತತ್ತ್ವವನ್ನು ಗಾಂಧಿ ಜಗತ್ತಿಗೆ ಸಾರಿದರು. ಈ ದೃಷ್ಟಿಯಿಂದ ಮನುಷ್ಯತ್ವದ ಘನತೆಗೆ ಒಂದು ಹೊಸ ಅರ್ಥವನ್ನು ಗಾಂಧಿ ಕಲ್ಪಿಸಿದರು. ಜಾತಿ ಮತ ಧರ್ಮ ವರ್ಣ ಲಿಂಗ ಇವುಗಳಾವುದರ ಭೇದವೂ ಇಲ್ಲದೆ, ಜಗತ್ತಿನಲ್ಲಿರುವ ಮಾನವ ಜನಾಂಗಕ್ಕೆ ಅದು ಮಾನವ ಜನಾಂಗವೆಂಬ ಕಾರಣದಿಂದಲೇ ಒಂದು ಜವಾಬ್ದಾರಿ, ಒಂದು ಕರ್ತವ್ಯ ಉಂಟು. ದಳಿತನಾದ ಮನುಷ್ಯ, ಜಗತ್ತಿನ ಯಾವ ಭಾಗದಲ್ಲಿದ್ದರೂ ಅವನು ಗಾಂಧಿಯವರಿಗೆ ಭ್ರಾತೃವೇ. ಮನುಷ್ಯನ ಘನತೆಗೆ ಎಲ್ಲಿ ಕುಂದಕ ಬಂದರೂ, ಮನುಷ್ಯನು ಮನುಷ್ಯನೊಂದಿಗೆ ಮೃಗವಾಗಿ ಎಲ್ಲಿ ನಡೆದರೂ, ಗಾಂಧಿ ಇಬ್ಬರ ಘನತೆಯನ್ನೂ ಉಳಿಸಲು ಪ್ರಯತ್ನಿಸುತ್ತಿದ್ದರು. ಆಫ್ರಿಕದ ಕಾಡು ಜನ, ಅಮೆರಿಕದ ನೀಗ್ರೊ, ಜರ್ಮನಿಯ ಜ್ಯೂ, ಫಿನ್ಲೆಂಡಿನ ಜನತೆ, ಭಾರತದ ಹರಿಜನ, ಎಲ್ಲರೂ ಗಾಂಧಿಯವರಲ್ಲಿ ತಮ್ಮ ಆತ್ಮೀಯನನ್ನು ಕಂಡರು. ಮಾನವ ಜನಾಂಗ ಶರಧಿಯ ಒಂದು ಹನಿ ತಾನು. ಈ ವಿರಾಟ್ ಪ್ರಾಣದಲ್ಲಿ ಅಖಿಲ ಮನುಷ್ಯ ಜನಾಂಗವೂ ಸೇರಿದೆ. [ಪ್ರಾಣೋಹಿ ಭೂತಂ ಭವ್ಯಂಚ; ಪ್ರಾಣೋ ವಿರಾಟ್] ಈ ವಿರಾಟ್ ಪ್ರಾಣವು ಸಮಸ್ತ ಬ್ರಹ್ಮಾಂಡಗಳನ್ನೂ ಆಡಿಸುತ್ತಿರುವುದರಿಂದ ಅದರ ಜ್ಯೋತಿಯಿಂದ ಹಣತೆಯನ್ನು ಹಚ್ಚಿಕೊಂಡ ಮಾನವ ಜನಾಂಗದ ಉಜ್ವಲ ಭವಿಷ್ಯದಲ್ಲಿ ನಂಬಿಕೆ ಇಟ್ಟು, ಗಾಂಧಿಯವರು ಎಂತಹ ಕಠಿಣ ಪರಿಸ್ಥಿತಿಯಲ್ಲಿಯೂ ಆಶಾವಾದಿಗಳೇ ಆಗಿದ್ದರು. [ಸರ್ವವ್ಯಾಪಿಸ ಭಗವಾನ್ ತಸ್ಮಾತ್ ಸರ್ವಗತಃ ಶಿವಃ]

ಆದರೆ ಈ ಬಗೆಯ ಬಾಳನ್ನು ಬಾಳಬೇಕಾದರೆ, ಅಖಿಲ ಜಗತ್ತಿನಲ್ಲಿ ಆತ್ಮೀಯತೆಯನ್ನು ಹೊಂದಬೇಕಾದರೆ, ಪರಮಾತ್ಮನಲ್ಲಿ ನಂಬಿಕೆ ಇರಬೇಕು. ಜಗತ್ತು ನಡೆಯುತ್ತಿರುವುದು ಆ ವಿರಾಟ್ ಶಕ್ತಿಯ ಲೀಲೆ.

ನಾವು ನಿಮಿತ್ತ ಮಾತ್ರ, ಎಂಬ ನಿರಹಂಕಾರಭಾವವಿರಬೇಕು. ಭಾರತದ ಋಷಿಗಳು ಪರಮಾತ್ಮನಲ್ಲಿ ಪೂರ್ಣ ನಂಬಿಕೆಯಿಟ್ಟದ್ದು ದು ಮಾತ್ರವಲ್ಲದೆ ಆತನನ್ನರಿಯುವುದೇ ಮನುಷ್ಯಜನ್ಮದ ಗುರಿ ಎಂದು ಸಾರಿ ಸಾರಿ ಹೇಳಿದರು. ಅವರ ಸಾಧನೆಯೆಲ್ಲ ಆ ಪ್ರಯೋಗವೇ ಆಯಿತು. [ಇಹ ಚೇದವೇದೀದಥ ಸತ್ಯಮಸ್ತಿ ನ ಚೇದಿಹಾವೇದೀತ್ ಮಹತೀ ವಿನಷ್ಟಿಃ] ಪ್ರತಿಯೊಂದು ಭೂತದಲ್ಲಿಯೂ ಆ ಪರಮಾತ್ಮನನ್ನು ಕಾಣಬೇಕೆಂದು ಅವರು ಹೇಳಿದರು. [ಭೂತೇಷು ಭೂತೇಷು ವಿಚಿಂತ್ಯಃ]

ಮಹಾತ್ಮ ಗಾಂಧಿಯವರು ಹೀಗೆ ಭಗವದಾವಲಂಬಿ. ಅವರು ಯಾವಾಗಲೂ ತಾವು ಸ್ವತಂತ್ರರೆಂದುಕೊಳ್ಳಲಿಲ್ಲ. "ಭಗವಂತನಿಗೆ ಎಲ್ಲಿಯವರೆಗೆ ಈ ದೇಹದ ಸೇವೆ ಬೇಕೊ ಅಲ್ಲಿಯವರೆಗೆ ಇದರಿಂದ ದುಡಿಸಿಕೊಳ್ಳುತ್ತಾನೆ. ಒಂದು ಕ್ಷಣವೂ ಹೆಚ್ಚಾಗಿ ಇಲ್ಲ" ಎಂದು ಅವರು ಹೇಳಿದ್ದರು. "ದೇಹ ತಡೆಯುವುದಕ್ಕಿಂತ ನೀವು ಹೆಚ್ಚಾಗಿ ಕೆಲಸ ಮಾಡುತ್ತಿದ್ದೀರಿ" ಎಂದು ಮಿತ್ರರು ಎಚ್ಚರಿಸಿದಾಗಲೆಲ್ಲ ಅವರು ಇದೇ ಪ್ರತ್ಯುತ್ತರವನ್ನು ಕೊಡುತ್ತಿದ್ದರು. ಹೀಗೆ ಮಹಾತ್ಮ ಗಾಂಧಿಯವರು ಭಗವಂತನಲ್ಲಿ ಪೂರ್ಣವಾಗಿ ಶರಣಾಗತರಾಗಿದ್ದರು. ನನಗೆ ಆಹಾರ ನೀರು ಇಲ್ಲದಿದ್ದರೂ ಕೆಲವುದಿವಸ ಇರಬಲ್ಲೆ ಆದರೆ ನನ್ನ ದೇವರನ್ನು ನನ್ನಿಂದ ಒಂದು ಗಳಿಗೆ ತೆಗೆದುಕೊಂಡರೂ, ನನಗೆ ಹುಚ್ಚು ಹತ್ತುತ್ತೆ. ಮನುಷ್ಯನ ದೇಹಕ್ಕೆ ಆಹಾರ ಹೇಗೋ ಮನಸ್ಸಿನ ಬೆಳವಣಿಗೆಗೆ ಭಗವತ್ಪ್ರಾರ್ಥನೆ ಹಾಗೆ. ಆಹಾರವಿಲ್ಲದಿದ್ದರೂ ಒಂದೆರಡು ದಿನ ಇರಬಹುದು. ಪ್ರಾರ್ಥನೆ ಗಾಳಿಯಂತೆ. ಅದಿಲ್ಲದಿದ್ದರೆ ಒಂದುಗಳಿಗೆಯೂ ಇರಲು ಸಾಧ್ಯವಿಲ್ಲ." ಎಂದರು ಅವರು.

ಪರಮಾತ್ಮನನ್ನು ಕಂಡವರು ಯಾರೂ ಇಲ್ಲ. ದೇವರನ್ನು ನೀನು ನೋಡಿದ್ದೀಯ ಎಂದು ಕೇಳುವುದು ಬಾಯಿ ಮುಚ್ಚಿಸುವ ಒಂದು ಸಾಮಾನ್ಯ ಪ್ರಶ್ನೆ. ಈ ಪ್ರಶ್ನೆಯನ್ನು ಮಹಾತ್ಮ ಗಾಂಧಿಯವರನ್ನೂ ಕೇಳದೆ ಬಿಡಲಿಲ್ಲ. ಗಾಂಧಿಯವರ ಪ್ರತ್ಯುತ್ತರ ಒಂದೇ ಸಮನಾಗಿತ್ತು. "ನೋಡಿಲ್ಲ. ಆದರೆ ಇದ್ದಾನೆಂಬುದರಲ್ಲಿ ಸಂದೇಹವಿಲ್ಲ." ಉಪನಿಷತ್ ಗಳಲ್ಲಿ ಬ್ರಹ್ಮಜ್ಞಾನ ತಿಳಿದಿದೆಯೇ ಎಂಬ ಪ್ರಶ್ನೆ ಏಳುತ್ತದೆ. ಆಗ ಗುರು ಹೀಗೆ ಹೇಳುತ್ತಾನೆ.

**ನಾಹಂ ಮನ್ಯೇ ಸುವೇದೇತಿ ನೋನವೇದಿತಿ ವೇದ ಚ |**
**ಯೋನಸ್ತ ದ್ವೇದ ತದ್ವೇದ ನೋನವೇದೀತಿ ವೇದ ಚ ||**

[ನನಗೆ ಚೆನ್ನಾಗಿ ಗೊತ್ತಿದೆ ಎಂದು ನಾನು ಯೋಚಿಸುವುದಿಲ್ಲ. ತಿಳಿಯದು ಎಂದು ಹೇಳುವುದಿಲ್ಲ. ತಿಳಿದೂ ಇದೆ. ನನಗೆ ತಿಳಿದಿಲ್ಲ ಎಂದಲ್ಲ, ಎಂದು ಯಾರು ಅರಿಯುತ್ತಾರೋ ಅವನಿಗೇ ಬ್ರಹ್ಮಗೊತ್ತು.]

ಡಾಕ್ಟರ್ ಮಾಟ್‌ರವರು ಗಾಂಧಿಯವರನ್ನು " ದೇವರು ಇದ್ದಾನೆ ಎಂಬುದಕ್ಕೆ ನಿಮಗೆ ಯಾವಾಗಲಾದರೂ ಖಾತರಿಯಾದ ನಿದರ್ಶನ ದೊರಕಿತೆ " ಎಂದು ಕೇಳಿದಾಗ ಗಾಂಧಿಯವರು " ಹೌದು" ಎಂದು ಹೇಳಿ ಅಂತಹ ಎರಡು ಸಂದರ್ಭಗಳನ್ನು ವಿವರಿಸಿದ್ದಾರೆ.*

ಹೀಗೆ ಭಗವಂತನ ಮಾರ್ಗಾನುಸರಣೆಯಲ್ಲಿದ್ದ ಗಾಂಧಿ, ರಾಜಕೀಯ ಆಂದೋಳನದಲ್ಲಿ ಪ್ರವೇಶಿಸಿ ಭಾರತದ ನಲವತ್ತುಕೋಟಿ ಜನತೆಗೂ, ಅವರ ದಿನದಿನದ ತಾಪತ್ರಯಗಳಲ್ಲಿಯೂ, ತಂದೆಯಾಗಿ ಗುರುವಾಗಿ ಸಖನಾಗಿ, ನಲವತ್ತು ಕೋಟಿ ಜನತೆಯ ಆಂದೋಳನವನ್ನು ನಡೆಸಿ ಸ್ವಾತಂತ್ರ್ಯವನ್ನು ಸಂಪಾದಿಸಿದುದು ಸ್ವಾಭಾವಿಕವೇ ಆಗಿದೆ. ಮಹಾತ್ಮ ಗಾಂಧಿಯವರಂತಹ ಅಧ್ಯಾತ್ಮಸಾಧಕರು ರಾಜಕೀಯ ಕಪಟದ್ಯೂತಕ್ಕೆ ಪ್ರವೇಶಿಸಿದುದರಿಂದ, ಭಾರತದ ರಾಜಕೀಯದಲ್ಲಿ ಹಿಂದೆಂದೂ ನಡೆಯದಿದ್ದ ಶುದ್ಧೀಕರಣವುಂಟಾಯಿತು. ಭಾರತದ ರಾಜಕೀಯದಲ್ಲಿ ಮಾತ್ರವೇ ಅಲ್ಲ. ಜಗತ್ತಿನಲ್ಲಿ ಮತ್ತೆಲ್ಲಿಯೂ ರಾಜಕೀಯದಲ್ಲಿ ಸತ್ಯ ನೀತಿ ನಿಷ್ಕಪಟ ಇವುಗಳ ಪ್ರವೇಶವಿರಲಿಲ್ಲ. ರಾಜಕೀಯದಲ್ಲಿ ಏನು ಮಾಡಿದರೂ ಸರಿ ! ತನ್ನ ಜೀವಮಾನದಲ್ಲಿ ಒಂದಾದರೂ ಸತ್ಯವನ್ನು ಹೇಳದಿದ್ದ ರಾಜತಂತ್ರಜ್ಞರು ಅನೇಕರು ಆಗಿದ್ದಾರೆ. ರಾಜಕೀಯದಲ್ಲಿ ಸತ್ಯದ ಪ್ರವೇಶವನ್ನು ಮಹಾತ್ಮ ಗಾಂಧಿಯವರು ಮಾಡಿಸಿದುದರಿಂದ ರಾಜಕೀಯಕ್ಕೆ ಒಂದು ಹೊಸ ಸ್ವರೂಪ ಬಂತು. ಇದರ ಪರಿಣಾಮ

---

* ಒಂದು ಸಲ ಶ್ರೀ ಮಾಸ್ತಿಯವರು " ನಾನು ನಡೆದಿರುವ ದಾರಿಯಲ್ಲಿ ಹಿಂದಿರುಗಿ ನೋಡಿದರೆ ಉದ್ದಕ್ಕೂ ನನ್ನ ಹೆಜ್ಜೆಯ ಮಗ್ಗುಲಲ್ಲಿ ಭಗವಂತನ ಹೆಜ್ಜೆ ನಡೆದುಬಂದಿರುವುದು ಕಾಣುತ್ತಿದೆ " ಎಂದಿದ್ದಾರೆ.

ಭಾರತದಲ್ಲಿ ಮಾತ್ರವಲ್ಲ. ಜಗತ್ತಿನಲ್ಲಿಯೇ ಉಂಟಾಯಿತು ಪರಸ್ಪರ ವ್ಯತ್ಯಾಸಗಳನ್ನು ತೀರ್ಮಾನಿಸಲು ಇರುವುದು ಯುದ್ಧದಮಾರ್ಗ ಒಂದೇ ಎಂದು ಅರಿತಿದ್ದ ಪಾಶ್ಚಾತ್ಯರಾಷ್ಟ್ರಗಳಿಗೆ, ಮೊದಲು ಗಾಂಧಿಯವರ ಸತ್ಯದ ಮಾರ್ಗ ವಿಚಿತ್ರವಾಗಿ ಕಂಡರೂ, ಕೊನೆಯಲ್ಲಿ ಜಗತ್ತಿನ ಶಾಂತಿಗೆ ಬೇರೆ ಮಾರ್ಗವೇ ಇಲ್ಲನೆಂಬುದು ಅವರಿಗೆ ಗೊತ್ತಾಯಿತು. ಮಹಾತ್ಮ ಗಾಂಧಿ ಯವರ ನಿಧನದನಂತರ ಯುಕ್ತರಾಷ್ಟ್ರ ಸಂಸ್ಥೆಯಲ್ಲಿ [U. N. O.] ಅವ ರಿಗೆ ದುಃಖ ಬಾಷ್ಪಾಂಜಲಿಯನ್ನು ಅರ್ಪಿಸುತ್ತಾ ಅಧ್ಯಕ್ಷರು “ಗಾಂಧಿ ಯವರ ಮಾರ್ಗವನ್ನು ಅನುಸರಿಸಿ—ಅಂದರೆ ಸತ್ಯನೀತಿಯ ಮಾರ್ಗ ವನ್ನು ಅನುಸರಿಸಿ, ರಾಷ್ಟ್ರಗಳ ವಿವಾದಗಳನ್ನು ಪರಿಹರಿಸಲು ನಾವು ಯತ್ನಿಸುತ್ತಿದ್ದೇವೆ” ಎಂದರು. ಈ ದೃಷ್ಟಿಯಲ್ಲಿ ಗಾಂಧಿಯವರು—ಒಂದೇ ವ್ಯಕ್ತಿ—ಯುಕ್ತ ರಾಷ್ಟ್ರ ಸಂಘಕ್ಕೆ ಮಾರ್ಗದರ್ಶಕರಾದುದಲ್ಲದೆ, ಆ ಸಂಘ ತನ್ನ ಸಮಸ್ತ ಬೆಂಬಲದೊಂದಿಗೆ ಸಾಧಿಸಲಾಗದ ಕಾರ್ಯ ವನ್ನು ಸಾಧಿಸಿದ್ದಾರೆ. ಇಂದೂ ಯುಕ್ತರಾಷ್ಟ್ರ ಸಂಘ, ಪ್ರಪಂಚದಲ್ಲಿ ಶಾಂತಿಯನ್ನು ಸ್ಥಾಪಿಸಲು ಸಾಧ್ಯವಾಗದಿರುವುದಕ್ಕೆ ಕಾರಣ, ಸದಸ್ಯರು ದುರಾಶಾಪೀಡಿತರಾಗಿ, ಗಾಂಧಿ ಮಾರ್ಗವನ್ನು ಅನುಸರಿಸದೆ ಪರಸ್ಪರ ಮೋಸದಲ್ಲಿ ತೊಡಗಿರುವುದೇ ಆಗಿದೆ. ಈ ದೃಷ್ಟಿಯಿಂದ ನೋಡುವಾಗ ಒಬ್ಬ ವ್ಯಕ್ತಿ-ಸತ್ಯದ ಮಾರ್ಗದಲ್ಲಿದ್ದರೆ-ಅವನು ಜಗತ್ತನ್ನೇ ಬದಲಾಯಿ ಸಬಲ್ಲನೆಂಬುದಕ್ಕೆ ಗಾಂಧಿ ಉದಾಹರಣೆ. ದೇಹವು ಎಷ್ಟೇ ದುರ್ಬಲ ವಾಗಿರಲಿ, ಆತ್ಮಶಕ್ತಿಯೇ ಶಕ್ತಿ, ಧರ್ಮ ಮಾರ್ಗವೇ ಶಕ್ತಿ, ಎಂಬುದಕ್ಕೆ ಗಾಂಧಿಯವರ ಬಾಳ್ವೆಯೇ ನಿದರ್ಶನ. ಹೇಗೆ ಪ್ರಹ್ಲಾದ, ಹರಿಶ್ಚಂದ್ರ, ಶ್ರೀರಾಮಚಂದ್ರ, ಬುದ್ಧ ಇವರ ಬಾಳಿನ ಸತ್ಯಗಳಿಂದ ಮನುಷ್ಯ ಜೀವನಕ್ಕೆ ಒಂದು ಹೊಸ ಅರ್ಥವುಂಟಾಯಿತೋ ಹಾಗೆಯೇ ಗಾಂಧಿ ಯವರ ಬಾಳಿನಿಂದಲೂ ಜಗತ್ತಿಗೆ ಒಂದು ಹೊಸ ಅರ್ಥವುಂಟಾಯಿತು. ಅದೇ ಆತ್ಮಶಕ್ತಿ. “ವ್ಯಕ್ತಿ ಎಷ್ಟು ಅಲ್ಪನಾದರೂ ಅವನ ಆತ್ಮಶಕ್ತಿ ಜಗತ್ತನ್ನೇ ಆಡಿಸಬಲ್ಲದು. ಇಂತಹ ಆತ್ಮಶಕ್ತಿಯನ್ನು ಬೆಳೆಸಿಕೊಳ್ಳು ವುದು ಎಲ್ಲರಿಗೂ ಸಾಧ್ಯ.” ಎಂಬುದೇ ಆ ಸತ್ಯ.

ಆದರೆ ಗಾಂಧಿ, ತಾವು ಸಾಮಾನ್ಯರಿಂದ ಬೇರೆಯಾದವರೆಂದಾಗಲಿ

ಅಥವ ಸಾಮಾನ್ಯರಿಗಿಂತ ಉತ್ತಮರೆಂಬುದಾಗಿಯಾಗಲಿ ಯಾವಾಗಲೂ ಹೇಳಿಕೊಳ್ಳಲಿಲ್ಲ. ಆ ವಿಧವಾದ ಮಹಿಮೆಯನ್ನೇ ಅವರು ಒಪ್ಪಿಕೊಳ್ಳಲಿಲ್ಲ "ನಾನೂ ಒಬ್ಬ ಸತ್ಯಾರಾಧಕ. ದೌರ್ಬಲ್ಯವುಳ್ಳ ಮನುಷ್ಯ. ಆದರೆ ನನಗೆ ಸಾಧ್ಯವಾದುದು ಇತರರೆಲ್ಲರಿಗೂ ಸಾಧ್ಯ" ಎಂದು ಅವರು ಹೇಳಿದರು. ಭಾರತದ ಜನತೆಯ ಉದ್ಧಾರ, ಇದರ ನೀತಿಯ ಮಟ್ಟವನ್ನು ಹೆಚ್ಚಿಸುವುದೇ ಅವರ ಗುರಿಯಾಯಿತು. ಭಾರತದ ಜನದಲ್ಲಿ ಅಷ್ಟು ಕಾರುಣ್ಯ ಅವರಿಗೆ ಇಲ್ಲದಿದ್ದಿದ್ದರೆ, ಗಾಂಧಿಯವರು ಯಾವುದಾದರೂ ಗವಿಯಲ್ಲಿ ಕುಳಿತು ತಮ್ಮ ಸ್ವಂತ ಮುಕ್ತಿಯನ್ನು ಸಾಧಿಸಿಕೊಳ್ಳಬಹುದಾಗಿತ್ತು. ಆದರೆ ನಮ್ಮ ಜನತೆಯ ಬಾಳಿನಿಂದ ಹೊರಗಾದ ಬಾಳನ್ನು ಗಾಂಧಿ ಬಯಸಲೇ ಇಲ್ಲ. ಅವರಿಗಿಂತ ದರಿದ್ರರು ಭಾರತದಲ್ಲಿ ಯಾರೂ ಇಲ್ಲ. ಅವರು ನಮ್ಮಲ್ಲಿ ಸೇರಿ, ನಮ್ಮಲ್ಲಿ ಒಂದಾಗಿಯೇ ನಮ್ಮನ್ನು ಉದ್ಧರಿಸಿದರು. ಅವರು ಒಂದು ಸಲ "ಭಾರತ ಜನತೆಯ ಜೀವನ, ಈ ಜನರ ಆಸೆ ನಿರಾಶೆ ಕಷ್ಟ, ಸಾಧನೆ, ದೌರ್ಬಲ್ಯ, ಕೆಚ್ಚು, ಮೂಢನಂಬಿಕೆ, ಜ್ಞಾನ, ಆಲಸಿಕೆ, ಶಕ್ತಿ ಇವುಗಳನ್ನು ಸರಿಯಾದ ಮಾರ್ಗದಲ್ಲಿ ತಿರುಗಿಸುವುದಕ್ಕಿಂತ ಹೆಚ್ಚು ನಾಟಕೀಯವಾದ ರಂಜಕವಾದ ಕಾವುಳ್ಳ ವ್ಯಾಪಾರ ಯಾವುದಿದೆ? ಈ ಬಾಳಿನ ಆಗು ಹೋಗುಗಳಲ್ಲಿ ವ್ಯವಹರಿಸುವುದೇ ಅದ್ಭುತ ಕಲೆ" ಎಂದಿದ್ದರು. ಹೀಗೆ ಭಾರತೀಯರ ಜೀವನವೇ ಅವರ ಕಲಾ ಸಾಮಗ್ರಿಯಾಯಿತು.

ಜನತೆಯನ್ನು ಹೀಗೆ ಪ್ರೀತಿಸುವವರು ಅವರ ಬಾಳಿನ ಸಮಸ್ತ ಚಟುವಟಿಕೆಗಳಲ್ಲಿಯೂ—ತಾವು ನಿರ್ಲಿಪ್ತರಾದರೂ—ಪ್ರವೇಶಿಸುತ್ತಾರೆ. ಭಾರತೀಯರ ಜೀವಿತದಲ್ಲಿಯ ಯಾವುದೂ ಗಾಂಧಿಯವರ ದೃಷ್ಟಿಗೆ ಹೊರತಾದುದಲ್ಲ. ಅವರು ರಾಜಕೀಯಕ್ಕೆ ಬಂದುದೂ ಅದೇ ಕಾರಣ. "ನನ್ನದು ಧಾರ್ಮಿಕ ಜೀವನ. ಮನುಷ್ಯಜಗತ್ತಿನೊಂದಿಗೆ ನಾನು ಒಂದಾದ ಹೊರತು ಈ ಧಾರ್ಮಿಕ ಜೀವನ ಸಾಧ್ಯವಿಲ್ಲ. ಹೀಗೆ ಒಂದಾಗುವುದು ರಾಜಕೀಯದಲ್ಲಿ ಭಾಗವಹಿಸದೆ ಸಾಧ್ಯವಿಲ್ಲ. ಇಂದು ಮನುಷ್ಯನ ಕಾರ್ಯಗಳೆಲ್ಲ ಪರಸ್ಪರ ಸಂಬಂಧವುಳ್ಳವುಗಳಾಗಿವೆ. ರಾಜಕೀಯ ಸಾಮಾಜಿಕ ಆರ್ಥಿಕ ಇವುಗಳನ್ನು ಒಂದರೊಂದಿಗೊಂದು

ಸಂಬಂಧವಿಲ್ಲದಂತೆ ವಿಭಾಗಿಸುವುದು ಸಾಧ್ಯವಿಲ್ಲ. ಮನುಷ್ಯನ ಬಾಳನ್ನು ಬಾಳುವುದಕ್ಕಿಂತ ಬೇರೆ ಯಾವ ಧರ್ಮವೂ ನನಗೆ ತಿಳಿಯದು "

ಹೀಗೆ ಮಹಾತ್ಮ ಗಾಂಧಿಯವರಿಂದ ರಾಜಕೀಯದಲ್ಲಿ ಸತ್ಯ ಅಹಿಂಸೆ ಧರ್ಮಗಳ ಪ್ರವೇಶವುಂಟಾಯಿತು. ಭಾರತ ಸಂಸ್ಕೃತಿಯಲ್ಲಿ ಸತ್ಯ ಅಹಿಂಸೆ ಶೌಚ ಅಸ್ತೇಯ ಇವಾವುದೂ ಹೊಸವಲ್ಲ. ಮಹಾಭಾರತ ದಲ್ಲಿ ಅಹಿಂಸಾ ಸತ್ಯ ಅಸ್ತೇಯ ಶೌಚ ಇಂದ್ರಿಯನಿಗ್ರಹ ಇವು ಸಾಧಕ ರಲ್ಲಿರಬೇಕಾದ ಗುಣಗಳೆಂದು ಹೇಳಿದೆ. ಆದರೆ ಅಲ್ಲಿ ಅವು ಸಾಮಾನ್ಯ ವಾಗಿ ವ್ಯಕ್ತಿಗಳಿಗೆ ಅಧ್ಯಾತ್ಮದ ಮೆಟ್ಟಿಲುಗಳಾಗಿ ಹೇಳಲ್ಪಟ್ಟವೇ ಹೊರತು ಅವನ್ನು ೪೦ ಕೋಟಿ ಜನತೆಯ ರಾಜಕೀಯ ಹೋರಾಟದಲ್ಲಿ ಪ್ರವೇಶ ಗೊಳಿಸುವ ಅದ್ಭುತವನ್ನು ಯಾರೂ ಮಾಡಲಿಲ್ಲ.

ಗಾಂಧಿ, ದೇವರಲ್ಲಿ ಸಂಪೂರ್ಣ ಶರಣಾಗತರಾದರೂ, ದೇವರಿಗಿಂತ ಸತ್ಯವೇ ಹೆಚ್ಚೆಂದು ಭಾವಿಸಿದ್ದರು. "ನನ್ನ ಧರ್ಮ ಸತ್ಯದ ಧರ್ಮ ವೆಂದು ನಾನು ಹೇಳುವುದುಂಟು. ಈಚೆಗೆ, ದೇವರು ಸತ್ಯ ಎಂದು ಹೇಳುವುದರ ಬದಲು, ಸತ್ಯವೇ ದೇವರೆಂದು ಹೇಳುತ್ತಿದ್ದೇನೆ. ಇದರಿಂದ ನನ್ನ ಅಭಿಪ್ರಾಯ ಸ್ಪಷ್ಟವಾಗುವುದು ಸತ್ಯ ಎಂಬ ಮಾತು ವಿವರಿಸು ವಷ್ಟು ಪೂರ್ಣವಾಗಿ ನನ್ನ ದೇವರನ್ನು ಮತ್ತಾವ ಮಾತೂ ವಿವರಿಸು ವುದಿಲ್ಲ. ದೇವರನ್ನು ಒಪ್ಪದವರು ಇದ್ದಾರೆ. ಸತ್ಯವನ್ನು ಒಪ್ಪದವರು ಇಲ್ಲ. ಎಂತಹ ಅಜ್ಞಾನಿಯಲ್ಲಿಯೂ ಸ್ವಲ್ಪವಾದರೂ ಸತ್ಯವಿದ್ದೇ ಇದೆ. ನಾವೆಲ್ಲರೂ ಈ ಸತ್ಯದ ತುಣುಕುಗಳು. ಇವುಗಳೆಲ್ಲದರ ಮೊತ್ತ ಇನ್ನೂ ನಮಗೆ ತಿಳಿದಿಲ್ಲ. ಅದೇ ದೇವರಾಗಿರುವ ಸತ್ಯ."

ಈ ಸತ್ಯ-ಪರಮಾತ್ಮನ ಸಾಕ್ಷಾತ್ಕಾರಕ್ಕೆ ಧರ್ಮದ ಮಾರ್ಗ, ಆವ ಶ್ಯಕ. ಧರ್ಮವಿದ್ದರೇ ಗೆಲುವು ಇಲ್ಲದಿದಿದ್ದರೆ ಇಲ್ಲ. ಆ ಗೆಲುವು ಮನು ಷ್ಯನ ದೃಷ್ಟಿಯಿಂದ ಆಗಿರಬೇಕಾದುದಿಲ್ಲ. ಧರ್ಮದ ಮಾರ್ಗದಲ್ಲಿ ನಡೆಯುವವನಿಗೆ, ಪ್ರಪಂಚಕ್ಕೆ ಕಾಣುವಂತೆ ಸೋಲು ಉಂಟಾದರೂ, ತನ್ನ ಆತ್ಮದ ದೃಷ್ಟಿಯಿಂದ ಗೆಲುವೇ. ಜಯಾಪಜಯಗಳನ್ನು ನಿರ್ಣಯಿಸುವುದೂ ಧರ್ಮದೇ. ಇಂದ್ರ ಜಿತ್ತುವಿಗೂ ಲಕ್ಷ್ಮಣನಿಗೂ ಸಮಾನವಾದ ಬಲವಿತ್ತು. ಆದರೆ ಲಕ್ಷ್ಮಣನು ಧರ್ಮದ ಮಾರ್ಗದಲ್ಲಿ

ದ್ದನು. ಇಂದ್ರಜಿತ್ತು ಧರ್ಮವನ್ನು ಮೀರಿದುದರಿಂದ ಸೋತನು. ಧರ್ಮಮಾರ್ಗದಲ್ಲಿ ನಡೆಯುವವನಿಗೆ ಅವನ ಮನಸ್ಸೇ ಬೆಳಕು. ಅವನು ಇತರರ ಒಪ್ಪಿಗೆಗಾಗಿ ಕಾದರೆ ಆಗುವುದಿಲ್ಲ. ಶ್ರೀ ರಾಮಚಂದ್ರನು ತಂದೆಯ ಮಾತಿನಂತೆ ಕಾಡಿಗೆ ಹೊರಡಲು, ಆಪ್ತರ ಮಿತ್ರರ ಸಲಹೆ ಯನ್ನು ಕೇಳಲು ಕುಳಿತಿದ್ದರೆ, ಎಂದಿಗೂ ಹೊರಡುತ್ತಲೇ ಇರಲಿಲ್ಲ.

ಮಹಾತ್ಮಗಾಂಧಿಯವರ ನಿಧನದನಂತರ, ಅವರಿಗಾಗಿ ಅನುತಾಪ ವನ್ನು ಸೂಚಿಸಿದ ಆರ್ಚ್ ಬಿಷಪ್ ಕ್ಯಾಂಟರ್ ಬರಿಯವರು "ಗಾಂಧಿ ಯವರ ಮರಣದಿಂದ ಜಗತ್ತಿನ ಅಧ್ಯಾತ್ಮಸಾಧಕರ ಮುಖಂಡ ಮರೆ ಯಾದಂತೆ ಆಯಿತು" ಎಂದರು. ಗಾಂಧಿಯವರ ಗುರಿ ಅಧ್ಯಾತ್ಮ ಸಾಧನೆಯೇ ಆಗಿತ್ತು. ಹೃದಯ ಪಾರಿಶುದ್ಧತೆ ಬರಿಯ ಪುಸ್ತಕ ಜ್ಞಾನ ಕ್ಕಿಂತ ಮೇಲು. ಸದಾಚರಣೆಯಿಲ್ಲದ ಜ್ಞಾನ ಡಂಭಾಚಾರ. ಆತ್ಮದ ಕಲ್ಯಾಣಕ್ಕಾಗಿ ದೇಹವನ್ನು ಬಲಿಕೊಡಬೇಕು ಒಂದು ಸಲ ಒಬ್ಬರು ಗಾಂಧಿಯವರನ್ನು "ಒಬ್ಬನು ನನ್ನನ್ನು ಕೊಲ್ಲಲು ಬರುತ್ತಾನೆ. ಆಗ ನಾನು ಅವನನ್ನು ಕೊಲ್ಲಬೇಕೆ? ಅಥವ ಅವನಿಗೆ ಬಲಿಯಾಗಬೇಕೆ?" ಎಂದು ಕೇಳಿದರು. ಗಾಂಧಿಯವರು "ನೀನು ಕೊಲ್ಲಕೂಡದು. ಅವನಿಗೆ ಬಲಿಯಾಗಬೇಕು ಎಂಬುವರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ" ಎಂದು ಪ್ರತ್ಯುತ್ತರವಿತ್ತರು. ಹಾಗೆಯೇ ಅವರು ತಮ್ಮನ್ನು ಕೊಂದವ ನನ್ನ ಆಶೀರ್ವದಿಸುತ್ತಲೇ ಮಡಿದರು.

ಗಾಂಧಿ ಒಂದು ವ್ಯಕ್ತಿಯಲ್ಲ. ಅದೊಂದು ಜೀವನ ಕ್ರಮ. ಗಾಂಧಿ ಸಮಸ್ತ ಜಗತ್ತಿನ ಸಂಸ್ಕೃತಿಗಳ ಸಂಮಿಳನವೇ ಆದರೂ ಗಾಂಧಿಯವರ ಹೃದಯ ಭಾರತ ಸಂಸ್ಕೃತಿ. ಒಂದು ಸಲ ಸಿ, ಎಫ್. ಆಂಡ್ರೂಸ್‌ರವರು ಹೀಗೆ ಬರೆದರು: "ಬೈಬಲ್‌ನ ಪ್ರಭಾವ ಗಾಂಧಿಯವರ ಜೀವನದ ಮೇಲೆ ಅತ್ಯಂತ ಹೆಚ್ಚು. ಅದೇ ಅವರ ವೇದ ಎಂದು ಒಬ್ಬ ಕ್ರಿಸ್ತ ಪಾದ್ರಿ ನನ್ನೊಂದಿಗೆ ಹೇಳಿದರು. ನಾನು ಆಗ ಗಾಂಧಿಯವರಲ್ಲಿ ಹೋಗಿ ಇದು ನಿಜವೆ?" ಎಂದು ಕೇಳಿದೆ. ಗಾಂಧಿಯವರು "ನಾನು ಹಾಗೆ ಹೇಳ ಲಿಲ್ಲ. ನನ್ನ ಜೀವನದ ಮೇಲೆ ಅತ್ಯಂತ ಹೆಚ್ಚಿಗೆ ಪ್ರಭಾವವನ್ನುಂಟು ಮಾಡಿರುವ ಗ್ರಂಥ ಭಗವದ್ಗೀತೆ ಎಂದರು." ಮತ್ತೊಂದು ಸಂದರ್ಭ

ದಲ್ಲಿ ಗಾಂಧಿಯವರು "ನಾನು ಸನಾತನಿ ಹಿಂದು" ಎಂದು ಹೇಳಿದರು. ಉಪನಿಷತ್‌ನ "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್, ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಮ್" [ಈ ಜಗತ್ತಿನ ವಸ್ತುಗಳೆಲ್ಲ ಈಶ್ವರನಿಂದ ಆವೃತವಾಗಿವೆ. ಈ ಜಗತ್ತನ್ನು ತ್ಯಾಗಮಾಡುವುದರಿಂದ ಮಾತ್ರ ಇದನ್ನು ಅನುಭವಿಸಲು ಸಾಧ್ಯ. ಇತರರ (ಯಾರೊಬ್ಬರ) ಐಶ್ವರ್ಯಕ್ಕೂ ಆಸೆ ಪಡಬೇಡ] ಈ ಮಾತನ್ನು ಗಾಂಧಿಯವರು ಪದೇ ಪದೇ ಒತ್ತಿಹೇಳಿ "ಈ ಒಂದು ಶ್ಲೋಕವಿರುವವರೆಗೆ ಹಿಂದೂ ಧರ್ಮ ಶಾಶ್ವತವಾಗಿ ಉಳಿಯುತ್ತದೆ" ಎಂದಿದ್ದಾರೆ. ಗಾಂಧಿಯವರು ಶುದ್ಧ ಹಿಂದು. ಹಿಂದು ಆತ್ಮ, ಹಿಂದು ಚೇತನ. ಹೇಗೆ ಶಂಕರ ರಾಮಾನುಜ ಚೈತನ್ಯ ವಿದ್ಯಾರಣ್ಯಾದಿಗಳು ಹಿಂದೂ ಸಂಸ್ಕೃತಿಯ ದೌರ್ಬಲ್ಯಗಳನ್ನು ಪರಿಹರಿಸಿ, ಅದಕ್ಕೆ ಹೊಸ ತೇಜಸ್ಸನ್ನು ತುಂಬಿದರೋ, ಹಾಗೆಯೇ ಗಾಂಧಿಯವರೂ, ಹಳೆಯ ಮರದಂತೆ ಜೀರ್ಣವಾಗಿದ್ದ, ಹಿಂದೂ ಧರ್ಮ ವೃಕ್ಷವನ್ನು ತಮ್ಮ ಜನ್ಮದಿಂದಲೇ ಚೇತನಗೊಳಿಸಿದರು. ಇಂತಹ ಒಬ್ಬರಿಗೆ ಜನ್ಮವನ್ನಿತ್ತುದರಿಂದಲೈ ಹಿಂದೂ ಧರ್ಮ ಸಾರ್ಥಕವಾಯಿತು. ಈ ತೇಜಸ್ಸು ಸಾಮಾನ್ಯವಾದುದಲ್ಲ. ಮುಂದೆ ಸಾವಿರಾರು ವರುಷ ಇದು ಇಲ್ಲಿ ಹೊಳೆದು ಜಗತ್ತಿನ ಜನತೆಯ ಬಾಳ್ವೆಯನ್ನು ಬೆಳಗುವುದರಲ್ಲಿ ಸಂದೇಹವಿಲ್ಲ.

ಗಾಂಧಿ, ಭಾರತ ಸಂಸ್ಕೃತಿಯ ಫಲ. ಗಾಂಧಿಯವರಿಂದ ಭಾರತ ಸಂಸ್ಕೃತಿ ಹೆಚ್ಚು ಉಜ್ವಲವಾಯಿತು. ಈ ಸಂಸ್ಕೃತಿಯ ಪುನರುಜ್ಜೀವನಕ್ಕಾಗಿ ಅವರು ಮಾಡಿದ ಅನೇಕ ಕಾರ್ಯಗಳು ನಮ್ಮವರಿಗೇ ಅರ್ಥವಾಗಲಿಲ್ಲ. "ಲೋಕೋತ್ತರಾಣಾಂ ಚೇತಾಂಸಿ ಕೋಹಿ ವಿಜ್ಞಾತುಮರ್ಹತಿ."

---

# ವಿಷಯ, ವಸ್ತು ಮತ್ತು ಹೆಸರುಗಳ ಅಕಾರಾದಿ

## ದ, ಧ



## ನ

## ಪ

## ಫ



## ಬ

## ಯ

## ಶ



## ಸ

### ಹ

# ಶುದ್ಧಿಪತ್ರ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨ | ೨೩ | ಮನನಿಲ್ಲ | ಮಗನಿಲ್ಲ |
| ೪೩ | ೩ | ಳಿಬ | ಬಳಿ |
| ೮೧ | ೧೨ | ಮಾಡುತ್ತೇವೆ | ಹಾಕುತ್ತೇವೆ |
| ೮೧ | ೧೬ | ಇನ್ನೆಲ್ಲೂ | ಇದೆಲ್ಲೂ |
| ೮೨ | ೧೬ | ಆದುದರಿಂದ | ಆದುದರಿಂದ |
| ೮೩ | ೧೪ | ಅತ್ಮಸಾಕ್ಷಾತ್ಕಾರ | ಆತ್ಮಸಾಕ್ಷಾತ್ಕಾರ |
| ೮೮ | ೨೨ | ಸರ್ವಪ್ರಕಾಶದ | ಸರ್ವಪ್ರಕಾರದ |
| ೮೯ | ೨೩ | ದುಃಖತನ | ದುಃಖಿತರ |
| ೯೧ | ೨ | ಬಾವೂನ | ಬಾಪೂನ |
| ೯೩ | ೧೭ | ಜಾಲ್ | ಚಾಲ್ |
| ೯೪ | ೯ | ತುಪ್ಪವಸ್ತು | ತುಪ್ಪ ಪವಿತ್ರವಸ್ತು |
| ೯೪ | ೧೩ | ಮತ್ತಾವದಲ್ಲಿತು | ಮತ್ತಾವುದಿದ್ದೀತು |
| ೯೫ | ೩ | ಸಂಚಮ | ಸಂಯಮ |
| ೯೫ | ೧೫ | ಸತ್ಯಂ | ಸತ್ಯ, ಅಸ್ತೇಯ ಬ್ರಹ್ಮಚರ್ಯ |
| ೧೦೮ | ೧೪ | ಕೃಪಲಿನಿ | ಕೃಪಾಲಿನಿ |
| ೧೨೭ | ೧೦ | ಗುರುತ್ವಾಕರ್ಷಣದತೆ | ಕರ್ಷಣದಂತೆ |
| ೧೨೭ | ೨೭ | ಅಹಿಂಸೆಲ್ಲಿ | ಅಹಿಂಸೆಯಲ್ಲಿ |
| ೧೨೯ | ೭ | ಎರಡೂ ದಾರಿಗೂ | ಎರಡೂ ದಾರಿಗಳೂ |
| ೧೩೧ | ೨೦ ಶ್ಲೋಕ | ಕಥಯಿಷ್ಯಾಮಿ ತೇತ್ವಯಂ | ಕಥಯಿಷ್ಯಂತಿ ತೇವ್ಯಯಂ |
| ೧೮೦ | ೪ | ಮೆಹತಾ ನೆಹರು ರವರಿಗೆ Etc | ಮೆಹತಾ "ನೆಹ್ರೂ ಇಷ್ಟು ಹೊತ್ತಿನಲ್ಲಿ ಈ ಮಳೆಯಲ್ಲಿ ಇಲ್ಲಿ |

| ಪುಟ | ಪಂಗ್ತಿ | ತಪ್ಪು | ಒಪ್ಪು |
|---|---|---|---|
| | | | ಏನು ಮಾಡುತ್ತಿದ್ದಾರೆ" ಎಂದು ಕಮಲಾದೇವಿಯನ್ನು ಕೇಳಿದರು ಕಮಲಾದೇವಿ ಅಲೆಯುತ್ತಿದ್ದಾರೆ. ಎಂದು ನಾನು ಆಗಲೇ ಹೇಳಿದೆ ಎಂದರು. |
| ೧೮೫ | ೧೦ | ತಲೆಬಾದೆಗಿ | ತಲೆಬಾಗಿದೆ |
| ೧೮೮ | ೮ | ಘುಟಕೆ | ಘಟಕಿ |
| ೨೦೦ | ೧೫ | ವ್ಯಿತ್ಯಾಸ | ವ್ಯತ್ಯಾಸ |
| ೨೧೧ | ೨೩ | ವಾಗೆ | ಹಾಗೆ |
| ೨೫೦ | ೧೧ | ಗಂಭೀರ್ಯ | ಗಾಂಭೀರ್ಯ |
| ೩೫೧ | ೫ | ಯುವಕ | ಯುಕ |
| ೨೫೯ | ೨೫ | ಗಾಂಧಿಯವರ | ಯುವರು |
| ೨೬೦ | ೧ | ಹೆಸರೇ | ಹೆಸರಿಗೇ |
| ೨೬೪ | ೪ | ಹರಿಜನ | ಹರಿಜನರ |
| ೨೮೦ | ಅನಾಸಕ್ತ ಅಧ್ಯಾಯ ೯ | ಗಾಶಧಿ | ಗಾಂಧಿ |
| ೩೦೫ | ೫ | ೨೨೧ | ೧೯೨೧ |
| ೩೦೫ | ೨೫ | ಗಾಂಧಿಯವರಡಿ | ಗಾಂಧಿಯವರು |
| ೩೨೬ | ೨೬ | ಅಭ್ಯಾಸಮಾಚಿದ್ದಾರೆ | ಮಾಡಿಸಿದ್ದಾರೆ |
| ೩೨೬ | ೨೬ | ತಿಳಿದಿದ್ದಾರೆ | ತಿಳಿಸಿದ್ದಾರೆ |
| ೩೨೭ | ೩ | ಲಯಬಿದ್ಧವಾದ | ಲಯಬದ್ಧವಾದ |
| ,, | ೧೯ | ನಂಬಿ | ನಂಬಿ |
| ,, | ೨೨ | ಮುಕ್ಕಳಿಂದ | ಮುಕ್ಕಳಿಂದ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೩೩೪ | ೫ | ಗ್ರತಿಯೊಬ್ಬ | ಪ್ರತಿಯೊಬ್ಬ |
| ೩೩೭ | ೮ | ತ್ರೋಗಿಸುವುದೇ | ತೋರಿಸುವುದೇ |
| ೩೪೭ | ೧೧ | ರತ್ತದ | ರಕ್ತದ |
| ೩೭೨ | ೨೩ | ೧೯೪೭ | ೧೯೪೮ |
| ೩೮೮ | ೧೯ | ಬಳ್ಳಿ | ಬಳಿ |
| ೪೦೩ | ೭ | ರಾಷ್ಟ್ರಪಿತನ | ಪಿತನು |
| ೪೦೫ | ೨೪ | ಪ್ರಮಾಣ | ಪ್ರಯಾಣ |
| ೪೦೬ | ೨ | ದೃಢಸಂಕಲ್ಪ Etc | ಧೃಡಸಂಕಲ್ಪಮಾಡಿದ್ದಾರೆ, ಕೊನೆ |
| ೪೧೦ | ೫ | ಜ್ಞಾಗದ | ಜ್ಞಾನದ |
| ೪೫೬ | ೨೪ | ಸಮಂತಾವಾದ | ಸಮಾಜವಾದ |
| ೪೭[illegible] | ೮ | ಹವಣಿಸುತ್ತಿದ್ದಾರೆ | ಹವಣಿಸುತ್ತಿದ್ದಾರೆ' ಎನ್ನುತ್ತಾರೆ |
| ೪೮೩ | ೧೫ | ಗಾಮದಲ್ಲಿ | ಸೇವಾಗ್ರಾಮದಲ್ಲಿ |
| ೪೯೯ | ೫ | ಆರೋಗಣೆ | ಆರೋಗಣೆ |
| ೫೧೯ | ೨೭ | ಬಿರ್ಲಾರಪಸ | ಬಿರ್ಲಾರವರ |
| ೫೨೫ | ೧೩ | ಪ್ರಮಾಣ | ಪ್ರಯಾಣ |
| ೫೩೦ | ೮ | ಪದಾರ್ಥಿ | ಪದಾರ್ಥ |
| ೫೩೯ | ೪ | ಕುಸುಮಾನಿಚ | ಕುಸುಮಾದಪಿ |
| ೫೫೯ | ೧೨ | ಭಾನತಿ | ಭಾರತ |

೨೮೦ನೆಯ ಪುಟದ ನಂತರ ಎರಡು ಪುಟ ಸಂಖ್ಯೆ ೨೮೦ ಎಂದೇ ಬಿದ್ದಿದೆ. ಆದರೆ ವಿಷಯ ಹೆಚ್ಚು ಕಡಿಮೆ ಆಗಿಲ್ಲ ಕೆಲವು ಅಧ್ಯಾಯಗಳ ತಲೆ ಬರಹದಲ್ಲಿ ಅಧ್ಯಾಯ ಸಂಖ್ಯೆ ಬಿದ್ದಿಲ್ಲ.

ಮೇಲಿನ ಅಚ್ಚಿನ ತಪ್ಪುಗಳನ್ನೂ ಇತರ ಅಚ್ಚಿನ ತಪ್ಪುಗಳನ್ನೂ ತಿದ್ದಿಕೊಂಡು ಓದಿಕೊಳ್ಳಬೇಕೆಂದು ವಾಚಕರಲ್ಲಿ ಅರಿಕೆ.